# ಶ್ರೀಮದ್ಭಾಗವತ
## ಸಪ್ತಮಸ್ಕಂಧ



ಅನುವಾದ ಹಾಗೂ ಸಂಪಾದನೆ

ಪಂ. ಪೂ. ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಪ್ರಕಾಶನ – ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ.

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ -೧೫೪

# ಶ್ರೀಮದ್ಭಾಗವತ

## ಸಪ್ತಮಸ್ಕಂಧ

ಅನುವಾದ ಹಾಗೂ ಸಂಪಾದನೆ
ಪಂ.ಪೂ.ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :
ಡಾ.ವೆಂಕಟೇಶಾಚಾರ್ಯ ಬಿ.ಆರ್
ಡಾ. ಪ್ರಹ್ಲಾದಾಚಾರ್ಯ ಜೋಶಿ

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

**Srimad Bhagavata Saptama Skandha**

A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by Sudha Visharada Pandita Poojya **Rangacharya Guttal**, Kulapati of Sri Jayateertha Vidyapitha.

Published by : **Vishva Madhwa Maha Parishat**

Copies : **1000**

First Edition : **Apirl 2016**

No.of Pages : **12+588**



**Price** : [In India] ₹. **300/-**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4,Ph : 080 26603692, mail:vmmp05@gmail.com

Type Setting : **V.M.M.P Research wing.**

Cover Design : **K M Sheshagiri**

Printed by : **Vagartha, 149, 8th Cross, N.R.Colony, Bng - 19**





ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ,
ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ
ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

## ಶ್ರೀ ಶ್ರೀ 1008 ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಪರಮಾತ್ಮನ ಪರಮಪ್ರಸಾದಕ್ಕೆ ಭಕ್ತ ಮಾಡುವ ಪರಿಶುದ್ಧ ಭಕ್ತಿಯೇ ಕಾರಣ. ಭಕ್ತಿಯ ನೈರ್ಮಲ್ಯ ಹೆಚ್ಚಿದಷ್ಟೂ ಪ್ರಸಾದದ ಪಾರಮ್ಯ ಬೆಳೆಯುತ್ತದೆ. ದೇವರನ್ನು ನಂಬುವ ಪ್ರತಿಯೊಬ್ಬನೂ ದೇವರಲ್ಲಿ ಭಕ್ತಿ ಮಾಡೇ ಮಾಡುತ್ತಾನೆ. ತನ್ನ ಭಕ್ತಿಗೆ ತಕ್ಕ ಫಲವನ್ನೂ ಪಡೆಯುತ್ತಾನೆ. ಆಸ್ತಿಕರಲ್ಲಿ ಬಹುಪಾಲು ಜನ ಫಲ ಪಡೆಯುವುದಕ್ಕಾಗಿಯೇ ಭಕ್ತಿಯನ್ನು ಮಾಡುತ್ತಾರೆ. ತಾವು ಮಾಡಿದ ಭಕ್ತಿಗೆ ಫಲ ಸಿಕ್ಕರೆ ಮಾತ್ರ ದೇವರಲ್ಲಿ ನಂಬಿಕೆ ಮುಂದುವರೆಸುತ್ತಾರೆ. ಇಲ್ಲದಿದ್ದರೆ ದೇವರನ್ನೇ ಮರೆಯುತ್ತಾರೆ. ಇದೇ ನಮ್ಮಲ್ಲಿರುವ ಕೊರತೆ. ಇದೇ ಭಕ್ತಿಯ ದೋಷ. ಇದನ್ನೇ ನಾವು ರೂಢಿಸಿಕೊಂಡು ಬಿಟ್ಟಿದ್ದೇವೆ. ಫಲಕ್ಕಾಗಿ ದೇವರು ಇದು ನಮ್ಮ ಚಟವಾಗಿಬಿಟ್ಟಿದೆ. ಭಕ್ತಿ ವ್ಯಾಪಾರವಾಗಿದೆ. ಔಷಧ ಸೇವಿಸಲು ಮಗುವಿಗೆ ಬೆಲ್ಲದ ಆಸೆ ತೋರಿಸುತ್ತಾರೆ. ಮಗು ಔಷದವನ್ನೇ ಬಿಟ್ಟು ಬರೀ ಬೆಲ್ಲವನ್ನೇ ಮೆದ್ದು ಹೋಗುತ್ತದೆ. ಹಾಗಾಗಿದೆ ನಮ್ಮ ಪರಿಸ್ಥಿತಿ. ಭಗವಂತನ ಮಹಿಮೆಯನ್ನು ತಿಳಿದು, ಅವನ ಪರಮೋಪಕಾರವನ್ನು ಸ್ಮರಿಸಿ, ಅವನ ನಿರಂತರ ಆರಾಧನೆಯನ್ನು ಮಾಡಿ, ಅವನಲ್ಲಿ ಅನನ್ಯ ಭಕ್ತಿಯನ್ನು ಮಾಡಿ ಅವನನ್ನು ಹೊಂದಿ ಪರಮಾನಂದವನ್ನು ಅನುಭವಿಸುವುದೇ ಸಕಲ ಸಜ್ಜನರ ಗುರಿ. ಆದರೆ ಬಹುದೂರದ ಈ ಗಮ್ಯ ಸಾಮಾನ್ಯರಿಗೆ ಪ್ರಾರಂಭದಲ್ಲಿ ಹೊರೆಯಾದೀತು, ರುಚಿಸಲಾರದು ಎನ್ನುವುದಕ್ಕಾಗಿ ವೇದಗಳು ಸಕಾಮಕರ್ಮಗಳನ್ನು ವಿಧಿಸಿತು. ಸಣ್ಣ-ಪುಟ್ಟ ಆಸೆಯಿಂದಲಾದರೂ ದೇವರನ್ನು ಭಜಿಸಲು ಪ್ರಾರಂಭಿಸಿ ಎಂದಿತು. ಆದರೆ ವೇದದ ನಿಜವಾದ ಮರ್ಮವನ್ನು ಅರಿಯದ ನಾವು ಸಕಾಮಕರ್ಮಗಳಲ್ಲಿಯೇ ಆಸಕ್ತರಾದೆವು. ಬೇಡಿಕೆ ನಮ್ಮ ಚಟವಾಯಿತು. ಭಕ್ತಿ ಕಲುಷಿತವಾಯಿತು. ಕಲುಷಿತವಾದ ಈ ಭಕ್ತಿಯನ್ನು ಶುದ್ಧಗೊಳಿಸಲು ಅವತರಿಸಿದ್ದೇ ಶ್ರೀಮದ್ಭಾಗವತ.

ನಿಷ್ಕಾಮ ಕರ್ಮದ ಅರಿವನ್ನು ಮೂಡಿಸಿ, ಆದರ ಆವಶ್ಯಕತೆಯನ್ನು ಮನವರಿಕೆ ಮಾಡಿಕೊಟ್ಟು , ಪರಿಶುದ್ಧ ಭಕ್ತಿಯನ್ನು ಜಾಗೃತಗೊಳಿಸಿ, ಅದಕ್ಕೆ ಆವಶ್ಯಕವಾದ ಭಗವಂತನ ಮಹಿಮೆಗಳನ್ನು ಮನಮುಟ್ಟುವಂತೆ-ಮನಕರಗುವಂತೆ ತಿಳಿಸಿ, ಭಕ್ತಿಯ

ವ್ಯಾಪಾರದ ಹಾದಿಯನ್ನು ತುಳಿದು ಮಾರ್ಗಭ್ರಷ್ಟರಾದ ನಮ್ಮನ್ನು ಸರಿಯಾದ ಮಾರ್ಗದಲ್ಲಿ ಮುನ್ನಡೆಸುವ ನಮ್ಮೆಲ್ಲರ ಅವಿಜ್ಞಾತಸಖ ಶ್ರೀಮದ್ಭಾಗವತ.

ಅದರಲ್ಲಿ ಸಪ್ತಮಸ್ಕಂಧ ಭಕ್ತ ಹಾಗೂ ಭಗವಂತನಲ್ಲಿರುವ ನಿಷ್ಕಲ್ಮಷವಾದ, ಮಧುರವಾದ, ದಿವ್ಯ ಬಾಂಧವ್ಯವನ್ನು ನಮಗೆ ತಿಳಿಸಿಕೊಡುತ್ತದೆ. ಎಲ್ಲ ಕಾಮನೆಗಳನ್ನೂ ಕಸದಂತೆ ದೂರಸರಿಸಿದವರು ಶ್ರೀಪ್ರಹ್ಲಾದರಾಜರು. ದೇವರಿಗಾಗಿ ದೇವರನ್ನು ಭಜಿಸಿದ ಮಹಾನುಭಾವರು. ಅಂತೆಯೇ ದೇವರಿಗೆ ಅಚ್ಚುಮೆಚ್ಚಿನವರಾದರು. ಅಂತಹ ಭಗವದ್ಭಕ್ತನ ದಿವ್ಯವಾದ ಕಥೆಯನ್ನು ಸಾರುವ ಸ್ಕಂಧ ಸಪ್ತಮಸ್ಕಂಧ. ಇದರ ಪಠಣ ನಮ್ಮಲ್ಲಿ ಭಕ್ತಿಯನ್ನು ಬೆಳೆಸುವುದರಲ್ಲಿ ಸಂದೇಹವೇ ಇಲ್ಲ.

ಇದರ ಸ್ವಾದವನ್ನು ಬೋಧಿಸಲು ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ ಶ್ರೀ 1008 ಶ್ರೀಸತ್ಯಪ್ರಮೋದತೀರ್ಥ ಶ್ರೀಪಾದಒಡೆಯರ ಪರಮಪ್ರಿಯ ಶಿಷ್ಯರಾದ, ಅವರ ಪೂರ್ವಾಶ್ರಮದ ಪುತ್ರರೂ ಆದ, ನಮ್ಮ ಪೂರ್ವಾಶ್ರಮದ ಪಿತೃಚರಣರೂ ಆದ, ಜಯತೀರ್ಥ ವಿದ್ಯಾಪೀಠದ ಕುಲಪತಿಗಳಾದ, ಪಂಡಿತವರೇಣ್ಯ **ಶ್ರೀಗುತ್ತಲ ಆಚಾರ್ಯರವರು** (ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮದ್ಭಾಗವತದ ಕನ್ನಡಾನುವಾದದ ತಪಸ್ಸನ್ನು ಸಂಪೂರ್ಣಗೊಳಿಸಿದ್ದಾರೆ.

ಪ್ರಕೃತ ಭಾಗವತ-ತಾತ್ಪರ್ಯ-ವ್ಯಾಖ್ಯಾನಗಳಿಂದ ಸಹಿತವಾದ ಸಪ್ತಮಸ್ಕಂಧದ ಅನುವಾದರೂಪವಾದ ಈ ಕೃತಿಯನ್ನು ವಿಶ್ವಮಧ್ವಮಹಾಪರಿಷತ್ತಿನಿಂದ ಪ್ರಕಾಶನ ಮಾಡಲಾಗುತ್ತಿದೆ. ಇಂತಹ ಮಹತ್ ಕಾರ್ಯವನ್ನು ಮಾಡಿದ ಆಚಾರ್ಯರವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಕೊಟ್ಟು ನಿರಂತರ ಸುಧಾದಿಗ್ರಂಥಗಳ ಪಾಠಪ್ರವಚನದ ಕಾರ್ಯವು, ಗ್ರಂಥಲೇಖನಾದಿಗಳು ಇವರಿಂದ ನಡೆಸಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮನ್ಮೂಲಸೀತಾಸಮೇತ ಶ್ರೀಮೂಲರಾಮ-ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಈ ಸಂಪುಟದ ಸಹ ಸಂಪಾದನಾಕಾರ್ಯವನ್ನು ನಮ್ಮ ಶಿಷ್ಯರಾದ ಪಂ. ವೆಂಕಟೇಶಾಚಾರ್ಯ ಹಾಗೂ ಪಂ ಪ್ರಹ್ಲಾದಾಚಾರ್ಯರಿಗೆ ಭಗವಂತ ಜ್ಞಾನ-ಭಕ್ತಿ-ವೈರಾಗ್ಯಗಳನ್ನು ನೀಡಿ ಇದೇ ತರಹದ ವೇದವ್ಯಾಸದೇವರ ಸೇವೆ ಅವರಿಂದ ನಡೆಯುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು

ಉತ್ತರಾದಿಮಠ

# ಮುನ್ನುಡಿ

ಪರಿಶುದ್ಧ ಜೀವನಕ್ಕೆ ಅತ್ಯವಶ್ಯಕವಾದ ದಾರಿದೀಪ ಶ್ರೀಮದ್ಭಾಗವತ. ನಮ್ಮ ಮನಸ್ಸಿನ ಕೊಳೆಯೆಂಬ ಕಳೆಯನ್ನು ಕಿತ್ತೆಸೆದು ಭಗವದ್ಭಕ್ತಿಯೆಂಬ ಬೀಜವನ್ನು ಬಿತ್ತುವುದಕ್ಕೆ ಒಂದೇ ಒಂದು ಉಪಾಯ ಅದು ಶ್ರೀಮದ್ಭಾಗವತ. ಜ ಎಂಬ ಅಕ್ಷರದಿಂದ ಪ್ರಾರಂಭವಾಗಿ ಯ ಎಂಬ ಅಕ್ಷರದಿಂದ ಕೊನೆಗೊಳ್ಳುವ ಶ್ರೀಮದ್ಭಾಗವತ ದುರ್ಜಯವಾದ ಈ ಸಂಸಾರವೆಂಬ ಸಂಗ್ರಾಮದಲ್ಲಿ ಜಯವನ್ನು ತಂದು ಕೊಡುವಲ್ಲಿ ಸರ್ವರೀತಿಯಿಂದಲೂ ಸಮರ್ಥವಾಗಿದೆ. ಅನಾದಿಕಾಲದಿಂದ ಅಂಟಿಕೊಂಡ ಸಂಸಾರರೋಗವನ್ನು ಸಮೂಲ ನಾಶಮಾಡುವದಕ್ಕೆ ಶ್ರೇಷ್ಠ ಔಷಧಿ ಅದು ಶ್ರೀಮದ್ಭಾಗವತ. ಇದು ಶುದ್ಧವಾದ ಜ್ಞಾನವನ್ನು ನೀಡುವ ಮೂಲಕ ಮುಕ್ತಿಗೆ ಮುಖ್ಯ ಸೋಪಾನವೂ ಆಗಿದೆ. ಇಲ್ಲಿರುವ ಪ್ರತಿ ಅಕ್ಷರ ಪದ ವಾಕ್ಯಗಳು ಅನೇಕಾರ್ಥಗಳಿಂದ ತುಂಬಿವೆ. ಅನೇಕ ಜನ ಮಹನೀಯರು ಇದಕ್ಕೆ ವ್ಯಾಖ್ಯಾನ ಬರೆದರೂ ಇದರ ಮಾಧರ್ಯ ಇನ್ನೂ ಕಡಿಮೆಯಾಗಿಲ್ಲ. ಅದ್ವೈತ-ವಿಶಿಷ್ಟಾದ್ವೈತ-ದ್ವೈತ ಮತದವರು ಇದಕ್ಕೆ ವ್ಯಾಖ್ಯಾನವನ್ನು ರಚಿಸಿದ್ದರೂ ದ್ವೈತಮತಾಚಾರ್ಯ-ರೆನಿಸಿದ ಶ್ರೀಮಧ್ವಾಚಾರ್ಯರು ರಚಿಸಿದ ವ್ಯಾಖ್ಯಾನ ಎಲ್ಲ ವ್ಯಾಖ್ಯಾನಗಳಿಗಿಂತಲೂ ಅಪೂರ್ವದ್ದಾಗಿದೆ. ಶ್ರೀವಿಜಯಧ್ವಜತೀರ್ಥರು, ಶ್ರೀಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಚೆಟ್ಟಿ ಆಚಾರ್ಯರು, ಶ್ರೀ ಶ್ರೀನಿವಾಸತೀರ್ಥರೇ ಮೊದಲಾದವರು ಇಂತಹ ಭಾಗವತವನ್ನು ವ್ಯಾಖ್ಯಾನ ಮಾಡುವಲ್ಲಿಯೇ ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದಾರೆ. ಆ ಎಲ್ಲ ಮಹನೀಯರು ತೋರಿಸಿದ ಮಾರ್ಗದಲ್ಲಿ ಭಾಗವತವನ್ನು ಕನ್ನಡದಲ್ಲಿ ಅನುವಾದ ಮಾಡುವ ಪ್ರಯತ್ನವನ್ನು ಈ ಮೂಲಕ ಮಾಡುತ್ತಿದ್ದೇನೆ.

ಪ್ರಕೃತ ಶ್ರೀದ್ಭಾಗವತದ ಏಳನೇ ಸ್ಕಂಧವನ್ನು ಜಿಜ್ಞಾಸುಗಳ ಮುಂದಿರಿಸಲು ಮನಸ್ಸು ಮುದಗೊಳ್ಳುತ್ತಿದೆ.

ಈ ಗ್ರಂಥದ ಸಂಪಾದನಾ ಕಾರ್ಯದಲ್ಲಿ ವಿಶೇಷ ಪರಿಶ್ರಮ ವಹಿಸಿದ ಪಂ.ಬಿ.ಆರ್ ವೆಂಕಟೇಶಾಚಾರ್ಯ ಹಾಗೂ ಪಂ. ಪ್ರಲ್ಹಾದಾಚಾರ್ಯ ಜೋಶಿ ಇವರಿಗೆ ಕುಲಸ್ವಾಮಿ ತೊರವೆಯ ನರಸಿಂಹದೇವರು ಆಯುರಾರೋಗ್ಯಗಳನ್ನು ನೀಡಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುವೆ.

ಆದರಂತೆ ಈ ಗ್ರಂಥಕ್ಕೆ ಸುಂದರವಾದ ರೂಪವನ್ನು ನೀಡಿರುವ ಪಂ. ಮಹಿದಾಸಾಚಾರ್ಯ ಜೋಷಿ ಇವನಿಗೆ ಟೈಪ್ ಮಾಡಿರುವ ಶ್ರೀ ವೇಣುಗೋಪಾಲ

ಇವನಿಗೆ ಸುಂದರವಾದ ಮುಖಪುಟವನ್ನು ಒದಗಿಸಿದ ಶ್ರೀ ಕೆ.ಎಂ.ಶೇಷಗಿರಿ ಇವರಿಗೆ ಭಗವಂತ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಕೊನೆಯದಾಗಿ ಈ ಅನುವಾದ ಕಾರ್ಯವು ಪೂರ್ಣವಾಗುವದಕ್ಕೆ ನನ್ನ ಹಿಂದೆ ಸದಾ ಇದ್ದು ನನಗೆ ಅನುಗ್ರಹಿಸುತ್ತಿರುವ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಹಾಗೂ ಸದ್ಯ ಪೀಠದಲ್ಲಿ ವಿರಾಜಮಾನರಾದ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಅನಂತ ದಂಡ ಪ್ರಣಾಮಗಳು ಸಲ್ಲಿಸುತ್ತಿದ್ದೇನೆ. ಇದರಂತೆಯೇ ಇನ್ನು ಮುಂದೆ ನನ್ನಿಂದ ಇದೇ ರೀತಿಯಾಗಿ ಸತ್ಕರ್ಮಗಳನ್ನು ಮಾಡಿಸಲಿ ಎಂದು ಗುರ್ವಂತರ್ಯಾಮಿಯಾದ ಭಾರತೀರಮಣ ಮುಖ್ಯ-ಪ್ರಾಣಾಂತರ್ಯಾಮಿಯಾದ ಕುಲದೈವ ತೊರವಿಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುತ್ತೇನೆ.

**ಚೈತ್ರ ಶುದ್ಧ ನವಮಿ**
**15-04-2016**

**ಭಾಗವತಜನಸೇವಕ**
**ಪಂ. ರಂಗಾಚಾರ್ಯ ಗುತ್ತಲ**
ಶ್ರೀಜಯತೀರ್ಥ ವಿದ್ಯಾಪೀಠ.



# ಪ್ರಕಾಶಕರ ನುಡಿ

ಶ್ರೀ ೧೦೦೮ ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಉತ್ತರಾದಿಮಠಾಧೀಶರಾದ ಶ್ರೀ ೧೦೦೮ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ ''**ವಿಶ್ವಮಧ್ವಮಹಾಪರಿಷತ್**''

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಈ ದೃಷ್ಟಿಯಲ್ಲಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಅನೇಕ ಮಹತ್ವದ ಗ್ರಂಥಗಳನ್ನು ಅನೇಕ ಟೀಕಾ-ಟಿಪ್ಪಣಿಗಳೊಂದಿಗೆ ಪ್ರಕಾಶಿಸಿದೆ. ಇದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ಪಂ.ಪೂಜ್ಯ ಗುತ್ತಲಾಚಾರ್ಯರವರು ಸಮಗ್ರ ಶ್ರೀಮದ್ಭಾಗವತದ ಕನ್ನಡ ಅನುವಾದವನ್ನು ಅನೇಕ ವ್ಯಾಖ್ಯಾನಗಳ ವಿಶೇಷ ಅಂಶಗಳೊಂದಿಗೆ ಮಾಡಿದ್ದಾರೆ. ಈಗಾಗಲೇ 1, 2, 3, 4, 5, 6, 9, 10, 11, 12 ಈ ಸ್ಕಂಧಗಳ ಪ್ರಕಾಶನವನ್ನು ಮಾಡಿ ಪರಿಷತ್ತು ಸಜ್ಜನರ ಮುಂದಿಟ್ಟಿದೆ. ಈಗ ''**ಶ್ರೀಮದ್ಭಾಗವತ ಸಪ್ತಮಸ್ಕಂಧ**'' ವನ್ನು ಜಿಜ್ಞಾಸುಗಳ ಮುಂದಿಡುತ್ತಿದ್ದೇವೆ. ಎಲ್ಲ ಪುಸ್ತಕಗಳಂತೆ ಇದನ್ನೂ ತಾವು ಸ್ವಾಗತಿಸುತ್ತೀರಿ ಎಂದು ನಂಬಿದ್ದೇವೆ.

ಪ್ರಧಾನ ಕಾರ್ಯದರ್ಶಿಗಳು
ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ
ಬಸವನಗುಡಿ ಬೆಂಗಳೂರು-4

# ವಿಷಯಾನುಕ್ರಮಣಿಕಾ

ಒಂದನೇ ಅಧ್ಯಾಯ .................................................. ೧-೪೭

ಇಂದ್ರನ ಪಕ್ಷಪಾತಿಯಾದ ವಿಷ್ಣುವಿನಿಂದ ಮಕ್ಕಳನ್ನು ಕಳೆದು ಕೊಂಡ ದಿತಿಯು ಶೋಕತಪ್ತಳಾಗಿ ಆಲೋಚಿಸಿದಳು ಎಂದು ಷಷ್ಠಸ್ಕಂಧದ್ದಕೊನೆಯಲ್ಲಿ ಹೇಳಿದ್ದನ್ನು ಕೇಳಿ ಪರೀಕ್ಷಿತ ಭಗವಂತನ ವೈಶಮ್ಯವನ್ನು ಪ್ರಶ್ನಿಸಿದ್ದು ಅದಕ್ಕೆ ಶುಕಾಚಾರ್ಯರು ಉತ್ತರ ನೀಡಿದುದು, ನಾರದ ಹಾಗೂ ಧರ್ಮರಾಜರ ಸಂವಾದದಲ್ಲಿ ಚೈದ್ಯನ ಕುರಿತಾಗಿ ಪ್ರಶ್ನೆ ಅದಕ್ಕೆ ನಾರದರ ಉತ್ತರ, ಜಯವಿಜಯರ ಮೂರು ಜನ್ಮಗಳ ವೃತ್ತಾಂತ...

ಎರಡನೇ ಅಧ್ಯಾಯ ................................................ ೪೮-೮೨

ಹಿರಣ್ಯಾಕ್ಷನ ಸಂಹಾರದಿಂದ ಹಿರಣ್ಯಕಶಿಪುವಿಗೆ ಭಯಂಕರ ಕೋಪ ಬಂದದ್ದು, ಅದನ್ನು ಸಹಿಸಿಕೊಂಡು ಹಿರಣ್ಯಾಕ್ಷನ ಮಡದಿ-ಮಕ್ಕಳಿಗೆ ಕಪೋತದ ಕಥೆಯನ್ನು ಹೇಳುವ ಮೂಲಕ ಸಾಂತ್ವನ ಹೇಳಿದುದು..

ಮೂರನೇ ಅಧ್ಯಾಯ .......................................... ೮೩-೧೦೪

ಹಿರಣ್ಯಕಶಿಪುವಿನ ಘೋರವಾದ ತಪಸ್ಸು, ಆಗ ದೇವತೆಗಳು ಬ್ರಹ್ಮದೇವರನ್ನು ಪ್ರಾರ್ಥಿಸಿದ್ದು, ಹಿರಣ್ಯಕಶಿಪುವಿನ ಬಳಿ ಬ್ರಹ್ಮದೇವರು ಬಂದುದು ಹಾಗೂ ಹಿರಣ್ಯಕಶುಪುವಿಗೆ ವರದಾನವನ್ನು ನೀಡಿದುದು...

ನಾಲ್ಕನೇ ಅಧ್ಯಾಯ ............................................೧೦೫-೧೨೨

ನಂತರ ಹಿರಣ್ಯಕಶಿಪುವಿನ ಅಟ್ಟಹಾಸ,ದಿಕ್ಪಾಲಕರನ್ನು ಗೆದ್ದು ಇಂದ್ರನ ಮನೆಯಲ್ಲಿ ವಾಸಿಸಲು ಆರಂಭಿಸಿದುದು, ದೇವತೆಗಳೆಲ್ಲ ಭಯಗ್ರಸ್ತರಾಗಿ ಭಗವಂತನ ಬಳಿ ಧಾವಿಸಿದುದು, ಭಗವಂತ ದೇವತೆಗಳಿಗೆ ಅಭಯ ನೀಡಿದುದು. ಪ್ರಲ್ಹಾದಾದಿಗಳ ಜನನ...

ಐದನೇ ಅಧ್ಯಾಯ ..........................................೧೨೩-೧೪೮

ಪ್ರಹ್ಲಾದಾದಿಗಳನ್ನು ಶಂಡಾಮರ್ಕರಲ್ಲಿ ಅಧ್ಯಯನಕ್ಕೆ ಕಳುಹಿಸಿದುದು, ಹಿರಣ್ಯಕಶಿಪುವಿನ ಮುಂದೆ ಪರೀಕ್ಷೆಗೆ ಕುಳಿತ ಪ್ರಹ್ಲಾದ ಭಗವಂತನ ಮಹಿಮೆ ಹೇಳಲು ಆರಂಭಿಸಿದುದು, ಎರಡನೆಯ ಬಾರಿ ಪರೀಕ್ಷೆಯಲ್ಲಿಯೂ ಶ್ರೀಹರಿಯ

ಮಹಿಮೆಯನ್ನೇ ಪ್ರಹ್ಲಾದ ಹೇಳಲು ಮುಂದಾದಾಗ ಹಿರಣ್ಯಕಶಿಪುವು ಕೋಪಗೊಂಡುದುದು...

**ಆರನೇ ಅಧ್ಯಾಯ** ............................................೧೪೯-೧೭೨

ಪ್ರಲ್ಹಾದರಾಜರಿಂದ ದೈತ್ಯಬಾಲಕರಿಗೆ ವಿಷ್ಣುಧರ್ಮೋಪದೇಶ...

**ಏಳನೇ ಅಧ್ಯಾಯ** ............................................೧೭೩-೨೧೪

ಪ್ರಹ್ಲಾದರಾಜರು ತಮ್ಮ ಪೂರ್ವವೃತ್ತಾಂತವನ್ನು ಹೇಳಿದುದು, ಮತ್ತೆ ದೈತ್ಯಬಾಲಕರಿಗೆ ಉಪದೇಶಮಾಡಿದುದು...

**ಎಂಟನೇ ಅಧ್ಯಾಯ** ............................................೨೧೫-೨೬೫

ತನ್ನ ಮಗನಾದ ಪ್ರಲ್ಹಾದನನ್ನು ಕೊಲ್ಲಲು ಹಿರಣ್ಯಕಶಿಪುವು ನಿರ್ಧರಿಸಿದುದು, ಅದಕ್ಕಾಗಿ ನಾನಾ ಉಪಾಯಗಳನ್ನು ಮಾಡಿದುದು, ಹಿರಣ್ಯಕಶಿಪುವಿನ ಸಂಹಾರಕ್ಕಾಗಿ ನರಸಿಂಹದೇವರು ಅವತರಿಸಿದುದು, ಹಿರಣ್ಯಕಶಿಪುವಿನ ಸಂಹರಿಸಿದ ನಂತರ ಬ್ರಹ್ಮಾದಿದೇವತೆಗಳು ನರಸಿಂಹದೇವರನ್ನು ಸ್ತೋತ್ರಮಾಡಿದುದು...

**ಒಂಬತ್ತನೇ ಅಧ್ಯಾಯ** ........................................೨೬೬-೩೫೦

ಪ್ರಲ್ಹಾದಕೃತ ನರಸಿಂಹ ಸ್ತುತಿ. ನರಸಿಂಹದೇವರು ಪ್ರಹ್ಲಾದರಾಜರಿಗೆ ವರ ನೀಡಿದುದು...

**ಹತ್ತನೇ ಅಧ್ಯಾಯ** ............................................೩೫೧-೪೧೧

ಪ್ರಲ್ಹಾದರಾಜರಿಗೆ ಪಟ್ಟಾಭಿಷೇಕ,ದೇವತೆಗಳ ಸ್ವಸ್ವಧಾಮಗಮನ.ತ್ರಿಪುರಾಸುರರನ್ನು ಸಂಹರಿಸಲು ಅಸಮರ್ಥರಾದ ರುದ್ರದೇವರಿಗೆ ಭಗವಂತ ಅನುಗ್ರಹ ಮಾಡಿದುದು. ತ್ರಿಪುರದಾಹ ವಾದುದು...

**ಹನ್ನೊಂದನೇ ಅಧ್ಯಾಯ** ......................................೪೧೨-೪೩೪

ನಾರದರಿಂದ ಯುಧಿಷ್ಠಿರನಿಗೆ ಮನುಷ್ಯರ ಹಾಗೂ ಸ್ತ್ರೀಯರ ಸಾಧಾರಣ ಧರ್ಮಗಳ ಹಾಗೂ ಬ್ರಾಹ್ಮಣಾದಿವರ್ಣಗಳ ನಿರೂಪಣೆ...

**ಹನ್ನೆರಡನೇ ಅಧ್ಯಾಯ** ......................................೪೩೫-೪೫೨

ಬ್ರಹ್ಮಚರ್ಯ-ವಾನಪ್ರಸ್ಥಧರ್ಮಗಳ ನಿರೂಪಣೆ ಹಾಗೂ ಸರ್ವಾಶ್ರಮ-ಸಾಧಾರಣಧರ್ಮಗಳ ನಿರೂಪಣೆ...

**ಹದಿಮೂರನೇ ಅಧ್ಯಾಯ** .................................... **೪೫೩-೪೮೦**

ಕ್ರಮಪ್ರಾಪ್ತವಾದ ಯತಿಧರ್ಮವನ್ನು ಹೇಳುವರು...

**ಹದಿನಾಲ್ಕನೇ ಅಧ್ಯಾಯ** .................................... **೪೮೧-೫೦೫**

ಧರ್ಮರಾಜರ ಪ್ರಶ್ನೆಗೆ ಉತ್ತರರೂಪದಲ್ಲಿ ನಾರದರು ಎಲ್ಲ ವರ್ಣಾಶ್ರಮ ಧರ್ಮಗಳಿಗೆ ಗೃಹಸ್ಥಾಶ್ರಮವೇ ಮೂಲ ಎಂದು ಹೇಳುವರು...

**ಹದಿನೈದನೇ ಅಧ್ಯಾಯ** .................................... **೫೦೬-೫೬೪**

ನಾರದರು ಯಾವ ಯಾವ ಕರ್ಮಗಳನ್ನು ಹೇಗೆ ಹೇಗೆ ಮಾಡಬೇಕು ಎಂಬ ವಿಷಯವನ್ನು, ಕೊನೆಯಲ್ಲಿ ಹೇಳಿದುದು, ನಾರದರು ತಮ್ಮ ಪೂರ್ವವೃತ್ತಾಂತವನ್ನು ಹೇಳಿದುದು..

★★★



# ಅಥ ಶ್ರೀಮದ್ಭಾಗವತೇ - ಸಪ್ತಮಸ್ಕಂಧೇ

## ಪ್ರಥಮೋಽಧ್ಯಾಯಃ

**ಸಾರಾಂಶ**

ಶ್ರೀಹರಿಗೆ ದೇವತೆಗಳು ತಮ್ಮವರು, ಅಸುರರು ಪರರು ಎಂಬ ಬೇಧಭಾವನೆ ಇಲ್ಲ. ಹಾಗಾದರೆ ಅವನು ಇಂದ್ರನ ಪಕ್ಷವಹಿಸಿ ದೈತ್ಯರನ್ನು ಏಕೆ ಸಂಹರಿಸಿದ ಎಂಬ ಪರೀಕ್ಷಿತರ ಪ್ರಶ್ನೆಗೆ ಶುಕಾಚಾರ್ಯರು ಹೀಗೆ ಉತ್ತರಿಸುತ್ತಾರೆ. ಬೇಧಭಾವ, ದ್ವೇಷ, ಭಯ ಇವುಗಳೆಲ್ಲ ತ್ರಿಗುಣ ವಿಕಾರಗಳು. ತ್ರಿಗುಣಾತೀತನಾದ ಭಗವಂತನಲ್ಲಿ ಗುಣಕೃತ ದ್ವೇಷಾದಿ ಕೂಡುವದಿಲ್ಲ. ದೇವತೆಗಳ ಪಕ್ಷವನ್ನು ಒಹಿಸಿದ್ದಕ್ಕೆ ಅವನಿಗೆ ಅವರಿಂದ ಏನೂ ಆಗಬೇಕಾದದ್ದಿಲ್ಲ. ಅಸುರರಿಂದ ಅನಾಹುತಗಳೂ ಅವನಿಗಿಲ್ಲ. ಹೀಗಿರುವಾಗ ಅಸುರರನ್ನು ದ್ವೇಷಿಸುವ ಪ್ರಸಂಗವೇ ಇಲ್ಲ.

ಶ್ರೀಹರಿ ಗುಣಾತೀತನಾಗಿದ್ದರೂ ಗುಣಬದ್ಧರಾದ ದೇವಾಸುರರಲ್ಲಿ ಕಾಲಕಾಲಕ್ಕೆ ಪ್ರವೇಶಿಸಿ ಅವರು ಪರಸ್ಪರ ಒಬ್ಬರಿಂದ ಒಬ್ಬರು ಬಾಧಿತರಾಗುವಂತೆ ಮಾಡುತ್ತಾನೆ. ತಮೋಗುಣವನ್ನು ಪ್ರಚುರಗೊಳಿಸಿ ದೈತ್ಯರಿಗೆ, ಸತ್ವಗುಣಪ್ರಚುರ ಗೊಳಿಸಿ ದೇವತೆಗಳಿಗೆ, ರಜೋಗುಣ ಪ್ರಚುರಗೊಳಿಸಿ ರಾಜಸರಿಗೆ ಜಯವನ್ನು ತಂದುಕೊಡುತ್ತಾನೆ. ಹೀಗೆ ಜೀವರ ಯೋಗ್ಯತಾನುಸಾರ ಅವರಿಗೆ ಸಾತ್ವಿಕ-ರಾಜಸ-ತಾಮಸ ಶರೀರವನ್ನು ಕೊಟ್ಟು ಒಂದೊಂದು ಕಾಲದಲ್ಲಿ ಒಬ್ಬೊರಿಗೆ ಜಯವನ್ನು ತಂದು ಕೊಡುತ್ತಾನೆ. ದೇವತೆಗಳು ಸ್ವಾಭಾವಿಕ ಭಕ್ತರು, ಅಸುರರು ಸ್ವಾಭಾವಿಕ ದ್ವೇಷಿಗಳು. ಅವರವರಿಗೆ ಅನುಸಾರವಾಗಿ ಅವರಿಗೆ ಯೋಗ್ಯವಾದ ಸುಖ-ದುಃಖಗಳನ್ನು ಕೊಡುತ್ತಾನೆ. ಹೀಗಾಗಿ ಅವನು ನಿಷ್ಪಕ್ಷಪಾತಿ.

ಭಗವಂತ ವಿಷಮನಲ್ಲ ಎಂಬ ವಿಷಯವನ್ನು ನಿನಗೆ ಮನದಟ್ಟು ಮಾಡಲು ನಿಮ್ಮ ಅಜ್ಜನ ಕಥೆಯನ್ನು ಹೇಳುತ್ತೇನೆ ಎಂದು ಶುಕಾಚಾರ್ಯರು ಧರ್ಮರಾಜನ ರಾಜಸೂಯಯಾಗವನ್ನು ವರ್ಣಿಸತೊಡಗಿದರು. ರಾಜಸೂಯಯಾಗದಲ್ಲಿ ಯಾರಿಗೆ

ಅಗ್ರಪೂಜೆ ಎಂಬ ಪ್ರಶ್ನೆ ಉದ್ಭವಿಸಿದಾಗ ಹಿರಿಯರಾದ ಭೀಷ್ಮಾಚಾರ್ಯರು ಶ್ರೀಕೃಷ್ಣನಿಗೆ ಅಗ್ರಪೂಜೆ ಎಂದು ಹೇಳುತ್ತಾರೆ. ಅದನ್ನು ಸಹಿಸದ ಶಿಶುಪಾಲ ನೆರೆದ ಸಭೆಯಲ್ಲಿ ಶ್ರೀಕೃಷ್ಣನನ್ನು ದ್ವೇಷಿಸುತ್ತಾನೆ. ಬಾರಿ ಬಾರಿಗೆ ನಿಂದಿಸುತ್ತಾನೆ. ಅದರಿಂದ ಶ್ರೀಕೃಷ್ಣನಿಗೆ ಸ್ವಲ್ಪವೂ ನೋವಾಗುವದಿಲ್ಲ. ನಿಂದೆ ಪ್ರಶಂಸೆಗಳಿಂದ ನೋವು ನಲಿವುಗಳಾಗುವುದು ಪ್ರಾಕೃತ ಶರೀರಿಗಳಿಗೆ ಅಪ್ರಾಕೃತನಾದ ಭಗವಂತನಿಗಲ್ಲ. ಆದ್ದರಿಂದ ಸ್ವಾಭಾವಿಕ ಭಕ್ತರು ಅಸುರಾವೇಶದಿಂದ ನಿಂದಿಸಿದರೂ ಭಗವಂತ ಅದಕ್ಕೆ ಬೇಸರಗೊಳ್ಳದೇ ಅವರ ಭಕ್ತಿಗೆ ಮೆಚ್ಚಿ ಅನುಗ್ರಹವನ್ನು ಮಾಡುತ್ತಾನೆ. ವೇನನಂಥ ಸ್ವಾಭಾವಿಕ ದ್ವೇಷಿಗಳಲ್ಲಿ ದ್ವೇಷವನ್ನೇ ಮಾಡುವಂತೆ ಮಾಡಿ ಅವರನ್ನು ತಮಸ್ಸಿಗೆ ತಳ್ಳುತ್ತಾನೆ. ಸ್ವಾಭಾವಿಕ ಭಕ್ತರಾದ ಜಯವಿಜಯರು ಹಿರಣ್ಯಕಶಿಪು-ಹಿರಣ್ಯಾಕ್ಷ, ರಾವಣ-ಕುಂಭಕರ್ಣ, ಶಿಶುಪಾಲ-ದಂತವಕ್ರರಾಗಿ ಜನಿಸಿದಾಗ ಹರಿಯಲ್ಲಿ ಮೇಲ್ನೋಟಕ್ಕೆ ವೈರವನ್ನು ಮಾಡಿದವರಂತೆ ನಟಿಸಿ ಭಕ್ತಿಯಿಂದ ಸದಾ ಹರಿಯನ್ನು ಧ್ಯಾನಿಸಿ ಶಾಪಮುಕ್ತರಾಗಿ ತಮ್ಮ ಮೂಲರೂಪವನ್ನು ಸೇರಿಕೊಂಡರು.

★★★

ಇಂದ್ರನ ಪಕ್ಷಪಾತಿಯಾದ ವಿಷ್ಣುವಿನಿಂದ ಹತಪುತ್ರಳಾದ ದಿತಿಯು ಶೋಕತಪ್ತಳಾಗಿ ಆಲೋಚಿಸಿದಳು ಎಂದು ಷಷ್ಠಸ್ಕಂಧದಕೊನೆಯಲ್ಲಿ ಹೇಳಿದ್ದನ್ನು ಕೇಳಿ ಪರೀಕ್ಷಿತನು ಈ ಏಳನೇ ಸ್ಕಂಧದ ಆರಂಭದ ಮೂರು ಶ್ಲೋಕಗಳಿಂದ ಪ್ರಶ್ನಿಸುವನು. ಇದು ಯಾದವಾರ್ಯರ ಪ್ರಕಾರ ಪ್ರಥಮ ಶ್ಲೋಕಕ್ಕೆ ಅವತಾರಿಕೆ.

ಶ್ರೀವಿಜಯಧ್ವಜರು ಇದೇ ಶ್ಲೋಕಕ್ಕೆ ಹೀಗೆ ಅವತರಣಿಕೆ ನೀಡಿದ್ದಾರೆ. 'ಯಾವಾಗಲೂ ವೇದಾಂತದಲ್ಲಿಯೇ ಆಸಕ್ತರಾಗಿದ್ದರೂ ಶ್ರೀಮನ್ನಾರಾಯಣನ ಪ್ರಸಾದವಿಲ್ಲದೇ ಜ್ಞಾನಾಮೃತವನ್ನು ಹೊಂದಲಾರರು ಮತ್ತು ಅಸುರರನ್ನು ಮೋಹಗೊಳಿಸಲು ಶ್ರೀಹರಿಯು ತನ್ನ ಅವತಾರಗಳಲ್ಲಿ ತನ್ನ ದೇಹವು ಶುಕ್ರಶೋಣಿತಸಂಬಂಧದಿಂದ ಉಂಟಾದಂತೆ ತೋರಿಸುತ್ತಾನೆ. ಇದರಿಂದ ಸಜ್ಜನರು ಸಂದೇಹಗ್ರಸ್ತರಾಗುತ್ತಾರೆ. ಆ ಸಜ್ಜನರ ಸಂದೇಹ ನಿರಾಸಕ್ಕಾಗಿ ಶ್ರೀನೃಸಿಂಹಾವತಾರ. ಶ್ರೀಹರಿಯನ್ನು ಹೊಂದಲು ವರ್ಣಾಶ್ರಮಾಚಾರವನ್ನು ಆತನ ಪೂಜಾಪ್ರಕಾರಗಳನ್ನು ಈ ಸ್ಕಂಧದಲ್ಲಿ ನಿರೂಪಿಸುತ್ತಾರೆ' ಎಂದು.

ಸಂದೇಹಗ್ರಸ್ತರಾದ ಸಜ್ಜನರ ಸಂದೇಹವನ್ನು ನಿವಾರಿಸಲು ಸರ್ವಸಜ್ಜನರ ದುರಿತವಿದಾರಿ ಶ್ರೀನೃಸಿಂಹಾವತಾರವನ್ನು, ಅವನ ಪ್ರಸಾದಕ್ಕಾಗಿ ವಿವಿಧ-ವರ್ಣಾಶ್ರಮಾಚಾರವನ್ನು, ಶ್ರೀಹರಿಯ ಸೇವಾಪ್ರಕಾರವನ್ನು ನಿರೂಪಿಸುತ್ತಾರೆ. ಎಂಬುದು ಮಂದನಂದಿನಿವ್ಯಾಖ್ಯಾನದ ಅವತರಣಿಕೆ.

**ಸಮಃ ಪ್ರಿಯಃ ಸುಹೃದ್ಬ್ರಹ್ಮನ್ ಭೂತಾನಾಂ ಭಗವಾನ್ ಸ್ವಯಮ್ ।**
**ಇಂದ್ರಸ್ಯಾರ್ಥೇ ಕಥಂ ದೈತ್ಯಾನವಧೀದ್ವಿಷಮೋ ಯಥಾ ॥೧॥**

**ಬ್ರಹ್ಮನ್** ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ **ಭಗವಾನ್** ಯಾವ ಶ್ರೀಹರಿಯು **ಸ್ವಯಂ** ಸ್ವಾಭಾವಿಕವಾಗಿ **ಭೂತಾನಾಂ** ಜೀವರಿಗೆ **ಸಮಃ** 'ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ' ಇತ್ಯಾದಿಯಾಗಿ ಗೀತೆಯಲ್ಲಿ ಹೇಳಿದಂತೆ ಸಮನು ಅಂದರೆ ಯೋಗ್ಯತೆಯನ್ನು ಮೀರಿ ಒಬ್ಬರ ಪಕ್ಷವನ್ನು ಹಿಡಿಯುವವನಲ್ಲ **ಪ್ರಿಯಃ** ಆತ್ಮಾದಿ ಎಲ್ಲ ಪದಾರ್ಥಗಳಿಗಿಂತ ಪ್ರಿಯನು, ಅನಿಮಿತ್ತೋಪಕಾರಕನು, ಸತ್ತಾಪ್ರವೃತ್ತಿಪ್ರತೀತಿಗಳನ್ನಿತ್ತು ಅವರವರು ಮಾಡಿದ ಭಕ್ತಿಪೂರ್ವಕ ಅರ್ಚನೆ ಮೊದಲಾದ ಪುಣ್ಯಕೆಲಸಗಳಿಗೆ ಮೋಕ್ಷವೆಂಬ ಫಲವನ್ನು ಕೊಡುವ ಮೂಲಕ ಪರಮೋಪಕಾರಮಾಡುವದರಿಂದ ಸ್ನೇಹಿತನು **ಸಃ** ಆ ಶ್ರೀಹರಿಯು **ಸ್ವಯಂ** ಸ್ವಾಭಾವಿಕವಾಗಿ **ವಿಷಮೋ ಯಥಾ** ಒಬ್ಬರ ಪಕ್ಷವನ್ನು ಹಿಡಿದವನಂತೆ **ಇಂದ್ರಸ್ಯಾರ್ಥೇ** ಇಂದ್ರನಿಗಾಗಿ, ತನಗೆ ಪ್ರಯೋಜನವಿಲ್ಲದಿದ್ದರೂ ಇಂದ್ರನ ಪ್ರಯೋಜನಕ್ಕಾಗಿ **ಕಥಂ** ಹೇಗೆ **ದೈತ್ಯಾನ್** ದಿತಿಯ ಮಕ್ಕಳನ್ನು **ಅವಧೀತ್** ಕೊಂದನು.

ವಿಶೇಷ ಃ- ಇಬ್ಬರಲ್ಲಿ ಸಮನಾಗಿರುವವನು ಒಬ್ಬರಿಗಾಗಿ ಮತ್ತೊಬ್ಬರನ್ನು ಕೊಲ್ಲುವದು ಎಲ್ಲಿಯೂ ಕಂಡಿಲ್ಲ. ಸಮಾನನಾದ್ದರಿಂದ ದೈತ್ಯವಧೆಯು ಯುಕ್ತವಲ್ಲ, ಪ್ರಿಯನಾದ್ದರಿಂದ ಯುಕ್ತವಲ್ಲ, ಸುಹೃತ್ತಾದ್ದರಿಂದಲೂ ಯುಕ್ತವಲ್ಲ ಎಂದು ಪ್ರತ್ಯೇಕವಾಗಿ ದೈತ್ಯವಧ ಕೂಡುವುದಿಲ್ಲವೆನ್ನಲು ಪ್ರಯೋಜಕಗಳು. 'ವಿಷಮೋ ಯಥಾ' ಎಂಬುದನ್ನು ಉಪಲಕ್ಷಣಯಾ ಹೇಳಿದ್ದು. ವಿಷಮ ಎಂಬಂತೆ, ಅಪ್ರಿಯೋ ಯಥಾ ಅಪ್ರಿಯನೆಂಬಂತೆ, ಅಸುಹೃತ್ ಯಥಾ ಶತ್ರು ಎಂಬಂತೆ, ಎಂದು ಅರ್ಥ-ಮಾಡಿಕೊಳ್ಳಬೇಕು. ಪ್ರಿಯತ್ವವಾಗಲಿ ಸುಹೃತ್ವವಾಗಲಿ ಸರ್ವತ್ರ ಇಲ್ಲವಾದ್ದರಿಂದ ಸಿದ್ಧಾಂತದಲ್ಲಿ ಹೇಳುವ ಸಮತೆಯು ವಧವಿರೋಧಿಯಲ್ಲ. ಆದರೂ ಈ ಸಿದ್ಧಾಂತವನ್ನು ವ್ಯಕ್ತಪಡಿಸುವದಕ್ಕಾಗಿಯೇ ಈ ಪ್ರಶ್ನೆ ಮಾಡಿರುವುದು ಎಂದು ತಿಳಿಯಬೇಕು.

**ದುರ್ಘಟಭಾವದೀಪ** ಃ- 'ಪ್ರಿಯಃ ಸುಹೃತ್' ಎಂಬಲ್ಲಿ 'ಪ್ರಿಯಃ' ಎಂದರೆ ಪ್ರಿಯವನ್ನುಂಟು ಮಾಡುವ ತಂದೆ ಮೊದಲಾದವರಲ್ಲಿರುವವನು. 'ಸುಹೃತ್' ಎಂದರೆ ಪ್ರತ್ಯುಪಕಾರವನ್ನು ಅಪೇಕ್ಷಿಸದೇ ಉಪಕಾರಮಾಡುವವನು ಎಂದರ್ಥ. ಹೀಗೆ ಅರ್ಥವನ್ನು ಹೇಳುವದರಿಂದ ಭಗವಂತನಲ್ಲಿ ಸರ್ವಭೂತಕರ್ತೃಕ ಪ್ರೀತಿವಿಷಯತ್ವವು ಬಾಧಿತವಾಗುತ್ತದೆ. ಇನ್ನು ಪ್ರಿಯಕೃತ್ ಪ್ರಿಯಃ ಎಂಬ ವಚನವಿರುವದರಿಂದ ಪ್ರಿಯಃ ಎಂಬುದಕ್ಕೆ ಪ್ರಿಯಕೃತ್ ಎಂದೇ ಅರ್ಥ ಹೇಳಬೇಕು.

ಆಗ ಸುಹೃತ್ ಎಂಬುದರಿಂದ ಪುನರುಕ್ತವೆಂಬ ದೋಷ ಪರಿಹಾರವಾಗುತ್ತದೆ. ಪಿತ್ರಾದಿಗಳು ಸುಹೃತ್ ಆಗಿರುವದರಿಂದ ಭಗವಂತನಿಗೇ ಸುಹೃತ್ತ್ವ ಹೇಳಿರುವದು ಅನುಪಪನ್ನ ಎಂಬ ಶಂಕಾವನ್ನು ಪರಿಹರಿಸಲು ಪ್ರಿಯಶಬ್ದಪ್ರಯೋಗ ಮಾಡಿರುತ್ತಾರೆ. ಪ್ರಿಯವನ್ನುಂಟು ಮಾಡುವ ಪಿತ್ರಾದಿಸ್ಥತ್ವವನ್ನು ಲಕ್ಷಣಯಾ ಸ್ವೀಕರಿಸಿ ಪ್ರಿಯ ಎಂಬುದಕ್ಕೆ ಭಗವಂತನೇ ಪ್ರಿಯರಾದ ತಂದೆ ಮೊದಲಾದವರಲ್ಲಿ ಇದ್ದು ಪ್ರತ್ಯುಪಕಾರವನ್ನಪೇಕ್ಷಿಸದೇ ಉಪಕಾರ ಮಾಡುವನು. ಆದ್ದರಿಂದ ಭಗವಂತನೇ ಸುಹೃತ್ ಎಂದು ಹೇಳಿದ್ದು ಸರಿಯಾಗಿಯೆ ಇದೆ ಎಂದು ತಾತ್ಪರ್ಯಾರ್ಥ ಎನ್ನುತ್ತಾರೆ. ||೧||

ಯಾರಿಗೆ ಯಾರಿಂದ ಪ್ರಯೋಜನವಿರುವದೋ ಅವನು ಅವನ ಪಕ್ಷಪಾತಿಯಾಗುವನು. ಯಾರಿಂದ ಹೆದರುವನೋ ಅವರನ್ನು ದ್ವೇಷಿಸುವನು ಈ ಎರಡೂ ಕಾರಣ ಭಗವಂತನಲ್ಲಿ ಇಲ್ಲವೆಂದು ಹೇಳುವರು-

**ನ ಹ್ಯಸ್ಯಾರ್ಥಃ ಸುರಗಣೈಃ ಸಾಕ್ಷಾನ್ನಿಃಶ್ರೇಯಸಾತ್ಮನಃ ।**
**ನೈವಾಸುರೇಭ್ಯೋ ವಿದ್ವೇಷೋ ನೋದ್ವೇಗಶ್ಚಾಗುಣಸ್ಯ ಹಿ ||೨||**

**ಹಿ** ಏಕೆಂದರೆ **ಸಾಕ್ಷಾತ್‌ನಿಃಶ್ರೇಯಸಾತ್ಮನಃ** ಮತ್ತೊಬ್ಬರ ಅಧೀನನಲ್ಲದ ನಿತ್ಯನಿರ್ದುಃಖಪರಮಾನಂದಸ್ವರೂಪನಾದ **ಅಸ್ಯ** ಈ ಶ್ರೀಹರಿಗೆ **ಸುರಗಣೈಃ** ದೇವತೆಗಳ ಸಮೂಹದಿಂದ **ಅರ್ಥಃ** ಪ್ರಯೋಜನವು **ನ** ಇಲ್ಲ **ಹಿ** ಯಾವ ಕಾರಣ **ಅಗುಣಸ್ಯ** ಪ್ರಾಕೃತಗುಣರಹಿತನಾದ **ಅಸ್ಯ** ಇವನಿಗೆ **ಅಸುರೇಭ್ಯಃ** ದ್ವೇಷಸ್ವರೂಪರಾದ ಅಸುರರಿಂದ **ವಿದ್ವೇಷಃ** ದ್ವೇಷವು **ನ** ಇಲ್ಲ **ಉದ್ವೇಗಃ ಚ** ಭಯವೂ **ನ** ಇಲ್ಲ.

ವಿಶೇಷ :- ಮುಕ್ತಿಯೋಗ್ಯರು ಆನಂದಸ್ವರೂಪರಾದರೂ ಆನಂದಸ್ವರೂಪದ ಅಭಿವ್ಯಕ್ತಿಗಾಗಿ, ಸ್ಥಿತಿಗಾಗಿ, (ಇನ್ನೊಬ್ಬರ)ಶ್ರೀಹರಿಯ ಅಪೇಕ್ಷೆ ಅವರಿಗೆ ಇದೆ. ಆನಂದ ಸ್ವರೂಪಳಾದ ರಮೆಗೆ ಆನಂದದ ಸ್ಥಿತಿಗಾಗಿ ಹರಿಯ ಅಪೇಕ್ಷೆ ಇದೆ ಹಾಗೆ ಪರಮಾತ್ಮನಿಗೆ ಮತ್ತೊಬ್ಬರ ಅಪೇಕ್ಷೆ ಇಲ್ಲವೆಂದು ತಿಳಿಸಲು ಸಾಕ್ಷಾತ್ ಎಂದಿದ್ದಾರೆ. 'ಕ್ರುಧದ್ರುಹೇರ್ಷ್ಯಾಸೂಯಾರ್ಥಾನಾಂ ಯಂ ಪ್ರತಿ ಕೋಪಃ' ಎಂಬ ಸೂತ್ರದಿಂದ ಅಸುರೇಭ್ಯಃ ಎಂಬಲ್ಲಿ ಚತುರ್ಥೀ ವಿಭಕ್ತಿ ಬಂದಿರುತ್ತದೆ. ದ್ವೇಷವು ಕ್ರೋಧರೂಪವಾದ್ದರಿಂದ ಪ್ರಾಕೃತಗುಣವಿರುವವರಿಗೆ ದ್ವೇಷಭಯಗಳು ಆಗುವವು. ಶ್ರೀಹರಿಗೆ ಅವು ಇಲ್ಲ ಎಂದು ತಿಳಿಸಲು 'ಅಗುಣಸ್ಯ' ಎಂದು ಹೇಳಿರುವರು. 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಯು ಅಗುಣನೆಂಬುದಕ್ಕೆ ಪ್ರಮಾಣ. ಇದರಿಂದ ಪರಮಾನಂದಸ್ವರೂಪನಿಗೂ ಗುಣಸಂಬಂಧದಿಂದ ದ್ವೇಷಭಯಗಳು ಜೀವನಂತೆ ಬರಬಹುದು ಎಂಬ ಶಂಕೆಯನ್ನು ಪರಿಹರಿಸಿರುವರು.

೧) ಇಂದ್ರನಿಂದ ಪ್ರಯೋಜನ ೨) ದೈತ್ಯರಲ್ಲಿ ದ್ವೇಷ ೩) ದೈತ್ಯರಿಂದ ಮುಂದೆ ಬಾಧಕದ ಭಯ ಹೀಗೆ ಮೂರುಕಾರಣದಿಂದ ದೈತ್ಯವಧೆಯನ್ನು ಹೇಳಬೇಕು. ಅದು ಸರಿಯಲ್ಲ. ಆನಂದವು ಸ್ವರೂಪವಾದ್ದರಿಂದ ಅನನ್ಯಾಪಾದನೀಯ. ಶ್ರೀಹರಿಯು ಅನನ್ಯಾಧೀನನಾದ್ದರಿಂದ ಅಧಿಕಾರಿಗಳಂತೆ ಅಭಿವ್ಯಕ್ತಿಗಾಗಿ, ರಮೆಯಂತೆ ಆನಂದಸ್ಥಿತಿಗಾಗಿಯಾಗಲಿ ಯಾರ ಅಪೇಕ್ಷೆಯಿಲ್ಲವೆಂದು ಒಂದನೇ ಪಕ್ಷನಿರಾಸ, ದ್ವೇಷವಿಲ್ಲ ಎಂದು ಎರಡನೇ ಪಕ್ಷವನ್ನು, ಭಯವಿಲ್ಲವೆಂದ್ದದ್ದರಿಂದ ಮೂರನೇ ಪಕ್ಷವನ್ನು ನಿರಾಕರಸಿದಂತಾಯಿತು. ಇವೆರಡಕ್ಕೂ ಕಾರಣ 'ಅಗುಣಸ್ಯ ಎಂದು'. ಭಯದ್ವೇಷಗಳು ಗುಣಕಾರ್ಯ, ಗುಣವಿಲ್ಲದವಗೆ ಅವುಗಳೂ ಇಲ್ಲ. ಆದ್ದರಿಂದ ಯಾವ ರೀತಿಯಿಂದಲೂ ದೈತ್ಯವಧೆ ಸರಿಯಲ್ಲ ಎಂದು ಅಭಿಪ್ರಾಯ. ।।೨।।

**ಇತಿ ನಃ ಸುಮಹಾಭಾಗ ನಾರಾಯಣಗುಣಾನ್ ಪ್ರತಿ ।**
**ಸಂಶಯಃ ಸುಮಹಾನ್ ಜಾತಸ್ತದ್ಭವಾನ್ ಛೇತ್ತುಮರ್ಹತಿ ।।೩।।**

**ಹೇ ಸುಮಹಾಭಾಗ** ಅತಿಮಹಾಭಾಗ್ಯಶಾಲಿಗಳಾದ ಶುಕಾಚಾರ್ಯರೇ **ಇತಿ** ಮೇಲೆ ಹೇಳಿದಂತೆ **ನಃ** ನಮಗೆ **ನಾರಾಯಣಗುಣಾನ್ ಪ್ರತಿ** ಶ್ರೀಹರಿಯ ಗುಣಗಳ ವಿಷಯದಲ್ಲಿ **ಸುಮಹಾನ್ ಸಂಶಯಃ** ಬಹುದೊಡ್ಡ ಸಂದೇಹವು **ಜಾತಃ** ಉಂಟಾಗಿರುವದು. **ಭವಾನ್** ಶಾಸ್ತ್ರದ ಆಂತರ್ಯ ತಿಳಿದ ತಾವು **ತಂ** ಆ ಸಂದೇಹವನ್ನು **ಛೇತ್ತುಂ ಅರ್ಹತಿ** ಪರಿಹರಿಸಲು ಸಮರ್ಥರು.

ವಿಶೇಷ :- ಸಮತ್ವ ಪ್ರಿಯತ್ವ ಸುಹೃತ್ವ ನಿಶ್ರೇಯಸಾತ್ಮತ್ವ ನಿರ್ಗುಣತ್ವಗಳಿದ್ದಲ್ಲಿ ಸುರೋಪಕಾರತ್ವ, ದೈತ್ಯಸಂಹಾರಕತ್ವ ಮುಂತಾದವು ಇರುವಂತಿಲ್ಲ. ಹೀಗೆ ಗುಣವಿಷಯದಲ್ಲಿ ಬಹು ಸಂದೇಹ ಬಂದಿದೆ ಎಂದರ್ಥ. ।।೩।।

ಪ್ರಶ್ನೆಯನ್ನು ಸ್ತುತಿಸುವರು-

**ಶ್ರೀಶುಕ ಉವಾಚ**

**ಸಾಧು ಪೃಷ್ಟಂ ಮಹಾರಾಜ ಹರೇಶ್ಚರಿತಮದ್ಭುತಮ್ ।**
**ಯದ್ಭಾಗವತಮಾಹಾತ್ಮ್ಯಂ ಭಗವದ್ಭಕ್ತಿವರ್ಧನಮ್ ।।೪।।**

**ಮಹಾರಾಜ** ಪರೀಕ್ಷಿತನೇ **ಹರೇಃ ಚರಿತಂ** ಶ್ರೀಹರಿಯ ಚರಿತ್ರೆಯು **ಅದ್ಭುತಂ** ಆಶ್ಚರ್ಯಕರವಾದುದು **ಯತ್** ಯಾವ ಕಾರಣ **ಭಾಗವತಮಾಹಾತ್ಮ್ಯಂ** ಶ್ರೀಹರಿಯ ಚರಿತ್ರೆಯಲ್ಲಿ ಬರುವ ಭಗವದ್ಭಕ್ತರ ಮಹಿಮೆ ಹಾಗೂ ಭಗವಂತನ ಮಹಿಮೆಯು **ಭಗವದ್ಭಕ್ತಿವರ್ಧನಂ** ಭಗವಂತನಲ್ಲಿ ಭಕ್ತಿಯನ್ನು ಹೆಚ್ಚಿಸುವದೋ **ತತ್** ಆ ಕಾರಣದಿಂದ **ತ್ವಯಾ ಪೃಷ್ಟಂ** ನಿನ್ನಿಂದ ಕೇಳಲ್ಪಟ್ಟದ್ದು **ಸಾಧು** ಶ್ರೇಯಸ್ಕರವಾದುದು. ।।೪।।

**ಗೀಯತೇ ಪರಮಂ ಪುಣ್ಯಂ ಋಷಿಭಿರ್ನಾರದಾದಿಭಿಃ ।**
**ನತ್ವಾ ಕೃಷ್ಣಾಯ ಮುನಯೇ ಕಥಯಿಷ್ಯೇ ಹರೇಃ ಕಥಾಮ್ ॥೫॥**

**ಪರಮಂ ಪುಣ್ಯಂ** ಅತ್ಯಂತಪವಿತ್ರವಾದ, ಅದ್ಭುತವಾದ ಶ್ರೀಹರಿಯ ಚರಿತ್ರೆಯು **ಋಷಿಭಿಃ** ಜ್ಞಾನಿಗಳಾದ **ನಾರದಾದಿಭಿಃ** ನಾರದರೇ ಮೊದಲಾದವರಿಂದ **ಗೀಯತೇ** ಗಾನಮಾಡಲ್ಪಡುತ್ತದೆ. **ಮುನಯೇ** ಮುನಿಗಳಿಗೆಲ್ಲ ಮಾರ್ಗದರ್ಶಕರಾದ, ಸರ್ವವನ್ನು ತಿಳಿದ **ಕೃಷ್ಣಾಯ** ವೇದವ್ಯಾಸರನ್ನು **ನತ್ವಾ** ನಮಸ್ಕರಿಸಿ **ಹರೇಃ** ಪಾಪಹಂತೃತ್ವವಿಶಿಷ್ಟನಾದ ಶ್ರೀಹರಿಯ **ಕಥಾಂ** ಚರಿತೆಯನ್ನು **ಕಥಯಿಷ್ಯೇ** ಹೇಳುವೆನು.

ವಿಶೇಷ ಃ 'ನತ್ವಾ ಕೃಷ್ಣಾಯ' ಎಂಬಲ್ಲಿ ಕ್ರಿಯಾರ್ಥೋಪಪದಸ್ಯ ಕರ್ಮಣಿ ಸ್ಥಾನಿನಃ (ಪಾ.ಸೂ.೨.೩.೧೪) ಎಂಬುದರಿಂದ ಚತುರ್ಥೀ. ಪ್ರಶ್ನೆಗೆ ಉತ್ತರ ಭಗವದನುಗ್ರಹ ವಿಲ್ಲದೇ ಸುಲಭವಾಗಿ ಹೇಳಲಾಗದು ಎಂದು ತಿಳಿಸಲು ಶ್ರೀಹರಿಗೆ ನಮಸ್ಕರಿಸಿ ಎಂದಿರುವರು. ॥೫॥

**ನಿರ್ಗುಣೋಽಪಿ ಹ್ಯಜೋಽವ್ಯಕ್ತೋ ಭಗವಾನ್ ಪ್ರಕೃತೇಃ ಪರಃ ।**
**ಸ್ವಮಾಯಾಗುಣಮಾವಿಶ್ಯ ಬಾಧ್ಯಬಾಧಕತಾಂ ಗತಃ ॥೬॥**

**ಭಗವಾನ್** ಷಡ್ಗುಣೈಶ್ವರ್ಯವಂತನಾದ ಶ್ರೀಹರಿಯು **ನಿರ್ಗುಣಃ** ಸತ್ವಾದಿಗುಣರಹಿತನು **ಅಜಃ** ಸತ್ವಾದಿಗುಣಕಾರ್ಯವಾದ ಜನನಾದಿಗಳಿಲ್ಲದವನು **ಪ್ರಕೃತೇಃ ಪರಃ** ಜಡಪ್ರಕೃತಿಗೆ ಅಭಿಮಾನಿನಿಯಾದ ಚೇತನಪ್ರಕೃತಿಯೆನಿಸಿದ ಲಕ್ಷ್ಮೀದೇವಿಗಿಂತಲೂ ಉತ್ತಮನು **ಅವ್ಯಕ್ತಃ** ಅವನ ಅನುಗ್ರಹವಿಲ್ಲದೇ ಕಾಣದಿರುವವನು **ಅಪಿ** ಆದರೂ **ಸ್ವಮಾಯಾಗುಣಂ ಆವಿಶ್ಯ** ಸ್ವತಂತ್ರ ಇಚ್ಛಾರೂಪವಾದ ತನ್ನ ಗುಣವನ್ನು ಅನುಸರಿಸಿ ಅಥವಾ ತನ್ನ ಅಧೀನವಾದ ಪ್ರಕೃತಿಗುಣಗಳನ್ನು ತನ್ನ ಇಚ್ಛೆಯಿಂದಲೇ ಆಶ್ರಯಿಸಿ, ಅಂದರೆ ಗುಣಕಾರ್ಯಗಳಾದ ಅಸುರ, ದೇವ ಮುಂತಾದವರ ದೇಹದಲ್ಲಿ ಪ್ರವೇಶಮಾಡಿ **ಬಾಧ್ಯಬಾಧಕತಾಂ ಗತಃ** ಬಾಧ್ಯರಾದ ದೈತ್ಯರಲ್ಲಿದ್ದು ನಿಯಾಮಕನಾಗಿ ಬಾಧ್ಯನೂ,ಬಾಧಕತ್ವಪ್ರದನಾಗಿ ಬಾಧಕನೂ ಆಗಿರುವನು.

ವಿಶೇಷ ಃ- ನಿರ್ಗುಣ ಎಂದು ಹೇಳಿರುವದರಿಂದ ಗುಣಕಾರ್ಯಗಳಾದ ದ್ವೇಷೋದ್ವೇಗಗಳಿಲ್ಲದವನೆಂದೂ '**ಪ್ರಕೃತೇಃ ಪರಃ ಭಗವಾನ್**' ಎಂಬುದರಿಂದ ಸುರಗಣಗಳಿಂದ ಇವನಿಗೆ ಏನೂ ಆಗಬೇಕಿಲ್ಲವೆಂದೂ ಹೇಳಿರುವರು **ಅಪಿ** ಆದರೂ ಎಂಬುದರಿಂದ ಹಂತೃತ್ವಕ್ಕೆ ಕಾರಣವಿಲ್ಲದಿದ್ದರೂ ತನ್ನ ಇಚ್ಛೆಯಿಂದಲೇ ತನ್ನ

ಅಧೀನವಾದ ಪ್ರಕೃತಿಗುಣಗಳಿಂದ ಬಂದ ದೇವಾಸುರ ಅವತಾರರೂಪದಿಂದ ಅಸುರಬಾಧಕನೂ, ಅಸುರರೇ ಮೊದಲಾದ ಬಾಧ್ಯವಸ್ತುಗಳಲ್ಲಿ ಬಾಧ್ಯ ಎಂದು ತಿಳಿಸಿರುವರು.

ಈ ಶ್ಲೋಕದಲ್ಲಿ ದೇವಾಸುರರ ದೇಹ ಹರಿಗೆ ಇದೆಯೆಂದು ತೋರುವದು ಅದು ಪ್ರಮಾಣವಿರುದ್ಧ ಕಾರಣ ವಿವಕ್ಷಿತತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರುಃ-

**... ತಾತ್ಪರ್ಯ ...**

**ಬಾಧ್ಯಾದಿಸ್ಥೋ ಹರಿರ್ನಿತ್ಯಂ ಬಾಧ್ಯತಾದಿಗತೇತ್ಯಪಿ ।**
**ಗೀಯತೇ ನ ತು ಬಾಧ್ಯತ್ವಾತ್ ಯದದೋಷಯುತತತ್ವತಃ ॥ ಇತಿ ಭವಿಷ್ಯತ್ಪರ್ವಣಿ**

ಬಾಧ್ಯಬಾಧಕವಸ್ತುಗಳಲ್ಲಿ ಇದ್ದುಕೊಂಡು(ನಿಯಾಮಕನಾಗಿರುವದರಿಂದ) ಶ್ರೀಹರಿಯು ಬಾಧ್ಯಬಾಧಕನೆಂದು ಶಾಸ್ತ್ರಗಳಲ್ಲಿ ಕರೆಯಲ್ಪಡುವನು. ಬಾಧ್ಯಬಾಧಕಗಳಿಂದ ಅಭಿನ್ನನಾಗಿ ಹಾಗೆ ಕರೆಯಲ್ಪಡುವದಿಲ್ಲ. ಏಕೆಂದರೆ ಅವನು ನಿರ್ದೋಷನು ಆದ್ದರಿಂದ ಅವುಗಳ ಸ್ವರೂಪವಲ್ಲ ಎಂದು ಭವಿಷ್ಯತ್ಪರ್ವದಲ್ಲಿದೆ.

ಮೂಲದಲ್ಲಿ ಹಿ ಎಂಬುದರಿಂದ, **'ಓಂ ಲೋಕವತ್ತು ಲೀಲಾಕೈವಲ್ಯಂ ಓಂ'** ಎಂಬುದರಿಂದ ಸೂತ್ರಕಾರರು ತಿಳಿಸುವಂತೆ ಭಗವಂತನ ಲೀಲೆಯೇ ಇದು ಎಂದು ತಿಳಿಸಿರುವರು. ಶ್ರೀಹರಿ ಲೋಕವಿಲಕ್ಷಣನೆಂಬುದನ್ನು ತಿಳಿಸುವದಕ್ಕಾಗಿ ನಿರ್ಗುಣ ಅಜ ಮುಂತಾಗಿ ಹೇಳಿದ್ದು, ಜೀವನ ಗುಣ, ದೋಷ, ಕರ್ಮ, ಯೋಗ್ಯತೆಗಳಿಗೆ ತಕ್ಕಂತೆ ರಕ್ಷಣೆ ನಾಶಗಳನ್ನು ಮಾಡುವದರಿಂದ ಸಮತ್ವಾದಿಗಳೂ ಯುಕ್ತವೇ ಎಂದು ಅಪಿ ಎಂಬುದರಿಂದ ತಿಳಿಸುವರು. ಹಾಗಾದರೆ ಶ್ರೀಹರಿಯು ಏಕೆ ಕಾಣುತ್ತಿಲ್ಲವೆಂದರೆ ಅವ್ಯಕ್ತನೆಂದಿರುವರು.

**ದಧಿಸ್ಥಘೃತವತ್ ಕಾಷ್ಠೇ ವಹ್ನಿವಚ್ಚ ಜನಾರ್ದನಃ ।**
**ದೇಹೇಂದ್ರಿಯಾಸು ಜೀವೇಭ್ಯೋ ವಿವಿಚ್ಯ ಜ್ಞಾಯತೇ ನ ತು ॥**

ಎಂಬ ಪ್ರಮಾಣ ಈ ವಿಷಯವನ್ನು ಸ್ಪಷ್ಟಪಡಿಸುವದು. ಮೊಸರಿನಲ್ಲಿರುವ ತುಪ್ಪದಂತೆ, ಅರಣಿಯಲ್ಲಿರುವ ವಹ್ನಿಯಂತೆ, ಶ್ರೀಹರಿಯು ದೇಹ, ಇಂದ್ರಿಯ, ಪ್ರಾಣ, ಜೀವರಿಗಿಂತ ಬೇರೆಯಾಗಿ ತಿಳಿದು ಬರುತ್ತಿಲ್ಲ. ಪ್ರಯತ್ನ ಮಾಡಿದರೆ ಕಾಣಿಸುವನು ಎಂದು ಉದಾಹರಣೆಗಳ ಅಭಿಪ್ರಾಯ.

ವಿಶೇಷ ಃ- ಇಲ್ಲಿ ಶ್ರೀಹರಿಯಲ್ಲಿ ನಿರ್ಗುಣತ್ವವಿದೆ ಎಂಬಲ್ಲಿ ಗುಣಕಾರ್ಯ ಜನನಾದಿಕಾರ್ಯಗಳಿಲ್ಲದಿರುವದು ಗುಣಕಾರಣ ಪ್ರಕೃತಿಪರತ್ವ ಇವೆರಡು ಜ್ಞಾಪಕಗಳೆಂದು ತಿಳಿಸಲು 'ಅಜಃ', 'ಪ್ರಕೃತೇಃ ಪರಃ' ಎಂಬ ಪದಗಳನ್ನು

ಕೊಟ್ಟಿರುವರು. ಇದರಿಂದ ಎರಡನೇ ಶ್ಲೋಕದಲ್ಲಿ ಹೇಳಿದ ಶಂಕೆಗೆ ಉತ್ತರಕೊಟ್ಟಂತೆ ಆಗುತ್ತದೆ. 'ಬಾಧ್ಯಬಾಧಕತಾಂ ಗತಃ' ಎಂಬಲ್ಲಿ ಬಾಧ್ಯರಿಗೆ ಬಾಧಕನಾಗಿರುವ ಎಂಬರ್ಥದಲ್ಲಿ ಷಷ್ಠೀ ತತ್ಪುರುಷ. ತೊಂದರೆ ಇಲ್ಲದಿದ್ದರೂ ಬಾಧ್ಯನೂ ಬಾಧಕನೂ ಆಗಿರುವನು. ದ್ವಂದ್ವ ಸಮಾಸ ಮಾಡಿ ತಾಲ್ ಪ್ರತ್ಯಯವನ್ನು ಹೇಳಿದಾಗ ಬಾಧ್ಯಬಾಧಕತಾ ಎಂಬ ರೂಪವು ನಿಷ್ಪನ್ನವಾಗುತ್ತದೆ.

ಇದರ ಮೇಲೆ ನಿರ್ದೋಷನಾದ ಶ್ರೀಹರಿಗೆ ಬಾಧ್ಯತೆ ಕೂಡುವದಿಲ್ಲ ಎಂಬ ಶಂಕೆ ಉದ್ಭವಿಸುವದು. ಆದ್ದರಿಂದ ತಾತ್ಪರ್ಯಕಾರರು ಮೇಲಿನ ಅರ್ಥ ತಿಳಿಸಿರುವರು. ಬಾಧ್ಯತೆಗೆ ಬೇಕಾದ ಲೋಕಪೀಡೆಗೆ ಕಾರಣವಾದ ಬಲವನ್ನು ಕೊಡಲು ಬಾಧ್ಯರಲ್ಲಿರುವನೆಂದು ಹೇಳುವ ಆವಶ್ಯಕತೆ ಇದೆ. ಅಲ್ಲಿರುವದಾದರೂ ಕಂಡುಬಂದಿಲ್ಲ ಎಂಬ ಶಂಕೆಗೆ ಉತ್ತರವಾಗಿ ಅವ್ಯಕ್ತನೆಂದು ಮೂಲದಲ್ಲಿ ಹೇಳಿರುವರು. ಇದರಿಂದ ಮೊದಲನೆ ಶ್ಲೋಕದಲ್ಲಿ ಹೇಳಿದ ಶಂಕೆಗೆ ಸಮಾಧಾನ ಸಂಗ್ರಹಿಸಿರುವರು. ಯಮದೇವರಲ್ಲಿರುವ ಸಮವರ್ತಿತ್ವದಂತೆ ಅವರವರ ಯೋಗ್ಯತೆಗೆ ಅನುಸಾರವಾಗಿ ಫಲಕೊಡುವದರಿಂದ ಶ್ರೀಹರಿಯಲ್ಲಿರುವ ಸಮತೆ ಅಸುರವಧ ವಿರೋಧಿಯಲ್ಲ. ಸಜ್ಜನರ ಪ್ರೀತಿಗೆ ಪಾತ್ರನೆಂಬ ಪ್ರಿಯತ್ವವೂ, ಪ್ರತ್ಯುಪಕಾರಾಪೇಕ್ಷೆಯಿಲ್ಲದೆ ಉಪಕಾರಮಾಡುವದೆಂಬ ಸುಹೃತ್ವವೂ, ಸಜ್ಜನರ ವಿಷಯದಲ್ಲಿಯೇ ಆದ್ದರಿಂದ ಅವುಗಳೂ ಅಸುರವಧೆಗೆ ವಿರೋಧಿಯಲ್ಲ. 'ಬಾಧ್ಯತಾದಿಗತೇತ್ಯಪಿ' ಎಂಬಲ್ಲಿ ಅವಿಭಕ್ತಿತ್ವದಿಂದಾಗಲೀ ಸುಪ್‌ಲೋಪದಿಂದಾಗಲೀ ಪ್ರಯೋಗಮಾಡಿರುವರು. ಇಲ್ಲಿ ಆದಿಪದದಿಂದ ಬದ್ಧ, ದುಃಖಿ ಮುಂತಾದವನ್ನು ತೆಗೆದುಕೊಳ್ಳಬೇಕು. ಇದರಿಂದ ಪ್ರವೃತ್ತಿನಿಮಿತ್ತನಿಯಾಮಕತ್ವದಿಂದಲೂ ಪ್ರವೃತ್ತಿನಿಮಿತ್ತಾಶ್ರಯಸ್ಥತ್ವದಿಂದಲೂ ತದಧೀನತ್ವನ್ಯಾಯದಿಂದ ತಚ್ಛಬ್ದವಾಚ್ಯತ್ವ ಹೇಳಿದಂತಾಯಿತು. ॥೬॥

ಹೇಳಿದ್ದನ್ನೆ ವಿವರಿಸುತ್ತಾರೆ

**ಸತ್ವಂ ರಜಸ್ತಮ ಇತಿ ಪ್ರಕೃತೇರ್ನಾತ್ಮನೋ ಗುಣಾಃ ।**
**ನ ತೇಷಾಂ ಯುಗಪದ್ ರಾಜನ್ ಹ್ರಾಸ ಉನ್ನಾಹ ಏವ ಚ ॥೭॥**

**ಸತ್ವಂ ರಜಃ ತಮಃ ಇತಿ** ಸತ್ವ ರಜಸ್ಸು ತಮಸ್ಸು ಎಂಬ **ಗುಣಾಃ** ಗುಣಗಳು **ಪ್ರಕೃತೇಃ** ಜಡಪ್ರಕೃತಿಯ ಸ್ವರೂಪಗಳಾದವುಗಳು **ಆತ್ಮನಃ ನ** ಶ್ರೀಹರಿಯ ಸ್ವರೂಪಗಳಲ್ಲ ಆದರೆ ಅವನ ಅಧೀನವಾದವುಗಳು. ಭಿನ್ನಸ್ವಭಾವಗಳಾದ್ದರಿಂದ ಜೀವರಿಗೂ ಅಭಿಮಾನದಿಂದಲೇ ಈ ಗುಣಗಳ ಸಂಬಂಧ **ಯುಗಪತ್** ಒಂದೇ ಕಾಲದಲ್ಲಿ **ತೇಷಾಂ**

ಗುಣಗಳಿಗೆ **ಹ್ರಾಸಃ** ಕ್ಷಯವು **ಉನ್ನಾಹಃ ಚ** ವೃದ್ಧಿಯೂ **ನ ಏವ** ಆಗುವುದೇ ಇಲ್ಲ. ಕಾಲಕ್ರಮದಲ್ಲಿ ವೃದ್ಧಿಹ್ರಾಸಗಳು.

ವಿಶೇಷ ಃ- ಇಲ್ಲಿ ಪ್ರಶ್ನೆಯ ವಿವರಣೆ ಹೀಗಿದೆ. ಸುರಾದಿಗಳಲ್ಲಿರುವ ಸತ್ವಾದಿಗುಣಗಳನ್ನು ಅನುಸರಿಸಿ ಅದರದರ ಕಾರ್ಯಗಳನ್ನು ಮಾಡುವದಾದರೂ ಹೇಗೆ? ಎಲ್ಲರಲ್ಲಿಯೂ ಮೂರು ಗುಣಗಳೂ ಇವೆ. ಪ್ರಚುರತೆ ಅನುಸರಿಸಿ ಕಾರ್ಯವೆಂದೂ ಹೇಳಲಾಗದು. ಹಾಗೆ ಹೇಳಿದಲ್ಲಿ ತಮಸ್ಸಿನ ಕಾರ್ಯವು ದೇವತೆಗಳಲ್ಲಿ ಎಂದೂ ಉಂಟಾಗಲೇ ಬಾರದು. ಈ ಪ್ರಶ್ನೆಗೆ ಉತ್ತರವಾಗಿ ಸೃಷ್ಟಿಲಯ ಕಾಲಗಳಲ್ಲಿ ಪ್ರಚುರಗುಣಗಳಿಗೇನೇ ವೃದ್ಧಿಯಾದ್ದರಿಂದ ಅದಕ್ಕನುಸಾರವಾಗಿ ಶ್ರೀಹರಿಯ ಕಾರ್ಯವೆಂದು ವ್ಯವಸ್ಥೆಯೂ ಕೂಡುವದು. ಮಧ್ಯದಲ್ಲಿ ರಜಸ್ಸೇ ಮೊದಲಾದವುಗಳಿಗೂ ಸ್ವಲ್ಪವೃದ್ಧಿಯಿರುವದರಿಂದ ದೇವತೆಗಳು ಮೊದಲಾದವರಲ್ಲಿ ಅದರದರ ಕಾರ್ಯಗಳು ಯುಕ್ತವಾಗುವವು. ಒಂದೇ ಕಾಲದಲ್ಲಿ ಹ್ರಾಸವೃದ್ಧಿಗಳಿಲ್ಲದ್ದರಿಂದ ಅವ್ಯವಸ್ಥೆಯೇನೂ ಇಲ್ಲವೆಂದು ಭಾವ. ।।೭।।

**ಜಯಕಾಲೇ ತು ಸತ್ವಸ್ಯ ದೇವರ್ಷೀನ್ ರಜಸೋಽಸುರಾನ್ ।**
**ತಮಸೋ ಯಕ್ಷರಕ್ಷಾಂಸಿ ತತ್ಕಾಲಾನುಗುಣೋ ಭಜನ್ ।।೮।।**

**ಸತ್ವಸ್ಯ ಜಯಕಾಲೇ** ಸತ್ವಗುಣದ ಉನ್ನಾಹ ಕಾಲದಲ್ಲಿಯಾದರೂ **ದೇವರ್ಷೀನ್** ದೇವತೆಗಳನ್ನು ಋಷಿಗಳನ್ನು **ರಜಸಃ ಜಯಕಾಲೇ** ರಜೋಗುಣದ ಉನ್ನಾಹಕಾಲದಲ್ಲಿ **ಅಸುರಾನ್** ಅಸುರರನ್ನು, ಸುರರಲ್ಲದ ಮನುಷ್ಯರನ್ನು (ನಿತ್ಯಸಂಸಾರಿಗಳನ್ನು) **ತಮಸಃ ಜಯಕಾಲೇ** ತಮೋಗುಣದ ಉನ್ನಾಹಕಾಲದಲ್ಲಿ **ಯಕ್ಷರಕ್ಷಾಂಸಿ** ಯಕ್ಷರನ್ನು ರಾಕ್ಷಸರನ್ನು ತಮೋಯೋಗ್ಯರನ್ನು **ತತ್ಕಾಲಾನುಗುಣಃ** ಆ ಆ ಕಾಲಗುಣವನ್ನು ಅನುಸರಿಸಿ (ಸತ್ವಾದಿವಿಜಯಕಾಲವನ್ನು ಅನುಸರಿಸಿ) **ಭಜನ್** ದೇವ-ಋಷಿ ಮೊದಲಾದವರನ್ನು ಹೊಂದುವವನಾಗಿ **ಆಸ್ತೇ** ಇರುವನು. **ಆಭಾತಿ** ಪ್ರವೇಶಮಾಡಿ ಅಸುರಾದಿಗಳಿಗೆ ಬಾಧಕತ್ವವನ್ನು ಕೊಡುವನು. ಸತ್ವೋನ್ನಾಹಕಾಲದಲ್ಲಿ ಸಜ್ಜನರನ್ನು, ರಜೋಗುಣದ ಉನ್ನಾಹಕಾಲದಲ್ಲಿ ರಾಜಸರಿಗೆ, ತಮೋಗುಣದ ಉನ್ನಾಹಕಾಲದಲ್ಲಿ ತಾಮಸರಿಗೆ ಉನ್ನಾಹವನ್ನು ಕೊಡುವನು. ।।೮।।

ಈ ರೀತಿಯಾಗಿ ಭಗವಂತನು ದೇವಾದಿಗಳ ದೇಹದಲ್ಲಿ ಇದ್ದರೆ ಅವರಿಗೇಕೆ ದೇಹಾದಿಗಳಿಂದ ಭಿನ್ನನಾಗಿ ಕಾಣುವದಿಲ್ಲ ಎಂಬ ಶಂಕೆಗೆ ಉತ್ತರವಾಗಿ ಹೇಳಿದ 'ಅವ್ಯಕ್ತಃ' ಎಂಬುದನ್ನು ವಿವರಿಸುವರು-

**ಜ್ಯೋತಿರಾದಿರಿವಾಭಾತಿ ಸಂಘಾತಾನ್ನ ವಿವಿಚ್ಯತೇ ।**
**ಏಂದಂತ್ಯಾತ್ಮಾನಮಾತ್ಮಸ್ಥಂ ಮಥಿತ್ವಾ ಕವಯೋಽಂತತಃ ॥೯॥**

**ಜ್ಯೋತಿರಾದಿರಿವ** ಉತ್ತರಾಯಣಾದಿಕಾಲಗಳು ಕೆಲವು ಹಣ್ಣುಗಳಿಗೆ ವೃದ್ಧಿಯನ್ನು, ಕೆಲವಕ್ಕೆ ಹ್ರಾಸವನ್ನು ಮಾಡುವಂತೆ **ಆಭಾತಿ** ಕಾರ್ಯದಿಂದ ಮಾತ್ರ ಸಾಮಾನ್ಯರಿಗೆ ತಿಳಿದು ಬರುವನು ೨) ತುಪ್ಪವೇ ಮೊದಲಾದವು ಮೊಸರು ಮೊದಲಾದವುಗಳಲ್ಲಿ ಇದ್ದರೂ ತೋರದಿರುವಂತೆ ವ್ಯಕ್ತನಾಗಿ ತೋರುತ್ತಿಲ್ಲ. **ಸಂಘಾತಾತ್** ದೇಹೇಂದ್ರಿಯಾದಿ ಕಾರ್ಯಕಾರಣಸಮೂಹದಿಂದ **ನ ವಿವಿಚ್ಯತೇ** ಬೇರೆಯಾಗಿ ಕಾಣುವದಿಲ್ಲ. ತುಪ್ಪ ಮೊದಲಾದವು ಕಡೆಯುವದಕ್ಕೆ ಮುಂಚೆ ಹೇಗೆ ವ್ಯಕ್ತವಾಗಿ ಕಾಣುತ್ತಿಲ್ಲವೋ ಹಾಗೆ ವಿಮರ್ಶೆಗೆ ಮುಂಚೆ ಬೇರೆಯಾಗಿ ಶ್ರೀಹರಿ ಕಾಣುತ್ತಿಲ್ಲವೆಂದರ್ಥ. ಇಲ್ಲದಿರುವದರಿಂದಲೇ ಕಾಣುತ್ತಿಲ್ಲ ಎನ್ನಬಾರದೇಕೆ? ಮತ್ತು ಜ್ಯೋತಿರಾದಿದೃಷ್ಟಾಂತ ಸರಿಯಲ್ಲ ಅವು ಮಥನದಿಂದ ಕೊನೆಗೆ ಕಾಣುವವು ಇವನಾದರೂ ಯಾರಿಗೂ ಕಂಡಿಲ್ಲವೆಂದರೆ ? ಹಾಗೇನಿಲ್ಲ ಇವನು ಕಾಣುವನು ಎಂದು ಹೇಳುವರು. **ಕವಯಃ** ಬ್ರಹ್ಮಾದಿಜ್ಞಾನಿಗಳು **ಮಥಿತ್ವಾ** ಶಾಸ್ತ್ರದಿಂದ ವಿಚಾರಮಾಡಿ **ಅಂತತಃ** ನಿರ್ಣಯಮಾಡಿ **ಆತ್ಮಸ್ಥಂ** ದೇಹಾದಿಗಳಲ್ಲಿರುವ **ಆತ್ಮಾನಂ** ಶ್ರೀಹರಿಯನ್ನು **ಏಂದಂತಿ** ತಿಳಿಯವರು ಮತ್ತು **ಅಂತತಃ** ಚರಮದೇಹವು ನಾಶವಾದ ಮೇಲೆ **ಏಂದಂತಿ** ಹೊಂದುವರು ಎಂದರ್ಥ.

ವಿಶೇಷ :- ಇದರಿಂದ ಶ್ರೀಹರಿಯು ಅವ್ಯಕ್ತನಾಗಿ ದೇಹಾದಿಗಳಲ್ಲಿ ಇರುವನೆಂಬುದಕ್ಕೆ ಬ್ರಹ್ಮಾದಿಗಳ ಪ್ರತ್ಯಕ್ಷವೇ ಪ್ರಮಾಣವೆಂದು ಹೇಳಿದಂತಾಯಿತು. ಆಭಾತಿ ಎಂಬಲ್ಲಿ 'ಅಮಾನೋನಾ ಪ್ರತಿಷೇಧೇ' ಎಂಬಂತೆ ಅ ಎಂಬುದು ಪ್ರತಿಷೇಧಾರ್ಥಕವು.

ಈ ಶ್ಲೋಕ ಅರ್ಥವಾಗುವದಿಲ್ಲ. ವಿಪರೀತವಾಗಿ ವಿರುದ್ಧ ಅರ್ಥ ತೋರುವದು. ಕಾರಣ ವಿವಕ್ಷಿತ ಅರ್ಥವನ್ನು ಪ್ರಮಾಣದಿಂದ ತಿಳಿಸುವರು.

**... ತಾತ್ಪರ್ಯ ...**

**ದಧಿಸ್ಥಘೃತವತ್ ಕಾಷ್ಠವಹ್ನಿವಚ್ಚ ಜನಾರ್ದನಃ ।**
**ದೇಹೇಂದ್ರಿಯಾಸು ಜೀವೇಭ್ಯಃ ವಿವಿಚ್ಯ ಜ್ಞಾಯತೇ ನ ತು ॥ ಇತಿ ಚ ॥**

ಆದಿಪದದ ಅರ್ಥ ದಧಿಸ್ಥ ಎಂಬುದು. ವಹ್ನಿವತ್ ಎಂದದ್ದರಿಂದ ಜ್ಯೋತಿಃಶಬ್ದ ವಹ್ನಿಪರ ಎಂದು ತಿಳಿಯುವದು. ಸಂಭೂತಶಬ್ದಾರ್ಥವೇ 'ದೇಹೇಂದ್ರಿಯಾಸು ಜೀವೇಭ್ಯಃ' ಎಂಬುದು. 'ನ ವಿವಿಚ್ಯತೇ' ಎಂಬುದಕ್ಕೆ ಅರ್ಥ 'ವಿವಿಚ್ಯ ಜ್ಞಾಯತೇ ನ ತು' ಎಂಬುದು. ಕಡಿಯುವ ಮುಂಚೆ ಮೊಸರಿನಲ್ಲಿರುವ ತುಪ್ಪದಂತೆ

ಅರಣಿಯಲ್ಲಿರುವ ಬೆಂಕಿಯಂತೆ, ಶ್ರೀಹರಿಯು ದೇಹೇಂದ್ರಿಯಪ್ರಾಣಜೀವರಿಂದ ಪ್ರತ್ಯೇಕವಾಗಿ ವಿಚಾರಕ್ಕಿಂತ ಮುಂಚೆ ತಿಳಿಯುವದಿಲ್ಲವೆಂದು ಭಾವ. ॥೯॥

ಭಗವಂತನು ಸತ್ವಾದಿ ಉನ್ನಾಹವನ್ನು ಅಪೇಕ್ಷಿಸಿ ಪ್ರವೃತ್ತನಾಗುವನೆಂದರೆ ಸತ್ವಾದಿಗುಣಾಧೀನತ್ವ ಬರುವದಲ್ಲ ಎಂದರೆ ಹೇಳುವರು-

**ಯದಾ ಸಿಸೃಕ್ಷುಃ ಪುರ ಆತ್ಮನಃ ಪರೋ**
**ರಜಃ ಸೃಜತ್ಯೇಷ ಪೃಥಕ್ ಸ್ವಮಾಯಯಾ ।**
**ಸತ್ವಂ ವಿಚಿತ್ರಾಸು ರಿರಂಸುರೀಶ್ವರಃ**
**ಶಯಿಷ್ಯಮಾಣಸ್ತಮ ಈರಯತ್ಯಸೌ** ॥೧೦॥

**ಯದಾ** ಯಾವಾಗ **ಪರಃ** ಸರ್ವೋತ್ತಮನಾದ ಶ್ರೀಹರಿಯು **ಆತ್ಮನಃ** ತನ್ನ ವಾಸಕ್ಕಾಗಿ **ಪುರಃ** ಶರೀರಗಳನ್ನು, ಶರೀರಸ್ಥಾನಾಪನ್ನವಾದ ಮಹದಾದಿತತ್ತ್ವಗಳನ್ನು ತದಭಿಮಾನಿದೇವತೆಗಳ ಶರೀರವನ್ನು, ಬ್ರಹ್ಮಾಂಡವನ್ನು, ತದಂತರ್ಗತ ಶರೀರಸಮೂಹವನ್ನು **ಸಿಸೃಕ್ಷುಃ** ಸೃಷ್ಟಿಸಲು ಇಚ್ಛೆಯುಳ್ಳವನಾಗುವನೋ **ತದಾ** ಆಗ **ಏಷಃ** ಈ ಶ್ರೀಹರಿಯು **ಸ್ವಮಾಯಯಾ** ತನ್ನ ಇಚ್ಛೆಯಿಂದ **ಪೃಥಕ್** ಸಾಮ್ಯಾವಸ್ಥೆಯಿಂದ ಬೇರ್ಪಡಿಸಿ ಗುಣವೈಷಮ್ಯಾವಸ್ಥೆಯಲ್ಲಿ **ರಜಃ** ರಜೋಗುಣವನ್ನು ಸ್ವೀಕರಿಸಿ ಮಹತ್ತತ್ತ್ವ ಅಹಂಕಾರತತ್ವ ಪಂಚಭೂತಗಳನ್ನು ಸೃಷ್ಟಿಸಿ **ಪೃಥಕ್** ದೇವಾಸುರಾದಿ ಅವರವರ ಯೋಗ್ಯತಾನುಸಾರವಾಗಿ **ಪುರಃ** ಶರೀರಗಳನ್ನು **ಸೃಜತಿ** ಸೃಷ್ಟಿಸುವನು. **ಯದಾ ಚ** ಯಾವಾಗ **ಈಶ್ವರಃ** ಸಮರ್ಥನಾದ **ಏಷಃ** ಈ ಶ್ರೀಹರಿಯು **ವಿಚಿತ್ರಾಸು** ದೇವ, ನರ, ತಿರ್ಯಕ್, ಎಂದು ಬಗೆಬಗೆಯ ಆ ಶರೀರಗಳಲ್ಲಿ **ರಿರಂಸುಃ** ಜೀವನ ಹಾಗೆ ಅವುಗಳ ಒಳಗೆ ಇದ್ದು ಅವರವರ ಅದೃಷ್ಟಯೋಗ್ಯತೆಯ ಅನುಸರಿಸಿ ಸುಖಾದಿಗಳನ್ನು ಇತ್ತು ಅದಕ್ಕೆ ಸಾಕ್ಷಿಯಾಗಿ ಕ್ರೀಡಿಸಲು ಇಚ್ಛಿಸುವನೋ **ತದಾ** ಆಗ **ಸತ್ವಂ** ಸ್ಥಿತಿಗೆ ಕಾರಣವಾದ ಸತ್ವಗುಣವನ್ನು ಸ್ವೀಕರಿಸುವನು **ಯದಾ** ಯಾವಾಗ **ಶಯಿಷ್ಯಮಾಣಃ** ಯೋಗನಿದ್ರೆ ಮಾಡಲಿಚ್ಛಿಸುವನೋ(ಪ್ರಲಯಜಲದಲ್ಲಿ)ಅಥವಾ ತನ್ನಲ್ಲಿ ಲೋಕವನ್ನು ಸ್ಥಾಪಿಸಲಿಚ್ಛಿಸುವನೋ **ತದಾ** ಆಗ **ತಮಃ** ತಮೋಗುಣವನ್ನು **ಅಸೌ** ಶ್ರೀಹರಿಯು **ಈರಯತಿ** ಪ್ರೇರಿಸುವನು. ॥೧೦॥

ಆದರೂ 'ತತ್ಕಾಲಾನುಗುಣ' ಎಂದದ್ದರಿಂದ ಕಾಲಾಧೀನತೆ ಬಂದಿತಲ್ಲವೆಂದರೆ ಹೇಳುವರು-

**ಕಾಲಂ ಚರಂತಂ ಸೃಜತೀಶ ಆಶ್ರಯಃ**
**ಪ್ರಧಾನಪುಂಭ್ಯಾಂ ನರದೇವ ಸತ್ಯಕೃತ್ ।**

**ಸ ತತ್ರ ತತ್ರೋಭಯಸಿದ್ಧಿಮಾಪ್ನುಯಾತ್**
**ಲಿಂಗಾತ್ಮನೋ ಲಿಂಗಗುಣಾಶ್ಚ ಸಂತಿ** ॥೧೧॥

**ಹೇ ನರದೇವ** ಪರೀಕ್ಷಿದ್ರಾಜನೇ **ಸತ್ಯಕೃತ್** ಬ್ರಹ್ಮಮೀಮಾಂಸಾಶಾಸ್ತ್ರಕರ್ತೃವಾದ ಅಥವಾ ಸತ್ಯವಾದ ಜಗತ್ತನ್ನು ಸೃಷ್ಟಿಸಿದ **ಈಶಃ** ಸಮರ್ಥನಾದ ಸರ್ವನಿಯಾಮಕನಾದ **ಆಶ್ರಯಃ** ಎಲ್ಲಕ್ಕೂ ಆಶ್ರಯನಾದ ಶ್ರೀಹರಿಯು **ಪ್ರಧಾನಪುಂಭ್ಯಾಂ ಸಹ** ಪ್ರಕೃತಿಪುರುಷರಿಂದ ಸಹಿತನಾದ **ಚರಂತಂ** ಭೂತ, ಭವಿಷ್ಯದ್, ವರ್ತಮಾನವೆಂಬ ಪ್ರಭೇದದಿಂದಿರುವ **ಕಾಲಂ** ಖಂಡಕಾಲವನ್ನು **ಸೃಜತಿ** ಸೃಷ್ಟಿಸುವನು. ಹೀಗೆ ಎಲ್ಲವನ್ನು ಸೃಷ್ಟಿಮಾಡುವನೆಂದು ತಿಳಿಸಿ ಈಗ ತಾನು ಸೃಷ್ಟಿಸಿದ ಎಲ್ಲ ಪದಾರ್ಥಗಳಲ್ಲಿ ಶ್ರೀಹರಿಯು ಇರುವ ರೀತಿಯನ್ನು ತಿಳಿಸುವರು **ಸಃ** ಎಲ್ಲವನ್ನು ಸೃಷ್ಟಿಸಿದ ಶ್ರೀಹರಿಯು **ತತ್ರ ತತ್ರ** ಆ ಆ ವಸ್ತುಗಳಲ್ಲಿ (ದೇಹಗಳಲ್ಲಿ )ಇದ್ದು ಅವುಗಳಲ್ಲಿರುವ **ಉಭಯಸಿದ್ಧಿಂ** ದೊಡ್ಡ ವಸ್ತುಗಳಲ್ಲಿ ದೊಡ್ಡ ಪರಿಮಾಣ, ಹೆಚ್ಚು ಸಾಮರ್ಥ್ಯಪ್ರಕಟಣೆ ಸಣ್ಣವಸ್ತುಗಳಲ್ಲಿ ಸಣ್ಣಪರಿಮಾಣ, ಸ್ವಲ್ಪಸಾಮರ್ಥ್ಯ ಪ್ರಕಟಣೆ ಎಂಬ ಎರಡು ತರಹದ ಸಿದ್ಧಿಯನ್ನು **ಆಪ್ನುಯಾತ್** ಹೊಂದುವನು, ಹೊಂದಿಸುವನು 'ಅಣೋರಣೀಯಾನ್ ಮಹತೋ ಮಹೀಯಾನ್'ಎಂದು ಶ್ರುತಿಯಿದೆ. ಈ ವಿಷಯದಲ್ಲಿ ಉದಾಹರಣೆ ಕೊಡುತ್ತಾರೆ. ಚ ಶಬ್ದ ಇವ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. (ಸಂತಿ ಚ ಎಂದು ಅನ್ವಯ) **ಲಿಂಗಾತ್ಮನಃ** ಶರೀರದಂತಿರುವ ಕಟ್ಟಿಗೆಯನ್ನು ಹೊಂದಿರುವ ಅಗ್ನಿಗೆ **ಲಿಂಗಗುಣಾಃ** ಕಟ್ಟಿಗೆಯ ಗುಣಗಳಾದ ಮಹತ್ವ ಅಣುತ್ವಗಳು **ಸಂತಿ ಚ** ಇರುವಂತೆ ದೊಡ್ಡಕಟ್ಟಿಗೆಯಲ್ಲಿ ದೊಡ್ಡದಾಗಿ ಹೆಚ್ಚು ಸಾಮರ್ಥ್ಯವನ್ನು, ಸಣ್ಣಕಟ್ಟಿಗೆಯಲ್ಲಿ ಸಣ್ಣದಾಗಿ ಸ್ವಲ್ಪಸಾಮರ್ಥ್ಯವನ್ನು, ಬೆಂಕಿಯು ಹೊಂದಿರುವಂತೆ ಶ್ರೀಹರಿಯು ತಾನಿರುವ ವಸ್ತುವಿಗನುಗುಣವಾಗಿ ತನ್ನ ಸಾಮರ್ಥ್ಯ ಪ್ರಕಟಿಸುವನೆಂದರ್ಥ.

ವ್ಯಾಖ್ಯಾನವಿಶೇಷಗಳು :- ೨) ಸೃಷ್ಟಿಯಲ್ಲಿ ಪ್ರವೃತ್ತನಾಗುವ ಶ್ರೀಹರಿಯು ನಿರಪೇಕ್ಷ(ಪೂರ್ಣ) ನಾದ್ದರಿಂದಲೂ ಯಾವ ಪ್ರಯೋಜನಾಪೇಕ್ಷೆಯೂ ಅವನಿಗಿಲ್ಲ. ಸ್ವತಂತ್ರನಾದ್ದರಿಂದ ಕಾರಣವನ್ನು ಅಪೇಕ್ಷಿಸುವ ಪ್ರಸಂಗವೂ ಅವನಿಗಿಲ್ಲ.

ಇಲ್ಲಿ ಒಂದು ಶಂಕೆ. ಮಣ್ಣು ಉಂಡೆಗಳು ದಂಡ ಮೊದಲಾದ ಸಾಮಗ್ರಿ ಇಲ್ಲದೇ ಘಟವೆಂಬ ಕಾರ್ಯವನ್ನು ಮಾಡುವ ಶಕ್ತಿಯನ್ನು ಕುಲಾಲನು ಹೇಗೆ ಹೊಂದಿಲ್ಲವೋ ಹಾಗೆ ಶ್ರೀಹರಿಯು ಸೃಷ್ಟಿಗೆ ಬೇಕಾದ ಸಾಮಗ್ರಿಯೇ ಇಲ್ಲವಾಗಿ ಸೃಷ್ಟಿಸುವಂತಿಲ್ಲ ಎಂದು ಶಂಕಿಸಿದರೆ ಹೇಳುತ್ತಾರೆ 'ಲಿಂಗಾತ್ಮನಃ' ಎಂದು. ಲಿಂಗಾತ್ಮನಃ ಎಂಬ ಶಬ್ದವನ್ನು ಆವೃತ್ತಿಮಾಡಿಕೊಳ್ಳಬೇಕು. **ಲಿಂಗಾತ್ಮನಃ** ಕಾರಣಗಳಾದ ಪ್ರಧಾನ ಮೊದಲಾದವುಗಳ **ಲಿಂಗಗುಣಾಃ** ಕಾರ್ಯವನ್ನು ಹುಟ್ಟಿಸುವ ಶಕ್ತಿ ಮುಂತಾದ

ಗುಣಗಳು **ಸಂತಿ** ಏನು ಇವೆಯೋ ಆ ಗುಣಗಳು **ಲಿಂಗಾತ್ಮನಃ ಚ** ಶರೀರ ಸ್ವಾಮಿಯಾದ ಶ್ರೀಹರಿಗೂ ಅವು ಅಧೀನಗಳಾದ್ದರಿಂದ ಇವೆ. ತನ್ನ ಅಧೀನಗಳಾದ ಅವುಗಳ ಶಕ್ತಿಗಳನ್ನು ಪ್ರೇರಿಸಿ ಸೃಷ್ಟಿಮಾಡುವನೆಂದು ಅಭಿಪ್ರಾಯ.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ ।**
**ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ।। ಎಂದು ಶ್ರುತಿಯಿದೆ.**

೩) ಅಥವಾ **ಲಿಂಗಗುಣಾಃ** ಪ್ರಧಾನಾದಿಗಳ ಗುಣಗಳು, ಕಾರ್ಯವನ್ನು ಹುಟ್ಟಿಸುವ ಶಕ್ತಿ ಮೊದಲಾದವು **ಲಿಂಗಾತ್ಮನಃ** ಪೂರ್ಣಗಳಾಗಿ **ಸಂತಿ** ಇವೆ. ಅಥವಾ ಜೇಡರಹುಳು ನೇಯುವ ಸಾಮಗ್ರಿ ಇಲ್ಲದೇ ತನ್ನ ಸ್ವಾಭಾವಿಕಸಾಮರ್ಥ್ಯದಿಂದ ಬೇಲಿಯನ್ನು ಹೆಣೆಯುವಂತೆ ಸ್ವರೂಪಸಾಮರ್ಥ್ಯದಿಂದ ಶ್ರೀಹರಿಯು ಸೃಷ್ಟಿಸುವನೆಂಬರ್ಥವನ್ನು **ಚ**ಕಾರವು ಹೇಳುವದು.

೪) ಪ್ರಧಾನಸೃಷ್ಟಿ(ಮುಖ್ಯ) ಶ್ರೀಹರಿಯಿಂದಾಗಲಿ ಅವಾಂತರ ಸೃಷ್ಟಿಯು ಕಾರಣಗಳಿಂದಾಗಲಿ ಕುಂಬಾರನು ಮಡಿಕೆ(ಗಡಿಗೆ)ಮೊದಲಾದವನ್ನು ಸೃಷ್ಟಿಸುವದು ಕಂಡಿದ್ದೇವಲ್ಲವೆ ಎಂದರೆ ಉತ್ತರ ಕೊಡುತ್ತಾರೆ. **ಸಃ** ಶ್ರೀಹರಿಯು **ತತ್ರ ತತ್ರ** ಕಾರ್ಯಕಾರಣಗಳಲ್ಲಿ ಪ್ರತಿಯೊಂದರಲ್ಲಿಯೂ ಇದ್ದುಕೊಂಡು, **ಉಭಯಸಿದ್ಧಿಂ** ಕಾರಣಕ್ಕೆ ಹುಟ್ಟಿಸುವ ಶಕ್ತಿಯನ್ನು ಕಾರ್ಯಕ್ಕೆ ಕಾರ್ಯವಾಗುವ ಶಕ್ತಿಯನ್ನು **ಆಪ್ನೋತಿ** ಹೊಂದಿಸುವನು(ಅಂತರ್ಣೀತಣ್ಯಂತ). ಏಕೆಂದರೆ ಈ ಎರಡೂ ಶಕ್ತಿಗಳು ಶ್ರೀಹರಿಯ ಅಧೀನವೆಂದು ಹೇಳುತ್ತಾರೆ. **ಲಿಂಗಾತ್ಮನಃ** ಯಾವ ಕಾರಣಗಳಾದ ಮಣ್ಣು ಮೊದಲಾದವುಗಳ **ಲಿಂಗಗುಣಾಃ** ಕಾರ್ಯವನ್ನು ಉಂಟುಮಾಡುವ ಶಕ್ತಿಗಳು **ಸಂತಿ** ಇವೆಯೋ ಅವು ಈ ಹರಿಯಿಂದ ನಿಯತವಾದವುಗಳು ಎಂದು ಸೇರಿಸಿಕೊಳ್ಳಬೇಕು.

ಹಾಗೆಯೇ **ಲಿಂಗಾತ್ಮನಃ** ಕಾರ್ಯಗಳಾದ ಗಡಿಗೆ ಮೊದಲಾದವುಗಳ **ಲಿಂಗಗುಣಾಃ** ಪೃಥಬುಧ್ನೋದರ ಆಕಾರ(ದೊಡ್ಡ ಗುಂಡು ಹೊಟ್ಟೆ ಸಣ್ಣ ಕುತ್ತಿಗೆ ಎಂಬ ಆಕಾರಗಳೆಂಬ ಗುಣಗಳು ಏನಿವೆಯೋ ಅವುಗಳೂ ಶ್ರೀಹರಿಯ ಅಧೀನವೇ) 'ತತ್ರ ತತ್ರ ಸ್ಥಿತೋ ವಿಷ್ಣುಃ ತತ್ತಚ್ಛಕ್ತಿಪ್ರಬೋಧಕಃ'ಎಂಬುದು ಈ ವಿಷಯದಲ್ಲಿ ಪ್ರಮಾಣವಾಕ್ಯವಾಗಿದೆ. ಹೀಗೆ ಹೇಳಿದ್ದರಿಂದ 'ಬಾಧ್ಯಬಾಧಕತಾಂ ಗತಃ' ಎಂದು ಹೇಳಿದ್ದನ್ನು ಸ್ಪಷ್ಟಪಡಿಸಿರುವರು. **ತತ್ರ ತತ್ರ** ದೇವಾಸುರರಲ್ಲಿ ಇದ್ದುಕೊಂಡು **ಉಭಯಸಿದ್ಧಿಂ** ಜಯಪರಾಜಯಗಳೆಂಬ ಎರಡು ಫಲಹೊಂದಿಸುವನು. **ಲಿಂಗಾತ್ಮನಃ** ತಲೆಗೆ ಲೋಹಮಯ ಟೋಪಿ, ಕವಚಾದಿಗಳನ್ನು ಧರಿಸಿದ ಯೋಧನ **ಲಿಂಗಗುಣಾಃ**

ಶೌರ್ಯಮೊದಲಾದಗುಣಗಳು ಜಯಪರಾಜಯಗಳು ಏನುಂಟೋ ಅವೂ ಶ್ರೀಹರಿಯ ಅಧೀನಗಳು.

ಇಲ್ಲಿ ಆಚಾರ್ಯರು ತಾತ್ಪರ್ಯದಲ್ಲಿ 'ಪ್ರಧಾನಪುಂಭ್ಯಾಂ ಸಹ' ಎಂದು ಹೇಳಿ ಇದು ಸಹಯೋಗದಲ್ಲಿ ಹೇಳಿದ ತೃತೀಯಾವಿಭಕ್ತಿಯೇ ಹೊರತು ಪಂಚಮೀಯಲ್ಲವೆಂದು ತಿಳಿಸಿದ್ದಾರೆ. ಇದರಿಂದ ಪ್ರಧಾನ, ಪುರುಷರು ಇತ್ಯಾದಿ ಎಲ್ಲವೂ ಶ್ರೀಹರಿಯ ಅಧೀನವೆಂದು ತಿಳಿಸಿದ್ದಾರೆ. ಹಾಗಲ್ಲದೆ ಪಂಚಮೀ ವಿಭಕ್ತಿಯೆಂದು ಒಪ್ಪಿ ಪ್ರಧಾನಪುಂಭ್ಯಾಂ ಅವೆರಡು ಕಾರಣಗಳಿಂದ ಕಾಲವನ್ನು ಸೃಷ್ಟಿಸುತ್ತಾನೆ ಎಂದು ಅರ್ಥ ಅಂಗೀಕರಿಸಿದರೆ ಕಾಲವನ್ನು ಮಾತ್ರ ಸೃಷ್ಟಿಸಿದನು ಪ್ರಧಾನಪುರುಷರನ್ನು ಸೃಷ್ಟಿಸಿಲ್ಲ ಎಂದಾಗಿ ಅವುಗಳು ಶ್ರೀಹರಿ ಅಧೀನವಲ್ಲ ಶ್ರೀಹರಿಯೇ ಅವುಗಳ ಅಧೀನನೆಂಬ ಅನ್ಯಥಾ ಪ್ರತೀತಿಯನ್ನು ನಿರಾಕರಿಸಿರುವರು.

**ಮಂದನಂದಿನಿ** :- ಕಾಲದಿಂದ ಜಗತ್ತು ಹುಟ್ಟುವದು, ಶ್ರೀಹರಿ ಬೇಡವೆಂದು ಕೆಲವರು, ಪ್ರಧಾನಪುರುಷರಿಂದಲೇ ಜಗತ್ತಿನ ಉತ್ಪತ್ತಿ ಎಂದು ಸಾಂಖ್ಯರು ಈ ಮತಗಳನ್ನು ಈ ಶ್ಲೋಕದಲ್ಲಿ ನಿರಾಕರಿಸಿದ್ದಾರೆ. ಕಾಲಪದದಿಂದ ಖಂಡಕಾಲವನ್ನು ತೆಗೆದುಕೊಳ್ಳಬೇಕು. ಕ್ಷಣಲವಾದಿಭೇಧಗಳು ಔಪಾಧಿಕವೆಂಬುದನ್ನು ಸಮಯಪಾದದಲ್ಲಿ ನಿರಾಕರಿಸಿ ಸ್ವಾಭಾವಿಕವೆಂದು ತಿಳಿಸಿರುವರು. ಕಾಲವನ್ನು ಶ್ರೀಹರಿಯೇ ಸೃಷ್ಟಿಸುವನು ಪ್ರಧಾನಪುರುಷರು ಸರ್ಜಕರಲ್ಲ ಅವುಗಳನ್ನೂ ಶ್ರೀಹರಿಯೇ ಸೃಷ್ಟಿಸುವನು. 'ಪ್ರಕೃತಿಂ ಪುರುಷಂ ಚೈವ ಪ್ರವಿಶ್ಯ ಪುರುಷೋತ್ತಮಃ। ಕ್ಷೋಭಯಾಮಾಸ ಭಗವಾನ್...'। 'ಕಲಾ ಮುಹೂರ್ತಾ ಜಜ್ಞಿರೇ' ಇತ್ಯಾದಿ ವಾಕ್ಯಗಳು ಈ ಅರ್ಥಗಳನ್ನು ತಿಳಿಸುವವು. 'ಆಶ್ರಯಃ' ಎಂದು ಹೇಳಿದ್ದರಿಂದ 'ಇದಂ ಇದಾನೀಂ' ಎಂಬ ಪ್ರತೀತಿಯಿಂದ ತಿಳಿದು ಬರುವ ಕಾಲಾಶ್ರಯತ್ವವನ್ನು ಕೊಡುವವನೂ ಶ್ರೀಹರಿಯೇ ಎಂದು ತಿಳಿಸಿರುವರು. ಜಗತ್ತು ಬ್ರಹ್ಮನಲ್ಲಿ ಆರೋಪಿತ ಆದ್ದರಿಂದ ಈ ಮಿಥ್ಯಾಭೂತಜಗತ್ತಿಗೆ ಮಾಯೆಯು ಅಪೇಕ್ಷಿತವೇ ಹೊರತು ಸತ್ವಮೊದಲಾದ ಗುಣತ್ರಯಗಳಲ್ಲವೆಂದು ಮಾಯಾವಾದಿಗಳು ಹೇಳುವರು. ಇದನ್ನು ಖಂಡಿಸುವದಕ್ಕಾಗಿ 'ಸತ್ಯಕೃತ್' ಎಂದಿರುವರು. 'ವಿಶ್ವಂ ಸತ್ಯಂ' ಎಂಬ ಶ್ರುತಿ ಜಗತ್ತಿನ ಸತ್ಯತೆಯನ್ನು ಹೇಳುತ್ತದೆ. 'ಈಶಃ' ಎಂಬುದರಿಂದ ಇಂತಹ ಜಗತ್ತನ್ನು ಸೃಷ್ಟಿಸುವ ಸಾಮರ್ಥ್ಯ ಶ್ರೀಹರಿಗೆ ಇದೆ ಎಂದು ತಿಳಿಸಿರುವರು. ಸಮರ್ಥನಲ್ಲದವನು ಸುಳ್ಳು ಜಗತ್ತನ್ನು ತೋರಿಸುವನು. ಸಮರ್ಥನಾದವನು ಸತ್ಯವಾದದ್ದನ್ನೇ ಸೃಷ್ಟಿಸುವನು.

ಈ ಬಗೆಯ ಜಗತ್ತಿನ ಸೃಷ್ಟಿಯಿಂದ, ಅದರಲ್ಲಿ ಪ್ರವೇಶದಿಂದ ಪೂರ್ಣನಾದ ಶ್ರೀಹರಿಗೆ ಪ್ರಯೋಜನವೇನೂ ಇಲ್ಲವಲ್ಲ ಎಂದರೆ ಯೋಗ್ಯಾಯೋಗ್ಯಜನರನ್ನು

ಶುಭಾಶುಭಫಲಗಳನ್ನು ಹೊಂದಿಸುವನೆಂದು ತಿಳಿಸಿ ಸೃಷ್ಟ್ಯಾದಿವ್ಯಾಪಾರ ಶ್ರೀಹರಿಗೆ ಕ್ರೀಡೆಯೆಂದು ಜೀವರು ತಮ್ಮ ತಮ್ಮ ಶುಭಾಶುಭ ಮೋಕ್ಷಗತಿಯನ್ನು ಪಡೆಯುವದು ಪ್ರಯೋಜನವೆಂದು ಸೃಷ್ಟಿಸಿರುವನು. ಆದರೂ ಸೃಷ್ಟಿಗಾಗಿ ಉಪಾದಾನಕಾರಣಾದಿ ಅಪೇಕ್ಷೆಯಿದ್ದಲ್ಲಿ ಪರಾಪೇಕ್ಷೆಯಿಂದ ಅಸ್ವತಂತ್ರತೆಯು, ಆ ಶಕ್ತಿ ಇಲ್ಲದಿದ್ದರೆ ಅಪೂರ್ಣತೆಯೂ ಶ್ರೀಹರಿಗೆ ಬರುವದಲ್ಲ ಎಂದರೆ ಜಗತ್ಕಾರಣಳಾದ ಕಾಲ, ಪ್ರಕೃತಿ, ಪುರುಷರಿಗೂ ಶ್ರೀಹರಿಯೇ ಸ್ವಾಮಿಯಾದ್ದರಿಂದ ಅವುಗಳ ಕಾರ್ಯಜನನಶಕ್ತಿಯೂ, ಶ್ರೀಹರಿಯ ಅಧೀನವಾದ್ದರಿಂದ ಅವೂ ಅವನದೇ ಎಂದಿರುವರು.

ಸಾಧನಾನಾಂ ಸಾಧನತ್ವಂ ಯದಾತ್ಮಾಧೀನ ಇಷ್ಯತೇ ।
**ತದಾ ಸಾಧನಸಂಪತ್ತಿರೈಶ್ವರ್ಯದ್ಯೋತಿಕಾ ಭವೇತ್ ॥**

ಆದ್ದರಿಂದ ಸಾಧನಾಪೇಕ್ಷೆಯಿಂದ ಸ್ವಾತಂತ್ರ್ಯಕ್ಕೆ ಹಾನಿಯಿಲ್ಲ. ಅಪೂರ್ಣತೆಯೂ ಇಲ್ಲ. ಈ ಶಕ್ತಿಗಳೆಲ್ಲವೂ ಪರಮಾತ್ಮನ ಸ್ವರೂಪವಾಗಿವೆ. ತನ್ನ ಸ್ವರೂಪಶಕ್ತಿಗಳಿಂದ ಶ್ರೀಹರಿಯು ಕಾರ್ಯಕಾರಣಶಕ್ತಿಗಳನ್ನು ಪ್ರೇರಿಸುವನು. ಹೀಗೆಯೇ ಜಡಪದಾರ್ಥಗಳ, ಚೇತನಗಳ ಶಕ್ತಿಗಳೆಲ್ಲವೂ ಶ್ರೀಹರಿಯಲ್ಲಿ ಇದ್ದೇ ಇವೆಯೆಂದು ಅವನಿಗೆ ಅಪೂರ್ಣತೆ ಇಲ್ಲ. ಹಾಗಾದರೆ ಸರ್ವಸಮರ್ಥನಾದವನು ಮೊಲದ ಕೊಂಬೇಕೆ ಸೃಷ್ಟಿಸಬಾರದು ಎನ್ನಬಹುದು. ಹೌದು, ಅವನು ಸೃಷ್ಟಿಸಬಲ್ಲ. ಆದರೆ ಸತ್ಯಸಂಕಲ್ಪನಾದ್ದರಿಂದ ಹಾಗೆ ಮಾಡುತ್ತಿಲ್ಲವೆಂದಿಷ್ಟೇ ಉತ್ತರ. ತನ್ನ ನಿಯಮಗಳಂತೆ ನಡೆಯುವ ಸ್ವತಂತ್ರನಾದ ಅವನನ್ನು ನಿಯೋಜಿಸುವವರಾರು ? 'ಲಿಂಗಂ ಶರೀರೇ ಚಿಹ್ನೇ ಚ ಸಾಧನೇ ಶೇಷಭಸ್ಮನಿ' ಎಂದು ಅಭಿಧಾನವಿದೆ. ಇದನ್ನು ಪ್ರಾಚೀನರು ಬಹಳ ರೀತಿ ಯೋಜಿಸಿರುವರು. ಆದರೂ ಮಂದರ ಆನಂದಕ್ಕೆ ಈ ರೀತಿ ಯೋಜಿಸಿದೆ ಎನ್ನುತ್ತಾರೆ ವ್ಯಾಖ್ಯಾನಕಾರರು.

**ದುರ್ಘಟಭಾವದೀಪ :- ಸಃ ಭಗವಾನ್** ಆ ಶ್ರೀಹರಿಯು **ತತ್ರ, ತತ್ರ** ಇಂದ್ರವೃತ್ರರಲ್ಲಿದ್ದು ಅಂದರೆ ಅವರನ್ನು ನಿಮಿತ್ತಮಾಡಿ, ಅವರಲ್ಲಿರುವ ಸತ್ವರಜಸ್ತಮೋಗುಣಗಳನ್ನು ನಿಮಿತ್ತಮಾಡಿ ಬಾಧ್ಯಬಾಧಕತೆಗಳೆಂಬ ಎರಡನ್ನು ಉಂಟುಮಾಡುವನು. ಅಂದರೆ ಭಗವಂತನು ಇಂದ್ರಾದಿಗಳಲ್ಲಿರುವ ಸತ್ವಗುಣವನ್ನು ನಿಮಿತ್ತಮಾಡಿ ವೃತ್ರಾದಿಗಳನ್ನು ಇಂದ್ರನಿಂದ ಬಾಧ್ಯರನ್ನಾಗಿ ಮಾಡುವನು. ಈ ರೀತಿ ಗುಣಾನುಸಾರಿಪ್ರವೃತ್ತಿಯುಳ್ಳವನಾದ್ದರಿಂದ ಭಗವಂತ ವಿಷಮನಲ್ಲ. ಇಂದ್ರಾದಿಗಳಲ್ಲಿ ಸತ್ವಾದಿಗಳು ಹೇಗೆ ಬಂದವು ಎಂದರೆ ಹೇಳುವರು **ಲಿಂಗಾತ್ಮನಃ** ಲಿಂಗಶರೀರವಿರುವ ಇಂದ್ರವೃತ್ರಾದಿಗಳಿಗೆ **ಲಿಂಗಗುಣಾಃ** ಲಿಂಗಶರೀರದ ಗುಣಗಳಾದ ಸತ್ವಾದಿಗಳು **ಸಂತಿ ಚ** ಇದ್ದೇ ಇವೆ. ಲಿಂಗಶರೀರಸಂಬಂಧದಿಂದ ಇಂದ್ರವೃತ್ರಾದಿಗಳಿಗೆ ಸತ್ವರಜಸ್ತಮೋ ಗುಣಗಳು ಬರುವವು ಎಂದು ಭಾವ. ।।೧೧।।

ಶ್ರೀಹರಿಯು ಬಾಧ್ಯತ್ವಾದಿಪ್ರದನೆಂದರೆ ವೈಷಮ್ಯವೇ ಪ್ರಾಪ್ತವಾಯಿತು '**ಸಮಃ ಪ್ರಿಯಃ**' ಎಂಬುದಕ್ಕೆ ಪರಿಹಾರವಿಲ್ಲವೆಂದರೆ '**ಬಾಧ್ಯಬಾಧಕತಾಂ ಗತಃ**' ಎಂಬುದನ್ನು ವಿವರಿಸುವರು-

**ಯ ಏಷ ರಾಜನ್ನಪಿ ಕಾಲ ಈಶಿತಾ**
**ಸತ್ವಂ ಸುರಾನೀಕಮಿವೈಧಯತ್ಯಜಃ ।**
**ತತ್ಪ್ರತ್ಯನೀಕಾನಸುರಾನ್ ಸುರಪ್ರಿಯೋ**
**ರಜಸ್ತಮಸ್ಕಾನ್ ಪ್ರಮಿಣೋತ್ಯುರುಶ್ರವಾಃ ॥೧೨॥**

**ರಾಜನ್** ಪರೀಕ್ಷಿತನೇ **ಕಾಲೇ ಅಪಿ** ಕಾಲವಿಷಯದಲ್ಲಿಯೂ **ಈಶಿತಾ** ನಿಯಾಮಕನಾದ **ಅಜಃ** ಜನನರಹಿತನಾದ **ಸುರಪ್ರಿಯಃ** ಸ್ವಾಭಾವಿಕವಾಗಿ ದೇವತೆಗಳಿಗೆ ಪ್ರಿಯನಾದ, ಅಸುರರಿಗೆ ಅಪ್ರಿಯನಾದ, ಮನುಷ್ಯರಿಗೆ ಪ್ರಿಯಾಪ್ರಿಯನಾದ **ಉರುಶ್ರವಾಃ** ಬಹುಕೀರ್ತಿಶಾಲಿಯಾದ ೨) ನಿಯಮವನ್ನು ಪ್ರತಿಪಾದಿಸುವ ಶಾಸ್ತ್ರಗಳಲ್ಲಿ ಬಹುವಾಗಿ ಶ್ರುತನಾದ ೩) ಸುರಾದಿಗಳ ಗುಣಾದಿಗಳನ್ನು ವೃದ್ಧಿಗೊಳಿಸುವನೆಂದು ಬಹುವಾಗಿ ಶ್ರುತನಾದ ೪) ಅವರವರ ಯೋಗ್ಯತೆಯನ್ನು ನಿಯತವಾಗಿ ನಿಯಮನ ಮಾಡಿಕೊಂಡೇ ಬರುವವನಾದ್ದರಿಂದ ಆ ಬಗೆಯ ವೈಷಮ್ಯ ಸಹ್ಯವೆಂದೇ ಶಾಸ್ತ್ರಗಳಲ್ಲಿ ಬಹುವಾಗಿ ಶ್ರುತನಾದ ೫) ಅವರವರ ಯೋಗ್ಯತೆಗೆ ಅನುಸಾರವಾಗಿ ಮಾಡಿದ ಶುಭಾಶುಭಕರ್ಮಗಳಿಗೆ ಅನುಸಾರವಾಗಿ ದೇವದೈತ್ಯರಿಗೆ ಫಲಕೊಡುವನೆಂಬ ವೈಷಮ್ಯ ಶ್ರೀಹರಿಯಲ್ಲಿ ಅನುಮತವೇ ಎಂದು ಶಾಸ್ತ್ರಗಳಲ್ಲಿ ಬಹುವಾಗಿ ಶ್ರುತನಾದ **ಯಃ ಏಷ** ಯಾವ ಈ ವಿಷ್ಣುವು **ಸುರಾನೀಕಂ ಇವ** ದೇವತೆಗಳ ಸಮೂಹರೂಪದಲ್ಲಿರುವ ಅಥವಾ ದೇವತೆಗಳಿಗೆ ಬಲಪ್ರದ-ನಾದುದರಿಂದ ಅವರ ಸೈನ್ಯದಂತಿರುವ **ಸತ್ವಂ** ಸತ್ವಗುಣವನ್ನು **ಸಮೇಧಯತಿ** ಅಭಿವೃದ್ಧಿಗೊಳಿಸುವನು. (ಸತ್ವವೇ ದೇವತೆಗಳ ದೇಹಾದಿಗಳಿಗೆ ಕಾರಣವಾದ್ದರಿಂದ ಸತ್ವಗುಣಪ್ರಧಾನರಾದ ದೇವತೆಗಳನ್ನು ಅಭಿವೃದ್ಧಿಗೊಳಿಸುವನು) **ರಜಸ್ತಮಸ್ಕಾನ್** ರಜೋಗುಣ ತಮೋಗುಣ ಸ್ವಭಾವದವರಾದ **ತತ್ಪ್ರತ್ಯನೀಕಾನ್** ದೇವತೆಗಳ ಶತ್ರುಗಳಾದ **ಅಸುರಾನ್** ತಮೋಗುಣಸ್ವಭಾವದ ದೈತ್ಯರನ್ನು **ಪ್ರಮಿಣೋತಿ** ಸಂಹರಿಸುವನು.

ವಿಶೇಷ ಃ- ರಜೋಗುಣಸ್ವಭಾವದ ಸುರಭಿನ್ನರಾದ ಮನುಷ್ಯರಿಗೆ ದುಃಖಾದಿಗಳನ್ನು ಕೊಟ್ಟು ಹಿಂಸಿಸುವನು. 'ಮೀಞ್ ಹಿಂಸಾಯಾಂ' ಎಂಬ ಧಾತುವಿನಿಂದ ಈ ಅರ್ಥ ಬರುವದು. 'ಸುರಪ್ರಿಯಃ' ಎಂದು ಹೇಳಿದ್ದರಿಂದ ಅಸುರರಿಗೆ ಅಪ್ರಿಯನು ಮನುಷ್ಯರಿಗೆ ಪ್ರಿಯಾಪ್ರಿಯನೂ ಆಗಿರುವದು ಶ್ರೀಹರಿಯ ಸ್ವಭಾವವೆಂದು ಸೂಚಿಸಿರುವರು.

ಈ ಶ್ಲೋಕದಲ್ಲಿ ಕಾಲವೆಂಬುದು ಪ್ರಥಮಾಂತವಾದರೆ ಪ್ರಕೃತಸಂಗತಿ ಇಲ್ಲವೆಂದಾಲೋಚಿಸಿ ಆಚಾರ್ಯರು ಸಪ್ತಮ್ಯಂತವಾಗಿ ಭೇದವನ್ನು ತಿಳಿಸುವರು-

**.. ತಾತ್ಪರ್ಯ..**

**'ಕಾಲೇ ಕಾಲವಿಷಯೇ ಅಪಿ ಈಶಿತಾ'**

ಈ ತಾತ್ಪರ್ಯವಾಕ್ಯದಲ್ಲಿ ಹೇಳಲಾದ ಸಪ್ತಮಿಯು ಅಧಿಕರಣಾರ್ಥಕವಾದದ್ದು ಎಂದು ಹೇಳಿದರೆ ಮತ್ತೆ ಅಸಂಗತಿ ಬರುತ್ತದೆ ಎಂದು ತಿಳಿದು ವ್ಯಾಖ್ಯಾನಿಸುವರು. 'ಕಾಲವಿಷಯೇ ಅಪಿ' ಎಂದು. ಇದರಿಂದ ಕಾಲೇ ಎಂಬುದು ವಿಷಯಸಪ್ತಮಿ ಅದಕ್ಕೆ ಅಪಿಪದದಿಂದ ಸಂಬಂಧ ಎಂದು ಹೇಳಿದಂತಾಯಿತು. ಇದರಿಂದ ಸರ್ವಪ್ರವರ್ತಕನಾದ ಶ್ರೀಹರಿಯು ಕಾಲವಿಷಯದಲ್ಲಿಯೂ ನಿಯಾಮಕನೆಂದು ಹೇಳಿದ ಮೇಲೆ ಇತರ ವಿಷಯದಲ್ಲಿ ನಿಯಾಮಕನೆಂದು ಬೇರೆ ಹೇಳಬೇಕಿಲ್ಲ. ಅದು ಕೈಮುತ್ಯಸಿದ್ಧವೆಂದು ಹೇಳಿದಂತಾಯಿತು. ಹಿಂದೆ ಹೇಳಿದ ಸರ್ವೇಶಿತೃತ್ವವನ್ನು ಅನುವಾದ ಮಾಡಿದಂತಾಯಿತು.

'ಸತ್ವಂ ಸುರಾನೀಕಮಿವ ಏಧಯತಿ' ಎಂಬಲ್ಲಿ ಸತ್ವಂ ಏಧಯತಿ ಎಂದು ಹೇಳಿದರೆ ಸಂಗತವಾಗುವದಿಲ್ಲ. ರಜಸ್ತಮಸ್ಕಾನ್ ಅಸುರಾನ್ ಎಂದು ಹೇಳಿದಂತೆ ಸತ್ವಾತ್ಮಕಂ ಸುರಾನೀಕಂ ಎಂದು ಹೇಳಬೇಕು. ಕಾರಣ ಆ ಅರ್ಥ ಬರುವಂತೆ ಸ್ಥಿತಶಬ್ದ ಅಧ್ಯಾಹಾರ ಮಾಡಿ ಯೋಜಿಸುವರು.

**ದೇಹಾದಿಕಾರಣತ್ವಾತ್ ಸುರಾನೀಕಮಿವಸ್ಥಿತಸತ್ವಮ್ ||**

ದೇಹೇಂದ್ರಿಯಾದಿಗಳಿಗೆ ಕಾರಣವಾದುದರಿಂದ ಸುರಾನೀಕದಂತಿರುವ ಸತ್ವವೆಂದರೆ ಸತ್ವಾತ್ಮಕದೇಹಾದಿಗಳಿಂದ ಕೂಡಿದ ದೇವತೆಗಳ ಅನೀಕವನ್ನು ಅಭಿವೃದ್ಧಿಗೊಳಿಸುವನೆಂದರ್ಥ. ಏಕೆಂದರೆ ಸುರಪ್ರಿಯ ಎಂಬುದನ್ನು ಹೇತುಗರ್ಭವಿಶೇಷಣವಾಗಿ ಕೊಟ್ಟಿರುವರು. ಅದು ಅಸುರಾಪ್ರಿಯಾದಿಗಳಿಗೆ ಉಪಲಕ್ಷಕ ಎಂದಿಟ್ಟುಕೊಂಡು ಶ್ಲೋಕದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು.

**ಸ್ವಭಾವತಃ ಪ್ರಿಯತ್ವಾತ್ತು ಸದಾ ದೇವಪ್ರಿಯೋ ಹರಿಃ |**
**ಅಪ್ರಿಯಶ್ಚಾಸುರಾಣಾಂ ಸ ಸ್ವಭಾವಾತ್ತೂಭಯಂ ನೃಣಾಮ್ ||**

**ದೇಶಕಾಲಗುಣಾಂಶ್ಚೈವ ಭಕ್ತ್ಯಾದೀನಪ್ಯವೇಕ್ಷ್ಯ ತು |**
**ಯೋಗ್ಯತಾಂ ಚ ತಥಾ ಕರ್ಮ ಸಮ ಇತ್ಯಭಿಧೀಯತೇ ||**

ಶ್ರೀಹರಿಯು ಬಾಧ್ಯತ್ವಾದಿಪ್ರದನೆಂದರೆ ವೈಷಮ್ಯವೇ ಪ್ರಾಪ್ತವಾಯಿತು '**ಸಮಃ ಪ್ರಿಯಃ**' ಎಂಬುದಕ್ಕೆ ಪರಿಹಾರವಿಲ್ಲವೆಂದರೆ '**ಬಾಧ್ಯಬಾಧಕತಾಂ ಗತಃ**' ಎಂಬುದನ್ನು ವಿವರಿಸುವರು-

**ಯ ಏಷ ರಾಜನ್ನಪಿ ಕಾಲ ಈಶಿತಾ**
**ಸತ್ವಂ ಸುರಾನೀಕಮಿವೈಧಯತ್ಯಜಃ ।**
**ತತ್ಪ್ರತ್ಯನೀಕಾನಸುರಾನ್ ಸುರಪ್ರಿಯೋ**
**ರಜಸ್ತಮಸ್ಕಾನ್ ಪ್ರಮಿಣೋತ್ಯುರುಶ್ರವಾಃ** ॥೧೨॥

**ರಾಜನ್** ಪರೀಕ್ಷಿತನೇ **ಕಾಲೇ ಅಪಿ** ಕಾಲವಿಷಯದಲ್ಲಿಯೂ **ಈಶಿತಾ** ನಿಯಾಮಕನಾದ **ಅಜಃ** ಜನನರಹಿತನಾದ **ಸುರಪ್ರಿಯಃ** ಸ್ವಾಭಾವಿಕವಾಗಿ ದೇವತೆಗಳಿಗೆ ಪ್ರಿಯನಾದ, ಅಸುರರಿಗೆ ಅಪ್ರಿಯನಾದ, ಮನುಷ್ಯರಿಗೆ ಪ್ರಿಯಾಪ್ರಿಯನಾದ **ಉರುಶ್ರವಾಃ** ಬಹುಕೀರ್ತಿಶಾಲಿಯಾದ ೨) ನಿಯಮವನ್ನು ಪ್ರತಿಪಾದಿಸುವ ಶಾಸ್ತ್ರಗಳಲ್ಲಿ ಬಹುವಾಗಿ ಶ್ರುತನಾದ ೩) ಸುರಾದಿಗಳ ಗುಣಾದಿಗಳನ್ನು ವೃದ್ಧಿಗೊಳಿಸುವನೆಂದು ಬಹುವಾಗಿ ಶ್ರುತನಾದ ೪) ಅವರವರ ಯೋಗ್ಯತೆಯನ್ನು ನಿಯತವಾಗಿ ನಿಯಮನ ಮಾಡಿಕೊಂಡೇ ಬರುವವನಾದ್ದರಿಂದ ಆ ಬಗೆಯ ವೈಷಮ್ಯ ಸಹ್ಯವೆಂದೇ ಶಾಸ್ತ್ರಗಳಲ್ಲಿ ಬಹುವಾಗಿ ಶ್ರುತನಾದ ೫) ಅವರವರ ಯೋಗ್ಯತೆಗೆ ಅನುಸಾರವಾಗಿ ಮಾಡಿದ ಶುಭಾಶುಭಕರ್ಮಗಳಿಗೆ ಅನುಸಾರವಾಗಿ ದೇವದೈತ್ಯರಿಗೆ ಫಲಕೊಡುವನೆಂಬ ವೈಷಮ್ಯ ಶ್ರೀಹರಿಯಲ್ಲಿ ಅನುಮತವೇ ಎಂದು ಶಾಸ್ತ್ರಗಳಲ್ಲಿ ಬಹುವಾಗಿ ಶ್ರುತನಾದ **ಯಃ ಏಷ** ಯಾವ ಈ ವಿಷ್ಣುವು **ಸುರಾನೀಕಂ ಇವ** ದೇವತೆಗಳ ಸಮೂಹರೂಪದಲ್ಲಿರುವ ಅಥವಾ ದೇವತೆಗಳಿಗೆ ಬಲಪ್ರದ-ನಾದುದರಿಂದ ಅವರ ಸೈನ್ಯದಂತಿರುವ **ಸತ್ವಂ** ಸತ್ವಗುಣವನ್ನು **ಸಮೇಧಯತಿ** ಅಭಿವೃದ್ಧಿಗೊಳಿಸುವನು. (ಸತ್ವವೇ ದೇವತೆಗಳ ದೇಹಾದಿಗಳಿಗೆ ಕಾರಣವಾದ್ದರಿಂದ ಸತ್ವಗುಣಪ್ರಧಾನರಾದ ದೇವತೆಗಳನ್ನು ಅಭಿವೃದ್ಧಿಗೊಳಿಸುವನು) **ರಜಸ್ತಮಸ್ಕಾನ್** ರಜೋಗುಣ ತಮೋಗುಣ ಸ್ವಭಾವದವರಾದ **ತತ್ಪ್ರತ್ಯನೀಕಾನ್** ದೇವತೆಗಳ ಶತ್ರುಗಳಾದ **ಅಸುರಾನ್** ತಮೋಗುಣಸ್ವಭಾವದ ದೈತ್ಯರನ್ನು **ಪ್ರಮಿಣೋತಿ** ಸಂಹರಿಸುವನು.

ವಿಶೇಷ ಃ- ರಜೋಗುಣಸ್ವಭಾವದ ಸುರಭಿನ್ನರಾದ ಮನುಷ್ಯರಿಗೆ ದುಃಖಾದಿಗಳನ್ನು ಕೊಟ್ಟು ಹಿಂಸಿಸುವನು. 'ಮೀಙ್ ಹಿಂಸಾಯಾಂ' ಎಂಬ ಧಾತುವಿನಿಂದ ಈ ಅರ್ಥ ಬರುವದು. 'ಸುರಪ್ರಿಯಃ' ಎಂದು ಹೇಳಿದ್ದರಿಂದ ಅಸುರರಿಗೆ ಅಪ್ರಿಯನು ಮನುಷ್ಯರಿಗೆ ಪ್ರಿಯಾಪ್ರಿಯನೂ ಆಗಿರುವದು ಶ್ರೀಹರಿಯ ಸ್ವಭಾವವೆಂದು ಸೂಚಿಸಿರುವರು.

ಈ ಶ್ಲೋಕದಲ್ಲಿ ಕಾಲವೆಂಬುದು ಪ್ರಥಮಾಂತವಾದರೆ ಪ್ರಕೃತಸಂಗತಿ ಇಲ್ಲವೆಂದಾಲೋಚಿಸಿ ಆಚಾರ್ಯರು ಸಪ್ತಮ್ಯಂತವಾಗಿ ಭೇದವನ್ನು ತಿಳಿಸುವರು-

**.. ತಾತ್ಪರ್ಯ..**

**'ಕಾಲೇ ಕಾಲವಿಷಯೇ ಅಪಿ ಈಶಿತಾ'**

ಈ ತಾತ್ಪರ್ಯವಾಕ್ಯದಲ್ಲಿ ಹೇಳಲಾದ ಸಪ್ತಮಿಯು ಅಧಿಕರಣಾರ್ಥಕವಾದದ್ದು ಎಂದು ಹೇಳಿದರೆ ಮತ್ತೆ ಅಸಂಗತಿ ಬರುತ್ತದೆ ಎಂದು ತಿಳಿದು ವ್ಯಾಖ್ಯಾನಿಸುವರು. 'ಕಾಲವಿಷಯೇ ಅಪಿ' ಎಂದು. ಇದರಿಂದ ಕಾಲೇ ಎಂಬುದು ವಿಷಯಸಪ್ತಮಿ ಅದಕ್ಕೆ ಅಪಿಪದದಿಂದ ಸಂಬಂಧ ಎಂದು ಹೇಳಿದಂತಾಯಿತು. ಇದರಿಂದ ಸರ್ವಪ್ರವರ್ತಕನಾದ ಶ್ರೀಹರಿಯು ಕಾಲವಿಷಯದಲ್ಲಿಯೂ ನಿಯಾಮಕನೆಂದು ಹೇಳಿದ ಮೇಲೆ ಇತರ ವಿಷಯದಲ್ಲಿ ನಿಯಾಮಕನೆಂದು ಬೇರೆ ಹೇಳಬೇಕಿಲ್ಲ. ಅದು ಕೈಮುತ್ಯಸಿದ್ಧವೆಂದು ಹೇಳಿದಂತಾಯಿತು. ಹಿಂದೆ ಹೇಳಿದ ಸರ್ವೇಶಿತೃತ್ವವನ್ನು ಅನುವಾದ ಮಾಡಿದಂತಾಯಿತು.

'ಸತ್ವಂ ಸುರಾನೀಕಮಿವ ಏಧಯತಿ' ಎಂಬಲ್ಲಿ ಸತ್ವಂ ಏಧಯತಿ ಎಂದು ಹೇಳಿದರೆ ಸಂಗತವಾಗುವದಿಲ್ಲ. ರಜಸ್ತಮಸ್ಕಾನ್ ಅಸುರಾನ್ ಎಂದು ಹೇಳಿದಂತೆ ಸತ್ವಾತ್ಮಕಂ ಸುರಾನೀಕಂ ಎಂದು ಹೇಳಬೇಕು. ಕಾರಣ ಆ ಅರ್ಥ ಬರುವಂತೆ ಸ್ಥಿತಶಬ್ದ ಅಧ್ಯಾಹಾರ ಮಾಡಿ ಯೋಜಿಸುವರು.

**ದೇಹಾದಿಕಾರಣತ್ವಾತ್ ಸುರಾನೀಕಮಿವಸ್ಥಿತಸತ್ವಮ್ ॥**

ದೇಹೇಂದ್ರಿಯಾದಿಗಳಿಗೆ ಕಾರಣವಾದುದರಿಂದ ಸುರಾನೀಕದಂತಿರುವ ಸತ್ವವೆಂದರೆ ಸತ್ವಾತ್ಮಕದೇಹಾದಿಗಳಿಂದ ಕೂಡಿದ ದೇವತೆಗಳ ಅನೀಕವನ್ನು ಅಭಿವೃದ್ಧಿಗೊಳಿಸುವನೆಂದರ್ಥ. ಏಕೆಂದರೆ ಸುರಪ್ರಿಯ ಎಂಬುದನ್ನು ಹೇತುಗರ್ಭವಿಶೇಷಣವಾಗಿ ಕೊಟ್ಟಿರುವರು. ಅದು ಅಸುರಾಪ್ರಿಯಾದಿಗಳಿಗೆ ಉಪಲಕ್ಷಕ ಎಂದಿಟ್ಟುಕೊಂಡು ಶ್ಲೋಕದ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು.

**ಸ್ವಭಾವತಃ ಪ್ರಿಯತ್ವಾತ್ತು ಸದಾ ದೇವಪ್ರಿಯೋ ಹರಿಃ ।**
**ಅಪ್ರಿಯಶ್ಚಾಸುರಾಣಾಂ ಸ ಸ್ವಭಾವಾತ್ತೂಭಯಂ ನೃಣಾಮ್ ॥**

**ದೇಶಕಾಲಗುಣಾಂಶ್ಚೈವ ಭಕ್ತ್ಯಾದೀನಪ್ಯವೇಕ್ಷ್ಯ ತು ।**
**ಯೋಗ್ಯತಾಂ ಚ ತಥಾ ಕರ್ಮ ಸಮ ಇತ್ಯಭಿಧೀಯತೇ ॥**

**ಸ್ವತಃ ಪ್ರಿಯೋಽಪಿ ದೇವಾನಾಮುತ್ಪಾದ್ಯೈವ ಗುಣಾನಿಮಾನ್ ।**
**ಇತರೇಷಾಂ ತಥಾ ದೋಷಾನ್ ಸುಖದುಃಖೇ ದದಾತ್ಯಜಃ ॥**

**ಉಭಯಂ ತು ಮನುಷ್ಯಾಣಾಮತಃ ಸಮ ಇತೀರಿತಃ ।**
**ಅನಾದಿನಿಯತಾಶ್ಚೈವ ಗುಣದೋಷಾಃ ಸುರಾದಿಷು ॥**

**ಯಥಾಕ್ರಮಂ ಪುನಶ್ಚೈವ ನಿಯಮಾದ್ವರ್ಧಿತಾಸ್ತಥಾ ।**
**ವಿಷ್ಣುನೈವ ತತೋ ನಿತ್ಯಂ ವಿಷಮಶ್ಚ ಜನಾರ್ದನಃ ॥ ಇತಿ ಬ್ರಹ್ಮತರ್ಕೇ**

**ನ ವಿಷ್ಣೋರ್ವಿಷಮತ್ವಂ ತು ಯೋಗ್ಯತಾಪೇಕ್ಷಯಾ ಕ್ವಚಿತ್ ।**
**ಯೋಗ್ಯತಾಯಾಸ್ತನ್ನಿಯತ್ಯಾ ವಿಷಮತ್ವಂ ಭವೇದಿತಿ ॥ ಸ್ಕಾಂದೇ**

**ವಿಷಮತ್ವಂ ತು ದೋಷಾಯ ಶುಭಾಶುಭವಿಪರ್ಯಯೇ ।**
**ಅತಸ್ತಾದೃಶವೈಷಮ್ಯಂ ಬ್ರಹ್ಮಸೂತ್ರೇ ನಿರಾಕೃತಮ್ ॥**

**ಶುಭಾಶುಭನಿಯಂತೃತ್ವಂ ನ ದೋಷೋ ಗುಣ ಏವ ಸಃ ।**
**ಅತಸ್ತದಿಷ್ಟಂ ಕೃಷ್ಣಸ್ಯ ಬ್ರಹ್ಮಸೂತ್ರಕೃತೋ ವಿಭೋಃ ॥ ಇತಿ ತಂತ್ರನಿರ್ಣಯೇ**

ಯಾವಾಗಲೂ ಸ್ವಾಭಾವಿಕವಾಗಿಯೇ ದೇವತೆಗಳು ಪರಮಾತ್ಮನಿಗೆ ಪ್ರಿಯರಾದುದರಿಂದಲೇ ಶ್ರೀಹರಿಯು ಸದಾ ದೇವತೆಗಳಿಗೆ ಪ್ರಿಯನು. ಅಸುರರು ಅಸುರಸ್ವಭಾವದಿಂದಲೇ ಶ್ರೀಹರಿಗೆ ಪ್ರಿಯರಾಗದಿರುವದರಿಂದ ಶ್ರೀಹರಿಯು ಅಸುರರಿಗೆ ಅಪ್ರಿಯನು. ಮಧ್ಯಮಜೀವರ ಸ್ವಭಾವದಿಂದಲೇ ಶ್ರೀಹರಿಯು ಮಧ್ಯಮಜೀವರ ಪ್ರೀತಿ ಅಪ್ರೀತಿಗೆ ವಿಷಯನು. ಹೀಗೆ ಸುರ ಅಸುರ ಮಧ್ಯಮರ ಸ್ವಾಭಾವಿಕವಾದ ಪ್ರಿಯತ್ವಾದಿಗಳನ್ನು ಅನುಸರಿಸಿಯೇ ಶ್ರೀಹರಿಯು ಅವರಿಗೆ ಪ್ರಿಯನೂ ಅಪ್ರಿಯನೂ ಆಗುತ್ತಾನೆ. ಆದಕಾರಣ ಸಮನೆನಿಸುತ್ತಾನೆ. ದೇವತೆಗಳ ಭಾರತಾದಿದೇಶ, ಕೃತತ್ರೇತಾದಿಕಾಲ, ಸದಾಚರಣಾದಿಗುಣಗಳು ಭಕ್ತಿಶ್ರದ್ಧಾದಿಗಳು ಅನಾದಿಯೋಗ್ಯತಾ, ಪೂರ್ವಪುಣ್ಯಕರ್ಮ, ಹೀಗೆಯೇ ಅಸುರರಿಗೆ ದ್ವೇಶಾದಿಗಳು, ದ್ವೇಷಾದಿಯೋಗ್ಯತೆ, ಪೂರ್ವಪಾಪವನ್ನು, ಮನುಷ್ಯರಿಗೆ ಮಿಶ್ರಕರ್ಮ, ಪುಣ್ಯಪಾಪಮಿಶ್ರಯೋಗ್ಯತೆಯನ್ನು ಅಪೇಕ್ಷಿಸಿಯೇ ಫಲವನ್ನು ಕೊಡುವದರಿಂದ ಸಮನೆನಿಸುತ್ತಾನೆ. ಶ್ರೀಹರಿಯು ದೇವತೆಗಳಿಗೆ ಸ್ವತಃ ಪ್ರಿಯನಾಗಿದ್ದರೂ ಭಕ್ತ್ಯಾದಿಗುಣಗಳನ್ನು ಹುಟ್ಟಿಸಿ ಸುಖವನ್ನು, ದೈತ್ಯರಿಗೆ ದ್ವೇಷವನ್ನು ಹುಟ್ಟಿಸಿ ದುಃಖವನ್ನು, ನಿತ್ಯಸಂಸಾರಿಗಳಿಗೆ ಗುಣದೋಷಗಳೆರಡನ್ನೂ ಹುಟ್ಟಿಸಿ ಸುಖದುಃಖಗಳೆರಡನ್ನು ಕೊಡುತ್ತಾನೆ. ಸ್ವತಃ ಪ್ರಿಯತ್ವಾದಿಗಳಿದ್ದರೂ ಅವರವರ ಗುಣದೋಷಗಳನ್ನು ಅಪೇಕ್ಷಿಸಿಯೇ ಸುಖದುಃಖಗಳನ್ನು ಕೊಡುವದರಿಂದ ಸಮನೆನಿಸುತ್ತಾನೆ. ದೇವಾದಿಗಳಲ್ಲಿ ಇರತಕ್ಕ ಗುಣದೋಷಗಳು ಅನಾದಿನಿತ್ಯಗಳೆಂದು

ಶ್ರೀಹರಿಯಿಂದ ನಿಯಮಿಸಲ್ಪಟ್ಟವುಗಳಾದರೂ ಕ್ರಮವಾಗಿ ಶ್ರೀವಿಷ್ಣುವಿನಿಂದಲೇ ಪುನಃ ನಿಯಮನಗೊಂಡು ವಿಶೇಷ ಅಭಿವೃದ್ಧಿಗೊಳಿಸಲ್ಪಟ್ಟಿವೆ. ಆ ಕಾರಣದಿಂದ ಶ್ರೀಜನಾರ್ದನನು ವಿಷಮನೂ ಆಗಿರುವನು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಅನಾದಿನಿತ್ಯಗಳಾದ ಗುಣದೋಷಗಳನ್ನಪೇಕ್ಷಿಸಿ ಶ್ರೀವಿಷ್ಣುವಿಗೆ ವಿಷಮತೆ ಇಲ್ಲ. ಯೋಗ್ಯತೆಯೂ ಅವನಿಂದ ನಿಯತವಾದ್ದರಿಂದ ವಿಷಮತೆ ಇದೆ ಎಂದು ಸ್ಕಾಂದಪುರಾಣದಲ್ಲಿದೆ.

ಅಯೋಗ್ಯರಿಗೆ ಶುಭವನ್ನು ಕೊಟ್ಟು, ಯೋಗ್ಯರಿಗೆ ಅಶುಭವನ್ನು ಕೊಟ್ಟರೆ, ತನ್ನಿಮಿತ್ತ ಶುಭಮಾಡಿದವಗೆ ದುಃಖ, ಅಶುಭಮಾಡಿದವಗೆ ಸುಖ ಇವುಗಳನ್ನು ಕೊಡುವದು ದೋಷದಾಯಕವಾಗುವದು. ಆದ ಕಾರಣ ಅಂತಹ ವೈಷಮ್ಯವನ್ನು ಬ್ರಹ್ಮಸೂತ್ರದಲ್ಲಿ ನಿರಾಕರಿಸಿರುವರು. ತನ್ನಿಂದ ನಿಯತವಾದ ಅವರವರಿಗೆ ಯೋಗ್ಯವಾದ ಶುಭಾದಿಗಳನ್ನನುಸರಿಸಿ ಫಲವನ್ನು ಕೊಡುವದರಿಂದ ಆ ವೈಷಮ್ಯವು ದೋಷವಲ್ಲ ವೇದಾಪ್ರಾಮಾಣ್ಯಕಾರಣವಾಗದಿರುವುದರಿಂದ ಗುಣವೇ ಆಗಿದೆ. ಆದ್ದರಿಂದ ಅಂತಹ ವೈಷಮ್ಯವೂ ವೇದವ್ಯಾಸರಿಗೆ ಇಷ್ಟವೇ ಆಗಿದೆ. ಎಂದು ತಂತ್ರನಿರ್ಣಯದಲ್ಲಿದೆ.

ವೈಷಮ್ಯಂ ನಿರ್ಘೃಣತ್ವಂ ಚ ವೇದಾಪ್ರಾಮಾಣ್ಯಕಾರಣಮ್ ।
ನಾಂಗೀಕಾರ್ಯಮತೋಽನ್ಯತ್ತು ನ ವೈಷಮ್ಯಾದಿನಾಮಕಮ್ ॥

ಎಂದು ಅನುವ್ಯಾಖ್ಯಾನದಲ್ಲಿದೆ ।।೧೨।।

'ಸುರಪ್ರಿಯಃ' ಎಂಬುದನ್ನು ವಿವರಿಸುತ್ತಾರೆ-

**ಸ ವಾ ಪುನಃ ಸ್ವಸೃಷ್ಟಸ್ಯ ಸ್ಥಿತಿರಕ್ಷಾನುವೃತ್ತಯೇ ।**
**ಸತ್ವಂ ಸುರಗಣಾನ್ ವಿಷ್ಣುರುಪಬೃಂಹಯತೇ ಮುಹುಃ ।।೧೩।।**

**ಸಃ** 'ಯದಾ ಸಿಸೃಕ್ಷುಃ' ಎಂಬಲ್ಲಿ ಪ್ರಕೃತನಾದ **ವಿಷ್ಣುಃ** ವಿಷ್ಣುವು **ಸ್ವಸೃಷ್ಟಸ್ಯ** ತಾನು ಸೃಷ್ಟಿಮಾಡಿದ ಜಗತ್ತಿನ **ಪುನಃ** ಮತ್ತೆ **ಸ್ಥಿತಿರಕ್ಷಾನುವೃತ್ತಯೇ** ಇರುವಿಕೆ ಪಾಲನೆಯ ಪ್ರವರ್ತನೆಗಾಗಿ **ಸತ್ವಂ** ಸತ್ವಗುಣಸಂಪನ್ನರಾದ **ಸುರಗಣಾನ್** ದೇವತಾಸಮೂಹಗಳನ್ನು **ಮುಹುಃ** ಪ್ರತಿಯುಗದಲ್ಲಿಯೂ **ಉಪಬೃಂಹಯತೇ** ಚೆನ್ನಾಗಿ ವೃದ್ಧಿಗೊಳಿಸುವನು.

ವಿಶೇಷ :- ತ್ರಿಮೂರ್ತಿಗಳಲ್ಲಿ ವಿಷ್ಣುವು ಪಾಲಕನಾದ್ದರಿಂದ ವಿಷ್ಣು ಎಂದಿರುವರು. 'ವಾ'ಶಬ್ದದಿಂದ ಸೃಷ್ಟಿಸ್ಥಿತಿಸಂಹಾರನಿಯಮನಜ್ಞಾನಾಜ್ಞಾನ-ಬಂಧಮೋಕ್ಷಗಳು ಶ್ರೀಹರಿಯಿಂದಲೇ ಆಗುವವು ಎಂದು ತಿಳಿಸಿರುವರು. 'ಯದಾ ಸಿಸೃಕ್ಷುಃ' ಎಂದು ೧೧ನೇ ಶ್ಲೋಕದಲ್ಲಿ ಈಶ್ವರಶಬ್ದವು ರುದ್ರನನ್ನು ಹೇಳುತ್ತಿಲ್ಲವೆಂದು

ವಿಷ್ಣುಃ ಎಂಬುದರಿಂದ ತಿಳಿಸಿರುವರು. ಇದರಿಂದ ರುದ್ರನೇ ಪೂರ್ವಪ್ರಸಕ್ತನೆಂಬ ಭ್ರಾಂತಿಯನ್ನು ಪರಿಹರಿಸಿರುವರು. ಅಥವಾ ರುದ್ರನಿಂದ ಸೃಷ್ಟ್ಯಾದಿಗಳಾದಂತೆ ಎಂದು ಎಲ್ಲಿಯಾದರೂ ಹೇಳಿದ್ದರೆ ಅಲ್ಲೆಲ್ಲ ತದ್ಗತನಾದ ಶ್ರೀಹರಿಯಿಂದ ಆಯಿತೆಂದು ತಿಳಿಯಬೇಕು ಎಂದು ತಿಳಿಸಲು ವಿಷ್ಣುವೆಂದು ಹೇಳಿದ್ದು. ||೧೩||

ಶ್ರೀಹರಿಯು ಸುರಪ್ರಿಯನು ಅಸುರ ಅಪ್ರಿಯನು ಎಂಬುದನ್ನು ಇತಿಹಾಸದಿಂದ ತೋರಿಸುತ್ತಾರೆ-

**ಅತ್ರೈವೋದಾಹೃತಃ ಪೂರ್ವಮಿತಿಹಾಸಃ ಸುರರ್ಷಿಣಾ |**
**ಪ್ರೀತ್ಯಾ ಮಹಾಕ್ರತೌ ರಾಜನ್ ಪೃಚ್ಛತೇಽಜಾತಶತ್ರವೇ ||೧೪||**

**ರಾಜನ್** ಪರೀಕ್ಷಿತನೇ **ಪೂರ್ವಂ** ಹಿಂದೆ **ಮಹಾಕ್ರತೌ** ರಾಜಸೂಯವೆಂಬ ದೊಡ್ಡಯಾಗದಲ್ಲಿ **ಪೃಚ್ಛತೇ** ಪ್ರಶ್ನೆಮಾಡಿದ **ಅಜಾತಶತ್ರವೇ** ಧರ್ಮರಾಜನಿಗೆ **ಪ್ರೀತ್ಯಾ** ಆದರದಿಂದ **ಸುರರ್ಷಿಣಾ** ದೇವಋಷಿಗಳಾದ ನಾರದರಿಂದ **ಅತ್ರ ಏವ** ಶ್ರೀಹರಿಯು ಸ್ವಾಭಾವಿಕ ಸುರಪ್ರಿಯನು ಅಸುರಪ್ರಿಯನಲ್ಲವೆಂಬ ವಿಷಯದಲ್ಲಿ **ಇತಿಹಾಸಃ ಉದಾಹೃತಃ** ಇತಿಹಾಸವು (ನಡೆದ ಕಥೆಯು) ಹೇಳಲ್ಪಟ್ಟಿತು. ||೧೪||

**ದೃಷ್ಟ್ವಾ ಮಹಾದ್ಭುತಂ ರಾಜಾ ರಾಜಸೂಯೇ ಮಹಾಕ್ರತೌ |**
**ವಾಸುದೇವೇ ಭಗವತಿ ಸಾಯುಜ್ಯಂ ಚೇದಿಭೂಭುಜಃ ||೧೫||**

**ತತ್ರಾಸೀನಂ ಸುರಋಷಿಂ ರಾಜಾ ಪಾಂಡುಸುತಃ ಕ್ರತೌ |**
**ಪಪ್ರಚ್ಛ ವಿಸ್ಮಿತಮನಾ ಮುನೀನಾಂ ಶೃಣ್ವತಾಮಿದಮ್ ||೧೬||**

**ಮಹಾಕ್ರತೌ ರಾಜಸೂಯೇ** ಮಹಾಯಾಗವಾದ ರಾಜಸೂಯದಲ್ಲಿ **ರಾಜಾ** ಪ್ರಜಾರಂಜಕನಾದ **ಪಾಂಡುಸುತಃ** ಪಾಂಡುರಾಜನ ಕುವರನಾದ **ರಾಜಾ** ಧರ್ಮರಾಜನು **ಚೇದಿಭೂಭುಜಃ** ಶ್ರೀಹರಿಯನ್ನು ನಿಂದಿಸುತ್ತಿದ್ದ ಶಿಶುಪಾಲನಿಗೆ **ಭಗವತಿ** ಸಮಗ್ರೈಶ್ವರ್ಯವುಳ್ಳ **ವಾಸುದೇವೇ** ಶ್ರೀಕೃಷ್ಣನಲ್ಲಿ **ಸಾಯುಜ್ಯಂ** ಪ್ರವೇಶವನ್ನು **ಮಹಾದ್ಭುತಂ** ಅತ್ಯಾಶ್ಚರ್ಯಕರವಾದುದನ್ನು **ದೃಷ್ಟ್ವಾ** ನೋಡಿ **ವಿಸ್ಮಿತಮನಾಃ** ಅಚ್ಚರಿಗೊಂಡ ಮನಸ್ಸುಳ್ಳವನಾಗಿ **ಮುನೀನಾಂ** ಋಷಿಗಳು **ಶೃಣ್ವತಾಂ ಸತಾಂ** ಕೇಳುತ್ತಿರಲು **ತತ್ರ ಕ್ರತೌ** ಆ ರಾಜಸೂಯಯಾಗದಲ್ಲಿ (ಮಂಟಪದಲ್ಲಿ) **ಆಸೀನಂ** ಕುಳಿತಿರುವ **ಸುರಋಷಿಂ** ದೇವರ್ಷಿಗಳಾದ ನಾರದರನ್ನು **ಪಪ್ರಚ್ಛ** ಕೇಳಿದನು. ||೧೫,೧೬||

**ಯುಧಿಷ್ಠಿರ ಉವಾಚ**

**ಅಹೋ ಹ್ಯತ್ಯದ್ಭುತಂ ಹ್ಯೇತದ್ ದುರ್ಲಭೈಕಾಂತಿನಾಮಪಿ ।**
**ವಾಸುದೇವೇ ಪರೇ ತತ್ತ್ವೇ ಪ್ರಾಪ್ತಿಶ್ಚೈದ್ಯಸ್ಯ ವಿದ್ವಿಷಃ ॥೧೭॥**

**ಏಕಾಂತಿನಾಂ ಅಪಿ** ಏಕಾಂತಭಕ್ತರಿಗೂ **ದುರ್ಲಭಂ** ಕಷ್ಟಸಾಧ್ಯವಾದ **ವಾಸುದೇವೇ ಪರೇ ತತ್ತ್ವೇ** ಸರ್ವೋತ್ತಮನಾದ ಭಗವಂತನಲ್ಲಿ **ವಿದ್ವಿಷಃ** ವಿಶೇಷವಾಗಿ ದ್ವೇಷಮಾಡುವ **ಚೈದ್ಯಸ್ಯ** ಶಿಶುಪಾಲನಿಗೆ **ಪ್ರಾಪ್ತಿಃ** ಪ್ರವೇಶವಾಯಿತು **ಇತಿ ಏತತ್** ಎಂಬುದೇನಿದೆಯೋ ಅದು **ಅದ್ಭುತಂ** ಆಶ್ಚರ್ಯಕರ **ಅಹೋ** ವಿಸ್ಮಯವು. ॥೧೭॥

**ಏತದ್ ವೇದಿತುಮಿಚ್ಛಾಮಃ ಸರ್ವ ಏವ ವಯಂ ಮುನೇ ।**
**ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ ॥೧೮॥**

**ಹೇ ಮುನೇ** ಶುಕಾಚಾರ್ಯರೇ **ವಯಂ ಸರ್ವೇ** ಇಲ್ಲಿ ಸೇರಿದ ನಾವೆಲ್ಲರು **ಏತದ್** ಇದಕ್ಕೆ ಕಾರಣವನ್ನು **ವೇದಿತುಂ** ತಿಳಿಯಲು **ಇಚ್ಛಾಮಃ** ಇಚ್ಛಿಸುವೆವು ಏಕೆಂದರೆ **ಭಗವನ್ನಿಂದಯಾ** ಶ್ರೀಹರಿಯನ್ನು ನಿಂದಿಸಿದ್ದರಿಂದ **ವೇನಃ** ವೇನನು **ದ್ವಿಜೈಃ** ಬ್ರಾಹ್ಮಣರಿಂದ **ತಮಸಿ ಪಾತಿತಃ** ತಮಸ್ಸಿನಲ್ಲಿ ಹಾಕಲ್ಪಟ್ಟನು. (ಕಾರಣ ಇವನಿಗೆ ಹೇಗೆ ಸಾಯುಜ್ಯವಾಯಿತು ಎಂದು ಪ್ರಶ್ನಾಭಿಪ್ರಾಯ) ॥೧೮॥

**ದಮಘೋಷಸುತಃ ಪಾಪ ಆರಭ್ಯ ಕಲಭಾಷಣಾತ್ ।**
**ಸಂಪ್ರತ್ಯಮರ್ಷೀ ಗೋವಿಂದೇ ದಂತವಕ್ರಶ್ಚ ದುರ್ಮತಿಃ ॥೧೯॥**

**ಪಾಪಃ** ಪಾಪಿಯಾದ **ದಮಘೋಷಸುತಃ** ದಮಘೋಷನ ಮಗನಾದ ಶಿಶುಪಾಲನು **ಕಲಭಾಷಣಾತ್ ಆರಭ್ಯ** ತೊದಲನುಡಿಯಿಂದ ಆರಂಭಿಸಿ **ಸಂಪ್ರತಿ** ಈವರೆಗೂ **ಅಮರ್ಷೀ** ದ್ವೇಷಿಯು **ದುರ್ಮತಿಃ** ದುಷ್ಟಬುದ್ಧಿಯಾದ **ದಂತವಕ್ರಃ** ದಂತವಕ್ರನೂ ಸಹ ದ್ವೇಷಿಯೇ (ಇವರಿಬ್ಬರೂ ಭಗವಂತನಲ್ಲಿ ಲಯ ಹೇಗೆ ಹೊಂದಿದರು ಎಂದು ೨೧ನೇ ಶ್ಲೋಕದಿಂದ ಅನ್ವಯ.) ॥೧೯॥

**ಶಪತೋರಸಕೃದ್ವಿಷ್ಣುಂ ಯದ್ ಬ್ರಹ್ಮ ಪರಮವ್ಯಯಮ್ ।**
**ಶ್ವಿತ್ರೋ ನ ಜಾತೋ ಜಿಹ್ವಾಯಾಂ ನಾಂಧಂ ವಿವಿಶತುಸ್ತಮಃ ॥೨೦॥**

**ಯತ್** ಯಾವ ಕಾರಣ **ಅವ್ಯಯಂ** ನಾಶರಹಿತನಾದ **ಪರಂ** ಸರ್ವೋತ್ತಮನಾದ **ಬ್ರಹ್ಮ** ಗುಣಪೂರ್ಣನಾದ **ವಿಷ್ಣುಂ** ಶ್ರೀಹರಿಯನ್ನು **ಅಸಕೃತ್** ಪುನಃ ಪುನಃ **ಶಪತೋಃ** ನಿಂದಿಸುವ ಇವರ **ಜಿಹ್ವಾಯಾಂ** ನಾಲಿಗೆಯಲ್ಲಿ **ಶ್ವಿತ್ರಃ** ಶ್ವೇತಕುಷ್ಠವು ನ **ಜಾತಃ**

ಉಂಟಾಗಲಿಲ್ಲ ಏಕೆ? **ಅಂಧಂತಮಃ ನ ವಿವಿಶತುಃ** ಅಂಧಂತಮಸ್ಸನ್ನು ಪ್ರವೇಶಮಾಡಲಿಲ್ಲ ಏಕೆ? ಮಾಡಬೇಕಿತ್ತಲ್ಲ ಎಂದು ಭಾವ.

'ಧರ್ಮೀ ಸ್ವರ್ಗಂ ವಿಧರ್ಮೀ ನಿರಯಂ' ಎಂದು ಶ್ರುತಿಯಿರುವದರಿಂದ ಪುಣ್ಯಪಾಪಗಳು ಮರಣಾನಂತರ ಫಲಕೊಡುವವುಗಳು. ಆದ್ದರಿಂದ 'ಶ್ವಿತ್ರೀ ನ ಜಾತಃ' ಎಂದು ಕೇಳಿದುದು ಹೇಗೆ? ಎಂದರೆ ಪಾಪವು ಪಾರತ್ರಿಕ ನರಕಕ್ಕೆ ಕಾರಣವಾದಂತೆ ಐಹಿಕಕುಷ್ಠಾದಿಗಳಿಗೆ ನಿಯಮೇನ ಕಾರಣವೆಂಬ ಪ್ರತೀತಿಯನ್ನು ನಿವಾರಿಸಲು ವಿವಕ್ಷಿತ ತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು.

**... ತಾತ್ಪರ್ಯ ...**

**ನಿಯಮಾದ್ಭುಜ್ಯತೇ ಪುಂಭಿರ್ಧರ್ಮಾಧರ್ಮಫಲಂ ಮೃತೌ ।**
**ಕೈಶ್ಚಿದತ್ರಾಪಿ ಭುಜ್ಯೇತ ತಸ್ಮಾನ್ನಾಧರ್ಮಮಾಚರೇತ್ ॥ ಇತಿ ಭಾರತೇ**

ಅಧಿಕಾರಿಗಳಿಂದ ಪುಣ್ಯಪಾಪಗಳ ಫಲವು ಮರಣಾನಂತರ ನಿಯಮೇನ ಅನುಭವಿಸಲ್ಪಡುವದು. ಕೆಲವರಿಂದ ಪಾಪಮಾಡಿದ ದೇಹದಲ್ಲೇ ಪಾಪ ಉತ್ಕಟವಾಗಿದ್ದರೆ ಅನುಭವಿಸಲ್ಪಡುವದು. ನಿಯಮವಿಲ್ಲದಿದ್ದರೂ'ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ' ಎಂದಿರುವದರಿಂದ ಭಗವನ್ನಿಂದೆಯು ಉತ್ಕಟಪಾಪವಾದುದರಿಂದ ಈ ರೀತಿ ಪ್ರಶ್ನಿಸಿರುವರು ಎಂದು ಭಾವ. ।।೨೦।।

**ಕಥಂ ತಸ್ಮಿನ್ ಭಗವತಿ ದುರವಗ್ರಾಹ್ಯ ಧಾಮನಿ ।**
**ಪಶ್ಯತಾಂ ಸರ್ವಲೋಕಾನಾಂ ಲಯಮೀಯತುರಂಜಸಾ ।।೨೧।।**

**ದುರವಗ್ರಾಹ್ಯಧಾಮನಿ** ತಿಳಿಯಲಾಗದ ಸ್ವರೂಪವುಳ್ಳ **ತಸ್ಮಿನ್ ಭಗವತಿ** ಆ ಶ್ರೀಕೃಷ್ಣನಲ್ಲಿ **ಸರ್ವಲೋಕಾನಾಂ ಪಶ್ಯತಾಂ** ಎಲ್ಲ ಜನರು ನೋಡುತ್ತಿದ್ದಂತೆಯೇ **ಅಂಜಸಾ** ಮುಖ್ಯವಾಗಿ **ಲಯಂ ಈಯತುಃ** ಪ್ರವೇಶ ಪಡೆದರು ಅದು **ಕಥಂ** ಹೇಗೆ? ।।೨೧।।

**ಏತದ್ ಭ್ರಾಮ್ಯತಿ ಮೇ ಬುದ್ಧಿರ್ದೀಪಾರ್ಚಿರಿವ ವಾಯುನಾ ।**
**ಬ್ರೂಹ್ಯೇತದದ್ಭುತತಮಂ ಭಗವನ್ನತ್ರ ಕಾರಣಮ್ ।।೨೨।।**

**ಭಗವನ್** ಪೂಜ್ಯರೇ **ಏತತ್** ಈ ವಿಷಯದಲ್ಲಿ **ಮೇ ಬುದ್ಧಿಃ** ನನ್ನ ಬುದ್ಧಿಯು **ವಾಯುನಾ** ಗಾಳಿಯಿಂದ **ದೀಪಾರ್ಚಿರಿವ** ದೀಪದ ಜ್ವಾಲೆಯಂತೆ **ಭ್ರಾಮ್ಯತಿ** ನಿಶ್ಚಯಿಸಲಾಗದೆ ಭ್ರಮಿಸುತ್ತಿದೆ ಎಂದರ್ಥ. **ಅದ್ಭುತತಮಂ** ಆಶ್ಚರ್ಯತಮವಾದ **ಕಾರಣಂ** ಕಾರಣವನ್ನು **ಬ್ರೂಹಿ** ಹೇಳಿರಿ.

ವಿಶೇಷ :- ನಿಂದೆಯು ತಮಸ್ಸಾಧನವೆಂದು ಶ್ರುತಿಯು ಹೇಳುತ್ತದೆ. ನಿಂದಕನಿಗೆ ಸಾಯುಜ್ಯ ಪ್ರತ್ಯಕ್ಷಸಿದ್ಧವಾಗಿದೆ. ಆದ್ದರಿಂದ ಮನಸ್ಸು ಯಾವುದೊಂದನ್ನೂ ನಿಶ್ಚಯಮಾಡದಾಗಿದೆ ಎಂದು ಭಾವ.

ಯದ್ಯಪಿ ದಂತವಕ್ರನ ಲಯ ಈಗ ಆಗಿಲ್ಲ ಆದರೂ ಅವನ ಜಾತಕ ಪ್ರಮಾಣದಿಂದ ಸಿದ್ಧವೆಂದಿಟ್ಟುಕೊಂಡು ಹೇಳಿದ ಮಾತು ಎಂದು ತಿಳಿಯಬೇಕು. ||೨೧,೨೨ ||

**ಶ್ರೀಶುಕ ಉವಾಚ**

**ರಾಜ್ಞಸ್ತದ್ವಚ ಆಕರ್ಣ್ಯ ನಾರದೋ ಭಗವಾನ್ ಋಷಿಃ ।**
**ತುಷ್ಟಃ ಪ್ರಾಹ ತಮಾಭಾಷ್ಯ ಶೃಣ್ವಂತ್ಯಃ ಸದಸಃ ಕಥಾಃ ||೨೩||**

**ಭಗವಾನ್** ಪೂಜ್ಯರಾದ **ಋಷಿಃ** ಜ್ಞಾನಿಗಳಾದ **ನಾರದಃ** ನಾರದರು **ರಾಜ್ಞಃ** ಧರ್ಮರಾಜನ **ತದ್ವಚಃ** ಆ ಮಾತನ್ನು **ಆಕರ್ಣ್ಯ** ಕೇಳಿ **ತುಷ್ಟಃ** ಸಂತಸಗೊಂಡು **ತಂ** ಧರ್ಮರಾಜನನ್ನು **ಆಭಾಷ್ಯ** ಸಂಬೋಧಿಸಿ **ಸದಸಃ** ಸಭಿಕರು **ಶ್ರುಣ್ವಂತ್ಯಃ ಸತ್ಯ** ಕೇಳುತ್ತಿರಲು **ಕಥಾಃ ಪ್ರಾಹ** ಕಥೆಗಳನ್ನು ಹೇಳಿದರು. ||೨೩||

ಯುಧಿಷ್ಠಿರನ ಪ್ರಶ್ನೆಗೆ ಉತ್ತರಿಸಲಾರಂಭಿಸುವರು-

ಭಗವನ್ನಿಂದೆಯಿಂದ ನರಕಾದ್ಯನರ್ಥವಾಗಬೇಕನ್ನುವವನ ಅಭಿಪ್ರಾಯವೇನು? ಅಪನಿಂದೆಯಿಂದ ಭಗವಂತನಿಗೆ ದುಃಖ ಉಂಟಾಯಿತು ಎಂದೋ ? ಹಾಗಿಲ್ಲದಿದ್ದರೂ ಸುರಾಪಾನಾದಿಗಳಂತೆ ನಿಷಿದ್ಧಾಚರಣರೂಪವೆಂದೋ ? ಇಲ್ಲಿ ನಿಂದನಾದಿಗಳಿಂದ ಭಗವಂತನು ಕ್ರೋಧ ದುಃಖ ಹಿಂಸಾದಿ ಉಪದ್ರವ ಹೊಂದಿರಲು ಚೈದ್ಯನಿಗೆ ಹೇಗೆ ಸಾಯುಜ್ಯವಾಯಿತು ಎಂದೋ ? ಈ ಜನ್ಮದಲ್ಲಿ ಸಾಧನವಿಲ್ಲದೆ ಹೇಗಾಯಿತೆಂದೋ? ದ್ವೇಷಿಗೂ ಆಗುವದಾದರೆ ವೇನನಿಗೂ ಆಗಲಿ ಎಂದೋ? ಎಂದು ವಿಕಲ್ಪಿಸಿ ಮೊದಲನೆ ಪಕ್ಷಕ್ಕೆ ಪ್ರಾಕೃತ ದೇಹಧಾರಿಗಳಿಗೆ ಅದರ ಮೇಲೆ ಅಭಿಮಾನವುಳ್ಳವರಿಗೇನೇ ಬೇರೆಯವರು ಮಾಡುವ ನಿಂದನಾದಿಗಳಿಂದ ದುಃಖಾದಿಗಳಾಗುವವು. ಭಗವಂತನಿಗಾದರೋ ಪ್ರಾಕೃತದೇಹವೇ ಇಲ್ಲ ಅಂದಮೇಲೆ ಅದರ ಮೇಲೆ ಅಭಿಮಾನ ಎಲ್ಲಿಂದ ? ಆದ್ದರಿಂದ ಬೇರೆಯವರು ಮಾಡುವ ನಿಂದೆಯಿಂದ ದುಃಖವಾಗುವದಿಲ್ಲ ಎಂದು ಉತ್ತರ ಹೇಳುವರು-

**ನಾರದ ಉವಾಚ**

**ನಿಂದನಸ್ತವಸತ್ಕಾರನ್ಯಕ್ಕಾರಾರ್ಥಂ ಕಲೇವರಮ್ ।**
**ಪ್ರಧಾನಪರಯೋ ರಾಜನ್ನವಿವೇಕೇನ ಕಲ್ಪಿತಮ್ ||೨೪||**

**ನಿಂದನ** ದೋಷಗಳನ್ನು ಹೇಳುವದು **ಸ್ತವ** ಗುಣಗಳನ್ನು ಹೇಳುವದು **ಸತ್ಕಾರ** ಪೂಜಿಸುವದು **ನ್ಯಕ್ಕಾರ** ತಿರಸ್ಕರಿಸುವದು **ತದರ್ಥಂ** ಇವುಗಳಿಂದ ದುಃಖಾದಿಗಳನ್ನು ಅನುಭವಿಸುವದಕ್ಕಾಗಿ **ಕಲೇವರಂ** ಷೋಡಶಕಲಾತ್ಮಕಶರೀರವು **ಪ್ರಧಾನಪರಯೋಃ** ಪ್ರಧಾನದೇಹೇಂದ್ರಿಯಾದ್ಯಾತ್ಮಕಜೀವನಿಗೆ **ಅವಿವೇಕೇನ** ಸ್ಫುಟತರವಿವೇಕಜ್ಞಾನ-ವಿಲ್ಲದಿರುವದರಿಂದ **ಕಲ್ಪಿತಂ** ನಿಷ್ಪಾದಿತವಾಗಿದೆ. ||೨೪||

ಮೇಲೆ ಹೇಳಿದ ಅವಿವೇಕವಾದರೂ ದುಃಖಾದಿಗಳ ಅನುಭವಕ್ಕೆ ಜನಕ ಹೇಗೆ ಎಂದರೆ ಉಪಲಕ್ಷಣೆಯಿಂದ ದುಃಖಾದ್ಯನುಭವಜನಕತ್ವವನ್ನು ಉಪಪಾದಿಸುವರು-

**ಹಿಂಸಾ ತದಭಿಮಾನೇನ ದಂಡಪಾರುಷ್ಯಯೋರ್ಯಥಾ ।**
**ವೈಷಮ್ಯಮಿಹ ಭೂತಾನಾಂ ಮಮಾಹಮಿತಿ ಪಾರ್ಥಿವ** ||೨೫||

**ಪಾರ್ಥಿವ** ಧರ್ಮರಾಜನೇ **ತದಭಿಮಾನೇನ** ದೇಹಾಭಿಮಾನದಿಂದ **ಭೂತಾನಾಂ** ಜೀವರಿಗೆ, ಪ್ರಕೃತಿಪುರುಷವಿವೇಕಜ್ಞಾನವಿಲ್ಲದವರಿಗೆ **ಮಮಾಹಮಿತಿ** ನನ್ನದು ನಾನು ಎಂದು **ಇಹ** ಈ ದೇಹದಲ್ಲಿ **ಹಿಂಸಾ** ಹೊಡೆಯುವದು **ದಂಡಪಾರುಷ್ಯಯೋಃ** ಶಿಕ್ಷೆ ಕ್ರೌರ್ಯ ನಿಮಿತ್ತವಾಗಿ **ವೈಷಮ್ಯಂ** ವಿಷಮಾವಸ್ಥೆಯು ಫಲಿಸುವದು.

ವಿಶೇಷ :- ಅಥವಾ ದೇಹದಲ್ಲಿ ನಾನು ನನ್ನ ಎಂಬ ವೈಷಮ್ಯ. ಅಂದರೆ ಅನ್ಯಥಾಜ್ಞಾನವೇನಿದೆಯೋ ಆ ಅಭಿಮಾನದಿಂದ ಅವಿವೇಕಿಗಳಿಗೆ ಶರೀರದಂಡನೆ ನಿಷ್ಠುರವಾಕ್ಯ ಇವುಗಳ ನಿಮಿತ್ತಕವಾದ ಹಿಂಸೆಯು ಆಗುವದು. ಚೇತನಕ್ಕೆ ಹಿಂಸೆ ಇಲ್ಲ. ಅಭಿಮನ್ಯಮಾನಶರೀರ ಹಿಂಸೆಯೇ ಚೇತನ ಹಿಂಸೆಯೆಂದು ತಿಳಿಯುವನು ಎಂದರ್ಥ. ತನ್ನದಲ್ಲದ್ದನ್ನು ತನ್ನದೆಂದೂ, ತಾನಲ್ಲದ್ದನ್ನು ತಾನೆಂದೂ ತಿಳಿಯುವದೇ ವಿಷಮಬುದ್ಧಿಯೆಂದರ್ಥ. ||೨೫||

ದೇಹಕ್ಕೆ ಹಿಂಸೆಯಾದರೆ ಜೀವಗೇಕೆ ದುಃಖಾನುಭವವೆಂದರೆ ಅದಕ್ಕೂ ಅಭಿಮಾನವೇ ಕಾರಣ ಎಂದು ಹೇಳುವರು-

**ಯನ್ನಿಬಂಧೋಽಭಿಮಾನೋಽಯಂ ತದ್ವಧಾತ್ ಪ್ರಾಣಿನಾಂ ವಧಃ ।**
**ತಥಾ ನ ಯಸ್ಯ ಕೈವಲ್ಯಾದಭಿಮಾನೋಽಖಿಲಾತ್ಮನಃ ।**
**ಪರಸ್ಯೇದಮಕರ್ತುರ್ಹಿ ಹಿಂಸಾ ಕೇನಾಸ್ಯ ಕಲ್ಪ್ಯತೇ** ||೨೬||

**ಅಯಂ** ಈ **ಅಭಿಮಾನಃ** ಅಭಿಮಾನವು **ಯನ್ನಿಬಂಧಃ** ಯಾವ ದೇಹದಲ್ಲಿ ಇಡಲ್ಪಟ್ಟಿದೆಯೋ **ತದ್ವಧಾತ್** ಆ ದೇಹದ ಹಿಂಸಾರೂಪ ವಧೆಯಿಂದ **ಪ್ರಾಣಿನಾಂ** ಚೇತನರಿಗೆ **ವಧಃ** ವಧೆ ಎಂದು ಔಪಚಾರಿಕ ವ್ಯವಹಾರವು. ಆದ್ದರಿಂದ

ನಿಂದನಾದಿಗಳು ದೇಹಕ್ಕೆ ಹೊರತು ಆತ್ಮನಿಗಲ್ಲ. ಜೀವನಂತೆ ಶ್ರೀಹರಿಗೂ ಅಭಿಮಾನದಿಂದ ಅನರ್ಥ ಏಕಾಗಬಾರದು ಎಂದರೆ ಹೇಳುತ್ತಾರೆ **ಕೈವಲ್ಯಾತ್** ಪ್ರಾಕೃತ ದೇಹವಿಲ್ಲದ್ದರಿಂದ ಚಿದಾನಂದಾತ್ಮಕ ಅಪ್ರಾಕೃತದೇಹವಿರುವದರಿಂದ **ಅಖಿಲಾತ್ಮನಃ** ಸರ್ವಸ್ವಾಮಿಯಾದ **ಯಸ್ಯ ಪರಸ್ಯ** ಯಾವ ಶ್ರೀಹರಿಗೆ ಅಥವಾ **ಯಸ್ಯ** ಯಕಾರವಾಚ್ಯ ಶ್ರೀಹರಿಗೆ (ಅ,ಕ,ಯ,ಪ್ರ,ವಿ,ಸಂ,ಭೂ,ಸ,ಖ,ಹಾಃ ವಿಷ್ಣುವಾಚಕಾಃ ಎಂದಿದೆ) **ತಥಾ** ಜೀವನಂತೆ **ಅಭಿಮಾನಃ ನ** ದೇಹಾಭಿಮಾನವಿಲ್ಲ. ಅಭಿಮಾನವಿಲ್ಲದಿರಲು ಎರಡು ಕಾರಣ. 'ಅಖಿಲಾತ್ಮನಃ' ಎಂದು ಹೇಳಿದ್ದರಿಂದ ತನ್ನದಲ್ಲದ ವಸ್ತುವೇ ಇಲ್ಲದ್ದರಿಂದ ತನ್ನದಲ್ಲದ್ದನ್ನು ತನ್ನದೆಂದು ತಿಳಿಯುವ ಪ್ರಶ್ನೆಯೆ ಇಲ್ಲ. ಇಲ್ಲಿ ಪ್ರಾಕೃತದೇಹವಿಲ್ಲದಿರುವದೇ ಹೇತುವೋ ಸಚ್ಚಿದಾನಂದಾತ್ಮಕ ದೇಹವಿರುವದು ಹೇತುವೋ ಎಂದರೆ ಎರಡೂ ಹೇತುಗಳೆಂದು ತಿಳಿಸಲು ಕೈವಲ್ಯಾತ್ ಎಂಬ ಪದ ಉಪಯೋಗಿಸಿರುವರು. ಪ್ರಕೃತ್ಯಾತ್ಮಕದೇಹವಿಲ್ಲದ್ದರಿಂದ ಪ್ರಾಕೃತ-ವೈಕೃತ ಮಿಶ್ರಣವಿಲ್ಲದ ಸಚ್ಚಿದಾನಂದಾತ್ಮಕದೇಹವಿರುವದರಿಂದ ಎಂದರ್ಥ. ಈ ವಿಷಯದಲ್ಲಿ 'ಸದ್ದೇಹಃ ಸುಖಗಂಧಶ್ಚ' ಇತ್ಯಾದಿ ಶ್ರುತಿಗಳಿವೆ. **ಅಕರ್ತುಃ** ಮತ್ತೊಬ್ಬ ಕರ್ತೃವಿಲ್ಲದ **ಪರಸ್ಯ** ಜೀವವಿಲಕ್ಷಣನಾದ ಗುಣಪೂರ್ಣನಾದ **ಅಸ್ಯ** ಚಿದಾನಂದಾತ್ಮಕ ದೇಹವುಳ್ಳ ಶ್ರೀಹರಿಗೆ **ಇದಂ ಹಿಂಸಾ** ಈ ಹಿಂಸೆಯು **ಕೇನ ಕಲ್ಪ್ಯತೇ** ಯಾವ ನಿಮಿತ್ತದಿಂದ ಇದೆಯೆಂದು ಕಲ್ಪಿಸಲ್ಪಡುವದು. ನಿಮಿತ್ತವೇ ಇಲ್ಲದ್ದರಿಂದ ನೈಮಿತ್ತಿಕ ಹಿಂಸೆಯೂ ಇಲ್ಲವೆಂದರ್ಥ. **ಹಿ** ಆಯುಧಾದಿಗಳಿಂದ ಇವನನ್ನು ಹೊಡೆಯುವವನು ಇಲ್ಲವಾದ್ದರಿಂದ ಭೇದ ಮುಂತಾದ ಹಿಂಸೆಯೂ ಇವನಿಗಿಲ್ಲ.

ಈ ಶ್ಲೋಕದಲ್ಲಿಯ ಕೈವಲ್ಯಾತ್, ಅಕರ್ತುಃ ಇದಂ, ಎಂಬ ಮೂರು ಪದಗಳ ಪ್ರಕೃತಸಂಗತ ಅರ್ಥ ತಿಳಿಸುವರು.

**... ತಾತ್ಪರ್ಯ ...**

**ಕೈವಲ್ಯಾತ್ ದೇಹಾದ್ಯಭವಾದೇವ । ಅಕರ್ತುಃ ತಸ್ಯ ಅನ್ಯಃ ಕರ್ತಾ ನ ವಿದ್ಯತೇ । ಇದಂ ಏಷಾ ॥**

ದೇಹಾದಿಗಳಿಲ್ಲದಿರುವದರಿಂದ ಕೇವಲನು, ಇನ್ನೊಬ್ಬ ಕರ್ತೃವಿಲ್ಲದ್ದರಿಂದ ಅಕರ್ತನು. **ಇದಂ** ಹಿಂಸೆಯು, (ಅತಿಶಯ ಕುತ್ಸನ ಭೇದ ಎಂಬ ಅರ್ಥಗಳಲ್ಲಿ ವ್ಯತ್ಯಾಸವು) ಏಷಾ ಎಂದು ಹೇಳುವ ಬದಲು ಇದಂ ಎಂಬ ವ್ಯತ್ಯಾಸದಿಂದ ಪರಮಾತ್ಮನಿಗೆ ಅತಿಶಯ, ಹಿಂಸೆಗೆ ಕುತ್ಸಿತತ್ವ ಸ್ವತಂತ್ರನಾದುದರಿಂದ ಅತ್ಯಂತಭೇದವನ್ನು ತಿಳಿಸಿರುವರು ಎಂದು ಭಾವ.

ಭಗವಂತನಿಗೆ ತನ್ನಿಂದ ಭಿನ್ನವಾದ ದೇಹವಿಲ್ಲದ್ದರಿಂದ, ಅಭಿಮಾನವಿಲ್ಲದ್ದರಿಂದ ಮತ್ತು ಸ್ವಾತಂತ್ರ್ಯವಿರುವದರಿಂದ ಹಿಂಸಾದಿಗಳಿಂದ ಯಾವ ಉಪದ್ರವ ಇಲ್ಲವಾದ್ದರಿಂದ ಅಪನಿಂದೆಯಿಂದ ಭಗವಂತನಿಗೆ ದುಃಖವಾಗುತ್ತದೆ ಎಂಬ ಮೊದಲನೇ ಪಕ್ಷ ಸರಿಯಲ್ಲ. ಯದ್ಯಪಿ ವೇನಾದಿಗಳು ಮಾಡಿದ ನಿಂದನಾದಿಗಳಿಂದಲೂ ಉಪದ್ರವವಿಲ್ಲ ಹಾಗಿದ್ದಲ್ಲಿ ಪರಮಾತ್ಮನು ಯಾರಿಂದಲೂ ನಿಂದನಾದಿಗಳನ್ನು ಮಾಡಿಸುತ್ತಿರಲಿಲ್ಲ ಆದರೂ ವೇನಾದಿಗಳು ಮಾಡಿದ ನಿಂದೆಯಿಂದ ಸ್ವಾಭಾವಿಕ ಕೋಪವೇ ವ್ಯಕ್ತವಾಗುವದು. ಅದರಿಂದ ತಮಃ ಪ್ರಾಪ್ತಿಯಾಗುವದು. ಭಕ್ತರಾದ ಚೈದ್ಯಾದಿಗಳಲ್ಲಿ ಸ್ವಾಭಾವಿಕ ಕೋಪವಿಲ್ಲ. ಔಪಾಧಿಕಕೋಪ ಹುಟ್ಟುವದಿಲ್ಲ. ಕಿಂತು ಸ್ವಾಭಾವಿಕ ಪ್ರೀತಿಯೇ ಹುಟ್ಟುತ್ತದೆ. ಆದ್ದರಿಂದ ಅನ್ಯಾವೇಶದಿಂದ ಮಾಡಿದ ನಿಂದಾದಿಗಳನ್ನು ಕ್ಷಮಿಸಿ (ಸಹಿಸಿ) ದಯಾಲುವು ಆದ ಭಗವಂತನು ಮುಕ್ತಿ ನೀಡಿದನೆಂದು ಭಾವ. ॥೨೬॥

ನಿಷಿದ್ಧಾಚರಣದಂತೆ ಭಗವನ್ನಿಂದನೆಯಿಂದ ನರಕಾದ್ಯನರ್ಥವಾಗಬೇಕು ಎಂಬುವ ಎರಡನೇ ಪಕ್ಷಕ್ಕೆ ಉತ್ತರ ಹೇಳುವರು-

**ತಸ್ಮಾದ್ ವೈರಾನುಬಂಧೇನ ನಿರ್ವೈರೇಣ ಭಯೇನ ವಾ ।**
**ಸ್ನೇಹಾತ್ ಕಾಮೇನ ವಾ ಯುಂಜ್ಯಾತ್ ಕಥಂಚಿನ್ನೇಕ್ಷತೇ ಪೃಥಕ್ ॥೨೭॥**

**ತಸ್ಮಾತ್** ಜಡಶರೀರೇಂದ್ರಿಯಗಳಿಲ್ಲದ್ದರಿಂದ, ಶ್ರೀಹರಿಗೆ ಅಹಂ ಮಮ ಎಂಬ ಅಭಿಮಾನವಿಲ್ಲದ್ದರಿಂದ, ತನ್ನಿಮಿತ್ತವಾದ ಉಪದ್ರವವೂ ನಿವಾರಿತವಾದ್ದರಿಂದ **ವೈರಾನುಬಂಧೇನ** ಸಂತತವಾದ ದ್ವೇಷದ ಸ್ಮರಣೆಯಿಂದ **ಭಯೇನ ವಾ** ಕೊಲ್ಲುತ್ತಾನೆಂಬ ಭಯದಿಂದಾಗಲಿ **ಸ್ನೇಹಾತ್ ವಾ** ಪ್ರೀತಿಯಿಂದಾಗಲಿ **ಕಾಮೇನ ವಾ** ವಿಷಯ ಸುಖಾಪೇಕ್ಷೆಯಿಂದಾಗಲಿ **ಯಃ** ಯಾವನು **ಹರೌ** ಶ್ರೀಹರಿಯಲ್ಲಿ **ಮನಃ ಯುಂಜ್ಯಾತ್** ಮನಸ್ಸಿಡುವನೋ **ಸಃ** ಅವನು **ಕಥಂಚಿತ್** ಯಾವ ರೀತಿಯಿಂದಲೂ **ಪೃಥಕ್** ಶ್ರೀಹರಿಯನ್ನು ಬಿಟ್ಟು ಬೇರೆಯದನ್ನು **ನ ಈಕ್ಷತೇ** ಚಿಂತಿಸುವದಿಲ್ಲ.(ಮನಸ್ಸು ಅವನಲ್ಲೇ ಆಸಕ್ತವಾಗಿರುವದು ಎಂದು ಭಾವ.)

ಈ ಶ್ಲೋಕದಲ್ಲಿ ಜೀವನು ಪರಮಾತ್ಮನನ್ನು ತನ್ನಿಂದ ಭಿನ್ನನೆಂದು ಕಾಣುವದಿಲ್ಲವೆಂದು ಅರ್ಥ ತೋರುವದು. ಕಾರಣ ಅಭಿಪ್ರಾಯ ಹೇಳುವರು-

**... ತಾತ್ಪರ್ಯ ...**

**ಕಥಂಚಿನ್ನೇಕ್ಷತೇ ಪೃಥಕ್ । ತತ್ರೈವ ಮನಸೋಽಭಿನಿವೇಶೇನ ತದನ್ಯಂ ನೇಕ್ಷತೇ ।**

ಭಗವಂತನಲ್ಲಿ ಮನಸ್ಸು ಅಭಿನಿವಿಷ್ಟವಾದ್ದರಿಂದ ಅವನ ಹೊರತು ಬೇರೆಯದನ್ನು ನೋಡುವದಿಲ್ಲವೆಂದರ್ಥ.

ವೈರಾದಿಗಳಲ್ಲಿ ಯಾವುದಾದರೊಂದು ರೀತಿಯಿಂದ ಮನಸ್ಸಿಡಬೇಕು ಎಂದು ವಿಧಾನಮಾಡಿದ್ದಾರೆ. ಏಕೆಂದರೆ ಈ ಉಪಾಯಗಳಿಂದ ಭಗವಂತನನ್ನು ಬಿಟ್ಟು ಬೇರೆಯದರಲ್ಲಿ ಮನಸ್ಸು ಹೋಗುವದಿಲ್ಲವೆಂದು ಪರಕೀಯರು ಮಾಡುವ ನಾಲ್ಕನೆ ಪಾದದ ಯೋಜನೆಯನ್ನು ದೂಷಿಸಲು ಆಚಾರ್ಯರು ಸ್ವಯಂ ಅದರ ಯೋಜನೆಯನ್ನು ತಿಳಿಸುವರು-

**ವೈರಾದೀನಾಂ ಏಕತಮೇನಾಪಿ ಯೋ ಯುಂಜ್ಯಾತ್ ಸ ನೇಕ್ಷೇತ ಇತಿ ಸ್ವಭಾವಕಥನಂ ನ ವಿಧಿಃ ॥**

ವೈರಾದಿಗಳಲ್ಲಿ ಯಾವುದೇ ಒಂದು ರೀತಿಯಿಂದ ಮನಸ್ಸಿಟ್ಟವನು ಇನ್ನೊಂದನ್ನು ಧ್ಯಾನಿಸುವದಿಲ್ಲವೆಂದು ಪ್ರಾಸಂಗಿಕವಾಗಿ ಸ್ವಭಾವವನ್ನು ಹೇಳಿದೆ ಹೊರತು ವಿಧಾನವಲ್ಲ.

ಪರಕೀಯರು ಹೇಳಿದಂತೆ ವಿಧಿಯೇ ಏಕಾಗಬಾರದು ಎಂದರೆ ಹಾಗೆ ಹೇಳಿದಲ್ಲಿ ವೈರಾದಿಅಪರಪರ್ಯಾಯ ದ್ವೇಷದಿಂದ ಮನೋಯೋಗವೂ ಮೋಕ್ಷಹೇತು ಎಂದು ಹೇಳಿದಂತಾಗುವದು. ಅದು ಬಹುಪ್ರಮಾಣ ವಿರುದ್ಧ ಎಂಬ ಅಭಿಪ್ರಾಯದಿಂದ ದ್ವೇಷಕ್ಕೆ ಅನರ್ಥ ಹೇಳುವ ಪ್ರಮಾಣಗಳನ್ನು ಹೇಳುವರು.

**ಕರ್ಮಣಾ ಮನಸಾ ವಾಚಾ ಯೋ ದ್ವಿಷ್ಯಾದ್ವಿಷ್ಣುಮವ್ಯಯಮ್ ।**
**ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ ॥**

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥**

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥**

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥**

**ರಾಕ್ಷಸೀಂ ಆಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ।**
**ಯದನಿಂದತ್ ಪಿತಾ ಮೇ ತ್ವಾಮವಿದ್ವಾಂಸ್ತೇಜ ಐಶ್ವರಮ್ ॥**

**ತಸ್ಮಾತ್ ಪಿತಾ ಮೇ ಪೂಯೇತ ದುರಂತಾದುಸ್ತರಾದಘಾತ್ ।**
**ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ॥**

**ವಿವಿಕ್ಷುರತ್ಯಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವತಃ ।**
**ವರತೋಽಪಿ ನ ಮುಚ್ಯಂತೇ ದ್ವೇಷಿಣಃ ಶಾಪತೋಽಪಿ ತು ॥**

**ಭಕ್ತಾ ನೈವ ನಿಪಾತ್ಯಂತೇ ಧರ್ಮಾಧರ್ಮೈಸ್ತಥೇತರೈಃ ।**
**ತದ್ವಿರುದ್ಧಸ್ವಭಾವಾನಾಮನ್ಯಥಾ ನ ಕಥಂಚನ ॥ ಇತ್ಯಾದೇಃ ॥**

**ಯಸ್ಮಾದೇವಂ ಕೋಽಪಿ ಉಪದ್ರವೋ ನಾಸ್ತಿ ಭಗವತಃ ತಸ್ಮಾದೇವ ದ್ವೇಷಾದೀನಾಮಪಿ ಮನೋ ಯೋಕ್ತುಂ ಶಕ್ಯತೇ ತತ್ಪ್ರೇರಣಯಾ । ತಾದೃಶಾನಾಂ ಏತದೇವ ಚಿಂತಯಂತಿ ಚ । ಅನ್ಯಥಾ ಆತ್ಮನೋ ದುಃಖಕಾರಣಂ ದ್ವೇಷಾದಿಕಂ ಕಥಂ ಸರ್ವನಿಯಾಮಕೋ ಹರಿಃ ಉತ್ಪಾದಯೇದಿತಿ ॥೨೭॥**

ಕರ್ಮ ಮನಸ್ಸು ಮಾತುಗಳಿಂದ ಯಾವನು ಶ್ರೀವಿಷ್ಣುವನ್ನು ದ್ವೇಷಿಸುತ್ತಾನೋ ಅವನ ಪಿತೃಗಳು ಬಹುಸಂವತ್ಸರಗಳವರೆಗೂ ನರಕದಲ್ಲಿ ಬಿದ್ದಿರುತ್ತಾರೆ.(ಇಲ್ಲಿ ದ್ವೇಷಿಸುವವನ ಪಿತೃಗಳು ನರಕಕ್ಕೆ ಹೋಗುವರೆಂದು ಹೇಳಿದ ಕಾರಣ ದ್ವೇಷವನ್ನು ಸರ್ವಥಾ ಮಾಡಬಾರದೆಂದು ಸಿದ್ಧವಾಯಿತು.)ಅಸುರಸ್ವಭಾವದವರೂ ದ್ವೇಷಿಗಳೂ ಕ್ರೂರರೂ ನರಾಧಮರೂ ಅಶುಭರು ಆದ ಜನರನ್ನು ಸದಾ ಅಸುರಯೋನಿಗಳಲ್ಲಿ ಹಾಕುವೆನು. ಅಸುರಯೋನಿಯಲ್ಲಿ ಹುಟ್ಟಿದವರು ಮತ್ತೆ ದುಷ್ಕರ್ಮಗಳನ್ನೇ ಮಾಡುತ್ತ ಪ್ರತಿಜನ್ಮಗಳಲ್ಲಿಯೂ ನನ್ನ ಜ್ಞಾನರಹಿತರಾಗಿ ನಿತ್ಯನರಕರೂಪಗತಿಯನ್ನೇ ಹೊಂದುತ್ತಾರೆ.(ಇಲ್ಲಿ ದ್ವೇಷಿಗಳಿಗೆ ಅಧೋಗತಿಯನ್ನು ಹೇಳಿದ ಕಾರಣ ದ್ವೇಷವನ್ನು ಮಾಡಬಾರದೆಂದು ಸಿದ್ಧವಾಯಿತು. ಸೃಷ್ಟಿಸ್ಥಿತಿಸಂಹಾರಕರ್ತನು ಮಹಾನುಭಾವನು ಮನುಷ್ಯಶರೀರಸದೃಶಶರೀರವನ್ನು ಹೊಂದಿದವನು ಆದ ನನ್ನನ್ನು ಅಜ್ಞರು ನನ್ನ ಉತ್ತಮವಾದ ಸರ್ವದಾ ಇರುವ ಸ್ವಭಾವವನ್ನು ತಿಳಿಯದೇ ತಿರಸ್ಕರಿಸುತ್ತಾರೆ. ಭಗವದ್ವೇಷಿಗಳು ಇಚ್ಛಿಸಿದ ಅರ್ಥವನ್ನು ಹೊಂದುವದಿಲ್ಲ. ಯಜ್ಞಾದಿಕರ್ಮಗಳ ಫಲವನ್ನು ಹೊಂದುವದಿಲ್ಲ. ಅವರ ಜ್ಞಾನವು ವ್ಯರ್ಥವು. ವಿರುದ್ಧವಾದ ಮನಸ್ಸುಳ್ಳವರು. ಅಂಥವರು ಬುದ್ಧಿಭ್ರಂಶಕರವಾದ ಅಸುರಸ್ವಭಾವವನ್ನಾಗಲಿ ರಾಕ್ಷಸಸ್ವಭಾವವನ್ನಾಗಲಿ ಆಶ್ರಯಿಸುತ್ತಾರೆ. (ಇಲ್ಲಿ ಭಗವಂತನನ್ನು ನಿಂದಿಸಿದವರು ವ್ಯರ್ಥ ಆಶೆಯುಳ್ಳವರು ಆಗುತ್ತಾರೆ. ರಾಕ್ಷಸ ಅಸುರಸ್ವಭಾವವನ್ನು ಹೊಂದುತ್ತಾರೆಂದು ಹೇಳಿದ ಕಾರಣ ದ್ವೇಷಿಸಬಾರದೆಂದಾಯಿತು) ನನ್ನ ತಂದೆಯು ಸರ್ವೇಶ್ವರನಾದ ನಿನ್ನನ್ನು ಭ್ರಾತೃದ್ರೋಹಿ ಎಂದು ದುರಭಿಪ್ರಾಯಪಟ್ಟು ನಿನ್ನಲ್ಲಿ ಬಹಳ ವೈರವನ್ನು ಬೆಳಿಸಿ ನಿಂದಿಸಿರುವನು ಹೀಗೆ ನಿನಗೂ ನಿನ್ನ ಭಕ್ತನಾದ ನನಗೂ (ಪ್ರಹ್ಲಾದನಿಗೂ) ದ್ರೋಹಿಸುತ್ತಿದ್ದ ನನ್ನ ತಂದೆಯು ಆ ಪಾಪಗಳಿಂದ ಮುಕ್ತನಾಗುವಂತೆ ಅನುಗ್ರಹಿಸು.ಹೀಗೆ ಹೇಳಿರುವದರಿಂದ ನಿಂದಿಸಬಾರದು ಎಂದು ಹೇಳಿದಂತಾಯಿತು. ಇದು ಸಜ್ಜೀವ ವಿಷಯಕ.

ಹಿರಣ್ಯಕಶಿಪುವು ಭಗವಂತನನ್ನು ನಿಂದಿಸಿದುದರಿಂದ ತಮಸ್ಸನ್ನು ಹೊಂದತಕ್ಕವನು ಪ್ರಹ್ಲಾದನ ಭಕ್ತಿಯಿಂದ ಹೊಂದಲಿಲ್ಲ. (ಇಲ್ಲಿ ನಿಂದಿಸಿದರೆ ತಮಃ

ಪ್ರವೇಶ ಪ್ರಸಕ್ತವಾಗುವದೆಂದು ಹೇಳಿದುದರಿಂದ ನಿಂದಿಸಬಾರದೆಂದಾಯಿತು. ಇದೂ ಸಜ್ಜನ ವಿಷಯಕ)

ಸ್ವಭಾವತಃ ಭಗವದ್ವೇಷಿಗಳು ವರದಿಂದಲೂ, ಧರ್ಮಗಳಿಂದಲೂ ಮುಕ್ತರಾಗುವದಿಲ್ಲ. ಸ್ವಭಾವಭಕ್ತರು ಶಾಪದಿಂದಲೂ ಅಧರ್ಮಗಳಿಂದಲೂ ತಮಸ್ಸನ್ನು ಸೇರುವದಿಲ್ಲ. ದ್ವೇಷವಿರುದ್ಧ ಸ್ವಭಾವವುಳ್ಳವರಿಗೇನೆ ಅನ್ಯಾವೇಶಪ್ರಯುಕ್ತ ದ್ವೇಷಾದಿಗಳು ವರಾದಿಗಳಿಂದ ತಿರಸ್ಕೃತಗಳಾಗುತ್ತವೆ. ಬೇರೆ ರೀತಿ ಅಲ್ಲ. ಇತ್ಯಾದಿ ಪ್ರಮಾಣಗಳಿಂದ ದ್ವೇಷವನ್ನು ಸರ್ವಥಾ ಮಾಡಬಾರದು ಎಂದು ಹೇಳಿಯಾಯಿತು.

ಯಾವ ಕಾರಣ ಶ್ರೀಹರಿಗೆ ಯಾವ ಉಪದ್ರವವೂ ಇಲ್ಲವೋ ಆದುದರಿಂದಲೇ ದ್ವೇಷಾದಿಗಳಿಂದಲೂ ಮನಸ್ಸನ್ನು ಶ್ರೀಹರಿಯಲ್ಲಿ ಸ್ಥಿರೀಕರಿಸಲಿಕ್ಕೆ ಶಕ್ಯವಾಗುತ್ತದೆ. ಪರಮಾತ್ಮನು ವೈರಾದಿಯುಕ್ತಭಕ್ತಿಯೋಗ್ಯರಿಗೇನೆ ವೈರಾದಿಪೂರ್ವಕ ಭಕ್ತಿಯಿಂದ ಮನಸ್ಸನ್ನು ಸ್ಥಿರವಾಗಿರಿಸಲಿಕ್ಕೆ ಇಚ್ಛಿಸುತ್ತಾನೆ ಕೇವಲ ವೈರಾಗ್ಯಾದಿಗಳಿಂದ ಮನಸ್ಸಿರಿಸಲಿಕ್ಕೆ ಇಚ್ಛಿಸುವದಿಲ್ಲ. ದ್ವೇಷಾದಿಗಳಿಂದ ಶ್ರೀಹರಿಗೆ ಉಪದ್ರವ ಆಗುವದಾದರೆ ತನಗೆ ದುಃಖ ಕಾರಣವಾದ ದ್ವೇಷಾದಿಗಳನ್ನು ಸರ್ವನಿಯಾಮಕನಾದ ಶ್ರೀಹರಿಯು ಏಕೆ ಹುಟ್ಟಿಸುವನು ಎಂದು ಭಾವ. ।।೨೭।।

ವೈರಾನುಬಂಧದಿಂದ ಮನಸ್ಸನ್ನು ಯೋಜಿಸಲು ಶಕ್ಯವಾಗುವದೆಂದಿಷ್ಟೇ ಅಲ್ಲ ಭಕ್ತ್ಯಾದಿಗಳಿಗಿಂತ ಅತಿಶಯವಾಗಿ ಮನಸ್ಸಿಡಲು ಶಕ್ಯವೆಂದು ಹೇಳುವರು-

**ಯಥಾ ವೈರಾನುಬಂಧೇನ ಮರ್ತ್ಯಸ್ತನ್ಮಯತಾಮಿಯಾತ್ ।**
**ನ ತಥಾ ಭಕ್ತಿಯೋಗೇನ ಇತಿ ಮೇ ನಿಶ್ಚಿತಾ ಮತಿಃ ।।೨೮।।**

**ಮರ್ತ್ಯಃ** ತಮಸ್ಸಿಗೆ ಯೋಗ್ಯನಾದ ಅಸುರನು **ವೈರಾನುಬಂಧೇನ** ಸಂತತವಾದ ದ್ವೇಷದ ಸ್ಮರಣೆಯಿಂದ **ಯಥಾ** ಎಷ್ಟೊಂದು (ಹೇಗೆ) **ತನ್ಮಯತಾಂ** ದ್ವೇಷಕ್ಕೆ ವಿಷಯವಾದ ಆ ವಿಷಯದಲ್ಲಿ ಅಭಿನಿವೇಶವನ್ನು **ಇಯಾತ್** ಹೊಂದುವನೋ (ಭಕ್ತಃ) ಮುಕ್ತಿಯೋಗ್ಯನು **ಭಕ್ತಿಯೋಗೇನ** ಭಕ್ತಿ ಎಂಬ ಉಪಾಯದಿಂದ **ತಥಾ** ಹಾಗೇ ಅಷ್ಟೊಂದು **ತನ್ಮಯತಾಂ** ಭಕ್ತಿವಿಷಯಪದಾರ್ಥದಲ್ಲಿ ಅಭಿನಿವೇಶವನ್ನು **ನ ಇಯಾತ್** ಹೊಂದಲಾರ **ಇತಿ** ಎಂದು **ಮೇ** ನನ್ನ **ನಿಶ್ಚಿತಾ ಮತಿಃ** ನಿಶ್ಚಯಾತ್ಮಕಜ್ಞಾನವು. ಭಕ್ತಿಯಿಂದ ಪದಾರ್ಥದಲ್ಲಿ ಮನಸ್ಸಿಡುವದಕ್ಕಿಂತಲೂ ಸತತವಾದ ವೈರದಿಂದ ಮನಸ್ಸನ್ನು ಅತಿಶಯವಾಗಿ ಇಡಲು ಆಗುವದೆಂದು ತಿಳಿಸಿದಂತಾಯಿತು. ಅಭಿನಿವೇಶವೆಂದರೆ ಆಗ್ರಹ, ದ್ವೇಷಿಗಳಿಗಿರುವಷ್ಟು ಆಗ್ರಹ. ಹರಿಯಲ್ಲಿ ದ್ವೇಷ ಅಂದರೆ ಹರಿಯ ಮಾಹಾತ್ಮ್ಯಪ್ರತಿಪಾದಕ ಶಾಸ್ತ್ರಗಳಲ್ಲಿ ದ್ವೇಷ, ಹರಿಭಕ್ತರಲ್ಲಿ ದ್ವೇಷ ಅಂದರೆ ಹರಿಭಕ್ತರ ಸಚ್ಛಾಸ್ತ್ರಗಳ ನಾಶಕ್ಕೆ ಪ್ರಯತ್ನ ಇತ್ಯಾದಿ. ಭಕ್ತಿಯ ಆಗ್ರಹವೆಂದರೆ

ಹರಿಯಲ್ಲಿ ಭಕ್ತಿ ತನ್ಮಹಿಮೆ ಹೇಳುವ ಶಾಸ್ತ್ರದಲ್ಲಿ ಶ್ರದ್ಧೆ, ತನ್ನಿಂದಕರನ್ನು ಕತ್ತರಿಸುವದರ ಶಪಥ (ಅವನ ನಾಶಕ್ಕೆ ಪ್ರಯತ್ನ ಇತ್ಯಾದಿ,) ದ್ವೇಷಿಗಳು ಆಗ್ರಹಿಗಳಾಗಿರುವಷ್ಟು ಭಕ್ತರು ಆಗಿರುವದು ಕಂಡಿಲ್ಲವೆಂದು ಭಾವ.

'ಭಕ್ತಿಯೋಗೇನ ಇತಿ' ಎಂದು ಗುಣಸಂಧಿ ಮಾಡದೇ ಹೇಳಿದ್ದರಿಂದ ದ್ವೇಷದಿಂದ ಆಗ್ರಹವಿರುವವರ ಸಂಖ್ಯೆ ಹೆಚ್ಚು ಭಕ್ತಿಯಿಂದ ಆಗ್ರಹವಿರುವವರು ಕಡಿಮೆಯೆಂದು ವಿಶೇಷ ಪ್ರಮೇಯವನ್ನು ತಿಳಿಸಿರುವರು. ಶ್ರೀಹರಿಯು ಭಕ್ತರನ್ನು ಹೆಚ್ಚು ಸಂಖ್ಯೆಯಲ್ಲಿ ಸೃಷ್ಟಿಸಿಲ್ಲ.

'ಯಥಾ ವೈರಾನುಬಂಧೇನ' ಎಂಬುದಕ್ಕೆ ಅವುಗಳಲ್ಲಿ ವೈರಾನುಬಂಧ ಶ್ರೇಷ್ಠವೆಂದು ಹೇಳುವರು ಎಂದು ಸಂಗತಿ ಹೇಳುವದು ಪ್ರಮಾಣವಿರುದ್ಧ ಎಂಬ ಅಭಿಪ್ರಾಯದಿಂದ ಸ್ವಯಂ ಸಂಗತಿ ಹೇಳುವರು-

**... ತಾತ್ಪರ್ಯ ...**

**ತತ್ಸೈವ ಹೇತುः । ಯಥಾ ವೈರಾನುಬಂಧೇನೇತಿ । ಯಥಾ ವೈರಾಭಿನಿವೇಶಿನः ತಥಾ ಭಕ್ತ್ಯಭಿನಿವೇಶಿನೋ ನ ಸಂತಿ । ತತ್ಕಥಮನ್ಯಥಾ ಭಕ್ತಾನೇವ ಬಹೂನ್ ಹರಿः ಕುರ್ಯಾದಿತಿ ಭಾವः ।**

ಉಚ್ಯತೇ ಎಂದು ಶೇಷ ಪೂರ್ಣ ಮಾಡಬೇಕು. **ತತ್ಸೈವ** ಎಂದರೆ ದ್ವೇಷಿಗಳಲ್ಲಿಯೂ ಶಿಶುಪಾಲಾದಿಗಳ ಮನಸ್ಸನ್ನು ತನ್ನ ಪ್ರೇರಣೆಯಿಂದ ಭಕ್ತಿಯುಕ್ತವನ್ನಾಗಿ ಮಾಡುವನು.

ಎಲ್ಲ ದ್ವೇಷಿಗಳಿಗೂ ಅಲ್ಲ ಎಂಬ ವಿಷಯದಲ್ಲಿಯೇ ಕಾರಣ ಹೇಳುವರು. 'ಯಥಾ ವೈರಾನುಬಂಧೇನ' ಎಂಬುದಕ್ಕೆ ಅನ್ಯಾವೇಶದಿಂದ ದ್ವೇಷ ಮಾಡುವವರ ಮನಸ್ಸನ್ನು ತನ್ನ ಪ್ರೇರಣೆಯಿಂದ ಭಕ್ತಿಯುಕ್ತರನ್ನಾಗಿ ಮಾಡುವನು. ಈ ನಿಯಮವನ್ನು ಒಪ್ಪದೆ ಎಲ್ಲ ದ್ವೇಷಿಗಳ ಮನಸನ್ನು ಭಕ್ತಿಯುಕ್ತವನ್ನಾಗಿ ಮಾಡುತ್ತಾನೆ ಎಂದು ಅಂಗೀಕರಿಸಿದರೆ ದ್ವೇಷಿಗಳಿಗೆ ಬಹುತ್ವ, ಭಕ್ತರಿಗೆ ಅಲ್ಪತ್ವ ಹೇಗೆ ಯುಕ್ತವಾಗುವದು. ಹಾಗಿದ್ದಲ್ಲಿ ಭಕ್ತರನ್ನೇ ಬಹುಜನರನ್ನು ಮಾಡುತ್ತಿದ್ದನು. ಹಾಗೆ ಮಾಡಿಲ್ಲ ಇದರಿಂದ ಎಲ್ಲ ದ್ವೇಷಿಗಳನ್ನು ಭಕ್ತಿಯುಕ್ತರನ್ನಾಗಿ ಮಾಡುವದಿಲ್ಲ. ಅನ್ಯಾವೇಶನಿಮಿತ್ತ ವೈರಿಗಳನ್ನು ಮಾತ್ರ ಭಕ್ತಿಯುಕ್ತರನ್ನಾಗಿ ಮಾಡುವನೆಂದು ಸಿದ್ಧವಾಗುವದು.

'ಕೀಟಃ ಪೇಶಸ್ಕೃತಾ' ಮುಂತಾದ ಶ್ಲೋಕದಲ್ಲಿ(ಎಂಬಲ್ಲಿ)ಚೈದ್ಯಾದಿಗಳು ಭಕ್ತಿಯುಕ್ತರೆಂದು ಪ್ರತಿಪಾದಿಸುವರು ಆದ್ದರಿಂದ ವಿರೋಧವಿಲ್ಲ. ಇದನ್ನು ಆಚಾರ್ಯರೇ ಸ್ಪಷ್ಟಪಡಿಸುವರು-

... ತಾತ್ಪರ್ಯ ...

**ಕೀಟಃ ಪೇಶಸ್ಕೃತಾ ಇತ್ಯಾದಿ ಚೈದ್ಯಾದೀನಾಂ ಭಕ್ತಿಯುತತ್ವಪ್ರತಿಪಾದನಂ । ಸ್ನೇಹಾದ್ಯಾಯತನನಾಶಾದಿನಾ ಅಪ್ಯುಪದ್ರವೋ ಅಸ್ಯ ನಾಸ್ತೀತಿ ನಿರ್ವೈರೇಣ ಇತ್ಯಾದ್ಯುಕ್ತಮ್ ॥**

'ಕೀಟಃ'ಪೇಶಸ್ಕೃತಾ' ಮುಂತಾದ ಕಡೆ ಕೀಟದೃಷ್ಟಾಂತದಿಂದ ಚೈದ್ಯಾದಿಗಳು ಭಕ್ತಿಯುಕ್ತರಾಗಿರುವರು ಎಂದು ಪ್ರತಿಪಾದಿಸುತ್ತಾರೆ. ವೈರದಿಂದ ಹಿಂಸಾ-ದ್ಯುಪದ್ರವಪ್ರಸಕ್ತಿಯಿದ್ದಂತೆ ನಿರ್ವೈರಭಯಾದಿಗಳಿಂದ ಉಪದ್ರವಪ್ರಸಕ್ತಿಯೇ ಇಲ್ಲದ್ದರಿಂದ ೨೩ನೇ ಶ್ಲೋಕ ತಾತ್ಪರ್ಯದಲ್ಲಿ 'ಯಸ್ಮಾತ್ ಕೋಽಪಿ ಉಪದ್ರವೋ ನಾಸ್ತಿ' ಎಂಬುದಕ್ಕೆ ನಿರ್ವೈರದಿಂದ ಮನೋಯೋಗಕ್ಕೆ ಹೇತುತ್ವವು ಎಂಬ ಶಂಕೆ ಬಂದರೆ ಅಲ್ಲಿಯೂ ಉಪದ್ರವಪ್ರಸಕ್ತಿಯನ್ನು ತಿಳಿಸುತ್ತ ಅದರ ಅಭಾವಕ್ಕೆ ಹೇತುತ್ವವನ್ನು ಉಪಪಾದಿಸುವರು. ಸ್ನೇಹಾದ್ಯಾಯತನವೆಂದು ಆದಿಪದದಿಂದ ವೈರಾಭಾವ, ಭಯ, ಕಾಮಗಳನ್ನು ಸ್ವೀಕರಿಸಿಬೇಕು. ಮುಚ್ಯಮಾನ. ಉಪದ್ರವ ನಿರ್ವೈರಪದದಿಂದ ಹೇಳಿದ ವೈರಾಭಾವ ಮೊದಲಿದ್ದರೂ ಸ್ನೇಹವನ್ನು ಮೊದಲು ಹೇಳಿದ್ದು ಪ್ರಸಕ್ತಿಯು ಅಲ್ಲಿ ಶೀಘ್ರದಲ್ಲಿ ಅನುಭವಕ್ಕೆ ಬರುವದರಿಂದ ಸ್ನೇಹಾದಿಗಳಿಗೆ ಆಶ್ರಯವಾದ ಸ್ನೇಹಾದಿಕರ್ತೃಗಳ ಶರೀರದನಾಶದಿಂದ, ರೋಗಾದಿಗಳಿಂದ, ಸ್ನೇಹಾದಿಗಳಿಗೆ ವಿಷಯವಾದವುಗಳಿಗೆ ಮನಃಖೇದವೇನಾಗುವದೋ, ಅದೂ ಸಹ ಭಗವಂತನಿಗೆ ಇಲ್ಲ ಎಂದು ತಿಳಿಸಲು ನಿರ್ವೈರೇಣ ಎಂದಿದ್ದಾರೆ. ಅಂದರೆ ಲೋಕದಲ್ಲಿ ಯಾರು ಯಾರಲ್ಲಿ ಸ್ನೇಹ ಮಾಡುವರು, ಏನನ್ನು ಇಚ್ಛಿಸುವರು, ಯಾರಿಂದ ಹೆದರುವರು. ಅವರಲ್ಲಿ ವೈರಮಾಡುವದಿಲ್ಲ. ಅವರ ಶರೀರನಾಶಾದಿಗಳಾದರೆ ಸ್ನೇಹಾದಿವಿಷಯಕ ಮನಃಖೇದ ಕಂಡಿದೆ. ಅದರಂತೆ ಸ್ನೇಹಾದಿವಿಷಯನಾದ ಭಗವಂತನಿಗೆ ಮನಃಖೇದಾದಿ ಉಪದ್ರವಪ್ರಸಕ್ತಿ ಇಲ್ಲ. ಪ್ರಾಕೃತಶರೀರವಿಲ್ಲದ್ದರಿಂದ ಆದ್ದರಿಂದ ಯಸ್ಮಾದೇವಂ ಕೋಪಿ ಉಪದ್ರವೋ ನಾಸ್ತಿ ಎಂಬುದಕ್ಕೆ ನಿರ್ವೈರದಿಂದ ಮನೋಯೋಗಹೇತುತ್ವೇನ ಹೇಳಿದ್ದು ಉಪಪನ್ನವೇ.

'ಯಥಾ ವೈರಾನುಬಂಧೇನ' ಎಂಬಲ್ಲಿ ವೈರಿಗಳಾದ ಅಸುರರಿಗೆ ಬಹುತ್ವ, ಭಕ್ತರಿಗೆ ಅಲ್ಪತ್ವವೆಂದು ಅಭಿಪ್ರಾಯ ಹೇಳಿದ್ದರು. ಅದಕ್ಕೆ ಶ್ರುತಿಸಂವಾದವನ್ನು ತಿಳಿಸುವರು-

... ತಾತ್ಪರ್ಯ ...

**ತತಃ ಕನೀಯಸಾ ಏವ ದೇವಾ ಜ್ಯಾಯಸಾ ಅಸುರಾ ಇತಿ ಶ್ರುತಿಃ ।**

ದೇವತೆಗಳು ಕಡಿಮೆ ಸಂಖ್ಯೆಯವರು. ಅಸುರರು ಬಹುಸಂಖ್ಯಾಕರು ಎಂದು ಶ್ರುತಿಯು.

೨೮ನೇ ಶ್ಲೋಕದಲ್ಲಿ ನತನ್ಮಯತಾಂ' ಎಂಬುದಕ್ಕೆ ಅಭೇದವೆಂದು ಅರ್ಥ. ತೋರದಿರಲಿ ಎಂಬುದಕ್ಕೆ ಪ್ರಕೃತಸಂಗತ ಅರ್ಥ ತಿಳಿಸುವರು.

**ತನ್ಮಯತಾಂ ಮನಸಸ್ತತ್ರ ಅಭಿನಿವೇಶನಮ್ ॥**

ತನ್ಮಯತಾಂ ಎಂಬುದಕ್ಕೆ ಮನಸ್ಸನ್ನು ಶ್ರೀಹರಿಯಲ್ಲಿರುಸುವದು ಎಂದರ್ಥ.

ಯಥಾ ವೈರಾನುಬಂಧೇನ ಎಂಬುದಕ್ಕೆ ಯಾವ ರೀತಿಯಾಗಿ ಅಸುರರು ವೈರನಿಮಿತ್ತ ಹರಿಯಲ್ಲಿ ಆಗ್ರಹ ವಿಶೇಷವನ್ನು ಹೊಂದುವರೋ, ಹಾಗೆ ಭಕ್ತನು ಭಕ್ತಿಯಿಂದ ತನ್ಮಯತೆ ಹೊಂದುವದಿಲ್ಲ ಎಂಬ ವ್ಯಾಖ್ಯಾನ ವಿಷಯದಲ್ಲಿ ಪ್ರಮಾಣ ಹೇಳುವರು.

**ಮಾಗಧಾದ್ಯಾ ಯಥಾ ನಿತ್ಯಂ ದ್ವೇಷಾದಾಗ್ರಹಿಣೋ ಹರೌ ।**
**ನ ತಥಾಽಽಗ್ರಹಿಣೋ ಭಕ್ತಾ ಋತೇ ಬ್ರಹ್ಮಾಣಮವ್ಯಯಮ್ ॥**
**ಇತಿ ಹರಿವಂಶೇಷು ॥**

ಜರಾಸಂಧನೇ ಮೊದಲಾದವರು ಹೇಗೆ ನಿತ್ಯದಲ್ಲಿಯೂ ದ್ವೇಷದಿಂದ ಶ್ರೀಹರಿಯಲ್ಲಿ ಆಗ್ರಹವುಳ್ಳವರೋ ಹಾಗೆ ಚತುರ್ಮುಖನನ್ನು ಬಿಟ್ಟು ಬೇರೆ ಭಕ್ತರು ನಿತ್ಯದಲ್ಲಿ ಆಗ್ರಹವುಳ್ಳವರಾಗುವದಿಲ್ಲ. ಎಂದು ಹರಿವಂಶದಲ್ಲಿದೆ. 'ಕೀಟಃ ಪೇಶಸ್ಕೃತಾ' ಎಂಬುವದು ಚೈದ್ಯಾದಿಗಳಿಗೆ ಭಕ್ತಿಯುಕ್ತತ್ವಪ್ರತಿಪಾದಿಸಲೆಂದು ಹೇಳಿತ್ತು. ಅದು ಹೇಗೆಂದು ತಿಳಿಸುವರು.

**... ತಾತ್ಪರ್ಯ ...**

**ಯೋಗಃ ಸ್ನೇಹಃ । ಸಂರಂಭಭಯಯುಕ್ತಸ್ನೇಹೇನ । ಪ್ರೀತಿಃ ಸ್ನೇಹಸ್ತಥಾ ಯೋಗಃ ಪ್ರೇಮಬಂಧ ಇತೀರ್ಯತೇ ॥ ಇತಿ ಶಬ್ದನಿರ್ಣಯೇ ॥**

ಯೋಗವೆಂದರೆ ಸ್ನೇಹವು. ಆದ್ದರಿಂದ 'ಸಂರಂಭಭಯಯೋಗೇನ' ಎಂಬುದಕ್ಕೆ ಕೋಪ ಭಯಗಳಿಂದ ಕೂಡಿದ ಸ್ನೇಹದಿಂದ ಎಂದರ್ಥವಾಗುವದು. ಆದ್ದರಿಂದ ಕೀಟವು ಹೇಗೆ ಕೋಪ ಭಯಯುಕ್ತಸ್ನೇಹದಿಂದ ಪೇಶಸ್ಕೃತ ಸಾರೂಪ್ಯ ಹೊಂದುವದೋ ಅದರಂತೆ ಚೈದ್ಯಾದಿಗಳು ವೈರಯುಕ್ತಸ್ನೇಹದಿಂದ ಭಗವತ್ಸರೂಪತೆಯನ್ನು ಹೊಂದುವರು, ಎಂಬರ್ಥ ವಿವಕ್ಷಿತವಾದ್ದರಿಂದ ಭಕ್ತಿಯುಕ್ತತ್ವಪ್ರತಿಪಾದಿತ ವಾಗುವದೆಂದು ಭಾವ. ಯೋಗಶಬ್ದವು ಸ್ನೇಹಾರ್ಥಕವಾಗಿದೆ ಎನ್ನಲು ಪ್ರಮಾಣ ತಿಳಿಸುವರು 'ಪ್ರೀತಿಃ' ಎಂದು.

'ಏವಂ ಕೃಷ್ಣೇ' ಎಂಬ ದಾರ್ಷ್ಟಾಂತಿಕವಾಕ್ಯದಲ್ಲಿ 'ವೈರೇಣ ಧೂತಪಾಪ್ಮಾನಃ' ಎಂದು ವೈರಕ್ಕೆ ಮುಕ್ತಿಹೇತುತ್ವ ಹೇಳಿದ್ದು ಹೇಗೆ ಎಂದರೆ ಹೇಳುವರು-

... ತಾತ್ಪರ್ಯ ...

**ವೈರಯುಕ್ತಯಾಽಪ್ಯನುಚಿಂತಯಾ ತಮಾಪುಃ ।**

ವೈರದಿಂದ ಕೂಡಿದ ಭಕ್ತಿಯಿಂದಲೂ ಶ್ರೀಕೃಷ್ಣನನ್ನು ಹೊಂದಿದರು. ವೈರೇಣ ಎಂಬುದು ಸಹಾರ್ಥೇ ತೃತೀಯಾ ಎಂದು ಸೂಚಿಸಿರುವರು. 'ವೈರಯುಕ್ತಯಾ ಅನುಚಿಂತಯಾ ತಮಾಪುಃ' ಎಂದಿಷ್ಟೇ ಹೇಳಿದರೆ ಅಧಿಕಾರಿಗಳಿಗೆಲ್ಲರಿಗೂ ಅನುಚಿಂತನೆಗೆ ವೈರಯುತತ್ವ ಆವಶ್ಯಕವೆಂದು ತೋರುವದು. ಕಾರಣ ಅಪಿಶಬ್ದ ಅಧ್ಯಾಹಾರ ಮಾಡಿರುವರು. ಅದರಿಂದ ವೈರದಿಂದ ಕೂಡಿದ ಚಿಂತನದಿಂದಲೂ ಅವನನ್ನು ಹೊಂದಿದರು. ಶುದ್ಧಭಕ್ತಿ ಹೊಂದುವನೆಂದೇನು ಹೇಳುವದು ಎಂದು ಕೈಮುತ್ಯಸಿದ್ಧವಾದ್ದರಿಂದ ಮೇಲೆ ಹೇಳಿದ ದೋಷವಿಲ್ಲ.

ಅನುಚಿಂತಾಪದ ಭಕ್ತಿವಾಚಕವೆನ್ನಲು ಪ್ರಮಾಣ ಹೇಳುವರು-

**ಅನುಚಿಂತೇತಿ ತಾಮಾಹುರ್ಭಕ್ತಿಪೂರ್ವಾ ತು ಯಾ ಸ್ಮೃತಿಃ ।। ಇತಿ ಚ ।।**

ಭಕ್ತಿಪೂರ್ವಕವಾದ ಭಗವಂತನ ಸ್ಮರಣೆಯು ಅನುಚಿಂತಾ ಎನಿಸುತ್ತದೆ.

ಈವರೆಗೆ ದೃಷ್ಟಾಂತದಾರ್ಷ್ಟಾಂತಿಕವಾಕ್ಯಗಳಲ್ಲಿ ಭಕ್ತಿಗೇನೇ ಸಾರೂಪ್ಯ ಹೇತುತ್ವ ಹೇಳಲಾಗುತ್ತದೆ. ಎಂದು ಪ್ರತಿಪಾದಿಸಿ ಅದರ ದಾರ್ಢ್ಯಕ್ಕೆ ಸಮಾಖ್ಯಾಪ್ರಮಾಣ ಹೇಳುವರು-

**ಸ್ನೇಹಾದನ್ನಂ ದದಾತೀತಿ ಸ್ವಾಕರ್ಷಣಭಯೇಽಪಿ ಚ ।**
**ವಿದ್ಯಮಾನೇಽಪ್ಯಲ್ಪಕೋಪೇ ಸಂಗತಿಸ್ನೇಹತಸ್ತಥಾ ।।**

**ಪೇಶಸ್ಕೃದ್ರೂಪತಾಂ ಕೀಟೋ ಯಥಾ ಯಾತಿ ತಥೈವ ತು ।**
**ಚೈದ್ಯಾದಯೋಽಸುರಾವೇಶಾದ್ಧರೌ ದ್ವೇಷಯುತಾ ಅಪಿ ।।**

**ನಿಜಸ್ವಭಾವಯಾ ಭಕ್ತ್ಯಾ ನೀತಾ ಹರಿಸರೂಪತಾಮ್ ।**
**ತಥಾ ಹಿ ಕರುಣೋ ವಿಷ್ಣುಃ ಅನ್ಯಾವೇಶಾದ್ಯದಿ ದ್ವಿಷನ್ ।।**

**ಹೀಯತೇ ಕಿಂ ಮಮಾನೇನ ನಿತ್ಯಾನಂದಸ್ವರೂಪಿಣಃ ।**
**ದೇಹಬಂಧಯುತಾನಾಂ ಹಿ ದ್ವೇಷಿಣಾಽಪಕೃತಂ ಭವೇತ್ ।।**

**ಮಮ ಕೋ ಹ್ಯಪರಾಧ್ಯೇತ ನಿರ್ದೋಷಸುಖರೂಪಿಣಃ ।**
**ಅತೋ ಮಯ್ಯಪರಾಧಸ್ತು ಸ್ವಸ್ಮಿನ್ನೇವ ನ ಮೇ ಭವೇತ್ ।।**

**ಅತೋ ಯಚ್ಚಾಸುರಾವೇಶಾತ್ ಕೃತಮೇತೇನ ದುಷ್ಕೃತಮ್ ।**
**ಅನಾದಿಭಕ್ತೋ ಯಸ್ಮಾನ್ಮೇ ಮೋಚಯಿಷ್ಯೇ ತತಸ್ತ್ವಹಮ್ ।।**
**ಇತಿ ಮತ್ವಾ ಮೋಚಯತಿ ಚೈದ್ಯಾದೀನಪಿ ಕೇಶವಃ ।। ಇತಿ ಬ್ರಹ್ಮಾಂಡೇ ।।**

ಭ್ರಮರವು ಸೆಳೆಯುವಾಗ ಕೀಟಕ್ಕೆ ಭಯವು ಹುಟ್ಟಿದರೂ ಆ ಸಮಯದಲ್ಲಿ ಅಲ್ಪಕೋಪ ಬಂದರೂ ಭ್ರಮರದ ಸಹವಾಸದಿಂದುಂಟಾದ ಸ್ನೇಹದಿಂದಲೂ ಅನ್ನವನ್ನು ಕೊಡುತ್ತದೆಂದು ಸ್ನೇಹದಿಂದಲೂ ಭ್ರಮರದಂತೆ ರೂಪವನ್ನು ಹೊಂದುತ್ತದೆ. ಹಾಗೆಯೇ ಚೈದ್ಯಾದಿಗಳು ಅಸುರಾವೇಶದಿಂದ ಶ್ರೀಹರಿಯಲ್ಲಿ ದ್ವೇಷವುಳ್ಳವರಾದರೂ ತಮ್ಮ ಸ್ವಾಭಾವಿಕಭಕ್ತಿಯಿಂದ ಭಗವಂತನ ಸಾರೂಪ್ಯವನ್ನು ಹೊಂದಿರುವರು. ಇದರಿಂದ ಶ್ರೀಹರಿ ಅವಿವೇಕಿ ಏನಲ್ಲ. ಏಕೆಂದರೆ ಶ್ರೀಹರಿಯು ದಯಾಸಮುದ್ರನು. ಚೈದ್ಯಾದಿಗಳು ಅಸುರಾವೇಶದಿಂದ ದ್ವೇಷಿಸಿದರೂ, ನಿತ್ಯಾನಂದಸ್ವರೂಪಿಯಾದ ನನಗೆ ಏನು ಮಾಡಿಯಾರು. ನನಗೇನು ಹಾನಿಯಾಗುವದು. ದೇಹಾಭಿಮಾನವಿದ್ದವರಿಗೆ ದ್ವೇಷಿಗಳು ಅಪಕಾರಮಾಡಬಹುದು. ನಿರ್ದೋಷಾನಂದರೂಪಿಯಾಗಿದ್ದರೂ ಅಜ್ಞಾನಿಗಳು ತಮ್ಮಲ್ಲಿರತಕ್ಕ ಅಪರಾಧವನ್ನು ನನ್ನಲ್ಲಿ ಆರೋಪಿಸುವರು. ವಸ್ತುತಃ ಅಪರಾಧ ನನ್ನ ಸಂಬಂಧ ಅಲ್ಲವೇ ಅಲ್ಲ. ಆದ್ದರಿಂದ ನನಗೆ ಮಾಡಿದ ಅಪರಾಧ ತಮಗೆ ಕೆಡಕು ಮಾಡಿಕೊಂಡಂತೆ. ಆದ್ದರಿಂದ ಶಿಶುಪಾಲಾದಿಗಳಿಂದ ದುಷ್ಕೃತವು ಮಾಡಲ್ಪಟ್ಟರೂ ಅವರು ಅನಾದಿಕಾಲದ ಭಕ್ತರಾದ್ದರಿಂದ ಇವರನ್ನು (ಪಾಪದಿಂದ) ಮೋಚನೆ ಮಾಡುವೆನು. ಎಂದು ತಿಳಿದು ಶ್ರೀಕೃಷ್ಣನು ಚೈದ್ಯಾದಿಗಳನ್ನು ಮೋಚನೆ ಮಾಡುವನು ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. ।।೨೮।।

ದ್ವೇಷಿಗಳಿಗೂ ಕೊನೆಗೆ ಉಂಟಾದ ಭಕ್ತಿಯಿಂದಲೇ ಮುಕ್ತಿ ಎಂಬರ್ಥವನ್ನು ದೃಷ್ಟಾಂತದಿಂದ ಉಪಪಾದಿಸುವರು-

**ಕೀಟಃ ಪೇಶಸ್ಕೃತಾ ರುದ್ಧಃ ಕುಡ್ಯೇ ಯಾಂತಮನುಸ್ಮರನ್ ।**
**ಸಂರಂಭಭಯಯೋಗೇನ ವಿಂದತೇ ತತ್ಸರೂಪತಾಮ್ ।।೨೯।।**

**ಯಥಾ** ಹೇಗೆ **ಪೇಶಸ್ಕೃತಾ** ಭೃಂಗದಿಂದ (ಕುರಡಿಕುಠಾರ) **ಕುಡ್ಯೇ** ತಾನು ಮಾಡಿದ ಗೋಡೆಯಲ್ಲಿಯ ಗೂಡಿನಲ್ಲಿ **ರುದ್ಧಃ** ತಡೆದು ಹಿಡಿಯಲ್ಪಟ್ಟ **ಕೀಟಃ** ಶಾಮವೆಂಬ ಹುಳವು **ಯಾಂತಂ** (ತನ್ನ ಮೇಲೆ ಬಂದು ಕುಳಿತು ಶಬ್ದಮಾಡುತ್ತಿರುವ) ಗೂಡನ್ನು ಬಿಟ್ಟು ಹೊರಹೋಗುವ ದುಂಬಿಯನ್ನು **ಸಂರಂಭಭಯಯೋಗೇನ** ತನ್ನನ್ನು ಹಿಡಿದುಹಾಕಿದೆ ಎಂಬ ಕೋಪ, ತನ್ನನ್ನು ಎಳೆದು ತಂದು(ಭಯದಿಂದ ಸಹಿತವಾದ)ಆಹಾರವನ್ನು ಕೊಟ್ಟು ಕಾಪಾಡಿದ ಸ್ನೇಹದಿಂದಲೂ **ಅನುಸ್ಮರನ್** ಸತತವಾಗಿ ಸ್ಮರಿಸುತ್ತ **ತತ್ಸರೂಪತಾಂ** ಆ ದುಂಬಿಯ ಸದೃಶವಾದ ಆಕಾರವನ್ನು **ವಿಂದತೇ** ಹೊಂದುತ್ತದೆ ಅಂದರೆ ದುಂಬಿಗೆ ಸದೃಶವಾಗುವದೇ ಹೊರತು ಅದೇ ಆಗುವದಿಲ್ಲ.

ವಿಶೇಷ ಃ- ಇಲ್ಲಿ ಸ್ನೇಹಕ್ಕೆ ಪ್ರಾಧಾನ್ಯ. ಪ್ರಾಣಧಾರಣಪೋಷಣ ಯಾವಾಗಲೂ ಇಷ್ಟ. ಕೋಪ ಭಯ ತಾತ್ಕಾಲಿಕ. ಆದ್ದರಿಂದ ಅವುಗಳನ್ನು ವಿಶೇಷಣವನ್ನಾಗಿ ಮಾಡಿ ಸ್ನೇಹವನ್ನು ವಿಶೇಷ್ಯಮಾಡಿರುವರು. ಯೋಗವೆಂದರೆ ಸ್ನೇಹ. 'ಪ್ರೀತಿಃ ಸ್ನೇಹಃ ತಥಾ ಯೋಗಃ ಪ್ರೇಮಬಂಧ ಇತೀರ್ಯತೇ' ಎಂಬ ಕೋಶವಿದೆ. ।।೨೯।।

ಕೀಟದೃಷ್ಟಾಂತದಿಂದ ಚೈದ್ಯಾದಿಗಳಿಗೆ ದ್ವೇಷದಿಂದ ಮುಕ್ತಿಯನ್ನು ಉಪಪಾದಿಸಿದ್ದು ಸರಿಯಲ್ಲವೆಂದರೆ ಹೇಳುವರು.

ದಾರ್ಷ್ಟಾಂತಿಕವನ್ನು ಉಪಪಾದಿಸುವರು-

**ಏವಂ ಕೃಷ್ಣೇ ಭಗವತಿ ಮಾಯಾಮನುಜ ಈಶ್ವರೇ ।**
**ವೈರೇಣ ಧೂತಪಾಪ್ಮಾನಃ ತಮಾಪುರನುಚಿಂತಯಾ ।।೩೦।।**

**ಮಾಯಾಮನುಜೇ** ತನ್ನ ಇಚ್ಛೆಯಿಂದ ಮನುಷ್ಯರಂತೆ ವ್ಯಕ್ತನಾದ **ಈಶ್ವರೇ** ಸರ್ವನಿಯಾಮಕನಾದ **ಭಗವತಿ** ಸಮಗ್ರ ಐಶ್ವರ್ಯವಂತನಾದ **ಕೃಷ್ಣೇ** ಶ್ರೀಕೃಷ್ಣನಲ್ಲಿ **ವೈರೇಣ** ದ್ವೇಷದಿಂದ ಕೂಡಿದ **ಅನುಚಿಂತಯಾ** ಭಕ್ತಿಪೂರ್ವಕ ಸ್ಮರಣೆಯಿಂದ **ಧೂತಪಾಪ್ಮಾನಃ** ಪಾಪಗಳನ್ನು ಕಳೆದುಕೊಂಡ ಶಿಶುಪಾಲ ಮುಂತಾದವರು **ತಂ** ಶ್ರೀಕೃಷ್ಣನನ್ನು **ಆಪುಃ** ಹೊಂದಿದರು. ।।೩೦।।

**ಕಾಮಾತ್ ಸ್ನೇಹಾದ್ ಭಯಾದ್ ದ್ವೇಷಾದ್ ಯಥಾ ಭಕ್ತ್ಯೇಶ್ವರೇ ಮನಃ ।**
**ಆವೇಶ್ಯ ತದಘಂ ಹಿತ್ವಾ ಬಹವಸ್ತದ್ಗತಿಂ ಗತಾಃ ।।೩೧।।**

**ಯಥಾ** ಯಥಾವತ್ತಾದ **ಭಕ್ತ್ಯಾ** ಭಕ್ತಿಯಿಂದ ಸಹಿತವಾಗಿಯೇ **ಕಾಮಾತ್** ಕಾಮದಿಂದ **ಸ್ನೇಹಾತ್** ಸ್ನೇಹದಿಂದ **ಭಯಾತ್** ಭಯದಿಂದ **ದ್ವೇಷಾತ್** ದ್ವೇಷದಿಂದ **ಈಶ್ವರೇ** ಶ್ರೀಹರಿಯಲ್ಲಿ **ಮನಃ** ಮನಸ್ಸನ್ನು **ಆವೇಶ್ಯ** ಇಟ್ಟು **ತದಘಂ** ದ್ವೇಷಾದಿಗಳಿಂದ ಬಂದ ಪಾಪವನ್ನು **ಹಿತ್ವಾ** ಭಕ್ತಿಯಿಂದ ಕಳೆದುಕೊಂಡು **ಬಹವಃ** ಅನೇಕ ಮುಕ್ತಿಯೋಗ್ಯರು **ತದ್ಗತಿಂ** ಆ ಶ್ರೀಹರಿಯ ಲೋಕವನ್ನು **ಗತಾಃ** ಹೊಂದಿದರು.

ಅದರ ಅರ್ಥವನ್ನು ಹೇಳುವರು. ೩೧ನೇ ಶ್ಲೋಕದಲ್ಲಿ ಭಕ್ತಿಯಿಂದ ಹೊಂದಿದಂತೆ ಕಾಮಾದಿಗಳಿಂದಲೂ ಭಗವಂತನ ಲೋಕವನ್ನು ಹೊಂದುವರೆಂದು ತೋರುವದು ಕಾರಣ-

**... ತಾತ್ಪರ್ಯ ...**

**ಕಾಮಾದಿಭಿರಪಿ ಯಥಾವದ್ಭಕ್ತ್ಯಾ ಸಹೈವ ಮನ ಆವೇಶ್ಯ ತದಘಂ ಯತ್ತು ದ್ವೇಷಾದಿಕೃತಂ ಅಘಂ ಯಥಾಭೂತಯಾ ಭಕ್ತ್ಯಾ ಹಿತ್ವಾ ।।೩೧।।**

ಕೃಷ್ಣನಲ್ಲಿ ಕಾಮಸ್ನೇಹಭಯದ್ವೇಷಗಳಿಂದಲೂ ಯೋಗ್ಯವಾದ ಭಕ್ತಿಯಿಂದಲೂ ಕೂಡಿಯೇ ಮನಸ್ಸನ್ನಿಟ್ಟು ದ್ವೇಷದಿಂದ ಪಾಪಮಾಡಿದರೂ ಭಕ್ತಿಯಿಂದ ಪಾಪವನ್ನು ತೊರೆದು ಶ್ರೀಕೃಷ್ಣನ ಲೋಕ ಹೊಂದಿದರೆಂದು ಭಾವ. ।।೩೦।।

ಕಾಮಾದಿಗಳಿಂದ ಭಗವಂತನನ್ನು ಹೊಂದಿದವರನ್ನು ವಿಭಾಗಿಸಿ ತಿಳಿಸುವರು-

**ಗೋಪ್ಯಃ ಕಾಮಾದ್ ಭಯಾತ್ ಕಂಸೋ**
**ದ್ವೇಷಾಚ್ಚೈದ್ಯಾದಯೋ ನೃಪಾಃ ।**
**ಸಂಬಂಧಾದ್ವೃಷ್ಣಯಃ ಸ್ನೇಹಾದ್**
**ಯೂಯಂ ಭಕ್ತ್ಯಾ ವಯಂ ವಿಭೋ** ।।೩೧।।

**ಕಾಮಾತ್** ಭೋಗದ ಲಾಲಸೆಯಿಂದ ಕೂಡಿದ **ಯಥಾ ಭಕ್ತ್ಯಾ** ಯೋಗ್ಯತೆಗೆ ಅನುಗುಣವಾಗಿ ಅನಂತರ ಜನಿಸಿದ ಭಕ್ತಿಯಿಂದ **ಗೋಪ್ಯಃ** ಗೋಪಿಯರು **ಭಯಾತ್** ಯಾವಾಗ ಕೊಲ್ಲುವನೋ ಎಂಬ ಭಯಾನಂತರ ಭಜಿಸಿದ ಭಕ್ತಿಯಿಂದ **ಕಂಸಃ** ಕಂಸಾವಿಷ್ಟರಾದ ಭೃಗುಋಷಿಗಳು **ದ್ವೇಷಾತ್** ದ್ವೇಷಾನಂತರ ಜನಿಸಿದ ಸ್ವಾಭಾವಿಕ ಭಕ್ತಿಯಿಂದ **ಚೈದ್ಯಾದಯಃ ನೃಪಾಃ** ರಾಜರಾದ ಶಿಶುಪಾಲಾದಿಗಳಲ್ಲಿರುವ ಜಯ ಮೊದಲಾದವರು **ಸಂಬಂಧಾತ್** ದೇಹಾನುಬಂಧದಿಂದ ಉಂಟಾದ ಭಕ್ತಿಯಿಂದ **ವೃಷ್ಣಯಃ** ಯಾದವರು **ಸ್ನೇಹಾತ್** ಮಿತ್ರಾದಿಸಾದರಸ್ನೇಹಯುತ ಭಕ್ತಿಯಿಂದ (ಮಹಾತ್ಮ್ಯಜ್ಞಾನಸ್ನೇಹಗಳಿಗೆ ಸಮಪ್ರಧಾನತೆಯಿಂದ) **ಯೂಯಂ** ಪಾಂಡವರು **ಭಕ್ತ್ಯಾ** ಕೇವಲ ಭಕ್ತಿಯಿಂದ ಸ್ನೇಹೋಪಸರ್ಜನಜ್ಞಾನದಿಂದ **ವಯಂ** ನಾರದ ಶುಕ ಇತ್ಯಾದಿ ಹೆಸರಿನ ಮುನೀಶ್ವರರಾದ ನಾವು **ತದ್ಗತಿಂ ಗತಾಃ** ಶ್ರೀಹರಿಯ ಲೋಕವನ್ನು ಹೊಂದುವೆವು (ಹೊಂದಿದರು).

ವಿಶೇಷ ಃ-ಗೋಪಿಯರು ಆ ಜನ್ಮದಲ್ಲಿ ಕಾಮಯುಕ್ತಭಕ್ತರು ದೇವತಾರೂಪದಲ್ಲಿ ಕೇವಲ ಭಕ್ತರು. ಭೃಗುಋಷಿಗಳೂ ಕಂಸಾವಿಷ್ಟರಾದಾಗ ಭಯಯುಕ್ತಭಕ್ತರು. ಚೈದ್ಯಮೊದಲಾದವರಲ್ಲಿದ್ದ ಜಯ ಮೊದಲಾದವರು ತಮ್ಮಲ್ಲಿ ಆವಿಷ್ಟರಾಗಿದ್ದ ಹಿರಣ್ಯಕಶಿಪು ಮೊದಲಾದವರ ಸಂಬಂಧದಿಂದ ಅವರಲ್ಲಿದ್ದವರೆಂದು (ಸ್ವನಿಷ್ಠ ಆವೇಶಕರ್ತೃತ್ವಸಂಬಂಧೇನ) ಕರೆಸಿಕೊಳ್ಳುವರು. ಪಿಶಾಚಗಳಂತೆ ಆವಿಷ್ಟರಾದವರು ದೈತ್ಯರು. ಮಾಹಾತ್ಮ್ಯಜ್ಞಾನಪೂರ್ವಕಸುದೃಢಸ್ನೇಹವೇ ಭಕ್ತಿ. ಕೆಲವು ಭಕ್ತರಲ್ಲಿ ಮಾಹಾತ್ಮ್ಯಜ್ಞಾನವೆಂಬ ಬಹುಮಾನ, ಸ್ನೇಹಗಳಲ್ಲಿ ಸಮಾನತೆ ಇರುವದು. ಕೆಲವರಲ್ಲಿ ಮಾಹಾತ್ಮ್ಯಜ್ಞಾನವೇ ಹೆಚ್ಚು. ಮೋಕ್ಷಾಧಿಕಾರಿಗಳು ಅಧಮ ಮತ್ತು ಉತ್ತಮ ಎಂದು ಎರಡೇ ಬಗೆಯೆಂಬ ಪಕ್ಷದಲ್ಲಿ ಅಧಮಾಧಿಕಾರಿಗಳಾದ ಋಷ್ಯಾದಿಗಳಲ್ಲಿ ಮಹಾತ್ಮ್ಯಜ್ಞಾನಪೂರ್ವಕಸ್ನೇಹ ಕಡಿಮೆ. ಉತ್ತಮಾಧಿಕಾರಿಗಳಾದ ದೇವತೆಗಳಲ್ಲಿ

ಮಾಹಾತ್ಮ್ಯಜ್ಞಾನ ಸ್ನೇಹಗಳು ಸಮಾನ. ಋಷ್ಯಾದಿಗಳಿಗಿಂತ ಯಾವಾಗಲೂ ಇವರಲ್ಲಿ ಮಾಹಾತ್ಮ್ಯಜ್ಞಾನವು ಅಧಿಕವಾಗಿಯೇ ಇರುವದು. ಈ ಎರಡು ಬಗೆಯ ಅಧಿಕಾರಿಗಳಲ್ಲಿಯೂ ಆ ಆ ಪಂಗಡದಲ್ಲಿಯೂ ತಾರತಮ್ಯ ಇದ್ದೇ ಇರುವದು.

ಅಧಿಕಾರಿಗಳು ಅಧಮ, ಮಧ್ಯಮ, ಉತ್ತಮರೆಂದು ಮೂರುವಿಧ ಎಂಬ ಪಕ್ಷದಲ್ಲಿ ಅಧಮರಲ್ಲಿ ಸ್ನೇಹಕ್ಕಿಂತ ಮಾಹಾತ್ಮ್ಯಜ್ಞಾನ ಹೆಚ್ಚು, ಮಧ್ಯಮರಲ್ಲಿ ಎರಡೂ ಸಮಾನ ಉತ್ತಮರಲ್ಲಿ ಮಾಹಾತ್ಮ್ಯಜ್ಞಾನಕ್ಕಿಂತ ಸ್ನೇಹ ಅಧಿಕ. ಇವೆಲ್ಲವೂ ತಾರತಮ್ಯಾನುಗುಣವಾಗಿ ಹೆಚ್ಚಾಗಿರುವವೆಂದು ತಿಳಿಯಬೇಕು.

ಶ್ಲೋಕಕ್ಕೆ ಕಾಮಾದಿಗಳಿಂದ ಭಗವತ್ಪ್ರಾಪ್ತಿ ಭಕ್ತಿಯಿಂದಲ್ಲ ಎಂಬಂತೆ ಅರ್ಥ ತೋರುವದು. ಕಾರಣ ಅಭಿಪ್ರಾಯ ತಿಳಿಸುವರು-

**... ತಾತ್ಪರ್ಯ ...**

**ಗೋಪ್ಯಃ ಕಾಮಯುತಾಃ ಭಕ್ತಾಃ ಕಂಸಾವಿಷ್ಟಃ ಸ್ವಯಂ ಭೃಗುಃ ।**
**ಜ್ಞೇಯೋ ಭಯಯುತೋ ಭಕ್ತಶ್ಚೈದ್ಯಾದಿಸ್ಥಾ ಜಯಾದಯಃ ॥**

**ವಿದ್ವೇಷಸಂಯುತಾ ಭಕ್ತಾ ವೃಷ್ಣಯೋ ಬಂಧುಸಂಯುತಾ ।**
**ಬಹುಮಾನಸ್ನೇಹಸಾಮ್ಯಾದ್ದೇವಾ ಭಕ್ತಾ ಪ್ರಕೀರ್ತಿತಾಃ ॥**

**ಸ್ನೇಹೋಪಸರ್ಜನಾದೇವ ಬಹುಮಾನಾನ್ಮುನೀಶ್ವರಾಃ ।**
**ಬಹುಮಾನೋಽಪಿ ದೇವಾನಾಮೃಷಿಭ್ಯೋಽಪ್ಯಧಿಕೋ ಮತಃ ।**
**ಬ್ರಹ್ಮವೀಂದ್ರೇಂದ್ರಕಾಮಾದೇರಿತರೇಷಾಂ ಯಥಾಕ್ರಮಮ್ ॥**

**ಇತಿ ಬ್ರಹ್ಮತರ್ಕೇ ॥**

ಗೋಪಿಕಾಸ್ತ್ರೀಯರು ಕಾಮಯುಕ್ತಭಕ್ತರು, ಕಂಸನಲ್ಲಿ ಆವಿಷ್ಟನಾದ ಭೃಗುಋಷಿಯು ಭಯಯುತಭಕ್ತನು. ಶಿಶುಪಾಲಾದಿಗಳಲ್ಲಿರತಕ್ಕ ಜಯಾದಿಗಳು ದ್ವೇಷಯುತ ಭಕ್ತರು. ಯಾದವರು ಬಂಧುತ್ವದಿಂದ ಕೂಡಿದ ಭಕ್ತರು, ದೇವತೆಗಳು ನಿರುಪಾಧಿಕಸ್ನೇಹವುಳ್ಳವರು ಮತ್ತು ಭಗವದ್ವಿಷಯಕಮಾಹಾತ್ಮ್ಯಜ್ಞಾನವುಳ್ಳವರೂ ಆದ ಕಾರಣ ಸಂಪೂರ್ಣಭಕ್ತರು. ಋಷಿಶ್ರೇಷ್ಠರು, ಅಪ್ರಚುರಸ್ನೇಹ, ಪ್ರಚುರಮಾಹಾತ್ಮ್ಯ ಜ್ಞಾನವುಳ್ಳ ಭಕ್ತರು. ದೇವತೆಗಳಿಗೆ ಋಷಿಗಳಿಗಿಂತ ಭಕ್ತಿಮಾತ್ರ ಅಧಿಕವಲ್ಲ ಮಾಹಾತ್ಮ್ಯಜ್ಞಾನವೂ ಹೆಚ್ಚಿದೆ. ಸೂರ್ಯಾದಿದೇವತೆಗಳಿಗಿಂತ ಬ್ರಹ್ಮ ಗರುಡ ಇಂದ್ರ ಮನ್ಮಥ ಮೊದಲಾದವರಿಗೂ ಅವರ ಸ್ತ್ರೀಯರಿಗೂ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವೂ ಅಧಿಕವಾಗಿದೆ. ಇದೆಲ್ಲ ಅವರವರ ತಾರತಮ್ಯಾನುಸಾರ ಇರುವದೆಂದು ತಿಳಿಯಬೇಕು. ಎಂದು ಬ್ರಹ್ಮತರ್ಕದಲ್ಲಿದೆ. ಎಂದು ಭಾವ. ॥೩೨॥

ಮೇಲೆ ಹೇಳಿದ ಭಕ್ತಿಯ ಉಪಾಯಗಳಲ್ಲಿ ವೇನನಿಗೆ ಒಂದು ಇರಬಹುದು. ಆದ್ದರಿಂದ ಅವನನ್ನೇಕೆ ತಮಸ್ಸಿಗೆ ಹಾಕಿದ್ದು ಎಂದರೆ ಹೇಳುವರು-

**ಕತಮೋಽಪಿ ನ ವೇನಸ್ಯ ಪಂಚಾನಾಂ ಪುರುಷಂ ಪ್ರತಿ ।**
**ತಸ್ಮಾತ್ ಕೇನಾಪ್ಯುಪಾಯೇನ ಮನಃ ಕೃಷ್ಣೇ ನಿವೇಶಯೇತ್ ॥೩೨॥**

೧) **ಪುರುಷಂ ಪ್ರತಿ** ಶ್ರೀಹರಿಯನ್ನು ಕುರಿತು **ವೇನಸ್ಯ** ವೇನನಿಗೆ **ಪಂಚಾನಾಂ** ಕಾಮಾದಿ ಐದರ ಮಧ್ಯದಲ್ಲಿ **ಕತಮೋಽಪಿ** ಯಾವುದು ಕೂಡ **ನ** ಇಲ್ಲ **ತಸ್ಮಾತ್** ಆದ್ದರಿಂದ **ಕೇನಾಪ್ಯುಪಾಯೇನ** ಕಾಮಾದಿ ಯಾವುದಾದರೂ ಒಂದು ಉಪಾಯದಿಂದ **ಮನಃ** ಮನಸ್ಸನ್ನು **ಕೃಷ್ಣೇ** ಕೃಷ್ಣನಲ್ಲಿ **ನಿವೇಶಯೇತ್** ಇಡಬೇಕು.

ಈ ಶ್ಲೋಕದಲ್ಲಿ 'ಕತಮ' ಎಂಬುದಕ್ಕೆ ವಿಶೇಷ್ಯವು ತೋರುವದಿಲ್ಲ. ಆದ್ದರಿಂದ ಅಧ್ಯಾಹಾರ ಮಾಡಿ ಯೋಜಿಸುವರು-

**... ತಾತ್ಪರ್ಯ ...**

**ಕತಮೋಽಪಿ ಭಕ್ತಿಯೋಗೋ ನ ವೇನಸ್ಯ । ತಸ್ಮಾತ್ಕೇನಾಪಿ ಪ್ರಕಾರೇಣ ಉಪಾಯೇನೈವ ಮನೋ ನಿವೇಶಯೇತ್ । ನಾನುಪಾಯೇನ ।**

೨)'ಭಕ್ತಿಯೋಗಃ' ಎಂಬುದು ವಿಶೇಷ್ಯವೆಂದು ತಿಳಿಯಬೇಕು.

ಇಲ್ಲಿ 'ಕೇನಾಪ್ಯುಪಾಯೇನ' ಎಂದಿದ್ದರಿಂದ ಕೇವಲ ದ್ವೇಷದಿಂದಲೂ ಮುಕ್ತಿ ಎಂದು ತೋರುವುದು. ಆದ್ದರಿಂದ ಏವಕಾರವನ್ನು ಅಧ್ಯಾಹರಿಸಿ ವ್ಯಾಖ್ಯಾನಿಸುವರು-

**ಉಪಾಯೋ ಭಕ್ತಿರುದ್ದಿಷ್ಟಾ ದ್ವೇಷಾದ್ಯಾ ಅನುಪಾಯಕಾಃ ॥ ಇತಿ ಶಬ್ದನಿರ್ಣಯೇ ॥**

೩) ಕಾಮಾದಿಗಳಲ್ಲಿ ಯಾವುದಾದರೂ ಒಂದು ಪ್ರಕಾರದಿಂದ ಭಕ್ತಿಯಿಂದಲೇ ಕೃಷ್ಣನಲ್ಲಿ ಮನಸ್ಸನ್ನು ಇಡಬೇಕು. ಕೇವಲ ದ್ವೇಷದಿಂದ ಅಲ್ಲ ಎಂದರ್ಥ.

ಕಾಮಾದಿಗಳಿಂದ ಭಿನ್ನವಾದ ಉಪಾಯಗಳಾವವು ಎಂಬುದನ್ನು ಇಲ್ಲಿ ಪ್ರಮಾಣದಿಂದ ತಿಳಿಸಿರುವರು. ॥೩೨॥

'ಕೀಟಃ ಪೇಶಸ್ಕೃತಾ ರುದ್ಧಃ' ಎಂಬಲ್ಲಿ ಶಿಶುಪಾಲಾದಿಗಳು ಸ್ವರೂಪತಃ ಭಕ್ತರೆಂದೂ ಅಸುರಾವೇಶದಿಂದ ದ್ವೇಷಿಗಳಾಗಿದ್ದರೆಂದು ಹೇಳಿತ್ತು. ಅದಕ್ಕೆ ಕಾರಣವನ್ನು ಇಲ್ಲಿ ಹೇಳುತ್ತಾರೆ-

**ಮಾತೃಷ್ವಸ್ರೇಯೋ ವಶ್ಚೈದ್ಯೋ ದಂತವಕ್ರಶ್ಚ ಪಾರ್ಥಿವ ।**
**ಪಾರ್ಷದಪ್ರವರೌ ವಿಷ್ಣೋರ್ವಿಪ್ರಶಾಪಾತ್ ಪದಚ್ಯುತೌ ॥೩೪॥**

**ಪಾರ್ಥಿವ** ಧರ್ಮರಾಜನೇ **ವಃ** ನಿಮ್ಮ **ಮಾತೃಷ್ವಸ್ರೇಯಃ** ಚಿಕ್ಕಮ್ಮನ ಮಗನಾದ **ಚೈದ್ಯಃ** ಶಿಶುಪಾಲನು **ಚ** ಮತ್ತು **ದಂತವಕ್ರಃ** ದಂತವಕ್ರನು **ವಿಷ್ಣೋಃ** ವಿಷ್ಣುವಿನ **ಪಾರ್ಷದಪ್ರವರೌ** ದ್ವಾರಪಾಲಕರಲ್ಲಿ ಉತ್ತಮರಾದ ಜಯವಿಜಯರು **ವಿಪ್ರಶಾಪಾತ್** ಸನಕಾದಿಬ್ರಾಹ್ಮಣರ ಶಾಪದಿಂದ **ಪದಚ್ಯುತೌ** ತಮ್ಮ ಪದದಿಂದ ಭ್ರಷ್ಟರಾದರು.

ಈ ಶ್ಲೋಕಕ್ಕೆ ಹಿಂದಿನಿಂದ ಸಂಗತಿ ತೋರದಿರುವದರಿಂದ ಅದನ್ನು ಹೇಳುವರು-

**... ತಾತ್ಪರ್ಯ ...**

**ಸ್ವತೋ ಭಕ್ತಾಃ ಚೈದ್ಯಾದಯೋಽಪಿ ಪರಾವೇಶಾದ್ ದ್ವೇಷಿಣಃ ಇತ್ಯತ್ರ ಹೇತುಃ ಮಾತೃಷ್ವಸ್ರೇಯ ಇತ್ಯಾದಿ ॥**

ಇತಿ ಶಬ್ದದ ನಂತರ ಉಕ್ತಂ ಎಂದು, ಹೇತುಶಬ್ದದ ನಂತರ ಉಚ್ಯತೇ ಎಂದು ಶೇಷಮಾಡಿಕೊಳ್ಳಬೇಕು. ಹಿಂದೆ ಶಿಶುಪಾಲಾದಿಗಳು ಸ್ವಭಾವತಃ ಭಕ್ತರಾದರೂ ಅಸುರಾವೇಶದಿಂದ ದ್ವೇಷಿಗಳೆಂದು ಹೇಳಲ್ಪಟ್ಟಿತ್ತು. ಇಲ್ಲಿ ಮಾತೃಷ್ವಸ್ರೇಯ ಮುಂತಾಗಿ ಅದಕ್ಕೆ ಕಾರಣವು ಹೇಳಲ್ಪಡುವದು ಎಂದು ಭಾವ. ಸ್ವತಃ ಭಕ್ತರು ಎಂಬುದಕ್ಕೆ ದ್ವಾರಪಾಲಕರೆಂಬುದು. ಅಸುರಾವೇಶದಿಂದ ದ್ವೇಷಿಗಳು ಎಂಬುದಕ್ಕೆ ವಿಪ್ರಶಾಪದಿಂದ ಪದಚ್ಯುತಿಯು ಕಾರಣವೆಂದರ್ಥ. ।।೩೪।।

ವಿಪ್ರಶಾಪದಿಂದ ಪದಚ್ಯುತರಾದರೆಂದು ಕೇಳಿ ಮುಂದಿನ ಎರಡು ಶ್ಲೋಕಗಳಿಂದ ಧರ್ಮರಾಜನು ಪ್ರಶ್ನಿಸುವನು.

**ಯುಧಿಷ್ಠಿರ ಉವಾಚ**

**ಕೀದೃಶಃ ಕಸ್ಯ ವಾ ಶಾಪೋ ಹರಿದಾಸಾಭಿಮರ್ಶನಃ ।**
**ಅಶ್ರದ್ಧೇಯ ಇವಾಭಾತಿ ಹರೇರೇಕಾಂತಿನಾಂ ಭವಃ ।।೩೫।।**

**ಹರಿದಾಸಾಭಿಮರ್ಶನಃ** ಭಗವದ್ಭಕ್ತರಾದ ಜಯಾದಿಗಳನ್ನು ತಲುಪಿದ (ತೊಂದರೆಗೀಡು ಮಾಡಿದ)**ಶಾಪಃ** ಶಾಪವು **ಕೀದೃಶಃ** ಯಾವ ರೀತಿಯದು (ಬ್ರಾಹ್ಮಣರದೆಂದು ಸಾಮಾನ್ಯ ತಿಳಿದಿದ್ದರೂ ಅವರು ಯಾರು ಎಂದು ತಿಳಿಯಲು ಪ್ರಶ್ನೆ) **ಹರೇಃ** ಶ್ರೀಹರಿಯ **ಏಕಾಂತಿನಾಂ** ನಿಯತಭಕ್ತರಿಗೆ **ಭವಃ** ಶರೀರಸಂಬಂಧವೆಂಬ ಉತ್ಪತ್ತಿಯು ಪದಭ್ರಂಶರೂಪ ಶಾಪವು **ಅಶ್ರದ್ಧೇಯ ಇವ ಆಭಾತಿ** ನಂಬಲರ್ಹವಲ್ಲವೆಂಬಂತೆ ತೋರುತ್ತದೆ. ।।೩೫।।

ಅಶ್ರದ್ಧೇಯತ್ವವನ್ನೇ ಉಪಪಾದಿಸುತ್ತ ಪ್ರಶ್ನಿಸುವನು.

**ದೇಹೇಂದ್ರಿಯಾಸುಹೀನಾನಾಂ ವೈಕುಂಠಪುರವಾಸಿನಾಮ್ ।**
**ದೇಹಸಂಬಂಧಸಂಬಂಧಮೇತದಾಖ್ಯಾತುಮರ್ಹಸಿ ।।೩೬।।**

**ದೇಹೇಂದ್ರಿಯಾಸುಹೀನಾನಾಂ** ಪ್ರಾಕೃತದೇಹ,ಸ್ಥೂಲವಾದಇಂದ್ರಿಯ-ಪ್ರಾಣಗಳಿಲ್ಲದ **ವೈಕುಂಠಪುರವಾಸಿನಾಂ** ವೈಕುಂಠನಾಮಕ ಶ್ರೀಹರಿಯ ವೈಕುಂಠವೆಂಬ ಪುರದಲ್ಲಿ ವಾಸಿಸುವವರಿಗೆ **ದೇಹಸಂಬಂಧಸಂಬಂಧಂ** ದೇಹಸಂಬಂಧವೆಂಬ ಜನ್ಮಕ್ಕೆ ನಿಮಿತ್ತವನ್ನು **ಏತತ್** ಜನ್ಮಕ್ಕೆ ಕಾರಣವಾದ ಶಾಪದ ನಿಮಿತ್ತವನ್ನು **ಆಖ್ಯಾತುಂ ಅರ್ಹಸಿ** ಹೇಳಲು ಯೋಗ್ಯರಾಗಿರುವಿರಿ.

ದೇಹಸಂಬಂಧ, ಅದಕ್ಕೆ ನಿಮಿತ್ತವಾದ ಶಾಪ, ಹಾಗೂ ಶಾಪಕ್ಕೆ ನಿಮಿತ್ತ ಈ ಮೂರನ್ನು ವಿವರಿಸಿರಿ ಎಂದು ಅಭಿಪ್ರಾಯ. ಇದರಿಂದ ಶಾಪವು ಅನುಚಿತವೆಂಬುದಕ್ಕೆ ಮೂರು ಕಾರಣಗಳನ್ನು ಹೇಳಿದಂತಾಯಿತು. ೧) ನಿಯತಭಕ್ತರಾದ್ದರಿಂದ ಬೇರೆಯವರಿಗೆ ತೊಂದರೆಕೊಡುವವರಲ್ಲ ಆದ್ದರಿಂದ ಶಾಪಕ್ಕೆ ಕಾರಣವಿಲ್ಲ ೨) ಪ್ರಾಕೃತ ದೇಹಾದಿರಹಿತರಾದ್ದರಿಂದ ಮತ್ತೆ ಉತ್ಪತ್ತಿಗೆ ಅವಕಾಶವಿಲ್ಲ ೩) ವೈಕುಂಠಲೋಕಕ್ಕೆ ಹೋದವರು ಹಿಂತಿರುಗಿ ಸಂಸಾರಕ್ಕೆ ಬರುವದಿಲ್ಲವಾದ್ದರಿಂದ ಮತ್ತೆ ಜನ್ಮವಿಲ್ಲ. ವೈಕುಂಠವಾಸಿಗಳೆಂಬುದು ದೇಹಾದಿಗಳಿಲ್ಲವೆಂಬುದಕ್ಕೆ ಕಾರಣ. ।।೩೬।।

**ನಾರದ ಉವಾಚ**

**ಏಕದಾ ಬ್ರಹ್ಮಣಃ ಪುತ್ರಾ ವಿಷ್ಣೋರ್ಲೋಕಂ ಯದೃಚ್ಛಯಾ ।**
**ಸನಂದನಾದಯೋ ಜಗ್ಮುಶ್ಚರಂತೋ ಭುವನತ್ರಯಮ್ ।।೩೭।।**

**ಬ್ರಹ್ಮಣಃ** ಚತುರ್ಮುಖ ಬ್ರಹ್ಮನ **ಪುತ್ರಾಃ** ಮಾನಸಪುತ್ರರಾದ **ಸನಂದನಾದಯಃ** ಸನಂದನ ಮೊದಲಾದವರು **ಭುವನತ್ರಯಂ ಚರಂತಃ** ಭಗವದ್ಭಕ್ತರನ್ನು ಕಾಣುವ ಇಚ್ಛೆಯಿಂದ ಮೂರು ಲೋಕಗಳನ್ನು ಸಂಚರಿಸುತ್ತ **ಏಕದಾ** ಒಂದು ಕಾಲದಲ್ಲಿ **ಯದೃಚ್ಛಯಾ** ಶ್ರೀಹರಿಯ ಇಚ್ಛೆಯಿಂದ **ವಿಷ್ಣೋಃ ಲೋಕಂ** ವಿಷ್ಣುವಿನ ಲೋಕವಾದ ವೈಕುಂಠದ ಅಮುಕ್ತಸ್ಥಾನಕ್ಕೆ **ಜಗ್ಮುಃ** ಹೋದರು. ।।೩೭।।

**ಪಂಚಷಡ್ಢಾಯನಾರ್ಭಾಭಾಃ ಪೂರ್ವೇಷಾಮಪಿ ಪೂರ್ವಜಾಃ ।**
**ದಿಗ್ವಾಸಸಃ ಶಿಶೂನ್ ಮತ್ವಾ ದ್ವಾಃಸ್ಥೌ ತಾನ್ ಪ್ರತ್ಯಷೇಧತಾಮ್ ।।೩೮।।**

**ಪಂಚಷಡ್ಢಾಯನಾರ್ಭಾಭಾಃ** ಐದಾರು ವರ್ಷದ ಮಕ್ಕಳಂತೆ ಕಾಂತಿಯುಳ್ಳ ಆದರೆ **ಪೂರ್ವೇಷಾಂ ಅಪಿ ಪೂರ್ವಜಾಃ** (ಮೊದಲೇ ಸೃಷ್ಟರಾದ)ರುದ್ರಾದಿಗಳಿಗೂ ಮೊದಲು ಜನಿಸಿದ **ದಿಗ್ವಾಸಸಃ** ದಿಗಂಬರರಾದ ಸನಂದನಾದಿಗಳನ್ನು **ದ್ವಾಃಸ್ಥೌ** ದ್ವಾರಪಾಲಕರಾದ ಜಯವಿಜಯರು **ತಾನ್** ಅವರನ್ನು **ಶಿಶೂನ್ ಮತ್ವಾ** ಮಕ್ಕಳೆಂದು ತಿಳಿದು **ಪ್ರತ್ಯಷೇಧತಾಂ** ಕೈಯಲ್ಲಿದ್ದ ದಂಡವನ್ನು ಅಡ್ಡಹಿಡಿದು ತಡೆದರು.

ಯುಧಿಷ್ಠಿರನು ಸಯುಕ್ತಿ ಪ್ರಶ್ನೆ ಮಾಡಿದ್ದಕ್ಕೆ ಈ ಶ್ಲೋಕದಿಂದ ಏನು ಉತ್ತರ ಕೊಟ್ಟಂತಾಯಿತು ಎಂದರೆ ಉತ್ತರಜ್ಞಾಪಕಪದವನ್ನು ತೋರಿಸುತ್ತ ತಾತ್ಪರ್ಯ ಹೇಳುವರು-

**... ತಾತ್ಪರ್ಯ ...**

**ದ್ವಾಃಸ್ಥಾವಿತ್ಯನೇನ ಅಧಿಕಾರಸ್ಥತ್ವಮುಕ್ತಮ್ ।**

**ಅಧಿಕಾರಸ್ಥಿತಾಶ್ಚೈವ ವಿಮುಕ್ತಾಶ್ಚ ದ್ವಿಧಾ ಜನಾಃ ।**
**ವಿಷ್ಣುಲೋಕಸ್ಥಿತಾಸ್ತೇಷಾಂ ವರಶಾಪಾದಿಯೋಗಿನಃ ॥**

**ಅಧಿಕಾರಸ್ಥಿತಾ ಮುಕ್ತಿಂ ನಿಯತಂ ಪ್ರಾಪ್ನುವಂತಿ ಚ ।**
**ವಿಮುಕ್ತ್ಯನಂತರಂ ತೇಷಾಂ ವರಶಾಪಾದಯೋ ನ ತು ॥**

**ದೇಹೇಂದ್ರಿಯಾಸುಯುಕ್ತಾಶ್ಚ ಪೂರ್ವಂ ಪಶ್ಚಾನ್ನ ತೈರ್ಯುತಾಃ ।**
**ಅಪ್ಯಭಿಮಾನಿಭಿಸ್ತೇಷಾಂ ದೇವೈಃ ಸ್ವಾತ್ಮೋತ್ತಮೈರ್ಯುತಾಃ ॥**

**ಇತಿ ತಂತ್ರಸಾರೇ ॥**

ದ್ವಾರಪಾಲಕರು ಎಂಬುದರಿಂದಲೇ ಅಧಿಕಾರದಲ್ಲಿದ್ದವರೆಂದು ಹೇಳಿದಂತಾಯಿತು. 'ಪ್ರತ್ಯಷೇಧತಾಂ' ಎಂಬುದರಿಂದ ಶಾಪನಿಮಿತ್ತಮಾತ್ರ ಹೇಳಿದಂತಾಯಿತು. ಶಾಪ ಪ್ರಕಾರ ಹೇಳುತ್ತಾರೆ. 'ದೇಹೇಂದ್ರಿಯಾಸುಹೀನಾನಾಂ' ಮುಂತಾದ ಮಾತುಗಳಿಂದ. ಹುಟ್ಟುವದು ಅಸಂಭಾವಿತವೆಂಬ ಶಂಕೆ ಹೇಗೆ ನಿವಾರಣೆಯಾಯಿತು ಎಂಬುದಕ್ಕೆ ತಾತ್ಪರ್ಯಕಾರರು ಪ್ರಮಾಣಗಳನ್ನು ಹೇಳುವ ಮೂಲಕ ಶಂಕೆಯನ್ನು ಪರಿಹರಿಸುವರು. ಆ ಪ್ರಮಾಣದ ಅಭಿಪ್ರಾಯವು ಹೀಗೆ.

ವಿಷ್ಣುವಿನ ಪಾರ್ಷದರು ಗರುಡ ಅನಂತ, ಹಾಗೂ ಜಯ, ವಿಜಯಾದಿಗಳು ಎಂದು ಎರಡು ವಿಧರಾದವರು. ವೈಕುಂಠಾದಿಧಾಮತ್ರಯಗಳಲ್ಲಿ ಪ್ರದೇಶಗಳು ಎರಡು ವಿಧ. ಅಮುಕ್ತಗಮ್ಯ ಮುಕ್ತಮಾತ್ರಗಮ್ಯವೆಂದು. ಅಂದಮೇಲೆ ಧರ್ಮರಾಜನು ಹೇಳಿದ ಮೂರು ಕಾರಣಗಳು ಅಸಿದ್ಧ. ಆದ್ದರಿಂದಲೇ ಶೇಷನು ಲಕ್ಷ್ಮಣನಾಗಿ ಜನಿಸಿದನು. ಗರುಡನಿಗೆ ಶಾಪದಿಂದ ಅವತಾರವಿಲ್ಲದಿರುವದು. ಸನಂದನಾದಿಗಳಿಗೂ ಲಿಂಗದೇಹ ಉಂಟು. ವರಾಹಕಲ್ಪದಲ್ಲಿ ಬ್ರಹ್ಮನಿಂದ ಜಾತಶರೀರವುಳ್ಳವರು ಆದ್ದರಿಂದ ಅಪರಾಧ,ಶಾಪ,ತತ್ಪ್ರಯುಕ್ತ ಜನ್ಮಾದಿಗಳು ಎಲ್ಲವೂ ಯುಕ್ತವೆಂದಂತಾಯಿತು. ಗರುಡಾನಂತರ ಮುಂತಾದ ಪಾರ್ಷದರು ಅಧಿಕಾರಸ್ಥರು, ವಿಮುಕ್ತರು ಎಂದು ಎರಡುವಿಧ ಜನರು ವಿಷ್ಣುಲೋಕದಲ್ಲಿ ಇರುವವರು. ಇವರಲ್ಲಿ ಅಧಿಕಾರದಲ್ಲಿದ್ದವರು ಅಧಿಕಾರದಲ್ಲಿರುವಾಗ ವರಶಾಪಾದಿಗಳನ್ನು ಹೊಂದಿ ಅದರಿಂದ ಸುಖದುಃಖಗಳನ್ನೂ ಹೊಂದುವರು. ಬ್ರಹ್ಮದೇವರು ಲಯವಾಗುವಾಗ

ನಿಯಮೇನ ಮುಕ್ತಿಗೆ ಹೋಗುವರು. ಮುಕ್ತಿಯ ನಂತರ ಅವರಿಗೆ ವರಶಾಪಾದಿಗಳು ಇಲ್ಲವೇ ಇಲ್ಲ. ಮೊದಲು ದೇಹೇಂದ್ರಿಯಪ್ರಾಣಗಳಿಂದ ಕೂಡಿದವರು ಮುಕ್ತ್ಯನಂತರ ದೇಹಾದಿಗಳಿಂದ ರಹಿತರಾಗುತ್ತಾರೆ. ಮೊದಲು ದೇಹೇಂದ್ರಿಯಾಭಿಮಾನಿ ದೇವತೆಗಳಿಂದಲೂ ಕೂಡಿದವರು. ನಂತರ ತಮಗಿಂತ ಉತ್ತಮರಾದ ಮುಕ್ತರಾದ ದೇವತೆಗಳಿಂದ ಕೂಡಿದವರು ಎಂದು ತಂತ್ರಸಾರದಲ್ಲಿದೆ.

'ಓಂ ಅತ ಏವ ಚಾನನ್ಯಾಧಿಪತಿಃ ಓಂ' 'ಮುಕ್ತಸ್ವಕೀಯಾವರಯಂತ್ರಿತಾಸ್ತೇ' ಎಂಬ ಅನುವ್ಯಾಖ್ಯಾನದಿಂದ ತಿಳಿದು ಬರುವದು. ಅಂತಹ ಜಯವಿಜಯರು ಅಧಿಕಾರಸ್ಥಿತರಾದ್ದರಿಂದ ಮುಕ್ತರಲ್ಲ. ಆದ್ದರಿಂದ ವೈಕುಂಠಪುರವಾಸಿಗಳಾದರೂ ವರಶಾಪಯೋಗ್ಯರೇ ಎಂದು ಉತ್ತರವನ್ನೂ, 'ದ್ವಾಃಸ್ಥೌ' ಎಂಬುದರಿಂದ ತಿಳಿಸಿದಂತಾಯಿತು. ।।೩೮।।

**ಅಶಪನ್* ಕುಪಿತಾ ಏವಂ ಯುವಾಂ ವಾಸಂ ನ ಚಾರ್ಹಥಃ ।**
**ರಜಸ್ತಮೋಭ್ಯಾಂ ರಹಿತೇ ಪಾದಮೂಲೇ ಮಧುದ್ವಿಷಃ ।।೩೯।।**

**ಏವಂ** ಈ ರೀತಿಯಾಗಿ ತಡೆದಿದ್ದರಿಂದ **ಕುಪಿತಾಃ** ಸಿಟ್ಟಾದ ಸನಂದಾದಿಗಳು **ಯುವಾಂ** ನೀವಿಬ್ಬರು **ರಜಸ್ತಮೋಭ್ಯಾಂ ರಹಿತೇ** ರಜೋಗುಣ ತಮೋಗುಣ ಕಾರ್ಯಗಳಿಲ್ಲದ **ಮಧುದ್ವಿಷಃ** ಶ್ರೀಹರಿಯ **ಪಾದಮೂಲೇ** ಪಾದಸಮೀಪದಲ್ಲಿ **ವಾಸಂ ಚ ನ ಅರ್ಹಥಃ** ವಾಸಿಸಲೂ ಯೋಗ್ಯರಲ್ಲ ಎಂದು (ಸೇವಿಸುವದು ದೂರ ಉಳಿಯಿತು ಎಂದು ಭಾವ) **ಅಶಪನ್** ಶಾಪವಿತ್ತರು.

ವಿಶೇಷ ಃ- 'ಅಪಶ್ಯನ್' ಎಂಬ ಪಾಠದಲ್ಲಿ ಕೋಪದಿಂದ ಜಯವಿಜಯರನ್ನು ನೋಡಿದರು. ಊಚುಃ ಚ ಎಂದು ಶೇಷ ಮಾಡಿಕೊಳ್ಳಬೇಕು. ಮಾತನಾಡಿದರು ಎಂದರ್ಥ. ।।೩೯।।

**ಪಾಪಿಷ್ಠಾಮಾಸುರೀಂ ಯೋನಿಂ ಬಾಲಿಶೌ ಯಾತಮಾಶ್ವತಃ ।**
**ಏವಂ ಶಪ್ತೌ ಸ್ವಭವನಾತ್ ಪತಂತೌ ತೈಃ ಕೃಪಾಲುಭಿಃ ।**
**ಪ್ರೋಕ್ತೌ ಪುನರ್ಜನ್ಮಭಿರ್ವಾಂ ತ್ರಿಭಿರ್ಲೋಕಾಯ ಕಲ್ಪ್ಯತಾಮ್ ।।೪೦।।**

**ಅತಃ** ಆದ್ದರಿಂದ **ಬಾಲಿಶೌ** ಮೂರ್ಖರಾದ ನೀವಿಬ್ಬರು **ಆಶು** ಬೇಗನೇ **ಪಾಪಿಷ್ಠಾಂ** ಅತಿಶಯ ಪಾಪಕ್ಕೆ ಕಾರಣವಾದ **ಆಸುರೀಂ ಯೋನಿಂ** ಅಸುರ ಜನ್ಮವನ್ನು **ಯಾತಂ** ಹೊಂದಿರಿ. **ಇತಿ ಅಶಪನ್** ಎಂದು ಶಪಿಸಿದರು. **ಏವಂ** ಈ ರೀತಿ **ಶಪ್ತೌ** ಶಾಪಗ್ರಸ್ತರಾದ ಆ ಜಯವಿಜಯರು **ಸ್ವಭವನಾತ್** ತಾವು ಇದ್ದ ವೈಕುಂಠಲೋಕದಿಂದ

* 'ಅಪಶ್ಯನ್' ಇತಿ ಪಾಠಾಂತರ.

**ಪತಂತೌ** ಭೂಲೋಕಕ್ಕೆ ಬೀಳುತ್ತಿರುವ **ಪುನಃ** ಮತ್ತೆ **ಕೃಪಾಲುಭಿಃ** ದ್ವಾರಪಾಲಕರು ತಮ್ಮ ಕರ್ತವ್ಯ ಪಾಲಿಸಿದ್ದಾರೆ. ಇವರ ಅಪರಾಧವೇನು ಎಂದು ವಿಚಾರಮಾಡಿ ಕರುಣಾಳುಗಳಾದ **ತೈಃ** ಆ ಸನಂದನಾದಿಗಳಿಂದ **ವಾಂ** ನೀವು **ತ್ರಿಭಿಃ ಜನ್ಮಭಿಃ** ಮೂರೆ ಅಸುರಜನ್ಮಗಳಿಂದ ನಮ್ಮ ಶಾಪವನ್ನು ಅನುಭವಿಸಿ **ಪುನಃ** ಮತ್ತೆ **ಲೋಕಾಯ** ಈ ಲೋಕಕ್ಕೆ ಬರಲು **ಕಲ್ಪ್ಯತಾಂ** ಸಮರ್ಥರಾಗುವಿರಿ **ಇತಿ ಪ್ರೋಕ್ತೌ** ಎಂದು ಹೇಳಲ್ಪಟ್ಟರು.

ವಿಶೇಷ ಃ- ಅಸುರ ಎಂದರೆ ಸುರರಲ್ಲದ ಜನ್ಮವನ್ನು ಎಂದರ್ಥ. ಆದ್ದರಿಂದ ದೈತ್ಯ, ರಾಕ್ಷಸ, ಮನುಷ್ಯಜನ್ಮಗಳು ಬಂದಿದ್ದರೂ ಶಾಪಕ್ಕೆ ಪಾಪಿಷ್ಠಾಂ ಎಂಬುದರಿಂದ ಮಹಾದೈತ್ಯಾವಿಷ್ಟರಾಗಿರಿ ಎಂದೂ ಹೇಳಿದಂತಾಯಿತು. ||೪೦||

**ಜಜ್ಞಾತೇ ತೌ ದಿತೇಃ ಪುತ್ರೌ ದೈತ್ಯದಾನವವಂದಿತೌ ।**
**ಹಿರಣ್ಯಕಶಿಪುರ್ಜ್ಯೇಷ್ಠೋ ಹಿರಣ್ಯಾಕ್ಷೋಽನುಜಸ್ತತಃ ||೪೧||**

**ತತಃ** ಅನಂತರ **ತೌ** ಜಯವಿಜಯರು **ದೈತ್ಯದಾನವವಂದಿತೌ** ದೈತ್ಯರು ದಾನವರಿಂದ ನಮಸ್ಕೃತರಾದ **ದಿತೇಃ ಪುತ್ರೌ** ದಿತಿಯ ಮಕ್ಕಳಾಗಿ **ಜಜ್ಞಾತೇ** ಹುಟ್ಟಿದರು ಕ್ರಮವಾಗಿ ಜಯವಿಜಯರು ಈ ಜನ್ಮಗಳನ್ನೆತ್ತಿದರೆಂದರ್ಥ. ಅವರಲ್ಲಿ **ಹಿರಣ್ಯಕಶಿಪುಃ ಜ್ಯೇಷ್ಠಃ** ಹಿರಣ್ಯಕಶಿಪುವು ಹಿರಿಯನು **ಹಿರಣ್ಯಾಕ್ಷಃ** ಹಿರಣ್ಯಾಕ್ಷನು **ಅನುಜಃ** ತಮ್ಮನು. ||೪೧||

**ಹತೋ ಹಿರಣ್ಯಕಶಿಪುರ್ಹರಿಣಾ ಸಿಂಹರೂಪಿಣಾ ।**
**ಹಿರಣ್ಯಾಕ್ಷೋ ಧರೋದ್ಧಾರೇ ಬಿಭ್ರತಾ ಸೌಕರಂ ವಪುಃ ||೪೨||**

**ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಸಿಂಹರೂಪಿಣಾ** ನರಸಿಂಹರೂಪಿಯಾದ **ಹರಿಣಾ** ಶ್ರೀಹರಿಯಿಂದ **ಹತಃ** ಸಂಹರಿಸಲ್ಪಟ್ಟನು **ಧರೋದ್ಧಾರೇ** ಭೂಮಿಯನ್ನು ಎತ್ತಲೆಂದು **ಸೌಕರಂ ವಪುಃ ಬಿಭ್ರತಾ** ವರಾಹಾವತಾರ ಮಾಡಿದ **ಹರಿಣಾ** ಶ್ರೀಹರಿಯಿಂದ **ಹಿರಣ್ಯಾಕ್ಷಃ** ಹಿರಣ್ಯಾಕ್ಷನು **ಹತಃ** ಸಂಹರಿಸಲ್ಪಟ್ಟನು. ||೪೨||

ಹಿರಣ್ಯಕಶಿಪುವಿನ ವಧಕ್ಕೆ ಕಾರಣ ಸೂಚಿಸುವರು-

**ಹಿರಣ್ಯಕಶಿಪುಃ ಪುತ್ರಂ ಪ್ರಹ್ಲಾದಂ ಭಗವತ್ಪ್ರಿಯಮ್ ।**
**ಜಘಾಂಸುರಕರೋನ್ನಾನಾ ಯಾತನಾ ಮೃತ್ಯುಹೇತವೇ ||೪೩||**

**ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಪುತ್ರಂ** ತನ್ನ ಮಗನಾದ **ಭಗವತ್ಪ್ರಿಯಂ** ಶ್ರೀಹರಿಗೆ ಪ್ರಿಯನಾದ **ಪ್ರಹ್ಲಾದಂ** ಪ್ರಹ್ಲಾದನನ್ನು **ಜಿಘಾಂಸುಃ** ಕೊಲ್ಲುವ

ಇಚ್ಛೆಯಿಂದ **ಮೃತ್ಯುಹೇತವೇ** ಸಾಯಿಸುವದಕ್ಕಾಗಿ **ನಾನಾ ಯಾತನಾಃ ಅಕರೋತ್** ಅನೇಕ ರೀತಿಯ ಶರೀರ ಉಪದ್ರವಗಳನ್ನಿತ್ತನು. ॥೪೩॥

**ತಂ ಸರ್ವಭೂತಾತ್ಮಭೂತಂ ಪ್ರಶಾಂತಂ ಸಮದರ್ಶನಮ್* ।**
**ಭಗವತ್ತೇಜಸಾ ಸ್ಪೃಷ್ಟಂ ನಾಶಕ್ನೋದ್ಧಂತುಮುದ್ಯಮೈಃ ॥೪೪॥**

**ಸರ್ವಭೂತಾತ್ಮಭೂತಂ** ಎಲ್ಲ ಪ್ರಾಣಿಗಳಿಗೆ ನಿಯಾಮಕನಾದ ಚರಾ-ಚರಾಂತರ್ಯಾಮಿಯಾದ ಶ್ರೀಹರಿಯಲ್ಲಿ ಮಗ್ನನಾದ **ಪ್ರಶಾಂತಂ** ಅತಿಶಯವಾಗಿ ಭಗವನ್ನಿಷ್ಠವಾದ ಮನಸ್ಸುಳ್ಳ **ಸಮದರ್ಶನಂ** ಸರ್ವತ್ರ ನಿರ್ದೋಷನಾದ ಶ್ರೀಹರಿಯನ್ನು ಕಾಣುವ (ಅತದರ್ಹಣಂ ಎಂಬ ಪಾಠದಲ್ಲಿ ನಾನಾಯಾತನೆಗಳಿಗೆ ಅರ್ಹನಲ್ಲದ ಎಂದರ್ಥ.) **ಭಗವತ್ತೇಜಸಾ** ಶ್ರೀಹರಿಯ ಅನುಗ್ರಹಸಾಮರ್ಥ್ಯದಿಂದ **ಸ್ಪೃಷ್ಟಂ** ಯುಕ್ತನಾದ **ತಂ** ಆ ಪ್ರಹ್ಲಾದನನ್ನು **ಉದ್ಯಮೈಃ** ತನ್ನ ಪ್ರಯತ್ನಗಳಿಂದ **ಹಂತುಂ** ಕೊಲ್ಲಲು **ನ ಅಶಕ್ನೋತ್** ಸಮರ್ಥನಾಗಲಿಲ್ಲ.

ಸರ್ವಭೂತಸ್ವರೂಪವೆಂದು ಅರ್ಥವಾಗದಿರಲೆಂದು ಸರ್ವಭೂತಾತ್ಮಭೂತಂ ಎಂಬ ಪದವನ್ನು ವ್ಯಾಖ್ಯಾನಿಸುವರು.

**... ತಾತ್ಪರ್ಯ ...**

**ಸರ್ವಭೂತಾತ್ಮನಿ ಭೂತಮ್ ।**

ಸರ್ವಾಂತರ್ಯಾಮಿ ಶ್ರೀಹರಿಯಲ್ಲಿ ಮನಸಾ ಸ್ಥಿತನಾದ ಎಂದರ್ಥ. ॥೪೪॥

**ತತಸ್ತೌ ರಾಕ್ಷಸೌ ಜಾತೌ ಕೇಶಿನ್ಯಾಂ ವಿಶ್ರವಃ ಸುತೌ ।**
**ರಾವಣಃ ಕುಂಭಕರ್ಣಶ್ಚ ಸರ್ವಲೋಕಪ್ರತಾಪಿನೌ ॥೪೫॥**

**ತತಃ** ವರಾಹನರಸಿಂಹರೂಪಗಳಿಂದ ಹತರಾದ ನಂತರ **ತೌ** ಆ ಜಯವಿಜಯರು **ಕೇಶಿನ್ಯಾಂ** ಕೇಶನಿಯೆಂಬ ರಾಕ್ಷಸಿಯಲ್ಲಿ **ವಿಶ್ರವಃ ಸುತೌ** ವಿಶ್ರವಸ್ ಎಂಬ ಋಷಿಯ ಮಕ್ಕಳಾಗಿ **ಸರ್ವಲೋಕಪ್ರತಾಪಿನೌ** ಎಲ್ಲ ಲೋಕವನ್ನೂ ಹಿಂಸಿಸುವ **ರಾವಣಃ ಕುಂಭಕರ್ಣಃ** ರಾವಣ ಕುಂಭಕರ್ಣರೆಂಬ ಹಸರಿನ **ರಾಕ್ಷಸೌ** ರಾಕ್ಷಸರಾಗಿ **ಜಾತೌ** ಜನಿಸಿದರು. ಅಸುರಯೋನಿಯನ್ನು ಹೊಂದಿರಿ ಎಂಬ ಶಾಪಾನುಸಾರ ಜಯವಿಜಯರು ಹಿರಣ್ಯಕಶಿಪು ಹಿರಣ್ಯಾಕ್ಷ ಜನ್ಮತಾಳಿದಂತೆ ಉಳಿದೆರಡು ಜನ್ಮಗಳನ್ನು ದಿತಿಯಲ್ಲಿಯೇ ಹೇಳಬೇಕಿತ್ತು. ಎರಡನೇ ಜನ್ಮ ರಾಕ್ಷಸ ಯೋನಿಯಲ್ಲಿ. ಮೂರನೇ ಜನ್ಮ ರಾಜಯೋನಿಯಲ್ಲಿ ಎಂದು ಹೇಳಿದ್ದು ಏಕೆ?

---

* 'ಅತದರ್ಹಣಂ' ಇತಿ ಪಾಠಾಂತರ.

ಎಂದರೆ ಅದಕ್ಕೆ ಕಾರಣವನ್ನು ಪ್ರಮಾಣದಿಂದ ತಿಳಿಸುವರು.

**... ತಾತ್ಪರ್ಯ ...**

**ಹಿರಣ್ಯಕಶಿಪುರ್ಭೂತಮಮನ್ಯತ ಮೃತೌ ಹರಿಮ್ ।**
**ಅತೋ ಭಯಾನಕೋ ಜಾತಸ್ತತ್ರ ರಾಜಾನಮೇವ ಚ ॥**

**ಮತ್ವಾ ರಾಜ್ಯೈವ ಸಂಜಾತಃ ಕೃಷ್ಣಂ ಚಕ್ರಾದಿಲಕ್ಷಣೈಃ ।**
**ಮೃತಿಕಾಲೇ ಹರಿಂ ಚೈವ ಮತ್ವಾ ಭಕ್ತ್ಯೈವ ಕೇವಲಮ್ ॥**
**ದ್ವಾಃಸ್ಥತ್ವಂ ಹರಿಮಾವಿಶ್ಯ ಪ್ರಾಪ್ಯೈವ ಮನುಜೋऽಪಿ ತು ॥ ಇತಿ ಗಾರುಡೇ ॥**

**ವಿಷ್ಣುಭಕ್ತೇಶ್ಚ ತಜ್ಜ್ಞಾನಾದನ್ಯತೋ ಮುಕ್ತಿವಾಚಕಾಃ ।**
**ವಿಷ್ಣೋರ್ಗುಣಹ್ರಾಸವಾಚಃ ಶ್ರೀಬ್ರಹ್ಮಾದೇಸ್ತಥಾ ಕ್ರಮಾತ್ ॥**

**ವಿಷ್ಣ್ವಾದಿದ್ವೇಷತಶ್ಚೈವ ಸುಖವಾಚಸ್ತಥಾऽಖಿಲಾಃ ।**
**ಮೋಹನಾರ್ಥಾಃ ಸಮುದ್ದಿಷ್ಟಾ ಯಥಾರ್ಥದ್ಯೋತಕಾಸ್ತಥಾ ॥**
**ಇತಿ ಪ್ರಕಾಶಸಂಹಿತಾಯಾಮ್ ॥**

'ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇವರಮ್ । ತಂ ತಮೇವೈತಿ ಕೌಂತೇಯ' ಎಂದು ಪ್ರಮಾಣವಚನವಿರುವದರಿಂದ ಹಿರಣ್ಯಕಶಿಪುವು ಹಿರಣ್ಯಾಕ್ಷನ ಮೃತಿಕಾಲದಲ್ಲಿ ಶ್ರೀಹರಿಯನ್ನು ಭೂತವೆಂದು ತಿಳಿದನು. ಆ ಕಾರಣದಿಂದ ಭಯಂಕರಸ್ವರೂಪದ ರಾವಣಕುಂಭಕರ್ಣರಾಗಿ ರಾಕ್ಷಸರಾಗಿ ಜನಿಸಿದರು. ರಾವಣಕುಂಭಕರ್ಣಜನ್ಮದಲ್ಲಿ ಶ್ರೀಹರಿಯನ್ನು (ರಾಮನನ್ನು) ರಾಜನೆಂದು ತಿಳಿದರು. ಕಾರಣ ಶಿಶುಪಾಲದಂತವಕ್ರರಾದರು. ಶಿಶುಪಾಲ ದಂತವಕ್ರಜನ್ಮದಲ್ಲಿ ಮನುಷ್ಯರಾದ ಶಿಶುಪಾಲಾದಿಗಳು ಶ್ರೀಕೃಷ್ಣನನ್ನು ಚಕ್ರಶಂಖಾದಿಲಕ್ಷಣಗಳಿಂದ ಸಾಕ್ಷಾತ್ ಶ್ರೀಹರಿಯೆಂದೇ ಭಕ್ತಿಯಿಂದಲೇ ತಿಳಿದು ಶ್ರೀಹರಿಯನ್ನು ಪ್ರವೇಶಿಸಿ ಮತ್ತೆ ದ್ವಾರಪಾಲಕರೇ ಆಗಿ ತಮ್ಮ ಮೂಲರೂಪದಿಂದ ಏಕೀಭೂತರಾದರು ಎಂದು ಗಾರುಡದಲ್ಲಿದೆ.

ಹಿಂದೆ ಹೇಳಿದ ಪ್ರಕಾರ 'ಗೋಪ್ಯಃ ಕಾಮಾತ್' ಮುಂತಾದವುಗಳಲ್ಲಿ ಭಕ್ತಿಯುಕ್ತತ್ವ ಅಭಿಪ್ರೇತವಾಗಿದ್ದರೆ ಪುರಾಣಕಾರರು ಹಾಗೆಯೇ ಹೇಳಬೇಕಿತ್ತು. ಕಾಮಾತ್ ಮುಂತಾಗಿ ಹೇಳಿದ್ದೇಕೆ ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು-

ಕೇವಲ ಕರ್ಮಾದಿಗಳಿಂದ, ಶಿವಾದಿದೇವತೆಗಳಲ್ಲಿ ಮಾಡುವ ಭಕ್ತಿಯಿಂದ ಮೋಕ್ಷವಾಗುತ್ತದೆ ಎಂದು ಹೇಳುವ ಶಬ್ದಗಳು, ಪರಮಾತ್ಮನ ಗುಣಗಳಿಗೆ ಹ್ರಾಸವನ್ನು ಹೇಳುವ ಶಬ್ದಗಳು, ಲಕ್ಷ್ಮೀ ಬ್ರಹ್ಮಾದಿಗಳಿಗೆ ತಾರತಮ್ಯವಿಲ್ಲವೆಂದು ಹೇಳುವ ಶಬ್ದಗಳು

ಮೋಹಕಗಳು ಎಂದು ಹೇಳಲ್ಪಡುತ್ತವೆ. ಅದರಂತೆ ಶ್ರೀಹರಿಯ ಜ್ಞಾನಾದಿಗಳಿಲ್ಲದೇ ಸಾಕ್ಷಾತ್ತಾಗಿಯೇ ಕರ್ಮಾದಿಗಳು ಮೋಕ್ಷಸಾಧನಗಳೆಂದು ಹೇಳುವ ಶಬ್ದಗಳು ಮೋಹಕಗಳು ಎಂದು ಹೇಳಲ್ಪಟ್ಟಿವೆ. ಜ್ಞಾನಾದಿಗಳನ್ನು ಹುಟ್ಟಿಸಿ ಕರ್ಮಾದಿಗಳು ಮೋಕ್ಷಸಾಧಕಗಳೆಂದು ಹೇಳುವ ವಾಕ್ಯಗಳು ಮೋಹಕಗಳಲ್ಲ ಎಂದು ಪ್ರಕಾಶಸಂಹಿತೆಯಲ್ಲಿದೆ. ।।೪೫।।

**ತತ್ರಾಪಿ ರಾಘವೋ ಭೂತ್ವಾ ನ್ಯಹನಚ್ಛಾಪಮುಕ್ತಯೇ ।**
**ರಾಮವೀರ್ಯಂ ಶ್ರೋಷ್ಯಸಿ ತ್ವಂ ಮಾರ್ಕಾಂಡೇಯಮುಖಾತ್ ಪ್ರಭೋ ।।೪೬।।**

**ತತ್ರಾಪಿ** ರಾವಣಕುಂಭಕರ್ಣಜನ್ಮದಲ್ಲಿಯೂ ಶ್ರೀಹರಿಯು **ರಾಘವೋ ಭೂತ್ವಾ** ರಘುವಂಶದಲ್ಲಿ ರಾಮನಾಗಿ ಅವತರಿಸಿ **ಶಾಪಮುಕ್ತಯೇ** ಶಾಪಮೋಚನೆಗಾಗಿ **ನ್ಯಹನತ್** ಸಂಹರಿಸಿದನು **ಪ್ರಭೋ** ಧರ್ಮರಾಜನೇ **ತ್ವಂ** ನೀನು **ಮಾರ್ಕಾಂಡೇಯ-ಮುಖಾತ್** ಮಾರ್ಕಾಂಡೇಯರ ಬಾಯಿಂದ **ರಾಮವೀರ್ಯಂ** ಶ್ರೀರಾಮನ ಪರಾಕ್ರಮವನ್ನು **ಶ್ರೋಷ್ಯಸಿ** ಕೇಳುವಿ.(ವನಪರ್ವದಲ್ಲಿ)

ವಿಶೇಷ ಃ- ಮೂರು ಜನ್ಮಗಳಲ್ಲಿ ನಾನೇ ಕೊಲ್ಲುವವನು ಎಂಬ ಶ್ರೀಹರಿಯ ವರ, ಹಿರಣ್ಯಕಶಿಪುವಿನ ಜನ್ಮದಲ್ಲಿ ದೇವತೆಗಳಿಂದ ಅವಧ್ಯತೆಯೆಂಬ ಬ್ರಹ್ಮದೇವರ ವರ ಇತ್ಯಾದಿ ವಿಷಯಗಳನ್ನು ಬೇರೆ ಗ್ರಂಥಗಳಿಂದ ತಿಳಿಯಬಹುದು. ।।೪೬।।

**ತಾವದ್ಯ ಕ್ಷತ್ರಿಯೌ ಜಾತೌ ಮಾತೃಷ್ವಸ್ರಾऽऽತ್ಮಜೌ ತವ ।**
**ಅಧುನಾ ಶಾಪನಿರ್ಮುಕ್ತೌ ಕೃಷ್ಣಚಕ್ರಹತಾಂಹಸೌ ।।೪೭।।**

**ತೌ** ರಾವಣಕುಂಭಕರ್ಣರು **ಕ್ಷತ್ರಿಯಜಾತೌ** ಕ್ಷತ್ರಿಯರ ಜಾತಿಯಲ್ಲಿ **ತವ** ನಿನ್ನ **ಮಾತೃಷ್ವಸ್ರಾऽऽತ್ಮಜೌ ಜಾತೌ** ತಾಯಿಯ ತಂಗಿಯ ಮಕ್ಕಳಾಗಿ ಜನಿಸಿರುವರು **ಅಧುನಾ** ಈಗ **ಕೃಷ್ಣಚಕ್ರಹತಾಂಹಸೌ** ಶ್ರೀಕೃಷ್ಣನ ಚಕ್ರದಿಂದ ನಷ್ಟವಾದ ಮೂರು ಜನ್ಮದ ಪಾಪವುಳ್ಳವರಾಗಿ **ಶಾಪನಿರ್ಮುಕ್ತೌ** ಶಾಪಮುಕ್ತರಾದರು. ।।೪೭।।

**ವೈರಾನುಬಂಧತೀವ್ರೇಣ ಧ್ಯಾನೇನಾಚ್ಯುತಸಾಮ್ಯತಾಮ್ ।**
**ನೀತೌ ಪುನರ್ಹರೇಃ ಪಾರ್ಶ್ವಂ ಜಗ್ಮತುರ್ವಿಷ್ಣುಪಾರ್ಷದೌ ।।೪೮।।**

**ವೈರಾನುಬಂಧತೀವ್ರೇಣ** ವೈರಯುಕ್ತಭಕ್ತಿಯಿಂದ ಕೂಡಿದ **ಧ್ಯಾನೇನ** ಧ್ಯಾನದಿಂದ **ಅಚ್ಯುತಸಾಮ್ಯತಾಂ** ಶ್ರೀಹರಿಯ ಸ್ವರೂಪದಲ್ಲಿ ಪ್ರವೇಶವೆಂಬ ಸಾದೃಶ್ಯವನ್ನು **ನೀತೌ** ಹೊಂದಿದ **ವಿಷ್ಣುಪಾರ್ಷದೌ** ಶ್ರೀಹರಿಯ ದ್ವಾರಪಾಲಕರಾದ ಜಯವಿಜಯರು **ಪುನಃ** ಮತ್ತೆ **ಹರೇಃ ಪಾರ್ಶ್ವಂ** ಶ್ರೀಕೃಷ್ಣನು ವೈಕುಂಠಕ್ಕೆ

ಹೋದನಂತರ ತಮ್ಮ ಮೂಲರೂಪದೊಂದಿಗೆ ಸೇರಿ ಶ್ರೀಹರಿಯ ಸಮೀಪವನ್ನು **ಜಗ್ಮತುಃ** ಹೊಂದಿದರು.

ವೈರಾನುಬಂಧಶಬ್ದಕ್ಕೆ ಪ್ರಕೃತಸಂಗತ ಅರ್ಥ ತಿಳಿಸುವರು-

**... ತಾತ್ಪರ್ಯ ...**

**ವೈರಾನುಬಂಧಃ ವೈರಯುಕ್ತಾ ಭಕ್ತಿಃ ।**
**ಅನುಬಂಧಸ್ತು ಭಕ್ತಿಃ ಸ್ಯಾತ್ ಬಂಧಃ ಸ್ನೇಹ ಉದಾಹೃತಃ । ಇತಿ ಚ ।**

ಅನುಬಂಧವೆಂದರೆ ಭಕ್ತಿಬಂಧ. ಎಂದರೆ ಸ್ನೇಹ. ಕಾರಣ ವೈರಾನುಬಂಧ-ವೆಂದರೆ ವೈರಯುಕ್ತಭಕ್ತಿ ಎಂದೇ ಅರ್ಥ. ಹೊರತು ನಿರಂತರವಾದ ದ್ವೇಷ ಎಂದರ್ಥವಲ್ಲ. ।।೪೮।।

**ಯುಧಿಷ್ಠಿರ ಉವಾಚ**

**ವಿದ್ವೇಷೋ ದಯಿತೇ ಪುತ್ರೇ ಕಥಮಾಸೀನ್ಮಹಾತ್ಮನಿ ।**
**ಬ್ರೂಹಿ ಮೇ ಭಗವನ್ ಯೇನ ಪ್ರಹ್ಲಾದೇಽಪ್ಯಚ್ಯುತಾತ್ಮನಿ ।।೪೯।।**

**ಭಗವನ್** ಪೂಜ್ಯರಾದ ನಾರದರೇ **ಅಚ್ಯುತಾತ್ಮನಿ** ಶ್ರೀಹರಿಯಲ್ಲಿ ಮನಸ್ಸುಳ್ಳ ಆದ್ದರಿಂದಲೇ **ಮಹಾತ್ಮನಿ** ಮಹಾತ್ಮನಾದ **ದಯಿತೇ ಪುತ್ರೇ** ಪ್ರಿಯ ಮಗನಾದ **ಪ್ರಹ್ಲಾದೇ ಅಪಿ** ಪ್ರಹ್ಲಾದನಲ್ಲಿಯೂ **ವಿದ್ವೇಷಃ** ಕೊಲ್ಲಬೇಕೆಂಬ ವಿಶಿಷ್ಟದ್ವೇಷವು **ಯೇನ ಆಸೀತ್** ಯಾವ ಕಾರಣದಿಂದ ಆಯಿತು **ಕಥಂ ಆಸೀತ್** ಯಾವ ರೀತಿ ಆಯಿತು **ತತ್** ಅದನ್ನು **ಮೇ** ನನಗೆ **ಬ್ರೂಹಿ** ಹೇಳಿರಿ. ।।೪೯।।

**।। ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ಪ್ರಥಮೋಽಧ್ಯಾಯಃ ।।**

**।। ಶ್ರೀಕೃಷ್ಣಾರ್ಪಣಮಸ್ತು ।।**

★★★

 

# ಅಥ ದ್ವಿತೀಯೋಽಧ್ಯಾಯಃ

**ಸಾರಾಂಶ**

ದ್ವಾರಪಾಲಕರಾದ ಜಯವಿಜಯರು ಸನಕಾದಿಗಳ ಶಾಪದಿಂದ ಮೊದಲು ಹಿರಣ್ಯಕಶಿಪು-ಹಿರಣ್ಯಾಕ್ಷರಾಗಿ ಜನಿಸಿದರು. ಹಿರಣ್ಯಾಕ್ಷ ವರಾಹದೇವರಿಂದ ಹತನಾದುದನ್ನು ಕೇಳಿದೊಡನೆ ಅವನ ಅಣ್ಣನಾದ ಹಿರಣ್ಯಕಶಿಪುವು ಕೋಪದಿಂದ ಭಗವಂತನನ್ನು ನಿಂದಿಸುತ್ತಾನೆ. ಸ್ಥಿರ ಬುದ್ಧಿಯಿಲ್ಲದ ಭಗವಂತ ತನ್ನನ್ನು ಸೇವಿಸುವವರಿಗೆ ತಾನು ಸೇವಕನಾಗುತ್ತಾನೆ. ತನ್ನನ್ನು ವಿರೋಧಿಸಿದವರನ್ನು ನಾಶಮಾಡುತ್ತಾನೆ. ಆದ್ದರಿಂದ ಭಗವಂತನನ್ನು ಸಂಹರಿಸಬೇಕು. ಅವನನ್ನು ಸಂಹರಿಸಿದಾಗಲೇ ನನ್ನ ಮನಸ್ಸಿಗೆ ಶಾಂತಿ ದೊರಕುವುದು. ದೇವತೆಗಳಿಗೆ ಅವನೇ ಬಲ. ಅವನಿಗೆ ಬ್ರಾಹ್ಮಣರ ಯಜ್ಞಾದಿ ಕರ್ಮಗಳೇ ಬಲ. ಕಾರಣ ನೀವೆಲ್ಲರೂ ಅವನನ್ನು ನಾಶಪಡಿಸಿ ಎಂದು ದಾನವರಿಗೆ ಆದೇಶಿಸಿದನು. ಸತ್ತ ತಮ್ಮನಿಗೆ ಧರ್ಮೋದಕವನ್ನು ಕೊಟ್ಟು ತಮ್ಮನ ಮಡದಿಯಾದ ರುಶದ್ಭಾನು, ಮಕ್ಕಳಾದ ಶಕುನಿ ಶಂಬರಾದಿಗಳನ್ನು ಸಂತೈಸುತ್ತ ಒಳಗಿರುವ ಸ್ವಾತ್ವಿಕನಾದ ಜಯ ಎಂಬ ದೇವತೆ ಮಾತನಾಡುತ್ತಾನೆ.

ಜೀವಿಗಳು ಸಾದಾಕಾಲ ಜೊತೆಯಾಗಿ ಬಾಳುವುದು ಎನ್ನುವದು ಅರ್ಥವಿಲ್ಲದ ಮಾತು. ದೈವಾತ್ ಆಗೊಮ್ಮೆ ಈಗೊಮ್ಮೆ ಒಂದೆಡೆ ಸೇರುತ್ತಾರೆ. ಭಗವಂತನೊಬ್ಬನೇ ನಿತ್ಯ, ಸ್ವತಂತ್ರ. ಸಂಸಾರಬಂಧನದಲ್ಲಿ ಸಿಲುಕಿದ ಜೀವರಲ್ಲಿ ಅಂತರ್ಯಾಮಿಯಾಗಿ ಇರುವದರಿಂದ ಅವನನ್ನು ಬದ್ಧ ಅಜ್ಞಾನಿಯೆಂದು ಭ್ರಮಿಸುತ್ತಾರೆ. ಅದರ ಫಲವಾಗಿ ಜೀವರಿಗೆ ಸುಖದುಃಖರೂಪವಾದ ಬಂಧನವಾಗುತ್ತದೆ. ಈ ತತ್ತ್ವವನ್ನು ಮನದಟ್ಟು ಮಾಡುವದಕ್ಕಾಗಿ ಸುಯಜ್ಞನ ಕಥೆಯನ್ನು ಹೇಳುತ್ತಾನೆ. ಒಮ್ಮೆ ಸುಯಜ್ಞ ಎಂಬ ರಾಜ ಯುದ್ಧಕ್ಕೆ ಎಂದು ತೆರಳಿದವ ಯುದ್ಧದಲ್ಲಿ ಸತ್ತು ಬಿದ್ದ. ಅವನ ಮಡದಿಯರು ದುಃಖತಪ್ತರಾಗಿರುತ್ತಾರೆ. ಆಗ ಅಲ್ಲಿಗೆ ಬಾಲಕನ ವೇಶದಲ್ಲಿ ಯಮ ಪ್ರತ್ಯಕ್ಷನಾಗುತ್ತಾನೆ. ಅವರಿಗೆ ಸಾಂತ್ವನವನ್ನು ಹೇಳಿ ತತ್ತ್ವೋಪದೇಶವನ್ನು ಮಾಡುತ್ತಾನೆ.

ಒಂದು ಜನ್ಮದಲ್ಲಿ ಗಂಡ-ಹೆಂಡತಿಯರಾದವರು ಶಾಶ್ವತವಾಗಿ ಹಾಗೆಯೇ ಕೂಡಿರುತ್ತಾರೆ ಎಂದು ಹೇಳಲು ಬರುವದಿಲ್ಲ. ಈ ಚರಾಚರಪ್ರಪಂಚ ಭಗವಂತನ ಕೈಗೊಂಬೆ. ಅವನ ಈ ಗೊಂಬೆಯಾಟದಲ್ಲಿ ದೈವಾನುಗ್ರಹವಿರುವ ಅನಾಥವ್ಯಕ್ತಿಗಳು ಕಾಡುಪಾಲಾದರೂ ಬದುಕುತ್ತಾರೆ. ದೈವಾನುಗ್ರಹವಿಲ್ಲದವನು ಮನೆಯೊಳಗೆ ಅವಿತು ಕುಳಿತರೂ ಬದುಕುಳಿಯಲಾರ. ಜನ್ಮಗಳಿಗೆ ಕಾರಣವಾದ ಕರ್ಮಗಳು ತೀರಿದಾಗ ಸತ್ತು ಮತ್ತೆ ಹುಟ್ಟಿ ಬರುತ್ತಾನೆ. ಭಗವಂತನಿಂದ ನಿರ್ಮಿತವಾದ ಈ ಭೌತಿಕಶರೀರದಲ್ಲಿ ಮತ್ತೆ ಜನನ ಮರಣ ದುಃಖ ಅಜ್ಞಾನಾದಿಗಳು ಬರುತ್ತವೆ. ಇದುವೇ ಜೀವನ ಚಕ್ರ. ಆದ್ದರಿಂದ ಸತ್ತವನಿಗಾಗಿ ಅಳುವದರಿಂದೇನೂ ಪ್ರಯೋಜನವಿಲ್ಲ. ಸತ್ತವರಿಗಾಗಿ ಅಳುವವರೂ ಒಂದು ದಿನ ಸಾಯಲೇ ಬೇಕು. ಬೇಡನೊಬ್ಬನ ಬಲೆಯಲ್ಲಿ ಸಿಲುಕಿದ ಹೆಣ್ಣುಹಕ್ಕಿಗಾಗಿ ಅಳುತ್ತ ಬಳಿಯಲ್ಲಿಯೇ ನಿಂತ ಗಂಡು ಹಕ್ಕಿ ತಾನೂ ಬೇಡ ಎಸೆದ ಬಾಣಕ್ಕೆ ಧರೆಗುರುಳಿತು. ಹೀಗೆ ಯಮನ ಉಪದೇಶದಿಂದ ಸುಯಜ್ಞನ ಮಡದಿಯರಿಗೆ ಸಮಾಧಾನವಾಯಿತು. ಅವನ ಉತ್ತರಕ್ರಿಯೆಯನ್ನು ಶ್ರದ್ಧೆಯಿಂದ ನಡೆಸಿದರು. ಈ ಎಲ್ಲ ವೃತ್ತಾಂತವನ್ನು ಹಿರಣ್ಯಕಶಿಪುವು ತನ್ನ ಬಂಧುಗಳಿಗೆ ಹೇಳಿದಾಗ ಅವರೆಲ್ಲ ಅಳುವುದನ್ನು ನಿಲ್ಲಿಸಿ ಹಿರಣ್ಯಾಕ್ಷನ ಔರ್ಧ್ವಕ್ರಿಯೆಯನ್ನು ಶ್ರದ್ದೆಯಿಂದ ನೆರವೇರಿಸಿದರು.

★★★

ಪ್ರಿಯಪುತ್ರನಲ್ಲಿ ದ್ವೇಷ ಏಕೆ ಉಂಟಾಯಿತು ಎಂಬ ಪ್ರಶ್ನೆಗೆ ಉತ್ತರ ಕೊಡಲು ಉಪಯುಕ್ತ ಕಥೆಯನ್ನು ಹೇಳುವರು-

**ನಾರದ ಉವಾಚ**

**ಭ್ರಾತರ್ಯೇವಂ ವಿನಿಹತೇ ಹರಿಣಾ ಕ್ರೋಡಮೂರ್ತಿನಾ ।**
**ಹಿರಣ್ಯಕಶಿಪೂ ರಾಜನ್ ಪರ್ಯತಪ್ಯದ್ರುಷಾ ಶುಚಾ ॥೧॥**

**ರಾಜನ್** ಯುಧಿಷ್ಠಿರನೇ **ಏವಂ** ಹಿಂದೆ ಹೇಳಿದ ರೀತಿಯಾಗಿ **ಕ್ರೋಡಮೂರ್ತಿನಾ** ವರಾಹಮೂರ್ತಿಯಾದ **ಹರಿಣಾ** ಹರಿಯಿಂದ **ಭ್ರಾತರಿ ವಿನಿಹತೇ ಸತಿ** ತಮ್ಮನಾದ ಹಿರಣ್ಯಾಕ್ಷನು ಸಾಯುತ್ತಿರಲು **ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ರುಷಾ** ಕೋಪದಿಂದ **ಶುಚಾ** ದುಃಖದಿಂದ **ಪರ್ಯತಪ್ಯತ್** ಪರಿತಪಿಸಿದನು. ॥೧॥

**ಆಹ ಚೇದಂ ರುಷಾ ಪೂರ್ಣಃ ಸಂದಷ್ಟದಶನಚ್ಛದಃ ।**
**ಕೋಪೋಜ್ವಲಾಭ್ಯಾಂ ಚಕ್ಷುರ್ಭ್ಯಾಂ ನಿರೀಕ್ಷನ್ ಧೂಮ್ರಮಂಬರಮ್ ॥೨॥**

**ರುಷಾ** ಸಿಟ್ಟಿನಿಂದ **ಪೂರ್ಣಃ** ತುಂಬಿದ **ಸಂದಷ್ಟದಶನಚ್ಛದಃ** ತುಟಿಕಚ್ಚಿಕೊಂಡು **ಕೋಪೋಜ್ವಲಾಭ್ಯಾಂ** ಸಿಟ್ಟಿನಿಂದ ಪ್ರಜ್ವಲಿಸುವ **ಚಕ್ಷುರ್ಭ್ಯಾಂ** ಕಣ್ಣುಗಳಿಂದ **ಧೂಮ್ರಂ ಅಂಬರಂ** ಹೊಗೆ ತುಂಬಿದ ಆಕಾಶವನ್ನು **ನಿರೀಕ್ಷನ್** ನೋಡುತ್ತ **ಇದಂ ಆಹ ಚ** ಮುಂದೆ ಹೇಳುವದನ್ನು ಹೇಳಿದನು ಕೂಡ. ।।೨।।

**ಕರಾಲದಂಷ್ಟ್ರೋಗ್ರದೃಷ್ಟ್ಯಾ ದುಷ್ಪ್ರೇಕ್ಷ್ಯಭ್ರುಕುಟೀಮುಖಃ ।**
**ಶೂಲಮುದ್ಯಮ್ಯ ಸದಸಿ ದಾನವಾನಿದಮಬ್ರವೀತ್ ।।೩।।**

**ಕರಾಲದಂಷ್ಟ್ರಾ** ಭಯಂಕರ ಹಲ್ಲುಗಳಿಂದ ಕೂಡಿದ **ಉಗ್ರದೃಷ್ಟ್ಯಾ** ಭಯಾನಕ ನೋಟದಿಂದ **ದುಷ್ಪ್ರೇಕ್ಷ್ಯಭ್ರುಕುಟೀಮುಖಃ** ನೋಡಲಾಗದ ಹುಬ್ಬುಗಂಟ್ಟಿಕ್ಕಿದ ಮುಖವುಳ್ಳವನಾಗಿ **ಸದಸಿ** ಸಭೆಯಲ್ಲಿ **ಶೂಲಂ ಉದ್ಯಮ್ಯ** ಶೂಲವನ್ನೆತ್ತಿಕೊಂಡು **ದಾನವಾನ್** ದೈತ್ಯರಿಗೆ **ಇದಂ ಅಬ್ರವೀತ್** ಮುಂದೆ ಹೇಳುವದನ್ನು ಹೇಳಿದನು. ।।೩।।

**ಹರಿಣ್ಯಕಶಿಪುರುವಾಚ**

**ಭೋ ಭೋ ದಾನವದೈತೇಯಾ ದ್ವಿಮೂರ್ಧಂಸ್ತ್ರ್ಯಕ್ಷ ಶಂಬರ ।**
**ಶತಬಾಹೋ ಹಯಗ್ರೀವ ನಮುಚೇ ಪಾಕ ಇಲ್ವಲ ।।೪।।**

**ವಿಪ್ರಚಿತ್ತೇ ಮಮ ವಚಃ ಪುಲೋಮನ್ ಶಕುನಾದಯಃ ।**
**ಶೃಣುತಾಽನಂತರಂ ಸರ್ವೈಃ ಕ್ರಿಯತಾಮಾಶು ಮಾ ಚಿರಮ್ ।।೫।।**

**ಭೋ ಭೋ** ಎಲೋ **ದಾನವದೈತೇಯಾಃ** ದಾನವರೇ ದೈತ್ಯರೇ **ದ್ವಿಮೂರ್ಧನ್** ದ್ವಿಮೂರ್ಧನೇ **ತ್ರ್ಯಕ್ಷ** ತ್ರ್ಯಕ್ಷನೇ **ಶಂಬರ** ಶಂಬರನೇ **ಶತಬಾಹೋ** ಶತಬಾಹುವೇ **ಹಯಗ್ರೀವ** ಹಯಗ್ರೀವನೇ **ನಮುಚೇ** ನಮುಚಿಯೇ **ಪಾಕ** ಪಾಕನೇ **ಇಲ್ವಲ** ಇಲ್ವಲನೇ **ವಿಪ್ರಚಿತ್ತೇ** ವಿಪ್ರಚಿತ್ತಿಯೇ **ಪುಲೋಮನ್** ಪುಲೋಮನೇ **ಶಕುನಾದಯಃ** ಶಕುನ ಮೊದಲಾದವರೇ **ಮಮ** ನನ್ನ **ವಚಃ** ಮಾತನ್ನು **ಶೃಣುತ** ಕೇಳಿರಿ **ಅನಂತರಂ** ನಂತರ **ಸರ್ವೈಃ** ಎಲ್ಲರಿಂದ **ಆಶು** ಬೇಗನೇ **ಮಾ ಚಿರಂ** ತಡಮಾಡದೇ **ಕ್ರಿಯತಾಂ** ನನ್ನಿಂದ ಹೇಳಲ್ಪಟ್ಟದ್ದು ಮಾಡಲ್ಪಡಲಿ ಎಂದು ಹೇಳಿದನು. ।।೪,೫।।

**ಸಪತ್ನೈರ್ಘಾತಿತಃ ಕ್ಷುದ್ರೈರ್ಭ್ರಾತಾ ಮೇ ದಯಿತಃ ಸುಹೃತ್ ।**
**ಪಾರ್ಷ್ಣಿಗ್ರಾಹೇಣ ಹರಿಣಾ ಸಮೇನಾಪ್ಯುಪಧಾವನೈಃ ।।೬।।**

**ದಯಿತಃ** ಪ್ರೀತಿಪಾತ್ರನೂ **ಸುಹೃತ್** ಅನಿಮಿತ್ತಬಂಧುವೂ ಆದ **ಮೇ** ನನ್ನ **ಭ್ರಾತಾ** ತಮ್ಮನು **ಸಮೇನ ಅಪಿ** ದೇವತೆಗಳಿಗೂ ದಾನವರಿಗೂ ಸಮಾನನಾದವನಾದರೂ **ಕ್ಷುದ್ರೈಃ** ಅಲ್ಪರಾದ **ಸಪತ್ನೈಃ** ನಮ್ಮ ಶತ್ರುಗಳಾದ ದೇವತೆಗಳಿಂದ

ಮಾಡಲ್ಪಟ್ಟ **ಉಪಧಾವನೈಃ** ತನ್ನ ಪಾದಸೇವೆಗಳಿಂದ, ಪೂಜೆಯಿಂದ, ಉಪಸತ್ತಿಗಳಿಂದ **ಪಾರ್ಷ್ಣಿಗ್ರಾಹೇಣ** ಸಂತುಷ್ಟನಾಗಿ ದೇವತೆಗಳ ಪಕ್ಷವನ್ನು ಹಿಡಿದ **ಹರಿಣಾ** ವಿಷ್ಣುವಿನಿಂದ **ಘಾತಿತಃ** ಸಂಹೃತನಾಗಿರುವನು. ದೈತ್ಯರಲ್ಲಿ ವಿಷಮನಾಗಲು ದೇವತೆಗಳ ಸೇವೆಯೇ ಕಾರಣವೆಂದು ಭಾವ. ॥೬॥

**ತಸ್ಯ ತ್ಯಕ್ತಸ್ವಭಾವಸ್ಯ ಘೃಣೇರ್ಮಾಯಾವನೌಕಸಃ ।**
**ಭಜಂತಂ ಭಜಮಾನಸ್ಯ ಬಾಲಸ್ಯೇವಾಸ್ಥಿರಾತ್ಮನಃ ॥೭॥**

**ತ್ಯಕ್ತಸ್ವಭಾವಸ್ಯ** ತನ್ನ ಸಮತ್ವಸ್ವಭಾವವನ್ನು ತೊರೆದ **ಘೃಣೇಃ** ಶೋಚನೀಯನಾದ **ಮಾಯಾವನೌಕಸಃ** ಕಪಟದಿಂದ ವನವೇ ಸ್ಥಾನವಾಗಿವುಳ್ಳ ವರಾಹರೂಪನಾದ **ಭಜಂತಂ** ತನ್ನನ್ನು ಸೇವಿಸುವವರನ್ನು **ಭಜಮಾನಸ್ಯ** ಸೇವಾನುಸಾರ ಫಲ ನೀಡುವ **ಬಾಲಸ್ಯ** ಇವ ಮಗುವಿನಂತೆ **ಅಸ್ಥಿರಾತ್ಮನಃ** ಚಂಚಲ ಮನಸ್ಕನಾದ **ತಸ್ಯ** ಶ್ರೀಹರಿಯ

**ಮಚ್ಛೂಲಭಿನ್ನಗ್ರೀವಸ್ಯ ಭೂರಿಣಾ ರುಧಿರೇಣ ವೈ ।**
***ಯುದ್ಧ ಪ್ರಿಯಂ ತರ್ಪಯಿಷ್ಯೇ ಭ್ರಾತರಂ ಮೇ ಗತವ್ಯಥಃ ॥೮॥**

**ಮಚ್ಛೂಲಭಿನ್ನಗ್ರೀವಸ್ಯ** ಯುದ್ಧದಲ್ಲಿ ನನ್ನ ಶೂಲದಿಂದ ಕತ್ತರಿಸಿದ ಕುತ್ತಿಗೆಯುಳ್ಳ **ಭೂರಿಣಾ** ಬಹಳವಾದ **ರುಧಿರೇಣ** ರಕ್ತದಿಂದ **ಗತವ್ಯಥಃ** ಸಹೋದರ ಮರಣದ ವ್ಯಥೆಯನ್ನು ಕಳೆದುಕೊಂಡವನಾಗಿ **ಯುದ್ಧಪ್ರಿಯಂ** ಯುದ್ಧದಲ್ಲಿ ಪ್ರೀತಿಯುಳ್ಳ **ಮೇ** ನನ್ನ **ಭ್ರಾತರಂ** ತಮ್ಮನಾದ ಹಿರಣ್ಯಾಕ್ಷನನ್ನು **ತರ್ಪಯಿಷ್ಯೇ** ತೃಪ್ತಿಪಡಿಸುವೆನು.

ವಿಶೇಷ ೩- **ಯುಧಿ ಪ್ರಿಯಂ** ಎಂಬ ಪಾಠದಲ್ಲಿ **ಯುಧಿ ಶೂಲಚ್ಛಿನ್ನಗ್ರೀವಂ ಪ್ರಿಯಂ ಭ್ರಾತರಂ** ಎಂದು ಅನ್ವಯ ಮಾಡಬೇಕು. ॥೮॥

**ತಸ್ಮಿನ್ ಕೂಟೇ ಹಿತೇ ನಷ್ಟೇ ಕೃಂತಮೂಲೇ ವನಸ್ಪತೌ ।**
**ವಿಟಪಾ ಇವ ಶುಷ್ಯಂತಿ ವಿಷ್ಣುಪ್ರಾಣಾ ದಿವೌಕಸಃ ॥೯॥**

**ಕೂಟೇ** ಕಪಟಿಯಾದ **ಅಹಿತೇ** ಶತ್ರುವಾದ **ತಸ್ಮಿನ್** ಆ ವಿಷ್ಣುವು **ನಷ್ಟೇ ಸತಿ** ಮೃತನಾಗಲು **ವಿಷ್ಣುಪ್ರಾಣಾಃ** ವಿಷ್ಣುವಿನಿಂದಲೇ ಜೀವಿಸುವ **ದಿವೌಕಸಃ** ದೇವತೆಗಳು **ವನಸ್ಪತೌ** ಹೆಮ್ಮರದ **ಕೃಂತಮೂಲೇ** ಬೇರು ಕತ್ತರಿಸುತ್ತಿರಲು **ವಿಟಪಾ ಇವ** ಅದರ ಟೊಂಗೆಗಳು ಒಣಗುವಂತೆ ತಾವಾಗಿಯೇ **ಶುಷ್ಯಂತಿ** ಒಣಗುವರು. ॥೯॥

**ತಾವದ್ ಯಾತ ಭುವಂ ಯೂಯಂ ಬ್ರಹ್ಮಕ್ಷತ್ರಸಮೇಧಿತಾಮ್ ।**
**ಸೂದಯಧ್ವಂ ತಪೋಯಜ್ಞಸ್ವಾಧ್ಯಾಯವ್ರತದಾನಕಾನ್ ॥೧೦॥**

---

* 'ಯುಧಿ' ಇತಿ ಪಾಠಾಂತರ.

**ತಾವತ್** ನಾನು ಶ್ರೀಹರಿಯನ್ನು ಹುಡುಕವದರೊಳಗಾಗಿ **ಯೂಯಂ** ನೀವು **ಬ್ರಹ್ಮಕ್ಷತ್ರಸಮೇಧಿತಾಂ** ಬ್ರಾಹ್ಮಣಕ್ಷತ್ರಿಯರಿಂದ ತುಂಬಿದ **ಭುವಂ** ಭೂಲೋಕಕ್ಕೆ **ಯಾತ** ಹೋಗಿರಿ **ತಪೋಯಜ್ಞಸ್ವಾಧ್ಯಾಯವ್ರತದಾನಕಾನ್** ತಪಸ್ಸು, ಯಜ್ಞ, ವೇದಾಧ್ಯಯನ, ವ್ರತದಾನಗಳನ್ನು, ಅವುಗಳನ್ನು ಮಾಡುವವರನ್ನು **ಸೂದಯಧ್ವಂ** ನಾಶಮಾಡಿರಿ.

**... ತಾತ್ಪರ್ಯ ...**

**ವಿಪ್ರಯಜ್ಞಾದಿಮೂಲಂ ತು ಹರಿರಿತ್ಯಾಸುರಂ ಮತಮ್ ।**
**ಹರಿರೇವ ಹಿ ಸರ್ವಸ್ಯ ಮೂಲಂ ಸಮ್ಯಙ್ಮತೋ ನೃಪ ॥ ಇತಿ ಬ್ರಾಹ್ಮೇ ॥**

ಬ್ರಾಹ್ಮಣರು ಯಜ್ಞವೊದಲಾದವು ಶ್ರೀಹರಿಗೆ ಮೂಲವು ಅಂದರೆ ಶ್ರೀಹರಿಯು ಭಕ್ತಿಜ್ಞಾನಾದಿಗಳಿಲ್ಲದೇ ಕೇವಲ ಯಾಗಾದಿ ಕ್ರಿಯೆಗಳಿಂದಲೇ ಪ್ರಸನ್ನನಾಗುತ್ತಾನೆಂಬುದು ಆಸುರ ಮತವು. ಶ್ರೀಪರಮಾತ್ಮನೇ ಮೂಲಭೂತನು ಎಂಬುದು ಸಮೀಚೀನ ಮತವು. ॥೧೦॥

ಹೀಗೆ ಯಜ್ಞಾದಿಗಳನ್ನು ಹಾಳು ಮಾಡುವದರಿಂದ ವಿಷ್ಣುವಿಗೇನು ಅಪಕಾರ ಮಾಡಿದಂತಾಯಿತು ಎಂದರೆ ಹೇಳುತ್ತಾರೆ-

**ವಿಷ್ಣುರ್ದ್ವಿಜಕ್ರಿಯಾಮೂಲೋ ಯಜ್ಞೋ ಧರ್ಮಮಯಃ ಪುಮಾನ್ ।**
**ದೇವರ್ಷಿಪಿತೃಭೂತಾನಾಂ ಧರ್ಮಸ್ಯ ಚ ಪರಾಯಣಮ್ ॥೧೧॥**

**ವಿಷ್ಣುಃ** ವಿಷ್ಣುವು **ದ್ವಿಜಕ್ರಿಯಾಮೂಲಃ** ಬ್ರಾಹ್ಮಣಾದಿಗಳು ಮಾಡುವ ಯಜ್ಞಕ್ರಿಯೆಗಳೇ ಬಲವಾಗಿವುಳ್ಳವನು **ಯಜ್ಞಃ** ಯಜ್ಞೋದ್ದೇಶ್ಯನು **ಧರ್ಮಮಯಃ** ಧರ್ಮವೇ ಪ್ರಧಾನವಾಗಿವುಳ್ಳವನು ತನಗೆ ಆಧಾರವಾಗಿವುಳ್ಳವನು **ಪುಮಾನ್** ಪುರುಷನು **ದೇವರ್ಷಿಪಿತೃಭೂತಾನಾಂ** ದೇವತೆಗಳು ಋಷಿಗಳು ಪಿತೃಗಳು ಭೂತಗಳಿಗೂ **ಧರ್ಮಸ್ಯ ಚ** ಧರ್ಮಕ್ಕೂ **ಪರಾಯಣಂ** ಮುಖ್ಯಾಶ್ರಯನು.

ವಿಶೇಷ ಃ- ಇಲ್ಲಿ ಬ್ರಾಹ್ಮಣಾದಿಗಳಿಂದ ಅವರ ಕ್ರಿಯೆಗಳಿಂದ ಶ್ರೀಹರಿಯು ಉಳಿದಿರುವನು ಎಂಬುದು, ಭಕ್ತಿಜ್ಞಾನವಿಲ್ಲದೇ ಕೇವಲ ಯಜ್ಞದಿಂದ ಪ್ರಸನ್ನನಾಗುವನೆಂಬುದು, ದಾನಧರ್ಮಾದಿಗಳಿಂದಲೇ ಒಲಿಯುವನು ಎಂಬುದು, ಸಾಮಾನ್ಯಪುರುಷನೆಂಬುದೂ ಅಸುರಮತ. ಆದರೆ ಅದೇ ಪದಗಳಿಗೆ ಬ್ರಾಹ್ಮಣಾದಿಗಳ ಯಜ್ಞಯಾಗಾದಿಗಳಿಗೆ ಪ್ರತಿಷ್ಠಾಪಕನು, (ಸಾರ್ಥಕಗೊಳಿಸುವವನು) ಯಜ್ಞಮುಖ್ಯೋದ್ದೇಶನು, ಧಾರಕತಮನು, ಮುಖ್ಯಪುರುಷನು, ದೇವಾದಿಗಳಿಗೆ ಮುಖ್ಯಾಶ್ರಯನು ಎಂಬುದು ದೇವಮತ. ಹಿಂದಿನ ಶ್ಲೋಕದಲ್ಲಿ ಹೇಳಿದ ಪ್ರಮಾಣವೇ ಇದಕ್ಕೆ ದ್ಯೋತಕ. 'ಯಥಾರ್ಥದ್ಯೋತಕಾಃ ತಥಾ' ಎಂದು

ಹೇಳಿರುವದರಿಂದ ಈ ಪದಗಳಿಗೆ ಎರಡು ಅರ್ಥಗಳಿವೆ ಎಂದು ಸ್ಪಷ್ಟವಾಗುವದು. ಅಲ್ಲದೇ ಮೇಲೆ ಹೇಳಿದ ತಾತ್ಪರ್ಯಗೃಹೀತಬ್ರಾಹ್ಮವಾಕ್ಯವು ಇದನ್ನೇ ತಿಳಿಸುವದು.

**ಯತ್ರ ಯತ್ರ ದ್ವಿಜಾ ಗಾವೋ ವೇದಾ ವರ್ಣಾಶ್ರಮಕ್ರಿಯಾಃ ।**
**ತಂ ತಂ ಜನಪದಂ ಯಾತ ಸಂದೀಪಯತ ವೃಶ್ಚತ ॥೧೨॥**

**ಯತ್ರ ಯತ್ರ** ಯಾವ ಯಾವ ದೇಶಗಳಲ್ಲಿ **ದ್ವಿಜಾಃ** ಬ್ರಾಹ್ಮಣರು **ಗಾವಃ** ಆಕಳುಗಳು **ವೇದಾಃ** ವೇದಗಳು **ವರ್ಣಾಶ್ರಮಾಃ** ಜಾತಿಗಳು ಆಶ್ರಮಗಳು **ಕ್ರಿಯಾಃ** ಅದಕ್ಕೆ ತಕ್ಕಂತೆ ಕರ್ಮಗಳು ಇವೆಯೋ **ತಂ ತಂ ಜನಪದಂ** ಆಯಾ ದೇಶವನ್ನು ಕುರಿತು **ಯಾತ** ಹೋಗಿರಿ **ಸಂದೀಪಯತ** ಅವರನ್ನು ಅವುಗಳನ್ನು ಸುಡಿರಿ **ವೃಶ್ಚತ** ಕತ್ತರಿಸಿರಿ.

ವಿಶೇಷ ಃ- ಬ್ರಾಹ್ಮಣರು ಯಜ್ಞಾದಿಗಳನ್ನು ಮಾಡುವದರಿಂದಲೂ, ಹಸುಗಳು ಹೋಮದ್ರವ್ಯಸಂಪಾದಕಗಳಾದ್ದರಿಂದಲೂ, ವೇದಗಳು ಮಂತ್ರಗಳಾಗಿ-ರುವದರಿಂದಲೂ, ವರ್ಣಾಶ್ರಮಧರ್ಮಗಳು ವಿಹಿತಗಳಾದ್ದರಿಂದಲೂ, ವಿಷ್ಣುಪ್ರೀತಿಗೆ ಕಾರಣವೆಂದು ದೇವತೆಗಳ ಮತ. ಅಸುರಮತದಂತೆ ವಿಷ್ಣುವಿನ ಉಳಿವಿಗೆ ಕಾರಣಗಳೆಂದೂ ಅವುಗಳ ನಾಶದಿಂದ ವಿಷ್ಣುವಿನ ಅಳಿವಿಗೆ ಕಾರಣವಾಗಿ ಅಪಕಾರವಾಗುವದೆಂದು ಅಸುರನ ಅಭಿಪ್ರಾಯ ತಿಳಿಯಬೇಕು. ॥೧೨॥

**ಇತಿ ತೇ ಭರ್ತೃನಿರ್ದೇಶಮಾದಾಯ ಶಿರಸಾಽಽದೃತಾಃ ।**
**ತಥಾ ಪ್ರಜಾನಾಂ ಕದನಂ ವಿದಧುಃ ಕದನಪ್ರಿಯಾಃ ॥೧೩॥**

**ಕದನಪ್ರಿಯಾಃ** ಹಿಂಸಾಪ್ರಿಯರಾದ(ಕದ ಹಿಂಸಾಯಾಂ ಎಂದು ಧಾತು)**ತೇ** ದಾನವದೈತೇಯರು **ಭರ್ತೃನಿರ್ದೇಶಂ** ಮೇಲೆ ಹೇಳಿದ ಒಡೆಯನ ಅಪ್ಪಣೆಯನ್ನು **ಆದಾಯ** ಪಡೆದು **ಶಿರಸಾ** ತಲೆಯಿಂದ **ಆದೃತಾಃ** ಮಾನ್ಯಮಾಡಿದವರಾಗಿ **ತಥಾ** ಆ ರೀತಿಯಲ್ಲಿ **ಪ್ರಜಾನಾಂ** ಜನರಿಗೆ **ಕದನಂ ಚಕ್ರುಃ** ಹಿಂಸೆಯನ್ನು ಮಾಡಿದರು. ॥೧೩॥

**ಪುರಗ್ರಾಮವ್ರಜೋದ್ಯಾನಕ್ಷೇತ್ರಾರಾಮಾಶ್ರಮಾಕರಾನ್ ।**
**ಖೇಟಖರ್ವಟಘೋಷಾಂಶ್ಚ ದದಹುಃ ಪತ್ತನಾನಿ ಚ ॥೧೪॥**

**ಪುರ** ರಾಜಧಾನಿ **ಗ್ರಾಮ** ಬಹುಜನರಿಂದ ತುಂಬಿದ ಹಳ್ಳಿ **ವ್ರಜ** ದನಗಳ ಕೊಟ **ಉದ್ಯಾನ** ಮಹಾವನ **ಕ್ಷೇತ್ರ** ಶ್ರೀಮುಷ್ಣಾದಿ ಪವಿತ್ರಗೋಪಾಲವಸತಿಸ್ಥಳ **ಆರಾಮ** ಉಪವನ **ಆಶ್ರಮ** ಋಷಿಗಳು ವಾಸಿಸುವ ಸ್ಥಳ **ಆಕರ** ರತ್ನಮುಂತಾದವುಗಳ ಗಣಿಗಳು **ಖೇಟ** ನಾಟ್ಯರಂಗಸ್ಥಳ **ಖರ್ವಟ** ಬಟ್ಟೆ ಮಾರುವ ಸ್ಥಳ **ಘೋಷ** ಕವಾಡಿಗರ ಹಳ್ಳಿ (ಆಭೀರಪಲ್ಲಿ) **ಪತ್ತನ** ವ್ಯಾಪಾರಸ್ಥರಿರುವ ನಗರ ಇವುಗಳನ್ನು **ದದಹುಃ** ಸುಟ್ಟರು.

**ಕೇಚಿತ್ಖನಿತ್ರೈರ್ಬಿಭಿದುಃ ಸೇತುಪ್ರಾಕಾರಗೋಪುರಾನ್ ।**
**ಆಜೀವ್ಯಾಂಶ್ಚಿಚ್ಛಿದುರ್ವೃಕ್ಷಾನ್ ಕೇಚಿತ್ ಪರಶುಪಾಣಯಃ ॥**
**ಪ್ರಾದಹನ್ ಶರಣಾನನ್ಯೇ ಪ್ರಜಾನಾಂ ಜ್ವಲಿತೋಲ್ಮುಕೈಃ** ॥೧೪॥

**ಕೇಚಿತ್** ಕೆಲವರು **ಖನಿತ್ರೈಃ** ಗುದ್ದಲಿ ಮುಂತಾದ ಅಗೆಯುವ ಸಾಧನಗಳಿಂದ **ಸೇತುಪ್ರಾಕಾರಗೋಪುರಾನ್** ಸೇತುವೆಗಳನ್ನು, ಕೋಟೆಗೋಡೆಗಳನ್ನು, ಅಗಸಿ ಬಾಗಿಲುಗಳನ್ನು **ಬಿಭಿದುಃ** ಒಡೆದು ಹಾಕಿದರು **ಪರಶುಪಾಣಯಃ ಕೇಚಿತ್** ಕೊಡಲೆಯನ್ನು ಕೈಯಲ್ಲಿ ಹಿಡಿದ ಕೆಲವರು **ಆಜೀವ್ಯಾನ್ ವೃಕ್ಷಾನ್** ಬಹುಕಾಲವಿರುವ ತೆಂಗು ಅಡಿಕೆ ಹಲಸು ಹುಣಸೆ ಮುಂತಾದ ಮರಗಳನ್ನು **ಚಿಚ್ಛಿದುಃ** ಕತ್ತರಿಸಿದರು **ಅನ್ಯೇ** ಇತರರು **ಜ್ವಲಿತೋಲ್ಮುಕೈಃ** ಉರಿಯುವ ಕೊಳ್ಳೆಗಳಿಂದ **ಪ್ರಜಾನಾಂ** ಜನರ **ಶರಣಾನ್** ಮನೆಗಳನ್ನು **ಪ್ರಾದಹನ್** ಸಂಪೂರ್ಣವಾಗಿ ಸುಟ್ಟುಹಾಕಿದರು. ॥೧೪॥

**ಏವಂ ವಿಪ್ರಕೃತೇ ಲೋಕೇ ದೈತ್ಯೇಂದ್ರಾನುಚರೈರ್ಮುಹುಃ ।**
**ದಿವಂ ದೇವಾಃ ಪರಿತ್ಯಜ್ಯ ಭುವಿ ಚೇರುರಲಕ್ಷಿತಾಃ** ॥೧೬॥

**ಏವಂ** ಈ ರೀತಿ **ಲೋಕೇ** ಜಗತ್ತು **ದೈತ್ಯೇಂದ್ರಾನುಚರೈಃ** ಹಿರಣ್ಯಕಶಿಪುವಿನ ಭೃತ್ಯರಿಂದ **ಮುಹುಃ** ಮೇಲಿಂದ ಮೇಲೆ **ವಿಪ್ರಕೃತೇ ಸತಿ** ಹಾಳಾಗುತ್ತಿರಲು **ದೇವಾಃ** ಲೋಕಪಾಲಕರಾದ ದೇವತೆಗಳು **ದಿವಂ** ಸ್ವರ್ಗವನ್ನು **ಪರಿತ್ಯಜ್ಯ** ಬಿಟ್ಟು **ಭುವಿ** ಭೂಲೋಕದಲ್ಲಿ **ಅಲಕ್ಷಿತಾಃ ಸಂತಃ** ಯಾರಿಗೂ ಕಾಣಸದಂತೆ **ಚೇರುಃ** ಸಂಚರಿಸಿದರು.

**ಹಿರಣ್ಯಕಶಿಪುರ್ಭ್ರಾತುಃ ಸಂಪರೇತಸ್ಯ ದುಃಖಿತಃ ।**
**ಕೃತ್ವಾ ಕಟೋದಕಾದೀನಿ ಭ್ರಾತೃಪುತ್ರಾನಸಾಂತ್ವಯತ್** ॥೧೭॥

**ಶಕುನಿಂ ಶಂಬರಂ ಧೃಷ್ಟಂ ಭೂತಸಂತಾಪನಂ ವೃಕಮ್ ।**
**ಕಾಲನೇಮಿಂ ಮಹಾನಾಭಂ ಹರಿಶ್ಮಶ್ರುಮಥೋಲ್ಕಲಮ್** ॥೧೮॥

**ತನ್ಮಾತರಂ ರುಶದ್ಭಾನುಂ ದಿತಿಂ ಚ ಜನನೀಂ ಗಿರಾ ।**
**ಶ್ಲಕ್ಷ್ಣಯಾ ದೇಶಕಾಲಜ್ಞ ಇದಮಾಹ ಜನೇಶ್ವರ** ॥೧೯॥

**ದುಃಖಿತಃ** ದುಃಖಹೊಂದಿದ **ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಸಂಪರೇತಸ್ಯ** ಮೃತನಾದ **ಭ್ರಾತುಃ** ತಮ್ಮ ಹಿರಣ್ಯಾಕ್ಷನಿಗೆ **ಕಟೋದಕಾದೀನಿ** ಪ್ರೇತೋದಕ, ಧರ್ಮೋದಕಾದಿಗಳನ್ನು **ಕೃತ್ವಾ** ಕೊಟ್ಟು **ಭ್ರಾತೃಪುತ್ರಾನ್** ಹಿರಣ್ಯಾಕ್ಷನ ಮಕ್ಕಳಾದ ಶಕುನಿ, ಶಂಬರ, ದೃಷ್ಟ ,ಭೂತ ಸಂತಾಪನ, ವೃಕ, ಕಾಲನೇಮಿ, ಮಹಾನಾಭ, ಹರಿಶ್ಮಶ್ರು ಉಲ್ಕಲರನ್ನು **ಅಸಾಂತ್ವಯತ್** ಸಮಾಧಾನ ಪಡಿಸಿದನು **ಹೇ ಜನೇಶ್ವರ**

ಧರ್ಮರಾಜನೇ **ದೇಶಕಾಲಜ್ಞಃ** ಯಾವ ದೇಶಕಾಲಗಳಲ್ಲಿ ಏನು ಮಾತನಾಡಬೇಕೆಂದು ತಿಳಿದ (ಸತ್ತವರ ಮಕ್ಕಳು ಮುಂತಾದವರಲ್ಲಿ ಮಾತಾಡುವದನ್ನರಿತ) ಹಿರಣ್ಯಕಶಿಪುವು **ತನ್ಮಾತರಂ** ಶಕುನಿ ಮುಂತಾದವರ ತಾಯಿಯಾದ **ರುಶದ್ಭಾನುಂ** ರುಶದ್ಭಾನು ಎಂಬ ಹಿರಣ್ಯಾಕ್ಷನ ಪತ್ನಿಯನ್ನು **ಜನನೀಂ** ತನ್ನ ಮತ್ತು ಹಿರಣ್ಯಾಕ್ಷನ ತಾಯಿಯಾದ **ದಿತಿಂ ಚ** ದಿತಿಯನ್ನು ಕುರಿತು **ಶ್ಲಕ್ಷ್ಣಯಾ** ಮಧುರವಾದ **ಗಿರಾ** ಮಾತಿನಿಂದ **ಇದಂ** ಮುಂದೆ ಹೇಳುವ ಮಾತನ್ನು **ಆಹ** ಹೇಳಿದನು. ।।೧೭,೧೮,೧೯।।

**ಹಿರಣ್ಯಕಶಿಪುರುವಾಚ**

**ಅಂಬಾಂಬ ಹೇ ವಧೂಃ ಪುತ್ರಾ ವೀರಂ ಮಾರ್ಹಥ ಶೋಚಿತುಮ್ ।**
**ರಿಪೋರಭಿಮುಖೇ ಶ್ಲಾಘ್ಯಃ ಶೂರಾಣಾಂ ವಧ ಈಪ್ಸಿತಃ ।।೨೦।।**

**ಹೇ ಅಂಬ ಅಂಬ** ತಾಯಿಯೇ **ಹೇ ವಧೂಃ** ತಮ್ಮನ ಹೆಂಡತಿಯಾದ್ದರಿಂದ ಸೊಸೆಯೇ **ಹೇ ಪುತ್ರಾಃ** ಹಿರಣ್ಯಾಕ್ಷನ ಮಕ್ಕಳಾದ್ದರಿಂದ ಮಕ್ಕಳೇ **ವೀರಂ** ಶೂರನಾದ ಹಿರಣ್ಯಾಕ್ಷನನ್ನು ಕುರಿತು **ಶೋಚಿತುಂ** ದುಃಖಪಡುವದಕ್ಕೆ **ಯೂಯಂ** ನೀವು **ಮಾ ಅರ್ಹಥ** ಯೋಗ್ಯರಲ್ಲ. ದುಃಖಿಸುವದು ಯುಕ್ತವಲ್ಲವೆಂದರ್ಥ.

ವಿಶೇಷ ಃ- ೧) ಶತ್ರುವಿನ ಕೈಯಲ್ಲಿ ಸಾಯುವುದು ಐಹಿಕ-ಆಮುಷ್ಮಿಕ ಜನಶ್ಲಾಘ್ಯವಲ್ಲವೆಂದು ಶೋಕವೇ ? ೨) ಅಥವಾ ಇಲ್ಲಿಯೇ ಇನ್ನೂ ಕೆಲವು ಕಾಲ ಬದುಕಿರಬೇಕೆಂಬ ಅಭೀಷ್ಟವು ನೆರವೇರಲಿಲ್ಲವೆಂದು ಶೋಕವೆ ? ೩) ಅಥವಾ ತಂದೆತಾಯಿಮಕ್ಕಳು ಎಂಬ ಸಂಬಂಧವು ಕ್ಷಣಿಕವೆಂದು ಶೋಕವೇ ? ಎಂದು ಆಶಂಕಿಸಿ ಮೊದಲಿನ ಎರಡು ಪ್ರಶ್ನೆಗಳಿಗೆ ಕಾರಣವಿಲ್ಲವೆಂದು ಹೇಳುತ್ತಾನೆ. **ಶ್ಲಾಘ್ಯಃ** ಎಲ್ಲರಿಂದಲೂ ಶ್ಲಾಘನೀಯವಾದ **ರಿಪೋಃ** ಶತ್ರುವಿನ **ಅಭಿಮುಖೇ** ಎದುರಿನಲ್ಲಿ ಮಾಡುವ ಯುದ್ಧದಲ್ಲಿ **ವಧಃ** ಸಾವು **ಶೂರಾಣಾಂ** ಪರಾಕ್ರಮಿಗಳಿಗೆ **ಈಪ್ಸಿತಃ** ಇಷ್ಟವಾದುದೇ ವೀರನಾಗಿ ಸಾಯುವದು ಜನಶ್ಲಾಘ್ಯವೆಂದು ಅದು ಶೂರರಿಗೆ ಇಷ್ಟವೆಂದೂ ಆದ್ದರಿಂದ ದುಃಖಿಸಬೇಕಿಲ್ಲವೆಂದು ಅಭಿಪ್ರಾಯ. ।।೨೦।।

ಮೂರನೇ ಪ್ರಶ್ನೆಗೆ ಉತ್ತರವನ್ನು ತಾಯಿಯೊಬ್ಬಳನ್ನೇ ಉದ್ದೇಶಿಸಿ ಹೇಳುತ್ತಾನೆ-

**ಭೂತಾನಾಮಿಹ ಸಂವಾಸಃ ಪ್ರಪಾಯಾಮಿವ ಸುವ್ರತೇ ।**
**ದೈವೇನೈಕತ್ರ ನೀತಾನಾಮುನ್ನೀತಾನಾಂ ತಥಾಽಧ್ರುವಃ ।।೨೧।।**

**ಹೇ ಸುವ್ರತೇ** ಪಾತಿವ್ರತ್ಯಾದಿ ಉತ್ತಮವ್ರತಗಳುಳ್ಳ ತಾಯಿಯೇ **ಇಹ** ಈ ಕರ್ಮಭೂಮಿಯಲ್ಲಿ **ದೈವೇನ** ಕರ್ಮವಶವಾಗಿ ವಿಧಿಯಿಂದ ಶ್ರೀಹರಿಯಿಂದ **ಏಕತ್ರ** ಒಂದೆಡೆಗೆ **ನೀತಾನಾಂ** ಸೇರಿಸಲ್ಪಟ್ಟ **ತಥಾ** ಹಾಗೂ **ಉನ್ನೀತಾನಾಂ** ಮಕ್ಕಳು

**ಕೇಚಿತ್ಖನಿತ್ರೈರ್ಬಿಭಿದುಃ ಸೇತುಪ್ರಾಕಾರಗೋಪುರಾನ್ ।**
**ಆಜೀವ್ಯಾಂಶ್ಚಿಚ್ಛಿದುರ್ವೃಕ್ಷಾನ್ ಕೇಚಿತ್ ಪರಶುಪಾಣಯಃ ॥**
**ಪ್ರಾದಹನ್ ಶರಣಾನನ್ಯೇ ಪ್ರಜಾನಾಂ ಜ್ವಲಿತೋಲ್ಮುಕೈಃ ॥೧೫॥**

**ಕೇಚಿತ್** ಕೆಲವರು **ಖನಿತ್ರೈಃ** ಗುದ್ದಲಿ ಮುಂತಾದ ಅಗೆಯುವ ಸಾಧನಗಳಿಂದ **ಸೇತುಪ್ರಾಕಾರಗೋಪುರಾನ್** ಸೇತುವೆಗಳನ್ನು, ಕೋಟೆಗೋಡೆಗಳನ್ನು, ಅಗಸಿ ಬಾಗಿಲುಗಳನ್ನು **ಬಿಭಿದುಃ** ಒಡೆದು ಹಾಕಿದರು **ಪರಶುಪಾಣಯಃ ಕೇಚಿತ್** ಕೊಡಲೆಯನ್ನು ಕೈಯಲ್ಲಿ ಹಿಡಿದ ಕೆಲವರು **ಆಜೀವ್ಯಾನ್ ವೃಕ್ಷಾನ್** ಬಹುಕಾಲವಿರುವ ತೆಂಗು ಅಡಿಕೆ ಹಲಸು ಹುಣಿಸೆ ಮುಂತಾದ ಮರಗಳನ್ನು **ಚಿಚ್ಛಿದುಃ** ಕತ್ತರಿಸಿದರು **ಅನ್ಯೇ** ಇತರರು **ಜ್ವಲಿತೋಲ್ಮುಕೈಃ** ಉರಿಯುವ ಕೊಳ್ಳಿಗಳಿಂದ **ಪ್ರಜಾನಾಂ** ಜನರ **ಶರಣಾನ್** ಮನೆಗಳನ್ನು **ಪ್ರಾದಹನ್** ಸಂಪೂರ್ಣವಾಗಿ ಸುಟ್ಟುಹಾಕಿದರು. ॥೧೫॥

**ಏವಂ ವಿಪ್ರಕೃತೇ ಲೋಕೇ ದೈತ್ಯೇಂದ್ರಾನುಚರೈರ್ಮುಹುಃ ।**
**ದಿವಂ ದೇವಾಃ ಪರಿತ್ಯಜ್ಯ ಭುವಿ ಚೇರುರಲಕ್ಷಿತಾಃ ॥೧೬॥**

**ಏವಂ** ಈ ರೀತಿ **ಲೋಕೇ** ಜಗತ್ತು **ದೈತ್ಯೇಂದ್ರಾನುಚರೈಃ** ಹಿರಣ್ಯಕಶಿಪುವಿನ ಭೃತ್ಯರಿಂದ **ಮುಹುಃ** ಮೇಲಿಂದ ಮೇಲೆ **ವಿಪ್ರಕೃತೇ ಸತಿ** ಹಾಳಾಗುತ್ತಿರಲು **ದೇವಾಃ** ಲೋಕಪಾಲಕರಾದ ದೇವತೆಗಳು **ದಿವಂ** ಸ್ವರ್ಗವನ್ನು **ಪರಿತ್ಯಜ್ಯ** ಬಿಟ್ಟು **ಭುವಿ** ಭೂಲೋಕದಲ್ಲಿ **ಅಲಕ್ಷಿತಾಃ ಸಂತಃ** ಯಾರಿಗೂ ಕಾಣಸದಂತೆ **ಚೇರುಃ** ಸಂಚರಿಸಿದರು.

**ಹಿರಣ್ಯಕಶಿಪುರ್ಭ್ರಾತುಃ ಸಂಪರೇತಸ್ಯ ದುಃಖಿತಃ ।**
**ಕೃತ್ವಾ ಕಟೋದಕಾದೀನಿ ಭ್ರಾತೃಪುತ್ರಾನಸಾಂತ್ವಯತ್ ॥೧೭॥**

**ಶಕುನಿಂ ಶಂಬರಂ ಧೃಷ್ಟಂ ಭೂತಸಂತಾಪನಂ ವೃಕಮ್ ।**
**ಕಾಲನೇಮಿಂ ಮಹಾನಾಭಂ ಹರಿಶ್ಮಶ್ರುಮಥೋಲ್ಕಲಮ್ ॥೧೮॥**

**ತನ್ಮಾತರಂ ರುಶದ್ಭಾನುಂ ದಿತಿಂ ಚ ಜನನೀಂ ಗಿರಾ ।**
**ಶ್ಲಕ್ಷ್ಣಯಾ ದೇಶಕಾಲಜ್ಞ ಇದಮಾಹ ಜನೇಶ್ವರ ॥೧೯॥**

**ದುಃಖಿತಃ** ದುಃಖಹೊಂದಿದ **ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಸಂಪರೇತಸ್ಯ** ಮೃತನಾದ **ಭ್ರಾತುಃ** ತಮ್ಮ ಹಿರಣ್ಯಾಕ್ಷನಿಗೆ **ಕಟೋದಕಾದೀನಿ** ಪ್ರೇತೋದಕ, ಧರ್ಮೋದಕಾದಿಗಳನ್ನು **ಕೃತ್ವಾ** ಕೊಟ್ಟು **ಭ್ರಾತೃಪುತ್ರಾನ್** ಹಿರಣ್ಯಾಕ್ಷನ ಮಕ್ಕಳಾದ ಶಕುನಿ, ಶಂಬರ, ದೃಷ್ಟ ,ಭೂತ ಸಂತಾಪನ, ವೃಕ, ಕಾಲನೇಮಿ, ಮಹಾನಾಭ, ಹರಿಶ್ಮಶ್ರು ಉಲ್ಕಲರನ್ನು **ಅಸಾಂತ್ವಯತ್** ಸಮಾಧಾನ ಪಡಿಸಿದನು **ಹೇ ಜನೇಶ್ವರ**

ಧರ್ಮರಾಜನೇ **ದೇಶಕಾಲಜ್ಞಃ** ಯಾವ ದೇಶಕಾಲಗಳಲ್ಲಿ ಏನು ಮಾತನಾಡಬೇಕೆಂದು ತಿಳಿದ (ಸತ್ತವರ ಮಕ್ಕಳು ಮುಂತಾದವರಲ್ಲಿ ಮಾತಾಡುವದನ್ನರಿತ) ಹಿರಣ್ಯಕಶಿಪುವು **ತನ್ಮಾತರಂ** ಶಕುನಿ ಮುಂತಾದವರ ತಾಯಿಯಾದ **ರುಶದ್ಭಾನುಂ** ರುಶದ್ಭಾನು ಎಂಬ ಹಿರಣ್ಯಾಕ್ಷನ ಪತ್ನಿಯನ್ನು **ಜನನೀಂ** ತನ್ನ ಮತ್ತು ಹಿರಣ್ಯಾಕ್ಷನ ತಾಯಿಯಾದ **ದಿತಿಂ ಚ** ದಿತಿಯನ್ನು ಕುರಿತು **ಶ್ಲಕ್ಷ್ಣಯಾ** ಮಧುರವಾದ **ಗಿರಾ** ಮಾತಿನಿಂದ **ಇದಂ** ಮುಂದೆ ಹೇಳುವ ಮಾತನ್ನು **ಆಹ** ಹೇಳಿದನು. ||೧೭,೧೮,೧೯||

**ಹಿರಣ್ಯಕಶಿಪುರುವಾಚ**

**ಅಂಬಾಂಬ ಹೇ ವಧೂಃ ಪುತ್ರಾ ವೀರಂ ಮಾರ್ಹಥ ಶೋಚಿತುಮ್ ।**
**ರಿಪೋರಭಿಮುಖೇ ಶ್ಲಾಘ್ಯಃ ಶೂರಾಣಾಂ ವಧ ಈಪ್ಸಿತಃ ||೨೦||**

**ಹೇ ಅಂಬ ಅಂಬ** ತಾಯಿಯೇ **ಹೇ ವಧೂಃ** ತಮ್ಮನ ಹೆಂಡತಿಯಾದ್ದರಿಂದ ಸೊಸೆಯೇ **ಹೇ ಪುತ್ರಾಃ** ಹಿರಣ್ಯಾಕ್ಷನ ಮಕ್ಕಳಾದ್ದರಿಂದ ಮಕ್ಕಳೇ **ವೀರಂ** ಶೂರನಾದ ಹಿರಣ್ಯಾಕ್ಷನನ್ನು ಕುರಿತು **ಶೋಚಿತುಂ** ದುಃಖಪಡುವದಕ್ಕೆ **ಯೂಯಂ** ನೀವು **ಮಾ ಅರ್ಹಥ** ಯೋಗ್ಯರಲ್ಲ. ದುಃಖಿಸುವದು ಯುಕ್ತವಲ್ಲವೆಂದರ್ಥ.

ವಿಶೇಷ ಃ- ೧) ಶತ್ರುವಿನ ಕೈಯಲ್ಲಿ ಸಾಯುವುದು ಐಹಿಕ-ಆಮುಷ್ಮಿಕ ಜನಶ್ಲಾಘ್ಯವಲ್ಲವೆಂದು ಶೋಕವೇ ? ೨) ಅಥವಾ ಇಲ್ಲಿಯೇ ಇನ್ನೂ ಕೆಲವು ಕಾಲ ಬದುಕಿರಬೇಕೆಂಬ ಅಭೀಷ್ಟವು ನೆರವೇರಲಿಲ್ಲವೆಂದು ಶೋಕವೆ ? ೩) ಅಥವಾ ತಂದೆತಾಯಿಮಕ್ಕಳು ಎಂಬ ಸಂಬಂಧವು ಕ್ಷಣಿಕವೆಂದು ಶೋಕವೇ ? ಎಂದು ಆಶಂಕಿಸಿ ಮೊದಲಿನ ಎರಡು ಪ್ರಶ್ನೆಗಳಿಗೆ ಕಾರಣವಿಲ್ಲವೆಂದು ಹೇಳುತ್ತಾನೆ. **ಶ್ಲಾಘ್ಯಃ** ಎಲ್ಲರಿಂದಲೂ ಶ್ಲಾಘನೀಯವಾದ **ರಿಪೋಃ** ಶತ್ರುವಿನ **ಅಭಿಮುಖೇ** ಎದುರಿನಲ್ಲಿ ಮಾಡುವ ಯುದ್ಧದಲ್ಲಿ **ವಧಃ** ಸಾವು **ಶೂರಾಣಾಂ** ಪರಾಕ್ರಮಿಗಳಿಗೆ **ಈಪ್ಸಿತಃ** ಇಷ್ಟವಾದುದೇ ವೀರನಾಗಿ ಸಾಯುವದು ಜನಶ್ಲಾಘ್ಯವೆಂದು ಅದು ಶೂರರಿಗೆ ಇಷ್ಟವೆಂದೂ ಆದ್ದರಿಂದ ದುಃಖಿಸಬೇಕಿಲ್ಲವೆಂದು ಅಭಿಪ್ರಾಯ. ||೨೦||

ಮೂರನೇ ಪ್ರಶ್ನೆಗೆ ಉತ್ತರವನ್ನು ತಾಯಿಯೊಬ್ಬಳನ್ನೇ ಉದ್ದೇಶಿಸಿ ಹೇಳುತ್ತಾನೆ-

**ಭೂತಾನಾಮಿಹ ಸಂವಾಸಃ ಪ್ರಪಾಯಾಮಿವ ಸುವ್ರತೇ ।**
**ದೈವೇನೈಕತ್ರ ನೀತಾನಾಮುನ್ನೀತಾನಾಂ ತಥಾಽಧ್ರುವಃ ||೨೧||**

**ಹೇ ಸುವ್ರತೇ** ಪಾತಿವ್ರತ್ಯಾದಿ ಉತ್ತಮವ್ರತಗಳುಳ್ಳ ತಾಯಿಯೇ **ಇಹ** ಈ ಕರ್ಮಭೂಮಿಯಲ್ಲಿ **ದೈವೇನ** ಕರ್ಮವಶವಾಗಿ ವಿಧಿಯಿಂದ ಶ್ರೀಹರಿಯಿಂದ **ಏಕತ್ರ** ಒಂದೆಡೆಗೆ **ನೀತಾನಾಂ** ಸೇರಿಸಲ್ಪಟ್ಟ **ತಥಾ** ಹಾಗೂ **ಉನ್ನೀತಾನಾಂ** ಮಕ್ಕಳು

ಮೊಮ್ಮಕ್ಕಳು ಈ ರೀತಿ ಬೆಳೆಸಲ್ಪಟ್ಟ ಅನಂತರ ವಿಯೋಗವನ್ನೂ ಹೊಂದಿಸಲ್ಪಟ್ಟ **ಭೂತಾನಾಂ** ಪ್ರಾಣಿಗಳ **ಸಂವಾಸಃ** ಸಹ ಬಾಳ್ವೆಯು **ಪ್ರಪಾಯಾಂ ಇವ** ಅರವಟ್ಟಿಗೆಯಲ್ಲಿ ಬೇರೆ ಬೇರೆ ಕಡೆಗಳಿಂದ ಬಂದ ಜನರು ಸೇರಿರುವಂತೆ **ಅಧ್ರುವಃ** ಅನಿತ್ಯವು.

ವಿಶೇಷ :- 'ಪ್ರಪಾ ಪಾನೀಯಃ ಸ್ಯಾತ್ ಮಂತ್ರಶಾಲಾ ಪ್ರತಿಶ್ರಯಃ' ಎಂದು ಅಭಿಧಾನವಿದೆ. ಆದ್ದರಿಂದ ಅನಿತ್ಯವೆಂದೇ ನಿರ್ಣೀತವಾದ ಈ ಬಂಧುತ್ವಕ್ಕಾಗಿ ದುಃಖಿಸಬೇಕಿಲ್ಲವೆಂದು ಭಾವ. ॥೨೦॥

ಪ್ರಾಣಿಗಳ ಪರಸ್ಪರ ಸಹವಾಸವು ಅನಿತ್ಯವಾದರೇ ಯಾರ ಸಹವಾಸ ನಿತ್ಯ ಎಂದಾಶಂಕಿಸಿ ಸರ್ವಗತನಾದ್ದರಿಂದಲೂ, ಜೀವನ ಮನಸ್ಸೇ ಮೊದಲಾದ ಇಂದ್ರಿಯಗಳಿಗೆ ಆಧಾರನಾದ್ದರಿಂದಲೂ, ಶ್ರೀಹರಿಯೊಡನೆ ಜೀವರ ಸಹವಾಸವು ನಿತ್ಯವು. 'ಸತಾ ಸೌಮ್ಯ ತದಾ ಸಂಪನ್ನೋ ಭವತಿ ಪ್ರಾಜ್ಞೇನ ಆತ್ಮನಾ ಅನ್ವಾರೂಢಃ ಉತ್ಸರ್ಜದ್ಯಾತಿ' ಇವೇ ಮೊದಲಾದ ಶ್ರುತಿವಾಕ್ಯಗಳಿಂದ ಸುಷುಪ್ತಿ ಮತ್ತು ಮರಣಾವಸ್ಥೆಯಲ್ಲಿಯೂ ಶ್ರೀಹರಿಯೊಡನೆ ಇರುವದು ತಪ್ಪದು ಜಾಗ್ರದಾದ್ಯ-ವಸ್ಥೆಗಳಲ್ಲಿ ಹೇಳುವದೇನು ಎಂಬ ಅಭಿಪ್ರಾಯದಿಂದ ಜೀವನಿಗೆ ಶ್ರೀಹರಿಯ ಸಹವಾಸವು ನಿತ್ಯವೆಂಬ ದ್ವೈವಮತವಾದ ತತ್ತ್ವವನ್ನು ಹೇಳುತ್ತಾನೆ.

**ನಿತ್ಯ ಆತ್ಮಾಽವ್ಯಯಃ ಶುದ್ಧಃ ಸರ್ವವಿತ್ಸರ್ವಗಃ ಪರಃ ।**
**ಧತ್ತೇಽಸಾವಾತ್ಮಾನೋ ಲಿಂಗಂ ಮಾಯಯಾ ವಿಸೃಜನ್ ಗುಣಾನ್ ॥೨೨॥**

**ನಿತ್ಯಃ** ಸ್ವರೂಪನಾಶವಿಲ್ಲದ **ಅವ್ಯಯಃ** ದೇಹದಿಂದಲೂ ನಾಶವಿಲ್ಲದ **ಶುದ್ಧಃ** ಗುಣತ್ರಯಸಂಬಂಧವಿಲ್ಲದ **ಸರ್ವವಿತ್** ಸರ್ವಜ್ಞನಾದ **ಸರ್ವಗಃ** ಎಲ್ಲಡೆ ವ್ಯಾಪಿಸಿರುವ **ಪರಃ** ಪೂರ್ಣನಾದ್ದರಿಂದ ಸ್ವತಂತ್ರನಾದ ಆದ್ದರಿಂದಲೇ ಜಗತ್ತಿನಿಂದ ಭಿನ್ನನಾದ **ಅಸೌ ಆತ್ಮಾ** ಆದಾನಾದಿಕರ್ತೃನಾದ ಈ ಹರಿಯು **ಮಾಯಯಾ** ತನ್ನ ಇಚ್ಛೆಯಿಂದ ಜೀವನ ವಾಸನಾದಿಂದ **ಗುಣಾನ್** ಸತ್ವರಜಸ್ತಮೋಗುಣಗಳನ್ನು ಶಬ್ದಾದಿಗಳನ್ನು **ವಿಸೃಜನ್** ಕೊಡುವವನಾಗಿ **ಆತ್ಮನಃ** ಜೀವನ **ಲಿಂಗಂ** ಮನಸ್ಸೇ ಮೊದಲಾದ ಇಂದ್ರಿಯಗಳನ್ನು (ಜ್ಞಾನವನ್ನು) ಷೋಡಶಕಲಾತ್ಮಕ ಲಿಂಗಶರೀರವನ್ನು **ಧತ್ತೇ** ಧರಿಸಿರುವನು. ಅದಕ್ಕೆ ಆಧಾರನಾಗಿರುವನು ಎಂದರ್ಥ.

**... ತಾತ್ಪರ್ಯ ...**

**ಧತ್ತೇಽಸಾವಾತ್ಮನೋ ಲಿಂಗಂ ಜೀವಮನಆದೀನಾಂ ಆಧಾರಂ ಬ್ರಹ್ಮ ॥**

'ಧತ್ತೇಽಸಾವಾತ್ಮನೋ ಲಿಂಗಂ' ಎಂಬುದಕ್ಕೆ ಜೀವನ ಮನಸ್ಸು ಮೊದಲಾದ ಷೋಡಶಕಲಾತ್ಮಕ ಲಿಂಗದೇಹಕ್ಕೆ ಆಧಾರನು ಬ್ರಹ್ಮನು ಎಂದರ್ಥವು. ಇದರಿಂದ

ಮೇಲೆ ಹೇಳಿದ ಅರ್ಥ ಸ್ಪಷ್ಟವಾಗುವದು. 'ಪರಃ' ಎಂಬ ವಿಶೇಷಣದಿಂದ ಜೀವನಲ್ಲವೆಂದೂ 'ಸರ್ವಗ' ಎಂಬುದರಿಂದ ಜೀವನ ಚಿತ್‌ದೇಹ ಜಡದೇಹ ಮತ್ತು ಮನಸ್ಸು ಮುಂತಾದವುಗಳೊಂದಿಗೆ ನಿತ್ಯಸಂಬಂಧವು ಯುಕ್ತವೆಂದು ತಿಳಿಸಿರುವರು.

ವಿಶೇಷ ಃ- ಅರವಟ್ಟಿಗೆಯಲ್ಲಿ ಜನರ ಸೇರುವಿಕೆಯಂತೆ ಪರಮಾತ್ಮನಿಗೆ ಜೀವದೇಹಸಂಬಂಧವು ಅನಿತ್ಯವೆಂಬ ಅಭಿಪ್ರಾಯದ ಆಸುರಮತವನ್ನೂ ದೈತ್ಯನಾದ ಹಿರಣ್ಯಕಶಿಪುವು ಈ ಶ್ಲೋಕದಿಂದ ಹೇಳಿರುವನು.

ಅದು ಹೇಗೆಂದರೆ **ಗುಣಾನ್** ಪ್ರಾಕೃತ ಗುಣಗಳನ್ನು **ವಿಸೃಜನ್** ಸೃಷ್ಟಿಸುತ್ತ **ಅಸೌ ಆತ್ಮಾ** ಈ ಪರಮಾತ್ಮನು **ಆತ್ಮನಃ** ಜೀವನ **ಲಿಂಗಂ** ಭೋಗಸಾಧನವಾದ ಕರ್ಮೇಂದ್ರಿಯ ಜ್ಞಾನೇಂದ್ರಿಯ ಪ್ರಾಣಾದಿವಾಯುಪಂಚಕ ಮನಸ್ಸು ಇವುಗಳ ಸಮುದಾಯಾತ್ಮಕವಾದ ಶರೀರವನ್ನು **ಮಾಯಯಾ** ಅವಿದ್ಯೆಯಿಂದ **ಧತ್ತೇ** ಧರಿಸುವನು. ಅವಿದ್ಯೆಯಿಂದ ಎಂದು ಹೇಳಿದ್ದರಿಂದ ಅನಿತ್ಯವೆಂದೂ ತಿಳಿಯುವದು. ||೨೨||

ಹಿಂದಿನ ಶ್ಲೋಕದಲ್ಲಿ 'ಧತ್ತೇ' ಎಂಬುದರಿಂದ ನಿಯಾಮಕತ್ವೇನ ಭಗವಂತನಿಗೆ ಅಂತಸ್ಥಿತತ್ವ ತಿಳಿದು ಬರುವದರಿಂದ ಜೀವನಂತೆ ಗುಣಪ್ರಯುಕ್ತಬಂಧ ಅವನಿಗೂ ಬರುವದು ಎಂದರೆ ''ಸ್ವಾತಂತ್ರ್ಯಪಾರತಂತ್ರ್ಯಾಭ್ಯಾಂ ಸಂಭೋಗೋ ನೇಶಜೀವಯೋಃ'' ಎಂದು ಹೇಳಿದ ಪ್ರಕಾರ ಶ್ರೀಹರಿಗೆ ಬಂಧವಿಲ್ಲ ಕಿಂತು ಅಜ್ಞನಾದ ಬದ್ಧಜೀವನ ಸಮೀಪದಲ್ಲಿರುವ ಭಗವಂತನೂ ಭ್ರಾಂತಿಯಿಂದ ಬದ್ಧನಂತೆ ಕಾಣುತ್ತಾನೆ ಎಂದು ಹೇಳುವರು-

**ಯಥಾಂಽಭಸಾ ಪ್ರಚಲತಾ ತರವೋಽಪಿ ಚಲಾ ಇವ ।**
**ಚಕ್ಷುಷಾ ಭ್ರಾಮ್ಯಮಾಣೇನ ದೃಶ್ಯತೇ ಭ್ರಮತೀವ ಭೂಃ ||೨೩||**

**ಏವಂ ಗುಣೈರ್ಭ್ರಾಮ್ಯಮಾಣೇ ಮನಸ್ಯವಿಕಲಃ ಪುಮಾನ್ ।**
**ಯಾತಿ ತತ್ಸಾಮ್ಯತಾಂ ಭದ್ರೇ ಹ್ಯಲಿಂಗೋ ಲಿಂಗವಾನಿವ ||೨೪||**

**ಹೇ ಭದ್ರೇ** ಮಂಗಳಕರಳಾದ ತಾಯಿಯೇ **ಪ್ರಚಲತಾ ಅಂಭಸಾ** ನೌಕೆಯಲ್ಲಿ ಹತ್ತಿ ನೀರಿನಲ್ಲಿ ಹೋಗುವ ಮನುಷ್ಯನಿಗೆ ಅಲೆಗಳಿಂದ ಹೆಚ್ಚಾಗಿ ಅಲ್ಲಾಡುತ್ತಿರುವ ನೀರಿನಿಂದ ಅದರಲ್ಲಿ ಬಿದ್ದಿರುವ ಗಿಡದ ನೆರಳು ಅಲ್ಲಾಡುತ್ತಿರಲು **ತರವಃ ಅಪಿ** ದಡದಲ್ಲಿರುವ ಸ್ಥಿರವಾದ ಗಿಡಗಳೂ **ಚಲಾ ಇವ** ಚಲಿಸುತ್ತಿರುವಂತೆ **ಯಥಾ ದೃಶ್ಯಂತೇ** ಹೇಗೆ ಭ್ರಾಂತಿಯಿಂದ ಕಾಣುವವೋ(ಪರಿಭ್ರಮತಃ ಪುರುಷಸ್ಯ)ಮನುಷ್ಯನ **ಭ್ರಾಮ್ಯಮಾಣೇನ ಚಕ್ಷುಷಾ** ಬಿಡದೇ ತಿರುಗುತ್ತಿರುವ ಕಣ್ಣಿನಿಂದ **ಭೂಃ** ಸುತ್ತಲು ಇರುವ ಭೂಮಿಯು **ಯಥಾ ವಾ** ಹೇಗೆ **ಭ್ರಮತೀವ** ತಿರುಗುವಂತೆ **ದೃಶ್ಯತೇ**

ಭ್ರಾಂತಿಯಿಂದ ಕಾಣುವದೋ **ಏವಂ** ಹೀಗೆ **ಮನಸಿ** ಮನನಮಾಡುವದರಿಂದ ಮನಸ್ಸೆಂದು ಕರೆಯಲ್ಪಡುವ ಜೀವನು **ಗುಣೈಃ** ಪ್ರಾಕೃತಗುಣಗಳಿಂದ **ಭ್ರಾಮ್ಯಮಾಣೇ ಸತಿ** ಸಂಸಾರಾವಸ್ಥೆಗೆ ಒಳಗಾಗಿರಲು, ಅಜ್ಞಾನ ಭ್ರಮಾದಿಬಂಧದಿಂದ ಕೂಡಿರಲು ಮನೋದೋಷಗಳಿಂದ ಆಭಾಸನಾದ ಅಂದರೆ ಪರಬ್ರಹ್ಮನ ಪ್ರತಿಬಿಂಬನಾದ ಜೀವನು ದೂಷಿತನಾಗಿರಲು(ಪರಬ್ರಹ್ಮವಿಷಯಕಜ್ಞಾನವಿಲ್ಲದವನಾಗಿರಲು)**ಅಲಿಂಗಃ** ಪ್ರಾಕೃತಶರೀರವಿಲ್ಲದ **ಅವಿಕಲಃ** ಗುಣಪೂರ್ಣನಾದ **ಪುಮಾನ್** ಪುರುಷನು ಪರಬ್ರಹ್ಮನು **ಲಿಂಗವಾನಿವ** ಜೀವನೆಂಬ ಭ್ರಾಂತಿಯಿಂದ **ತತ್ಸಾಮ್ಯತಾಂ** ಜೀವನಂತೆ ದೋಷಿಯೆಂದು **ಯಾತಿ** ಭ್ರಮದಿಂದ ತಿಳಿಯಲ್ಪಡುತ್ತಾನೆ.

**... ತಾತ್ಪರ್ಯ ...**

**ಲಿಂಗವಾನಿವ ಜೀವ ಇವ ।**
**ಅಸಮಂ ಸಮತಾಮೇತಿ ಭ್ರಾಂತಿದೃಷ್ಟ್ಯೈವ ಕೇವಲಮ್ ।**
**ಜೀವೇನ ಬ್ರಹ್ಮ ನ ಸಮಂ ತತ್ತ್ವದೃಷ್ಟ್ಯಾ ಕಥಂಚನ ॥ ಇತಿ ಷಾಡ್ಗುಣ್ಯೇ ॥**

**ಯಥೋದಚಲನಾದ್ ವೃಕ್ಷಪ್ರತಿಬಿಂಬಪ್ರಚಾಲನಾತ್ ।**
**ತಟಸ್ಥವೃಕ್ಷಚಲನಂ ಕಲ್ಪಯೇದಬುಧೋ ನರಃ ॥**

**ತಥಾ ಮನಸಿಜೈರ್ದೋಷೈರಾಭಾಸೇ ದೂಷಿತೇ ನರಃ ।**
**ಆಭಾಸಿನೋ ಬ್ರಹ್ಮಣಶ್ಚ ದೋಷಮಜ್ಞಃ ಪ್ರಕಲ್ಪಯೇತ್ ॥**

**ಆತ್ಮನಶ್ಚಕ್ಷುಷೋ ಭ್ರಾಂತ್ಯಾ ಯಥಾ ಪಶ್ಯೇದ್ ಭ್ರಮಂ ಭುವಃ ।**
**ತಥೈವ ಸ್ವಾತ್ಮನೋ ದೋಷಾದ್ದೋಷವದ್ಬ್ರಹ್ಮ ಪಶ್ಯತಿ ॥ ಇತಿ ಬ್ರಹ್ಮತರ್ಕೇ ॥**

ಶ್ರೀಹರಿಯು ಮನಸ್ಸು ಮೊದಲಾದ ೧೬ ಕಲಾರೂಪಲಿಂಗದೇಹವುಳ್ಳ ಜೀವನಿಗೆ ಸದೃಶನು(ಎಂದು ಭ್ರಾಂತರಿಗೆ ಕಾಣುವ). ಜೀವನಿಂದ ಸದೃಶನಾಗದ ಬ್ರಹ್ಮನನ್ನು ಕೇವಲ ಭ್ರಮೆಯಿಂದಲೇ ಜೀವನಿಗೆ ಸದೃಶನೆಂದು ಭ್ರಾಂತರು ತಿಳಿಯುತ್ತಾರೆ. ಯಥಾರ್ಥದೃಷ್ಟಿಯಿಂದ ಬ್ರಹ್ಮನು ಸರ್ವಥಾ ಜೀವನಿಗೆ ಸದೃಶನಲ್ಲ ಎಂದು ಷಾಡ್ಗುಣ್ಯದಲ್ಲಿ ಹೇಳಿದೆ.

ಹೇಗೆ ನದಿಯ ನೀರು ಕದಲಿದಾಗ ಅದರಲ್ಲಿ ಪ್ರತಿಫಲಿಸಿದ ವೃಕ್ಷಗಳೂ ಚಲಿಸದಿದ್ದರೂ ಚಲಿಸಿದಂತೆ ಅಜ್ಞಮನುಷ್ಯನು ಕಲ್ಪಿಸುವನೋ ಹಾಗೆಯೇ ಮನಸ್ಸಿನಲ್ಲಿರತಕ್ಕ ದೋಷಗಳಿಂದ ದೂಷಿತನಾದ ಪ್ರತಿಬಿಂಬನಾದ ಜೀವನು ಬಿಂಬನಾದ ಬ್ರಹ್ಮನಿಗೆ ದೋಷವಿಲ್ಲದಿದ್ದರೂ ದೋಷವನ್ನು ಕಲ್ಪಿಸುವನು. ಜೀವನ ಕಣ್ಣು ತಿರುಗುವಾಗ ಜೀವನು ಭೂಮಿಯನ್ನು ತಿರುಗುತ್ತಿರುವಂತೆ ಹೇಗೆ ತಿಳಿಯುತ್ತಾನೋ ಹಾಗೆಯೇ ಜೀವನು ಅಜ್ಞಾನ ಭ್ರಮಮೊದಲಾದ ದೋಷಗಳಿಂದ

ಬ್ರಹ್ಮನು ಅಜ್ಞಾನಾದಿದೋಷವುಳ್ಳವನೆಂದು ತಿಳಿಯುತ್ತಾನೆ. ಎಂದು ಬ್ರಹ್ಮತರ್ಕದಲ್ಲಿದೆ ।।೨೩,೨೪।।

ಶ್ರೀಹರಿಯನ್ನು ತಪ್ಪು ತಿಳಿದವನಿಗೆ ಆಗುವ ಫಲ ಹೇಳುವರುಃ-

**ಏಷ ಆತ್ಮವಿಪರ್ಯಾಸೋ ಹ್ಯಲಿಂಗೇ ಲಿಂಗಭಾವನಾ ।**
**ಏವಂ ಪ್ರಿಯಾಪ್ರಿಯೈರ್ಯೋಗೋ ವಿಯೋಗಃ ಕರ್ಮಸಂಸೃತಿಃ ।।೨೫।।**

**ಸಂಭವಶ್ಚ ವಿನಾಶಶ್ಚ ಶೋಕಶ್ಚ ವಿವಿಧಃ ಸ್ಮೃತಃ ।**
**ಅವಿವೇಕಶ್ಚ ಚಿಂತಾ ಚ ವಿವೇಕಸ್ಮೃತಿರೇವ ಚ ।।೨೬।।**

**ಏವಂ** ಮೇಲೆ ಹೇಳಿದಂತೆ **ಅಲಿಂಗೇ** ಪ್ರಾಕೃತದೇಹೇಂದ್ರಿಯಗಳಿಲ್ಲದ (ಲಿಂಗಶರೀರರಹಿತನಾದ) ಆದ್ದರಿಂದಲೇ ಪಾರತಂತ್ರ್ಯಾದಿ ಎಲ್ಲ ದೋಷದಿಂದ ರಹಿತನಾದ ಶ್ರೀಹರಿಯಲ್ಲಿ **ಯಾ** ಯಾವ **ಲಿಂಗಭಾವನಾ** ಲಿಂಗಶರೀರವುಳ್ಳ ಜೀವಸಾಮ್ಯಭಾವನೆ ಇದೆಯೋ **ಏಷಃ** ಇದು **ಆತ್ಮವಿಪರ್ಯಾಸಃ ಹಿ** ಪರಮಾತ್ಮಾಧಿಷ್ಠಾನಕ ಭ್ರಮವು. ಅಥವಾ ತನ್ನ ಅಂದರೆ ಅಯೋಗ್ಯ ಜನರ ವಿಪರ್ಯಾಸವು ತಮಃಪ್ರಾಪ್ತಿ ಎಂಬ ಅನರ್ಥವೇ ಆಗಿರುವದು. **ಏವಂ** ಅದರಂತೆ ಪರಲೋಕದಲ್ಲಿ ತಮಃಪ್ರಾಪ್ತಿಯಾಗುವಂತೆ ಈ ಲೋಕದಲ್ಲಿಯೂ ಅನರ್ಥವಾದ **ಪ್ರಿಯಾಪ್ರಿಯೈಃ ಯೋಗಃ ವಿಯೋಗಃ** ಇಷ್ಟರಾದ ಬಂಧುಗಳ ವಿಯೋಗ,ಅನಿಷ್ಟರಾದ ಶತ್ರುಗಳ ಯೋಗವಾಗುವದು **ಕರ್ಮಸಂಸೃತಿಃ** ಪಾಪಕ್ಕನುಸಾರವಾದ ಸಂಸಾರವಾಗುವುದು.

ಅದರ ವಿವರಣೆ **ಸಂಭವಃ** ಉತ್ಪತ್ತಿ **ವಿನಾಶಃ** ಮರಣ **ವಿವಿಧಃ ಶೋಕಃ ಚ** ಬಗೆಬಗೆಯ ದುಃಖಗಳು **ಅವಿವೇಕಃ** ಅವಿವೇಕವು **ಚಿಂತಾ** ಚಿಂತೆಯು **ವಿವೇಕಸ್ಮೃತಿಃ** ಅಸಮ್ಯಕ್ ಜ್ಞಾನವನ್ನು ಸಮ್ಯಕ್ ಜ್ಞಾನವೆಂದು ತಿಳಿಯುವದು (ತಾವು ವಸ್ತುತಃ ಅವಿವೇಕಿಗಳಾಗಿದ್ದು ವಿವೇಕಿಗಳೆಂದು ತಿಳಿಯುವದು) ಇವೆಲ್ಲವು **ಸ್ಮೃತಃ** ಸಂಸಾರವೆಂದು ಜ್ಞಾನಿಗಳಿಂದ ತಿಳಿಯಲ್ಪಟ್ಟಿರುವದು. ಈ ಬಗೆಯ ಸಂಸಾರವು ಶ್ರೀಹರಿಯನ್ನು ಅನ್ಯಥಾ ತಿಳಿಯುವದರಿಂದ ಬರುವದೆಂದು ಅಭಿಪ್ರಾಯ.

ಇಲ್ಲಿ ಅಸುರನಾದ ಹಿರಣ್ಯಕಶಿಪುವು ಅಸುರಮತ ನಿಷ್ಠನು. ತಾಯಿಗೆ ತತ್ತ್ವೋಪದೇಶ ಮಾಡಿದ್ದು ಹೇಗೆ? ಇದರಿಂದ ಶ್ರೀಹರಿಯ ಭಕ್ತನೆಂದು ತೋರುವದು. ಭಕ್ತನಾದಲ್ಲಿ ಹರಿಭಕ್ತ ಪ್ರಹ್ಲಾದನನ್ನು ದ್ವೇಷಿಸಿದ್ದೇಕೆ ಎಂಬ ಶಂಕೆಯನ್ನು ಪರಿಹರಿಸುವರು-

... ತಾತ್ಪರ್ಯ ...

**ವಿವೇಕಸ್ಮೃತಿಃ ಅವಿವೇಕಿನ ಏವ ವಿವೇಕಿತ್ವಭ್ರಾಂತಿಃ ।**
**ಅಂತರ್ಹಿರಣ್ಯಕಾದೀನಾಂ ಭಕ್ತಿರಸ್ತ್ಯೇವ ಕೇಶವೇ ।**
**ಅಸುರಾವೇಶತಸ್ತ್ವನ್ಯಾನ್ ಹರಿಸ್ತೋತ್ರ್ಯನ್ ದ್ವಿಷಂತಿ ಚ ॥ ಇತಿ ಪಾದ್ಮೇ ॥**

ಭ್ರಮೆಯನ್ನೇ ಪ್ರಮಾಣ ಎಂದು ತಿಳಿಯುವದು ವಿವೇಕಸ್ಮೃತಿಯೆನಿಸುತ್ತದೆ. ಹಿರಣ್ಯಾಕ್ಷ ಮೊದಲಾದವರ ದೇಹದಲ್ಲಿ ಇರುವ ವಿಜಯ ಮೊದಲಾದವರಿಗೆ ಶ್ರೀಹರಿಯಲ್ಲಿ ಭಕ್ತಿ ಇದ್ದೇ ಇದೆ. ಅಲ್ಲಿಯೇ ಸೇರಿಕೊಂಡಿರುವ ಹಿರಣ್ಯಾಕ್ಷ ಮೊದಲಾದ ಅಸುರಾವೇಶದಿಂದ ಶ್ರೀಹರಿಯ ಸ್ತೋತ್ರ್ಯಗಳಾದ (ಹರಿಭಕ್ತರಾದ) ಇತರರನ್ನು ದ್ವೇಷಿಸುತ್ತಾರೆ ಎಂದು ಪದ್ಮಪುರಾಣದಲ್ಲಿದೆ. ॥೨೫,೨೬॥

ಬಂಧುಗಳ ಸಂಬಂಧ ಅನಿತ್ಯವೆಂದು ನಾನು ಹೇಳಿದ್ದು ಮಾತ್ರವಲ್ಲ ಇತಿಹಾಸವಿದೆ ಎಂದು ಹೇಳುವನುಃ-

**ಅತ್ರಾಪ್ಯುದಾಹರಂತೀಮಮಿತಿಹಾಸಂ ಪುರಾತನಮ್ ।**
**ಯಮಸ್ಯ ಪ್ರೇತಬಂಧೂನಾಂ ಸಂವಾದಂ ತಂ ನಿಬೋಧತ ॥೨೭॥**

**ಅತ್ರಾಪಿ** ಪೂರ್ವಕರ್ಮಾನುಸಾರ ಜೀವರ ಸಂಯೋಗ ವಿಯೋಗಗಳೆಂಬ ವಿಷಯದಲ್ಲಿಯೂ **ಇಮಂ** ಮುಂದೆ ಹೇಳುವ **ಯಮಸ್ಯ** ಯಮದೇವರಿಗೂ **ಪ್ರೇತಬಂಧೂನಾಂ** ಸತ್ತವನ ಜ್ಞಾತಿಗಳಿಗೂ ನಡೆದ **ಸಂವಾದಂ** ಸಂಭಾಷಣಾ ರೂಪವಾದ **ಪುರಾತನಂ** ಹಳೆಯ **ಇತಿಹಾಸಂ** ಕಥೆಯನ್ನು **ಉದಾಹರಂತಿ** ಜ್ಞಾನಿಗಳು ಹೇಳುತ್ತಾರೆ **ತಂ** ಆ ಇತಿಹಾಸವನ್ನು **ನಿಬೋಧತ** ಕೇಳಿರಿ, ತಿಳಿಯಿರಿ. ॥೨೭॥

**ಉಶೀನರೇಷ್ವಭೂದ್ರಾಜಾ ಸುಯಜ್ಞ ಇತಿ ವಿಶ್ರುತಃ ।**
**ಸಪತ್ನೈರ್ನಿಹತೋ ಯುದ್ಧೇ ಜ್ಞಾತಯಸ್ತಮುಪಾಸತ ॥೨೮॥**

**ಉಶೀನರೇಷು** ಉಶೀನರ ದೇಶದಲ್ಲಿ **ಸುಯಜ್ಞಃ ಇತಿ ವಿಶ್ರುತಃ** ಸುಯಜ್ಞನೆಂದು ಪ್ರಸಿದ್ಧನಾಗಿದ್ದ **ರಾಜಾ** ಪ್ರಜಾರಂಜಕನಾದ ದೊರೆಯು **ಅಭೂತ್** ಇದ್ದನು **ಸಃ** ಅವನು **ಸಪತ್ನೈಃ** ಶತ್ರುಗಳಿಂದ **ಯುದ್ಧೇ** ಯುದ್ಧದಲ್ಲಿ **ನಿಹತಃ** ಕೊಲ್ಲಲ್ಪಟ್ಟನು **ಜ್ಞಾತಯಃ** ಬಂಧುಗಳು **ತಂ** ಅವನಿಗಾಗಿ **ಉಪಾಸತ** ಚಿಂತೆಯನ್ನು ಮಾಡುತ್ತಿದ್ದರು. ॥೨೮॥

**ವಿಶೀರ್ಣರತ್ನಕವಚಂ ವಿಭ್ರಷ್ಟಾಭರಣಸ್ರಜಮ್ ।**
**ಶರನಿರ್ಭಿನ್ನಹೃದಯಂ ಶಯಾನಮಸೃಗಾವಿಲಮ್ ॥೨೯॥**
**ವಿಕೀರ್ಣಕೇಶಂ ಸ್ತಬ್ಧಾಕ್ಷಂ ಸಂರಂಭಾದ್ದಷ್ಟದಚ್ಛದಮ್ ।**
**ರಜಃಕುಂಠಮುಖಾಂಭೋಜಂ ಛಿನ್ನಾಯುಧಭುಜಂ ಮೃಧೇ ॥೩೦॥**

**ವಿಶೀರ್ಣರತ್ನಕವಚಂ** ಹಾಕಿಕೊಂಡ ರತ್ನಕವಚವು ಸೀಳಿ ಹೋಗಿರುವ **ವಿಭ್ರಷ್ಟಾಭರಣಸ್ರಜಂ** ಆಭರಣಗಳೂ ಹಾರಗಳು ಕಡಿದು ಬಿದ್ದಿರುವ **ಶರನಿರ್ಭಿನ್ನಹೃದಯಂ** ಬಾಣಗಳಿಂದ ಬಹಳವಾಗಿ ಭೇದಿಸಲ್ಪಟ್ಟ ವಕ್ಷಸ್ಥಳವುಳ್ಳ **ಶಯಾನಂ** ಮಲಗಿರುವ **ಅಸೃಗಾವಿಲಂ** ರಕ್ತದಿಂದ ಕೊಳೆಯಾಗಿರುವ **ವಿಕೀರ್ಣಕೇಶಂ** ಹರಡಿದ ತಲೆಗೂದಲುಳ್ಳ **ಸ್ತಬ್ಧಾಕ್ಷಂ** ನಿಶ್ಚಲವಾದ ಕಣ್ಣುಗಳುಳ್ಳ **ಸಂರಂಭಾತ್** ಶತ್ರುಗಳ ಮೇಲಿನ ಕೋಪದಿಂದ **ದಷ್ಟದಚ್ಛದಂ** ತುಟಿಕಚ್ಚಿದ **ರಜಃಕುಂಠಮುಖಾಂಭೋಜಂ** ಧೂಳಿಯಿಂದ ತುಂಬಿದ ಕಮಲದಂತಿರುವ ಮುಖವುಳ್ಳ **ಮೃಧೇ** ಯುದ್ಧದಲ್ಲಿ **ಛಿನ್ನಾಯುಧಭುಜಂ** ಕತ್ತರಿಸಲ್ಪಟ್ಟ ಆಯುಧಯುತವಾದ ಬಾಹುವುಳ್ಳ ॥೨೯,೩೦॥

**ಉಶೀನರೇಂದ್ರಂ ವಿಧಿನಾ ತಥಾಕೃತಮ್**
**ಪತಿಂ ಮಹಿಷ್ಯಃ ಪ್ರಸಮೀಕ್ಷ್ಯ ದುಃಖಿತಾಃ ।**
**ಹತಾ ಸ್ಮ ನಾಥೇತಿ ಕರೈರುರೋ ಭೃಶಂ**
**ಘ್ನಂತ್ಯೋ ಮುಹುಸ್ತತ್ಪದಯೋರುಪಾಪತನ್ ॥೩೦॥**

**ವಿಧಿನಾ** ದೈವದಿಂದ **ತಥಾಕೃತಂ** ಯುದ್ಧದಲ್ಲಿ ಸತ್ತ **ಉಶೀನರೇಂದ್ರಂ** ಉಶೀನರದೇಶದ ರಾಜನಾದ **ಪತಿಂ** ತಮ್ಮ ಗಂಡನನ್ನು **ಪ್ರಸಮೀಕ್ಷ್ಯ** ಆಪಾದಮಸ್ತಕಪರ್ಯಂತ ನೋಡಿ **ಮಹಿಷ್ಯಃ** ಅವನ ಪಟ್ಟದ ಹೆಂಡತಿಯರು **ದುಃಖಿತಾಃ** ದುಃಖಿತರಾಗಿ **ನಾಥ** ಪತಿಯೇ **ಹತಾ ಸ್ಮ** ನಾವು ಹಾಳಾದೆವು **ಇತಿ** ಎಂದು **ಕರೈಃ** ಕೈಗಳಿಂದ **ಉರಃ** ಎದೆಯನ್ನು **ಭೃಶಂ** ಬಲವಾಗಿ **ಘ್ನಂತ್ಯಃ** ಬಡಿದುಕೊಳ್ಳುತ್ತ **ಮುಹುಃ** ಮತ್ತೆ ಮತ್ತೆ **ತತ್ಪದಯೋಃ** ರಾಜನ ಹೆಣದ ಕಾಲುಗಳ ಮೇಲೆ **ಉಪಾಪತನ್** ಬಿದ್ದರು. ॥೩೦॥

**ರುದಂತ್ಯ ಉಚ್ಚೈರ್ದಯಿತಾಂಘ್ರಿಪಂಕಜಂ**
**ಸಿಂಚಂತ್ಯ ಅಸ್ರೈಃ ಕುಚಕುಂಕುಮಾರುಣೈಃ ।**
**ವಿಸ್ರಸ್ತಕೇಶಾಭರಣಾಃ ಶುಚಂ ನೃಣಾಂ**
**ಸೃಜಂತ್ಯ ಆಕ್ರಂದನಯಾ ವಿಲೇಪಿರೇ ॥೩೨॥**

**ಉಚ್ಚೈಃ** ಗಟ್ಟಿಯಾಗಿ **ರುದಂತ್ಯಃ** ಅಳುವವರಾಗಿ **ಕುಚಕುಂಕುಮಾರುಣೈಃ** ಸ್ತನಗಳಿಗೆ ಲೇಪಿಸಿದ ಕೇಸರಿಯ ಧೂಳಿನಿಂದ ಕೆಂಪಾದ **ಅಸ್ರೈಃ** ಕಣ್ಣೀರಿನಿಂದ **ದಯಿತಾಂಘ್ರಿ- ಪಂಕಜಂ** ಗಂಡನ ಪಾದಕಮಲಗಳನ್ನು **ಸಿಂಚಂತ್ಯಃ** ಸಿಂಪಡಿಸುತ್ತ **ವಿಸ್ರಸ್ತಕೇಶಾಭರಣಾಃ** ಅಸ್ತವ್ಯಸ್ತವಾದ ಕೂದಲು, ಆಭರಣಗಳೂ ಉಳ್ಳವರಾಗಿ **ಆಕ್ರಂದನಯಾ** ಬಿಕ್ಕಿಬಿಕ್ಕಿ ಗಟ್ಟಿಯಾಗಿ ಅಳುವದರಿಂದ **ನೃಣಾಂ** ಪಕ್ಕದಲ್ಲಿದ್ದ ಜನರಿಗೆ

**ಶುಚಂ** ದುಃಖವನ್ನು **ಸೃಜಂತ್ಯಃ** ಉಂಟುಮಾಡುವವರಾಗಿ **ವಿಲೇಪಿರೇ** ಆ ರಾಜಪತ್ನಿಯರು ಪತಿಯ ಗುಣಗಾನಮಾಡುತ್ತ ಅತ್ತರು. ।।೩೨।।

**ಅಹೋ ವಿಧಾತ್ರಾಽಕರುಣೇನ ನಃ ಪ್ರಭುಃ**
**ಭವಾನ್ ಪ್ರಣೀತೋ ಧಿಗಗೋಚರಂ ದೃಶಾಮ್ ।**
**ಉಶೀನರಾಣಾಮಪಿ ವೃತ್ತಿದಃ ಪುರಾ**
**ಕೃತೋಽಧುನಾ ಯೇನ ಶುಚಾಂ ವಿವರ್ಧನಃ ।।೩೩।।**

**ಅಹೋ** ಅಯ್ಯೋ **ಯೇನ** ಯಾವ **ಅಕರುಣೇನ** ದಯೆಯಿಲ್ಲದ **ವಿಧಾತ್ರಾ** ಬ್ರಹ್ಮನಿಂದ **ನಃ** ನಮ್ಮ **ಪ್ರಭುಃ** ಸ್ವಾಮಿಯಾದ **ಭವಾನ್** ನೀನು **ದೃಶಾಂ** ನಮ್ಮ ಕಣ್ಣಿಗೆ **ಅಗೋಚರಂ ಪ್ರಣೀತಃ** ಕಾಣದ ಪ್ರದೇಶಕ್ಕೆ ಒಯ್ಯಲ್ಪಟ್ಟಿಯೋ, **ಪುರಾ** ಹಿಂದೆ **ಉಶೀನರಾಣಾಂ** ಉಶೀರನದೇಶಕ್ಕೆಲ್ಲ **ವೃತ್ತಿದಃ** ಜೀವನೋಪಾಯವನ್ನು ನೀಡುವವನನ್ನಾಗಿ ಮಾಡಲ್ಪಟ್ಟಿದ್ದಿ **ಅಧುನಾ** ಈಗ **ಶುಚಾಂ ವಿವರ್ಧನಃ ಕೃತಃ** ದುಃಖಗಳ ಅಭಿವೃದ್ಧಿಕಾರಣನಾಗಿ ಮಾಡಲ್ಪಟ್ಟಿರುವಿ **ತಂ** ಆ ವಿಧಿಗೆ **ಧಿಕ್** ಧಿಕ್ಕಾರ **ಅಹೋ** ಆಶ್ಚರ್ಯ. ।।೩೩।।

**ತ್ವಯಾ ಕೃತಜ್ಞೇನ ವಯಂ ಮಹೀಪತೇ**
**ಕಥಂ ವಿನಾ ಸ್ಯಾಮ ಸುಹೃತ್ತಮೇನ ।**
**ತತ್ರಾನುಯಾನಂ ತವ ವೀರ ಪಾದಯೋಃ**
**ಶುಶ್ರೂಷತೀನಾಂ ದಿಶ ಯತ್ರ ಯಾಸ್ಯಸಿ ।।೩೪।।**

**ಹೇ ಮಹೀಪತೇ** ರಾಜನೇ, **ಸುಹೃತ್ತಮೇನ** ಉತ್ತಮಸ್ನೇಹಿತನಾದ **ಕೃತಜ್ಞೇನ** ಮಾಡಿದ್ದನ್ನು ಬಲ್ಲ **ತ್ವಯಾ ವಿನಾ** ನೀನಿಲ್ಲದೇ **ವಯಂ** ನಾವು **ಕಥಂ ಸ್ಯಾಮ** ಹೇಗೆ ಇರೋಣ ? **ಹೇ ವೀರ** ಪರಾಕ್ರಮಿಯೇ **ಯತ್ರ,** ಎಲ್ಲಿಗೆ **ಯಾಸ್ಯಸಿ** ಹೋಗುತ್ತೀಯೋ **ತತ್ರ,** ಅಲ್ಲಿ **ತವ** ನಿನ್ನ **ಪಾದಯೋಃ ಶುಶ್ರೂಷತೀನಾಂ** ಪಾದಗಳ ಸೇವೆಯನ್ನು ಅಪೇಕ್ಷಿಸುವ **ನಃ** ನಮಗೆ **ಅನುಯಾನಂ ದಿಶ** ನಿನ್ನ ಹಿಂದೆ ಬರುವದನ್ನು ನೀಡು. (ನಾವೂ ಸಾಯುವೆವು ಎಂದರ್ಥ) ।।೩೪।।

**ಏವಂ ವಿಲಪತೀನಾಂ ವೈ ಪರಿಗೃಹ್ಯ ಮೃತಂ ಪತಿಮ್ ।**
**ಅನಿಚ್ಛತೀನಾಂ ನಿರ್ಹಾರಮರ್ಕೋಽಸ್ತಂ ಸನ್ನ್ಯವರ್ತತ ।।೩೫।।**

**ಏವಂ** ಈ ರೀತಿಯಾಗಿ **ಮೃತಂ ಪತಿಂ** ಸತ್ತ ಗಂಡನ ದೇಹವನ್ನು **ಪರಿಗೃಹ್ಯ** ಹಿಡಿದುಕೊಂಡು **ವಿಲಪತೀನಾಂ** ಅಳುತ್ತಿರುವ ಕಾಲದಲ್ಲಿ **ನಿರ್ಹಾರಂ ಅನಿಚ್ಛತೀನಾಂ** ಶವಸಂಸ್ಕಾರವನ್ನು ಇಚ್ಛಿಸದಿರಲು **ಅರ್ಕಃ** ಸೂರ್ಯನು **ಅಸ್ತಂ** ಕಣ್ಣಿಗೆ ಕಾಣದಂತೆ

**ಸನ್ನ್ಯವರ್ತತ** ತನ್ನ ರಥವನ್ನು ಹಿಂತಿರುಗಿಸಿದನು.(ಸೂರ್ಯ ಮುಳುಗಿದನು ಎಂದರ್ಥ.) ।।೩೫।।

**ತತ್ರ ಹ ಪ್ರೇತಬಂಧೂನಾಮಾಶ್ರುತ್ಯ ಪರಿದೇವನಮ್ ।**
**ಆಹ ತಾನ್ ಬಾಲಕೋ ಭೂತ್ವಾ ಯಮಃ ಸ್ವಯಮುಪಾಗತಃ ।।೩೬।।**

**ತತ್ರ** ರಾಜನು ಮೃತನಾಗಿದ್ದ ಆ ಸ್ಥಳದಲ್ಲಿ **ಪ್ರೇತಬಂಧೂನಾಂ** ಸತ್ತ ಸುಯಜ್ಞ ರಾಜನ ಸಂಬಂಧಿಗಳ **ಪರಿದೇವನಂ** ರೋದನವನ್ನು **ಆಶ್ರುತ್ಯ** ಕೇಳಿ **ಬಾಲಕೋ ಭೂತ್ವಾ** ಚಿಕ್ಕ ಹುಡುಗನಾಗಿ **ಸ್ವಯಂ** ತಾನೇ **ಉಪಾಗತಃ** ಬಂದ **ಯಮಃ** ಯಮದೇವರು **ತಾನ್** ಅವರನ್ನು ಕುರಿತು **ಆಹ** ಹೇಳಿದರು. ।।೩೬।।

**ಯಮ ಉವಾಚ**

**ಅಹೋ ಅಮೀಷಾಂ ವಯಸಾऽಧಿಕಾನಾಂ**
**ವಿಪಶ್ಯತಾಂ ಲೋಕವಿಧಿಂ ವಿಮೋಹಃ ।**
**ಯತ್ರೋದ್ಭವಸ್ತತ್ರ ಗತಂ ಮನುಷ್ಯಮ್**
**ಸ್ವಯಂ ಸಧರ್ಮಾ ಅನುಶೋಚಂತ್ಯಪಾರ್ಥಮ್ ।।೩೭।।**

**ವಯಸಾ** ವಯಸ್ಸಿನಿಂದ **ಅಧಿಕಾನಾಂ** ದೊಡ್ಡವರಾದ ಆದ್ದರಿಂದಲೇ **ಲೋಕವಿಧಿಂ** ಮರ್ತ್ಯಲೋಕ ಸ್ಥಿತಿಯಾದ ಜನನಮರಣಪ್ರಕಾರವನ್ನು **ವಿಪಶ್ಯತಾಂ** ವಿಶೇಷವಾಗಿ ನೋಡುತ್ತಿರುವ **ಅಮೀಷಾಂ** ಈ ಮೃತನಾದ ಸುಯಜ್ಞನ ಬಂಧುಗಳ **ವಿಮೋಹಃ** ಹೆಣದಲ್ಲಿ ವಿಶೇಷ ಮೋಹವು **ಅಹೋ** ಆಶ್ಚರ್ಯಕರವು (ಧಿಕ್ಕಾರ ವಿಷಯವು ಎಂದರ್ಥ) **ಸ್ವಯಂ** ತಾವೂ ಕೂಡ **ಸಧರ್ಮಾ** ಸುಯಜ್ಞನಂತೆಯೇ ಹುಟ್ಟು ಸಾವುಗಳನ್ನು ಹೊಂದಿರುವ **ಅಮೀ** ಈ ಪ್ರೇತಬಂಧುಗಳು **ಯತ್ರ** ಮನುಷ್ಯನಿಗೆ ಕಾಣದ ಸ್ವರ್ಗನರಕಾದಿಗಳಿಂದ ಎಲ್ಲಿ **ಉದ್ಭವಃ** ದೇಹಸಂಬಂಧವೆಂಬ ಉತ್ಪತ್ತಿ ಆಯಿತೋ **ತತ್ರ** ನಮ್ಮ ಕಣ್ಣಿಗೆ ಕಾಣದ ಪ್ರದೇಶಕ್ಕೆ **ಗತಂ** ಹೋಗಿರುವ **ಮನುಷ್ಯಂ** ಹುಟ್ಟುಸಾವುಗಳುಳ್ಳ ಸುಯಜ್ಞನನ್ನು ಕುರಿತು **ಅನುಶೋಚಂತಿ** ದುಃಖಿಸುತ್ತಿರುವರು ಎಂಬುದು **ಅಪಾರ್ಥಂ** ವ್ಯರ್ಥ. 'ಗತಾನುಗತಿಕೋ ಲೋಕಃ' ಎಂಬಂತೆ ಒಬ್ಬರನ್ನು ನೋಡಿ ಮತ್ತೊಬ್ಬರು ದುಃಖಿಸುವರೇ ಹೊರತು ಇದರಲ್ಲಿ ಹುರುಳಿಲ್ಲವೆಂದರ್ಥ. ಅಥವಾ **ಅಪಾರ್ಥಂ ಅನುಶೋಚಂತಿ** ವ್ಯರ್ಥವಾಗಿ ಶೋಚಿಸುತ್ತಿರುವರು ಎಂದಾದರೂ ಅನ್ವಯ.

**... ತಾತ್ಪರ್ಯ ...**

**ಯತ್ರೋದ್ಭವಸ್ತತ್ರ ಗತಂ । ಅದರ್ಶನಂ ಗತಂ । ಅದರ್ಶನಾದಿಹಾಯಾತಃ ಪುನಶ್ಚಾದರ್ಶನಂ ಗತಃ ।। ಇತಿ ಭಾರತೇ ।।**

ಯತ್ರೋದ್ಭವಃ ತತ್ರ ಗತಂ ಎಂದರೆ ಅದರ್ಶನಂ ಗತಃ ಎಂದರ್ಥ. ಅಂದರೆ ಸ್ವರ್ಗಾದಿಗಳನ್ನು ಕುರಿತು ಹೋದ ಎಂದರ್ಥ. ಯಾವ ಸ್ವರ್ಗದಿಂದ ಬಂದನೋ ಅಲ್ಲಿಗೆ ಹೋದ. ಮನುಷ್ಯನನ್ನು ಚಿಂತಿಸುವದು ವ್ಯರ್ಥ. ಜನನಮರಣ ಅಪರಿಹಾರ್ಯ ಕಾರಣ ಶೋಕಯೋಗ್ಯವಲ್ಲವೆಂದು ಭಾವ. ।।೩೭।।

ಸ್ಥಿತಿಮರಣಾದಿಗಳು ಎಲ್ಲ ಭಗವದಧೀನವೆಂದು ತಿಳಿದವರಿಗೆ ಈ ವಿಧ ಶೋಕ ಪ್ರಸಕ್ತಿ ಇಲ್ಲ ಎಂಬುದಕ್ಕೆ ನಾನೇ ಉದಾಹರಣವೆಂದು ಹೇಳುವರುಃ-

**ಅಹೋ ವಯಂ ಧನ್ಯತಮಾ ಯದತ್ರ**
**ತ್ಯಕ್ತಾಃ ಪಿತೃಭ್ಯಾಂ ನ ವಿಚಿಂತಯಾಮಃ ।**
**ಅಭಕ್ಷ್ಯಮಾಣಾ ಅಬಲಾ ವೃಕಾದಿಭಿಃ**
**ಸ ರಕ್ಷಿತಾ ರಕ್ಷಿತಿ ಯೋ ಹಿ ಗರ್ಭೇ** ।।೩೮।।

**ಯತ್** ಯಾವ ಕಾರಣ **ಅತ್ರ** ಈ ಲೋಕದಲ್ಲಿ (ಸ್ಮಶಾನದಲ್ಲಿ) **ಪಿತೃಭ್ಯಾಂ** ತಂದೆತಾಯಿಗಳಿಂದ **ತ್ಯಕ್ತಾಃ** ಬಿಡಲ್ಪಟ್ಟ **ಅಬಲಾಃ** ದುರ್ಬಲರಾಗಿದ್ದರೂ **ವೃಕಾದಿಭಿಃ** ತೋಳ ಮೊದಲಾದವುಗಳಿಂದ **ಅಭಕ್ಷ್ಯಮಾಣಾಃ** ತಿನ್ನಲ್ಪಡದೇ **ಹಿ** ಯಾವ ಕಾರಣ **ಗರ್ಭೇ** ತಾಯಿಯ ಉದರದಲ್ಲಿ **ಯಃ** ಯಾವ ಶ್ರೀಹರಿಯು **ರಕ್ಷತಿ** ರಕ್ಷಿಸುವನೋ **ಸಃ** ಅವನೇ **ರಕ್ಷಿತಾ** ಹೊರಗೆ ಬಂದಾಗಲೂ ಯಾವಾಗಲೂ ರಕ್ಷಕನು ಎಂದು ತಿಳಿದು **ನ ವಿಚಿಂತಯಾಮಃ** ನಮ್ಮ ರಕ್ಷಣೆಗಾಗಿ ಯೋಚಿಸುವದಿಲ್ಲ. **ತತ್** ಆದ್ದರಿಂದ **ವಯಂ** ತಂದೆತಾಯಿಗಳ ವಿಯೋಗವನ್ನು ಚಿಂತಿಸದಿರುವ ನಾವೇ **ಧನ್ಯತಮಾಃ** ಅತ್ಯಂತ ಧನ್ಯರು **ಅಹೋ** ಆಶ್ಚರ್ಯವು. ಚಿಂತಿಸದಿರಲು ಶ್ರೀಹರಿಯೇ ರಕ್ಷಕನೆಂಬ ನಿಶ್ಚಯವೇ ಕಾರಣವೆಂದು ಭಾವ. ।।೩೮।।

**ಯ ಇಚ್ಛಯೇಶಃ ಸೃಜತೀದಮವ್ಯಯೋ**
**ಯ ಏವ ರಕ್ಷತ್ಯವಲುಂಪತೇ ಯಃ ।**
**ತಸ್ಯಾಬಲಾಃ ಕ್ರೀಡನಮಾಹುರೀಶಿತು-**
**ಶ್ಚರಾಚರಂ ನಿಗ್ರಹಸಂಗ್ರಹೇ ಪ್ರಭೋಃ** ।।೩೯।।

**ಹೇ ಅಬಲಾಃ** ಸ್ವಯಂ ಸಮರ್ಥರಲ್ಲದ ಜನರೇ **ಅವ್ಯಯಃ** ನಾಶರಹಿತನಾದ **ಈಶಃ** ನಿಯಾಮಕನಾದ **ಯಃ** ಯಾವ ಶ್ರೀಹರಿಯು **ಇಚ್ಛಯಾ** ತನ್ನ ಇಚ್ಛೆಯಿಂದ **ಇದಂ** ಈ ಚರಾಚರ ಪ್ರಪಂಚವನ್ನು **ಸೃಜತಿ** ಸೃಷ್ಟಿಸುವನೋ **ಯಃ ಏವ** ಯಾವ ಶ್ರೀಹರಿಯೇ ಈ ಜಗತ್ತನ್ನು **ರಕ್ಷತಿ** ರಕ್ಷಿಸುವನೋ **ಯ ಏವ** ಯಾವ ಶ್ರೀಹರಿಯೇ **ಅವಲುಂಪತೇ** ಈ ಜಗತ್ತನ್ನು ನಾಶಮಾಡುವನೋ **ನಿಗ್ರಹಸಂಗ್ರಹೇ** ಸೃಷ್ಟ್ಯಾದಿಗಳಿಂದ

ಸಂಗ್ರಹಿಸಲು ಸಂಹಾರದಿಂದ ನಿಗ್ರಹಿಸಲು **ಪ್ರಭೋಃ** ಸಮರ್ಥನಾದ **ಈಶಿತುಃ** ಸರ್ವನಿಯಾಮಕನಾದ **ತಸ್ಯ** ಶ್ರೀಹರಿಗೆ **ಚರಾಚರಂ** ಜಂಗಮಸ್ಥಾವರ ಪ್ರಪಂಚವು **ಕ್ರೀಡನಂ** ಲೀಲಾಸಾಧನವೆಂದು **ಆಹುಃ** ಜ್ಞಾನಿಗಳು ಹೇಳುವರು.

ವಿಶೇಷ ಃ- ಇಚ್ಛಾಪದವನ್ನು ಉಪಯೋಗಿಸಿ ಸೃಷ್ಟಿಪ್ರಕರಣಗಳಲ್ಲಿ ಬರುವ ಮಾಯಾಶಬ್ದಕ್ಕೆ ಇಚ್ಛೆಯೆಂದರ್ಥವೆಂದು ತಿಳಿಸಿರುವರು. ಇದರಿಂದ ಸೃಷ್ಟಿಸಂಹಾರ-ಗಳನ್ನು ಬೇರೆಯವರು ಮಾಡುವದಾದರೆ ಪ್ರಯೋಜನವಿಲ್ಲದೇ ರಕ್ಷಣೆಯನ್ನಾದರೂ ಹೇಗೆ ಮಾಡುವನು ಎಂಬ ಪ್ರಶ್ನೆಗೆ ಉತ್ತರವಾಗಿ ಸೃಷ್ಟಿ, ಸ್ಥಿತಿ, ಸಂಹಾರ, ಕರ್ತನು ಇವನೊಬ್ಬನೇ ಎಂದೂ ಪ್ರಯೋಜನವಿಲ್ಲದಿದ್ದರೂ ಸೃಷ್ಟ್ಯಾದಿವ್ಯಾಪಾರವು ಇಚ್ಛಾರೂಪನಾದ ಶ್ರೀಹರಿಯ ಕ್ರೀಡೆಯೆಂದೂ ಈ ಜಗತ್ತು ಕ್ರೀಡಾಸಾಧನವೆಂದೂ ಹೇಳಿದೆ. 'ದೇವಸ್ಯೈಷ ಸ್ವಭಾವೋಽಯಂ' ಎಂಬ ಶ್ರುತ್ಯರ್ಥವನ್ನು ವಿವರಿಸಿದಂತಾಯಿತು. ।।೩೯।।

'ದೈವಾಧೀನಂ ಜಗತ್ಸರ್ವಂ' ಎಂದು ಉಕ್ತಿ ಇದೆ. ಈಶ್ವರಾಧೀನ ಜಗತ್ತೆಂಬುದು ಹೇಗೆ ಎಂದರೆ ದೈವ ದಿಷ್ಟ ಮುಂತಾದ ಶಬ್ದಗಳಿಂದ ಶ್ರೀಹರಿಯೇ ಕರೆಯಲ್ಪಡುವನು. ಸ್ಥಿತಿಮರಣಗಳು ಭಗವದಧೀನವೇ ಎಂಬುದನ್ನು ಅನ್ವಯವ್ಯತಿರೇಕಗಳಿಂದ ತಿಳಿಸುವರು-

**ಪಥಿ ಚ್ಯುತಂ ತಿಷ್ಠತಿ ದಿಷ್ಟರಕ್ಷಿತಂ**
**ಗೃಹೇ ಸ್ಥಿತಂ ತದ್ವಿಹತಂ ವಿನಶ್ಯತಿ ।**
**ಜೀವತ್ಯನಾಥೋಽಪಿ ತದೀಕ್ಷಿತೋ ವನೇ**
**ಗೃಹೇಽಪಿ ಗುಪ್ತೋಽಸ್ಯ ಹತೋ ನ ಜೀವತಿ ।।೪೦।।**

**ಪಥಿ** ದಾರಿಯಲ್ಲಿ **ಚ್ಯುತಂ** ಬಿದ್ದಿದ್ದರೂ **ದಿಷ್ಟರಕ್ಷಿತಂ** ಭಕ್ತರ ಅಭೀಷ್ಟವನ್ನು ನೀಡುವದರಿಂದ ದಿಷ್ಟನೆಂದು ಕರೆಸಿಕೊಳ್ಳುವ ಶ್ರೀಹರಿಯಿಂದ ರಕ್ಷಿತವಾದುದು **ತಿಷ್ಠತಿ** ಇದ್ದೇ ಇರುವದು **ಗೃಹೇ ಸ್ಥಿತಂ** ಮನೆಯಲ್ಲಿ ಭದ್ರವಾಗಿ ಇಟ್ಟಿದ್ದರೂ **ತದ್ವಿಹಿತಂ** ಅವನಿಂದ ನಾಶಮಾಡಲ್ಪಟ್ಟದ್ದು **ವಿನಶ್ಯತಿ** ನಾಶವಾಗುವದು **ಅನಾಥಃ ಅಪಿ** ತಂದೆತಾಯಿಮುಂತಾದ ಪಾಲಕರಿಲ್ಲದಿದ್ದರೂ **ವನೇ ಅಪಿ** ಕಾಡಿನಲ್ಲಿಯೂ **ತದೀಕ್ಷಿತಃ** ಶ್ರೀಹರಿಯಿಂದ ನೋಡಲ್ಪಟ್ಟವನು(ರಕ್ಷಿಸುವ ಇಚ್ಛೆಗೆ ವಿಷಯನು)**ಜೀವತಿ** ಬದುಕುವನು **ಅಸ್ಯ ಹತಃ** ಶ್ರೀಹರಿಯಿಂದ ಸಂಹೃತನಾದವನು **ಗೃಹೇ** ಮನೆಯಲ್ಲಿ **ಗುಪ್ತಃ ಅಪಿ** ತಂದೆತಾಯಿಗಳಿಂದ ರಕ್ಷಿತನಾದರೂ **ನ ಜೀವತಿ** ಬದುಕುವದಿಲ್ಲ. ।।೪೦।।

**ಭೂತಾನಿ ತೈಸ್ತೈರ್ನಿಜಯೋನಿಕರ್ಮಭಿ-**
**ರ್ಭವಂತಿ ಕಾಲೇ ನ ಭವಂತಿ ಸರ್ವಶಃ ।**

**ನ ತತ್ರ ಹಾತ್ಮಾ ಪ್ರಕೃತಾವಪಿ ಸ್ಥಿತ-**
**ಸ್ತಸ್ಯಾ ಗುಣೈರನ್ಯತಮೋ ನಿಬಧ್ಯತೇ** ॥೪೧॥

**ಭೂತಾನಿ** ಪ್ರಾಣಿಗಳು **ತೈಃ ತೈಃ** ಆ ಆ **ನಿಜಯೋನಿಕರ್ಮಭಿಃ** ತಮ್ಮ ತಮ್ಮ ಸುರನರಾದಿಯೋನಿ(ಜನ್ಮ)ಗೆ ಕಾರಣಗಳಾದ ಕರ್ಮಗಳಿಂದ **ಸರ್ವಶಃ** ದೇವಾದಿಗಳೂ ಕೂಡ **ಸರ್ವಶಃ** ಪೂರ್ಣನಾದ ಭಗವಂತನಿಂದ **ಕಾಲೇ** ಶ್ರೀಹರಿಯಿಂದ ಪ್ರೇರಿಣೆಗೊಂಡ ಕರ್ಮಗಳು ಫಲಿಸುವ ಕಾಲವಿಶೇಷದಲ್ಲಿ **ಭವಂತಿ** ಆ ಆ ಯೋನಿಗಳಲ್ಲಿ ಹುಟ್ಟುವರು. **ಕಾಲೇ** ಕರ್ಮಮುಗಿದ ಕಾಲದಲ್ಲಿ **ನ ಭವಂತಿ** ಮರಣಹೊಂದುವವು 'ದ್ರವ್ಯಂ ಕರ್ಮ ಚ ಕಾಲಶ್ಚ' ಎಂಬ ಪ್ರಮಾಣದಂತೆ ಕರ್ಮಾದಿಗಳೂ ಶ್ರೀಹರಿಯ ಅಧೀನಗಳೆ, ಕರ್ಮನಿಮಿತ್ತವಾಗಿ ಫಲಕೊಡುವದ-ರಿಂದ ಶ್ರೀಹರಿಗೆ ವೈಷಮ್ಯಾದಿಗಳಿಲ್ಲವೆಂದು ಅಭಿಪ್ರಾಯ. **ತತ್ರ** ಜೀವಪರಮಾತ್ಮರಲ್ಲಿ **ಸ್ಥಿತಃ ಅಪಿ** ಜೀವನೊಂದಿಗೆ ಇದ್ದರೂ **ಅನ್ಯತಮಃ** ಜೀವನಿಗಿಂತ ಅತ್ಯಂತ ವಿರುದ್ಧಸ್ವರೂಪನಾದ್ದರಿಂದ ಭಿನ್ನನಾದ **ಆತ್ಮಾ** ಬಿಂಬನಾದ, ನಿಯಾಮಕನಾದ ಹರಿಯು **ತಸ್ಯಾಃ** ಆ ಪ್ರಕೃತಿಯ **ಗುಣೈಃ** ಸತ್ವರಜಸ್ತಮೋಗುಣಗಳಿಂದ **ನ ನಿಬಧ್ಯತೇ ಹ** ಬದ್ಧನಾಗುವದಿಲ್ಲವೆಂಬುದು ಶಾಸ್ತ್ರಸಿದ್ಧವಾದುದು.

ಪರಮಾತ್ಮನು ಒಬ್ಬನೇ ಇರುವದರಿಂದ ಅನ್ಯತಮಶಬ್ದವಾಚ್ಯ ಹೇಗೆ ಎಂಬ ಶಂಕೆಯನ್ನು ಪ್ರಮಾಣದಿಂದ ಪರಿಹರಿಸುವರು. ಅನ್ಯತಮಶಬ್ದದಿಂದ ಅನನ್ವಿತ ಆತ್ಮಶಬ್ದವು ಜೀವಪರ ಎಂಬ ಪ್ರತೀತಿಯನ್ನು ನಿವಾರಿಸಲು ವಿವಕ್ಷಿತ ಅರ್ಥ ಹೇಳುವರು-

**... ತಾತ್ಪರ್ಯ ...**

**ಅನ್ಯತಮ ಆತ್ಮಾ ಪರಮಾತ್ಮಾ ।**
**ಸುವಿರುದ್ಧಸ್ವಭಾವತ್ವಾಜ್ಜೀವಾದನ್ಯತಮೋ ಹರಿಃ ॥ ಇತಿ ವಾಮನೇ ।**

ನ ಅನ್ಯತಮಃ ಆತ್ಮಾ' ಎಂದರೆ ಪರಮಾತ್ಮನು 'ಗುಣಾಃ ಶ್ರುತಾ ಸುವಿರುದ್ಧಾಶ್ಚ ದೇವೇ' ಇತ್ಯಾದಿ ಪ್ರಮಾಣದಿಂದ ಶ್ರೀಹರಿಗೆ ಜೀವರಿಂದ ವಿರುದ್ಧಸ್ವಭಾವ ವಿರುವದರಿಂದ ಅನ್ಯತಮ ಶಬ್ದವಾಚ್ಯನು.(ಅತ್ಯಂತ ವಿಲಕ್ಷಣನೆಂದರ್ಥ)ಇದರಿಂದ ಅತಿಶಯಾರ್ಥಕವೆಂಬಂತೆ ಹೊರತು ಬಹುಷ್ವೇಕ ಅನ್ಯತಮ ಎಂಬ ನಿರ್ಧಾರಣಾರ್ಥಕ ಸಮತ್ವವಲ್ಲ ಎಂದಂತಾಯಿತು ಎಂದು ವಾಮನಪುರಾಣದಲ್ಲಿದೆ. ಇಲ್ಲಿ ಭಗವಂತನ ಮಹಾತ್ಮ್ಯವನ್ನು ಹೇಳಿದ್ದರಿಂದ ಬ್ರಹ್ಮಾದಿಗಳೆಲ್ಲ ಅವನ ಅಧೀನ ದಲ್ಲಿರುವದರಿಂದ ಸರ್ವಸ್ವಾಮಿಯಾದ ಶ್ರೀಹರಿಯನ್ನು ಭಜಿಸಬೇಕು. ನಿಷ್ಫಲಶೋಕಮಾಡಬಾರದು ಎಂದು ಫಲಿತಾರ್ಥ.

'ಆತ್ಮನಾ ಬಧ್ಯತೇ ಅನ್ಯತಮೋ ಬಧ್ಯತೇ' ಎಂದು ಅರ್ಥ ಮಾಡಿದಲ್ಲಿ ಮುಂದಿನ ಶ್ಲೋಕದೊಂದಿಗೆ ಪುನರುಕ್ತಿ ಬರುವದರಿಂದ ಶ್ರೀಮದಾಚಾರ್ಯರು ಅನ್ಯತಮಃ 'ಆತ್ಮಾ ಪರಮಾತ್ಮಾ' ಎಂದು ವ್ಯಾಖ್ಯಾನಿಸಿರುವರು ಎಂದು ವಿಜಯಧ್ವಜರು ತಿಳಿಸಿರುವರು ॥೪೦॥

ಪರಮಾತ್ಮನಿಗೆ ಬಂಧವಿಲ್ಲವೆಂದು ಹೇಳಿದ್ದರಿಂದ ಜೀವ ಪರಮಾತ್ಮರು ಭಿನ್ನರೆಂದು ಅರ್ಥಾತ್ ಸಿದ್ಧವಾಯಿತು. ಆ ಭೇದವು ಯಾವ ಪ್ರಕಾರದಿಂದ ಎಂದು ಶಂಕಿಸಿ ಹೇಳುತ್ತಾರೆ.

ಅಥವಾ ಭಗವಂತನು ಬಂಧಿಸಲ್ಪಡುವದಿಲ್ಲವೆಂದರೆ ಯಾರು ಬಂಧಿತರಾಗುವರು ಎಂಬ ಶಂಕೆಯನ್ನು ಪರಿಹರಿಸುತ್ತ ಶರೀರವು ತಟಸ್ಥವಾಗಿ ಭಗವಂತನಿಗೆ ಅಧಿಕರಣವಾಗಿದೆ. ಆದ್ದರಿಂದ ಅವನಿಗೆ ಬಂಧಕವಲ್ಲ ಎಂದು ಉಪಪಾದಿಸುವರು.

ಅಥವಾ ದೇಹದಲ್ಲಿ ಇದ್ದ ಪರಮಾತ್ಮ ಬದ್ಧನಾಗುವದಿಲ್ಲ ಎಂಬುದರಿಂದ ಜೀವನು ಬದ್ಧನಾಗುವನು ಎಂದಂತಾಯಿತು. ಅದು ಹೇಗೆ ಅವನೂ ಕೂಡ ದೇಹದಿಂದ ಭಿನ್ನನೆ ಆಗಿದ್ದಾನಲ್ಲ ಎಂದರೆ ಜೀವನು ಮಿಥ್ಯಾಜ್ಞಾನಮೂಲಕವಾಗಿ ಬಂಧಯುಕ್ತ ಎಂಬ ಅಭಿಪ್ರಾಯದಿಂದ ಹೇಳುವರು.

**ಇದಂ ಶರೀರಂ ಪುರುಷಸ್ಯ ಮೋಹಜಂ**
**ಯಥಾ ಪೃಥಗ್ ಭೌತಿಕಮೀಯತೇ ಗೃಹಮ್ ।**
**ತಥೋದಕೈಃ ಪಾರ್ಥಿವತೈಜಸೈರ್ಜನಃ**
**ಕಾಲೇನ ಜಾತೋ ವಿಕೃತೋ ವಿನಶ್ಯತಿ ॥೪೨॥**

**ಪುರುಷಸ್ಯ** ಸಂಸಾರಿಯಾದ ಜೀವನ **ಇದಂ ಶರೀರಂ** ಕಣ್ಣಿಗೆ ಕಾಣುವ ಈ ದೇಹವು **ಮೋಹಜಂ** ಅಹಂ ಮಮ ಎಂಬ ಸ್ವಾತಂತ್ರ್ಯಸ್ವಾಮಿತ್ವಮುಂತಾದ ಮಿಥ್ಯಾಜ್ಞಾನದಿಂದಾಗಿ ಬಂದದ್ದು (ಮುಹ ವೈಚಿತ್ಯೇ ಎಂದು ಧಾತು). ವಿಪರೀತಜ್ಞಾನವಿರುವದರಿಂದ ಜೀವನು ಶ್ರೀಹರಿಯಿಂದ ಭಿನ್ನನು ಎಂದು ಹೇಳಿದಂತಾಯಿತು. ಅನ್ಯಥಾಜ್ಞಾನದಿಂದ ಬಂದದ್ದು ಎಂದು ಹೇಳಿದ್ದರಿಂದ ಜೀವನಿಂದ ಭಿನ್ನವಾದುದು ಅವನ ದೇಹ ಎಂದು ತಿಳಿಯಬೇಕು. **ಭೌತಿಕಂ** ಪಂಚಭೂತ ವಿಕಾರಗಳಾದ ವೃಕ್ಷಾದಿಗಳಿಂದ ನಿರ್ಮಿತವಾದ **ಗೃಹಂ** ಮನೆಯು **ಪೃಥಕ್** ಮನೆಯಲ್ಲಿ ವಾಸಿಸುವವನಿಗಿಂತ ಬೇರೆ ಎಂದು **ಈಯತೇ** ತಿಳಿಯಲ್ಪಡುವದು. ಹಾಗೆ ಭೌತಿಕ ಶರೀರವು ಜೀವನಿಂದ ಭಿನ್ನ **ಯಥಾ** ಹೇಗೆ **ವಿನಶ್ಯತಿ** ಕಟ್ಟಿದ ಮನೆಯು ಬಿದ್ದು ಹೋಗುವದೋ **ತಥಾ** ಹಾಗೆ **ಉದಕೈಃ** ನೀರಿನ

**ಪಾರ್ಥಿವತೈಜಸೈಃ** ಭೂಮಿಯ ಮತ್ತು ತೇಜಸ್ಸಿನ ಪರಮಾಣುಗಳಿಂದ ಪಂಚಭೂತಗಳಿಂದ **ಕಾಲೇನ** (ಚೋದಿತೈಃ) ಕಾಲನಾಮಕ ಪರಮಾತ್ಮನಿಂದ ಪ್ರೇರಿತಗಳಾದವುಗಳಿಂದ **ವಿಕೃತಃ** ವಿಕಾರಗೊಂಡ **ಜನಃ** ದೇಹವು **ವಿನಶ್ಯತಿ** ನಾಶವಾಗುವದು. ಹಾಗೆ ಉದಕಭೂಮಿತೇಜಸ್ಸುಗಳೆಂಬ ತನ್ನ ಕಾರಣಗಳಲ್ಲಿ ಲೀನವಾಗುವದು ಕಾರಣಾತ್ಮನಾ ಇರುವದು. ಆದ್ದರಿಂದ ದೇಹವು ಜೀವನಿಗಿಂತ ಭಿನ್ನವೆಂದು ನಿಶ್ಚಯ ಮಾಡಲ್ಪಡುವದು.

ವಿಶೇಷ ಃ- ಶ್ರೀಹರಿಯು ಬದ್ಧನಲ್ಲವೆಂದದ್ದರಿಂದ ಜೀವನು ಬದ್ಧನೆಂದಂತಾಯಿತು. ಆ ಜೀವನು ದೇಹಕ್ಕಿಂತ ಭಿನ್ನನಾದ್ದರಿಂದ ಬದ್ಧನೆಂಬುದು ಹೇಗೆ ಎಂದರೆ ಮಿಥ್ಯಾಜ್ಞಾನಮೂಲಕವೆಂದು ಹೇಳುತ್ತಾರೆ. ಭೌತಿಕವಾದ ಗೃಹವು ಹೇಗೆ ಗೃಹದ ಅಭಿಮಾನಿಗಿಂತ ಭಿನ್ನವೋ ಹಾಗೆ ಪಂಚಭೂತೋಪಾದಾನಕವಾದ ಕಾಲನಾಮಕನಾದ, ಮುಖ್ಯನಿಮಿತ್ತನಾದ ಶ್ರೀಹರಿಯಿಂದ ಹುಟ್ಟಿದ ಈ ದೇಹವು ಅದರ ಅಭಿಮಾನಿಯಾದ ಜೀವನಿಂದ ಭಿನ್ನವಾದರೂ ಇದು ಜೀವನ ಸ್ವಾತಂತ್ರ್ಯಾದಿ ಮಿಥ್ಯಾಜ್ಞಾನಪ್ರಯುಕ್ತವಾದ್ದರಿಂದ ದೇಹಸ್ಥನಾದ **ಜನಃ** ಜೀವನು **ಜಾತಃ** ಹುಟ್ಟುವನು. **ವಿಕೃತಃ** ವಿಕಾರವುಳ್ಳವನು **ವಿನಶ್ಯತಿ** ಮರಣಹೊಂದುವನು ಜನನ ಜರಾಮರಣ ಮುಂತಾದವುಗಳಿಂದ ಬರುವ ದುಃಖವೆಂಬ ಬಂಧವುಳ್ಳವನು ಎಂದೂ ಅನ್ವಯ ಮಾಡಿರುವರು. ಭೌತಿಕದೇಹವು ಜೀವನಿಂದ **ಪೃಥಕ್** ತಟಸ್ಥವೆಂದೇ ಹೇಗೆ ತಿಳಿಯುವದೋ ಹಾಗೆ **ಪುರುಷಸ್ಯ** ಪೂರ್ಣಷಡ್ಗುಣನಾದ ಹರಿಯಿಂದ **ಪೃಥಗೀಯತೇ** ತಟಸ್ಥವಾಗಿಯೇ ಹರಿಗೆ ಅಧಿಕರಣವಾಗಿ ತಿಳಿಯುವದು. ಕಾರಣ ಶ್ರೀಹರಿಗೆ ತನ್ನ ಗುಣಗಳ ಸಂಬಂಧಾಪಾದಕವಲ್ಲ ಎಂದು 'ನ ಬಧ್ಯತೇ' ಎಂಬುದನ್ನು ಉಪಪಾದಿಸಿ ಜೀವನಿಂದ ಅತ್ಯಂತ ವಿಲಕ್ಷಣನೆಂಬುದನ್ನು **ಜನಃ** ಜೀವನು ಉದಕ್ಯಪಾರ್ಥಿವ ತೈಜಸವಾದ ಶರೀರಸಂಬಂಧದಿಂದ ಕಾಲನಾಮಕನಿಂದ ಹುಟ್ಟಿ ಸುಖದುಃಖಾದಿ-ವಿಕಾರ ಹೊಂದುವನು. ಅವನಿಂದಲೇ ಶರೀರವಿಯೋಗವಾಗಿ ನಾಶವಾಗುವನು. ಅಂದಮೇಲೆ ಜೀವನ ಜನ್ಮಾದಿಕರ್ತೃವಾದ್ದರಿಂದ ಶ್ರೀಹರಿಯು ಜೀವನಿಂದ ಅತ್ಯಂತವಿಲಕ್ಷಣ ವೆಂದೂ ಅರ್ಥ. ॥೪೨॥

೧.ಜೀವನಿಗೆ ಇರುವ ಗುಣಬಂಧದ ಕಾರಣವನ್ನು ಹೇಳಿ ಪರಮಾತ್ಮನಿಗೆ ಗುಣಬಂಧವಿಲ್ಲ ಎಂಬುದಕ್ಕೆ ನಿಮಿತ್ತವನ್ನು ದೃಷ್ಟಾಂತದಿಂದ ಹೇಳುವರು.

೨.ಶರೀರವು ತಟಸ್ಥವಾಗಿ ಅಧಿಕರಣವಾದ್ದರಿಂದ ಭಗವಂತನಿಗೆ ಸ್ವಗುಣಾಪಾದಕ ವಾಗದಿದ್ದರೂ ಜೀವನಿಗೆ ತನ್ನ ಅಂತರ್ಗತನಾದ ಭಗವಂತನಿಂದ ಬೇರೆಯಾಗಿ ತಿಳಿಯದಿರುವದರಿಂದ ಗುಣಾದಿಗಳಿಗೆ ಗುಣ್ಯಾದಿಗಳಿಂದ ಅಭೇದವಿರುವದರಿಂದ ದೇಹಗುಣತ್ವಭಗವಂತನಿಗೆ ಪ್ರಾಪ್ತ ಎಂಬ ಶಂಕೆ ಬಂದರೆ ಹೇಳುವರು.

೩.'ನಿತ್ಯೋ ನಿತ್ಯಾನಾಂ' ಎಂಬ ಶ್ರುತಿಯಂತೆ ಜೀವನು ನಿತ್ಯನಾದ್ದರಿಂದ ದೇಹದ ಅನಿತ್ಯತೆಯನ್ನು ದೃಷ್ಟಾಂತದಿಂದ ಸ್ಪಷ್ಟಪಡಿಸುತ್ತಾರೆ.

೪. ಅಥವಾ ಶರೀರವು ನಶ್ವರವಾದ್ದರಿಂದ ಜೀವನು ಶರೀರದಿಂದ ಭಿನ್ನನಾಗಲಿ ಆದರೂ ನಿತ್ಯನಾದ್ದರಿಂದ ಜೀವನಿಗೂ ಪರಮಾತ್ಮನಿಗೂ ಅಭೇದವೇಕಾಗಬಾರದು ಎಂದು ಅಜ್ಞಾನಿಯು ಆಶಂಕಿಸಿದರೆ ಅದನ್ನು ಪರಿಹರಿಸುತ್ತಾರೆ.

**ಯಥಾಽನಲೋ ದಾರುಷು ಭಿನ್ನ ಈಯತೇ**
**ಯಥಾಽನಿಲೋ ದೇಹಗತಃ ಪೃಥಕ್‌ಸ್ಥಿತಃ ।**
**ಯಥಾ ನಭಃ ಸರ್ವಗತಂ ನ ಸಜ್ಜತೇ**
**ತಥಾ ಗುಣೈಃ ಸರ್ವಗುಣಾಶ್ರಯಃ ಪರಃ ॥೪೩॥**

**ಯಥಾ** ಹೇಗೆ **ದಾರುಷು** ಕಟ್ಟಿಗೆಗಳಲ್ಲಿ **ಸ್ಥಿತಃ** ಇರುವ **ಅನಲಃ** ಬೆಂಕಿಯು **ಭಿನ್ನಃ** ಕಟ್ಟಿಗೆಯಿಂದ ಭಿನ್ನವೆಂದು **ಈಯತೇ** ತಿಳಿಯಲ್ಪಡುವದೋ **ಗುಣೈಃ** ಆ ಕಟ್ಟಿಗೆಯ ವಕ್ರತ್ವದಾಹ್ಯತ್ವಮುಂತಾದ ಗುಣಗಳಿಂದ **ನ ಸಜ್ಜತೇ** ಸಂಬಂಧ ಉಳ್ಳದ್ದಲ್ಲವೋ ಯಥಾ ಹೇಗೆ **ದೇಹಗತಃ** ಜೀವರ ದೇಹದಲ್ಲಿರುವ **ಅನಿಲಃ** ಪ್ರಾಣವಾಯುವು **ಪೃಥಕ್ ಸ್ಥಿತಃ** ದೇಹದಿಂದ ಭಿನ್ನವಾಗಿರುವದೋ ಮತ್ತು **ಗುಣೈಃ** ದೇಹದ ಗುಣಗಳಾದ ಛೇದ್ಯತ್ವಗಳಿಂದ **ನ ಸಜ್ಜತೇ** ಸಂಬಂಧವುಳ್ಳದ್ದಲ್ಲವೋ **ಯಥಾ** ಹೇಗೆ **ಸರ್ವಗತಂ** ಎಲ್ಲಡೆಯಲ್ಲಿಯೂ ಇರುವ **ನಭಃ** ಆಕಾಶವು ಎಲ್ಲಕ್ಕಿಂತ ಭಿನ್ನವು **ತಥಾ** ಹಾಗೇ **ಸರ್ವಗುಣಾಶ್ರಯಃ** ಜ್ಞಾನಾನಂದಾದಿ ಎಲ್ಲ ಗುಣಗಳಿಗೆ ಆಶ್ರಯನಾದ ಎಲ್ಲ ಪ್ರಾಣಿಗಳ ಗುಣಭೂತವಾದ ಭೋಗಾಯತನವಾದ ಶರೀರವನ್ನು ಆಶ್ರಯಿಸಿದ **ಪರಃ** ಪರಮಾತ್ಮನು (**ಪರಃ** ಜೀವವಿಲಕ್ಷಣನಾದ ಶ್ರೀಹರಿಯು ಜೀವನಿಂದ ಭಿನ್ನನು) **ಗುಣೈಃ** ಜೀವಗುಣಗಳಾದ ಬದ್ಧತ್ವಾದಿಗಳಾದ ದೇಹದ ಗುಣಗಳಿಂದ, ಅನಿತ್ಯತ್ವಾದಿ ಗುಣಗಳಿಂದ **ನ ಸಜ್ಜತೇ** ಲಿಪ್ತನಾಗುವದಿಲ್ಲ.

ಕೆಲವು ಅರ್ಥವಾಗದಿರುವದು ಕೆಲವು ವಿಪರೀತಾರ್ಥವಾಗುವದನ್ನು ಪರಿಹರಿಸಲು ಶ್ಲೋಕತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರುಃ-

**... ತಾತ್ಪರ್ಯ ...**

**ಭಗವನ್ಮಾಹಾತ್ಮ್ಯಕಥನೇನ ಸರ್ವಸ್ಯ ತದ್ವಶತ್ವಾತ್ ಸ ಏವ ಭಜನೀಯೋ ನ ಶೋಕೇನ ಪ್ರಯೋಜನಂ ಇತಿ ಫಲಿತಾರ್ಥಃ ॥**

**ದೇಹದಾರುಗತೌ ಪ್ರಾಣವಹ್ನೀ ಸರ್ವಗತಂ ನಭಃ ।**
**ದೇಹಾದಿಭ್ಯೋ ಯಥಾ ಭಿನ್ನಾ ನ ಲಿಪ್ಯಂತೇ ಚ ತದ್ಗುಣೈಃ ॥**

**ತಥಾ ಜೀವಗತೋ ವಿಷ್ಣುರ್ಜೀವಾದ್ಭಿನ್ನೋ ನ ತದ್ಗುಣೇ ॥ ಇತಿ ಚ ॥೪೩॥**

ದೇಹ ಮತ್ತು ಅರಣಿಗಳಲ್ಲಿರತಕ್ಕ ವಾಯುವಹ್ನಿಗಳು, ಸರ್ವತ್ರ ವ್ಯಾಪ್ತವಾದ ಆಕಾಶವು ಹೇಗೆ ದೇಹ, ದಾರು, ಸರ್ವ ಪದಾರ್ಥಗಳಿಂದ ಭಿನ್ನಗಳಾಗಿ ದೇಹ, ದಾರು, ಸರ್ವಪದಾರ್ಥಗಳ ಗುಣಗಳಿಂದ ಸಂಬದ್ಧಗಳಾಗುವದಿಲ್ಲವೋ ಹಾಗೆಯೇ ಜೀವರಲ್ಲಿ ನಿಯಾಮಕನಾಗಿದ್ದ ಜೀವರಿಗಿಂತ ಭಿನ್ನನಾದ ಶ್ರೀವಿಷ್ಣುವು ಜೀವರ ದೇಹದ ಗುಣಗಳಿಂದ ಸಂಬದ್ಧನಾಗುವದಿಲ್ಲ. ॥೪೩॥

ನಿಮ್ಮ ಶೋಕಕ್ಕೆ ಯೋಗ್ಯನಲ್ಲದ ಸುಯಜ್ಞನ ದೇಹ ಕಾಣುತ್ತಲೇ ಇರುವದು. ಕಾರಣ ಶೋಕ ಮಾಡಬೇಕಿಲ್ಲವೆಂದು ಹೇಳುವರು ಃ-

**ಸುಯಜ್ಞೋ ನ ಸ್ವಯಂ ಶೇತೇ ಮೂಢಾ ಯಮನುಶೋಚಥ ।**
**ಯಃ ಶ್ರೋತಾ ಯೋಽನುವಕ್ತೇಹ ನ ಸ ದೃಶ್ಯೇತ ಕರ್ಹಿಚಿತ್ ॥೪೪॥**

**ಹೇ ಮೂಢಾಃ** ಎಲೇ ಮೂರ್ಖರೇ **ಯಂ** ಯಾರನ್ನು ಕುರಿತು **ಅನುಶೋಚಥ** ದುಃಖಿಸುತ್ತಿರುವಿರೋ **ಅಯಂ ಸುಯಜ್ಞಃ** ಈ ಸುಯಜ್ಞನು **ಶೇತೇ ನನು** ಮಲಗಿರುವನು. ಮೃತನಾಗಿಲ್ಲ (ನನು ಚಸ್ಯಾದ್ವಿರೋಧಾದೌ) ಮಲಗಿಯೇ ಇರುವನು ಲೋಕಾಂತರಕ್ಕೆ ಹೋಗಿಲ್ಲ. ಕಿವಿಮುಂತಾದ ಇಂದ್ರಿಯಗಳ ವ್ಯಾಪಾರವು ಕಾಣದಿರುವದರಿಂದ ಮರಣವನ್ನು ಊಹಿಸಬಹುದಾಗಿದೆ ಕಾರಣ ಸಾಯಲಿಲ್ಲವೆಂದು ಹೇಗೆ ಹೇಳುತ್ತೀರಿ ಎಂದರೆ ಹೇಳುತ್ತಾರೆ. **ಇಹ** ಈ ಸುಯಜ್ಞನ ಶರೀರದಲ್ಲಿಯ **ಯಃ ಶ್ರೋತಾ** ಯಾವನು ಮುಖ್ಯವಾಗಿ ಕೇಳುವವನೋ **ಸಃ** ಆ ಶ್ರೀಹರಿಯು **ಕರ್ಹಿಚಿತ್** ಯಾವ ಕಾಲದಲ್ಲಿಯೂ **ನ ದೃಶ್ಯತೇ** ಸೂಕ್ಷ್ಮ ಅವ್ಯಕ್ತ ಸ್ವಭಾವನಾದ್ದರಿಂದ ಕಾಣುವದಿಲ್ಲ.

ವಿಶೇಷ ಃ- 'ತದವ್ಯಕ್ತಮಾಹ ಹಿ'ಎಂದು ಸೂತ್ರವಿದೆ 'ನಾನ್ಯೋಽತೋಽಸ್ತಿ ದ್ರಷ್ಟಾ' 'ನಾನ್ಯೋಽತೋಽಸ್ತಿ ಶ್ರೋತಾ' ಎಂಬ ಶ್ರುತಿಯು ಶ್ರೀಹರಿಯೇ ಮುಖ್ಯ ಶ್ರೋತೃವು ಮುಖ್ಯವಕ್ತೃವು. ಇದರಿಂದ ನಾವೇನು ಮೂರ್ಖರಲ್ಲ ಶ್ರೋತೃವನ್ನು ಕುರಿತು ದುಃಖಿಸುತ್ತೇವೆ ಎಂದರೆ ಆ ಶ್ರೋತೃವು ಮುಖ್ಯನೋ ಅಮುಖ್ಯನೋ ಎಂದು ವಿಕಲ್ಪಿಸಿ ಮುಖ್ಯನೆಂದು ಹೇಳಿದಲ್ಲಿ ಉತ್ತರ ಕೊಟ್ಟಿರುವರು. ಎಂದು ತಿಳಿಯಬೇಕು.

(ನನು ಎಂಬುದು 'ಪ್ರಶ್ನೇ ಅವಧಾರಣ ಅನುಜ್ಞಾ ಅನುನಯ ಆಮಂತ್ರಣೇ' ಎಂಬ ಕೋಶಾನುಸಾರ) ಇಲ್ಲಿ ಮಲಗಿರುವದು ದೇಹವು **ಸುಯಜ್ಞಃ ನನು** ಸುಯಜ್ಞನೇನು ? ಅಲ್ಲವೆಂದರ್ಥ.(ಸುಯಜ್ಞನಿಗಾಗಿ ದುಃಖಿಸಬೇಕು ಹೊರತು ಜಡವಾದ ದೇಹವನ್ನು ಕುರಿತಲ್ಲವೆಂದು ಅಭಿಪ್ರಾಯ) ॥೪೪॥

ಜೀವನಿಗೇಕೆ ಶ್ರೋತೃತ್ವವಿಲ್ಲ ಎಂಬ ಶಂಕೆಗೆ ಮತ್ತು ಸುಯಜ್ಞನ ದೇಹದಲ್ಲಿರುವ ಮುಖ್ಯಪ್ರಾಣನಿಗೆ ಶ್ರೋತತ್ವಾದಿಗಳು ಸಂಭವಿಸುವಾಗ ಶ್ರೀಹರಿಯೇ ಶ್ರೋತೃವು ಮತ್ತೊಬ್ಬರಲ್ಲವೆಂದು ಹೇಗೆ ಹೇಳಿದಿರಿ ಎಂದರೆ ಹೇಳುತ್ತಾರೆಃ-

**ನ ಶ್ರೋತಾ ನಾನು ವಕ್ತಾಯಂ ಮುಖ್ಯೋಽಪ್ಯತ್ರ ಮಹಾನಸುಃ ।**
**ಯಸ್ತ್ವಿಹೇಂದ್ರಿಯವಾನಾತ್ಮಾ ಸ ಚಾನ್ಯಃ ಪ್ರಾಣದೇಹಯೋಃ ॥೪೫॥**

**ಅತ್ರ** ಈ ಸುಯಜ್ಞನ ದೇಹದಲ್ಲಿ **ಮುಖ್ಯಃ** ಶ್ವಾಸೋಚ್ಛ್ವಾಸಗಳಿಂದ ಮುಖದಲ್ಲಿ ಕಂಡು ಬರುವದರಿಂದ ಮುಖ್ಯರಾದ **ಅಯಂ** ಈ **ಮಹಾನ್ ಅಸುಃ ಅಪಿ** ಮುಖ್ಯಪ್ರಾಣದೇವರು ಕೂಡ **ನ ಶ್ರೋತಾ** ಸ್ವತಂತ್ರ ಶ್ರೋತೃವು ಅಲ್ಲ. **ನ ಅನುವಕ್ತಾ** ಸ್ವತಂತ್ರವಕ್ತೃವೂ ಅಲ್ಲ. 'ತಸ್ಯ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ' ಎಂದು ಶ್ರುತಿ ಇರುವದರಿಂದ ಶ್ರೀಹರಿಯನ್ನು ಬಿಟ್ಟು ಮತ್ತೊಬ್ಬನು ಸ್ವತಂತ್ರ ಶ್ರೋತೃವಲ್ಲವೆಂಬುದು ಯುಕ್ತವೆಂದು ಅಭಿಪ್ರಾಯ. ಹಾಗಾದರೆ ಸಾಯುವದಕ್ಕೆ ಮೊದಲು ಸುಯಜ್ಞನೆಂಬ ಜೀವನಿಗೆ ಶ್ರೋತೃತ್ವಾದಿ ಗಳಿದ್ದವು ಈಗ ಇಲ್ಲ ಆದ್ದರಿಂದ ಮೃತನೆನ್ನುತ್ತೇವೆ ಎಂಬ ಹಿಂದಿನ ಶಂಕೆಯ ಶೇಷವನ್ನು ಕೈಮುತ್ಯನ್ಯಾಯದಿಂದ ಪರಿಹರಿಸುತ್ತಾರೆ **ತು**ಶಬ್ದದಿಂದ. ಪೂರ್ವಾರ್ಧದಲ್ಲಿನ ನ ಎಂಬುದನ್ನು ಇಲ್ಲಿಯೂ ತೆಗೆದುಕೊಳ್ಳಬೇಕು. **ಇಹ** ಈ ಸುಯಜ್ಞನ ದೇಹದಲ್ಲಿ ಅರ್ಥಾತ್ ಎಲ್ಲ ಜೀವರ ದೇಹದಲ್ಲಿ **ಯಃ** ಯಾವ **ಇಂದ್ರಿಯವಾನ್** ದೇಹಾಭಿಮಾನಿ ಯಾದ್ದರಿಂದ ಇಂದ್ರಿಯವೆನೆನಿಸುವ **ಪ್ರಾಣದೇಹಯೋಃ** ಇಂದ್ರಿಯಗಳಿಂದಲೂ, ಮುಖ್ಯಪ್ರಾಣನಿಂದಲೂ,ದೇಹದಿಂದಲೂ **ಚ** ಪೂರ್ಣಶ್ರೋತೃತ್ವಾದಿಗುಣಯುಕ್ತನಾದ ಶ್ರೀಹರಿಯಿಂದಲೂ **ಅನ್ಯಃ** ಭಿನ್ನನಾದ ಜೀವನೇನಿರುವನೋ **ಸಃ ಆತ್ಮಾ** ಆ ಜೀವಾತ್ಮನು **ನ ಶ್ರೋತಾ ನ ಅನುವಕ್ತಾ** ಮುಖ್ಯಶ್ರೋತೃವು ಮುಖ್ಯವಕ್ತೃವು ಅಲ್ಲವೆಂದು ಹೇಳಬೇಕೆ ? 'ಏತತ್ಪ್ರಾಣಮವಷ್ಟಭ್ಯ ವಿಧಾರಯಾಮಿ' ಎಂದು ಶ್ರುತಿ ಹೇಳುವಂತೆ ಸರ್ವಶಕ್ತಿಯುಳ್ಳ ಪ್ರಾಣದೇವರಿಗೇನೇ ಸ್ವತಃ ಶ್ರೋತೃತ್ವಾದಿಗಳು ಯುಕ್ತವಲ್ಲ ಎಂದಿರುವಾಗ ಜೀವನಿಗೆ ಯುಕ್ತವಲ್ಲವೆಂದು ಪ್ರತ್ಯೇಕ ಹೇಳುವದೇನು? ಕೈಮುತ್ಯಸಿದ್ಧ. ಆದುದರಿಂದ ಸುಯಜ್ಞನಿಗಾಗಿ ದುಃಖಿಸುವದರಿಂದ ಪ್ರಯೋಜನ ವಿಲ್ಲವೆಂದು ಅಭಿಪ್ರಾಯ. ಜೀವಿಸಿರುವವರೆಗೂ ಮುಖ್ಯಶ್ರೋತೃತ್ವಾದಿಗಳು ಯುಕ್ತವಲ್ಲವೆಂಬುದು ಪ್ರಾಮಾಣಿಕವಾದ್ದರಿಂದ ಇವನು ಮೃತನು ಎಂಬುದಕ್ಕೆ ಬೇರೆ ಲಕ್ಷಣವನ್ನು ಹೇಳುತ್ತಾರೆ. ಅನ್ಯ ಎಂಬುದರಿಂದ ಶ್ರೀಹರಿಯ ಅತಿಶಯ ಮಾಹಾತ್ಮ್ಯೆಯು ಪ್ರಕಟವಾಯಿತೆಂದು ಸೂಚಿತವು. ॥೪೫॥

ಶ್ರೀಹರಿಯು ದೇಹದಲ್ಲಿದ್ದರೆ ಅವನಿಗಿಂತ ಬೇರೆಯವನೆಂದು ಜೀವನನ್ನು ಹೇಳುವದು ಯುಕ್ತ. ಅದೇ ಹೇಗೆ ಎಂದರೆ ಹೇಳುವರುঃ-

**ಭೂತೇಂದ್ರಿಯಮನೋಲಿಂಗಾನ್ ದೇಹಾನುಚ್ಚಾವಚಾನ್ ವಿಭುಃ ।**
**ಭಜತ್ಯುತ್ಸೃಜತಿ ಹ್ಯನ್ಯಸ್ತಚ್ಚಾಪಿ ಸ್ವೇನ ತೇಜಸಾ ॥೪೬॥**

**ಹಿ** ಯಾವ ಕಾರಣ **ವಿಭುಃ** ಸಮರ್ಥನಾದ ಶ್ರೀಹರಿಯು **ಭೂತೇಂದ್ರಿಯ ಮನೋಲಿಂಗಾನ್** ಪಂಚಮಹಾಭೂತಗಳು ಇಂದ್ರಿಯಗಳು ಮತ್ತು ಮನಸ್ಸೇ ಸ್ವರೂಪವಾಗಿರುವ **ಉಚ್ಚಾವಚಾನ್** ಸುರನರತಿರ್ಯಗ್ದೇಹಗಳೆಂದು ಉತ್ತಮ ಮಧ್ಯಮ ಅಧಮ **ದೇಹಾನ್** ಶರೀರಗಳನ್ನು **ಭಜತಿ** ಹೊಂದುವನೋ **ಉತ್ಸೃಜತಿ** ಅನಂತರ ಬಿಡುವನೋ **ತತ್** ಆ ಕಾರಣದಿಂದ ಅನ್ಯನೆಂದು ಹೇಳಿದ್ದು ಯುಕ್ತ **ಅನ್ಯಃ** ದೇಹಸಂಬಧವನ್ನು ಅದರ ವಿಯೋಗವನ್ನೂ ಹೊಂದುವ ಜೀವನಿಗಿಂತ ಭಿನ್ನನಾದ ಶ್ರೀಹರಿಯು **ತತ್ ಅಪಿ** ದೇಹವನ್ನು ಹೊಂದುವದು ಬಿಡುವದನ್ನು **ಸ್ವೇನ ತೇಜಸಾ** ತನ್ನ ಸಾಮರ್ಥ್ಯದಿಂದಲೇ **ಕರೋತಿ** ಮಾಡುವನು ಸ್ವತಂತ್ರನೆಂದರ್ಥ **ಚ** ಜೀವನಾದರೋ ಪರತಂತ್ರನಾಗಿ ದೇಹಾದಿಗಳನ್ನು ಹೊಂದುವನು ಬಿಡುವನು. ಇದರಿಂದ ದೇಹಯೋಗವಿಯೋಗ ಇಬ್ಬರಿಗೂ ಸಮಾನವಾಗಿದ್ದರೂ ಜೀವನಿಗೂ ಪರಮಾತ್ಮನಿಗೂ ಇರುವ ವಿಶೇಷವನ್ನು ತಿಳಿಸುವರು. **ಅಪಿ** ರೂಪಾಂತರದಿಂದ ಹೊಂದುವನು. ಇದರಿಂದ ಹೊಂದುವದು ಬಿಡುವದು ಪರಿಚ್ಛಿನ್ನರಿಗೆ ಸಾಧ್ಯ ವ್ಯಾಪ್ತನಾದ ವಿಷ್ಣುವಿಗೆ ಇವು ಹೇಗೆ ಸಾಧ್ಯ ಎಂಬ ಶಂಕೆಗೆ ತಾನಾಗಿಯೇ ತೆಗೆದುಕೊಂಡ ಪರಿಚ್ಛಿನ್ನವಾಗಿರುವಂತೆ ಕಾಣುವ (ಪರಿಚ್ಛಿನ್ನವಾಗಿರುವ) ರೂಪಾಂತರದಿಂದ ಎಂದು ಯುಕ್ತಿಯನ್ನು ಹೇಳಿದಂತಾಯಿತು. ಮುಖ್ಯಶ್ರೋತೃವು ಕಾಣುವದಿಲ್ಲವೆಂದು ಹಿಂದೆ ಹೇಳಿತ್ತು ಅವನು ಯಾರು ಎಂಬ ಶಂಕೆಗೂ ಈ ಶ್ಲೋಕದಿಂದ ಉತ್ತರ ಕೊಟ್ಟಿರುವರು. ಶ್ರೀಹರಿಯು ಜೀವನಿಯಾಮಕನಾಗಿರಲು ಶರೀರವನ್ನು ಹೊಂದುವನು. ಜೀವನನ್ನು ಬೇರೆ ದೇಹಕ್ಕೆ ಲೋಕಾಂತರಕ್ಕೆ ಕಳುಹಿಸಲು ಆ ಶರೀರವನ್ನು ಬಿಡುವನು. ಅವನೇ ಸ್ವತಂತ್ರನಾದ ಶ್ರೋತೃವು ವಕ್ತೃವೂ ಎಂದರ್ಥ. ಮತ್ತೊಬ್ಬನ ಅಧೀನನಾಗಿ ಜೀವನು ದೇಹಗಳನ್ನು ಹೊಂದುವಂತೆ ಬಿಡುವಂತೆ ಶ್ರೀಹರಿಯು ಮತ್ತೊಬ್ಬನ ಅಧೀನವಾಗಿ ಹೊಂದಿಬಿಡುವನೆ ಎಂಬ ಶಂಕೆಗೆ ತದಪಿ **ಸ್ವೇನ ತೇಜಸಾ ಚ** ಅದು ತನ್ನ ಸಾಮರ್ಥ್ಯದಿಂದ ಎಂದು ಉತ್ತರ.

ಇದನ್ನೇ ತಾತ್ಪರ್ಯಕಾರರು 'ನಾನ್ಯೋಽತೋಽಸ್ತಿ ಶ್ರೋತಾ ॥ ಸ ಯೋಽಶ್ರುತಃ' ಇತ್ಯಾದಿಪ್ರಮಾಣಗಳಿಂದ ಸಮರ್ಥಿಸುವರು.

ಇಲ್ಲಿ ಜೀವಪರಮಾತ್ಮರ ಭೇದವನ್ನು, ಅವರಿಬ್ಬರಿಗೂ ಜಡದೇಹದಿಂದ ಭೇದವನ್ನೂ, ಶ್ರೀಹರಿಯೇ ಮುಖ್ಯಶ್ರೋತೃ ಎಂಬುದನ್ನು, ಪ್ರಕರಣದ ಅವಾಂತರ ಭೇದವನ್ನು ತಿಳಿಸುವದಕ್ಕಾಗಿ ಶ್ರೀಮದಾಚಾರ್ಯರು ಸಿಂಹಾವಲೋಕನನ್ಯಾಯ-ದಿಂದ ಹಿಂದಿನ ಶ್ಲೋಕಗಳ ಹಾಗೂ ಈ ಶ್ಲೋಕದ ವ್ಯಾಖ್ಯಾನವನ್ನು ಮಾಡುವರು-

**... ತಾತ್ಪರ್ಯ ...**

**ಇಂದ್ರಿಯವಾನ್ ಜೀವಃ । ಭಜತಿ ಉತ್ಸೃಜತಿ ಹ್ಯನ್ಯಃ ಪರಮಾತ್ಮಾ । ಸ ಏವ ಶ್ರೋತಾ ಅನುವಕ್ತಾ ಚ ॥**

ಜೀವರಿಂದ ಭಿನ್ನನಾದ ಪರಮಾತ್ಮನು ತಾನು ಜೀವರಲ್ಲಿ ನಿಯಾಮಕನಾಗಿರಲು ಜೀವರ ದೇಹದಲ್ಲಿರುತ್ತಾನೆ. ಲೋಕಾಂತರಕ್ಕೆ ಜೀವರನ್ನು ಕಳುಹಿಸುವದಕ್ಕೆ ಬಿಡುತ್ತಾನೆ. ಅಂತಹ ಶ್ರೀಹರಿಯೇ ಮುಖ್ಯವಾಗಿ ಕೇಳುವವನು ಹೇಳುವವನು.

ಈ ವಿಷಯದಲ್ಲಿ ಹಿ ಶಬ್ದ ಸೂಚಿತ ಶ್ರುತಿ ಹೇಳುವರು.

**'ನಾನ್ಯೋऽತೋಽಸ್ತಿ ದ್ರಷ್ಟಾ' 'ನಾನ್ಯೋऽತೋಽಸ್ತಿ ಶ್ರೋತಾ' 'ಸ ಯೋऽತೋऽಶ್ರುತಃ' ॥ ಇತ್ಯಾದೇಃ ॥ ಮುಖ್ಯಪ್ರಾಣೋಽಪಿ ಸ್ವತೋ ನ ಶ್ರೋತಾ ಕಿಮು ಜೀವ ಇತಿ । ಅಯಂ ನನು ಸುಯಜ್ಞಃ ಇತ್ಯಾಕ್ಷೇಪಃ । ಯಶ್ಚ ಸುಯಜ್ಞಃ ಸೋऽಪಿ ಸ್ವತಃ ಶ್ರೋತುಂ ವಕ್ತುಂ ನ ಚ ಶಕ್ತಃ । ಅತಃ ತಸ್ಯ ಅನುಶೋಕೇನ ಕಿಮಿತ್ಯರ್ಥಃ ।**

**ಅನ್ಯೋ ಜೀವೋ ಚಿತೋ ದೇಹಾತ್ತದ್ವಶೋ ದೇಹ ಉಚ್ಯತೇ ।
ಪಶ್ಯಾಮೀತ್ಯಭಿಮಾನೋऽಸ್ಯ ಚಕ್ಷುರಾದ್ಯಭಿಮಾನವಾನ್ ॥**

**ನ ತದ್ವಶಶ್ಚಕ್ಷುರಾದ್ಯಾ ನ ದೃಷ್ಟ್ಯಾದೌ ಸ ಈಶ್ವರಃ ।
ಚಕ್ಷುರಾದ್ಯಾ ಮನೋ ಜೀವೋ ದೃಷ್ಟ್ಯಾದಿಶ್ಚಾಪಿ ಯದ್ವಶೇ ॥**

**ಸ ಪ್ರಾಣ ಇತಿ ವಿಜ್ಞೇಯೋ ಜ್ಞಾತಾ ಮಂತಾ ಚ ಸ ಪ್ರಭುಃ ।
ತಸ್ಯಾಪಿ ಜ್ಞಾತೃಮಂತೃತ್ವಂ ನ ಸ್ವತಃ ಶಕ್ಯತೇ ಕ್ವಚಿತ್ ॥**

**ಯಸ್ತಸ್ಯ ಜ್ಞಾತೃಮಂತೃತ್ವದಾತಾ ಸ ಭಗವಾನ್ ಹರಿಃ ।
ಸ್ವತೋ ಜ್ಞಾತಾ ಚ ಮಂತಾ ಚ ದ್ರಷ್ಟಾ ಶ್ರೋತಾ ಚ ಕೇಶವಃ ॥**

**ಜ್ಞಾನಾದಿದೋ ನ ತಸ್ಯಾನ್ಯಃ ಸರ್ವಸ್ಯ ಜ್ಞಾನದೋ ಹರಿಃ ।
ಸ ದೇಹಾನ್ ಭಜತೇ ವಿಷ್ಣುಃ ಸ್ವೇಚ್ಛಯೈವೋತ್ಸೃಜತ್ಯಪಿ ॥**

**ಯಾವದ್ದೇಹಸ್ಥಿತೋ ವಿಷ್ಣುಸ್ತಾವಜ್ಜೀವೋ ವಿಪರ್ಯಯಃ ।
ತಾವತ್ ಕ್ಲೇಶಾದಯಶ್ಚಾಸ್ಯ ವೃಥಾ ಚೇಂದ್ರಿಯವೃತ್ತಯಃ ॥**

**ಯದೋತ್ಸೃಜತಿ ದೇಹಂ ಸ ಹರಿಃ ಸರ್ವಾತ್ಮನಾ ವಿಭುಃ ।
ತದಾ ತದಭಿಮಾನೀ ತು ಜೀವೋ ಮುಚ್ಯೇತ ಸಂಸೃತೇಃ ॥**

**ಅತಿಭಿನ್ನಸ್ವರೂಪೌ ತೌ ಜೀವೇಶಾವೇಕದೇಹಗೌ ।**
**ದೇಹಾಭಿಮಾನೀ ತ್ವೇಕೋಽತ್ರ ನ ಮಾನೀ ಮಾನದಃ ಪರಃ ॥ ಇತಿ ಗಾರುಡೇ**

**ಇಂದ್ರಿಯಾದ್ಯಭಿಮಾನೇನ ತದ್ವಾನ್ ಜೀವ ಉದೀರ್ಯತೇ ।**
**ಅತಸ್ಮಾನಾದ್ಧರಿಪ್ರೋಕ್ತಸ್ತ್ವದೇಹೋಽನೀಂದ್ರಿಯಸ್ತಥಾ ॥**

**ಜೀವಾನಭಿಮತೇ ದೇಹೇ ನ ವಿಷ್ಣುರ್ಜೀವದಃ ಸ್ಥಿತಃ ।**
**ಅತಶ್ಚಾದೇಹ ಉದ್ದಿಷ್ಟಃ ಪರಮಾತ್ಮಾ ಸನಾತನಃ ॥ ಇತಿ ಪ್ರಕಾಶಸಂಹಿತಾಯಾಂ**

**ಸ ಚ ಅನ್ಯಃ ಶ್ರೋತುಃ ವಕ್ತುಶ್ಚೇತಿ ಚಶಬ್ದಃ । ಭೂತೇಂದ್ರಿಯಮನೋರೂಪಾನ್ ॥**
**ಲಿಂಗಂ ಸ್ವರೂಪಮುದ್ದಿಷ್ಟಂ ಲಿಂಗಂ ಜ್ಞಾಪಕಮೇವ ಚ ॥ ಇತಿ ಶಬ್ದನಿರ್ಣಯೇ ॥**

**ಆತ್ಮಾ ಪರಮಾತ್ಮಾ । ಕರ್ಮನಿಬಂಧನೋ ಜೀವಃ । ತತಃ ಪರಮಾತ್ಮಾ ವಿಪರೀತಃ । ಮೃಷಾ ವೃಥಾ । ಸ್ವಪ್ನದೃಷ್ಟವಿತ್ತಾದಿವತ್ ॥**

**ಲೇಪಾಭಿಮಾನೀ ಜೀವಸ್ತು ಸ್ವರೂಪಾನುಭವೀ ನ ಚ ।**
**ಮುಕ್ತೇಃ ಪ್ರಾಕ್ತೇನ ಮಾನ್ಯುಕ್ತೋ ನ ಮಾನೀ ವಿಷ್ಣುರುಚ್ಯತೇ ॥**

**ಸರ್ವಂ ಮಮೇತಿ ಪಶ್ಯನ್ನಪ್ಯಲೇಪಾಭಿಮತಿರ್ಯತಃ ।**
**ಸಮ್ಯಕ್ ಸ್ವರೂಪಾನುಭವಾತ್ ಸ್ವತಂತ್ರತ್ವಾದದೋಷತಃ ॥ ಇತಿ ಬ್ರಹ್ಮತರ್ಕೇ**

ಎರಡನೇ ವಾಕ್ಯದ ತಾತ್ಪರ್ಯದ ಭಾವಾರ್ಥ. ಪರಮಾತ್ಮನಿಗಿಂತ ಭಿನ್ನನಾದವನು ಮುಖ್ಯವಾಗಿ ಸ್ವತಂತ್ರವಾಗಿ ನೋಡುವವನಲ್ಲ ಕೇಳುವವನೂ ಅಲ್ಲ. ಶ್ರೀಹರಿಯೇ ವ್ಯಾಪ್ತನು ಸಾಕಲ್ಯೇನ ಕೇಳಲ್ಪಡದಿರುವನು ಇತ್ಯಾದಿಶ್ರುತಿಗಳಿಂದ ಮುಖ್ಯವಾಗಿ ಶ್ರೋತೃತ್ವಾದಿಗಳು ಪರಮಾತ್ಮನಿಗೆ ಮುಖ್ಯಪ್ರಾಣನಿಗೂ ಸ್ವತಂತ್ರವಾಗಿ ಕೇಳುವ ಶಕ್ತಿಯಿಲ್ಲ. ಜೀವನಿಗೆ ಇಲ್ಲವೆಂದು ಸುತರಾಂ ಸಿದ್ಧ.

'ಅಯಂ ನನು ಸುಯಜ್ಞಃ' ಬಿದ್ದಿರುವ ದೇಹವು ಸುಯಜ್ಞನೆಂಬ ಜೀವನೇನು (ಅಲ್ಲ) ಎಂದು ಆಕ್ಷೇಪವು. ಯಾವನು ಸುಯಜ್ಞನೋ ಅವನೂ ಕೂಡ ಸ್ವತಂತ್ರನಾಗಿ ಹೇಳಿಲಿಕ್ಕೂ ಕೇಳಲಿಕ್ಕೂ ಶಕ್ತನಲ್ಲ. ಆದ ಕಾರಣ ಅವನ ವಿಷಯದಲ್ಲಿ ದುಃಖಿಸಿ ಏನು ಪ್ರಯೋಜನವು. ಮುಖ್ಯಪ್ರಾಣನಿಂದಲೂ, ದೇಹದಿಂದಲೂ ಜೀವನು ಭಿನ್ನನು, ದೇಹವು ಮುಖ್ಯಪ್ರಾಣ,ಜೀವರ ಅಧೀನವು. ಇವರ ಸಂಬಂಧದಿಂದಲೇ ದೇಹಕ್ಕೆ ಚೇಷ್ಟೆಯು. ಕಣ್ಣಿನಿಂದ ನೋಡುತ್ತೇನೆ ಎಂದಭಿಮಾನವುಳ್ಳವನು ಜೀವನು. ಆದುದರಿಂದಲೇ ಚಕ್ಷುರಾದಿಗಳ ಅಭಿಮಾನವುಳ್ಳವನು. ಚಕ್ಷುಸ್ಸು ಮೊದಲಾದ ಇಂದ್ರಿಯಗಳೂ ಮುಖ್ಯವಾಗಿ ಜೀವರ ಅಧೀನಗಳಲ್ಲ.(ಏಕೆಂದರೆ ನೋಡಲಿಚ್ಛಿಸಿದರೂ ಜೀವರಿಗೆ ಕೆಲವು ಬಾರಿ ಜ್ಞಾನ ಹುಟ್ಟುವದಿಲ್ಲ) ನೋಡುವದರಲ್ಲಿ ಕೇಳುವದರಲ್ಲಿಯೂ ಸ್ವತಂತ್ರವಾಗಿ ಜೀವರಿಗೆ ಸಾಮರ್ಥ್ಯವಿಲ್ಲ. ಬಾಹ್ಯಕಾರಣ

ಚಕ್ಷುರಾದಿಇಂದ್ರಿಯಗಳೂ ಅಂತಃಕರಣವ್ಯಾಪಾರ ಜೀವ ಇವರೂ ಜೀವನಿಗೆ ಬರತಕ್ಕ ಜ್ಞಾನಾದಿಗಳು ಯಾರ ಅಧೀನವಾಗಿರುತ್ತವೆಯೋ ಆತನು ಮುಖ್ಯಪ್ರಾಣನೆಂದು ತಿಳಿಯಬೇಕು. ಆತನೇ ತಿಳಿಯುವವನು. ಮನನ ದರ್ಶನಶ್ರವಣಗಳನ್ನು ಮಾಡುವವನು. ಮುಖ್ಯಪ್ರಾಣನಿಗೂ ಎಲ್ಲಿಯು ಸ್ವತಂತ್ರವಾಗಿ ತಿಳಿಯುವ ಶಕ್ತಿಯೂ ಮನನಮಾಡುವ ಶಕ್ತಿಯೂ ಇಲ್ಲ. ಆತನಿಗೆ ಅಂತಹ ಶಕ್ತಿಯನ್ನು ಕೊಡುವವನು ಶ್ರೀಹರಿಯು. ಆತನಿಗೆ ಸ್ವತಂತ್ರವಾಗಿ ತಿಳಿಯುವ ಶಕ್ತಿ ಮನನ ದರ್ಶನ ಶ್ರವಣ ಶಕ್ತಿಗಳಿವೆ. ಅವನಿಗೆ ಜ್ಞಾನಾದಿಗಳನ್ನು ಕೊಡುವವನು ಇನ್ನೊಬ್ಬನಿಲ್ಲ. ಸರ್ವರಿಗೂ ಶ್ರೀಹರಿಯೇ ಜ್ಞಾನಾದಿಗಳನ್ನು ಕೊಡುವವನು. ಆ ಶ್ರೀಹರಿಯೇ ತನ್ನ ಇಚ್ಛೆಯಿಂದಲೇ ಸುರನರ ಮೊದಲಾದ ದೇಹಗಳಲ್ಲಿ ನಿಯಾಮಕನಾಗಿರುತ್ತಾನೆ. ತನ್ನ ಇಚ್ಛೆಯಿಂದಲೇ ಜೀವನ ಲಿಂಗದೇಹ ಸ್ಥೂಲದೇಹಗಳಲ್ಲಿ ನಿಯಾಮಕನಾಗಿರುತ್ತಾನೆ ಬಿಡುತ್ತಾನೆ. ತನ್ನ ಇಚ್ಛೆಯಿಂದಲೇ ಜೀವನು ಲಿಂಗದೇಹಸ್ಥೂಲ ದೇಹಗಳಿರುವ ಪರ್ಯಂತ ವಿಪರೀತ ಬುದ್ಧಿಯುಳ್ಳವನಾಗಿರುತ್ತಾನೆ. ಜೀವರಿಗೆ ಅಷ್ಟರ ವರೆಗೆ ಕ್ಲೇಶಾದಿಗಳು ಇರುತ್ತವೆ. ಸಂಸಾರಕಾರಣಗಳಾದ ಇಂದ್ರಿಯವ್ಯಾಪಾರಗಳು ಇರುತ್ತವೆ. ಆ ಶ್ರೀಹರಿಯು ಲಿಂಗದೇಹಸ್ಥೂಲದೇಹಗಳನ್ನು ಯಾವಾಗ ಬಿಡುತ್ತಾನೋ ಆಗ ದೇಹಾಭಿಮಾನಿ- ಯಾದ ಜೀವನು ಸಂಸಾರದಿಂದ ಮುಕ್ತನಾಗುತ್ತಾನೆ. ಆದ ಕಾರಣ ಒಂದೇ ದೇಹದಲ್ಲಿರತಕ್ಕ ಜೀವಪರಮಾತ್ಮರು ಸ್ವಾತಂತ್ರ್ಯ-ಅಸ್ವಾತಂತ್ರ್ಯ ಮೊದಲಾದ ವಿಲಕ್ಷಣಧರ್ಮವುಳ್ಳವರು. ಜೀವನು ದೇಹಾಭಿಮಾನವುಳ್ಳವನು ಜೀವನಿಗೆ ದೇಹಾಭಿಮಾನವನ್ನು ಕೊಡತಕ್ಕ ಪರಮಾತ್ಮನು ದೇಹಾಭಿಮಾನವುಳ್ಳವನಲ್ಲ. ಎಂದು ಗಾರುಡದಲ್ಲಿದೆ.

ಜೀವನು ಇಂದ್ರಿಯಾದ್ಯಭಿಮಾನವುಳ್ಳವನಾದುದರಿಂದ ಇಂದ್ರಿಯವುಳ್ಳವನೂ ದೇಹವುಳ್ಳವನೂ ಎನಿಸುತ್ತಾನೆ. ಇಂದ್ರಿಯಾಭಿಮಾನದೇಹಾಭಿಮಾನಗಳಿಲ್ಲ-ದಿರುವದರಿಂದ ಶ್ರೀಹರಿಯು ಅದೇಹನೆಂದೂ, ಅನಿಂದ್ರಿಯನೆಂದೂ ಎನಿಸಿಕೊಳ್ಳುತ್ತಾನೆ. ಜೀವಾಭಿಮಾನರಹಿತವಾದ ಮೃತದೇಹದಲ್ಲಿ ಶ್ರೀವಿಷ್ಣುವು ಇರುವದಿಲ್ಲ. ಜೀವಾಭಿಮಾನಕ್ಕೆ ವಿಷಯವಾದ ಜೀವರ ಶರೀರದಲ್ಲಿ ಪರಮಾತ್ಮನು ನಿಯಾಮಕನಾಗಿರುತ್ತಾನೆ. ಜೀವರಿಗೆ ಅನಭಿಮತ ದೇಹದಲ್ಲಿ ಶ್ರೀಪರಮಾತ್ಮನು ಇಲ್ಲದಿರುವದರಿಂದಲೂ ಅದೇಹನೆನಿಸುತ್ತಾನೆ ಎಂದು ಪ್ರಕಾಶಸಂಹಿತೆಯಲ್ಲಿದೆ.

ಜೀವನು ಮುಖ್ಯಪ್ರಾಣದೇಹಗಳಿಂದ ಮಾತ್ರ ಭಿನ್ನನೆಂದಲ್ಲ ಮತ್ತೆ ಸ್ವತಂತ್ರವಾಗಿ ಶ್ರೋತೃವು ವಕ್ತೃವೂ ಆದ ಶ್ರೀಪರಮಾತ್ಮನಿಂದಲೂ ಭಿನ್ನನು. ಇದಕ್ಕಾಗಿ ಚಶಬ್ದವು. ಭೂತೇಂದ್ರಿಯಮನಸ್ಸುಗಳು ವಿಕಾರಗಳಾದ ಸುರನರತಿರ್ಯಗಾದಿದೇಹಗಳನ್ನು

ಎಂದರ್ಥವು. ಲಿಂಗವೆಂದರೆ ಸ್ವರೂಪ ಮತ್ತು ಜ್ಞಾಪಕವು ಎಂದು ಶಬ್ದನಿರ್ಣಯದಲ್ಲಿದೆ. ಇಲ್ಲಿ ಲಿಂಗವೆಂದರೆ ಸ್ವರೂಪವು ಜ್ಞಾಪಕವೆಂದಲ್ಲ ।।೪೬।।

ಎಷ್ಟು ಕಾಲ ಈ ರೀತಿ ಭಗವದಧೀನನಾದ ಜೀವ ಸಂಸಾರದಲ್ಲಿರುವನು ಎಂದರೆ ಹೇಳುವರು-

**ಯಾವಲ್ಲಿಂಗಾನ್ವಿತೋ ಹ್ಯಾತ್ಮಾ ತಾವತ್ ಕರ್ಮನಿಬಂಧನಃ ।**
**ತತೋ ವಿಪರ್ಯಯಃ ಕ್ಲೇಶೋ ಮಾಯಾಯೋಗೋಽನುವರ್ತತೇ ।।**

**ಆತ್ಮಾ** ಪರಮಾತ್ಮನು **ಯಾವತ್** ಎಲ್ಲಿಯವರೆಗೆ **ಲಿಂಗಾನ್ವಿತಃ** ಲಿಂಗಶರೀರ ಅನ್ನಮಯ ಪ್ರಾಣಮಯ ಮನೋಮಯ ಜಡದೇಹಗಳನ್ನು ಹೊಂದಿರುವನೋ ಪ್ರವೇಶಿಸುತ್ತಿರುವನೋ **ತಾವತ್** ಅಲ್ಲಿಯ ವರೆಗೆ **ಕರ್ಮನಿಬಂಧನಃ** ಕರ್ಮಗಳಿಂದ ಅತ್ಯಂತ ಬಂಧನವುಳ್ಳ ಜೀವನು **ಲಿಂಗಾನ್ವಿತಃ** ಜಡದೇಹದಲ್ಲಿರುವನು **ಹಿ** ಯಾವಾಗ ಶ್ರೀಹರಿಯು ಇವುಗಳನ್ನು ಬಿಡುವನೋ ಆಗ ತಾನೂ ಅವುಗಳನ್ನು ಬಿಡುವನು. ಇದರಲ್ಲಿ ಒಂದು ವಿಶೇಷ. ಯಾವಾಗ ಪರಮಾತ್ಮನು ಈ ದೇಹಗಳನ್ನು ಪ್ರವೇಶಿಸುವದನ್ನು ಸಂಪೂರ್ಣವಾಗಿ ಬಿಡುವನೋ ಆಗ ಜೀವನೂ ಕೂಡ ಜಡದೇಹಗಳನ್ನು ಸರ್ವರೀತಿಯಾಗಿ ಹೊಂದದೆ ಇರುವವನಾಗಿ ಅವನ ಅನುಗ್ರಹದಿಂದ ಸಂಸಾರದಿಂದ ಮುಕ್ತನಾಗುತ್ತಾನೆ **ತತಃ** ಆ ಶ್ರೀಹರಿಯಿಂದಲೇ **ವಿಪರ್ಯಯಃ** ತನ್ನ ಸ್ವರೂಪಕ್ಕಿಂತ ವಿರುದ್ಧಸ್ವಭಾವದವನಾಗುವನು. **ಕ್ಲೇಶಃ** ಅನೇಕ ಬಗೆಯ ಕಷ್ಟಗಳು **ಮಾಯಾಯೋಗಃ** ಅವಿದ್ಯಾಸಂಬಂಧವು ಅದರಿಂದ ಜಡದೇಹ, ನನ್ನದೆಂಬ ಅಭಿಮಾನವು **ಅನುವರ್ತತೇ** ಅನುಸರಿಸಿಕೊಂಡು ಬರುವದು. ।।೪೭।।

ಪರಾಧೀನನಾದರೂ ಸುಯಜ್ಞನಿಂದ ನಮಗೆ ಶಬ್ದಾದಿವಿಷಯ ಪ್ರಾಪ್ತಿರೂಪ ಪ್ರಯೋಜನವಿತ್ತು. ಅದು ಈಗ ಹೋಯಿತು. ಆದ್ದರಿಂದ ದುಃಖಿಸುವೆವು ಎಂದರೆ ಹೇಳುವರು-

**ವಿತಥಾಭಿನಿವೇಶೋಽಯಂ ಯದ್ಗುಣೇಷ್ವರ್ಥದೃಗ್ವಚಃ ।**
**ಯಥಾ ಮನೋರಥಃ ಸ್ವಪ್ನಃ ಸರ್ವಮೈಂದ್ರಿಯಕಂ ಮೃಷಾ ।।೪೮।।**

**ಗುಣೇಷು** ಗುಣಕಾರ್ಯಗಳಾದ ಶಬ್ದಮೊದಲಾದವುಗಳಲ್ಲಿ **ಅರ್ಥದೃಗ್ವಚಃ** 'ಸ್ವರ್ಗೇ ಲೋಕೇ ನ ಭಯಂ ಕಿಂಚನಾಸ್ತಿ' ಎಂದು ಹೇಳುವ ಮಾತು **ಯತ್** ಏನಿದೆಯೋ **ಅಯಂ** ಇದು **ವಿತಥಾಭಿನಿವೇಶಃ** ಭ್ರಾಂತಿಯು **ಮನೋರಥಃ** ಮನಸ್ಸಿನಲ್ಲಿ ಕಲ್ಪಿತವಾದ ರಾಜ್ಯವು **ಸ್ವಪ್ನಃ** ಕನಸಿನಲ್ಲಿ ಕಂಡ ರತ್ನಮೊದಲಾದವು **ಯಥಾ ಮೃಷಾ** ಹೇಗೆ ವ್ಯರ್ಥವೋ **ತಥಾ** ಹಾಗೆ **ಐಂದ್ರಿಯಕಂ ಸರ್ವಂ** ಇಂದ್ರಿಯವ್ಯಾಪಾರಗಳೆಲ್ಲವೂ **ಮೃಷಾ** ವ್ಯರ್ಥ. ಮುಖ್ಯಪುರುಷಾರ್ಥಗಳಲ್ಲವೆಂದು ಅಭಿಪ್ರಾಯ.

ಅಥವಾ ಗುಣಕಾರ್ಯಗಳಾದ ಸ್ವರ್ಗಮೊದಲಾದವುಗಳಲ್ಲಿ ಪುರುಷಾರ್ಥಜ್ಞಾನವು, ಅಯಥಾರ್ಥಾಭಿಮಾನವು, ವಸ್ತುತಃ ಅವು ಪರಮಪುರುಷಾರ್ಥಗಳಲ್ಲ **ವಚಃ ಅಪಿ** ಅದನ್ನು ತಿಳಿಸುವ ಶ್ರುತಿಗಳು **ವಿತಥಾ** ಪ್ರತೀತಾರ್ಥಕ್ಕೆ ವಿರುದ್ಧವಾದ ಅರ್ಥವುಳ್ಳವುಗಳು. ಅಲ್ಲಿನ ಸ್ವರ್ಗಪದಕ್ಕೆ ಮೋಕ್ಷವೆಂದೇ ಅರ್ಥ. **ಮನೋರಥೇ** ವಾಸನಾಮಯವಾದ ಸ್ವಪ್ನದಲ್ಲಿ **ಐಂದ್ರಿಯಕಂ** ಇಂದ್ರಿಯಗಳಿಗೆ ಗೋಚರವಾಗುವ ಧನಮೊದಲಾದವು **ಯಥಾ ಮೃಷಾ** ವ್ಯರ್ಥಗಳಾಗಿ ಈ ಹಣವು ನನ್ನ ಮಕ್ಕಳಿಗೆ ಕೆಲಸಕ್ಕೆ ಬರುವದೆಂಬುದು ಹೇಗೆ ಭ್ರಾಂತಿಯೋ ಹಾಗೆ ಸ್ವರ್ಗಮೊದಲಾದವು ಶಾಶ್ವತಪುರುಷಾರ್ಥಗಳೆಂಬುದು ಭ್ರಾಂತಿ ಎಂದರ್ಥ.

ವಾಸನಾಮಯಗಳಾದ ಮನೋರಥಸ್ವಪ್ನಪದಾರ್ಥಗಳು ಸತ್ಯ. ತದ್ವಿಷಯಕ ಬಾಹ್ಯಾರ್ಥಕ್ರಿಯಾಕಾರಿಗಳೆಂಬ, ಜಾಗ್ರದ್ದೃಷ್ಟಪದಾರ್ಥಗಳೆಂಬ ಜ್ಞಾನವು ಭ್ರಮವೆಂಬುದು ಸಿದ್ಧಾಂತ. ।।೪೮।।

ಉಪಸಂಹಾರ ಮಾಡುವರು-

**ಅಥ ನಿತ್ಯಮನಿತ್ಯಂ ವಾ ನೇಹ ಶೋಚಂತಿ ತದ್ವಿದಃ ।**
**ನಾನ್ಯಥಾ ಶಕ್ಯತೇ ಕರ್ತುಂ ಸ್ವಭಾವಃ ಶೋಚತಾಮಿತಿ** ।।೪೯।।

**ಸ್ವಭಾವಃ** ಪದಾರ್ಥಗಳ ನಿತ್ಯತ್ವ ಅನಿತ್ಯತ್ವಸ್ವಭಾವವು **ಶೋಚತಾಂ** ದುಃಖ ಪಡುವವರಿಂದ **ಅನ್ಯಥಾ ಕರ್ತುಂ** ಬದಲಾಯಿಸಲು(ಬೇರೆಮಾಡಲು)**ನ ಶಕ್ಯತೇ** ಸಾಧ್ಯವಿಲ್ಲ **ಇತಿ** ಎಂದು ತಿಳಿದು **ಅಥ** ಈ ಕಾರಣದಿಂದ **ತದ್ವಿದಃ** ಅದನ್ನು ತಿಳಿದವರು ಅಥವಾ ಎಲ್ಲವೂ ಶ್ರೀಹರಿಯ ಅಧೀನವೆಂದೂ ತಿಳಿದವರು **ಇಹ** ಈ ಲೋಕದಲ್ಲಿ **ನಿತ್ಯಂ ಅನಿತ್ಯಂ ವಾ** ನಿತ್ಯವನ್ನಾಗಲಿ ಅನಿತ್ಯವನ್ನಾಗಲಿ ಅಥವಾ ನಿತ್ಯದಂತೆ ಅನಿತ್ಯದೇಹಾದಿಗಳನ್ನು ಉದ್ದೇಶಿಸಿ **ನ ಶೋಚಂತಿ** ದುಃಖಪಡುವದಿಲ್ಲ ಆದ್ದರಿಂದ ಶೋಕಪಡುವದು ಮೂರ್ಖತನವೆಂದು ತಿಳಿಯಬೇಕು. ।।೪೯।।

ಬಾಲರೂಪಿ ಯಮದೇವರು ಹೀಗೆ ತತ್ವವನ್ನು ಹೇಳಿ ವೈರಾಗ್ಯ ಬರುವಂತೆ ಈ ವಿಷಯದಲ್ಲಿ ಒಂದು ಕಥೆಯನ್ನು ಹೇಳುತ್ತಾರೆ-

**ಲುಬ್ಧಕೋ ವಿಪಿನೇ ಕಶ್ಚಿತ್ ಪಕ್ಷಿಣಾಂ ನಿರ್ಮಿತೋಽಂತಕಃ ।**
**ವಿತತ್ಯ ಜಾಲಂ ವಿದಧೇ ತತ್ರ ತತ್ರ ಪ್ರಲೋಭನಮ್** ।।೫೦।।

**ವಿಧಿನಾ** ಬ್ರಹ್ಮದೇವರಿಂದ **ಪಕ್ಷಿಣಾಂ** ಹಕ್ಕಿಗಳ **ಅಂತಕಃ** ಮೃತ್ಯುವಾಗಿ **ನಿರ್ಮಿತಃ** ಸೃಷ್ಟಿಸಲ್ಪಟ್ಟ **ಕಶ್ಚಿತ್** ಒಬ್ಬ **ಲುಬ್ಧಕಃ** ಬೇಟೆಗಾರನು **ವಿಪಿನೇ** ಅಡವಿಯಲ್ಲಿ **ಜಾಲಂ** ಬಲೆಯನ್ನು **ವಿತತ್ಯ** ಹರಡಿ **ತತ್ರ ತತ್ರ** ಅಲ್ಲಲ್ಲಿ **ಪ್ರಲೋಭನಂ** ಹಕ್ಕಿಗಳನ್ನು ಆಕರ್ಷಿಸುವ ಕಾಳು ಮೊದಲಾದವನ್ನು ಚೆಲ್ಲುವದೆಂಬ ವಂಚನೆಯನ್ನು **ವಿದಧೇ** ಮಾಡಿದನು ।।೫೦।।

**ಕುಲಿಂಗಮಿಥುನಂ ತತ್ರ ವಿಚರನ್ ಸಮದೃಶ್ಯತ ।**
**ತಯೋಃ ಕುಲಿಂಗೀ ಸಹಸಾ ಲುಬ್ಧಕೇನ ಪ್ರಲೋಭಿತಾ ॥೫೧॥**

**ಸಾಽಸಜ್ಜತ ಸಿಚಾ ತಂತ್ರ್ಯಾ ಮಹಿಷೀ ಕಾಲಯಂತ್ರಿತಾ ।**
**ಕುಲಿಂಗಸ್ತಾಂ ತಥಾಽಽಪನ್ನಾಂ ನಿರೀಕ್ಷ್ಯ ಭೃಶದುಃಖಿತಃ ॥೫೨॥**

**ಕುಲಿಂಗಮಿಥುನಂ** ಮರಕುಟಕ ಹಕ್ಕಿಗಳ ಗಂಡುಹೆಣ್ಣು ಜೋಡಿಯೊಂದು ('ದಾರ್ವಾಘಟೋ ದಾರುಕುಟ್ಟಃ ಕುಲಿಂಗೋ ದೀರ್ಘತುಂಡಕಃ' ಎಂದು ಅಭಿಧಾನವಿದೆ.) **ತತ್ರ** ಅಲ್ಲಿ **ವಿಚರನ್** ಹಾರಾಡುತ್ತ **ಸಮದೃಶ್ಯತ** ಆ ವಂಚನೆಯನ್ನು ನೋಡಿತು **ತಯೋಃ** ಅವುಗಳಲ್ಲಿ **ಕುಲಿಂಗೀ** ಹೆಣ್ಣು ಹಕ್ಕಿಯು **ಸಹಸಾ** ವಿಚಾರ ಮಾಡದೇ **ಲುಬ್ಧಕೇನ** ಬೇಡರವನಿಂದ **ಪ್ರಲೋಭಿತಾ** ವಂಚಿತವಾಯಿತು. ॥೫೧॥

**ಸಾ ಮಹಿಷೀ** ಆ ಪಕ್ಷಿಯ ಹೆಂಡತಿಯು **ಕಾಲಯಂತ್ರಿತಾ** ಮೃತ್ಯುವಶವಾಗಿ **ಸಿಚಾ ತಂತ್ರ್ಯಾ** ಬಲಿಯ ದಾರದಲ್ಲಿ **ಅಸಜ್ಜತ** ಸಿಕ್ಕಿಕೊಂಡಿತು **ಕುಲಿಂಗಃ** ಗಂಡು ಹಕ್ಕಿಯು **ತಥಾ ಆಪನ್ನಾಂ** ಹಾಗೆ ಮೃತ್ಯುಪಾಲಾದ **ತಾಂ** ಹೆಂಡತಿಯನ್ನು **ನಿರೀಕ್ಷ್ಯ** ನೋಡಿ **ಭೃಶದುಃಖಿತಃ** ಬಹಳ ದುಃಖವುಳ್ಳದ್ದಾಯಿತು. ॥೫೨॥

**ಸ್ನೇಹಾದಕಲ್ಪಃ ಕೃಪಣಾಂ ಪರ್ಯದೇವಯದಾತುರಃ ।**
**ಅಹೋ ಅಕರುಣೋ ದೇವಃ ಸ್ತ್ರಿಯಾ ಕೃಪಣಯಾ ವಿಭುಃ ॥೫೩॥**

**ಅಕಲ್ಪಃ** ಆ ಹೆಣ್ಣು ಹಕ್ಕಿಯನ್ನು ಬಲೆಯಿಂದ ಬಿಡಸಲು ಅಸಮರ್ಥವಾದ ಆದ್ದರಿಂದಲೇ **ಆತುರಃ** ದುಃಖಿಯಾದ ಗಂಡು ಹಕ್ಕಿಯು **ಸ್ನೇಹಾತ್** ಹೆಣ್ಣು ಹಕ್ಕಿಯ ಮೇಲಿನ ಪ್ರೀತಿಯಿಂದ **ಕೃಪಣಾಂ** ಕಷ್ಟಕ್ಕೀಡಾದ ಅದನ್ನು ಕುರಿತು **ಪರ್ಯದೇವಯತ್** ವಿಲಾಪಿಸಿತು.(ಗೋಳಾಡಿತು)ವಿಲಾಪರೀತಿಯನ್ನು ಹೇಳುತ್ತಾರೆ. **ಅಕರುಣಃ** ದಯಾರಹಿತನಾದ **ವಿಭುಃ** ತನಗೆ ಪ್ರಯೋಜನವಿಲ್ಲದಿದ್ದರೂ ಮತ್ತೊಬ್ಬರನ್ನು ಹಿಂಸಿಸುವಲ್ಲಿ ಸಮರ್ಥನಾದ **ದೇವಃ** ವಿಧಿಯು(ಮೃತ್ಯುವು) **ಕೃಪಣಂ** ಹೆಂಡತಿಯನ್ನು ಕಳೆದುಕೊಂಡು ಕಷ್ಟಕ್ಕೆ ಒಳಗಾದ **ಮಾ** ನನ್ನನ್ನು ಕುರಿತು **ಅನುಶೋಚಂತ್ಯಾ** ದುಃಖಿಸುತ್ತಿರುವ ಆದರೆ **ಕೃಪಣಯಾ** ತಾನೇ ಕಷ್ಟಕ್ಕೆ ಗುರಿಯಾಗಿರುವ **ದೀನಯಾ** ತನ್ನ ಕಷ್ಟವನ್ನು ಪರಿಹರಿಸಿಕೊಳ್ಳಲು ಅಸಮರ್ಥವಾದ **ಸ್ತ್ರಿಯಾ** ಹೆಣ್ಣು ಹಕ್ಕಿಯಿಂದ **ಕಿಂ ಕರಿಷ್ಯತಿ** ಏನು ಮಾಡುವನು ? ॥೫೩॥

**ಕೃಪಣಂ ಮಾಽನುಶೋಚಂತ್ಯಾ ದೀನಯಾ ಕಿಂ ಕರಿಷ್ಯತಿ ।**
**ಕಾಮಂ ನಯತು ಮಾಂ ದೇವಃ ಕಿಮರ್ಧೇನಾತ್ಮನೋ ಹಿ ಮೇ**
**ದೀನೇನ ಜೀವತಾ ದುಃಖಂ ಮಂದೇನ ವಿಧುರಾಯುಷಾ ॥೫೪॥**

**ದೇವಃ** ವಿಧಿಯು (ಮೃತ್ಯುವು) **ಕಾಮಂ** ಯಥೇಚ್ಛವಾಗಿ **ಮಾಂ** ನನ್ನನ್ನು **ನಯತು** ತೆಗೆದುಕೊಂಡು ಹೋಗಲಿ. ನಾನು ಸಾಯಬಾರದೇಕೆ ಎಂದಭಿಪ್ರಾಯ. **ಹಿ** ಏಕೆಂದರೆ **ದುಃಖಂ ಜೀವತಾ** ದುಃಖವಾಗುವಂತೆ ಜೀವಿಸುವ **ದೀನೇನ** ಕ್ಷೀಣನಾದ **ಮಂದೇನ** ಭಾಗ್ಯವಿಲ್ಲದ **ವಿಧುರಾಯುಷಾ** ಆಯುಷ್ಯವಿಲ್ಲದ (ಹೆಂಡತಿಯಿಲ್ಲದೇ ಆಯುಷ್ಯವಿರುವ) **ಮೇ** ನನ್ನ **ಆತ್ಮನಃ** ದೇಹದ **ಅರ್ಧೇನ** ಅರ್ಧದಿಂದ (ಅರ್ಧದೇಹವಾದ ಹೆಂಡತಿಯು ಹೋದದ್ದರಿಂದ ಅರ್ಧವಾಗಿ ಉಳಿದಿರುವ) **ಕಿಂ** ಏನು ಪ್ರಯೋಜನ ? ಏನೂ ಇಲ್ಲ. ಆದ್ದರಿಂದ ಸಾಯುವದೇ ಮೇಲು ಎಂದು ಭಾವ. ||೫೪||

**ಕಥಂ ತ್ವಜಾತಪಕ್ಷಾಂಸ್ತಾನ್ ಮಾತೃಹೀನಾನ್ ಬಿಭರ್ಮ್ಯಹಮ್ ।**
**ಮಂದಭಾಗ್ಯಾ ಪ್ರತೀಕ್ಷ್ಯಂತೇ ನೀಡೇ ಮೇ ಮಾತರಂ ಪ್ರಜಾಃ ||೫೫||**

**ಮಂದಭಾಗ್ಯಾ** ದುರದೃಷ್ಟಶಾಲಿಗಳಾದ **ಮೇ ಪ್ರಜಾಃ** ನನ್ನ ಮರಿಗಳು **ನೀಡೇ** ಗೂಡಿನಲ್ಲಿದ್ದುಕೊಂಡು **ಮಾತರಂ** ತಾಯಿಯನ್ನು **ಪ್ರತೀಕ್ಷ್ಯಂತೇ** ಎದುರು ನೋಡುತ್ತಿರುತ್ತವೆ **ಅಹಂ ತು** ನಾನಾದರೂ **ಅಜಾತಪಕ್ಷಾನ್** ರೆಕ್ಕೆ ಬರದಿರುವ **ಮಾತೃಹೀನಾನ್** ತಾಯಿಯಿಲ್ಲದ ತಬ್ಬಲಿಗಳಾದ **ತಾನ್** ಆ ಮರಿಗಳನ್ನು **ಕಥಂ ಬಿಭರ್ಮಿ** ಹೇಗೆ ಸಾಕಲಿ. ||೫೫||

**ಏವಂ ಕುಲಿಂಗಂ ವಿರುವಂತಮಾರಾತ್**
**ಪ್ರಿಯಾ ವಿಯೋಗಾತುರಮಶ್ರುಕಂಠಮ್ ।**
**ತದೈವ ತಂ ಶಾಕುನಿಕಃ ಶರೇಣ**
**ವಿವ್ಯಾಧಕಾಲಪ್ರಹಿತೋ ನಿಲೀನಃ ||೫೬||**

**ಕಾಲಪ್ರಹಿತಃ** ಮೃತ್ಯುವಿನಿಂದ ಪ್ರೇರಿತನಾದ **ಶಾಕುನಿಕಃ** ಆ ಪಕ್ಷಿಹಂತಕನು (ಬೇಡನು) **ನಿಲೀನಃ ಸನ್** ಅಡಗಿಕೊಂಡು **ತದಾ ಏವ** ಗಂಡು ಹಕ್ಕಿಯು ಗೋಳಾಡುವಾಗಲೇ **ಏವಂ** ಹೇಳಿದ ರೀತಿಯಲ್ಲಿ **ವಿರುವಂತಂ** ವಿಲಪಿಸುತ್ತಿದ್ದ **ಪ್ರಿಯಾವಿಯೋಗಾತುರಂ** ಹೆಂಡತಿಯ ಅಗಲಿಕೆಯಿಂದ ನೊಂದ **ಅಶ್ರುಕಂಠಂ** ಕಣ್ಣೀರು ಸುರಿಸುತ್ತ ಗದ್ಗದಕಂಠಯುಕ್ತವಾದ **ತಂ ಕುಲಿಂಗಂ** ಗಂಡು ಮರಕುಟಕ ಹಕ್ಕಿಯನ್ನು **ಆರಾತ್** ಸಮೀಪದಿಂದ **ಶರೇಣ** ಬಾಣದಿಂದ **ವಿವ್ಯಾಧ** ಗುರಿಯಿಟ್ಟು ಹೊಡೆದನು.

**ಏವಂ ಯೂಯಮಪಶ್ಯಂತ್ಯ ಆತ್ಮಾಪಾಯಮಬುದ್ಧಯಃ ।**
**ನೈನಂ ಪ್ರಾಪ್ಸ್ಯಥ ಶೋಚಂತ್ಯಃ ಪತಿಂ ವರ್ಷಶತೈರಪಿ ||೫೭||**

**ಏವಂ** ಆ ಹಕ್ಕಿಯಂತೆ **ಆತ್ಮಾಪಾಯಂ** ತಮ್ಮ(ನಿಮ್ಮ)ನಾಶವನ್ನು (ದೇಹನಾಶವನ್ನು) **ಅಪಶ್ಯಂತ್ಯಃ** ತಿಳಿಯದಿರುವ **ಅಬುದ್ಧಯಃ** ಮೂರ್ಖರಾದ **ಪತಿಂ** ಗಂಡನಾದ ಸುಯಜ್ಞನನ್ನು ಕುರಿತು **ಶೋಚಂತ್ಯಃ** ದುಃಖಿಸುತ್ತಿರುವ **ಯೂಯಂ** ನೀವು **ವರ್ಷಶತೈಃ ಅಪಿ** ನೂರು ವರ್ಷಗಳಾದರೂ **ಏನಂ** ಸುಯಜ್ಞನನ್ನು **ನ ಪ್ರಾಪ್ಸ್ಯಥ** ಹೊಂದಲಾರಿರಿ.

**ಹಿರಣ್ಯಕಶಿಪುರುವಾಚ**

**ಬಾಲ ಏವಂ ಪ್ರವದತಿ ಸರ್ವೇ ವಿಸ್ಮಿತಚೇತಸಃ ।**
**ಜ್ಞಾತಯೋ ಮೇನಿರೇ ಸರ್ವಮನಿತ್ಯಮಯಥೋತ್ಥಿತಮ್ ॥೫೮॥**

**ಬಾಲೇ** ಬಾಲಕನು **ಏವಂ** ಮೇಲೆ ಹೇಳಿದಂತೆ **ಪ್ರವದತಿ ಸತಿ** ತತ್ವವನ್ನು ಹೇಳುತ್ತಿರಲು **ವಿಸ್ಮಿತಚೇತಸಃ** ಆಶ್ಚರ್ಯಚಕಿತರಾದ(ಹಿರಿಯರಿಗೆ ತಿಳಿಯದ್ದನ್ನು ಹುಡುಗ ಹೇಳುವನಲ್ಲ ಎಂದು) **ಸರ್ವೇ ಜ್ಞಾತಯಃ** ಸುಯಜ್ಞನ ಎಲ್ಲ ಬಂಧುಗಳು **ಸರ್ವಂ** ನಮ್ಮದೆಂದು ತಿಳಿದ ದೇಹಗೇಹಾದಿಗಳೆಲ್ಲವನ್ನೂ **ಅನಿತ್ಯಂ** ಅನಿತ್ಯವೆಂದು **ಸರ್ವಂ** ಅದರಲ್ಲಿ ವಿಶೇಷವಾದ ಸತ್ವದೇಹಾತ್ಮತ್ವಮೊದಲಾದವೆಲ್ಲವನ್ನೂ **ಅಯಥೋತ್ಥಿತಂ** ಸ್ವಪ್ನಜಾಗ್ರತ್ವದಂತೆ ಭ್ರಾಂತಿಯೆಂದೂ, ಅಸತ್ಯವೆಂದೂ **ಮೇನಿರೇ** ತಿಳಿದರು.

ಇಲ್ಲಿ 'ಸರ್ವಂ ಅಯಥೋತ್ಥಿತಂ' ಎಂದುದರಿಂದ ಈಶ್ವರಮಹತ್ತತ್ವಾದಿಗಳು ಚಿತ್ಪ್ರಕೃತಿಪರಮಾತ್ಮನೂ ಅನಿತ್ಯ,ಭ್ರಾಂತಿಕಲ್ಪಿತ ಎಂದರ್ಥ ತೋರುವದು ಕಾರಣ ಪ್ರಮಾಣದಿಂದ ವ್ಯಾಖ್ಯಾನಿಸುವರು-

**... ತಾತ್ಪರ್ಯ ...**

**ಅಹಂ ಮಮಾಭಿಮಾನಾದಿ ತ್ವಯಥೋತ್ಥಮನಿತ್ಯಕಮ್ ।**
**ಮಹದಾದಿ ಯಥೋತ್ಥಂ ಚ ನಿತ್ಯಾ ಯಾಽಪಿ ಯಥೋತ್ಥಿತಾ ॥**

**ಅಸ್ವತಂತ್ರೈವ ಪ್ರಕೃತಿಃ ಸ್ವತಂತ್ರೋ ನಿತ್ಯ ಏವ ಚ ।**
**ಯಥಾರ್ಥಭೂತಶ್ಚ ಪರ ಏಕ ಏವ ಜನಾರ್ದನಃ ॥ ಇತಿ ಚ ॥**

ನಾನು ಸ್ವತಂತ್ರನು ಇದು ನನ್ನ ಅಧೀನ ಎಂಬ ಜ್ಞಾನವಿಷಯವಾದ ಸ್ವಾತಂತ್ರ್ಯಾದಿಗಳು ಅಸತ್ಯಗಳೇ. ಮಹದಾದಿತತ್ವಗಳು ಸತ್ಯವೇ. ಅನಿತ್ಯಗಳು. ಚಿತ್ಪ್ರಕೃತಿ ಎನಿಸಿದ ಲಕ್ಷ್ಮೀದೇವಿಯು ನಿತ್ಯಳು. ಅಸ್ವತಂತ್ರಳು. ಪರಮಾತ್ಮನೊಬ್ಬನೇ ಸ್ವತಂತ್ರನು. ಚತುರ್ವಿಧ ನಾಶರಹಿತನಾದ್ದರಿಂದ ಜೀವವಿಲಕ್ಷಣನು. ಯಥಾರ್ಥನು ಸತ್ಯನು ನಿತ್ಯನೇ, ಅಚಿತ್ಪ್ರಕೃತಿಯಂತೆ ನಿತ್ಯಾನಿತ್ಯನಲ್ಲ. ಜಡಪ್ರಕೃತಿ ಮಹದಾದಿ ಅವಸ್ಥೆಯಲ್ಲಿ ಅನಿತ್ಯ. ಮೂಲ ಪ್ರಕೃತಿ ಅವಸ್ಥೆಯಲ್ಲಿ ನಿತ್ಯವೆಂದು ಭಾವ. ಇದರಿಂದ ಮೂಲಶ್ಲೋಕದಲ್ಲಿ ಅ ಎಂದರೆ ಅಕಾರವಾಚ್ಯನಾದ ಶ್ರೀಹರಿಯ ಅನುಗ್ರಹದಿಂದ

ಸತ್ಯವಾಗಿ ಸೃಷ್ಟವಾದುದು. ಚಿತ್ಪ್ರಕೃತಿಯೂ ಶ್ರೀಹರಿಯ ಅನುಗ್ರಹದಿಂದ ನಿತ್ಯ ಎಂದರ್ಥ ಹೇಳಿದಂತಾಯಿತು. ಇದರಿಂದ ಮಹದಾದಿಗಳಿಗೆ ಕೇವಲ ಅನಿತ್ಯತ್ವ ಅಸತ್ಯತ್ವಗಳಿಲ್ಲದಿರುವಾಗ ಶ್ರೀಹರಿಗೆ ಇಲ್ಲವೆಂದು ಹೇಳುವದೇನು. ಎಂದು ಕೈಮುತ್ಯನ್ಯಾಯವನ್ನು ತೋರಿಸಿರುವರು ।।೫೮।।

**ಯಮ ಏತದುಪಾಖ್ಯಾಯ ತತ್ರೈವಾಂತರಧೀಯತ ।**
**ಜ್ಞಾತಯೋಽಪಿ ಸುಯಜ್ಞಸ್ಯ ಚಕ್ರುರ್ಯತ್ ಸಾಂಪರಾಯಿಕಮ್ ।**
**ತತಃ ಶೋಚತ ಮಾ ಯೂಯಂ ಪರಂ ಚಾತ್ಮಾನಮೇವ ಚ ।।೫೯।।**

**ಯಮಃ** ಯಮದೇವರು **ಏತದಾಖ್ಯಾಯ** ಇದನ್ನು ಹೇಳಿ **ಅಂತರಧೀಯತ** ಅದೃಶ್ಯರಾದರು **ತತ್ರೈವ** ಅಲ್ಲಿಯೇ **ಸುಯಜ್ಞಸ್ಯ** ಸುಯಜ್ಞನ **ಜ್ಞಾತಯಃ** ಸಂಬಂಧಿಗಳು **ಯತ್ ಸಾಂಪರಾಯಿಕಂ** ಸತ್ತಾಗ ಮಾಡಬೇಕಾದ ದಹನಾದಿಕ್ರಿಯೆಗಳನ್ನು **ಚಕ್ರುಃ** ಮಾಡಿದರು **ತತಃ** ಸ್ವತ್ವಾದಿಗಳು ಅಸತ್ಯವಾದ್ದರಿಂದ ದೇಹಾದಿಗಳು ಅನಿತ್ಯವಾದ್ದರಿಂದ **ಯೂಯಂ** ನೀವು (ದಿತಿಮೊದಲಾದವರು) **ಪರಂ ಚ** ಪರದೇಹಕ್ಕಾಗಿ **ಆತ್ಮಾನಂ ಚ** ನಿಮ್ಮ ದೇಹಕ್ಕಾಗಿಯೂ **ಮಾ ಶೋಚತ** ಶೋಕಿಸಬೇಡಿರಿ. ಮಾ ಶಬ್ದವು ಮಾಙ್ ಅರ್ಥದಲ್ಲಿ ।।೫೯।।

ಶತ್ರುಪಕ್ಷಪಾತಿಯಾದ ಶ್ರೀಹರಿಯಿಂದ ತಮ್ಮ ಹಿರಣ್ಯಾಕ್ಷನು ಕೊಲ್ಲಲ್ಪಟ್ಟನೆಂದು ದುಃಖಿಸುತ್ತಿರುವ ತಾಯಿ ಮುಂತಾದವರಿಗೆ ಹೇಳುವನುಃ-

**ಕ ಆತ್ಮಾ ಕಃ ಪರೋ ವಾಽತ್ರ ಸ್ವೀಯಃ ಪಾರಕ್ಯ ಏವ ಚ ।**
**ಸ್ವಪರಾಭಿನಿವೇಶೇನ ವಿನಾಽಜ್ಞಾನೇನ ದೇಹಿನಃ ।।೬೦।।**

**ಸ್ವಪರಾಭಿನಿವೇಶೇನ** ತನ್ನ ಮತ್ತು ಇತರರ ದೇಹಾದಿಗಳಲ್ಲಿ ಸ್ವಾತ್ಮತ್ವ ಪರಾತ್ಮತ್ವ ಭ್ರಾಂತಿಗೂ ತನ್ನ ಮತ್ತು ಇತರರ ಮನೆ ಮೊದಲಾದವುಗಳಲ್ಲಿ ಸ್ವಕೀಯ ಪರಕೀಯವೆಂಬ ಭ್ರಾಂತಿಗೂ ಕಾರಣವಾದ **ಅಜ್ಞಾನೇನ ವಿನಾ** ಅಜ್ಞಾನವನ್ನು ಬಿಟ್ಟು **ದೇಹಿನಃ** ತನಗಿಂತ ಭಿನ್ನವಾದ ದೇಹವುಳ್ಳ ಜೀವನಿಗೆ **ಕಃ** ಯಾವ ದೇಹವು **ಆತ್ಮಾ** ತನ್ನ ಸ್ವರೂಪವು ತನಗೆ ಬರುವ ದೇಹಗಳು ಯಾವವೂ ಸ್ವಾತ್ಮವಲ್ಲವೆಂದರ್ಥ. **ಕಃ** ಯಾವ ಮತ್ತೊಬ್ಬನ ದೇಹವು **ಪರಃ** ಅವನ ಸ್ವರೂಪವು ಅವನಿಗೆ ಬರುವ ದೇಹಗಳು ಅವನ ಸ್ವರೂಪವಲ್ಲ ಈ ಜಗತ್ತಿನಲ್ಲಿ **ಕಃ** ಯಾವ ದೇಹಾದಿಗಳು **ಸ್ವೀಯಃ** ತನ್ನವು ಯಾವವೂ ಅಲ್ಲ **ಕಃ ಪಾರಕ್ಯಃ** ಪರಕೀಯಗಳು ಯಾವವೂ ಅಲ್ಲ. ಎಲ್ಲವೂ ಪರಮಾತ್ಮನ ಅಧೀನವೆಂದರ್ಥ. ತಾನು ಇತರರು ಚೇತನರಾದ್ದರಿಂದ ನಿತ್ಯರಾದ್ದರಿಂದಲೂ ದೇಹಗಳು ಭೌತಿಕಗಳಾದ್ದರಿಂದ ಅನಿತ್ಯಗಳಾಗಿವೆ. ಇಲ್ಲಿ ಕಿಂಶಬ್ದ ಆಕ್ಷೇಪಾರ್ಥಕ.

ಇಲ್ಲಿ ಭೇದನಿರಾಕರಣ ಮಾಡುವಂತೆ ತೋರುವದು. ಕಾರಣ ತಾತ್ಪರ್ಯ ಹೇಳುವರು.

**... ತಾತ್ಪರ್ಯ ...**

**ಕ ಆತ್ಮಾ ಕಃ ಪರ ಇತಿ ದೇಹಾದ್ಯಪೇಕ್ಷಯಾ ।**

**ನ ಹಿ ದೇಹಾದಿರಾತ್ಮಾ ಸ್ಯಾನ್ನ ಚ ಶತ್ರುರುದೀರಿತಃ ।**
**ಅತೋ ದೈಹಿಕವೃದ್ಧೌ ವಾ ಕ್ಷಯೇ ವಾ ಕಿಂ ಪ್ರಯೋಜನಮ್ ॥**

**ಯಸ್ತು ದೇಹಗತೋ ಜೀವಃ ಸ ಹಿ ನಾಶಂ ನ ಗಚ್ಛತಿ ।**
**ತತಃ ಶತ್ರುವಿವೃದ್ಧೌ ವಾ ಸ್ವನಾಶೇ ಶೋಚನಂ ಕುತಃ ॥**

**ದೇಹಾದಿವ್ಯತರಿಕ್ತೌ ತು ಜೀವೇಶೌ ಪ್ರತಿಜಾನತಾಮ್ ।**
**ಅತ ಆತ್ಮವಿವೃದ್ಧಿಸ್ತು ವಾಸುದೇವೇ ರತಿಃ ಸ್ಥಿರಾ ।**
**ಶತ್ರುನಾಶಸ್ತಥಾऽಜ್ಞಾನನಾಶೋ ನಾನ್ಯಃ ಕಥಂಚನ ॥ ಇತಿ ಬ್ರಹ್ಮವೈವರ್ತೇ ॥**

'ಕಃ ಆತ್ಮಾ, ಕಃ ಪರಃ' ಎಂದು ದೇಹಾದಿಗಳನ್ನಿಟ್ಟುಕೊಂಡು ಮಿತ್ರತ್ವ ಶತ್ರುತ್ವಾದಿಗಳು ಇಲ್ಲವೆಂದು ಹೇಳಿದ್ದು. ದೇಹಮೊದಲಾದುದು ಜೀವನಾಗಲಾರದು ಶತ್ರುತ್ವಮಿತ್ರತ್ವಾದಿಗಳುಳ್ಳದ್ದೂ ಅಲ್ಲ. ಆದ ಕಾರಣ ದೈಹಿಕವೃದ್ಧಿ ನಾಶಗಳಿಂದ ಏನು ಲಾಭವಿದೆ? ದೇಹದಲ್ಲಿರತಕ್ಕ ಜೀವನು ನಾಶವನ್ನು ಹೊಂದುವದಿಲ್ಲ. ಆದ ಕಾರಣ ದೇಹಾದಿಗಳಿಂದ ವಿಲಕ್ಷಣರಾದ ಜೀವೇಶರನ್ನು ತಿಳಿಯವವನು. ಕಾರಣ ಶತ್ರುವಿಗೆ ವೃದ್ಧಿ ತನ್ನ ನಾಶವಾದರೂ ದುಃಖಿಸುವದೇಕೆ ? ಆದ್ದರಿಂದ ಜೀವನ ಅಜ್ಞಾನನಾಶವೇ ಶತ್ರುನಾಶವು. ಶ್ರೀವಾಸುದೇವನಲ್ಲಿ ಆಸಕ್ತಿಯೇ ವೃದ್ಧಿಯೆನಿಸುತ್ತದೆ. ಬೇರೆ ಯಾವುದು ಅಲ್ಲ. ಎಂದು ಬ್ರಹ್ಮವೈವರ್ತದಲ್ಲಿದೆ. ।।೬೦।।

**ನಾರದ ಉವಾಚ**

**ಇತಿ ದೈತ್ಯಪತೇರ್ವಾಕ್ಯಂ ದಿತಿರಾಕರ್ಣ್ಯ ಸಸ್ನುಷಾ ।**
**ಪುತ್ರಶೋಕಂ ಕ್ಷಣಾತ್ತ್ಯಕ್ತ್ವಾ ತತ್ತ್ವೇ ಚಿತ್ತಮಧಾರಯತ್ ।।೬೧।।**

ಇತಿ ಹೀಗೆ ಹೇಳಿದ **ದೈತ್ಯಪತೇಃ** ದೈತ್ಯರಾಜನ **ವಾಕ್ಯಂ** ಮಾತನ್ನು **ಆಕರ್ಣ್ಯ** ಕೇಳಿ **ಸಸ್ನುಷಾ** ಸೊಸೆಯಿಂದ ಕೂಡಿದ **ದಿತಿಃ** ದಿತಿದೇವಿಯು **ಕ್ಷಣಾತ್** ಸ್ವಲ್ಪ ಕಾಲದಲ್ಲಿಯೇ **ಪುತ್ರಶೋಕಂ** ಮಗನಾದ ಹಿರಣ್ಯಾಕ್ಷನ ದುಃಖವನ್ನು **ತ್ಯಕ್ತ್ವಾ** ಬಿಟ್ಟು **ತತ್ತ್ವೇ** ಸರ್ವೋತ್ತಮನಾದ ಶ್ರೀಹರಿಯಲ್ಲಿ **ಚಿತ್ತಂ** ಮನಸ್ಸನ್ನು **ಅಧಾರಯತ್** ಧರಿಸಿದಳು.

**॥ ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ದ್ವಿತೀಯೋऽಧ್ಯಾಯಃ ॥**

★★★

# ಅಥ ತೃತೀಯೋऽಧ್ಯಾಯಃ

**ಸಾರಾಂಶ**

ಹಿರಣ್ಯಾಕ್ಷ ಮೃತನಾದ ಮೇಲೆ ಭಗವಂತನ ದ್ವೇಷದಿಂದ ಹಿರಣ್ಯಕಶಿಪುವು ಮಂದರಪರ್ವತದಲ್ಲಿ ಬ್ರಹ್ಮದೇವರನ್ನು ಕುರಿತು 'ಕಾಲಿನ ಹೆಬ್ಬೆರಳನ್ನು ಊರಿನಿಂತು ಎರಡು ಬಾಹುಗಳನ್ನು ಮೇಲೆತ್ತಿ ಆಕಾಶದ ಕಡೆಗೆ ದಿಟ್ಟಿಸಿ ನೋಡುತ್ತಾ ಉಗ್ರತಪಸ್ಸನ್ನು ಮಾಡಿದ. ತಲೆಯಿಂದ ತಪೋಜ್ವಾಲೆಗಳು ಹೊರಟು ಎಲ್ಲ ಲೋಕಗಳನ್ನು ಸುಡತೊಡಗಿದವು. ನದೀ ಸಮುದ್ರಗಳು ಕ್ಷೋಭೆಗೊಂಡವು. ಭೂಮಿ ಜೋರಾಗಿ ಕಂಪಿಸತೊಡಗಿತು.

ದೇವತೆಗಳೆಲ್ಲ ಒಟ್ಟು ಗೂಡಿ ಬ್ರಹ್ಮದೇವರ ಬಳಿ ತೆರಳಿ ದೂರುನೀಡಿದರು. ಹಿರಣ್ಯಕಶಿಪುವು ತಾನು ಜಗತ್ತಿನ ಸೃಷ್ಟಿಕರ್ತೃವಾಗಬೇಕು ಎಂದು ಬಯಸಿ ತಪಸ್ಸು ಮಾಡುತ್ತಿದ್ದಾನೆ. ತಾನು ನೀವಾಗಿ(ಬ್ರಹ್ಮನಾಗಿ) ಸೃಷ್ಟಿಯ ವ್ಯವಸ್ಥೆಯನ್ನು ಕೆಡಿಸಲು ಮುಂದಾಗಿದ್ದಾನೆ. ಈ ಕೂಡಲೇ ಅವನಿಂದ ಜಗತ್ತನ್ನು ರಕ್ಷಿಸಬೇಕು ಎಂಬ ದೇವತೆಗಳ ಪ್ರಾರ್ಥನೆಯಂತೆ ಬ್ರಹ್ಮದೇವರು ತತ್ಕ್ಷಣವೇ ಹಿರಣ್ಯಕಶಿಪುವಿನ ಹತ್ತಿರ ಬಂದು ಹುತ್ತದೊಳಗೆ ಇರುವ ಅವನ ಎಲುಬಿನ ದೇಹವನ್ನು ಕಮಂಡಲು ಜಲದಿಂದ ಪ್ರೋಕ್ಷಣೆ ಮಾಡಿ ಅವನನ್ನು ಸೃದೃಢಕಾಯನನ್ನಾಗಿ ಮಾಡಿ ವರವನ್ನು ಬೇಡು ಎಂದರು. ನನಗೆ ಬೇಕಾದ ವರವನ್ನು ನೀಡುವಿಯಾದರೆ ನಿನ್ನಿಂದ ಹುಟ್ಟಿರುವ ಯಾವ ಜೀವಿಯಿಂದಲೂ ನನಗೆ ಮರಣ ಬಾರದಿರಲಿ. ಒಳಗಾಗಲಿ ಹೊರಗಾಗಲಿ, ಹಗಲಾಗಲಿ, ರಾತ್ರಿಯಾಗಲಿ ನನಗೆ ಮರಣವಾಗಬಾರದು. ಆಯುಧ, ಮಾನವ, ಮೃಗ, ನಿರ್ಜೀವ ಸಜೀವ ಹೀಗೆ ಯಾವ ವಸ್ತುಗಳಿಂದಲೂ ನನಗೆ ಮರಣ ಆಗಕೂಡದು.

★★★

ಅನೇಕಸಾಮಗ್ರಿಗಳಿದ್ದರೂ ತನಗೆ ಅಯೋಗ್ಯವಾದುದನ್ನು ಚೇತನನು ಹೊಂದಲಾರ. ಯೋಗ್ಯವಾದುದ್ದನ್ನು ಮಾತ್ರ ಸಾಧನಗಳಿಂದ ಸುಲಭವಾಗಿ ಹೊಂದಬಲ್ಲ ಎಂಬ ಪ್ರಮೇಯವನ್ನು ಹಿರಣ್ಯಕಶಿಪುವಿನ ತಪಶ್ಚರಣೆಯನ್ನು ಹೇಳುವ ಮೂಲಕ ಈ ಅಧ್ಯಾಯದಲ್ಲಿ ತಿಳಿಸುತ್ತಾರೆ.

ಸಜ್ಜನರೊಡನೆ ಜಗಳ ಮಾಡಲು ದಾನವರಿಗೆ ಆದೇಶಿಸಿ, ಬಂಧುಗಳ ಶೋಕವನ್ನು ತನ್ನ ನಿರೂಪಣದಿಂದ ಪರಿಹರಿಸಿ ಹಿರಣ್ಯಕಶಿಪುವು ಮಾಡಿದ್ದನ್ನು ಹೇಳುವರು-

**ನಾರದ ಉವಾಚ**

**ಹಿರಣ್ಯಕಶಿಪೂ ರಾಜನ್ನಜೇಯಮಜರಾಮರಮ್ ।**
**ಆತ್ಮಾನಮಪ್ರತಿದ್ವಂದ್ವಮೇಕರಾಜಂ ವ್ಯಧಿತ್ಸತ ॥೧॥**

**ರಾಜನ್** ಧರ್ಮರಾಜನೇ **ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಆತ್ಮಾನಂ** ತನ್ನನ್ನು **ಅಜೇಯಂ** ಮೂರು ಲೋಕಗಳಲ್ಲಿ ಯಾರಿಂದಲೂ ಜಯಿಸಲಾಗದವನಾಗಿಯೂ **ಅಜರಾಮರಂ** ಮುಪ್ಪು ಮರಣಗಳಿಲ್ಲದವನಾಗಿಯೂ **ಅಪ್ರತಿದ್ವಂದ್ವಂ** ತನಗೆ ಸಮಾನ ಬಲವುಳ್ಳ ಶತ್ರುವಿಲ್ಲದವನಾಗಿಯೂ **ಏಕರಾಜಂ** ಮೂರು ಲೋಕಗಳಿಗೆ ತಾನೊಬ್ಬನೇ ರಾಜನಾಗಬೇಕೆಂದು **ವ್ಯಧಿತ್ಸತ** ಇಚ್ಛಿಸಿದನು. (ತನ್ನನ್ನೇ ರಾಜನನ್ನಾಗಿ ಮಾಡಲಿಚ್ಛಿಸಿದನು) ॥೧॥

**ಸ ತೇಪೇ ಮಂದರದ್ರೋಣ್ಯಾಂ ತಪಃ ಪರಮದಾರುಣಮ್ ।**
**ಊರ್ಧ್ವಬಾಹುರ್ನಭೋದೃಷ್ಟಿಃ ಪಾದಾಂಗುಷ್ಠಾಶ್ರಿತಾವನಿಃ ॥೨॥**

**ಸಃ** ಆ ಹಿರಣ್ಯಕಶಿಪುವು **ಮಂದರದ್ರೋಣ್ಯಾಂ** ಮಂದರ ಪರ್ವತದ ತಪ್ಪಲಿನಲ್ಲಿ **ಊರ್ಧ್ವಬಾಹುಃ** ತೋಳುಗಳನ್ನು ಮೇಲೆ ಎತ್ತಿದವನಾಗಿ **ನಭೋದೃಷ್ಟಿಃ** ಆಕಾಶದಲ್ಲಿ ದೃಷ್ಟಿ ಇಡುವವನಾಗಿ **ಪಾದಾಂಗುಷ್ಠಾಶ್ರಿತಾವನಿಃ** ಕಾಲಿನ ಹೆಬ್ಬೆರಳಿನಿಂದ ಭೂಮಿಯನ್ನು ಮೆಟ್ಟಿಕೊಂಡವನಾಗಿ **ಪರಮದಾರುಣಂ** ಅತ್ಯಂತ ಕಠಿಣವಾದ **ತಪಃ ತೇಪೇ** ತಪಸ್ಸು ಮಾಡಿದನು. ॥೨॥

**ಜಟಾದೀಧಿತಿಭಿಃ ರೇಜೇ ಸಂವರ್ತಾರ್ಕ ಇವಾಂಶುಭಿಃ ।**
**ತಸ್ಮಿಂಸ್ತಪಸ್ತಪ್ಯಮಾನೇ ದೇವಾಃ ಸ್ಥಾನಾನಿ ಭೇಜಿರೇ ॥೩॥**

**ಜಟಾದೀಧಿತಿಭಿಃ** ತನ್ನ ಜಟೆಯ ಕಾಂತಿಯಿಂದ **ಅಂಶುಭಿಃ** ಕಿರಣಗಳಿಂದ **ಸಂವರ್ತಾರ್ಕ ಇವ** ಪ್ರಳಯ ಕಾಲದ ಸೂರ್ಯನಂತೆ **ರೇಜೇ** ಪ್ರಕಾಶಿಸಿದನು. **ತಸ್ಮಿನ್**

ಅವನು **ತಪ್ಯಮಾನೇ** ತಪಸ್ಸು ಮಾಡುತ್ತಿರಲು **ದೇವಾಃ** ದೇವತೆಗಳು **ಸ್ಥಾನಾನಿ** ಅಗಮ್ಯಸ್ಥಾನಗಳನ್ನು **ಭೇಜಿರೆ** ಹೊಂದಿದರು. ಅಥವಾ ಹಿಂದೆ ಯಾರಿಗೂ ಕಾಣದೇ ಇದ್ದಂತೆ ಸಂಚರಿಸುತ್ತಿದ್ದ ದೇವತೆಗಳು ಮತ್ತೆ ತಮ್ಮ ಸ್ಥಾನಗಳನ್ನು ಹೊಂದಿದರು. ।।೩।।

**ತಸ್ಯ ಮೂರ್ಧ್ನಃ ಸಮುದ್ಭೂತಃ ಸಧೂಮ್ರೋಽಗ್ನಿಸ್ತಪೋಮಯಃ ।**
**ತಿರ್ಯಗೂರ್ಧ್ವಮಧೋಲೋಕಾನತಪದ್ವಿಷ್ವಗೀರಿತಃ ।।೪।।**

**ತಸ್ಯ** ಅವನ **ಮೂರ್ಧ್ನಃ** ತಲೆಯಿಂದ **ಸಮುದ್ಭೂತಃ** ಹುಟ್ಟಿದ **ಸಧೂಮ್ರಃ** ಹೊಗೆಯಿಂದ ಕೂಡಿದ **ತಪೋಮಯಃ** ತಪವೇ ಕಾರಣವಾಗಿವುಳ್ಳ **ಅಗ್ನಿಃ** ಅಗ್ನಿಯು **ವಿಷ್ವಕ್** ಎಲ್ಲ ದಿಕ್ಕುಗಳಲ್ಲಿಯೂ **ಈರಿತಃ** ಹರಡಿದ್ದಾಗಿ **ತಿರ್ಯಕ್** ಅಡ್ಡವಾದ **ಊರ್ಧ್ವಂ** ಮೇಲಿನ **ಅಧಃ** ಕೆಳಗಿನ **ಲೋಕಾನ್** ಲೋಕಗಳನ್ನು **ಅತಪತ್** ಸುಡುತ್ತಿತ್ತು. ಅಲ್ಲಿರುವ ಜನರು ತಪಸ್ಸಿನ ಹೊಗೆಯಿಂದ ಬೆಂದರೆಂದರ್ಥ. ।।೪।।

**ಚುಕ್ಷುಭುರ್ನದ್ಯುದನ್ವಂತಃ ಸದ್ವೀಪಾದ್ರಿಶ್ಚಚಾಲ ಭೂಃ ।**
**ನಿಪೇತುಃ ಸಗ್ರಹಾಸ್ತಾರಾ ಜಜ್ವಲುಶ್ಚ ದಿಶೋ ದಶ ।।೫।।**

**ನದ್ಯುದನ್ವಂತಃ** ನದಿಗಳು ಸಮುದ್ರಗಳು **ಚುಕ್ಷುಭುಃ** ಕ್ಷೋಭೆಗೊಂಡವು ಅಲ್ಲೋಲಕಲ್ಲೋಲವಾದವು. **ಸದ್ವೀಪಾದ್ರಿಃ ಭೂಃ ಚಚಾಲ** ದ್ವೀಪಬೆಟ್ಟಗಳಿಂದ ಸಹಿತವಾದ ಭೂಮಿಯು ನಡುಗಿತು **ಸಗ್ರಹಾಃ ತಾರಾಃ** ಗ್ರಹಗಳಿಂದ ಸಹಿತವಾದ ನಕ್ಷತ್ರಗಳು **ನಿಪೇತುಃ** ಆಕಾಶದಿಂದ ಕಳಚಿ ಬಿದ್ದವು **ದಶ ದಿಶಃ ಜಜ್ವಲುಃ** ಹತ್ತು ದಿಕ್ಕಗಳು ಪ್ರಜ್ವಲಿಸಿದವು. ।।೫।।

**ತೇನ ತಪ್ತಾ ದಿವಂ ತ್ಯಕ್ತ್ವಾ ಬ್ರಹ್ಮಲೋಕಂ ಯಯುಃ ಸುರಾಃ ।**
**ಧಾತ್ರೇ ವಿಜ್ಞಾಪಯಾಮಾಸುರ್ದೇವದೇವ ಜಗತ್ಪತೇ ।।೬।।**

**ತೇನ** ಅವನ ತಪಸ್ಸಿನಿಂದ **ತಪ್ತಾಃ** ಸಂತಾಪಗೊಂಡ **ಸುರಾಃ** ದೇವತೆಗಳು **ದಿವಂ** ಸ್ವರ್ಗವನ್ನು **ತ್ಯಕ್ತ್ವಾ** ಬಿಟ್ಟು **ಬ್ರಹ್ಮಲೋಕಂ** ಸತ್ಯಲೋಕವನ್ನು ಕುರಿತು **ಯಯುಃ** ಹೋದರು **ಧಾತ್ರೇ** ಬ್ರಹ್ಮದೇವರಿಗೆ **ವಿಜ್ಞಾಪಯಾಮಾಸುಃ** ಪ್ರಾರ್ಥಿಸಿಕೊಂಡರು **ದೇವದೇವ** ದೇವತೆಗಳಿಗೂ ಉಪಾಸ್ಯದೇವತೆಯೇ **ಜಗತ್ಪತೇ** ಜಗತ್ಪಾಲಕರಾದ ಬ್ರಹ್ಮದೇವನೇ ।।೬।।

**ದೈತ್ಯೇಂದ್ರತಪಸಾ ತಪ್ತಾ ದಿವಿ ಸ್ಥಾತುಂ ನ ಶಕ್ನುಮಃ ।**
**ತಸ್ಯ ಚೋಪಶಮಂ ಬ್ರಹ್ಮನ್ ವಿಧೇಹಿ ಯದಿ ಮನ್ಯಸೇ ।।೭।।**

**ಲೋಕಾ ನ ಯಾವನ್ನಂಕ್ಷ್ಯಂತಿ ಬಲಿಹಾರಾಸ್ತವ ಪ್ರಭೋ ।**
**ತಸ್ಯಾಯಂ ಕಿಲ ಸಂಕಲ್ಪಶ್ಚರತೋ ದುಶ್ಚರಂ ತಪಃ ॥೮॥**

**ದೈತ್ಯೇಂದ್ರತಪಸಾ** ಹಿರಣ್ಯಕಶಿಪುವಿನ ತಪಸ್ಸಿನಿಂದ **ತಪ್ತಾಃ** ಸಂತಪ್ತರಾದ ನಾವು **ದಿವಿ** ಸ್ವರ್ಗದಲ್ಲಿ **ಸ್ಥಾತುಂ** ಇರಲು **ನ ಶಕ್ನುಮಃ** ಸಮರ್ಥರಾಗಿಲ್ಲ (ಇರಲಾರೆವು) **ಯದಿ ಮನ್ಯಸೇ** ಇಷ್ಟಪಡುವದಾದರೆ **ತವ** ನಿಮಗೆ **ಬಲಿಹಾರಾಃ** ಪೂಜೆ ಮಾಡುವದೇ ಪ್ರಯೋಜನವಾಗಿವುಳ್ಳ **ಲೋಕಾಃ** ಮೂರು ಲೋಕದ ಜನರು **ಯಾವತ್** ಎಲ್ಲಿಯವರೆಗೆ **ನ ನಂಕ್ಷ್ಯಂತಿ** ನಾಶವಾಗುವದಿಲ್ಲವೋ **ತಾವತ್** ಅಲ್ಲಿಯ ವರೆಗೆ **ತಸ್ಯ** ಆ ತಪಸ್ಸಿನ ತಾಪಕ್ಕೆ **ಉಪಶಮಂ** ಪರಿಹಾರವನ್ನು **ವಿಧೇಹಿ** ಮಾಡಿರಿ. **ದುಶ್ಚರಂ** ಮಾಡಲಾಗದ **ತಪಃ ಚರತಃ** ತಪಸ್ಸನ್ನು ಮಾಡುತ್ತಿರುವ **ತಸ್ಯ** ಆ ಹರಿಣ್ಯಕಶಿಪುವಿನ **ಸಂಕಲ್ಪಃ** ಅಭಿಪ್ರಾಯವು **ಅಯಂ ಕಿಲ** ಇದೇ ಅಲ್ಲವೇ. ॥೭,೮॥

ಬ್ರಹ್ಮದೇವರಿಗೆ ಅವನಲ್ಲಿ ದ್ವೇಷ ಹುಟ್ಟಿಸಲು ಅವನ ಸಂಕಲ್ಪವನ್ನು ನಾಲ್ಕು ಶ್ಲೋಕಗಳಿಂದ ಹೇಳುವರು-

**ಶ್ರೂಯತಾಂ ಕಿಂ(ತ್ವ)ನ ವಿದಿತಂ ತಥಾಽಪಿ ಸನ್ನಿವೇದ್ಯತೇ ।**
**ಸೃಷ್ಟ್ವಾ ಚರಾಚರಮಿದಂ ತಪೋಯೋಗಸಮಾಧಿನಾ ॥೯॥**

**ಅವಿದಿತಂ ತು ಕಿಂ** ತಮಗೆ ತಿಳಿಯದಿರುವದು ಏನು ? ಎಲ್ಲವು ತಿಳಿದಿದೆ. **ತಥಾ ಅಪಿ** ಆದರೂ **ಸನ್ನಿವೇದ್ಯತೇ** ಭಕ್ತಿಯಿಂದ ವಿಜ್ಞಾಪಿಸಲ್ಪಡುತ್ತದೆ. **ಶ್ರೂಯತಾಂ** ಕೇಳಲ್ಪಡಲಿ. ವಿಜ್ಞಾಪಿಸಿದ್ದನ್ನು ಹೇಳುತ್ತಾರೆ. **ಅಹಂ** ನಾನು **ಪರಮೇಷ್ಠೀ** ಬ್ರಹ್ಮದೇವರು **ತಪೋಯೋಗಸಮಾಧಿನಾ** ತಪಸ್ಸು ಜ್ಞಾನಚಿತ್ತೈಕಾಗ್ರತೆಗಳಿಂದ **ಇದಂ** ಪ್ರತ್ಯಕ್ಷಸಿದ್ಧವಾದ **ಚರಾಚರಂ** ಜಂಗಮಸ್ಥಾವರಪ್ರಪಂಚವನ್ನು **ಸೃಷ್ಟ್ವಾ** ಸೃಷ್ಟಿಮಾಡಿ

**ಅಧ್ಯಾಸ್ತೇ ಸರ್ವಧಿಷ್ಣ್ಯೇಭ್ಯಃ ಪರಮೇಷ್ಠೀ ನಿಜಾಸನಮ್ ।**
**ತದಹಂ ವರ್ಧಮಾನೇನ ತಪೋಯಜ್ಞಸಮಾಧಿನಾ ॥೧೦॥**

**ಸರ್ವಧಿಷ್ಣ್ಯೇಭ್ಯಃ** ರುದ್ರಾದಿ ಎಲ್ಲ ಪದವಿಗಳಿಗಿಂತ **ಪರಂ** ಉತ್ತಮವಾದ **ಯತ್** ಯಾವ **ನಿಜಾಸನಂ** ತಮ್ಮ ಪದವಿಯಾದ ಸತ್ಯಲೋಕಾಧಿಪತ್ಯವನ್ನು **ಅಧ್ಯಾಸ್ತೇ** ಹೊಂದಿರುವರೋ **ತತ್** ಆ ಬ್ರಹ್ಮಪದವಿಯನ್ನು **ವರ್ಧಮಾನೇನ** ಅಭಿವೃದ್ಧಿಗೊಂಡ **ತಪೋಯಜ್ಞಸಮಾಧಿನಾ** ತಪಸ್ಸು ಯಜ್ಞ ಮತ್ತು ಸಮಾಧಿಗಳಿಂದ **ತಥಾ** ಬ್ರಹ್ಮದೇವರಂತೆ **ಕಾಲಾತ್ಮನೋಃ** ಕಾಲ ಮತ್ತು ಜೀವರು **ನಿತ್ಯತ್ವಾತ್ ಚ** ನಿತ್ಯರಾದುದರಿಂದಲೂ **ಆತ್ಮನಃ** ನನಗೆ ಬರುವಂತೆ **ಸಾಧಯಿಷ್ಯೇ** ಸಾಧಿಸುತ್ತೇನೆ. ತಾನೇ ನಾಶವಾದಲ್ಲಿ ಈ ಬ್ರಹ್ಮಪದವಿ ಸಾಧಿಸುವದು ಅಸಾಧ್ಯ ಎಂಬುದಕ್ಕೆ

ಉತ್ತರವಾಗಿ ಕಾಲ ಮತ್ತು ಚೇತನರು ನಾಶರಹಿತರೆಂದು ಹೇಳಿದ್ದು. ಅನೇಕ ಜನ್ಮಗಳಿಂದ ಸಾಧಿಸುವೆನೆಂದು ಭಾವ.

ಬ್ರಹ್ಮಪದವು ಬೇರೆಯವರಿಗೆ ಅಯೋಗ್ಯವೆಂದು ತಿಳಿದ ಹಿರಣ್ಯಕಶಿಪುವು ತಪಸ್ಸು ಹೇಗೆ ಮಾಡಿದ ಎಂಬ ಶಂಕೆಗೆ ಪ್ರಮಾಣದಿಂದ ಉತ್ತರವನ್ನು ತಿಳಿಸುವರು-

**... ತಾತ್ಪರ್ಯ ...**

**ಕಾಲಾತ್ಮನೋಶ್ಚ ನಿತ್ಯತ್ವಾತ್ಸಾಧಯಿಷ್ಯೇ ತಥಾಽಽತ್ಮನಃ ।**

**ಜಾನತಾಮಪಿ ಕರ್ತವ್ಯಂ ಕರ್ಮಾತ್ಮಸದೃಶಂ ಸದಾ ।**
**ತತ್ರಾತ್ಮಸದೃಶಾಜ್ಞಾನಾದ್ರಾಗಾದ್ಯೈರ್ವಾವಿಮೋಹಿತಾಃ ॥**

**ಜಾನಂತೋಽಪಿ ಹ್ಯಸದೃಶಂ ಕರ್ಮ ಕುರ್ಯುರ್ಋತೇ ವಿಭುಮ್ ।**
**ಚತುರಾಸ್ಯಂ ಸ ನಾಯೋಗ್ಯಂ ಕರ್ಮ ಕುರ್ಯಾತ್ ಕಥಂಚನ ॥**

**ಇತಿ ನಾರದೀಯೇ ॥**

**ತಪಸಾ ವಿದ್ಯಯಾ ವಾಪಿ ಜ್ಞಾನಧ್ಯಾನಾದಿನಾಽಥವಾ ।**
**ವ್ಯಸ್ತೈಸ್ಸಮಸ್ತೈರಪಿ ವಾ ಕುರ್ವತಾಂ ಯತ್ನಮುತ್ತಮಮ್ ॥**

**ಸಂಹಾರವಿಕ್ಷೇಪಶತ್ಯೈರ್ಬಹುಕೋಟಿಭಿರೇವ ವಾ ।**
**ನ ಶಕ್ಯಂತೇ ಸಮಾರೋಢುಂ ಸ್ವಾತ್ಮಾಯೋಗ್ಯಪದಾನಿ ತು ॥**

**ತಥಾಪ್ಯಾಚರತಾಂ ಕುರ್ಯುರ್ದೈತ್ಯಾನಾಂ ಸುರನಾಯಕಾಃ ।**
**ವಿಘ್ನಂ ತು ತಪ ಆದೀನಾಂ ವೈಯರ್ಥ್ಯಸ್ಯಾಪನುತ್ತಯೇ ॥**

**ಇತಿ ಪ್ರಕಾಶಿಕಾಯಾಮ್ ॥**

ಈ ಕರ್ಮವು ನನಗೆ ಮಾಡಲು ಯೋಗ್ಯವೆಂದು ತಿಳಿದ ಬ್ರಹ್ಮಜ್ಞಾನಿಗಳು ತಮಗೆ ಯೋಗ್ಯವಾದ ಕರ್ಮವನ್ನೇ ಯಾವಾಗಲೂ ಮಾಡುವರು. ಹೀಗೆ ಕರ್ಮ ಮಾಡುವವರ ಸ್ವಾಭಾವಿಕ ಸ್ಥಿತಿಯು.

ಹಾಗಾದರೆ ತನಗೆ ಅಯೋಗ್ಯವಾದ ಸತ್ಯಲೋಕಾಧಿಪತ್ಯವು ಸಿಗಬೇಕೆಂದು ತಪಸ್ಸು ಏಕೆ ಮಾಡಿದನೆಂದರೆ ಬ್ರಹ್ಮಜ್ಞಾನಿಗಳಲ್ಲಿಯೂ ಕೆಲವರು ಬ್ರಹ್ಮಜ್ಞಾನಿಗಳಾದಾಗ್ಯೂ ಇದು ಯೋಗ್ಯಕರ್ಮವು ಇದು ಅಯೋಗ್ಯಕರ್ಮವು ಎಂದು ವಿವೇಕವಿಲ್ಲದಿರುವದರಿಂದ ಅಂದರೆ ಅಯೋಗ್ಯವನ್ನು ಯೋಗ್ಯವೆಂದು ಭ್ರಮಿಸಿ ಅಯೋಗ್ಯಕರ್ಮವನ್ನು ಮಾಡುತ್ತಾರೆ. ಚತುರ್ಮುಖಬ್ರಹ್ಮನ ಹೊರತು ಕೆಲವರು ಇದು ತಮಗೆ ಅಯೋಗ್ಯವೆಂದು ತಿಳಿದಿದ್ದರೂ ರಾಗಾದಿದೋಷಗಳಿಂದ ವಿಮೋಹಿತರಾಗಿ ಅಯೋಗ್ಯಕರ್ಮವನ್ನು ಮಾಡುತ್ತಾರೆ. ಹಿರಣ್ಯಕಶಿಪುವು

ಸತ್ಯಲೋಕಾಧಿಪತ್ಯವು ತನಗೆ ಅಯೋಗ್ಯವೆಂದು ತಿಳಿದಿದ್ದರೂ ರಾಗಾದಿಗಳಿಂದ **ಮೋಹಿತನಾಗಿ** ಸತ್ಯಲೋಕಾಧಿಪತ್ಯಕ್ಕಾಗಿ ತಪಸ್ಸು ಮಾಡಿದನು. ಚತುರ್ಮುಖನು ತನಗೆ ಅಯೋಗ್ಯವಾದ ಕರ್ಮವನ್ನು ಯಾವ ರೀತಿಯಿಂದಲೂ ಸರ್ವಥಾ ಮಾಡಲಾರನು. ಎಂದು ನಾರದೀಯ ಪುರಾಣದಲ್ಲಿದೆ.

ಬ್ರಹ್ಮಪದವಿಯು ಇತರರಿಗೆ ಸರ್ವಥಾ ಪ್ರಯತ್ನ ಸಾಧ್ಯವಲ್ಲವೆಂದು ದೇವತೆಗಳು ಚೆನ್ನಾಗಿ ತಿಳಿದಿರುತ್ತಾರೆ. ಆದ ಕಾರಣ ಬ್ರಹ್ಮನ ಸಮೀಪಕ್ಕೆ ಹೋಗಿ ಅಲ್ಲಿ ವಿಜ್ಞಾಪಿಸಿಕೊಂಡು ಹಿರಣ್ಯಾಕ್ಷನ ತಪಸ್ಸಿಗೆ ವಿಘ್ನವನ್ನು ಏತಕ್ಕೆ ಮಾಡಿದರೆಂದರೆ ತಪಸ್ಸಿನಿಂದ ವಿದ್ಯೆಯಿಂದ ಅಥವಾ ಜ್ಞಾನಧ್ಯಾನಗಳಿಂದ ಒಂದೊಂದರಿಂದ ಅಥವಾ ಮಿಲಿತವಾಗಿ ತಪಸ್ಸು ಮೊದಲಾದವುಗಳಿಂದ ಮಹಾಪ್ರಯತ್ನ ಮಾಡುವವರಿಗೆ ೧೦೦ ಪ್ರಾಣಾಯಾಮಗಳಿಂದಲೂ, ಬಹುಕೋಟಿ ಪ್ರಾಣಾಯಾಮಗಳಿಂದಲೂ ತಮಗೆ ಅಯೋಗ್ಯಪದವಿಗಳನ್ನು ಏರಲಿಕ್ಕೆ ಸರ್ವಥಾ ಸಾಧ್ಯವೇ ಇಲ್ಲ. ಆದಾಗ್ಯೂ ತಮಗೆ ಅಯೋಗ್ಯವಾದ ಪದಕ್ಕಾಗಿ ತಪಸ್ಸು ಮೊದಲಾದವುಗಳನ್ನು ಮಾಡುವ ದೈತ್ಯರಿಗೆ ತಪಸ್ಸು ಮುಂತಾದವು ವ್ಯರ್ಥಗಳೆಂದು ಬುದ್ಧಿಯು ಹುಟ್ಟಬಾರದೆಂದು ದೇವಶ್ರೇಷ್ಠರು ವಿಘ್ನವನ್ನು ಮಾಡುತ್ತಾರೆ. ಎಂದು ಪ್ರಕಾಶಸಂಹಿತೆಯಲ್ಲಿದೆ. ॥೯,೧೦,೧೧॥

ಮತ್ತೆ ಹಿರಣ್ಯಕಶಿಪುವಿನ ಅಭಿಪ್ರಾಯ ಹೇಳುತ್ತಾರೆಃ-

**ಅನ್ಯಥೇದಂ ವಿಧಾಸ್ಯೇಽಹಮಯಥಾಪೂರ್ವಮೋಜಸಾ ।**
**ಕಿಮನ್ಯೈಃ ಕಾಲನಿರ್ಧೂತೈಃ ಕಲ್ಪಾಂತೈರ್ವೈಷ್ಣವಾದಿಭಿಃ ॥೧೨॥**

**ಅಹಂ** ನಾನು **ಓಜಸಾ** ನನ್ನ ಸಾಮರ್ಥ್ಯದಿಂದ **ಇದಂ** ಈ ಪ್ರಪಂಚವನ್ನು **ಅನ್ಯಥಾ** ಬ್ರಹ್ಮದೇವರಿಂದ ನಿರ್ಮಿತವಾದದಕ್ಕಿಂತ ವಿರುದ್ಧವಾಗಿ ಅಂದರೆ **ಅಯಥಾಪೂರ್ವಂ** ಬ್ರಹ್ಮದೇವರು 'ಧಾತಾ ಯಥಾ ಪೂರ್ವಮಕಲ್ಪಯತ್' ಎಂದು ಹಿಂದಿನ ಕಲ್ಪದಲ್ಲಿ ಜಗತ್ತಿನ ಸೃಷ್ಟಿಯನ್ನು ಮಾಡಿದಂತೇ ಈ ಕಲ್ಪದಲ್ಲಿಯು ಸೃಷ್ಟಿ ಮಾಡುತ್ತಾರೆ. ನಾನಾದರೂ ಹಿಂದಿನ ಕಲ್ಪಕ್ಕೆ ವಿರುದ್ಧವಾಗಿ ಮಾಡುತ್ತೇನೆ. ಬ್ರಹ್ಮದೇವರು ಬ್ರಹ್ಮಪದವಿಯನ್ನು ಅಲಂಕರಿಸಿದ ಕಾಲದಲ್ಲಿ ಇಂದ್ರಾದಿಗಳು ದಿಕ್ಪಾಲಕರು ಸ್ವಾಯಂಭುವ ಮೊದಲಾದವರು ಮನ್ವಂತರಾಧಿಪತಿಗಳು. ನಾನು ಬ್ರಹ್ಮನಾದಾಗ ದೈತ್ಯರೇ ದಿಕ್ಪಾಲಕರು ಮನ್ವಂತರಾಧಿಪತಿಗಳು ಹೀಗೆ ವಿರುದ್ಧವಾಗಿ ಮಾಡುತ್ತೇನೆಂದರ್ಥ. ಈಗಿನ ಇಂದ್ರಾದಿಗಳು ವಿರೋಧಿಸುವರಲ್ಲವೇ ಎಂದರೆ ಹೇಳುತ್ತಾರೆ **ಕಾಲನಿರ್ಧೂತೈಃ** ತಮ್ಮ ತಮ್ಮ ಕ್ಲಪ್ತ ಕಾಲದಲ್ಲಿ ಪದವಿಗಳನ್ನು ಮುಗಿಸಬೇಕಾಗಿರುವ ಆದ್ದರಿಂದಲೇ **ಕಲ್ಪಾಂತೈಃ** ಮನುಕಲ್ಪವೇ ಆಯುಷ್ಯವುಳ್ಳ **ವೈಷ್ಣವಾದಿಭಿಃ** ವಿಷ್ಣುವಿನ ಮಗನಾದ ಬ್ರಹ್ಮನೇ ಕಾರಣರಾಗಿವುಳ್ಳ **ಅನ್ಯೈಃ** ನಮ್ಮ

ಶತ್ರುಗಳಾದ ಇಂದ್ರಾದಿಗಳಿಂದ **ಕಿಂ** ಆಗುವದೇನು ಅವರ ವಿರೋಧಕ್ಕೆ ಹೆದರಬೇಕಿಲ್ಲವೆಂದು ಅರ್ಥ.

ವೈಷ್ಣವಾದಿಭಿಃ ಎಂಬುದಕ್ಕೆ ವೈಕುಂಠಾದಿ ಎಂದರ್ಥ ಮಾಡಿದರೆ ಕಾಲನಿರ್ಧೂತೈಃ ಎಂಬ ವಿಶೇಷಣ ಕೂಡುವದಿಲ್ಲ. ಕಾರಣ ಇಲ್ಲಿ ವೈಷ್ಣವಪದ ಬ್ರಹ್ಮಪರವೆಂದು ಅಭಿಧಾನಸಹಿತವಾಗಿ ಹೇಳುವರು ಆಚಾರ್ಯರುಃ-

**... ತಾತ್ಪರ್ಯ ...**

**ವೈಷ್ಣವಾದಿಭಿಃ ಬ್ರಹ್ಮನಿರ್ಮಿತೈಃ ।**
**ಬ್ರಹ್ಮಾ ಸ್ವಯಂಭೂರ್ದ್ರುಹಿಣೋ ವೈಷ್ಣವಃ ಶತದೃಕ್ತಥಾ ॥ ಇತಿ ಶಬ್ದನಿರ್ಣಯೇ ॥**

ವೈಷ್ಣವಾದಿಭಿಃ ಎಂಬುದಕ್ಕೆ ಚತುರ್ಮುಖನು ಕಾರಣವಾಗಿವುಳ್ಳ ಅಂದರೆ ಚತುರ್ಮುಖನಿಂದ ನಿರ್ಮಿತವಾದದ್ದೆಂದರ್ಥ. ಬ್ರಹ್ಮಾ ಸ್ವಯಂಭೂಃ, ದ್ರುಹಿಣಃ, ವೈಷ್ಣವಃ ಶತದೃಕ್, ಇಷ್ಟು ಶಬ್ದಗಳು ಚತುರ್ಮುಖನನ್ನು ಹೇಳುತ್ತವೆ ಎಂದು ಶಬ್ದನಿರ್ಣಯದಲ್ಲಿದೆ. ಇದರಿಂದ ವೈಷ್ಣವಃ(ಬ್ರಹ್ಮಾ)ಆದಿಃ ಕಾರಣಂ ಯೇಷಾಂ ತೇ ವೈಷ್ಣವಾದಯಃ ತೈಃ ವೈಷ್ಣವಾದಿಭಿಃ ಎಂದು ವಿಗ್ರಹವ್ಯಾಖ್ಯಾಸೂಚಿತವಾಯಿತು.

**ಇತಿ ಶುಶ್ರುಮ ನಿರ್ಬಂಧಂ ತಪಃ ಪರಮಮಾಸ್ಥಿತಃ ।**
**ವಿಧತ್ಸ್ವಾನಂತರಂ ಯುಕ್ತಂ ಸ್ವಯಂ ತ್ರಿಭುವನೇಶ್ವರ ॥೧೩॥**

**ಹೇ ತ್ರಿಭುವನೇಶ್ವರ** ಮೂರು ಲೋಕಕ್ಕೆ ಒಡೆಯರಾದ ಬ್ರಹ್ಮದೇವರೇ **ಇತಿ** ಮೇಲೆ ಹೇಳಿದಂತೆ **ನಿರ್ಬಂಧಂ** ಹಿರಣ್ಯಕಶಿಪುವಿನ ದುರಾಗ್ರಹವನ್ನು **ಶುಶ್ರುಮ** ಕೇಳಿದ್ದೇವೆ. ಇಷ್ಟವನ್ನು ಸಾಧಿಸಲೆಂದು ಅವನು **ಪರಮಂ ತಪಃ ಆಸ್ಥಿತಃ** ಕಠಿಣ ತಪಸ್ಸನ್ನು ಮಾಡುತ್ತಿರುವನು ಇದು ಈಗಿನ ಪರಿಸ್ಥಿತಿ **ಅನಂತರಂ** ಇನ್ನು ಮುಂದೆ **ಯುಕ್ತಂ** ಯೋಗ್ಯವಾದುದನ್ನು **ಸ್ವಯಂ** ನೀವೇ **ವಿಧತ್ಸ್ವ** ಮಾಡಿರಿ.(ನಾವು ಅದನ್ನು ಹೇಳಲಾರೆವು) ॥೧೩॥

ಹಿರಣ್ಯಕಶಿಪುವು ಇತರ ಪದಗಳನ್ನು ಬಿಟ್ಟು ಬ್ರಹ್ಮಪದವನ್ನೇ ಏಕೆ ಅಪೇಕ್ಷಿಸದನೆಂಬುದಕ್ಕೆ ಕಾರಣ ಹೇಳುತ್ತಾರೆ-

**ತವಾಸನಂ ಹಿ ಜಗತಾಂ ಪಾರಮೇಷ್ಠ್ಯಂ ಜಗತ್ಪತೇ ।**
**ಭವಾಯ ಶ್ರೇಯಸೇ ಭೂತ್ಯೈ ಕ್ಷೇಮಾಯ ವಿಜಯಾಯ ಚ ॥೧೪॥**

**ಜಗತ್ಪತೇ** ಜಗತ್ಪಾಲಕರಾದ ಬ್ರಹ್ಮದೇವರೇ **ತವ** ನಿಮ್ಮ **ಪಾರಮೇಷ್ಠ್ಯಂ** ಹದಿನಾಲ್ಕು ಲೋಕದ ಆಧಿಪತ್ಯವೆಂಬ **ಆಸನಂ** ಪದವಿಯು **ಜಗತಾಂ**

ಯೋಗ್ಯಜಗತ್ತಿನ **ಭವಾಯ** ಜ್ಞಾನಾದಿಗುಣಗಳ ಅಭಿವೃದ್ಧಿಗೆ **ಶ್ರೇಯಸೇ** ಮೋಕ್ಷಕ್ಕೆ **ಭೂತ್ಯೈ** ಹ್ರಾಸವಿಲ್ಲದಿರುವದಕ್ಕೆ **ಕ್ಷೇಮಾಯ** ಬಂದಿದ್ದನ್ನು ರಕ್ಷಿಸುವದಕ್ಕೆ **ಚ** ಮತ್ತು **ವಿಜಯಾಯ** ಹೊಸದನ್ನು ಪಡೆಯುವದಕ್ಕೆ (ಇಂದ್ರಿಯ ಜಯಕ್ಕೆ) **ಹಿ** ಕಾರಣವು **ಹಿ** ಯಾವ ಕಾರಣ **ತವ ಆಸನಂ** ನಿಮ್ಮ ಆಸನವು **ಪಾರಮೇಷ್ಠ್ಯಂ** ಅತ್ಯಂತ ಸುಖಕ್ಕೆ ಕಾರಣವೋ ಆ ಕಾರಣದಿಂದ (ಅತ್ಯುತ್ತಮಪದವಿಯಾದ್ದರಿಂದ) ಹಿರಣ್ಯಕಶಿಪುವು ಅದನ್ನೇ ಅಪೇಕ್ಷಿಸಿದನು.

ಬ್ರಹ್ಮದೇವರನ್ನೇ ಕುರಿತು ತಪಸ್ಸು ಮಾಡಿ ಬ್ರಹ್ಮಪದವಿಯನ್ನು ಅಪೇಕ್ಷಿಸದನೆಂಬುದು ಅಸಂಭಾವಿತ. ಆದ್ದರಿಂದ ದೇವತೆಗಳು ಅವನಲ್ಲಿ ದ್ವೇಷ ಹುಟ್ಟಿಸಲು ಇಲ್ಲದಿರುವದನ್ನೇ ಹೇಳಿರುವರು ಎಂಬ ಶಂಕಾಪರಿಹಾರಕ್ಕೆ ಹಿರಣ್ಯಕಶಿಪುವು ಹಾಗೆ ಇಚ್ಛಿಸಿದನು ಎನ್ನುವ ವಿಷಯದಲ್ಲಿ ಪ್ರಮಾಣ ಹೇಳುವರುಃ-

**... ತಾತ್ಪರ್ಯ ...**

**ಭವಾಯ ಶ್ರೇಯಸೇ ಚೈವ ನ ಕಶ್ಚಿತ್ತದಪೇಕ್ಷತೇ ।**
**ಮಧುಕೈಟಭಯೋಶ್ಚೈವ ಹಿರಣ್ಯಾದೇಸ್ತಥೈವ ಚ ॥**

**ನಾನ್ಯೋ ಬ್ರಹ್ಮಪದಂ ವಾಂಛಂತಿ ಋಜೂನ್ ಯೋಗ್ಯಾನ್ ವಿನಾ ಕ್ವಚಿತ್ ।**
**ತತಃ ಶ್ರೇಯಾಂಸಿ ವಾಂಛಂತಿ ನ ತು ತತ್ಪದಮಾಪ್ನುಯುಃ ॥ ಇತಿ ಬ್ರಹ್ಮಾಂಡೇ ॥**

ಕುತ್ಸಿತರಾದ ಹಿರಣ್ಯಕಶಿಪುವೊದಲಾದವರು ಬ್ರಹ್ಮಪದವಿಯನ್ನು ಜ್ಞಾನಾದಿವೃದ್ಧಿಗಾಗಿ ಆಗಲೀ ಮೋಕ್ಷಕ್ಕಾಗಿಯಾಗಲೀ ಅಪೇಕ್ಷಿಸುವದಿಲ್ಲ. (ಆಧಿ-ಪತ್ಯಕ್ಕಾಗಿಯೇ ಬ್ರಹ್ಮಪದವಿಯನ್ನು ಇಚ್ಛಿಸುತ್ತಾರೆ.)ಯೋಗ್ಯರಾದ ಋಜುಗಳನ್ನು ಬಿಟ್ಟು ಮಧುಕೈಟಭರು ಹಿರಣ್ಯಕಶಿಪು ಮೊದಲಾದ ಅಯೋಗ್ಯರನ್ನು ಬಿಟ್ಟು ಬೇರೆಯವರು ಬ್ರಹ್ಮಪದವಿಯನ್ನು ಆಧಿಪತ್ಯಕ್ಕಾಗಿಯೂ ಇಚ್ಛಿಸುವದಿಲ್ಲ. ಆದಕಾರಣ ಹಿರಣ್ಯಕಶಿಪು ಮೊದಲಾದವರು ಆ ಬ್ರಹ್ಮಪದವಿಯನ್ನು ಆಧಿಪತ್ಯಕ್ಕಾಗಿಯೇ ಇಚ್ಛಿಸುತ್ತಾರೆ. ಬೇರೆಯವರು ಶ್ರೇಯಸ್ಸನ್ನು ಅಪೇಕ್ಷಿಸುವರೆ ಹೊರತು ಆ ಪದವಿಯನ್ನು ಪಡೆಯಲು ಅಪೇಕ್ಷಿಸುವದಿಲ್ಲ. ಒಟ್ಟು ಯೋಗ್ಯರಲ್ಲಿ ಋಜುಗಣಸ್ಥರು. ಅಯೋಗ್ಯರಲ್ಲಿ ಮಧುಕೈಟಭಹಿರಣ್ಯಕಶಿಪು ಮೊದಲಾದವರು ಮಾತ್ರ ಬ್ರಹ್ಮಪದವಿಯನ್ನು ಅಪೇಕ್ಷಿಸುವರು. ಬೇರೆಯವರು ಅಪೇಕ್ಷಿಸುವದಿಲ್ಲವೆಂದಂತಾಯಿತು ಎಂದು ಬ್ರಹ್ಮಾಂಡದಲ್ಲಿದೆ.

ಪುನರುಕ್ತಿಪರಿಹಾರಕ್ಕಾಗಿ ಅರ್ಥಭೇದ ತಿಳಿಸುವರು.

**ಭವೋ ವೃದ್ಧಿಃ ಸಮುದ್ದಿಷ್ಟಾ ಶ್ರೇಯೋ ಮೋಕ್ಷ ಉದಾಹೃತಃ ।**
**ವೃದ್ಧಸ್ಯ ನ ಪುನರ್ಹ್ರಾಸಃ ಭೂತಿರಿತ್ಯೇವ ಕಥ್ಯತೇ ॥ ಇತಿ ಶಬ್ದನಿರ್ಣಯೇ ॥**

**ಸಕಾಮಂ ತು ತಪಃ ಕ್ರೂರಂ ಲೋಕಾನಾಂ ಭಯಕೃದ್ಭವೇತ್ ।**
**ಇತರಚ್ಛಾಂತಯೇ ಸರ್ವಲೋಕಾನಾಂ ಭವತಿ ಧ್ರುವಮ್ ॥**
**ಇತಿ ಪ್ರಕಾಶಿಕಾಯಾಮ್ ॥**

**ಬ್ರಹ್ಮಾಣಮಭಜತ್ ಬ್ರಹ್ಮ ಪದಾರ್ಥಂ ಸ ಹಿರಣ್ಯಕಃ ॥ ಇತಿ ಸ್ಕಾಂದೇ ॥೧೪॥**

ಭವ ಎಂದರೆ ಜ್ಞಾನಾಭಿವೃದ್ಧಿ. ಶ್ರೇಯಸ್ಸೆಂದರೆ ಮೋಕ್ಷ, ಭೂತಿ ಎಂದರೆ ಸಮೃದ್ಧವಾದುದಕ್ಕೆ ಮತ್ತೆ ಹ್ರಾಸವಿಲ್ಲದಿರುವದು ಎಂದು ಶಬ್ದನಿರ್ಣಯದಲ್ಲಿದೆ.

**ಇತಿ ವಿಜ್ಞಾಪಿತೋ ದೇವೈರ್ಭಗವಾನಾತ್ಮಭೂರ್ನೃಪ ।**
**ಪರೀತೋ ಭೃಗುದಕ್ಷಾದ್ಯೈರ್ಯಯೌ ದೈತ್ಯೇಶ್ವರಾಶ್ರಮಮ್ ॥೧೫॥**

ನೃಪ ಧರ್ಮರಾಜನೇ **ದೇವೈಃ** ದೇವತೆಗಳಿಂದ ಇತಿ ಮೇಲೆ ಹೇಳಿದಂತೆ **ವಿಜ್ಞಾಪಿತಃ** ಬಿನ್ನವಿಸಿಕೊಂಡ **ಭಗವಾನ್** ಜ್ಞಾನಭಕ್ತ್ಯಾದಿಗುಣಪೂರ್ಣರಾದ **ಆತ್ಮಭೂಃ** ಶ್ರೀಹರಿಯಿಂದ ಜನಿಸಿದ ಬ್ರಹ್ಮದೇವರು **ಭೃಗುದಕ್ಷಾದ್ಯೈಃ** ಭೃಗುದಕ್ಷ ಮೊದಲಾದವರಿಂದ **ಪರೀತಃ** ಸುತ್ತುವರಿಯಲ್ಪಟ್ಟು **ದೈತ್ಯೇಶ್ವರಾಶ್ರಮಂ** ಹಿರಣ್ಯಕಶಿಪುವಿನ ಆಶ್ರಮವನ್ನು ಕುರಿತು **ಯಯೌ** ಹೋದರು. ॥೧೫॥

**ತಂ ದದರ್ಶ ಪ್ರತಿಚ್ಛನ್ನಂ ವಲ್ಮೀಕತೃಣಕೀಚಕೈಃ ।**
**ಪಿಪೀಲಿಕಾಭಿರಾಕೀರ್ಣಂ ಮೇದತ್ವಙ್ಮಾಂಸಶೋಣಿತಮ್ ॥೧೬॥**

**ವಲ್ಮೀಕ** ಹುತ್ತು **ತೃಣ** ಹುಲ್ಲು **ಕೀಚಕೈಃ** ಗಾಳಿತುಂಬಿ ಶಬ್ದಮಾಡುವ ಬಿದುರುಗಳ ತಳೆಯಿಂದ **ಪ್ರತಿಚ್ಛನ್ನಂ** ಮುಚ್ಚಿ ಹೋಗಿದ್ದ **ಪಿಪೀಲಿಕಾಭಿಃ** ಇರುವೆಗಳಿಂದ **ಆಕೀರ್ಣಂ** ವ್ಯಾಪ್ತವಾದ **ಮೇದತ್ವಙ್ಮಾಂಸಶೋಣಿತಂ** ದೇಹದಲ್ಲಿ ಕೆಲವೆಡೆ ಕೇವಲ ಮೇದಸ್ಸು, ಕೆಲವೆಡೆ ಚರ್ಮ, ಕೆಲವೆಡೆ ಮಾಂಸ, ಕೆಲವೆಡೆ ರಕ್ತವುಳ್ಳ ('ಆಕೀರ್ಣಮೇದತ್ವಙ್' ಎಂಬ ಸಮಸ್ತಪದವಿದ್ದ ಪಾಠದಲ್ಲಿ ಆಕೀರ್ಣ ಎಂಬುದು ಮೇದಸ್ಸು ಮೊದಲಾದವುಗಳಿಗೆ ವಿಶೇಷಣ. ಇರುವೆಗಳಿಂದ ವ್ಯಾಪ್ತವಾದ (ತಿನ್ನಲ್ಪಟ್ಟ) ಮೇದಸ್ಸು ಚರ್ಮರಕ್ತಮಾಂಸಗಳುಳ್ಳ ಎಂದರ್ಥ). **ತಂ** ಹಿರಣ್ಯಕಶಿಪುವನ್ನು **ದದರ್ಶ** ನೋಡಿದರು. ॥೧೬॥

**ತಪಂತಂ ತಪಸಾ ಲೋಕಾನ್ಯಥಾ ಭಾವಿತತಂ ರವಿಮ್ ।**
**ವಿಲಕ್ಷ್ಯ ವಿಸ್ಮಿತಃ ಪ್ರಾಹ ಹಸಂಸ್ತಂ ಹಂಸವಾಹನಃ ॥೧೭॥**

**ಭಾವಿತತಂ** ಪ್ರಕಾಶದಿಂದ ವ್ಯಾಪ್ತನಾದ **ರವಿಂ ಯಥಾ** ಸೂರ್ಯನಂತೆ **ತಪಸಾ** ತಾನು ಮಾಡುತ್ತಿರುವ ಕರ್ಮ ಸಕಾಮವಾದ್ದರಿಂದ ಕ್ರೂರವಾದ ತಪಸ್ಸಿನಿಂದ **ಲೋಕಾನ್** ಲೋಕಗಳನ್ನು (ಪ್ರಜೆಗಳನ್ನು) **ತಪಂತಂ** ಸಂತಾಪಗೊಳಿಸುತ್ತಿರುವ **ತಂ**

ಹಿರಣ್ಯಕಶಿಪುವನ್ನು **ವಿಲಕ್ಷ್ಯ** ನೋಡಿ **ವಿಸ್ಮಿತಃ** ಆಶರ್ಯಪಟ್ಟವರಾಗಿ **ಹಂಸವಾಹನಃ** ಬ್ರಹ್ಮದೇವರು **ಹಸನ್** ಆಹಾ! ದೈತ್ಯರಿಗೆ ಅಯೋಗ್ಯವಸ್ತುವಿನಲ್ಲಿ ಅತಿಶಯ ಪ್ರಯತ್ನ ಎಂದಾಲೋಚಿಸಿ ಮುಗುಳುನಗೆ ನಗುತ್ತ **ತಂ** ಹಿರಣ್ಯಕಶಿಪುವನ್ನು ಕುರಿತು **ಪ್ರಾಹ** ಅವನಿಗೆ ಸಮಾಧಾನವಾಗುವಂತೆ ಹೇಳಿದರು. ||೧೭||

**ಬ್ರಹ್ಮೋವಾಚ**

**ಉತ್ತಿಷ್ಠೋತ್ತಿಷ್ಠ ಭದ್ರಂ ತೇ ತಪಸ್ಸಿದ್ಧೋಽಸಿ ಕಾಶ್ಯಪ ।**
**ವರದೋಽಹಮನುಪ್ರಾಪ್ತೋ ವ್ರಿಯತಾಮೀಪ್ಸಿತೋ ವರಃ ||೧೮||**

**ಹೇ ಕಾಶ್ಯಪ** ಕಶ್ಯಪ ಪುತ್ರನಾದ ಹರಿಣ್ಯಕಶಿಪುವೇ **ಉತ್ತಿಷ್ಠ ಉತ್ತಿಷ್ಠ** ಏಳು ಏಳು **ತೇ** ನಿನಗೆ **ಭದ್ರಂ** ಒಳ್ಳೆಯದಾಗಲಿ **ತಪಸ್ಸಿದ್ಧಃ ಅಸಿ** ತಪಸ್ಸಿನಿಂದ ಸಿದ್ಧಿಯುಳ್ಳವನಾಗಿರುವಿ **ವರದಃ ಅಹಂ** ವರಕೊಡುವ ನಾನು **ಅನುಪ್ರಾಪ್ತಃ** ಬಂದಿರುವೆನು **ಈಪ್ಸಿತಃ** ಇಷ್ಟವಾದ **ವರಃ** ವರವು **ವ್ರಿಯತಾಂ** ವರಿಸಲ್ಪಡಲಿ. ವರವನ್ನು ಕೇಳೆಂದರ್ಥ. ||೧೮||

**ಅದ್ರಾಕ್ಷಮಹಮೇತತ್ತೇ ಹೃತ್ಸಾರಂ ಮಹದದ್ಭುತಮ್ ।**
**ದಂಶಭಕ್ಷಿತದೇಹಸ್ಯ ಪ್ರಾಣಾ ಹ್ಯಸ್ಥಿಷು ಶೇರತೇ ||೧೯||**

**ಅಹಂ** ನಾನು **ತೇ** ನಿನ್ನ **ಮಹದದ್ಭುತಂ** ಅತ್ಯಂತ ಆಶ್ಚರ್ಯಕರವಾದ **ಏತತ್** ಈ **ಹೃತ್ಸಾರಂ** ಮನೋದಾರ್ಢ್ಯವನ್ನು **ಅದ್ರಾಕ್ಷಂ** ತಿಳಿದಿದ್ದೇನೆ. **ದಂಶಭಕ್ಷಿತದೇಹಸ್ಯ** ಮಕ್ಷಿಕಾ ವಿಶೇಷದಿಂದ (ಮರಕುಟಹಕ್ಕಿಯಿಂದ) ಕಿತ್ತಿತಿಂದ ಮಾಂಸಯುಕ್ತವಾದ ದೇಹವುಳ್ಳ **ತೇ** ನಿನ್ನ **ಪ್ರಾಣಾಃ** ಪ್ರಾಣಗಳು **ಅಸ್ಥಿಷು** ಎಲುಬುಗಳಲ್ಲಿ **ಶೇರತೇ ಹಿ** ಮಲಗಿವೆ (ಸೇರಿಕೊಂಡಿವೆ ಎಂದರ್ಥ.) ಅಸ್ಥಿಗತಪ್ರಾಣನಾದರೂ ತಪಸ್ಸು ಬಿಡದಿರುವ ನಿನ್ನ ಮನೋದಾರ್ಢ್ಯವು ಅತ್ಯಂತ ಅದ್ಭುತವೆಂದರ್ಥ. ||೧೯||

**ನೈತತ್ಪೂರ್ವರ್ಷಯಶ್ಚಕ್ರುರ್ನ ಕರಿಷ್ಯಂತಿ ಚಾಪರೇ ।**
**ನಿರಂಬುರ್ಧಾರಯೇತ್ಪ್ರಾಣಾನ್ ಕೋ ವೈ ದಿವ್ಯಸಮಾಃ ಶತಮ್ ||೨೦||**

**ಏತತ್** ಈ ಬಗೆಯ ತಪಸ್ಸನ್ನು **ಪೂರ್ವರ್ಷಯಃ** ಹಿಂದಿನ ಋಷಿಗಳು **ನ ಚಕ್ರುಃ** ಮಾಡಲಿಲ್ಲ **ಅಪರೇ ಚ** ಈಗಿನವರಾಗಲಿ ಮುಂದೆ ಬರುವವರಾಗಲಿ **ನ ಕರಿಷ್ಯಂತಿ** ಮಾಡುವದಿಲ್ಲ **ಕಃ** ಯಾವನು **ಶತಂ ದಿವ್ಯಸಮಾಃ** ಒಂದೂ ದಿನ ಕಡಿಮೆ ಇಲ್ಲದ ನೂರು ದೇವಮಾನ ವರ್ಷಗಳಲ್ಲಿಯೂ **ನಿರಂಬುಃ** ನೀರನ್ನೇ ಕುಡಿಯದೇ **ಪ್ರಾಣಾನ್** ಪ್ರಾಣಗಳನ್ನು **ಧಾರಯೇತ್ ವೈ** ಧರಿಸಿಯಾನು. ||೨೦||

**ವ್ಯವಸಾಯೇನ ತೇಽನೇನ ದುಷ್ಕರೇಣಾಮನಸ್ವಿಭಿಃ ।**
**ತಪೋನಿಷ್ಠೇನ ಭವತಾ ಜಿತೋಽಹಂ ದಿತಿನಂದನ ||೨೧||**

**ದಿತಿನಂದನ** ದಿತಿದೇವಿಗೆ ಆನಂದಕರನಾದ ಹಿರಣ್ಯಕಶಿಪುವೇ **ಅಮನಸ್ವಿಭಿಃ** ಮನೋದಾರ್ಢ್ಯವಿಲ್ಲದವರಿಂದ **ದುಷ್ಕರೇಣ** ಮಾಡಲಾಗದ **ಅನೇನ** ಈ **ತೇ** ನಿನ್ನ **ವ್ಯವಸಾಯೇನ** ಪ್ರಯತ್ನದಿಂದ **ತಪೋನಿಷ್ಠೇನ** ತಪಸ್ಸಿನಲ್ಲಿಯೇ ನಿರತನಾದ **ಭವತಾ** ನಿನ್ನಿಂದ **ಅಹಂ** ಪರಮೇಷ್ಠಿಯಾದ ನಾನು **ಜಿತಃ** ವಶೀಕೃತನಾಗಿರುವೆನು.

ಜಿತಃ ಎಂದರೆ ಪರಾಜಿತ ಸೋಲುವದು ಎಂದರ್ಥವಲ್ಲವೆಂದು ತಿಳಿಸಲು ವಿವಕ್ಷಿತ ಅರ್ಥವನ್ನು ತಿಳಿಸುವರು-

**... ತಾತ್ಪರ್ಯ ...**

**ಜಿತಃ ವಶೀಕೃತಃ ।**

**ಪರಾಭೂತಂ ವಶಸ್ಥಂ ಚ ಜಿತಮಿತ್ಯುಚ್ಯತೇ ಬುಧೈಃ ।। ಇತಿ ಶಬ್ದನಿರ್ಣಯೇ ।।**

**ತತಸ್ತ ಆಶಿಷಃ ಸರ್ವಾ ದದಾನ್ಯಸುರಪುಂಗವ ।**
**ಮರ್ತ್ಯಸ್ಯ ತೇ ಹ್ಯಮರ್ತ್ಯಸ್ಯ ದರ್ಶನಂ ನ ಚ ನಿಷ್ಫಲಮ್ ।।೨೨।।**

**ಅಸುರಪುಂಗವ** ಅಸುರಶ್ರೇಷ್ಠನೇ **ತತಃ** ನಿನ್ನ ತಪಸ್ಸಿಗೆ ಒಲಿದಿರುವದರಿಂದ **ಸರ್ವಾಃ ಆಶಿಷಃ** ನಿನ್ನ ಎಲ್ಲ ಆಶೆಗಳನ್ನು **ದದಾಮಿ** ಕೊಡುವೆನು. **ಹಿ** ಏಕೆಂದರೆ **ಮರ್ತ್ಯಸ್ಯ ತೇ** ಮರಣ ಸ್ವಭಾವದ ನಿನಗೆ **ಅಮರ್ತ್ಯಸ್ಯ ಮೇ** ಸಾವಿಲ್ಲದ ನನ್ನ **ದರ್ಶನಂ ಚ** ದರ್ಶನವಾದರೂ **ನ ನಿಷ್ಫಲಂ** ವ್ಯರ್ಥವಲ್ಲ. ।।೨೨।।

**ನಾರದ ಉವಾಚ**

**ಇತ್ಯುಕ್ತ್ವಾಽಽದಿಭವೋ ದೇವೋ ಭಕ್ಷಿತಾಂಗಂ ಪಿಪೀಲಿಕೈಃ ।**
**ಕಮಂಡಲುಜಲೇನೌಕ್ಷದ್ದಿವ್ಯೇನಾಮೋಘರಾಧಸಾ ।।೨೩।।**

**ಆದಿಭವಃ** ಸರ್ವಕ್ಕೂ ಕಾರಣನಾದ, ಶ್ರೀಹರಿಯಿಂದ ಜನ್ಮವುಳ್ಳ. ಅಂದರೆ ಮೊದಲು ಹುಟ್ಟಿದ **ದೇವಃ** ಬ್ರಹ್ಮದೇವರು **ಇತಿ** ಮೇಲೆ ಹೇಳಿದಂತೆ **ಉಕ್ತ್ವಾ** ಮಾತನಾಡಿ **ಪಿಪಿಲಿಕೈಃ** ಇರುವೆಗಳಿಂದ (ಗೆದ್ದಲೂ ಹುಳದಿಂದ) **ಭಕ್ಷಿತಾಂಗಂ** ತಿನಲ್ಪಟ್ಟ ಶರೀರವುಳ್ಳ (ಅವಯವವುಳ್ಳ) **ತಂ** ಹಿರಣ್ಯಕಶಿಪುವನ್ನು **ಅಮೋಘರಾಧಸಾ** ವ್ಯರ್ಥವಲ್ಲದ ಸಿದ್ಧಿಯುಳ್ಳ ಆದ್ದರಿಂದಲೇ **ದಿವ್ಯೇನ** ಶ್ರೇಷ್ಠವಾದ **ಕಮಂಡಲುಜಲೇನ** ಕಮಂಡಲುವಿನ ನೀರಿನಿಂದ **ಔಕ್ಷತ್** ಪ್ರೋಕ್ಷಿಸಿದನು. ।।೨೩।।

**ತತಃ ಕೀಚಕವಲ್ಮೀಕಾತ್ಸಹಓಜೋಬಲಾನ್ವಿತಃ ।**
**ಸರ್ವಾವಯವಸಂಪನ್ನೋ ವಜ್ರಸಂಹನನೋ ಯುವಾ ।।**
**ಉತ್ಥಿತಸ್ತಪ್ತಹೇಮಾಭೋ ವಿಭಾವಸುರಿವೈಧಸಃ ।।೨೪।।**

**ಸಃ** ಇರುವೆಗಳು ತಿಂದು ಹೋಗಿದ್ದ ಶರೀರವುಳ್ಳ ಹಿರಣ್ಯಕಶಿಪುವು **ಸಹಓಜೋಬಲಾನ್ವಿತಃ** ಸಹಸ್ಸು ಓಜಸ್ಸು ಬಲಗಳಿಂದ ಕೂಡಿದವನಾಗಿ **ಸರ್ವಾವಯವಸಂಪನ್ನಃ** ಎಲ್ಲ ಅವಯವಗಳಿಂದ ಕೂಡಿದವನಾಗಿ **ತಪ್ತಹೇಮಾಭಃ** ಪುಟಕ್ಕೆ ಹಾಕಿದ ಬಂಗಾರದಂತೆ ಕಾಂತಿಯುಳ್ಳವನಾಗಿ **ವಜ್ರಸಂಹನನಃ** ವಜ್ರದಂತೆ ದೃಢಕಾಯನಾಗಿ **ಯುವಾ** ಯುವಕನಾಗಿ **ಏಧಸಃ** ಕಟ್ಟಿಗೆಯಿಂದ **ವಿಭಾವಸುಃ** ಇವ ಅಗ್ನಿಯಂತೆ **ತತಃ ಕೀಚಕವಲ್ಮೀಕಾತ್** ಆ ದೇಹದ ಮೇಲೆ ಬೇಳದಿದ್ದ ಬಿದಿರು ಹುತ್ತುಗಳಿಂದ **ಉತ್ಥಿತಃ** ಎದ್ದು ಬಂದನು. ।।೨೪।।

**ಸ ನಿರೀಕ್ಷ್ಯಾಂಬರೇ ದೇವಂ ಹಂಸವಾಹನಮಾಸ್ಥಿತಮ್ ।**
**ನನಾಮ ಶಿರಸಾ ಭೂಮೌ ತದ್ದರ್ಶನಮಹೋತ್ಸವಃ ।।೨೫।।**

**ಸಃ** ಹಿರಣ್ಯಕಶಿಪುವು **ಅಂಬರೇ** ಆಕಾಶದಲ್ಲಿ **ಆಸ್ಥಿತಂ** ಇದ್ದ **ಹಂಸವಾಹನಂ** ಹಂಸವೇ ವಾಹನವಾಗಿವುಳ್ಳ **ದೇವಂ** ಬ್ರಹ್ಮದೇವರನ್ನು **ನಿರೀಕ್ಷ್ಯ** ಚೆನ್ನಾಗಿ ನೋಡಿ **ತದ್ದರ್ಶನಮಹೋತ್ಸವಃ** ಅವರ ದರ್ಶನದಿಂದ ಅತ್ಯಂತ ಸಂತಸಗೊಂಡು **ಭೂಮೌ ಶಿರಸಾ ನನಾಮ** ಭೂಮಿಯಲ್ಲಿಯೇ ತಲೆಬಾಗಿ ನಮಸ್ಕರಿಸಿದನು. ।।೨೫।।

**ಉತ್ಥಾಯ ಪ್ರಾಂಜಲಿಃ ಪ್ರಹ್ವ ಈಕ್ಷಮಾಣೋ ದೃಶಾ ವಿಭುಮ್ ।**
**ಹರ್ಷಾಶ್ರುಪುಲಕೋದ್ಭೇದೋ ಗಿರಾ ಗದ್ಗದಯಾಽಗೃಣತ್ ।।೨೬।।**

**ಉತ್ಥಾಯ** ಭೂಮಿಯಿಂದ ಎದ್ದು **ದೃಶಾ** ಕಣ್ಣುಗಳಿಂದ **ವಿಭುಂ** ಸಮರ್ಥರಾದ ಬ್ರಹ್ಮದೇವರನ್ನು **ಈಕ್ಷಮಾಣಃ** ನೋಡುವ **ಪ್ರಹ್ವಃ** ನಮ್ರನಾದ **ಪ್ರಾಂಜಲಿಃ** ಭಕ್ತಿಯಿಂದ ಕೈಜೋಡಿಸಿದ **ಹರ್ಷ** ಸಂತೋಷದ **ಅಶ್ರು** ಕಣ್ಣೀರು ಮತ್ತು **ಪುಲಕೋದ್ಭೇದಃ** ರೋಮಾಂಚವುಳ್ಳ **ಸಃ** ಆ ಹಿರಣ್ಯಕಶಿಪುವು **ಗದ್ಗದಯಾ ಗಿರಾ** ಬಿಗಿದ ಕಂಠದ ಮಾತಿನಿಂದ **ಅಗೃಣತ್** ಬ್ರಹ್ಮದೇವರನ್ನು ಸ್ತೋತ್ರ ಮಾಡಿದನು. ।।೨೬।।

**ಕಲ್ಪಾಂತೇ ಕಾಲಸೃಷ್ಟೇನ ಯೋಽಂಧೇನ ತಮಸಾಽಽವೃತಮ್ ।**
**ಅಭಿವ್ಯನಕ್ ಜಗದಿದಂ ಸ್ವಯಂಜ್ಯೋತಿಃ ಸ್ವರೋಚಿಷಾ ।।೨೭।।**

**ಆತ್ಮನಾ ತ್ರಿವೃತಾ ಚೇದಂ ಸೃಜತ್ಯವತಿ ಲುಂಪತಿ ।**
**ರಜಃಸತ್ವತಮೋಧಾಮ್ನೇ ಪರಾಯ ಮಹತೇ ನಮಃ ।।೨೮।।**

**ಕಲ್ಪಾಂತೇ** ಬ್ರಹ್ಮಕಲ್ಪದ ಕೊನೆಯಲ್ಲಿ (ಪ್ರಳಯದಲ್ಲಿ) **ಕಾಲಸೃಷ್ಟೇನ** ಪ್ರಲಯಕಾಲ ಪ್ರವರ್ತಕ ಶ್ರೀಹರಿಯಿಂದ ಸೃಷ್ಟವಾದ **ಅಂಧೇನ** ಕುರುಡುಗೊಳಿಸುವ **ತಮಸಾ** ದುರ್ಗಾದೇವಿಯಿಂದ ಅಭಿಮನ್ಯಮಾನವಾದ ಕತ್ತಲೆಯಿಂದ **ಆವೃತಂ**

ಮುಚ್ಚಿ ಹೋಗಿದ್ದ **ಇದಂ ಜಗತ್** ಈ ಜಗತ್ತನ್ನು **ಸ್ವಯಂಜ್ಯೋತಿಃ** ಸ್ವತಂತ್ರ ಪ್ರಕಾಶಸ್ವರೂಪನಾದ ಶ್ರೀಹರಿಯು **ಸ್ವರೋಚಿಷಾ** ತನ್ನ ಸಾಮರ್ಥ್ಯದಿಂದ **ಅಭಿವ್ಯನಕ್** ವ್ಯಕ್ತಗೊಳಿಸಿದನು. **ಚ** ಮತ್ತು **ಆತ್ಮನಾ** ತನ್ನಿಂದ ಕ್ಷೋಭೆಗೀಡಾದ **ತ್ರಿವೃತಾ** ತ್ರಿಗುಣಾತ್ಮಕವಾದ ತೇಜೋನಾಮಕವಾದ ಜಡಪ್ರಕೃತಿಯಿಂದ(ಉಪಾದಾನ ಮಾಡಿ) **ಇದಂ** ಜಗತ್ತನ್ನು ಮಹತ್ತತ್ವಾದಿಗಳನ್ನು **ಸೃಜತಿ** ರಜೋಗುಣದಿಂದ ಸೃಷ್ಟಿಸುವನು. **ಅವತಿ** ಸತ್ವಗುಣದಿಂದ ರಕ್ಷಿಸುವನು **ಲುಂಪತಿ** ತಮೋಗುಣವನ್ನಾಶ್ರಯಿಸಿ ಸಂಹರಿಸುವನು. **ತಸ್ಮೈ** ಅಂತಹ **ರಜಃಸತ್ವತಮೋಧಾಮ್ನೇ** ಸೃಷ್ಟಿಗೆ ರಜೋಗುಣ-ಪ್ರಧಾನವಾಗಿಯೂ, ಪಾಲನೆಗೆ ಸತ್ವಗುಣ ಪ್ರಧಾನವಾಗಿಯೂ ಸಂಹಾರಕ್ಕೆ ತಮೋಗುಣಪ್ರಧಾನವಾಗಿಯೂ ಮಾಡಿಕೊಂಡು ಅವುಗಳಿಗೆ ಆಧಾರನಾದ **ಪರಾಯ** ಸರ್ವೋತ್ತಮನಾದ **ಮಹತೇ** ಅಣೋರಣೀಯನು ಮಹತೋ ಮಹೀಯನೂ ಆದ ಶ್ರೀಹರಿಗೆ **ನಮಃ** ನಮಸ್ಕಾರವು. ಸೃಷ್ಟ್ಯಾದಿಕ್ರಮವನ್ನು ಅನುಸರಿಸಿ ರಜಃಸತ್ವತಮಸ್ಸೆಂದು ವಿಭಿನ್ನಕ್ರಮದಲ್ಲಿ ಹೇಳಿದ್ದು. 'ಅಣೋರಣೀಯಾನ್ ಮಹತೋ ಮಹೀಯಾನ್' ಎಂದು ಶ್ರುತಿಯಿದೆ. ಇದರಿಂದ ಸಿದ್ಧವಾದ ಉಭಯ ರೀತಿಯನ್ನು 'ಪರಾಯ ಮಹತೇ' ಎಂಬುದರಿಂದ ನೆನಪಿಸಿರುವರು. ಎದುರಿಗೆ ಕಣ್ಣಿಗೆ ಕಾಣುವ ಬ್ರಹ್ಮದೇವರನ್ನು ತಿಳಿಸದಿರುವ ಈ ಸ್ತೋತ್ರದಿಂದೇನು ಎಂದು ಇದರಲ್ಲಿ ಅಶ್ರದ್ಧೆ ಮಾಡಬಾರದು. **ಆತ್ಮನಾ** ಪರಮಾತ್ಮನಿಂದ ಪ್ರೇರಿತರಾದ ನೀವು ಉಪಾದಾನ ಕಾರಣವಾದ ಗುಣತ್ರಯಾತ್ಮಕಪ್ರಕೃತಿಯಿಂದ ರಜಸ್ಸೇ ಪ್ರಧಾನವಾದ್ದರಿಂದ ಸೃಷ್ಟಿಸುವಿರಿ, ಸತ್ವಗುಣಪ್ರಧಾನವಾದ್ದರಿಂದ ಮನ್ವಾದಿಗಳಿಂದ ಇದನ್ನು ಪಾಲನೆ ಮಾಡಿಸುವಿರಿ. ತಮಃ ಪ್ರಧಾನವಾದ್ದರಿಂದ ಹುಟ್ಟಿದ ರುದ್ರದೇವರಿಂದ ಜಗತ್ತನ್ನು ಸಂಹರಿಸುವಿರಿ. ಅಂತಹ ಮಹತ್ತತ್ವಾಭಿಮಾನಿಗಳಾದ **ಪರಾಯ** ರುದ್ರದೇವರಿಗಿಂತ ಉತ್ತಮರಾದ ಪೂಜ್ಯರಾದ ನಿಮಗೆ ನಮಸ್ಕಾರ ಹೀಗೆ ಕಾಣುವ ಬ್ರಹ್ಮದೇವರನ್ನು ಸ್ತುತಿಸಿರುವನೆಂದು ತಿಳಿಯಬಹುದು.

ಈ ಶ್ಲೋಕಗಳಲ್ಲಿ ಬ್ರಹ್ಮಸ್ತುತಿಯನ್ನು ಹಿರಣ್ಯಕಶಿಪು ಮಾಡುವನು. ಅವುಗಳಲ್ಲಿ ಬ್ರಹ್ಮನಲ್ಲಿ ಅಸಂಭಾವಿತಗಳಾದ ವಿಷ್ಣುಮಾತ್ರನಿಷ್ಠಗಳಾದ ಕೆಲವು ಧರ್ಮಗಳು ಹೇಳಲ್ಪಡುವವು. ಆದ್ದರಿಂದ ಇದು ಹೇಗೆ ಬ್ರಹ್ಮಸ್ತುತಿಯಾಗುವದು ಎಂದರೆ ಅಭಿಪ್ರಾಯವನ್ನು ಪ್ರಮಾಣದಿಂದ ತಿಳಿಸುವರುಃ-

**... ತಾತ್ಪರ್ಯ ...**

**ಪ್ರಾಯಸ್ತು ಸ್ತುತಿಶಬ್ದೇಷು ಮಿಶ್ರಾ ವಾಚೋ ಹರಿಂ ವಿನಾ ।**
**ಕೇಚಿಜ್ಜೀವಗುಣಾಸ್ತತ್ರ ತನ್ನಿಯಂತುರ್ಹರೇಃ ಪರೇ ॥**

**ಏಕಸ್ಥಾನ್ಯೈಕಕಾರ್ಯತ್ವಾದ್ವಿಷ್ಣೋಃ ಪ್ರಾಧಾನ್ಯತಸ್ತಥಾ ।**
**ಜೀವಸ್ಯ ತದಧೀನತ್ವಾನ್ನ ಭಿನ್ನಾಧಿಕೃತಂ ವಚಃ ॥ ಇತಿ ಬ್ರಹ್ಮತರ್ಕೇ॥**

**ತ್ರಿವೃತಾ ಪ್ರಕೃತ್ಯಾ ॥೧೯,೨೭॥**

ಕೇವಲ ಜೀವವಿಷಯಕಸ್ತೋತ್ರವನ್ನು ಕೇವಲ ಹರಿವಿಷಯಕಸ್ತೋತ್ರವನ್ನು ಬಿಟ್ಟು ಯಾವ ಸ್ತುತಿಶಬ್ದಗಳಿವೆಯೋ ಅಂತಹ ದೇವತಾಸ್ತುತಿಗಳಲ್ಲಿ ಜೀವೇಶ್ವರ ಮಿಶ್ರವಚನಗಳು(ಅಂದರೆ ಜೀವೇಶ್ವರರ ಗುಣಗಳನ್ನು ಹೇಳುವ ಶಬ್ದಗಳು) ಪ್ರಾಯಶಃ ಇರುತ್ತವೆ. ಮಿಶ್ರಸ್ತುತಿಗಳಲ್ಲಿ ಕೆಲವು ಜೀವರ ಗುಣಗಳು (ಅಂದರೆ ಅಮುಖ್ಯವಾಗಿ ಜೀವರಲ್ಲಿ ಸಂಭಾವಿತಗಳಾದ ಗುಣಗಳು)ಹೇಳಲ್ಪಡುತ್ತವೆ. ಜೀವರಲ್ಲಿ ಸರ್ವಥಾ ಕೂಡದಿರುವ ಯಾವ ಗುಣಗಳಿವೆಯೋ ಅವುಗಳು ಜೀವರ ನಿಯಾಮಕನಾದ ಶ್ರೀಹರಿಗೇನೇ ಹೇಳಲ್ಪಡುವವು (ಅಂದರೆ ಎಲ್ಲಾ ಸ್ತೋತ್ರಗಳೂ ಮುಖ್ಯವೃತ್ತಿಯಿಂದ ಶ್ರೀಭಗವಂತನನ್ನು ಹೇಳುತ್ತವೆ. ಫಲಕೊಡಲು ಅವನಿಗೆ ಮಾತ್ರ ಸಾತಂತ್ರ್ಯ ವಿರುವದಷ್ಟೇ. ಅಮುಖ್ಯವೃತ್ತಿಯಿಂದ ಆ ಶಬ್ದಗಳು ಜೀವರಲ್ಲಿಯೂ ಕೂಡುವದಾದರೆ ಜೀವರಲ್ಲಿಯೂ ಕೂಡಿಸಬೇಕು.) ಶರೀರವೆಂಬ ಒಂದು ಸ್ಥಾನದಲ್ಲಿದ್ದು ಜೀವೇಶ್ವರರು ಇಬ್ಬರೂ ಸ್ತೋತ್ರಮಾಡುವವನಿಗೆ ಪುರುಷಾರ್ಥವನ್ನು ಕೊಡುವದರಿಂದ ಅದರಲ್ಲಿ ಶ್ರೀವಿಷ್ಣುವಿಗೆ ಫಲಕೊಡುವದರಲ್ಲಿ ಪ್ರಾಧಾನ್ಯವಿದ್ದುದರಿಂದಲೂ ಜೀವರು ವಿಷ್ಣುವಿನ ಅಧೀನದಲ್ಲಿರುವದರಿಂದಲೂ ಜೀವಪರಮಾತ್ಮರ ಮಿಶ್ರಸ್ತುತಿರೂಪವಾಕ್ಯವು ಕೇವಲ ಶ್ರೀಹರಿಯನ್ನಾಗಲಿ ಕೇವಲ ಜೀವರನ್ನಾಗಲಿ ಹೇಳುವದಿಲ್ಲ. ಯಾರಲ್ಲಿ ಯಾವ ಯಾವ ಗುಣಗಳು ಸಂಭಾವಿತಗಳೋ ಅವುಗಳನ್ನು ಅವರವರಲ್ಲಿ ತಿಳಿಯಬೇಕು. ಇಬ್ಬರಿಗೂ ಸರ್ವಥಾ ಸಾಮ್ಯ ತಿಳಿಯಬಾರದು ಎಂದು ಬ್ರಹ್ಮತರ್ಕದಲ್ಲಿದೆ.

'ತ್ರಿವೃತಾ' ಎಂದರೆ ಮೂರುಗುಣಗಳನ್ನು ಸ್ವೀಕರಿಸುವದರಿಂದ ತ್ರಿವೃತ್ ಎನಿಸುವ ಪ್ರಕೃತಿಯಿಂದ ಎಂದರ್ಥ. ೨೬-೨೭ ಶ್ಲೋಕಗಳೆರಡು ಹರಿಮಾತ್ರ ಪರ. ಪ್ರಲಯ ಕಾಲದ ತಮಸ್ಸಿನ ನಾಶ, ಪ್ರಧಾನೋಪಾದಾನಕ ಸೃಷ್ಟಿಪಾಲನ ನಾಶಗಳು ಬ್ರಹ್ಮಕೃತವಾಗಲು ಸಾಧ್ಯವಿಲ್ಲ. ಮುಂದಿನವು ಉಭಯಪರ ಮಾಡಬಹುದು.

**ನಮ ಆದ್ಯಾಯ ಬೀಜಾಯ ಜ್ಞಾನವಿಜ್ಞಾನಮೂರ್ತಯೇ ।**
**ಪ್ರಾಣೇಂದ್ರಿಯಮನೋಬುದ್ಧಿವಿಕಾರೈರ್ವ್ಯಕ್ತಿಮೀಯುಷೇ ॥೨೮॥**

**ವಿಷ್ಣುಪರ ಅರ್ಥ** :- **ಆದ್ಯಾಯ** ಜಗತ್ತಿನ ಆದಿಯಲ್ಲಿ ವಾಸುದೇವ ರೂಪದಿಂದ (ಪುರುಷ) ವ್ಯಕ್ತನಾದ **ಬೀಜಾಯ** ವ್ಯಂಜಕನಾದ (ಕಾರಣನಾದ). (ಫಲರೂಪನಾದ) **ಜ್ಞಾನವಿಜ್ಞಾನಮೂರ್ತಯೇ** ಸಾಮಾನ್ಯಜ್ಞಾನವಿಶೇಷಜ್ಞಾನಗಳೇ ದೇಹವಾಗಿವುಳ್ಳ

**ಪ್ರಾಣ** ಪ್ರಾಣಾಪಾನವ್ಯಾನೋದಾನಸಮಾನ **ಇಂದ್ರಿಯ** ಐದುಜ್ಞಾನೇಂದ್ರಿಯಗಳು ಐದು ಕರ್ಮೇಂದ್ರಿಯಗಳು **ಮನಃ** ಮನಸ್ಸು ಬುದ್ಧಿಗಳೆಂಬ **ವಿಕಾರೈಃ** ಹದಿನೇಳು ಬಗೆಯ ವಿಕಾರಗಳಿಂದ **ವ್ಯಕ್ತಿಂ** ಬ್ರಹ್ಮಾಂಡದ ಒಳಗೆ ವಿರಾಟಪುರುಷರೂಪದಿಂದ ಪ್ರಕಾಶವನ್ನು **ಈಯುಷೇ** ಹೊಂದಿದ ನಿನಗೆ ನಮಸ್ಕಾರ.

**ಬ್ರಹ್ಮಪರ ಅರ್ಥ** ಃ- **ಆದ್ಯಾಯ** ಆದಿಕರ್ತೃವಾದ (ಶ್ರೀಮನ್ನಾರಾಯಣನಿಂದ ಹುಟ್ಟಿದ) **ಬೀಜಾಯ** ಜಗತ್ತಿನ ಉತ್ಪತ್ತಿಯ ಬೀಜಶಕ್ತಿಯನ್ನು ಹೊಂದಿದ **ಜ್ಞಾನವಿಜ್ಞಾನಮೂರ್ತಯೇ** ಜ್ಞಾನವಿಜ್ಞಾನಗಳನ್ನು ಉಪದೇಶಿಸುವ ದೇಹವುಳ್ಳ **ಪ್ರಾಣೇಂದ್ರಿಯಮನೋಬುದ್ಧಿವಿಕಾರೈಃ ವ್ಯಕ್ತಿಂ ಈಯುಷೇ** ಪ್ರಾಣಾದಿ ಹದಿನೇಳು ವಿಕಾರಗಳಿಂದ ಬ್ರಹ್ಮಾಂಡದೊಳಗೆ ವಿರಾಟ್ ಪುರುಷನಾಗಿ ವ್ಯಕ್ತರಾದ ಚತುರ್ಮುಖ ಬ್ರಹ್ಮದೇವರಿಗೆ ನಮಸ್ಕಾರ. ॥೨೯॥

**ತ್ವಮೀಶಿಷೇ ಜಗತಸ್ತಸ್ಥುಷಶ್ಚ**
**ಪ್ರಾಣೇನ ಮುಖ್ಯೇನ ಪತಿಃ ಪ್ರಜಾನಾಮ್ ।**
**ಚಿತ್ತಸ್ಯ ಚಿತ್ತಿರ್ಮನ ಇಂದ್ರಿಯಾಣಾಂ**
**ಪತಿರ್ಮಹಾಭೂತಗುಣಾಶಯೇಶಃ ॥೩೦॥**

**ವಿಷ್ಣುಪರ ಅರ್ಥ** ಃ- **ಮುಖ್ಯಪ್ರಾಣೇನ ಸಹ** ಮುಖ್ಯವಾಯುವಿನಿಂದ ಸಹಿತವಾದ **ಜಗತಃ** ಪ್ರಾಣಿ ಸಮೂಹಕ್ಕೂ **ಚ** ಮತ್ತು **ತಸ್ಥುಷಃ** ಸ್ಥಾವರ ಪ್ರಪಂಚಕ್ಕೂ **ತ್ವಂ** ನೀನೇ (ವಿಷ್ಣುವೇ) **ಈಶಿಷೇ** ಪ್ರವರ್ತಕನಾಗಿರುವಿ. **ಪ್ರಜಾನಾಂ** ಜೀವರಾಶಿಗಳ **ಪತಿಃ** ಪಾಲಕನು ನೀನು **ಚಿತ್ತಸ್ಯ** ಮನಸ್ಸಿನ ಪ್ರಭೇದವಾದ ಚಿತ್ತಕ್ಕೆ **ಚಿತ್ತಿಃ** ಸ್ಮರಣಶಕ್ತಿಯನ್ನು ಕೊಡುವವನು. ಸಾಕ್ಷಿಯು ನೀನು. **ಇಂದ್ರಿಯಾಣಾಂ ಪತಿಃ** ಇಂದ್ರಿಯಗಳಿಗೆ ಪಾಲಕನು **ಮನಃ** ವಿಷಯ ಸಂಬಂಧವನ್ನು ಉಂಟುಮಾಡುವವನು ನೀನು **ಮಹಾಭೂತಗುಣಾಶಯೇಶಃ** ಪಂಚಮಹಾಭೂತಗಳಿಗೂ ಸತ್ವಾದಿಗುಣಗಳ ಅವುಗಳ ಕಾರ್ಯವಾದ ಶಬ್ದಾದಿಗಳಿಗೆ ಮತ್ತು ಮನಸ್ಸಿಗೆ ಪ್ರವರ್ತಕನು.

**ಬ್ರಹ್ಮಪರ ಅರ್ಥ** ಃ-ಮುಖ್ಯಪ್ರಾಣರಿಂದ ಸಹಿತರಾದ ನೀವು ಚರಾಚರಪ್ರಪಂಚಕ್ಕೆ ಪ್ರವರ್ತಕರು. ಮುಂತಾಗಿ ಅರ್ಥ. ವಾಯುದೇವರು ಚತುರ್ಮುಖ ಸಮಾನರಾದ್ದರಿಂದ ಈಶಿತೃಕೋಟಿಯಲ್ಲಿ ಪ್ರವೇಶ ಹೊರತು ಈಶಿತವ್ಯಕೋಟಿಯಲ್ಲಿ ಅಲ್ಲ. ಹರಿಪರವಾದಾಗ ಈಶಿತವ್ಯಕೋಟಿಯಲ್ಲಿ ಪ್ರವೇಶವೆಂದು ತಿಳಿಯಬೇಕು.

ಇಲ್ಲಿ ಪ್ರಾಣೇನ ಎಂಬುದಕ್ಕೆ ಪ್ರಾಣನಿಮಿತ್ತವಾಗಿ ಎಂದರ್ಥ ತೋರದಿರಲೆಂದು ವ್ಯಾಖ್ಯಾನ ಮಾಡುವರುಃ-

... **ತಾತ್ಪರ್ಯ** ...

**ಪ್ರಾಣೇನ ಸಹ ।**

'ಸಹಾರ್ಥೇ ತೃತೀಯಾ' ಎಂದು ಭಾವ. ॥೩೦॥

**ತ್ವಂ ಸಪ್ತತಂತೂನ್ ವಿತನೋಷಿ ತನ್ವಾ**
**ತ್ರಯ್ಯಾ ಚತುರ್ಹೋತ್ರಕವಿದ್ಯಯಾ ಚ ।**
**ತ್ವಮೇಕ ಆತ್ಮಾಽಽತ್ಮವತಾಮನಾದಿ-**
**ರನಂತಪಾರಃ ಕವಿರವ್ಯಯಾತ್ಮಾ ॥೩೧॥**

... **ತಾತ್ಪರ್ಯ** ...

**ಸಪ್ತತಂತೂನ್ ಸಪ್ತಕ್ರತೂನ್** ॥೩೧॥

**ತ್ವಂ** ನೀನು **ತನ್ವಾ** ನಿನ್ನ ಪ್ರತಿಮೆಯಾದ **ತ್ರಯ್ಯಾ** ಋಗ್ಯಜುಸ್ಸಾಮವೇದಗಳಿಂದಲೂ **ಚತುರ್ಹೋತ್ರಕವಿದ್ಯಯಾ ಚ** ಚಾತುರ್ಹೋತ್ರವೆಂಬ ಮಂತ್ರದಿಂದ ಪ್ರಕಾಶ್ಯವಾದ ಯಜ್ಞವಿಷಯಕ ವಿದ್ಯೆಯಿಂದಲೂ, ಬ್ರಹ್ಮ, ಹೋತೃ, ಅಧ್ವರ್ಯು, ಆಗ್ನೀಧ್ರರೆಂಬ ನಾಲ್ವರು ಋತ್ವಿಕ್‌ಗಳ ವ್ಯಾಪಾರವನ್ನು ಹೇಳುವ ಕಲ್ಪಸೂತ್ರ ಮೊದಲಾದ ವಿದ್ಯೆಗಳಿಂದ **ಸಪ್ತತಂತೂನ್** ಯಾಗಗಳನ್ನು **ವಿತನೋಷಿ** ವಿಸ್ತರಿಸುವಿ. ಮಾಡುವಿ ಎಂದು ಅರ್ಥ. ದ್ರವ್ಯ,ಮಂತ್ರ,ಕ್ರಿಯಾ, ದೇವತೆಗಳಲ್ಲಿ ಇರುವದರಿಂದಲೂ, ಹೊರಗೆ ಉಪದೇಶಕನಾಗಿ ಇರುವದರಿಂದಲೂ ಕರ್ತೃವಾಗಿ ಕರ್ತೃವಿನಲ್ಲಿ ಇರುವದರಿಂದಲೂ ಕರ್ತೃವಿನಲ್ಲಿ ಇರುವದರಿಂದಲೂ, ಮಾಡಿಸುವದರಿಂದಲೂ ಶಸ್ತ್ರ ಇಜ್ಯಾ, ಸ್ತುತಿ ಪ್ರಾಯಶ್ಚಿತ್ತ ಮೊದಲಾದ ರೂಪದಿಂದಲೂ ಯಾಗವನ್ನು ಮಾಡಿಸುವಿ ಎಂದರ್ಥ. 'ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಮೃತ್ವಿಜಂ ಹೋತಾರಂ ರತ್ನಧಾತಮಂ' ಮೊದಲಾದ ಶ್ರುತಿಯಿದೆ. 'ಯಜ್ಞಸವೋಽಧರೋ ಯಾಗ ಸಪ್ತತಂತುರ್ಮಖಃ ಕ್ರತುಃ' ಎಂದು ಯಾಗಕ್ಕೆ ಹೆಸರುಗಳು. **ತ್ವಂ** ಇಂತಹ ನೀನು **ಏಕಃ** ಒಬ್ಬನೇ **ಆತ್ಮವತಾಂ** ಆತ್ಮಜ್ಞಾನಿಗಳಿಗೆ **ಆತ್ಮಾ** ಅತ್ಯಂತ ಪ್ರಿಯನು **ಅನಾದಿಃ** ಕಾರಣ ರಹಿತನಾದ, ಪುರಾತನನು, **ಅನಂತಪಾರಃ** ಅಪ್ರಮೇಯನು ಅನಂತವಾದ ಸಂಸಾರವನ್ನು ದಾಟಿಸುವವನು. ದೇಶಕಾಲಗಳಿಂದ ಕೊನೆಯಿಲ್ಲದವನು **ಅವ್ಯಯಾತ್ಮಾ** ನಾಶವಿಲ್ಲದ ದೇಹವುಳ್ಳವನು ಮುಕ್ತರಿಗೆ ಸ್ವಾಮಿಯು **ಕವಿಃ** ಸರ್ವಜ್ಞನು

ಆತ್ಮಾ ಪ್ರೇಷ್ಠೇ ಸ್ವರೂಪೇ ಚ ಜೀವೇ ಜ್ಞಾತರಿ ಕೇಶವೇ ।
ವಾಯೌ ದೇಹೇ ಸ್ವಯಂ ಸ್ವಾಂತೇ ನವಸು ಪ್ರೋಚ್ಯತೇ ಬುಧೈಃ ॥

ಎಂದಿರುವದರಿಂದ ಆತ್ಮಶಬ್ದಕ್ಕೆ ಒಂಭತ್ತು ಅರ್ಥಗಳು. **ಅನಾದಿಃ** ವಾಯುದೇವರಿಗೂ ಮೊದಲಿಗರು **ಅವ್ಯಯಾತ್ಮಾ** ಅವ್ಯಯನಾದ ಶ್ರೀಹರಿಯಲ್ಲಿ ಮನಸ್ಸುಳ್ಳವರು. ಅಥವಾ ನ ವ್ಯೇತಿ ವಿರುದ್ಧತೋ ಗಚ್ಛತಿ ಆತ್ಮಾ ಮನೋ ಯಸ್ಯ ಸಃ ಅವ್ಯಯಃ ಎಂದೂ ಮಾಡಬಹುದು. 'ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ' ಎಂದು ಬ್ರಹ್ಮವಚನವಿದೆ. 'ಅಸಂಸಾರ್ಯವ್ಯಯೋ ಮುಕ್ತ ಅಚಿರಾನಂದ ಉಚ್ಯತೇ' ಎಂದಿರುವದರಿಂದ ಅವ್ಯಯ ಎಂದರೆ ಮುಕ್ತರು ।।೩೧।।

**ತ್ವಮೇವ ಕಾಲೋಽನಿಮಿಷೋ ಜನಾನಾ-**
**ಮಾಯುರ್ಲವಾದ್ಯಾವಯವೈಃ ಕ್ಷಿಣೋಷಿ ।**
**ಕೂಟಸ್ಥ ಆತ್ಮಾ ಪರಮೇಷ್ಠ್ಯಜೋ ಮಹಾನ್**
**ತ್ವಂ ಜೀವಲೋಕಸ್ಯ ಚ ಜೀವ ಆತ್ಮಾ ।।೩೨।।**

**ವಿಷ್ಣುಪರ ಅರ್ಥ** :- **ತ್ವಂ ಏವ** ನೀನೇ **ಅನಿಮಿಷಃ** ಕಾಲನಿಯಾಮಕನು **ಲವಾದ್ಯಾವಯವೈಃ** ಲವ ಮೊದಲಾದ ಭಾಗಗಳಿಂದ **ಜನಾನಾಂ** ಜನರ **ಆಯುಃ** ಆಯುಷ್ಯವನ್ನು **ಕ್ಷಿಣೋಷಿ** ಕ್ಷಯಗೊಳಿಸುವಿ **ಕೂಟಸ್ಥಃ** ನಿರ್ವಿಕಾರನು **ಆತ್ಮಾ** ವ್ಯಾಪ್ತನು **ಪರಮೇಷ್ಠೀ** ಸರ್ವೋತ್ತಮನು(ಸರ್ವೋತ್ತಮ ಸ್ಥಾನನು)**ಮಹಾನ್** ಪರಮಮಹತ್ ಪರಿಮಾಣ ಉಳ್ಳವನು. **ಅಜಃ** ಜನನವಿಲ್ಲದವನು **ಮಹಾನಜಃ** ಬ್ರಹ್ಮದೇವರಿಗಿಂತ ಉತ್ತಮನು ಇದರಿಂದ ಸರ್ವೋತ್ತಮತ್ವವನ್ನು ನಿರ್ಣಯಿಸುವರು **ತ್ವಂ** ನೀನು **ಜೀವಲೋಕಸ್ಯ** ಜೀವಸಮುದಾಯಕ್ಕೆ **ಜೀವಃ** ಪ್ರಾಣಧಾರಕನು **ಆತ್ಮಾ** ಇಷ್ಟಾದಾನಾದಿ ಕರ್ತೃವು. ।।೩೨।।

**ಬ್ರಹ್ಮಪರ ಅರ್ಥ** :- **ಅಜಃ** ಪರಮಾತ್ಮನಿಂದ ಹುಟ್ಟಿದವನು. **ಮಹಾನ್** ಅವ್ಯವಧಾನದಿಂದ ಶ್ರೀಹರಿಯ ಮಕ್ಕಳಾದ್ದರಿಂದ ಜೀವೋತ್ತಮರು. ಮಹತ್ತತ್ವಾಭಿ-ಮಾನಿಗಳು.

**... ತಾತ್ಪರ್ಯ ...**

**ಜೀವಾನಾಂ ಪ್ರಾಣಧಾರಕಃ ।।**

ಇದರಿಂದ ಲೋಕಶಬ್ದ ಸಮುದಾಯಪರ, ಎರಡನೇ ಜೀವಶಬ್ದ ಯೋಗವೃತ್ತಿಯಿಂದ ಪ್ರಾಣಧಾರಕಪರ ಎಂದು ಹೇಳಿದಂತಾಯಿತು. 'ಜೀವ ಪ್ರಾಣಧಾರಣೇ' ಎಂದು ಧಾತುವಿದೆ ।।೩೨।।

ಈಗ ಭಗವಂತನಲ್ಲಿಯೇ ಸಂಭವಿಸುವ ವಿಶೇಷಣಗಳಿಂದ ವಿಶಿಷ್ಟನಾದ ಬ್ರಹ್ಮಾಂತರ್ಯಾಮಿ ಶ್ರೀಹರಿಯನ್ನು ಸ್ತುತಿಸುತ್ತಾರೆ-

**ತ್ವತ್ತಃ ಪರಂ ನಾಪರಮಪ್ಯನೇಜ-**
**ದೇಜಚ್ಚ ಕಿಂಚಿದ್ ವ್ಯತಿರಿಕ್ತಮಸ್ತಿ ।**
**ವಿದ್ಯಾಕಲಾಸ್ತೇ ತನವಶ್ಚ ಸರ್ವಾ**
**ಹಿರಣ್ಯಗರ್ಭೋಽಸಿ ಬೃಹತ್ ತ್ರಿಪೃಷ್ಠಃ ॥೩೩॥**

**ಪರಂ** ಅತೀತವಾದ ಕಳೆದುಹೋದ **ಅಪರಂ** ಅನಾಗತವಾದ (ಮುಂದೆ ಬರುವ) **ಅಪಿ** ಈಗಿರುವ **ಅನೇಜತ್** ಚಲಿಸದಿರುವ **ಏಜತ್** ಚಲಿಸುವ **ಕಿಂಚಿತ್** ಯಾವುದೇ ವಸ್ತುವು (ಎಲ್ಲ ವಸ್ತುವು) **ತ್ವತ್ತಃ** ನಿನ್ನಿಂದ **ವ್ಯತಿರಿಕ್ತಂ** ಹೊರತಾಗಿ ಸ್ವತಂತ್ರವಾಗಿರುವದು **ನಾಸ್ತಿ** ಇಲ್ಲ. ನೀನೇ ಒಳಗೂ ಹೊರಗೂ ವ್ಯಾಪ್ತನಾಗಿರುವದರಿಂದ ನಿನ್ನನ್ನು ಬಿಟ್ಟು ಇಲ್ಲವೆಂದರ್ಥ. 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ', 'ಸರ್ವಂ ಖಲ್ವಿದಂ ಬ್ರಹ್ಮ', ಇತ್ಯಾದಿ ಶ್ರುತಿಗಳಿವೆ. **ಸರ್ವಾಃ** ಎಲ್ಲ **ವಿದ್ಯಾಕಲಾಃ** ಪರವಿದ್ಯೆಗಳು, ಅಪರವಿದ್ಯೆಗಳು, ಮಹಾವಿದ್ಯೆಗಳು, **ಕಲಾಃ** ವಿದ್ಯೆಗಳು **ತೇ** ನಿನ್ನ **ತನವಃ** ಶರೀರವನ್ನಾಶ್ರಯಿಸಿ ಇರುವದರಿಂದ ನಿನ್ನ ಶರೀರಗಳೆಂದು ಕರೆಯಲ್ಪಡುವವು. **ಹಿರಣ್ಯಗರ್ಭಃ** ಬ್ರಹ್ಮಾಂಡವೇ ಉದರದಲ್ಲಿವುಳ್ಳವನು **ಅಸಿ** ಅಗಿರುವಿ. **ಬೃಹತ್** ಗುಣಪೂರ್ಣನು. ಆದ್ದರಿಂದ ಬ್ರಹ್ಮನು. **ತ್ರಿಪೃಷ್ಠಃ** ಜಾಗ್ರದಾದಿ ಅವಸ್ಥೆಗಳನ್ನು ಅತಿಕ್ರಮಿಸಿರುವ ತುರೀಯನು ನೀನು.

'ತ್ವತ್ತಃ ಪರಂ ನಾಪರಂ' ಎಂಬಲ್ಲಿ ಜಗತ್ತಿನ ಅಭೇದವನ್ನು ಬ್ರಹ್ಮಾಂತರ್ಯಾಮಿಗೆ ಹೇಳುವಂತೆ ತೋರುವದು. ಕಾರಣ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು-

**... ತಾತ್ಪರ್ಯ ...**

**ಪರಾವರೇಷು ಯಸ್ಮಾತ್ತ್ವಂ ವ್ಯಾಪ್ತೋ ವಿಷ್ಣುಃ ಸನಾತನಃ ।**
**ತಸ್ಮಾನ್ನ ವ್ಯತಿರಿಕ್ತಂ ತ್ವದಿತ್ಯಾಹುರ್ವೇದವಾದಿನಃ ॥ ಇತಿ ಪಾದ್ಮೇ ॥**

**ವಿದ್ಯಾಶ್ಚ ಕಲಾಶ್ಚ ವಿದ್ಯಾಕಲಾಃ ॥**

**ಮಹಾವಿದ್ಯಾಃ ಕಲಾಶ್ಚೈವ ತ್ವತ್ತನಾವಾಶ್ರಿತಾ ಯತಃ ।**
**ವಿದ್ಯಾತನುರಿತಿ ಪ್ರಾಹುರತಸ್ತ್ವಾಂ ತತ್ವವೇದಿನಃ ॥ ಇತಿ ಚ ॥**

**ತ್ರಿಪೃಷ್ಠಃ ತುರೀಯಃ ।**

ಭೂತಭವಿಷ್ಯದ್ವರ್ತಮಾನಕಾಲಗಳಲ್ಲಿ ಇರುವ ವಸ್ತುಗಳಲ್ಲಿ ನೀನು ವ್ಯಾಪ್ತನು, ಸನಾತನನಾದ (ವೇದಪ್ರತಿಪಾದ್ಯ) ವಿಷ್ಣುವು ಆದ ಕಾರಣ ನಿನ್ನಿಂದ ವ್ಯಾಪ್ತವಾಗದಿರುವದು ಯಾವುದೂ ಇಲ್ಲ. ಅಂದರೆ ಎಲ್ಲವೂ ನಿನ್ನಿಂದ ವ್ಯಾಪ್ತವೆಂದು ವೇದವಾದಿಗಳು ಹೇಳುತ್ತಾರೆ. ಎಂದು ಪಾದ್ಮಪುರಾಣದಲ್ಲಿದೆ.

ವಿದ್ಯಾಕಲಾ ಎಂಬುದಕ್ಕೆ ಬ್ರಹ್ಮವಿದ್ಯೆಗಳು ಶಿಕ್ಷಾ, ಕಲ್ಪ, ಗಾಂಧರ್ವಾದಿಕಲಾ ವಿದ್ಯೆಗಳು ಎಂದರ್ಥವು. ವೇದಾದಿರೂಪಮಹಾವಿದ್ಯೆಗಳು ಗಾಂಧರ್ವ ಮೊದಲಾದ ಉಪವೇದಗಳು ಕಲಾವಿದ್ಯೆಗಳು. ನಿನ್ನ ಶರೀರದಲ್ಲಿ ಆಶ್ರಿತಗಳಾಗಿವೆ. ಆದ ಕಾರಣ ತತ್ವಜ್ಞಾನಿಗಳು ನಿನ್ನನ್ನು ವಿದ್ಯಾತನು ಎಂದು ಹೇಳುತ್ತಾರೆ.

ತ್ರಿಪೃಷ್ಠ ಎಂದರೆ ಜಾಗ್ರದಾದ್ಯವಸ್ಥೆಗಳನ್ನು ಮೀರಿ ಇರುವವನು ತುರೀಯನು.

**ಬ್ರಹ್ಮಣೋಽಪ್ಯಧಿಕಂ ವಿಷ್ಣುಂ ಜಾನನ್ನಪಿ ಹಿರಣ್ಯಕಃ ।**
**ಬ್ರಹ್ಮಾಣಂ ತದ್ಗುಣೈಃ ಸ್ತೌತಿ ತದ್ಗವಿಷ್ಣುವಿವಕ್ಷಯಾ ॥ ಇತಿ ಚ ॥**

ಶ್ರೀವಿಷ್ಣುವು ಚತುರ್ಮುಖನಿಗಿಂತಲೂ ಉತ್ತಮನೆಂದು ಹಿರಣ್ಯಕಶಿಪುವು ತಿಳಿದವನಾಗಿದ್ದರೂ ಚತುರ್ಮುಖನಲ್ಲಿ ನಿಯಾಮಕನಾಗಿರುವ ಶ್ರೀವಿಷ್ಣುವಿನನ್ನು ಉದ್ದೇಶಿಸಿ ಚತುರ್ಮುಖನನ್ನು ಸ್ತುತಿಸುತ್ತಾನೆ. ।।೩೩।।

ಜ್ಞಾನಾನಂದಸ್ವರೂಪನಾದ ಹರಿಯನ್ನು ನಿರೂಪಿಸಿ ಈಗ ಅವ್ಯಕ್ತಮೂರ್ತಿಯನ್ನು ನಿರೂಪಿಸುತ್ತಾ ಅಥವಾ ಹಿರಣ್ಯಗರ್ಭನೆಂಬ ವಿಶೇಷಣದಿಂದ ಬ್ರಹ್ಮಾಂಡವು ಶ್ರೀಹರಿಯ ಶರೀರವೆಂದು ಸೂಚಿಸಿದ್ದರು. ಅಲ್ಲದೇ ಶ್ರೀಹರಿಯ ಶುಭಗುಣಗಳನ್ನು ಅನುಭವಿಸುವವನು. ಇತರರಂತೆ ದುಃಖವನ್ನು ಅನುಭವಿಸುವದಿಲ್ಲ ಎಂದು ಹೇಳುತ್ತಾರೆ-

**ವ್ಯಕ್ತಂ ವಿಭೋ ಸ್ಥೂಲಮಿದಂ ಶರೀರಂ**
**ಯೇನೇಂದ್ರಿಯಪ್ರಾಣಮನೋಗುಣಾಂಸ್ತ್ವಮ್ ।**
**ಭುಂಕ್ತೇ ಸ್ಥಿತೋ ಧಾಮನಿ ಪಾರಮೇಷ್ಠ್ಯೇ**
**ಅವ್ಯಕ್ತ ಆತ್ಮಾ ಪುರುಷಃ ಪುರಾಣಃ** ।।೩೪।।

**ಹೇ ವಿಭೋ** ಸಮರ್ಥನೇ **ಆತ್ಮಾ** ಆನಂದವನ್ನು ಸ್ವೀಕರಿಸುವವನಾದ್ದರಿಂದ ಆತ್ಮನೆನಿಸುವ(ಸ್ವಾಮಿಯಾದ)ಅಂದರೆ ಆನಂದಸ್ವಭಾವನಾದ **ಅವ್ಯಕ್ತಃ** ಅನುಗ್ರಹವಿಲ್ಲದೆ ತಿಳಿಯಲಾಗದ 'ತದವ್ಯಕ್ತಮಾಹ ಹಿ'ಎಂದು ಸೂತ್ರವಿರುವದು **ಪುರುಷಃ** ಫಲವನ್ನು ಕೊಡುವ **ಪುರಾಣಃ** ಪುರಾತನನಾದ **ತ್ವಂ** ನೀನು **ಪಾರಮೇಷ್ಠ್ಯಧಾಮನಿ** ವೈಕುಂಠಾದಿ ಸ್ಥಾನಗಳಲ್ಲಿ ಸತ್ಯಲೋಕದಲ್ಲಿ ಅಥವಾ ಸ್ವರೂಪಭೂತವಾದ ಮಹಿಮೆಯಲ್ಲಿ **ಸ್ಥಿತಃ ಸನ್** ಇರುವವನಾಗಿ **ಯೇನ** ಯಾವ ಶರೀರದಿಂದ **ಇಂದ್ರಿಯಪ್ರಾಣಮನೋಗುಣಾನ್** ಇಂದ್ರಿಯಗಳ ಪ್ರಾಣಗಳ ಮನಸ್ಸಿನ ವಿಷಯಗಳನ್ನು **ಭುಂಕ್ತೇ** ಅನುಭವಿಸುವಿಯೋ ದುಃಖರೂಪವಿಷಯಗಳನ್ನು ಅನುಭವಿಸುವದಿಲ್ಲವೋ **ಇದಂ** ಈ ಬ್ರಹ್ಮಾಂಡವು **ವ್ಯಕ್ತಂ** ಸ್ಪಷ್ಟವಾಗಿ **ತವ** ನಿನ್ನ **ಸ್ಥೂಲಂ**

**ಶರೀರಂ** ಸ್ಥೂಲಪ್ರತಿಮೆಯು ಎಂದು ಹೇಳುತ್ತಾರೆ. ಸ್ವರೂಪವಲ್ಲವೆಂದರ್ಥ. ಏಕೆ ದುಃಖ ಅನುಭವಿಸುವದಿಲ್ಲ ಎಂಬುದಕ್ಕೆ ಉತ್ತರವನ್ನು ಆತ್ಮನೆಂಬುದರಿಂದಲೂ ಇವನ ಜ್ಞಾನ ಏಕೆ ಬರುತ್ತಿಲ್ಲವೆಂಬುದಕ್ಕೆ ಸಮಾಧಾನವನ್ನು ಅವ್ಯಕ್ತಪದದಿಂದಲೂ ಹೇಳಿರುವರು.

ಅಥವಾ ಇದರಿಂದ ಬ್ರಹ್ಮದೇವರನ್ನೇ ಅವರಿಗೆ ಯೋಗ್ಯವಾದ ವಿಶೇಷಣಗಳಿಂದ ಸ್ತೋತ್ರ ಮಾಡುತ್ತಾರೆ. **ಪುರಾಣಃ** ವಿರಾಟ್ ಶರೀರವನ್ನು ಹೊಂದಿದ **ಆತ್ಮಾ** ಆತ್ಮಶಬ್ದದಿಂದ ಕರೆಯಲ್ಪಡುವ **ಅವ್ಯಕ್ತಃ** ಅವತಾರದಿಂದ ವ್ಯಕ್ತಿಯಲ್ಲದ **ತ್ವಂ** ನೀವು ಬ್ರಹ್ಮದೇವರು ಇಂದ್ರಿಯಪ್ರಾಣಮನಸ್ಸಿನ ಗುಣಗಳಾದ ಜಗತ್ಸೃಷ್ಟಿ ಮೊದಲಾದ ಐಶ್ವರ್ಯಗುಣಗಳನ್ನು **ಭುಂಕ್ತೇ** ಅನುಭವಿಸುವಿರಿ. ಬ್ರಹ್ಮಾಂಡವು ನಿಮ್ಮ ವಿರಾಟ್ ಶರೀರವು. ||೩೪||

ಸ್ಥಾವರಜಂಗಮಜಗತ್ತು ನಿನ್ನಿಂದ ವ್ಯಾಪ್ತ ಎಂದು ಹೇಳುತ್ತ ಈ ಜಗತ್ತು ಯಾವ ರೂಪದಿಂದ ವ್ಯಾಪ್ತವೆಂದು ಅಜ್ಞಾನಿಗಳ ಶಂಕೆಯನ್ನು ಪರಿಹರಿಸುವರು.

**ಅನಂತಾವ್ಯಕ್ತರೂಪೇಣ ಯೇನೇದಮಖಿಲಂ ತತಮ್ ।**
**ಚಿದಚಿಚ್ಛಕ್ತಿಯುಕ್ತಾಯ ತಸ್ಮೈ ಭಗವತೇ ನಮಃ ||೩೫||**

**ಅನಂತಾವ್ಯಕ್ತರೂಪೇಣ** ದೇಶಕಾಲಗುಣಗಳಿಂದ ಅಪರಿಚ್ಛಿನ್ನವಾದ ಅತೀಂದ್ರಿಯವಾದ ರೂಪದಿಂದ **ಯೇನ** ಯಾವ ಪರಮಾತ್ಮನಿಂದ **ಇದಂ ಅಖಿಲಂ** ಈ ಎಲ್ಲ ಜಗತ್ತು **ತತಂ** ವ್ಯಾಪ್ತವಾಗಿದೆಯೋ(ಇದರಿಂದ ಪರಿಚ್ಛಿನ್ನವಾದ ಎಲ್ಲವೂ ಅಪರಿಚ್ಛಿನ್ನನಾದ ಶ್ರೀಹರಿಗಿಂತ ಹೊರಗಿರುವದು ಯುಕ್ತಿವಿರುದ್ಧವೆಂದು ಹೇಳಿದಂತಾಯಿತು.) 'ತಮ ಆಸೀತ್ ತಮಸಾ ಗೂಳ್ಹಮಗ್ರೇ' ಎಂಬ ಶ್ರುತಿಯಂತೆ ಪ್ರಕೃತಿಯಿಂದ ವ್ಯಾಪ್ತತೆ ತಿಳಿದು ಬರುವದು. ಆದ್ದರಿಂದ ಶ್ರೀಹರಿಯಿಂದಲೇ ವ್ಯಾಪ್ತವೆಂದು ಹೇಳಿದ್ದು ಹೇಗೆ ಹೊಂದುವದು? ಎಂದರೆ ಹೇಳುತ್ತಾರೆ. **ಚಿದಚಿಚ್ಛಕ್ತಿಯುಕ್ತಾಯ** ಎಂದು. ಶಕ್ತಿಪದವನ್ನು ಎರಡುಸಲ ಆವೃತ್ತಿ ಮಾಡಿಕೊಳ್ಳಬೇಕು ಚಿತ್ ಅಚಿತ್ ಎಂಬ ಎರಡು ಬಗೆಯ ಶಕ್ತಿ ಅಂದರೆ ಪ್ರಕೃತಿ, ಅದರ ಕಾರ್ಯಗಳಲ್ಲಿ ಏನು ಶಕ್ತಿಯಿದೆಯೋ ಅದೂ ಕೂಡ ಭಗವಂತನ ಶಕ್ತಿಯನ್ನು ಬಿಟ್ಟು ಇಲ್ಲ. ಆದ್ದರಿಂದ **ಚಿದಚಿತ್ಶಕ್ತಿಯುಕ್ತಾಯ** ಚಿತ್ ಅಚಿತ್ ಎಂಬ ಎರಡು ಶಕ್ತಿಯುಳ್ಳ ಪ್ರಕೃತಿಯ ಕಾರ್ಯಗಳಲ್ಲಿರುವ ಶಕ್ತಿಯಿಂದ ಆಗುವದನ್ನು ನಿಯಮಿಸುವ ಶಕ್ತಿಯಿಂದ ಯುಕ್ತನಾದ, **ಭಗವತೇ ನಮಃ** ಭಗವಂತನಿಗೆ ನಮಸ್ಕಾರ. ಹೀಗೆ ಹೇಳಿದರೆ ಶ್ರೀಹರಿಗೆ ಅಪ್ರಾಧಾನ್ಯವು ಬರುವದಿಲ್ಲವೋ ಎಂದು ಪ್ರಶ್ನಿಸುವಂತಿಲ್ಲ. ಶಿಷ್ಯನೊಂದಿಗೆ

ಉಪಾಧ್ಯಾಯನನ್ನು ಕಂಡೆನು ಎಂಬಲ್ಲಿ ಉಪಾಧ್ಯಾಯನಿಗೆ ಪ್ರಾಧಾನ್ಯತೆಯಂತೆ ಶ್ರೀಹರಿಗೆ ಪ್ರಾಧಾನ್ಯತೆ ಬಂದೆ ಬರುವದು.

ಅಥವಾ ಲೋಕದಲ್ಲಿ ಪ್ರತಿಯೊಂದು ವಸ್ತುವೂ ಒಬ್ಬನಿಂದಲೇ ನಿಯತವೆಂಬುದು ಕಂಡು ಬಂದಿಲ್ಲ ಆದ್ದರಿಂದ ಚಿದಚಿದಾತ್ಮಕಪ್ರಪಂಚದಲ್ಲಿ ಯಾವುದಾದರೊಂದು ಅವನಿಂದ ನಿಯತವಾಗದಿರುವದು ಇರಬಹುದಾದ್ದರಿಂದ ಸಾತಂತ್ರ್ಯದಿಂದ ಸರ್ವವ್ಯಾಪ್ತನಾದ ಶ್ರೀಹರಿಗೆ ಹೇಗೆ ಯುಕ್ತವಾಗುವದು ಎಂದು ಶಂಕಿಸಿದರೆ ಹೇಳುತ್ತಾರೆ ಚಿತ್ ಅಚಿತ್ ಈ ಎಲ್ಲ ವಸ್ತುಗಳ ಶಕ್ತಿಯಿಂದ ಕೂಡಿದವ ಎಂದರ್ಥ. 'ದ್ರವ್ಯಂ ಕರ್ಮ ಚ ಕಾಲಶ್ಚ' ಇತ್ಯಾದಿಪ್ರಮಾಣದಿಂದ ಪರಮಾಣುವಾದ ವಸ್ತುವಿಗೂ ಭಗವಂತ ನಿಯಾಮಕನಾಗಿದ್ದಾನೆ ಎಂದು ತಿಳಿಯುವದು. ಈ ವಿಧಶಕ್ತಿ ಹೇಗೆ ಎಂಬ ಶಂಕಗೆ 'ಭಗವತೇ' ಎಂಬುದರಿಂದ ಉತ್ತರಿಸುವರು. ಸಮಗ್ರ ಐಶ್ವರ್ಯ ಸಂಪನ್ನನು ಎಂದರ್ಥ. 'ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ'ಎಂಬ ವಾಕ್ಯದ ಅರ್ಥವನ್ನು ಸ್ಮರಿಸಿದ ಹಿರಣ್ಯಕಶಿಪುವು 'ನಮಃ' ಎಂದು ಹೇಳಿದನು. ಈ ಉಕ್ತಿಯಿಂದ ಫಲ ಅಧಿಕವಾಗುವದು. ಇಲ್ಲಿ ಭಗವಚ್ಛಬ್ದಕ್ಕೆ ಹರಿ ಎಂದರ್ಥ ಮಾಡಿದಾಗ ಅಖಿಲಪದಕ್ಕೆ ಅಸಂಕುಚಿತವಾಗಿ ಎಲ್ಲ ಎಂದರ್ಥ. ಬ್ರಹ್ಮ ಎಂದರ್ಥ ಮಾಡಿದಾಗ ಸಂಕುಚಿತವಾಗಿ ಯಥೋಚಿತ ಎಲ್ಲ ಎಂದರ್ಥ.

'ಶಕ್ಯತ್ವಾತ್ ಶಕ್ತಯೋ ಭಾರ್ಯಾಃ' ಎಂದಿರುವದರಿಂದ ಶ್ರೀಹರಿಯ ಸ್ವರೂಪಶಕ್ತಿಗೆ ವಿಷಯವಾದ ಚಿತ್‌ಪ್ರಕೃತಿ ಅಚಿತ್‌ಪ್ರಕೃತಿಗಳು ಚಿದಚಿತ್ ಎನಿಸಿಕೊಳ್ಳುವವು. ಅವುಗಳ ಕಾರ್ಯಶಕ್ತಿ ಇವನ ಅಧೀನವೆಂದು ಭಾವ. ।।೩೫।।

ಹೆಚ್ಚಿಗೆ ಹೇಳುವದರಿಂದೇನು ಲಾಭ. ನಿನ್ನ ಅಭೀಷ್ಟವೇನು ಹೇಳು ಎಂದು ಶಂಕೆಗೆ ಒಳಪಟ್ಟು ಹೇಳುವನು-

**ಯದಿ ದಾಸ್ಯಸ್ಯಭಿಮತಾನ್ ವರಾನ್ಮೇ ವರದೋತ್ತಮ ।**
**ಭೂತೇಭ್ಯಸ್ತ್ವದ್ವಿಸೃಷ್ಟೇಭ್ಯೋ ಮೃತ್ಯುರ್ಮಾಭೂನ್ಮಮ ಪ್ರಭೋ ।।೩೬**

**ಹೇ ವರದೋತ್ತಮ** ವರ ಕೊಡುವವರಲ್ಲಿ ಶ್ರೇಷ್ಠರಾದ ಬ್ರಹ್ಮದೇವರೇ **ಮೇ** ನನಗೆ **ಅಭಿಮತಾನ್ ವರಾನ್** ಇಷ್ಟವಾಗಿರುವ ವರಗಳನ್ನು **ದಾಸ್ಯಸಿ** ಕೊಡುವಿಯಾದರೆ **ಪ್ರಭೋ** ಸಮರ್ಥನೇ **ತ್ವದ್ವಿಸೃಷ್ಟೇಭ್ಯಃ** ನಿನ್ನಿಂದ ವಿವಿಧ ರೀತಿಯಿಂದ ಸೃಷ್ಟರಾದ **ಭೂತೇಭ್ಯಃ** ಪ್ರಾಣಿಗಳಿಂದ **ಮಮ** ನನಗೆ **ಮೃತ್ಯುಃ** ಸಾವು **ಮಾ ಭೂತ್** ಆಗದಿರಲಿ.

**ನಾಂತರ್ಬಹಿರ್ದಿವಾನಕ್ತಮನ್ಯಸ್ಮಾದಪಿ ಚಾಯುಧೈಃ ।**
**ನ ಭೂಮೌ ನಾಂಬರೇ ಮೃತ್ಯುರ್ನ ನರೈರ್ನ ಮೃಗೈರಪಿ ।।೩೭।।**

**ವ್ಯಸುಭಿರ್ವಾಽಸುಮದ್ಭಿರ್ವಾ ಸುರಾಸುರಮಹೋರಗೈಃ ।**
**ಅಪ್ರತಿದ್ವಂದ್ವತಾ ಯುದ್ಧೇ ಐಕಪತ್ಯಂ ಚ ದೇಹಿನಾಮ್ ॥೩೮॥**

**ಅಂತಃ** ಒಳಗೆ **ಬಹಿಃ** ಹೊರಗೆ **ದಿವಾ** ಹಗಲಿನಲ್ಲಿ **ನಕ್ತಂ** ರಾತ್ರಿಯಲ್ಲಿ **ಆಯುಧೈಃ** ಆಯುಧಗಳಿಂದಲೂ **ಅನ್ಯಸ್ಮಾದಪಿ** ನಿತ್ಯವಾದ ಪ್ರಕೃತ್ಯಾದಿಗಳಿಂದ ಕಾಲದಿಂದ ಅಥವಾ ದೇಹಾವಯವಭಿನ್ನವಾದ ಆಯುಧಗಳಿಂದಾಗಲಿ **ಭೂಮೌ** ಭೂಮಿಯಲ್ಲಿ **ಅಂಬರೇ** ಆಕಾಶದಲ್ಲಿ ಭೂತೇಭ್ಯಃ ಎಂಬುದನ್ನೇ ವಿವರಿಸುತ್ತಾನೆ **ನರೈಃ** ಮನುಷ್ಯರಿಂದ **ಮೃಗೈಃ ಅಪಿ** ಮೃಗಗಳಿಂದಲೂ **ವ್ಯಸುಭಿಃ** ಪ್ರಾಣವಿಲ್ಲದ ಕಲ್ಲು ಮೊದಲಾದವು-ಗಳಿಂದಾಗಲಿ **ಅಸುಮದ್ಭಿಃ** ಪ್ರಾಣವಿರುವ ಮೊಸಳೆ ಮುಂತಾದವುಗಳಿಂದಾಗಲಿ **ಸುರಾಸುರಮಹೋರಗೈಃ** ದೇವತೆಗಳಿಂದಾಗಲಿ ದೈತ್ಯರಿಂದಾಗಲಿ ನಾಗಗಳಿಂದಾಗಲಿ **ಮೃತ್ಯುಃ** ಮರಣವು **ಮಮ** ನನಗೆ **ನ ಅಭೂತ್** ಆಗದಿರಲಿ. **ಯುದ್ಧೇ** ಯುದ್ಧದಲ್ಲಿ **ಅಪ್ರತಿದ್ವಂದ್ವತಾ** ಸಮರಾದ ಪ್ರತಿಸ್ಪರ್ಧಿಗಳಿಲ್ಲದಿರುವಿಕೆ **ದೇಹಿನಾಂ ಐಕಪತ್ಯಂ** ಶರೀರವುಳ್ಳವರಿಗೆ ಏಕಾಧಿಪತ್ಯವು ನ ಇರಬಾರದು. ॥೩೭,೩೮॥

ತನಗಾಗಬೇಕಾದದ್ದನ್ನು ಹೇಳುತ್ತಾನೆ-

**ಸರ್ವೇಷಾಂ ಲೋಕಪಾಲಾನಾಂ ಮಹಿಮಾನಂ ತಥಾತ್ಮನಃ ।**
**ತಪೋಯೋಗಪ್ರಭಾವೇನ ಯೋ ನ ರಿಷ್ಯತಿ ಕರ್ಹಿಚಿತ್ ॥೩೯॥**

**ಸರ್ವೇಷಾಂ** ಎಲ್ಲ **ಲೋಕಪಾಲಾನಾಂ ಮಹಿಮಾನಂ** ಲೋಕಪಾಲಕರ ಸಾಮರ್ಥ್ಯವನ್ನು **ತಥಾ** ಮತ್ತು **ಯಃ** ಯಾವ **ಆತ್ಮನಃ** ತಮ್ಮ ಮಹಿಮೆಯು **ತಪೋಯೋಗಪ್ರಭಾವೇನ** ತಪಸ್ಸು ಯೋಗಸಾಮರ್ಥ್ಯದಿಂದ **ಕರ್ಹಿಚಿತ್** ಎಂದೂ **ನ ರಿಷ್ಯತಿ** ನಾಶವಾಗುವದಿಲ್ಲವೋ **ತಂ ಮಹಿಮಾನಂ** ಆ ನಿಮ್ಮ ಮಹಿಮೆಯನ್ನು **ವೃಣೇ** ನನಗೆ ಕೊಡಿರಿ ಎಂದು ಬೇಡುತ್ತೇನೆ. ಹೇಗೆ ನಿಮ್ಮ ಮಹಿಮೆ ಯಾವ ರೀತಿಯಿಂದಲೂ ನಾಶವಾಗುವದಿಲ್ಲ ಹಾಗೆ ನನ್ನ ಸಾಮರ್ಥ್ಯ ನಾಶವಾಗದಿರಲಿ ಎಂದು ಅಭಿಪ್ರಾಯ.

**॥ ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ತೃತೀಯೋಽಧ್ಯಾಯಃ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★

# ಅಥ ಚತುರ್ಥೋಽಧ್ಯಾಯಃ

**ಸಾರಾಂಶ**

ಬ್ರಹ್ಮದೇವರು ಹಿರಣ್ಯಕಶಿಪುವು ಕೇಳಿದ ವರಗಳನ್ನು ತಥಾಸ್ತು ಎಂದು ನುಡಿದು ಹೊರಟು ಹೋದರು. ಹಿರಣ್ಯಕಶಿಪು ಬ್ರಹ್ಮದೇವರ ವರದಿಂದ ಉನ್ಮತ್ತನಾಗಿ ಇಡೀ ಪ್ರಪಂಚವನ್ನೇ ವಶಪಡಿಸಿಕೊಂಡ. ಸ್ವರ್ಗವನ್ನು ಆಕ್ರಮಿಸಿ ಇಂದ್ರನ ಅರಮನೆಯಲ್ಲಿಯೇ ವಾಸಿಸತೊಡಗಿದ. ಎಲ್ಲ ದೇವತೆಗಳು, ಋಷಿಗಳು, ಗಂಧರ್ವರು, ಅಪ್ಸರೆಯರು, ಮನುಷ್ಯರು ಎಲ್ಲರೂ ಇವನನ್ನೇ ಕೊಂಡಾಡಬೇಕು. ಎಲ್ಲ ವರ್ಣಾಶ್ರಮದವರೂ ಇವನನ್ನೇ ಯಜ್ಞಗಳಿಂದ ಆರಾಧಿಸಬೇಕು. ಹಾಗೆ ವಿಶ್ವದಲ್ಲೆಲ್ಲ ಡಂಗುರ ಸಾರಿದ. ದೇವತೆಗಳು ತತ್ತರಿಸಿದರು. ಭಗವಂತನನ್ನು ಮೊರೆಹೊಕ್ಕರು. ಹಿರಣ್ಯಕಶಿಪುವು ಗೋಬ್ರಾಹ್ಮಣಮೊದಲಾದವರನ್ನು ದ್ವೇಷ ಮಾಡುತ್ತಿರುವದರಿಂದ ಅವನಿಗೆ ಉಳಿಗಾಲವಿಲ್ಲ. ನನ್ನ ಭಕ್ತನಾದ ಪ್ರಹ್ಲಾದನನ್ನು ಪೀಡಿಸಿ ನನ್ನಿಂದ ಹತನಾಗಿ ಬೀಳುತ್ತಾನೆ. ನಾನು ಅವನನ್ನು ಸಂಹರಿಸುವುದು ನಿಶ್ಚಿತ. ಎಂದು ಸಮಾಧಾನ ಹೇಳಿ ಕಳುಹಿಸಿದ. ಪ್ರಹ್ಲಾದ ಗುರುಹಿರಿಯರಲ್ಲಿ ವಿನೀತ. ಸಜ್ಜನ ಪಕ್ಷಪಾತಿ. ವಿಷಯಾಸಕ್ತಿಯನ್ನು ತೊರೆದು ಯಾವಾಗಲೂ ಶ್ರೀಹರಿಯನ್ನು ಧ್ಯಾನಿಸುತ್ತಿದ್ದ. ಇಂತಹ ಸತ್ಪುತ್ರನನ್ನು ಹಿರಣ್ಯಕಶಿಪುವು ನಾಶಪಡಿಸಲು ಯತ್ನಿಸಿದ.

★★★

ಭಗವದ್ಭಕ್ತರಲ್ಲದ ದೈತ್ಯರು ದೇವತೆಗಳಿಂದ ಸಂಪಾದಿಸಿದ ಅಧಿಕಾರ,ಸಂಪತ್ತು ಮೊದಲಾದವುಗಳು ಉಪ್ಪುನೀರಿನ ಸಮುದ್ರದ ಏರಿಳಿತಗಳಂತೆ ಕ್ಷಣಿಕ. ಅಂದರೆ ಕೆಲವು ಕಾಲ ಮಾತ್ರ ಆ ಅಧಿಕಾರಸಂಪತ್ತುಗಳು ಇರುತ್ತವೆ. ಶಾಶ್ವತವಾಗಿರುವದಿಲ್ಲ ಎಂದರ್ಥ. ಶ್ರೀಹರಿಯ ಅನುಗ್ರಹದಿಂದ ಬಂದ ಸಂಪತ್ತು ಶ್ರೀಹರಿಯ ಭಕ್ತರ ಸಂಪತ್ತು ಅನಂತಕಾಲವಿರುವದು. ಅಂದರೆ ಶಾಶ್ವತವಾದುದು. ಆದ್ದರಿಂದ

ಮುಕ್ತಿಯೋಗ್ಯರು ಅದನ್ನೇ ಸಂಪಾದಿಸಬೇಕು. ಶ್ರೀಹರಿಯು ಯೋಗ್ಯರಿಗೆ ಅನುಗ್ರಹ ಮಾಡುವನು ಮುಂತಾದ ಪ್ರಮೇಯಗಳನ್ನು ಮುಂದಿನ ಕೆಲವು ಅಧ್ಯಾಯಗಳಿಂದ ನಿರೂಪಿಸುವರು. ಅದರಲ್ಲಿ ಮೊದಲಿಗೆ ಬ್ರಹ್ಮದೇವರು ಹಿರಣ್ಯಕಶಿಪುವಿಗೆ ಕೊಟ್ಟ ವರದ ರೀತಿಯನ್ನು ಅದರ ಪ್ರಭಾವದಿಂದ ಅವನು ಎಲ್ಲರನ್ನು ಗೆದ್ದ ರೀತಿಯನ್ನು ನಿರೂಪಿಸುತ್ತಾರೆ-

**ಏವಂ ವೃತಃ ಶತಧೃತಿಃ ಹಿರಣ್ಯಕಶಿಪೋರಥ ।**
**ಪ್ರಾದಾತ್ ತತ್ತಪಸಾ ಪ್ರೀತೋ ವರಾನ್ ತಸ್ಯ ಸುದುರ್ಲಭಾನ್ ॥೧॥**

**ಅಥ** ಅನಂತರ **ಶತಧೃತಿಃ** ಬ್ರಹ್ಮದೇವರು **ಏವಂ** ಮೇಲೆ ಹೇಳಿದಂತೆ **ವೃತಃ** ಹಿರಣ್ಯಕಶಿಪುವಿನಿಂದ ಪ್ರಾರ್ಥಿತರಾಗಿ **ತತ್ತಪಸಾ** ಅವನ ತಪಸ್ಸಿನಿಂದ **ಪ್ರೀತಃ** ಪ್ರಸನ್ನರಾಗಿ **ಸುದುರ್ಲಭಾನ್** ಇತರರಿಗೆ ಸುಲಭವಾಗಿ ದೊರೆಯದ **ವರಾನ್** ಅವನು ಬೇಡಿದ ವರಗಳನ್ನು **ತಸ್ಯ ಹಿರಣ್ಯಕಶಿಪೋಃ** ಅದಕ್ಕಾಗಿ ಕಠಿಣ ತಪಸ್ಸು ಮಾಡಿದ ಹಿರಣ್ಯಕಶಿಪುವಿಗೆ **ಪ್ರಾದಾತ್** ಕೊಟ್ಟರು.

ವಿಶೇಷ ಃ- ಅಥ ಎಂಬ ಪದದಿಂದ ಕೇವಲ ಬ್ರಹ್ಮದೇವರ ವರಪ್ರದಾನವನ್ನು ಮಾತ್ರವೆ ಇಲ್ಲಿ ಹೇಳುವದಿಲ್ಲ ಕಿಂತು ಹಿರಣ್ಯಕಶಿಪುವಿನ ಕಥೆಯನ್ನು ಪೂರ್ಣವಾಗಿ ಹೇಳುತ್ತೇವೆ ಎಂದು ಸೂಚಿಸಿರುವರು.

**ಬ್ರಹ್ಮೋವಾಚ**

**ತಾತೇಮೇ ದುರ್ಲಭಾಃ ಪುಂಸೋ ಯಾನ್ ವೃಣೀಷೇ ವರಾನ್ ಮಮ ।**
**ತಥಾಪಿ ವಿತರಾಮ್ಯಂಗ ವರಾನ್ ಯದಪಿ ದುರ್ಲಭಾನ್ ॥೨॥**

**ಹೇ ಅಂಗ ತಾತ** ಎಲೋ ಮಗುವೇ **ಯಾನ್ ವರಾನ್** ಯಾವ ವರಗಳನ್ನು **ಮಮ ವೃಣೀಷೇ** ನನ್ನಿಂದ ಕೇಳುತ್ತಿರುವಿಯೋ **ಇಮೇ** ಈ ವರಗಳು **ಪುಂಸಃ** ಮನುಷ್ಯರಿಗೆ **ಯದಪಿ ದುರ್ಲಭಾಃ** ಯದ್ಯಪಿ ಸುಲಭವಾಗಿ ದೊರೆಯುವವಲ್ಲ ದುಃಖದಾಯಕಗಳು **ತಥಾ ಅಪಿ** ಆದರೂ **ದುರ್ಲಭಾನ್** ಕಷ್ಟಸಾಧ್ಯವಾದ **ವರಾನ್** ವರಗಳನ್ನು **ವಿತರಾಮಿ** ಕೊಡುವೆನು. ॥೨॥

**ತತೋ ಜಗಾಮ ಭಗವಾನಮೋಘಾನುಗ್ರಹೋ ವಿಭುಃ ।**
**ಪೂಜಿತೋ ಅಸುರವರ್ಯೇಣ ಸ್ತೂಯಮಾನಃ ಪ್ರಜೇಶ್ವರೈಃ ॥೩॥**

**ತತಃ** ವರವನ್ನು ಕೊಟ್ಟನಂತರ **ಅಸುರವರ್ಯೇಣ** ಹಿರಣ್ಯಕಶಿಪುವಿನಿಂದ **ಪೂಜಿತಃ** ಪೂಜಿಸಲ್ಪಟ್ಟ **ಅಮೋಘಾನುಗ್ರಹಃ** ವ್ಯರ್ಥವಾಗದ ಅನುಗ್ರಹವುಳ್ಳ **ಭಗವಾನ್**

ಪೂಜ್ಯರಾದ **ವಿಭುಃ** ಸಮರ್ಥರಾದ ಬ್ರಹ್ಮದೇವರು **ಪ್ರಜೇಶ್ವರೈಃ** ಪ್ರಜಾಪತಿಗಳಿಂದ **ಸ್ತೂಯಮಾನಃ** ಸ್ತೋತ್ರ ಮಾಡಿಸಿಕೊಳ್ಳುತ್ತ **ತತಃ** ಆ ಸ್ಥಳದಿಂದ **ಜಗಾಮ** ಹೋದರು.

ವಿಶೇಷ ಃ- (ಇಲ್ಲಿ ಪ್ರತಿಕ್ಷಣದಲ್ಲಿಯೂ ನೋಡಿದ್ದನ್ನು ಕೇಳಿದ್ದನ್ನು ಮರೆಯುವ ಸ್ವಭಾವದವರಾದ ಅಲ್ಪಜ್ಞಾನಿಗಳ ಉಪಯೋಗಕ್ಕಾಗಿಯೇ ವ್ಯಾಖ್ಯಾನ ಮಾಡುತ್ತಿದ್ದುದರಿಂದ ಹಿಂದೆ ಬರೆದ ಪದಗಳ ಅರ್ಥವನ್ನು ಮತ್ತೆ ಮತ್ತೆ ಬರೆಯುವದು ದೋಷವಲ್ಲವೆಂದು ವಿಜಯಧ್ವಜರು ತಿಳಿಸಿರುವರು.) ಭಗವಾನ್ ಪೂಜ್ಯಃ ಎಂದು ವ್ಯಾಖ್ಯಾನ. ಇದು ಹಿಂದೇ ಹೇಳಿದ್ದರೂ ಮತ್ತೆ ಮಂದರಿಗೆ ಹೇಳಿರುವೆವು ಎಂದು ಭಾವ. ।।೩।।

**ಏವಂ ಲಬ್ಧವರೋ ದೈತ್ಯೋ ಬಿಭ್ರದ್ಧೇಮಮಯಂ ವಪುಃ ।**
**ಭಗವತ್ಯಕರೋದ್ ದ್ವೇಷಂ ಭ್ರಾತುರ್ವಧಮನುಸ್ಮರನ್ ।।೪।।**

**ಏವಂ** ಮೇಲೆ ಹೇಳಿದಂತೆ **ಲಬ್ಧವರಃ ಸನ್** ವರ ಪಡೆದವನಾಗಿ **ಹೇಮಮಯಂ** ಬಂಗಾರದಂತೆ ಕಾಂತಿಯುಕ್ತವಾದ **ವಪುಃ** ಶರೀರವನ್ನು **ಬಿಭ್ರತ್** ಧರಿಸಿದ **ದೈತ್ಯಃ** ಭಕ್ತನಾದ ಜಯನೊಡನೆ ಆ ದೇಹದಲ್ಲಿದ್ದ ದೈತ್ಯನು **ಭ್ರಾತುಃ** ತಮ್ಮನಾದ ಹಿರಣ್ಯಾಕ್ಷನ **ವಧಂ** ವರಾಹರೂಪಿ ಶ್ರೀಹರಿಯಿಂದ ಆದ ಸಂಹಾರವನ್ನು **ಅನುಸ್ಮರನ್** ಸ್ಮರಿಸುತ್ತ **ಭಗವತಿ** ಶ್ರೀಹರಿಯಲ್ಲಿ **ದ್ವೇಷಂ ಅಕರೋತ್** ಕ್ರೋಧವನ್ನು ಮಾಡಿದನು.

ಹಿಂದಿನ ಅಧ್ಯಾಯದಲ್ಲಿ ಇವನು ಸ್ತುತಿಮಾಡಿ ಭಕ್ತಿ ತೋರಿಸುವನು. ಈಗ ಹೇಗೆ ದ್ವೇಷಮಾಡಿದ ಎಂದರೆ ಉಪಪತ್ತಿ ಹೇಳುವರು-

**... ತಾತ್ಪರ್ಯ ...**

**ಸ್ವತೋ ಭಕ್ತಾ ಹಿರಣ್ಯಾದ್ಯಾ ಪರಾವೇಶಾದ್ಧರೌ ದ್ವಿಷಃ ।**

ಜಯಾಂಶನಾದ್ದರಿಂದ ಸ್ವಾಭಾವಿಕಭಕ್ತರಾಗಿದ್ದರೂ ಹಿರಣ್ಯಕಶಿಪು ಮುಂತಾದವರು ಶತ್ರುವಾದ ಅಸುರಾವೇಶದಿಂದ ಹರಿಯ ದ್ವೇಷಮಾಡುವರು ಎಂದು ಭಾವ. ।।೪।।

**ಸ ವಿಜಿತ್ಯ ದಿಶಃ ಸರ್ವಾ ಲೋಕಾಂಶ್ಚ ತ್ರೀನ್ ಮಹಾಸುರಃ ।**
**ದೇವಾಸುರಮನುಷ್ಯೇಂದ್ರಾನ್ ಗಾಂಧರ್ವಗರುಡೋರಗಾನ್ ।।೫।।**

**ಸಿದ್ಧಚಾರಣವಿದ್ಯಾಧ್ರಾನ್ ಋಷೀನ್ ಪಿತೃಪತೀನ್ ಮನೂನ್ ।**
**ಯಕ್ಷರಕ್ಷಃಪಿಶಾಚೇಶಾನ್ ಪ್ರೇತಭೂತಪತೀನಪಿ ।।೬।।**

**ಸರ್ವಸತ್ತ್ವಪತೀನ್ ಜಿತ್ವಾ ವಶಮಾನೀಯ ವಿಶ್ವಜಿತ್ ।**
**ಜಹಾರ ಲೋಕಪಾಲಾನಾಂ ಸ್ಥಾನಾನಿ ಸಹ ತೇಜಸಾ ॥೭॥**

**ಸಃ ಮಹಾಸುರಃ** ಹಿರಣ್ಯಕಶಿಪುವು **ಸರ್ವಾಃ ದಿಶಃ** ಎಲ್ಲ ದಿಕ್ಕುಗಳನ್ನು **ತ್ರೀನ್ ಲೋಕಾನ್ ಚ** ಮೂರು ಲೋಕಗಳನ್ನು **ವಿಜಿತ್ಯ** ಗೆದ್ದು **ದೇವಾಸುರಮನುಷ್ಯೇಂದ್ರಾನ್** ದೇವತೆಗಳನ್ನು ಮನುಷ್ಯರನ್ನು ಇಂದ್ರನನ್ನು **ಗಂಧರ್ವಗರುಡೋರಗಾನ್** ಗಂಧರ್ವರನ್ನು ಗರುಡರನ್ನು ಶೇಷ ವಾಸುಕಿ ಮೊದಲಾದ ಸರ್ಪಗಳನ್ನು **ಸಿದ್ಧಚಾರಣವಿದ್ಯಾಧ್ರಾನ್** ಸಿದ್ಧರನ್ನು ಚಾರಣರನ್ನು ವಿದ್ಯಾಧರರನ್ನು **ಋಷೀನ್** ಋಷಿಗಳನ್ನು **ಪಿತೃಪತೀನ್** ಚಿರಪಿತೃಗಳನ್ನು **ಮನೂನ್** ಮನುಗಳನ್ನು **ಯಕ್ಷರಕ್ಷಃಪಿಶಾಚೇಶಾನ್** ಯಕ್ಷರು ರಾಕ್ಷಸರು ಪಿಶಾಚಪತಿಗಳನ್ನು **ಪ್ರೇತಭೂತಪತೀನ್ ಅಪಿ** ಪ್ರೇತಗಳನ್ನು, ಭೂತಗಣಕ್ಕೆ ಅಧಿಪತಿಗಳನ್ನು **ಸರ್ವಸತ್ತ್ವಪತೀನ್** ಎಲ್ಲ ಬಲಶ್ರೇಷ್ಠರನ್ನು (ಸಿಂಹಮೊದಲಾದ ಅತಿಬಲಿಷ್ಠ ಮೃಗಗಳನ್ನು) **ಜಿತ್ವಾ** ಗೆದ್ದು ಜಗತ್ತನ್ನೇ ಗೆದ್ದ ಆ ಅಸುರರನ್ನು **ವಶಂ ಆನೀಯ** ತನ್ನ ಅಧೀನಮಾಡಿಕೊಂಡು **ತೇಜಸಾ ಸಹ** ಅವರ ಸಾಮರ್ಥ್ಯದೊಂದಿಗೆ **ಲೋಕಪಾಲಾನಾಂ** ಇಂದ್ರಮೊದಲಾದ ಲೋಕಪಾಲಕರ **ಸ್ಥಾನಾನಿ** ಸ್ಥಾನಗಳನ್ನು **ಜಹಾರ** ಅಪಹರಿಸಿದನು. (ಆಕ್ರಮಿಸಿದನು) ॥೫,೬,೭॥

ವಿಶೇಷ :- **ಗಂಧರ್ವಗರುಡಾಃ** ಗಂಧರ್ವಶ್ರೇಷ್ಠಾ ಎಂದೂ ವ್ಯಾಖ್ಯಾನಿಸಿರುವರು ಅಥವಾ ಗರುಡಜಾತಿಯ ಪಕ್ಷಿಗಳನ್ನು ಎಂದರ್ಥ.

**ದೇವೋದ್ಯಾನಶ್ರೀಯಾ ಜುಷ್ಟಮಧ್ಯಾಸ್ತೇ ಸ್ಮ ತ್ರಿವಿಷ್ಟಪಮ್ ।**
**ಮಹೇಂದ್ರಭವನಂ ಸಾಕ್ಷಾನ್ನಿರ್ಮಿತಂ ವಿಶ್ವಕರ್ಮಣಾ ॥೮॥**

**ವಿಶ್ವಜಿತ್ ಸಃ** ಚರಾಚರ ಜಗತ್ತನ್ನೇ ಜಯಿಸಿದ ಆ ಹಿರಣ್ಯಕಶಿಪುವು **ದೇವೋದ್ಯಾನಶ್ರಿಯಾ** ನಂದನವನದ ಕಾಂತಿಯಿಂದ **ಜುಷ್ಟಂ** ಕೂಡಿದ **ತ್ರಿವಿಷ್ಟಪಂ** ಮೂರು ಸ್ಥಳಗಳುಳ್ಳ ಸ್ವರ್ಗವನ್ನು **ಅಧ್ಯಾಸ್ತೇ ಸ್ಮ** ವಾಸಿಸುತ್ತಿದ್ದನು ಅದರಲ್ಲಿಯೂ **ಸಾಕ್ಷಾತ್** ನಾಲ್ಕನೆಯದಾದ **ವಿಶ್ವಕರ್ಮಣಾ** ವಿಶ್ವಕರ್ಮನಿಂದ **ನಿರ್ಮಿತಂ** ನಿರ್ಮಿಸಲ್ಪಟ್ಟ **ಮಹೇಂದ್ರಭವನಂ** ಇಂದ್ರನ ವಾಸಸ್ಥಳವಾದ ಅಮರಾವತಿ ನಗರದಲ್ಲಿ **ಅಧ್ಯಾಸ್ತೇ ಸ್ಮ** ವಾಸಿಸುತ್ತಿದ್ದನು. ಅಥವಾ ವಿಶ್ವಕರ್ಮನಿಂದ ನಿರ್ಮಿತವಾದ, ನಂದನವನದ ಕಾಂತಿಯಿಂದ ಕೂಡಿದ ಮಹೇಂದ್ರನ ಮನೆಯಾದ ಮೂರು ಸ್ಥಾನಗಳುಳ್ಳ ಸ್ವರ್ಗದಲ್ಲಿ **ಸಾಕ್ಷಾತ್** ಪ್ರತ್ಯಕ್ಷವಾಗಿ ವಾಸಿಸಿದನು.

ವಿಶೇಷ :- ಮಿಕ್ಕೆಲ್ಲ ಕಡೆಗಳಲ್ಲಿ ತನ್ನ ಪ್ರಭಾವದಿಂದ ನೆಲಿಸಿದ್ದನು 'ಸಾಕ್ಷಾತ್ ಪ್ರತ್ಯಕ್ಷತುರ್ಯಯೋಃ'ಎಂಬ ಕೋಶದಂತೆ ಪ್ರತ್ಯಕ್ಷ ಮತ್ತು ನಾಲ್ಕನೆಯ ಎಂದು ಎರಡರ್ಥ. ಸ್ವರ್ಗದಲ್ಲಿ ಮೂರು ಸ್ಥಳಗಳು. ಸುಕೃತಿಗಳು ವಾಸಿಸುವ ಭಾಗ, ಗಂಧರ್ವಾದಿಗಳು ಇರುವ ಭಾಗ, ಕುಬೇರಾದಿಗಳು ಲೋಕಪಾಲಕರಿರುವ ಭಾಗ. ಇವುಗಳಿಗಿಂತ ಶ್ರೇಷ್ಠವಾದದ್ದು ಇಂದ್ರದೇವರು ನೆಲಿಸುವ ಅಮರಾವತಿನಗರ. ಆದ್ದರಿಂದ ಅದಕ್ಕೆ ನಾಲ್ಕನೇ ಸ್ಥಾನವೆಂದು ಪ್ರಸಿದ್ಧಿ. ಇಲ್ಲಿ ಎಲ್ಲ ಸಂಪತ್ತು ತುಂಬಿದೆ. ಅದಕ್ಕಾಗಿಯೇ ಮುಂದಿನ ಶ್ಲೋಕದಲ್ಲಿ 'ಅಖಿಲರ್ದ್ಧಿಮತ್' ಎಂದು ವಿಶೇಷಣ ಕೊಟ್ಟಿರುವರು. ತ್ರಿವಿಷ್ಟಪ ಈ ಶಬ್ದದ ಯೌಗಿಕಾರ್ಥವನ್ನು ನೋಡಿ ಮೂರು ಸ್ಥಾನಗಳುಳ್ಳದ್ದು ಎಂಬುದು ನಿಶ್ಚಿತವಾಗುವದು. ತ್ರಿದಿವ ಎಂಬ ಸ್ವರ್ಗವಾಚಕ ಪದವೂ ಇದನ್ನೇ ತಿಳಿಸುವದು. ಎಲ್ಲ ಸ್ಥಾನಗಳೂ ಸಮಸ್ತ ಸಂಪತ್ತಿನಿಂದ ಕೂಡಿವೆ. ಹೀಗೆ ಒಪ್ಪಿಕೊಳ್ಳದೆ ಇದ್ದರೆ ತ್ರಿ ಎಂಬ ಪದಕ್ಕೆ ಗತಿ ಏನೆಂದು ಹೇಳಬೇಕಾಗುವದು.

**ತ್ರೈಲೋಕ್ಯಲಕ್ಷ್ಮ್ಯಾಯತನಮಧ್ಯುವಾಸಾಖಿಲರ್ದ್ಧಿಮತ್ ।**
**ಯತ್ರ ವಿದ್ರುಮಸೋಪಾನಾ ಮಹಾಮರಕತಾ ಭುವಃ ॥೯॥**

**ಯತ್ರ ಸ್ಫಟಿಕಕುಡ್ಯಾನಿ ವೈಡೂರ್ಯಸ್ತಂಭಪಂಕ್ತಯಃ ।**
**ಯತ್ರ ಚಿತ್ರವಿತಾನಾನಿ ಪದ್ಮರಾಗಾಸನಾನಿ ಚ ॥೧೦॥**

**ಪಯಃ ಫೇನನಿಭಾಃ ಶಯ್ಯಾ ಮುಕ್ತಾದಾಮಪರಿಚ್ಛದಾಃ ।**
**ಕೂಜದ್ಭಿರ್ನೂಪುರೈರ್ದೇವ್ಯಃ ಶಬ್ದಯಂತ್ಯ ಇತಸ್ತತಃ ॥**
**ರತ್ನಸ್ಥಲೇಷು ಪಶ್ಯಂತಿ ಸುದತೀಃ ಸುಂದರಂ ಮುಖಮ್ ॥೧೧॥**

**ಯತ್ರ** ಯಾವ ಅಮರಾವತಿಯಲ್ಲಿ **ವಿದ್ರುಮಸೋಪಾನಾಃ** ಹವಳದಿಂದ ಮಾಡಿದ ಮೆಟ್ಟಲುಗಳು **ಭುವಃ** ನೆಲಗಳು **ಮಹಾಮರಕತಾಃ** ಇಂದ್ರನೀಲಮಣಿಗಳಿಂದ ಮಾಡಿದವುಗಳು **ಸ್ಫಟಿಕಕುಡ್ಯಾನಿ** ಸ್ಫಟಿಕಶಿಲೆಯ ಗೋಡೆಗಳು **ವೈಡೂರ್ಯ-ಸ್ತಂಭಪಂಕ್ತಯಃ** ವೈಡೂರ್ಯದಿಂದ ಮಾಡಿದ ಖಂಬಗಳ ಸಾಲುಗಳು **ಯತ್ರ** ಎಲ್ಲಿ **ಚಿತ್ರವಿತಾನಾನಿ** ಚಿತ್ರವರ್ಣದ ಮೇಲ್ಛಾವಣಿಗೆ ಹಾಕಿರುವ ಬಟ್ಟೆಗಳು **ಪದ್ಮರಾಗಾಸನಾನಿ ಚ** ಪದ್ಮರಾಗ(ಕೆಂಪು) ಮಣಿಗಳ ಆಸನಗಳು **ಯತ್ರ** ಎಲ್ಲಿ **ಪಯಃ ಫೇನನಿಭಾಃ ಶಯ್ಯಾಃ** ಹಾಲಿನ ನೊರೆಯಂತೆ ಬೆಳ್ಳಗಿರುವ ಹಾಸಿಗೆಗಳು **ಮುಕ್ತಾದಾಮಪರಿಚ್ಛದಾಃ** ಮುತ್ತಿನ ಹಗ್ಗ(ಹಾರ)ಗಳ ಅಲಂಕಾರಗಳು **ಯತ್ರ** ಎಲ್ಲಿ **ಸುದತೀಃ** ಸುಂದರವಾದ ಹಲ್ಲುಗಳ ಸಾಲುಗಳುಳ್ಳ **ದೇವ್ಯಃ** ದೇವತಾಸ್ತ್ರೀಯರು **ಇತಸ್ತತಃ** ಇತ್ತ ಅತ್ತ ಸಂಚರಿಸುತ್ತಾ **ಕೂಜದ್ಭಿಃ** ಧ್ವನಿಮಾಡುವ **ನೂಪುರೈಃ** ಪಾದಾಭರಣಗಳಿಂದ **ಶಬ್ದಯಂತ್ಯಃ** ಶಬ್ದಮಾಡುವವರಾಗಿ **ರತ್ನಸ್ಥಲೇಷು** ರತ್ನಗಳಿಂದ ಮಾಡಿದ ಭೂಮಿಗಳಲ್ಲಿ **ಸುಂದರಂ ಮುಖಂ** ತಮ್ಮ

ಸುಂದರಮುಖಗಳನ್ನು **ಪಶ್ಯಂತಿ** ನೋಡಿಕೊಳ್ಳುತ್ತಾರೆಯೋ **ತತ್** ಆ **ತ್ರೈಲೋಕ್ಯ-ಲಕ್ಷ್ಮ್ಯಾಯತನಂ** ಮೂರು ಲೋಕದ ಸಂಪತ್ತಿಗೆ ಆವಾಸಸ್ಥಾನವಾದ **ಅಖಿಲರ್ದ್ಧಿಮತ್** ಎಲ್ಲ ಬಗೆಯ ಸಮೃದ್ಧಿಯುಳ್ಳ ಅಮರಾವತಿಯಲ್ಲಿ ಆ ಅಸುರನು **ಅಧ್ಯುವಾಸ** ವಾಸಿಸಿದನು. ।।೯,೧೦,೧೧।।

**ತಸ್ಮಿನ್ ಮಹೇಂದ್ರಭವನೇ ಮಹಾಸುರೋ**
**ಮಹಾಬಲೋ ನಿರ್ಜಿತಲೋಕ ಏಕರಾಟ್ ।**
**ರೇಮೇಽಭಿವಂದ್ಯಾಂಘ್ರಿಯುಗಃ ಸುರಾದಿಭಿಃ**
**ಪ್ರತಾಪಿತೈರೂರ್ಜಿತಚಂಡಶಾಸನಃ ।।೧೨।।**

**ಮಹಾಬಲಃ** ಮಹಾಬಲಿಷ್ಠನಾದ **ನಿರ್ಜಿತಲೋಕಃ** ಲೋಕವನ್ನು ಗೆದ್ದ **ಏಕರಾಟ್** ಚಕ್ರವರ್ತಿಯಾದ **ಮಹಾಸುರಃ** ಆ ಮಹಾಸುರನು **ಪ್ರತಾಪಿತೈಃ** ತನ್ನಿಂದ ತಾಪಕ್ಕೆ ಒಳಗಾದ ತನ್ನ ಪ್ರಭಾವಕ್ಕೆ ಒಳಪಟ್ಟ **ಸುರಾದಿಭಿಃ** ದೇವತೆಗಳನ್ನು ಬಿಟ್ಟು ಗಂಧರ್ವರೇ ಮೊದಲಾದವರಿಂದ(ಅತದ್ಗುಣಸಂವಿಜ್ಞಾನಬಹುವ್ರೀಹಿ)**ಅಭಿವಂದ್ಯಾಂಘ್ರಿಯುಗಃ** ಯಜ್ಞಯಾಗವಿಲ್ಲದ ದೇವತೆ ಮೊದಲಾದವರಿಂದ ನಮಸ್ಕೃತವಾದ ಎರಡು ಕಾಲುಗಳುಳ್ಳ. **ಊರ್ಜಿತಚಂಡಶಾಸನಃ** ಬಹಳ ಕ್ರೂರವಾದ ಶಾಸನವುಳ್ಳವನಾಗಿ **ತಸ್ಮಿನ್ ಮಹೇಂದ್ರಭವನೇ** ಆ ಅಮರಾವತಿಯಲ್ಲಿ **ರೇಮೇ** ಕ್ರೀಡಿಸಿದನು.

ವಿಶೇಷ ಃ-ಮುಂದೆ 'ವಿನಾ ತ್ರಿಭಿಃ' ಎಂದು ಹೇಳಿದ್ದರಿಂದ ಸುರಶಬ್ದಕ್ಕೆ ದೇವತೆಗಳನ್ನು ಬಿಟ್ಟು ಗಂಧರ್ವರೇ ಮೊದಲಾದವರು ಎಂದು ಅರ್ಥಮಾಡಬೇಕು.

**ತಮಂಗ ಮತ್ತಂ ಮಧುನೋರುಗಂಧಿನಾ**
**ವಿವೃತ್ತತಾಮ್ರಾಕ್ಷಮಶೇಷಧಿಷ್ಣ್ಯಪಾಃ ।**
**ಉಪಾಸತೋಪಾಯನಪಾಣಿಭಿರ್ವಿನಾ**
**ತ್ರಿಭಿಸ್ತಪೋ ಯೋಗಬಲೌಜಸಾಂ ಪದಮ್ ।।೧೩।।**

**ಅಂಗ** ಧರ್ಮರಾಜನೇ **ಉರುಗಂಧಿನಾ** ಹೆಚ್ಚು ವಾಸನೆಯುಳ್ಳ **ಮಧುನಾ** ಮದ್ಯದಿಂದ **ಮತ್ತಂ** ಮದಿಸಿದ **ವಿವೃತ್ತತಾಮ್ರಾಕ್ಷಂ** ಅತ್ತ ಇತ್ತ ತಿರುಗಿಸಿದ ಅಗಲವಾದ ಕೆಂಗಣ್ಣುಳ್ಳ **ತಪೋಯೋಗಬಲೌಜಸಾಂ** ತಪಸ್ಸು ಅಣಿಮಾದಿಯೋಗಗಳು ಮತ್ತು ಸಾಮರ್ಥ್ಯಗಳಿಗೆ **ಪದಂ** ಆಶ್ರಯನಾದ **ತಂ** ಆ ಮಹಾಸುರನನ್ನು **ತ್ರಿಭಿಃ ವಿನಾ** ಆದಿತ್ಯವಸುರುದ್ರರೆಂಬ ಮೂರು ಬಗೆಯ ದೇವತೆಗಳನ್ನು ಬಿಟ್ಟು **ಅಶೇಷಧಿಷ್ಣ್ಯಪಾಃ** ಎಲ್ಲ ಗಂಧರ್ವಾದಿ ಲೋಕಪಾಲಕರು **ಉಪಾಯನಪಾಣಿಭಿಃ** ಕಾಣಿಕೆಯಿಂದ ಯುಕ್ತವಾದ ಕೈಗಳಿಂದ **ಉಪಾಸತೇ** ಸೇವಿಸಿದರು.

ಮೂವರನ್ನು ಬಿಟ್ಟು ಎಂಬುದಕ್ಕೆ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಬಿಟ್ಟು ಎಂದರ್ಥ ಸರಿಯಲ್ಲ ಎಂಬ ಅಭಿಪ್ರಾಯದಿಂದ ವಿವಕ್ಷಿತತಾತ್ಪರ್ಯವನ್ನು ಪ್ರಮಾಣದಿಂದ ತಿಳಿಸುವರು-

**... ತಾತ್ಪರ್ಯ ...**

**ಆದಿತ್ಯಾ ವಸವೋ ರುದ್ರಾಸ್ತ್ರಿವಿಧಾ ಹಿ ಸುರಾ ಯತಃ ।**
**ಮರುತಶ್ಚೈವ ವಿಶ್ವೇ ಚ ಸಾಧ್ಯಾಶ್ಚೈವ ಚ ತದ್ಗತಾಃ ॥**
**ಅತಸ್ತ್ರಯಃ ಇತಿ ಪ್ರೋಕ್ತಾಶ್ಚತ್ವಾರೋ ಮಾನುಷಾ ಸ್ಮೃತಾಃ ॥ ಇತಿ ಸ್ಕಾಂದೇ ॥**

**ಉಪಾಯನಂ ದದುಃ ಸರ್ವೇ ವಿನಾ ದೇವಾನ್‌ಹಿರಣ್ಯಕೇ ॥ ಇತಿ ಚ ॥**
**ಅಯಜ್ಞಭಾಗೇಷ್ವಪಿ ತು ಸುರಶಬ್ದಃ ಪ್ರದೃಶ್ಯ(ಯುಜ್ಯ)ತೇ ।**
**ಯಜ್ಞಭಾಗಭುಜಸ್ತ್ವೇವ ತ್ರಯ ಇತ್ಯಭಿಶಬ್ದಿತಾಃ ॥ ಇತಿ ಚ ॥**

ಆದಿತ್ಯರು, ವಸುಗಳು, ರುದ್ರರು ಹೀಗೆ ದೇವತೆಗಳು ಮೂರುವಿಧರು, ಮರುತ್‌ಗಳು, ವಿಶ್ವೇದೇವತೆಗಳು ಸಾಧ್ಯರು ಇವರು ಆದಿತ್ಯಾದಿಗಳಲ್ಲಿಯೇ ಸೇರಿರುತ್ತಾರೆ. ಆದ ಕಾರಣ ತ್ರಯಃ ಎಂದು ಹೇಳಲ್ಪಡುತ್ತಾರೆ. ಮನುಷ್ಯರು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂದು ನಾಲ್ಕು ವಿಧರು ಚತ್ವಾರಾಃ ಎನಿಸುತ್ತಾರೆ. ತ್ರಯ ಎಂದು ಹೇಳಿದ ಆದಿತ್ಯವಸುರುದ್ರರನ್ನು, ಚತ್ವಾರಃ ಎಂದು ಹೇಳಿದಲ್ಲಿ ಮನುಷ್ಯರನ್ನು ಇಟ್ಟುಕೊಳ್ಳಬೇಕು ಎಂದು ಸ್ಕಾಂದದಲ್ಲಿದೆ.

ಆದಿತ್ಯಾದಿಗಳನ್ನು ಬಿಟ್ಟು ಎಲ್ಲ ದೇವತೆಗಳು ಹಿರಣ್ಯಕಶಿಪುವಿಗೆ ಕೈಯ್ಯಲ್ಲಿ ಕಾಣಿಕೆಯನ್ನು ತಂದು ಕೊಟ್ಟರು. ಯಜ್ಞಭಾಗರಹಿತರು ಇಲ್ಲಿ ಸುರರೆನಿಸುತ್ತಾರೆ. ಯಜ್ಞಭಾಗಕ್ಕೆ ಅರ್ಹರಾದವರು ತ್ರಯಃ ಎನಿಸುತ್ತಾರೆ. ಆ ಆದಿತ್ಯಾದಿಗಳು ಕಾಣಿಕೆಯನ್ನು ಕೊಡಲಿಲ್ಲ. ॥೧೩॥

**ಜಗುರ್ಮಹೇಂದ್ರಾಸನಮೋಜಸಾ ಸ್ಥಿತಂ**
**ವಿಶ್ವಾವಸುಸ್ತುಂಬುರುರಸ್ಮದಾದಯಃ ।**
**ಗಂಧರ್ವಸಿದ್ಧಾ ಋಷಯೋಽಸ್ತುವನ್ ಮುಹು-**
**ರ್ವಿದ್ಯಾಧರಾ ಅಪ್ಸರಸಶ್ಚ ಪಾಂಡವ ॥೧೪॥**

**ಹೇ ಪಾಂಡವ** ಧರ್ಮರಾಜನೇ **ಓಜಸಾ** ತನ್ನ ಸಾಮರ್ಥ್ಯದಿಂದ **ಮಹೇಂದ್ರಾಸನಂ ಸ್ಥಿತಂ** ಇಂದ್ರನ ಸಿಂಹಾಸನವನ್ನು ಆಕ್ರಮಿಸಿದ್ದ ಆ ದೈತ್ಯನನ್ನು **ವಿಶ್ವಾವಸುಃ ತುಂಬುರುಃ ಅಸ್ಮದಾದಯಃ** ವಿಶ್ವಾವಸುವು, ತುಂಬುರು ಗಂಧರ್ವನು ಮತ್ತು ನಾರದ ಮೊದಲಾದವರು **ಮುಹುಃ** ಮತ್ತೆ ಮತ್ತೆ **ಜಗುಃ** ಗಾನಮಾಡಿದರು **ಗಂಧರ್ವಸಿದ್ಧಾಃ** ಗಂಧರ್ವರು, ಸಿದ್ಧರು **ಋಷಯಃ** ಋಷಿಗಳು **ವಿದ್ಯಾಧರಾಃ**

ವಿದ್ಯಾಧರರು **ಚ** ಮತ್ತು **ಅಪ್ಸರಸಃ** ಅಪ್ಸರೆಯರು **ಮುಹುಃ ಅಸ್ತುವನ್** ಮತ್ತೆ ಮತ್ತೆ ಸ್ತೋತ್ರಮಾಡಿದರು. ।।೧೪।।

**ಸ ಏವ ವರ್ಣಾಶ್ರಮಿಭಿಃ ಕ್ರತುಭಿರ್ಭೂರಿದಕ್ಷಿಣೈಃ ।**
**ಇಜ್ಯಮಾನೋ ಹವಿರ್ಭಾಗಾನಗ್ರಹೀತ್ ಸ್ವೇನ ತೇಜಸಾ ।।೧೫।।**

**ಸಃ ಏವ** ಆ ದೈತ್ಯನೇ **ವರ್ಣಾಶ್ರಮಿಭಿಃ** ನಾಲ್ಕುವರ್ಣದವರಿಂದ ಬ್ರಹ್ಮಚರ್ಯ ಮೊದಲಾದ ಆಶ್ರಮದವರಿಂದ ಮಾಡಲ್ಪಟ್ಟ **ಭೂರಿದಕ್ಷಿಣೈಃ** ಬಹುದಕ್ಷಿಣೆಯುಳ್ಳ **ಕ್ರತುಭಿಃ** ಯಜ್ಞಯಾಗಾದಿಗಳಿಂದ **ಸ್ವೇನ ತೇಜಸಾ** ತನ್ನ ಸಾಮರ್ಥ್ಯದಿಂದ **ಹವಿರ್ಭಾಗಾನ್** ಇಂದ್ರ ಮೊದಲಾದ ಶಬ್ದಗಳಿಂದ ಕೊಡಲ್ಪಟ್ಟ ಮಂತ್ರಪೂರ್ವಕ ಆಹುತಿಗಳನ್ನು **ಇಜ್ಯಮಾನಃ ಸನ್** ಯಾಗದ ಉದ್ದೇಶ್ಯನಾಗಿ **ಅಗ್ರಹೀತ್** ತೆಗೆದುಕೊಂಡನು. ।।೧೫।।

**ಅಕೃಷ್ಟಪಚ್ಯಾ ತಸ್ಯಾಸೀತ್ಸಪ್ತದ್ವೀಪವತೀ ಮಹೀ ।**
**ತಥಾ ಕಾಮದುಘಾ ದ್ಯೌಶ್ಚ ನಾನಾಶ್ಚರ್ಯಪದಂ ನಭಃ ।।೧೬।।**

**ತಸ್ಯ** ಆ ಹಿರಣ್ಯಕಶಿಪುವಿಗೆ **ಸಪ್ತದ್ವೀಪವತೀ ಮಹೀ** ಏಳು ದ್ವೀಪಗಳಿಂದ ಕೂಡಿದ ಭೂಮಿಯು **ಅಕೃಷ್ಟಪಚ್ಯಾ** ನೇಗಲಿನಿಂದ ಊಳದೇ ಇದ್ದರೂ ಬೆಳೆಯುವದಾಗಿ **ಆಸೀತ್** ಆಗಿತ್ತು. **ತಥಾ** ಅದೇ ರೀತಿಯಲ್ಲಿ **ದ್ಯೌಃ ಚ** ಆಕಾಶವೂ **ಕಾಮದುಘಾ** ಬೇಕಾದಾಗ ಮಳೆಸುರಿಸುವದಾಗಿ **ಆಸೀತ್** ಆಗಿತ್ತು. **ನಭಃ** ಅಂತರಿಕ್ಷವು **ನಾನಾಶ್ಚರ್ಯಪದಂ** ನಾನಾ ನಕ್ಷತ್ರಗ್ರಹಗಳಿಂದ ಕೂಡಿದ್ದಾಗಿದ್ದಿತು. ।।೧೬।।

**ರತ್ನಾಕರಾಶ್ಚ ರತ್ನಾನಿ ತತ್ಪತ್ನ್ಯಶ್ಚೋಹುರೂರ್ಮಿಭಿಃ ।**
**ಕ್ಷಾರಸೀಧುಘೃತಕ್ಷೌದ್ರದಧಿಕ್ಷೀರಾಮೃತೋದಕಾಃ ।।೧೭।।**

**ಕ್ಷಾರ** ಉಪ್ಪು **ಸೀಧು** ಮದ್ಯ **ಘೃತ** ತುಪ್ಪ **ಕ್ಷೌದ್ರ** ಜೇನುತುಪ್ಪ ಅಥವಾ ಕಬ್ಬಿನ ರಸ **ದಧಿ** ಮೊಸರು **ಕ್ಷೀರ** ಹಾಲು **ಅಮೃತೋದಕಾಃ** ಅಮೃತವೇ ನೀರಾಗಿವುಳ್ಳ **ರತ್ನಾಕರಾಃ ಚ** ಸಮುದ್ರಗಳು **ತತ್ಪತ್ನ್ಯಃ ಚ** ಅವನ ಹೆಂಡತಿಯರಾದ ನದಿಗಳು **ರತ್ನಾನಿ** ರತ್ನಗಳನ್ನು **ಊರ್ಮಿಭಿಃ** ತೆರೆಗಳಿಂದ ದಡಕ್ಕೆ **ಊಹುಃ** ಎತ್ತಿ ತಂದು ಹಾಕುತ್ತಿದ್ದವು.

**ಶೈಲಾ ದ್ರೋಣೀಭಿರಾಕ್ರೀಡಂ ಸರ್ವರ್ತುಷು ಗುಣಾನ್ ದ್ರುಮಾಃ ।**
**ದಧಾರ ಲೋಕಪಾಲಾನಾಂ ಏಕ ಏವ ಪೃಥಗ್ಗುಣಾನ್ ।।೧೮।।**

**ಶೈಲಾಃ** ಪರ್ವತಗಳು **ದ್ರೋಣೀಭಿಃ** ಇಳಿಜಾರು ಪ್ರದೇಶಗಳಿಂದ **ಆಕ್ರೀಡಂ** ಕ್ರೀಡಾ ಸ್ಥಾನವನ್ನು **ದ್ರುಮಾಃ** ಗಿಡಗಳು **ಸರ್ವರ್ತುಷು** ಎಲ್ಲ ಋತುಗಳಲ್ಲಿಯೂ **ಗುಣಾನ್**

ಹೂವು ಹಣ್ಣು ಮೊದಲಾದ ಸಂಪತ್ತನ್ನು **ತಸ್ಯ** ಅವನಿಗಾಗಿ **ಊಹುಃ** ಧರಿಸಿದವು **ಏಕ ಏವ** ಆ ದೈತ್ಯನೊಬ್ಬನೇ **ಲೋಕಪಾಲಕಾನಾಂ** ಲೋಕಪಾಲಕರಾದ ಇಂದ್ರಾದಿಗಳ **ಪೃಥಗ್ಗುಣಾನ್** ಬೇರೆ ಬೇರೆ ಗುಣಗಳನ್ನು ಅಂದರೆ ಮಳೆ ಸುರಿಸುವದು ಮುಂತಾದ ಸಾಮರ್ಥ್ಯವನ್ನು **ದಧಾರ** ಹೊಂದಿದ್ದನು. ।।೧೮।।

**ಸ ಇತ್ಥಂ ನಿರ್ಜಿತಕಕುಬೇಕರಾಡ್ವಿಷಯಾನ್ ಪ್ರಿಯಾನ್ ।**
**ಯಥೋಪಜೋಷಂ ಭುಂಜಾನೋ ನಾತೃಪ್ಯದಜಿತೇಂದ್ರಿಯಃ ।।೧೯।।**

**ಇತ್ಥಂ** ಈ ರೀತಿ **ನಿರ್ಜಿತಕಕುಪ್** ದಿಕ್ಕುಗಳನ್ನು ಗೆದ್ದ **ಏಕರಾಟ್** ಒಬ್ಬನೇ ಮುಖ್ಯರಾಜನಾದ **ಅಜಿತೇಂದ್ರಿಯಃ** ಇಂದ್ರಿಯಜಯಗಳಿಸದ **ಸಃ** ಆ ದೈತ್ಯನು **ಪ್ರಿಯಾನ್** ಇಂದ್ರಿಯಗಳಿಗೆ ಪ್ರೀತಿಯನ್ನುಂಟುಮಾಡುವ **ವಿಷಯಾನ್** ಶಬ್ದಾದಿ ವಿಷಯಗಳನ್ನು **ಯಥೋಪಜೋಷಂ** ಸುಖವಾಗುವಂತೆ ತನ್ನ ಇಚ್ಛೆಗೆ ಬಂದಂತೆ **ಭುಂಜಾನಃ ಅಪಿ** ಅನುಭವಿಸುತ್ತಿದ್ದರೂ **ನ ಅತೃಪತ್** ತೃಪ್ತಿಹೊಂದಲಿಲ್ಲ. ।।೧೯।।

**ಏವಮೈಶ್ವರ್ಯಮತ್ತಸ್ಯ ದೃಪ್ತಸ್ಯೋಚ್ಛಾಸ್ತ್ರವರ್ತಿನಃ ।**
**ಕಾಲೋ ಮಹಾನ್ ವ್ಯತೀಯಾಯ ಬ್ರಹ್ಮಶಾಪಮುಪೇಯುಷಃ ।।೨೦।।**

**ಏವಂ** ಹೀಗೆ **ಐಶ್ವರ್ಯಮತ್ತಸ್ಯ** ಐಶ್ವರ್ಯದಿಂದ ಮದಹೊಂದಿದ **ಉಚ್ಛಾಸ್ತ್ರವರ್ತಿನಃ** ಧರ್ಮಶಾಸ್ತ್ರವನ್ನು ಮೀರಿನಡೆಯುವ ಆದ್ದರಿಂದಲೇ **ದೃಪ್ತಸ್ಯ** ಉದ್ಧಟನಾದ **ಬ್ರಹ್ಮಶಾಪಂ** ಸನಕಾದಿಗಳ ಶಾಪವನ್ನು **ಉಪೇಯುಷಃ** ಹೊಂದಿದ್ದ ದೈತ್ಯನಿಗೆ **ಮಹಾನ್ ಕಾಲಃ** ದೀರ್ಘಕಾಲವು(ಹತ್ತಾರು ಸಾವಿರ ವರ್ಷಗಳು) **ವ್ಯತೀಯಾಯ** ಕಳೆದವು. ।।೨೦।।

**ತಸ್ಯೋಗ್ರದಂಡಸಂವಿಗ್ನಾಃ ಸರ್ವೇ ಲೋಕಾಃ ಸಪಾಲಕಾಃ ।**
**ಅನ್ಯತ್ರಾಲಬ್ಧಶರಣಾಃ ಶರಣಂ ಯಯುರಚ್ಯುತಮ್ ।।೨೧।।**

**ತಸ್ಯ** ಆ ಹಿರಣ್ಯಕಶಿಪುವಿನ **ಉಗ್ರದಂಡಸಂವಿಗ್ನಾಃ** ಕ್ರೂರವಾದ ಶಾಸನದಿಂದ ಭಯಗೊಂಡಿರುವ **ಸಪಾಲಕಾಃ** ಲೋಕಪಾಲಕರಿಂದ ಸಹಿತರಾದ **ಸರ್ವೇ ಲೋಕಾಃ** ಎಲ್ಲ ಜನರು **ಅನ್ಯತ್ರ** ವಿಷ್ಣುವನ್ನು ಬಿಟ್ಟು ಬೇರೆ ದೇವತೆಯಲ್ಲಿ **ಅಲಬ್ಧಶರಣಾಃ** ರಕ್ಷಣೆಯನ್ನು ಹೊಂದದವರಾಗಿ **ಅಚ್ಯುತಂ ಶರಣಂ ಯಯುಃ** ಶ್ರೀಹರಿಯನ್ನು ಮೊರೆ ಹೋದರು, ರಕ್ಷಿಸು ಎಂದು ಪ್ರಾರ್ಥಿಸಿದರು. ।।೨೧।।

**ತಸ್ಮೈ ನಮೋಽಸ್ತು ಕಾಷ್ಠಾಯೈ ಯತ್ರಾತ್ಮಾ ಹರಿರೀಶ್ವರಃ ।**
**ಯದ್ಗತ್ವಾ ನ ನಿವರ್ತಂತೇ ಶಾಂತಾಃ ಸನ್ಯಾಸಿನೋಽಮಲಾಃ ।।೨೨।।**

**ಶಾಂತಾಃ** ಯಾವಾಗಲೂ ಭಗವಂತನಲ್ಲಿಯೇ ಮನಸ್ಸಿಟ್ಟಿರುವ **ಅಮಲಾಃ** ಶುದ್ಧರಾದ **ಸನ್ಯಾಸಿನಃ** ಯತಿಗಳು ಸರ್ವವನ್ನು ಶ್ರೀಹರಿಗೆ ಸಮರ್ಪಿಸುವ ಭಗವದ್ಭಕ್ತರು **ಯತ್** ಯಾವ ಶ್ರೀಹರಿಯ ಸ್ಥಾನವನ್ನು **ಗತ್ವಾ** ಹೊಂದಿ **ನ ನಿವರ್ತಂತೇ** ಮತ್ತೆ ಸಂಸಾರಕ್ಕೆ ತಿರುಗಿರುವದಿಲ್ಲವೋ. **ಯತ್ರ** ಯಾವ ಸ್ಥಾನದಲ್ಲಿ **ಆತ್ಮಾ** ಆದಾನಾದಿಕರ್ತೃವಾದ **ಈಶ್ವರಃ** ನಿಯಾಮಕ ಶ್ರೇಷ್ಠನಾದ **ಹರಿಃ** ಪರಮಾತ್ಮನು **ವರ್ತತೇ** ಇರುವನೋ **ತಸ್ಮೈ** ಅಂತಹ **ಕಾಷ್ಠಾಯೈ** ದಿಕ್ಕಿಗೆ, ತಾರತಮ್ಯದ ಕೊನೆಸ್ಥಾನಕ್ಕೆ **ನಮಃ ಅಸ್ತು** ನಮಸ್ಕಾರವಿರಲಿ. ।।೨೨।।

**ಇತಿ ತೇ ಸಂಯತಾತ್ಮಾನಃ ಸಮಾಹಿತಧಿಯೋಽಮಲಾಃ ।**
**ಉಪತಸ್ಥುರ್ಹೃಷೀಕೇಶಂ ವಿನಿದ್ರಾ ವಾಯುಭೋಜನಾಃ ।।೨೩।।**

**ವಿನಿದ್ರಾಃ** ನಿದ್ರೆಯಿಲ್ಲದ **ವಾಯುಭೋಜನಾಃ** ಗಾಳಿಯೇ ಆಹಾರವಾಗಿವುಳ್ಳ **ಅಮಲಾಃ** ಶುದ್ಧರಾದ **ಸಂಯತಾತ್ಮಾನಃ** ಮನೋನಿಗ್ರಹವುಳ್ಳ **ತೇ** ಲೋಕಪಾಲಕರಿಂದ ಸಹಿತರಾದ ಆ ಜನರು **ಸಮಾಹಿತಧಿಯಃ ಸಂತಃ** ಏಕಾಗ್ರಚಿತ್ತರಾಗಿ **ಇತಿ** ಮುಂದೆ ಹೇಳುವಂತೆ **ಹೃಷೀಕೇಶಂ** ಸರ್ವೇಂದ್ರಿಯ ನಿಯಾಮಕನಾದ ಶ್ರೀಹರಿಯನ್ನು **ಉಪತಸ್ಥುಃ** ಸ್ತೋತ್ರ ಮಾಡಿದರು. ।।೨೩।।

**ಓಂ ನಮೋ ಭಗವತೇ ಮಹಾಪುರುಷಾಯ ಮಹಾತ್ಮನೇ ।**
**ವಿಶುದ್ಧಾನುಭವಾನಂದಸಂದೋಹಾಯ ಯತೋಽಭಯಮ್ ।।೨೪।।**

**ಯತಃ** ಯಾವ ಶ್ರೀಹರಿಯಿಂದ **ಅಭಯಂ** ಜನರಿಗೆ ಭಯರಹಿತವಾದ ಮೋಕ್ಷವಾಗುವದೋ **ತಸ್ಮೈ** ಅಂತಹ ಓಂ ಗುಣಪೂರ್ಣನಾದ **ಮಹಾಪುರುಷಾಯ** ಪುರುಷೋತ್ತಮನಾದ **ಮಹಾತ್ಮನೇ** ಮಹಾಮಹಿಮೋಪೇತನಾದ **ವಿಶುದ್ಧ** ನಿರ್ದೋಷವಾದ(ದುಃಖರಹಿತವಾದ) **ಅನುಭವಾನಂದಸಂದೋಹಾಯ** ಜ್ಞಾನಾನಂದಗಳೇ ದೇಹವಾಗಿವುಳ್ಳ **ಭಗವತೇ** ಸಮಗ್ರ ಐಶ್ವರ್ಯಸಂಪನ್ನನಾದ ಶ್ರೀಹರಿಗೆ **ನಮಃ** ನಮಸ್ಕಾರವು. ।।೨೪।।

**ತೇಷಾಮಾವಿರಭೂದ್ವಾಣೀ ಅರೂಪಾ ಮೇಘನಿಸ್ವನಾ ।**
**ಸನ್ನಾದಯಂತೀ ಕಕುಭಃ ಸಾಧೂನಾಮಭಯಂಕರೀ ।।೨೫।।**

**ಮೇಘನಿಸ್ವನಾಃ** ಮೋಡದ ಗುಡಿಗಿನಂತೆ ಶಬ್ದವುಳ್ಳ ಅದರಿಂದ **ಕಕುಭಃ** ದಿಕ್ಕುಗಳನ್ನು **ಸನ್ನಾದಯಂತಿ** ಶಬ್ದದಿಂದ ತುಂಬಿದ **ಸಾಧೂನಾಂ** ಸಜ್ಜನರಿಗೆ **ಅಭಯಂಕರೀ** ಅಭಯವನ್ನು ಉಂಟುಮಾಡುವ **ಅರೂಪಾ** ಅಶರೀರವಾದ **ವಾಣೀ** ಮಾತು **ತೇಷಾಂ** ಅವರಿಗೆ **ಆವಿರಭೂತ್** ಕೇಳಿಸಿತು. ।।೨೫।।

**ಮಾ ಭೈಷ್ಟ ವಿಬುಧಶ್ರೇಷ್ಠಾಃ ಸರ್ವೇಷಾಂ ಭದ್ರಮಸ್ತು ವಃ ।**
**ಮದ್ದರ್ಶನಂ ಹಿ ಭೂತಾನಾಂ ಸರ್ವಶ್ರೇಯೋಪಪತ್ತಯೇ ॥೨೬॥**

**ಹೇ ವಿಬುಧಶ್ರೇಷ್ಠಾಃ** ದೇವೋತ್ತಮರೇ **ಮಾ ಭೈಷ್ಟ** ಹೆದರ ಬೇಡಿರಿ **ವಃ ಸರ್ವೇಷಾಂ** ನಿಮ್ಮೆಲ್ಲರಿಗೂ **ಭದ್ರಂ ಅಸ್ತು** ಮಂಗಲವಾಗಲಿ **ಭೂತಾನಾಂ** ಪ್ರಾಣಿಗಳಿಗೆ **ಮದ್ದರ್ಶನಂ** ನನ್ನ ಜ್ಞಾನವು **ಸರ್ವಶ್ರೇಯೋಪಪತ್ತಯೇ** ಎಲ್ಲ ಶ್ರೇಯಸ್ಸನ್ನು ಪಡೆಯಲು ಕಾರಣವಾಗುವದು. ॥೨೬॥

**ಜ್ಞಾತಮೇತಸ್ಯ ದೌರಾತ್ಮ್ಯಂ ದೈತೇಯಾಪಸದಸ್ಯ ಯತ್ ।**
**ತಸ್ಯ ಶಾಂತಿಂ ಕರಿಷ್ಯಾಮಿ ಕಾಲಸ್ತಾವತ್ಪ್ರತೀಕ್ಷತಾಮ್ ॥೨೭॥**

**ಏತಸ್ಯ** ಈ **ದೈತೇಯಾಪಸದಸ್ಯ** ಕ್ಷುಲ್ಲಕನಾದ ದೈತ್ಯನ **ಯತ್** ಯಾವ **ದೌರಾತ್ಮ್ಯಂ** ದುಷ್ಟತನವಿದೆಯೋ **ತತ್** ಅದು **ಜ್ಞಾತಂ** ತಿಳಿದಿದೆ. **ತಸ್ಯ** ಆ ದುಷ್ಟತನಕ್ಕೆ **ಶಾಂತಿಂ** ಶಿಕ್ಷೆಯನ್ನು (ಕೊನೆಯನ್ನು). **ಕರಿಷ್ಯಾಮಿ** ಮಾಡುವೆನು. **ತಾವತ್** ಮೊದಲು **ಕಾಲಃ** ಆ ಶಿಕ್ಷೆಯ ಕಾಲವು **ಪ್ರತೀಕ್ಷತಾಂ** ನಿರೀಕ್ಷಿಸಲ್ಪಡಲಿ ಸ್ವಲ್ಪಕಾಲದ ವರೆಗೆ ತಡೆಯಿರಿ ಎಂದರ್ಥ. ॥೨೭॥

**ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ।**
**ಧರ್ಮೇ ಮಯಿ ಚ ವಿದ್ವೇಷಃ ಸ ವಾ ಆಶು ವಿನಶ್ಯತಿ ॥೨೮॥**

**ಯಸ್ಯ** ಯಾವನಿಗೆ **ಯದಾ** ಯಾವಾಗ **ದೇವೇಷು** ದೇವತೆಗಳಲ್ಲಿ **ವೇದೇಷು** ವೇದಗಳಲ್ಲಿ **ಗೋಷು** ಆಕಳುಗಳಲ್ಲಿ **ವಿಪ್ರೇಷು** ಸದಾಚಾರಿಗಳಾದ ಬ್ರಾಹ್ಮಣರಲ್ಲಿ **ಸಾಧುಷು** ಸಜ್ಜನರಲ್ಲಿ **ಧರ್ಮೇ** ಧರ್ಮದಲ್ಲಿ **ಮಯಿ** ನನ್ನಲ್ಲಿ **ಚ** ಮತ್ತು ನನ್ನ ಭಕ್ತರಲ್ಲಿ **ವಿದ್ವೇಷಃ** ವಿಶೇಷವಾದ ದ್ವೇಷವು ಉಂಟಾಗುವದೋ **ಸಃ** ಅವನು **ತದಾ** ಆಗ **ಆಶು** ಬೇಗನೇ, ಸುಖಸಾಧನ ಸಾಮಗ್ರಿ ಇರುವಾಗಲೇ **ವಿನಶ್ಯತಿ** ನಾಶವಾಗುವನು. ॥೨೮॥

**ನಿರ್ವೈರಾಯ ಪ್ರಶಾಂತಾಯ ಸ್ವಸುತಾಯ ಮಹಾತ್ಮನೇ ।**
**ಪ್ರಹ್ಲಾದಾಯ ಯದಾ ದ್ರುಹ್ಯೇದ್ಧನಿಷ್ಯೇಽಪಿ ವರೋರ್ಜಿತಮ್ ॥೨೯॥**

**ನಿರ್ವೈರಾಯ** ಸಜ್ಜನರಲ್ಲಿ ಶತ್ರುವಿಲ್ಲದ **ಪ್ರಶಾಂತಾಯ** ತನ್ನ ವಯಸ್ಸಿಗೆ ಮೀರಿ ಶ್ರೀಹರಿಯಲ್ಲಿಯೇ ನಿಷ್ಠನಾದ **ಮಹಾತ್ಮನೇ** ಮಹಾಮಹಿಮೋಪೇತನಾದ **ಸ್ವಸುತಾಯ** ತನ್ನ ಮಗನಾದ **ಪ್ರಹ್ಲಾದಾಯ** ಪ್ರಹ್ಲಾದನಿಗೆ **ಯದಾ** ಯಾವಾಗ **ದ್ರುಹ್ಯೇತ್** ದ್ರೋಹವನ್ನು ಬಗೆಯುವನೋ **ತದಾ** ಆಗ **ವರೋರ್ಜಿತಂ ಅಪಿ** ವರದಿಂದ ಸಾಮರ್ಥ್ಯವನ್ನು ಪಡೆದಿದ್ದರೂ **ಹನಿಷ್ಯೇ** ಸಂಹರಿಸುತ್ತೇನೆ.

**ಶಾಂತಾಃ** ಯಾವಾಗಲೂ ಭಗವಂತನಲ್ಲಿಯೇ ಮನಸ್ಸಿಟ್ಟಿರುವ **ಅಮಲಾಃ** ಶುದ್ಧರಾದ **ಸನ್ಯಾಸಿನಃ** ಯತಿಗಳು ಸರ್ವವನ್ನು ಶ್ರೀಹರಿಗೆ ಸಮರ್ಪಿಸುವ ಭಗವದ್ಭಕ್ತರು **ಯತ್** ಯಾವ ಶ್ರೀಹರಿಯ ಸ್ಥಾನವನ್ನು **ಗತ್ವಾ** ಹೊಂದಿ **ನ ನಿವರ್ತಂತೇ** ಮತ್ತೆ ಸಂಸಾರಕ್ಕೆ ತಿರುಗಿರುವದಿಲ್ಲವೋ. **ಯತ್ರ** ಯಾವ ಸ್ಥಾನದಲ್ಲಿ **ಆತ್ಮಾ** ಆದಾನಾದಿಕರ್ತೃವಾದ **ಈಶ್ವರಃ** ನಿಯಾಮಕ ಶ್ರೇಷ್ಠನಾದ **ಹರಿಃ** ಪರಮಾತ್ಮನು **ವರ್ತತೇ** ಇರುವನೋ **ತಸ್ಮೈ** ಅಂತಹ **ಕಾಷ್ಠಾಯೈ** ದಿಕ್ಕಿಗೆ, ತಾರತಮ್ಯದ ಕೊನೆಸ್ಥಾನಕ್ಕೆ **ನಮಃ ಅಸ್ತು** ನಮಸ್ಕಾರವಿರಲಿ. ।।೨೨।।

**ಇತಿ ತೇ ಸಂಯತಾತ್ಮಾನಃ ಸಮಾಹಿತಧಿಯೋಽಮಲಾಃ ।**
**ಉಪತಸ್ಥುರ್ಹೃಷೀಕೇಶಂ ವಿನಿದ್ರಾ ವಾಯುಭೋಜನಾಃ ।।೨೩।।**

**ವಿನಿದ್ರಾಃ** ನಿದ್ರೆಯಿಲ್ಲದ **ವಾಯುಭೋಜನಾಃ** ಗಾಳಿಯೇ ಆಹಾರವಾಗಿವುಳ್ಳ **ಅಮಲಾಃ** ಶುದ್ಧರಾದ **ಸಂಯತಾತ್ಮಾನಃ** ಮನೋನಿಗ್ರಹವುಳ್ಳ **ತೇ** ಲೋಕಪಾಲಕರಿಂದ ಸಹಿತರಾದ ಆ ಜನರು **ಸಮಾಹಿತಧಿಯಃ ಸಂತಃ** ಏಕಾಗ್ರಚಿತ್ತರಾಗಿ **ಇತಿ** ಮುಂದೆ ಹೇಳುವಂತೆ **ಹೃಷೀಕೇಶಂ** ಸರ್ವೇಂದ್ರಿಯ ನಿಯಾಮಕನಾದ ಶ್ರೀಹರಿಯನ್ನು **ಉಪತಸ್ಥುಃ** ಸ್ತೋತ್ರ ಮಾಡಿದರು. ।।೨೩।।

**ಓಂ ನಮೋ ಭಗವತೇ ಮಹಾಪುರುಷಾಯ ಮಹಾತ್ಮನೇ ।**
**ವಿಶುದ್ಧಾನುಭವಾನಂದಸಂದೋಹಾಯ ಯತೋಽಭಯಮ್ ।।೨೪।।**

**ಯತಃ** ಯಾವ ಶ್ರೀಹರಿಯಿಂದ **ಅಭಯಂ** ಜನರಿಗೆ ಭಯರಹಿತವಾದ ಮೋಕ್ಷವಾಗುವದೋ **ತಸ್ಮೈ** ಅಂತಹ **ಓಂ** ಗುಣಪೂರ್ಣನಾದ **ಮಹಾಪುರುಷಾಯ** ಪುರುಷೋತ್ತಮನಾದ **ಮಹಾತ್ಮನೇ** ಮಹಾಮಹಿಮೋಪೇತನಾದ **ವಿಶುದ್ಧ** ನಿರ್ದೋಷವಾದ(ದುಃಖರಹಿತವಾದ)**ಅನುಭವಾನಂದಸಂದೋಹಾಯ** ಜ್ಞಾನಾನಂದಗಳೇ ದೇಹವಾಗಿವುಳ್ಳ **ಭಗವತೇ** ಸಮಗ್ರ ಐಶ್ವರ್ಯಸಂಪನ್ನನಾದ ಶ್ರೀಹರಿಗೆ **ನಮಃ** ನಮಸ್ಕಾರವು. ।।೨೪।।

**ತೇಷಾಮಾವಿರಭೂದ್ವಾಣೀ ಅರೂಪಾ ಮೇಘನಿಸ್ವನಾ ।**
**ಸನ್ನಾದಯಂತೀ ಕಕುಭಃ ಸಾಧೂನಾಮಭಯಂಕರೀ ।।೨೫।।**

**ಮೇಘನಿಸ್ವನಾಃ** ಮೋಡದ ಗುಡಿಗಿನಂತೆ ಶಬ್ದವುಳ್ಳ ಅದರಿಂದ **ಕಕುಭಃ** ದಿಕ್ಕುಗಳನ್ನು **ಸನ್ನಾದಯಂತಿ** ಶಬ್ದದಿಂದ ತುಂಬಿದ **ಸಾಧೂನಾಂ** ಸಜ್ಜನರಿಗೆ **ಅಭಯಂಕರೀ** ಅಭಯವನ್ನು ಉಂಟುಮಾಡುವ **ಅರೂಪಾ** ಅಶರೀರವಾದ **ವಾಣೀ** ಮಾತು **ತೇಷಾಂ** ಅವರಿಗೆ **ಆವಿರಭೂತ್** ಕೇಳಿಸಿತು. ।।೨೫।।

**ಮಾ ಭೈಷ್ಟ ವಿಬುಧಶ್ರೇಷ್ಠಾಃ ಸರ್ವೇಷಾಂ ಭದ್ರಮಸ್ತು ವಃ ।**
**ಮದ್ದರ್ಶನಂ ಹಿ ಭೂತಾನಾಂ ಸರ್ವಶ್ರೇಯೋಪಪತ್ತಯೇ ॥೨೬॥**

**ಹೇ ವಿಬುಧಶ್ರೇಷ್ಠಾಃ** ದೇವೋತ್ತಮರೇ **ಮಾ ಭೈಷ್ಟ** ಹೆದರ ಬೇಡಿರಿ **ವಃ ಸರ್ವೇಷಾಂ** ನಿಮ್ಮೆಲ್ಲರಿಗೂ **ಭದ್ರಂ ಅಸ್ತು** ಮಂಗಲವಾಗಲಿ **ಭೂತಾನಾಂ** ಪ್ರಾಣಿಗಳಿಗೆ **ಮದ್ದರ್ಶನಂ** ನನ್ನ ಜ್ಞಾನವು **ಸರ್ವಶ್ರೇಯೋಪಪತ್ತಯೇ** ಎಲ್ಲ ಶ್ರೇಯಸ್ಸನ್ನು ಪಡೆಯಲು ಕಾರಣವಾಗುವದು. ॥೨೬॥

**ಜ್ಞಾತಮೇತಸ್ಯ ದೌರಾತ್ಮ್ಯಂ ದೈತೇಯಾಪಸದಸ್ಯ ಯತ್ ।**
**ತಸ್ಯ ಶಾಂತಿಂ ಕರಿಷ್ಯಾಮಿ ಕಾಲಸ್ತಾವತ್ಪ್ರತೀಕ್ಷತಾಮ್ ॥೨೭॥**

**ಏತಸ್ಯ** ಈ **ದೈತೇಯಾಪಸದಸ್ಯ** ಕ್ಷುಲ್ಲಕನಾದ ದೈತ್ಯನ **ಯತ್** ಯಾವ **ದೌರಾತ್ಮ್ಯಂ** ದುಷ್ಟತನವಿದೆಯೋ **ತತ್** ಅದು **ಜ್ಞಾತಂ** ತಿಳಿದಿದೆ. **ತಸ್ಯ** ಆ ದುಷ್ಟತನಕ್ಕೆ **ಶಾಂತಿಂ** ಶಿಕ್ಷೆಯನ್ನು (ಕೊನೆಯನ್ನು). **ಕರಿಷ್ಯಾಮಿ** ಮಾಡುವೆನು. **ತಾವತ್** ಮೊದಲು **ಕಾಲಃ** ಆ ಶಿಕ್ಷೆಯ ಕಾಲವು **ಪ್ರತೀಕ್ಷತಾಂ** ನಿರೀಕ್ಷಿಸಲ್ಪಡಲಿ ಸ್ವಲ್ಪಕಾಲದ ವರೆಗೆ ತಡೆಯಿರಿ ಎಂದರ್ಥ. ॥೨೭॥

**ಯದಾ ದೇವೇಷು ವೇದೇಷು ಗೋಷು ವಿಪ್ರೇಷು ಸಾಧುಷು ।**
**ಧರ್ಮೇ ಮಯಿ ಚ ವಿದ್ವೇಷಃ ಸ ವಾ ಆಶು ವಿನಶ್ಯತಿ ॥೨೮॥**

**ಯಸ್ಯ** ಯಾವನಿಗೆ **ಯದಾ** ಯಾವಾಗ **ದೇವೇಷು** ದೇವತೆಗಳಲ್ಲಿ **ವೇದೇಷು** ವೇದಗಳಲ್ಲಿ **ಗೋಷು** ಆಕಳುಗಳಲ್ಲಿ **ವಿಪ್ರೇಷು** ಸದಾಚಾರಿಗಳಾದ ಬ್ರಾಹ್ಮಣರಲ್ಲಿ **ಸಾಧುಷು** ಸಜ್ಜನರಲ್ಲಿ **ಧರ್ಮೇ** ಧರ್ಮದಲ್ಲಿ **ಮಯಿ** ನನ್ನಲ್ಲಿ **ಚ** ಮತ್ತು ನನ್ನ ಭಕ್ತರಲ್ಲಿ **ವಿದ್ವೇಷಃ** ವಿಶೇಷವಾದ ದ್ವೇಷವು ಉಂಟಾಗುವದೋ **ಸಃ** ಅವನು **ತದಾ** ಆಗ **ಆಶು** ಬೇಗನೇ, ಸುಖಸಾಧನ ಸಾಮಗ್ರಿ ಇರುವಾಗಲೇ **ವಿನಶ್ಯತಿ** ನಾಶವಾಗುವನು. ॥೨೮॥

**ನಿರ್ವೈರಾಯ ಪ್ರಶಾಂತಾಯ ಸ್ವಸುತಾಯ ಮಹಾತ್ಮನೇ ।**
**ಪ್ರಹ್ಲಾದಾಯ ಯದಾ ದ್ರುಹ್ಯೇದ್ಧನಿಷ್ಯೇಽಪಿ ವರೋರ್ಜಿತಮ್ ॥೨೯॥**

**ನಿರ್ವೈರಾಯ** ಸಜ್ಜನರಲ್ಲಿ ಶತ್ರುವಿಲ್ಲದ **ಪ್ರಶಾಂತಾಯ** ತನ್ನ ವಯಸ್ಸಿಗೆ ಮೀರಿ ಶ್ರೀಹರಿಯಲ್ಲಿಯೇ ನಿಷ್ಠನಾದ **ಮಹಾತ್ಮನೇ** ಮಹಾಮಹಿಮೋಪೇತನಾದ **ಸ್ವಸುತಾಯ** ತನ್ನ ಮಗನಾದ **ಪ್ರಹ್ಲಾದಾಯ** ಪ್ರಹ್ಲಾದನಿಗೆ **ಯದಾ** ಯಾವಾಗ **ದ್ರುಹ್ಯೇತ್** ದ್ರೋಹವನ್ನು ಬಗೆಯುವನೋ **ತದಾ** ಆಗ **ವರೋರ್ಜಿತಂ ಅಪಿ** ವರದಿಂದ ಸಾಮರ್ಥ್ಯವನ್ನು ಪಡೆದಿದ್ದರೂ **ಹನಿಷ್ಯೇ** ಸಂಹರಿಸುತ್ತೇನೆ.

ಇಲ್ಲಿ ಪ್ರಹ್ಲಾದನ ದ್ರೋಹವನ್ನು ನಿಮಿತ್ತಮಾಡಿ ಕೊಲ್ಲುವೆ ಎಂಬ ಪ್ರತಿಜ್ಞೆ ಮಾಡಿರುವದರಿಂದ ದೇವತೆಗಳಿಗಿಂತ ಪ್ರಹ್ಲಾದನಲ್ಲಿ ಶ್ರೀಹರಿಗೆ ಪ್ರೀತಿ ಹೆಚ್ಚೆಂದು ಭ್ರಮಿಸಬಾರದು. ದೇವತೆಗಳಿಗಾಗಿ ಶ್ರೀಹರಿಯು ದೈತ್ಯರನ್ನು ಸಂಹರಿಸುವದು ಪ್ರಸಿದ್ಧವಾಗಿ ಇದೆ. ಕೆಲವು ವೇಳೆ ದೇವತೆಗಳಿಗಿಂತ ಅಲ್ಪ ಭಕ್ತರಾದ ಪ್ರಹ್ಲಾದ ಅಂಬರೀಷ ಮೊದಲಾದವರಿಗೆ ಕೀರ್ತಿತಂದು ಕೊಡುವದಕ್ಕಾಗಿ ಅವರನ್ನು ನಿಮಿತ್ತವಾಗಿ ಸ್ವೀಕರಿಸುವನು. ಇದನ್ನೇ ಆಚಾರ್ಯರು ಪ್ರಮಾಣದಿಂದ ತಿಳಿಸುವರು-

**... ತಾತ್ಪರ್ಯ ...**

**ಯತ್ರ ಕ್ವ ಚ ಯಶಃಸ್ಥಾನಂ ಅನ್ಯೇಷಾಮಿತಿ ಕೇಶವಃ ।**
**ಸರ್ವತ್ರಾಪಿ ತು ದೇವಾನಾಮಿತ್ಯನ್ಯಾನ್ ಪೂಜಯೇತ್ ಕ್ವಚಿತ್ ॥ ಇತಿ ಚ**

ದೇವತೆಗಳಿಗೆ ಎಲ್ಲ ದೇಶಕಾಲಗಳಲ್ಲಿಯೂ ಕೀರ್ತಿ ಇದೆ. ಆದರೂ ಕೆಲವು ದೇಶಕಾಲಗಳಲ್ಲಿ ದೇವತೆಗಳಿಂದ ಬೇರೆಯಾದ ಪ್ರಹ್ಲಾದಾದಿಭಕ್ತರಿಗೆ ಕೀರ್ತಿ ಬರುವದಕ್ಕಾಗಿ ಶ್ರೀಹರಿಯು ಪ್ರಹ್ಲಾದಾದಿಗಳಿಗೆ ಗೌರವವನ್ನು ಕೊಡುತ್ತಾನೆ. ಆದಕಾರಣ ಪ್ರಹ್ಲಾದನು ದೇವತೆಗಳಿಗಿಂತ ಶ್ರೇಷ್ಠನೆಂದು ತಿಳಿಯಬಾರದು. ॥೨೯॥

**ನಾರದ ಉವಾಚ**

**ಇತ್ಯುಕ್ತಾ ಲೋಕಗುರುಣಾ ತಂ ಪ್ರಣಮ್ಯ ದಿವೌಕಸಃ ।**
**ನ್ಯವರ್ತಂತ ಗತೋದ್ವೇಗಾ ಮೇನಿರೇ ಚಾಸುರಂ ಹತಮ್ ॥೩೦॥**

**ಲೋಕಗುರುಣಾ** ಜಗತ್ತಿಗೆ ಗುರುವಾದ ಶ್ರೀಹರಿಯಿಂದ **ಇತಿ** ಮೇಲೆ ಹೇಳಿದಂತೆ **ಉಕ್ತಾಃ** ಹೇಳಿಸಿಕೊಂಡ **ದಿವೌಕಸಃ** ಸ್ವರ್ಗವಾಸಿಗಳಾದ ದೇವತೆಗಳು **ಗತೋದ್ವೇಗಾಃ** ಭಯವಿಲ್ಲದವರಾಗಿ **ತಂ** ಶ್ರೀಹರಿಯನ್ನು **ಪ್ರಣಮ್ಯ** ಭಕ್ತಿಯಿಂದ ನಮಸ್ಕರಿಸಿ **ನ್ಯವರ್ತಂತ** ತಮ್ಮ ಸ್ಥಳಕ್ಕೆ ಹಿಂತಿರುಗಿದರು. **ಅಸುರಂ** ಹಿರಣ್ಯಕಶಿಪುವನ್ನು **ಹತಂ ಚ ಮೇನಿರೇ** ಸಂಹೃತನನ್ನಾಗಿಯೂ ತಿಳಿದರು. ಶ್ರೀಹರಿ ಸತ್ಯಸಂಕಲ್ಪನಾದ್ದರಿಂದ ಅಸುರಸಂಹಾರನಿಶ್ಚಿತವಾದ್ದರಿಂದ ಆಗಿಯೇ ಹೋಯಿತೆಂದು ತಿಳಿದರು. 'ಏಷ್ಯತ್ತು ನಿಶ್ಚಿತಂ ಯತ್ತು ತದತೀತತ್ವೇನ ಭಣ್ಯತೇ'ಎಂದು ಪ್ರಮಾಣ. ॥೩೦॥

**ತಸ್ಯ ದೈತ್ಯಪತೇಃ ಪುತ್ರಾಶ್ಚತ್ವಾರಃ ಪರಮಾದ್ಭುತಾಃ ।**
**ಪ್ರಹ್ಲಾದೋಽಭೂನ್ಮಹಾಂಸ್ತೇಷಾಂ ಗುಣೈರ್ಮಹದುಪಾಸಕಃ ।**
**ಬ್ರಹ್ಮಣ್ಯಃ ಶೀಲಸಂಪನ್ನಃ ಸತ್ಯಸಂಧೋ ಜಿತೇಂದ್ರಿಯಃ ॥೩೧॥**

**ತಸ್ಯ** ಆ ದೈತ್ಯೇಶ್ವರನಿಗೆ **ಪರಮಾದ್ಭುತಾಃ** ದೈತ್ಯಸ್ವಭಾವಕ್ಕೆ ವಿರುದ್ಧವಾದ ಶ್ರೀಹರಿಯಲ್ಲಿ ಭಕ್ತಿವುಳ್ಳವರಾದ್ದರಿಂದ ಆಶ್ಚರ್ಯಕರರಾದ **ಚತ್ವಾರಃ ಪುತ್ರಾಃ** ನಾಲ್ಕು

ಮಕ್ಕಳು ಇದ್ದರು **ತೇಷಾಂ** ಅವರಲ್ಲಿ **ಪ್ರಹ್ಲಾದಃ** ಹಿರಿಯನಾದ ಪ್ರಹ್ಲಾದನು **ಗುಣೈಃ** ವೈಷ್ಣವಗುಣಗಳಿಂದ **ಮಹಾನ್** ಉತ್ತಮನು **ಅಭೂತ್** ಆಗಿದ್ದನು. ಆ ಗುಣಗಳನ್ನೇ ವಿವರಿಸುತ್ತಾರೆ. **ಮಹದುಪಾಸಕಃ** ಸರ್ವೋತ್ತಮನಾದ ಶ್ರೀಹರಿಯನ್ನು ಉಪಾಸಿಸುವನು **ಬ್ರಹ್ಮಣ್ಯಃ** ವೇದಪ್ರಾಮಾಣ್ಯ ತಿಳಿದವನು **ಶೀಲಸಂಪನ್ನಃ** ಸಚ್ಚಾರಿತ್ರ್ಯವುಳ್ಳವನು **ಸತ್ಯಸಂಧಃ** ಸತ್ಯಪ್ರತಿಜ್ಞೆಯುಳ್ಳವನು **ಜಿತೇಂದ್ರಿಯಃ** ಇಂದ್ರಿಯಗಳನ್ನು ಗೆದ್ದವನು. ।।೩೧।।

**ಆತ್ಮವತ್ಸರ್ವಭೂತಾನಾಮೇಕಃ ಪ್ರಿಯಸುಹೃತ್ತಮಃ ।**
**ದಾಸವತ್ಸನ್ನತಾರ್ಯಾಂಘ್ರಿಃ ಪಿತೃವದ್ದೀನವತ್ಸಲಃ ।।೩೨।।**

**ಆತ್ಮವತ್** ಪರಮಾತ್ಮನಂತೆ **ಸರ್ವಭೂತಾನಾಂ** ಎಲ್ಲ ಸಜ್ಜನರಲ್ಲಿಯೂ **ಏಕಃ** ಮುಖ್ಯನು **ಪ್ರಿಯಃ** ಪ್ರೀತಿವಿಷಯನು **ಸುಹೃತ್ತಮಃ** ಉತ್ತಮ ಸ್ನೇಹಿತನು **ದಾಸವತ್** ಭೃತ್ಯನಂತೆ **ಸನ್ನತಾರ್ಯಾಂಘ್ರಿಃ** ನಮಸ್ಕರಿಸಲ್ಪಟ್ಟ ಪೂಜ್ಯರ ಪಾದಗಳುಳ್ಳ **ಪಿತೃವತ್** ತಂದೆಯಂತೆ **ದೀನವತ್ಸಲಃ** ದೀನರಾದವರಲ್ಲಿ ವಾತ್ಸಲ್ಯವುಳ್ಳವನು. ।।೩೨।।

**ಭ್ರಾತೃವತ್ಸದೃಶೇ ಸ್ನಿಗ್ಧೋ ಗುರುಷ್ವೀಶ್ವರಭಾವನಃ ।**
**ವಿದ್ಯಾರ್ಥರೂಪಜನ್ಮಾಢ್ಯೈರ್ಮಾನಸ್ತಂಭವಿವರ್ಜಿತಃ ।।೩೩।।**

**ಭ್ರಾತೃವತ್** ಸಹೋದರನಂತೆ **ಸದೃಶೇ** ಸಮಾನರಲ್ಲಿ **ಸ್ನಿಗ್ಧಃ** ಸ್ನೇಹವುಳ್ಳವನು **ಗುರುಷು** ಗುರುಗಳಲ್ಲಿ **ಈಶ್ವರಭಾವನಃ** ಗುರುಗಳಲ್ಲಿ ಶ್ರೀಹರಿ ಇರುವನೆಂದು ತಿಳಿದಿರುವನು, ಹಿರಿಯರಲ್ಲಿ ನಿಯಾಮಕರೆಂಬ ಭಾವನೆಯುಳ್ಳವನು **ವಿದ್ಯಾ** ವಿದ್ಯೆಯು **ಅರ್ಥ** ಹಣ **ರೂಪ** ಸೌಂದರ್ಯ **ಜನ್ಮಾಢ್ಯೈಃ** ಕುಲ ಮೊದಲಾದ ನಿಮಿತ್ತಗಳಿಂದ **ಮಾನಸ್ತಂಭವಿವರ್ಜಿತಃ** ಅಹಂಕಾರ ಗರ್ವಗಳಿಲ್ಲದವನು. ।।೩೩।।

**ನೋದ್ವಿಗ್ನಚಿತ್ತೋ ವ್ಯಸನೇಷು ನಿಸ್ಪೃಹಃ**
**ಶ್ರುತೇಷು ದೃಷ್ಟೇಷು ಗುಣೇಷ್ವವಸ್ತುದೃಕ್ ।**
**ದಾಂತೇಂದ್ರಿಯಪ್ರಾಣಶರೀರಧೀಃ ಸದಾ**
**ಪ್ರಶಾಂತಕಾಮೋ ರಹಿತಾಸುರೋಽಸುರಃ ।।೩೪।।**

**ವ್ಯಸನೇಷು ಸತ್ಸು** ಕಷ್ಟಗಳು ಬಂದಾಗಲೂ **ನ ಉದ್ವಿಗ್ನಚಿತ್ತಃ** ಕ್ಷೋಭೆಗೊಳ್ಳದ ಮನಸ್ಸುಳ್ಳವನು **ಶ್ರುತೇಷು** ಕೇಳಲ್ಪಟ್ಟ ಅಂದರೆ ಪಾರಲೌಕಿಕಗಳಾದ **ದೃಷ್ಟೇಷು** ಕಾಣಿಸುವ **ಅವಸ್ತುದೃಕ್** ನಶ್ವರವೆಂಬ ಜ್ಞಾನವುಳ್ಳವನಾದ್ದರಿಂದ **ನಿಸ್ಪೃಹಃ** ಆಶೆಯಿಲ್ಲದವನು **ದಾಂತೇಂದ್ರಿಯಪ್ರಾಣಶರೀರಧೀಃ** ಇಂದ್ರಿಯಗಳನ್ನು ಮಿತವಾದ ಆಹಾರಾದಿಗಳಿಂದ, ಪ್ರಾಣಗಳನ್ನು ಆಯಾಮಾದಿಗಳಿಂದಲೂ, ಶರೀರಗಳನ್ನು

ಉಪವಾಸಾದಿಗಳಿಂದಲೂ ಮನಸ್ಸನ್ನು ವೈರಾಗ್ಯಾದಿಗಳಿಂದಲೂ ನಿಗ್ರಹಿಸದವನು **ಸದಾ** ಯಾವಾಗಲೂ **ಪ್ರಶಾಂತಕಾಮಃ** ವಿರುದ್ಧಕಾಮನೆಗಳಿಲ್ಲದವನು **ರಹಿತಾಸುರಃ** ಅಸುರಸ್ವಭಾವವಿಲ್ಲದವನು ಆದರೆ **ಅಸುರಃ** ಜನ್ಮತಃ ಅಸುರನು ।।೩೪।।

**ಯಸ್ಮಿನ್ ಮಹಾಗುಣಾ ರಾಜನ್ ಗೃಹ್ಯಂತೆ ಕವಿಭಿರ್ಮುಹುಃ ।**
**ನ ತೇಽಧುನಾಽಭಿಧೀಯಂತೇ ಯಥಾ ಭಗವತೀಶ್ವರೇ ।।೩೫।।**

**ರಾಜನ್** ಧರ್ಮರಾಜನೇ **ಈಶ್ವರೇ** ಸರ್ವೋತ್ತಮನಿಯಾಮಕನಾದ **ಭಗವತಿ** ಶ್ರೀಹರಿಯಲ್ಲಿ **ಯಥಾ** ಹೇಗೆ ಅವನ ಎಲ್ಲ ಗುಣಗಳು ಗ್ರಹಿಸಲಾಗುದಿಲ್ಲವೋ ಯಾವಾಗಲೂ ಪೂರ್ಣವಾಗಿ ಹೇಳಲಾಗುವದಿಲ್ಲವೋ **ತಥಾ** ಹಾಗೆ **ಯಸ್ಮಿನ್** ಯಾವ ಪ್ರಹ್ಲಾದರಾಜರಲ್ಲಿರುವ **ಮಹಾಗುಣಾಃ** ದೊಡ್ಡಗುಣಗಳು **ಕವಿಭಿಃ** ಜ್ಞಾನಿಗಳಿಂದ **ಮುಹುಃ** ಮತ್ತೆ ಮತ್ತೆ **ಕೇಚನ ಗೃಹ್ಯಂತೇ** ಕೆಲವೇ ತಿಳಿಯಲ್ಪಡುವವೋ **ತೇ** ಆ ತಿಳಿದ ಗುಣಗಳು **ಅಧುನಾ** ಇಂದಿಗೂ ನ **ಅಭಿಧೀಯಂತೇ** ಹೇಳಲ್ಪಡುವದಿಲ್ಲವೋ ಅಂತಹ ಪ್ರಹ್ಲಾದರಾಜರು ನಾಲ್ವರಲ್ಲಿ ಶ್ರೇಷ್ಠರಾಗಿದ್ದರೆಂದು ಅನ್ವಯ.

ಪ್ರಹ್ಲಾದರಾಜರ ಗುಣಗಳನ್ನು ಎಲ್ಲ ತಿಳಿಯಲು ಸಾಧ್ಯವಿಲ್ಲ. ತಿಳಿದವನು ಹೇಳಲಾಗುವದಿಲ್ಲ. ಈಶ್ವರನಂತೆ ಎಂದು ಹೇಳಿದ್ದರಿಂದ ಶ್ರೀಹರಿಯ ಸಾಮ್ಯವನ್ನು ಸರ್ವಥಾ ತಿಳಿಯಬಾರದು. ಅದು ಅಸಂಭಾವಿತವಾದುದು ಕಿಂಚಿತ್‌ಸಾಮ್ಯ ತಿಳಿಯಬೇಕು ಎಂದು ಹೇಳುವರು-

**... ತಾತ್ಪರ್ಯ ...**

**ಅನ್ಯೇಷಾಂ ಹರಿಸಾಮ್ಯಂ ತು ಕಿಂಚಿತ್ ಸಾಮ್ಯಮುದೀರಿತಂ ।**
**ಸಮ್ಯಕ್ ಸಾಮ್ಯಂ ತು ಮತ್ಸ್ಯಾದೇರಿತಿ ಶಾಸ್ತ್ರಸ್ಯ ನಿರ್ಣಯಃ ।। ಇತಿ ಚ ।।**

ಪರಮಾತ್ಮನಿಂದ ಭಿನ್ನರಾದ ಪ್ರಹ್ಲಾದಾದಿಗಳಿಗೆ ಶ್ರೀಹರಿಯ ಸಾಮ್ಯ ಹೇಳುವದಾದರೆ ಅಲ್ಲಿ ಗುಣಗಳಿಂದ ಕಿಂಚಿತ್‌ಸಾಮ್ಯ ಹೇಳಲ್ಪಡುವದು. ಮತ್ಸ್ಯಾದಿ ಭಗವದ್ರೂಪಗಳಿಗೆ ಶ್ರೀಹರಿಯ ಸಾಮ್ಯ ಹೇಳುವಾಗ ಸಂಪೂರ್ಣವಾಗಿ ಸಾಮ್ಯ ಹೇಳಬೇಕು ಎಂದು ಭಾವ. ।।೩೫।।

**ಯಂ ಸಾಧುಗಾಥಾಃ ಸದಸಿ ರಿಪವೋಽಪಿ ಸುರಾ ನೃಪ ।**
**ಪ್ರತಿಮಾನಂ ಪ್ರಕುರ್ವಂತಿ ಕಿಮುತಾನ್ಯೇ ಭವಾದೃಶಾಃ ।।೩೬।।**

**ಹೇ ನೃಪ** ಧರ್ಮರಾಜನೇ **ರಿಪವಃ ಅಪಿ** ದೈತ್ಯರಿಗೆ ಶತ್ರುಗಳಾದರೂ ಸಹ **ಸುರಾಃ** ದೇವತೆಗಳು **ಸಾಧುಗಾಥಾಃ** ಸಜ್ಜನರನ್ನು ಹಾಡಿಹೊಗಳುವ **ಸದಸಿ** ಸಭೆಯಲ್ಲಿ **ಯಂ** ಯಾವ ಪ್ರಹ್ಲಾದರಾಜರನ್ನು **ಪ್ರತಿಮಾನಂ** ದೃಷ್ಟಾಂತವನ್ನಾಗಿ **ಪ್ರಕುರ್ವಂತಿ**

ವಿಶೇಷವಾಗಿ ಮಾಡುವರೋ **ಭವಾದೃಶಾಃ ಅನ್ಯೇ ಕಿಮುತ** ನಿನ್ನಂತಹ ಬೇರೆಯವರು ಮಾಡುವರೆಂದು ಹೇಳುವದೇನು ? ।।೩೬।।

**ಗುಣೈರಲಮಸಂಖ್ಯೇಯೈರ್ಮಾಹಾತ್ಮ್ಯಂ ತಸ್ಯ ಸೂಚ್ಯತೇ ।**
**ವಾಸುದೇವೇ ಭಗವತಿ ಯಸ್ಯ ನೈಸರ್ಗಿಕೀ ರತಿಃ ।।೩೭।।**

**ಯಸ್ಯ** ಯಾವ ಪ್ರಹ್ಲಾದರಾಜರಿಗೆ **ಭಗವತಿ** ಸಮಗ್ರೈಶ್ವರ್ಯಶಾಲಿಯಾದ **ವಾಸುದೇವೇ** ಶ್ರೀಹರಿಯಲ್ಲಿ **ನೈಸರ್ಗಿಕೀ** ಸಹಜಸಿದ್ಧವಾದ **ರತಿಃ** ಆಸಕ್ತಿ ಇದೆಯೋ **ತಸ್ಯ** ಅಂತಹ ಪ್ರಹ್ಲಾದರಾಜರ **ಅಸಂಖ್ಯೇಯೈಃ** ಎಣಿಸಲಾಗದ **ಗುಣೈಃ** ಗುಣಗಳನ್ನು (**ಕಥಿತೈಃ** ಹೇಳಿದ್ದರಿಂದ) **ಅಲಂ** ಸಾಕು (ಹೇಳುವದು ಸಾಧ್ಯವಿಲ್ಲ) **ಕಿಂತು** ಮತ್ತೇನಂದರೆ **ಮಾಹಾತ್ಮ್ಯಂ** ಮಹಿಮೆಯು **ಸೂಚ್ಯತೇ** ಸೂಚಿಸಲ್ಪಡುವದು. ।।೩೭।।

**ನ್ಯಸ್ತಕ್ರೀಡನಕೋ ಬಾಲೋ ಜಡವತ್ತನ್ಮನಾಃ ಸದಾ ।**
**ಕೃಷ್ಣಗ್ರಹಗೃಹೀತಾತ್ಮಾ ನ ವೇದ ಜಗದೀದೃಶಮ್ ।।೩೮।।**

**ನ್ಯಸ್ತಕೀಡನಕಃ** ಆಟದ ಸಾಮಾನುಗಳನ್ನು ಬಿಟ್ಟು **ಬಾಲಃ** ಚಿಕ್ಕಬಾಲಕರಾದ ಪ್ರಹ್ಲಾದರಾಜರು **ಸದಾ** ಯಾವಾಗಲೂ **ಜಡವತ್** ಜಡಭರತನಂತೆ ವಿಷಯಾಸಕ್ತ ಮೂಢರಂತೆ **ತನ್ಮನಾಃ** ಶ್ರೀಹರಿಯಲ್ಲಿಯೇ ಮನಸಿಟ್ಟವರು **ಕೃಷ್ಣಗ್ರಹಗೃಹೀತಾತ್ಮಾ** ಶ್ರೀಹರಿಯೆಂಬ ಪಿಶಾಚದ ವಶೀಕೃತಮನಸ್ಸುಳ್ಳ **ಸಃ** ಪ್ರಹ್ಲಾದರಾಜರು **ಈದೃಶಂ** ವಿಷಯಪೂರ್ಣವಾಗಿ ವಿಷಯಾಸಕ್ತರಿಗೆ ಕಾಣುವ **ಜಗತ್** ಜಗತ್ತನ್ನು **ನ ವೇದ** ತಿಳಿದಿರಲಿಲ್ಲ. ಜಗತ್ತಿನಲ್ಲಿ ವಿಷ್ಣುವನ್ನೇ ಕಾಣುತ್ತಿದ್ದರು. ।।೩೮।।

**ಆಸೀನಃ ಪರ್ಯಟನ್ನಶ್ನನ್ ಶಯಾನಃ ಪ್ರಪಿಬನ್ ಬ್ರುವನ್ ।**
**ನಾನುಸಂದಧ ಏತಾನಿ ಗೋವಿಂದಪರಿರಕ್ಷಿ(ರಕ್ಷಿ)ತಃ ।।೩೯।।**

ಪ್ರಹ್ಲಾದರಾಜರು **ಆಸೀನಃ** ಕುಳಿತಿರುವಾಗ **ಪರ್ಯಟನ್** ಸಂಚರಿಸುತ್ತ **ಅಶ್ನನ್** ಊಟ ಮಾಡುತ್ತ **ಶಯಾನಃ** ಮಲಗುತ್ತ **ಪ್ರಪಿಬನ್** ಕುಡಿಯುತ್ತ **ಬ್ರುವನ್** ಮಾತನಾಡುತ್ತ **ಗೋವಿಂದಪರಿರಂಭಿತಃ** ಶ್ರೀಹರಿಯನ್ನೇ ನೆನೆಯುತ್ತಿದ್ದರು (ಪರಿರಕ್ಷಿತಃ ಎಂಬ ಪಾಠದಲ್ಲಿ ಧ್ಯಾನವಿಷಯನಾದ ಗೋವಿಂದನ ಕೃಪಾದೃಷ್ಟಿಯಿಂದ ನೋಡಲ್ಪಟ್ಟ ಎಂದರ್ಥ) **ಏತಾನಿ** ಆಸನ ಮೊದಲಾದವುಗಳನ್ನು **ನ ಅನುಸಂದಧೇ** ಸ್ಮರಿಸುತ್ತಿರಲಿಲ್ಲ. ।।೩೯।।

**ಕ್ವಚಿದ್ರೋದಿತಿ ಗೋವಿಂದಚಿಂತಾಚಂಚಲಚೇತನಃ ।**
**ಕ್ವಚಿದ್ಧಸತಿ ತಚ್ಚಿಂತಾಹ್ಲಾದ ಉದ್ಗಾಯತಿ ಕ್ವಚಿತ್ ।।೪೦।।**

**ಗೋವಿಂದಚಿಂತಾ** ಶ್ರೀಹರಿಯ ಧ್ಯಾನದಿಂದ **ಅಚಂಚಲ** ಸ್ಥಿರವಾದ **ಚೇತನಃ** ಮನಸ್ಸುಳ್ಳ ಪ್ರಹ್ಲಾದರಾಜರು **ಕ್ವಚಿತ್** ಒಂದು ಸಲ **ರೋದಿತಿ** ಅಳುವರು **ಕ್ವಚಿತ್** ಮತ್ತೊಂದು ಸಲ **ಹಸತಿ** ನಗುವರು **ಕ್ವಚಿತ್** ಕೆಲವೊಮ್ಮೆ **ತಚ್ಚಿಂತಾಹ್ಲಾದಃ** ಅವನ ಧ್ಯಾನದಿಂದ ಸಂತುಷ್ಟರಾಗಿ **ಉದ್ಗಾಯತಿ** ಗಟ್ಟಿಯಾಗಿ ಹಾಡುವರು. ||೪೦||

**ನದತಿ ಕ್ವಚಿದುತ್ಕಂಠೋ ವಿಲಜ್ಜೋ ನೃತ್ಯತಿ ಕ್ವಚಿತ್ ।**
**ಕ್ವಚಿತ್ತದ್ಭಾವನಾಯುಕ್ತಸ್ತನ್ಮಯೋಽನುಚಕಾರ ಹ** ||೪೧||

**ಕ್ವಚಿತ್** ಇನ್ನೊಂದು ಸಲ **ಉತ್ಕಂಠಃ** ಕಾತುರರಾಗಿ **ನದತಿ** ಶಬ್ದಮಾಡುವರು (ಗರ್ಜಿಸುವರು) **ಕ್ವಚಿತ್** ಹಲವೊಮ್ಮೆ **ವಿಲಜ್ಜಃ** ನಾಚಿಕೆಪಡದೆ **ನೃತ್ಯತಿ** ಕುಣಿಯುವರು **ಕ್ವಚಿತ್** ಮತ್ತೊಂದು ಬಾರಿ **ತದ್ಭಾವನಾಯುಕ್ತಃ** ಹರಿಯ ಧ್ಯಾನಯುತರಾಗಿ **ತನ್ಮಯಃ** ಶ್ರೀಹರಿಯೇ ಪ್ರಧಾನನೆಂದು ತಿಳಿದವರಾಗಿ **ಅನುಚಕಾರ** ಶ್ರೀಹರಿಯನ್ನೇ ಅನುಕರಿಸುವರು **ಹ** ಈ ಲಕ್ಷಣಗಳು ಶ್ರೀಹರಿಭಕ್ತರಲ್ಲಿ ಸ್ವತಃ ಸಿದ್ಧವೆಂದು ಪ್ರಮಾಣಸಿದ್ಧ ಎಂದು ಅರ್ಥ. ||೪೧||

**ಕ್ವಚಿದುತ್ಪುಲಕಸ್ತೂಷ್ಣೀಮಶೇಷಸ್ಪರ್ಶನಿಸ್ಪೃಹಃ ।**
**ಅಸ್ಪಂದಪ್ರಾಣ ಆನಂದಸಲಿಲಾಮೀಲಿತೇಕ್ಷಣಃ** ||೪೨||

**ಕ್ವಚಿತ್** ಬೇರೆ ಪ್ರಸಂಗಗಳಲ್ಲಿ **ಉತ್ಪುಲಕಃ** ರೋಮಾಂಚಿತರಾಗಿ **ಅಶೇಷಸ್ಪರ್ಶ-ನಿಸ್ಪೃಹಃ** ಎಲ್ಲ ವಿಷಯಾಸಕ್ತಿ ಇಲ್ಲದವರಾಗಿ **ತೂಷ್ಣೀಂ(ಆಸ್ತೇ)** ಸುಮ್ಮನೇ ಇರುವರು. **ಕ್ವಚಿತ್** ಇನ್ನೊಂದು ಸಂದರ್ಭದಲ್ಲಿ **ಅಸ್ಪಂದಪ್ರಾಣಃ** ಪ್ರಾಣಚೇಷ್ಟೆಯಿಲ್ಲದವರಾಗಿ ಸ್ಥಿರಾಸನ ಉಳ್ಳವರು ಆಗಿರುತ್ತಿದ್ದರು. **ಕ್ವಚಿದ್** ಕೆಲವು ಸಮಯದಲ್ಲಿ **ಆನಂದಸಲಿಲಾ-ಮೀಲಿತೇಕ್ಷಣಃ** ಆನಂದಬಾಷ್ಪಗಳಿಂದ ಸ್ವಲ್ಪ ಮುಚ್ಚಲ್ಪಟ್ಟ ಕಣ್ಣುಳ್ಳವರಾಗುತ್ತಿದ್ದರು.

**ಸ ಉತ್ತಮಶ್ಲೋಕಪದಾರವಿಂದಯೋ-**
**ರ್ನಿಷೇವಯಾಽಕಿಂಚನಸಂಗಲಬ್ಧಯಾ ।**
**ತನ್ವನ್ಪರಾಂ ನಿರ್ವೃತಿಮಾತ್ಮನೋ ಮುಹು-**
**ರ್ದುಃಸ್ಸಂಗಹೀನಃ ಸ್ವಮನಃ ಶಮಂ ವ್ಯಧಾತ್** ||೪೩||

**ಅಕಿಂಚನಸಂಗಲಬ್ಧಯಾ** ಶ್ರೀಹರಿಯನ್ನು ಬಿಟ್ಟು ಬೇರೊಂದು ಇಲ್ಲದ (ಇಷ್ಟ) ನಾರದ ಮೊದಲಾದ ಸಜ್ಜನರ, ಮಹನೀಯರ ಸಹವಾಸದಿಂದ ದೊರೆತ **ಉತ್ತಮಶ್ಲೋಕಪದಾರವಿಂದಯೋಃ** ಅತ್ಯುತ್ತಮ ಕೀರ್ತಿವಂತನಾದ ಶ್ರೀಹರಿಯ ಪಾದಕಮಲಗಳ **ನಿಷೇವಯಾ** ಭಕ್ತಿಯುತ ಸೇವೆಯಿಂದ **ಸಃ** ಪ್ರಹ್ಲಾದರಾಜನು **ಆತ್ಮನಃ** ಮನಸ್ಸಿಗೆ **ಪರಾಂ** ಅತಿಶಯವಾದ **ನಿರ್ವೃತಿಂ** ಸುಖವನ್ನು **ತನ್ವನ್** ಉಂಟುಮಾಡಿ-

ಕೊಂಡವರಾಗಿ **ದುಸ್ಸಂಗಹೀನಃ** ದುಷ್ಟರ ಸಹವಾಸವಿಲ್ಲದವರಾಗಿ **ಮುಹುಃ** ಮತ್ತೆ ಮತ್ತೆ **ಸ್ವಮನಃಶಮಂ** ತಮ್ಮ ಮನಸ್ಸಿನ ಭಗವದಾಸಕ್ತಿಯನ್ನು **ವ್ಯಧಾತ್** ವಿಶೇಷವಾಗಿ ಮಾಡಿದರು. ।।೪೩।।

**ತಸ್ಮಿನ್ ಮಹಾಭಾಗವತೇ ಮಹಾಭಾಗೇ ಮಹಾತ್ಮನಿ ।**
**ಹಿರಣ್ಯಕಶಿಪೂ ರಾಜನ್ನಕರೋದಘಮಾತ್ಮಜೇ ।।೪೪।।**

**ಹೇ ರಾಜನ್** ಧರ್ಮರಾಜನೇ **ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಮಹಾಭಾಗವತೇ** ಮಹಾಭಗವದ್ಭಕ್ತರಾದ **ಮಹಾಭಾಗೇ** ಪುಣ್ಯಶಾಲಿಗಳಾದ **ಮಹಾತ್ಮನಿ** ಮಹಾತ್ಮರಾದ **ಆತ್ಮಜೇ** ಮಕ್ಕಳಾದ **ತಸ್ಮಿನ್** ಆ ಪ್ರಹ್ಲಾದ ರಾಜರಲ್ಲಿ **ಅಘಂ ಅಕರೋತ್** ದ್ರೋಹವನ್ನು ಮಾಡಿದನು. ।।೪೪।।

ಧರ್ಮರಾಜರು ಹಿಂದೆ 'ವಿದ್ವೇಷೋ ದಯಿತೇ ಪುತ್ರೇ ಕಥಮಾಸೀನ್ಮಹಾತ್ಮನಿ' ಎಂದು ಪ್ರಥಮಾಧ್ಯಾಯದ ಕೊನೆಗೆ ಪ್ರಶ್ನಿಸಿದ್ದನ್ನು ಕಥಾಂತರ ಪ್ರಸಕ್ತಿಯಿಂದ ನಾರದರು ಇದಕ್ಕೆ ಉತ್ತರ ಕೊಟ್ಟಿರಲಿಲ್ಲ ಇದನ್ನರಿತ ರಾಜನು ಮತ್ತೆ 'ಅಕರೋದಘಮಾತ್ಮಜೇ' ಎಂದುದನ್ನು ಕಂಡು ಹಿಂದಿನ ಪ್ರಶ್ನೆಯನ್ನೇ ಮತ್ತೆ ಮಾಡುತ್ತಾರೆ-

**ಯುಧಿಷ್ಠಿರ ಉವಾಚ**

**ದೇವರ್ಷ ಏತದಿಚ್ಛಾಮೋ ವೇದಿತುಂ ತವ ಸುವ್ರತ ।**
**ಯದಾತ್ಮಜಾಯ ಶುದ್ಧಾಯ ಪಿತಾऽಧಾತ್ಸಾಧವೇ ಅಘಮ್ ।।೪೫।।**

**ಹೇ ಸುವ್ರತ** ಶ್ರೀಹರಿಗೆ ಪ್ರೀತಿಕರವಾದ ನಿಯಮಗಳುಳ್ಳ **ಹೇ ದೇವರ್ಷೇ** ದೇವಋಷಿಗಳಾದ ನಾರದರೇ **ಪಿತಾ** ತಂದೆಯಾದ ಹಿರಣ್ಯಕಶಿಪುವು **ಶುದ್ಧಾಯ** ನಿರಪರಾಧಿಗಳಾದ **ಸಾಧವೇ** ಸಜ್ಜನನಾದ **ಆತ್ಮಜಾಯ** ಔರಸಪುತ್ರನಾದ ಪ್ರಹ್ಲಾದನ ವಿಷಯದಲ್ಲಿ **ಯದಘಂ** ಯಾವ ಕೊಲ್ಲುವ ಪ್ರಯತ್ನವೆಂಬ ಅಪರಾಧವನ್ನು **ಅಧಾತ್** ಮಾಡಿದನೋ **ಏತತ್** ಇದನ್ನು **ತವ ಸಕಾಶಾತ್** ನಿಮ್ಮಿಂದ **ವೇದಿತುಂ** ತಿಳಿಯಲು **ಇಚ್ಛಾಮಃ** ಇಚ್ಛಿಸುತ್ತೇನೆ.

ವಿಶೇಷ :- ಅಪಕಾರಕ್ಕೆ ಅಯೋಗ್ಯವೆಂದು ತಿಳಿಸಲು 'ಆತ್ಮಜಾಯ ಶುದ್ಧಾಯ ಸಾಧವೇ' ಎಂದು ಹೇಳಿದ್ದು. ಪುತ್ರನ ಮರಣಕ್ಕೆ ಪ್ರಯತ್ನ ಮಾಡುವದು ಅಸುರಕರ್ಮವೇ ಹೊರತು ಶಾಸ್ತ್ರೀಯವಲ್ಲವೆಂದು ತಿಳಿಸಲು 'ಸಾಧವೇ ಅಘಂ' ಎಂದು ಪೂರ್ವರೂಪಸಂಧಿ ಮಾಡದೇ ಹೇಳಿರುವರು. ।।೪೫।।

**ಪುತ್ರಾನ್ ವಿಪ್ರತಿಕೂಲಾಂಶ್ಚ ಪಿತರಃ ಪುತ್ರವತ್ಸಲಾಃ ।**
**ಉಪಾಲಭಂತೇ ಶಿಕ್ಷಾರ್ಥಂ ನೈವಾಘಮಪರೇ ಯಥಾ ॥೪೬॥**

**ಪುತ್ರವತ್ಸಲಾ ಪಿತರಃ ಚ** ಮಕ್ಕಳಲ್ಲಿ ಮಮತೆಯುಳ್ಳ ತಂದೆಗಳಾದರೂ **ವಿಪ್ರತಿಕೂಲಾನ್** ವಿಶೇಷವಾಗಿ ತಮ್ಮ ವಿರುದ್ಧರಾದ **ಪುತ್ರಾನ್** ಮಕ್ಕಳನ್ನು **ಶಿಕ್ಷಾರ್ಥಂ** ತಿಳಿಹೇಳಿ ಸರಿಯಾದ ದಾರಿಗೆ ತರಲು **ಉಪಾಲಭಂತೇ ಏವ** ಬೈಯ್ಯುವರು ಹೆದರಿಸುವರಷ್ಟೇ **ಯಥಾ ಅಪರೇ** ಬೇರೆಯವರಂತೆ (ಶತ್ರುಗಳಂತೆ) **ಅಘಂ ನ** ಸಾಯಿಸುವದಿಲ್ಲ ಕೊಲ್ಲಲಪೇಕ್ಷಿಸುವದಿಲ್ಲ. ॥೪೬॥

**ಕಿಮುತಾನುವಶಾನ್ ಸಾಧೂನ್ ತಾದೃಶಾನ್ ಗುರುದೈವತಾನ್ ।**
**ಏತತ್ಕೌತೂಹಲಂ ಬ್ರಹ್ಮನ್ನಸ್ಮಾಕಂ ವಿಧಮ ಪ್ರಭೋ ॥೪೭॥**

**ಪಿತುಃ ಪುತ್ರಾಯ ಯದ್ ದ್ವೇಷೋ ಮರಣಾಯ ಪ್ರಯೋಜಿತಃ ।**

**ಅನುವಶಾನ್** ತನ್ನ ವಶವರ್ತಿಗಳಾದ **ಸಾಧೂನ್** ಸಜ್ಜನರಾದ **ಗುರುದೇವತಾನ್** ಹಿರಿಯರನ್ನು ದೇವತೆಯೆಂದು ಪೂಜಿಸುವ **ತಾದೃಶಾನ್** ಪ್ರಹ್ಲಾದನಂಥವರನ್ನು **ಕಿಮುತ** ಕೊಲ್ಲಲು ಯತ್ನಿಸುವದಿಲ್ಲವೆಂದೇನು ಹೇಳುವದು **ಪ್ರಭೋ** ಸಮರ್ಥರಾದ **ಬ್ರಹ್ಮನ್** ಬ್ರಹ್ಮಜ್ಞಾನಿಗಳಾದ ನಾರದರೇ **ಪುತ್ರಾಯ** ಮಗನಿಗಾಗಿ **ದ್ವೇಷಃ** ಕ್ರೋಧವು **ಪಿತುಃ** ತಂದೆಯಿಂದ **ಮರಣಾಯ** ಸಾವಿಗಾಗಿ **ಪ್ರಯೋಜಿತಃ** ಉಪಯುಕ್ತವಾಯಿತು **ಇತಿ** ಎಂಬ **ಯತ್** ಯಾವ **ಏತತ್** ಈ **ಅಸ್ಮಾಕಂ ಕೂತೂಹಲಂ** ಕಾರಣ ತಿಳಿಯಬೇಕೆಂಬ ಆಕಾಂಕ್ಷೆಯನ್ನು **ವಿಧಮ** ಕಾರಣವನ್ನು ತಿಳಿಸಿ ಪರಿಹರಿಸಿರಿ.

ವಿಶೇಷ :- ಅಥವಾ ಪುತ್ರಾಯ ಪಿತುಃ ಪಿತ್ರಾ ಪ್ರಯೋಜಿತೋ ವಿದ್ವೇಷಃ ಪಿತುಃ ಮರಣಾಯ ಅಭೂತ್ ಇತಿ ಯತ್ ತದೇವ ಕೌತೂಹಲಂ ವಿಧಮ ಎಂದು ವಾಕ್ಯದ ಯೋಜನೆ. ಮಗನ ಮೇಲೆ ತಂದೆಯು ಮಾಡಿದ ಕೋಪವು ತಂದೆಯ ಸಾವಿಗೆ ಕಾರಣವಾಯಿತು ಎಂಬ ಈ ನಮ್ಮ ಕುತೂಹಲವನ್ನು ಪರಿಹರಿಸಿರಿ ಎಂದಾದರೂ ಅರ್ಥ. ಮಗನ ಮರಣಕ್ಕೆ ಕಾರಣವಾಗದೆ ತಂದೆಯ ಮರಣಕ್ಕೆ ಕಾರಣವಾದುದೇ ಕೌತೂಹಲ ಕಾರಣವೆಂದರ್ಥ. ॥೪೭॥

**॥ ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ಚತುರ್ಥೋಽಧ್ಯಾಯಃ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★

# ಅಥ ಪಂಚಮೋऽಧ್ಯಾಯಃ

**ಸಾರಾಂಶ**

ದೈತ್ಯಗುರು ಶುಕ್ರಾಚಾರ್ಯರಿಗೆ ಇಬ್ಬರು ಮಕ್ಕಳು. ಶಂಡ ಹಾಗೂ ಅಮರ್ಕ ಎಂದು. ಹಿರಣ್ಯಕಶಿಪುವು ತನ್ನ ಮಗನಾದ ಪ್ರಹ್ಲಾದನನ್ನು ಶಂಡಾಮರ್ಕರಲ್ಲಿ ಅಧ್ಯಯನಕ್ಕೆ ಎಂದು ಕಳುಹಿಸಿದ. ಅವರು ಹೇಳುವ ಪಾಠ ಪ್ರಹ್ಲಾದನಿಗೆ ಹಿಡಿಸಲಿಲ್ಲ. ಒಮ್ಮೆ ಹಿರಣ್ಯಕಶಿಪುವು ಪ್ರಹ್ಲಾದನನ್ನು ಬರ ಹೇಳಿ ನೀನು ಕಲಿತುದರಲ್ಲಿ ಯಾವುದಾದರೂ ಒಂದು ವಿಷಯವನ್ನು ಹೇಳು ಎಂದ. ಅದಕ್ಕೆ ಪ್ರಹ್ಲಾದ ಹರಿಯನ್ನಾಶ್ರಯಿಸಬೇಕು ಎಂದು ಉತ್ತರ ನೀಡಿದ. ಹಿರಣ್ಯಕಶಿಪುವು ಮಗನ ಮಾತನ್ನು ಕೇಳಿ ಇದನ್ನು ಇವನಿಗೆ ಯಾರೋ ತಪ್ಪಾಗಿ ಹೇಳಿಕೊಟ್ಟಿರಬೇಕು. ತನ್ನ ಮಗನ ಬುದ್ಧಿಯನ್ನು ಯಾರೋ ಕೆಡಿಸಿದ್ದಾರೆ ಎಂದು ತಿಳಿದು ಮುಂದೆ ಹಾಗಾಗದಂತೆ ಎಚ್ಚರವಹಿಸಲು ಗುರುಗಳಿಗೆ ಆದೇಶಿಸಿದ. ಗುರುಗಳು ಪ್ರಹ್ಲಾದನನ್ನು ವಿಚಾರಿಸಿದರು. ಅದಕ್ಕೆ ಪ್ರಹ್ಲಾದ ಉತ್ತರಿಸಿದ. ಸ್ವತಃ ನಾನಾಗಲಿ ಬೇರೆಯವರಾಗಲೀ ಯಾರೂ ಸ್ವತಂತ್ರರಲ್ಲ. ಸ್ವತಂತ್ರರೆಂಬ ಭಾವನೆ ಬುದ್ಧಿಭ್ರಮಣವಾದವರಿಗೆ ಬರುತ್ತದೆ. ಅದು ಪರಮಾತ್ಮನ ಲೀಲೆ. ನನ್ನ ಮನಸ್ಸು ಕಬ್ಬಿಣದ ಆಯಸ್ಕಾಂತದ ಬಳಿಗೆ ಓಡುವಂತೆ ಪರಮಾತ್ಮನ ಕಡೆಗೆ ಯಾವಾಗಲೂ ಹರಿಯುತ್ತದೆ. ಗುರುಗಳು ಕುಪಿತರಾಗಿ ದೈತ್ಯರೆಂಬ ಗಂಧದ ಮರಗಳ ಕಾಡಿನಲ್ಲಿ ಮುಳ್ಳಿನ ಗಿಡವಾಗಿ ಹುಟ್ಟಿದ್ದಾನೆ ಈ ಪ್ರಹ್ಲಾದ. ಗಂಧದ ಮರಗಳ ಬುಡಕ್ಕೆ ಕೊಡಲಿ ಎಂದರೆ ಆ ವಿಷ್ಣು. ಇವನು ಅದಕ್ಕೆ ಕಾವು. ಹೀಗೆಲ್ಲ ಅವನನ್ನು ನಿಂದಿಸುತ್ತ ಅವನಿಗೆ ಲೌಕಿಕ ವಿದ್ಯೆಯನ್ನು ಮತ್ತೆ ಉಪದೇಶಿಸಿದರು. ಮತ್ತೆ ತಿಂಗಳು ಉರಳಿದ ಮೇಲೆ ಹಿರಣ್ಯಕಶಿಪುವು ತನ್ನ ಮಗನನ್ನು ಪರೀಕ್ಷೆಗೆಂದು ಕರೆಯಿಸಿ ತನ್ನ ತೊಡೆಯ ಮೇಲೆ ಕೂಡಿಸಿ ಕೊಂಡು ಮುದ್ದು ಮಾಡುತ್ತ ಮಗು ನೀನು ಇಲ್ಲಿಯ ವರೆಗೆ ಕಲಿತ ಪಾಠ ಏನು ಎಂದು ಕೇಳಿದನು. ಆಗ ಪ್ರಹ್ಲಾದ ವಿಷ್ಣುವಿನ ಮಹಿಮೆಯನ್ನು ಹೇಳುತ್ತ ಆ ಭಗವಂತನಲ್ಲಿ ನವ ವಿಧ ಭಕ್ತಿಯನ್ನು ಮಾಡಿ ಅವನಿಗೆ ಸಮರ್ಪಿಸಬೇಕು ಆಗ ನಾವು ಕಲಿತ ಪಾಠ ಉತ್ತಮವೆನಿಸುತ್ತದೆ.

ಈ ಮಾತನ್ನು ಕೇಳಿದಾಗ ಹಿರಣ್ಯಕಶಿಪುವು ಸಿಟ್ಟಿನಿಂದ ತನ್ನ ಮಗನನ್ನು ಎತ್ತಿ ನೆಲಕ್ಕೆ ಎಸೆದ. ಈತನನ್ನು ಕೊಂದು ದೂರಕ್ಕೆ ಎಸೆದು ಬಿಡಿ. ಇವನು ನನ್ನ ನಂಬಿಕೆಗೆ ಅರ್ಹನಲ್ಲ. ಹರಿಯ ಪಾದಗಳನ್ನು ಪೂಜಿಸುವ ಹರಿಯ ದಾಸ. ಇವನು ನನ್ನ ಶರೀರದಿಂದ ಜನಿಸಿದರೂ ಶರೀರದಿಂದ ಉದ್ಭವಿಸಿದ ರೋಗದಂತೆ. ರೋಗಗ್ರಸ್ಥ ಅಂಗ ಎಂದಿಗೂ ಅಪಾಯಕಾರಿ. ಇವನಿಗೆ ಈ ಕೂಡಲೇ ವಿಷ ಉಣಿಸಿ, ಶೂಲಕ್ಕೆ ಹಾಕಿ, ಯಾವ ಉಪಾಯದಿಂದಾದರೂ ಸರಿ ಇವನನ್ನು ಕೊಂದು ಬಿಡಿ ಎಂದು ದೈತ್ಯರಿಗೆ ಆಜ್ಞಾಪಿಸಿದ. ಅನೇಕ ಉಪಾಯಗಳಿಂದ ಪ್ರಹ್ಲಾದನನ್ನು ಸಂಹರಿಸಲು ಪ್ರಯತ್ನಿಸಿದರೂ ಅದೆಲ್ಲವೂ ವ್ಯರ್ಥವಾಯಿತು. ಪ್ರಹ್ಲಾದನಿಗೆ ಯಾರ ಭಯವೂ ಇಲ್ಲ ಎಂದು ನಿಶ್ಚಯವಾದಾಗ ಹಿರಣ್ಯಕಶಿಪುವಿಗೆ ಭಯ ಪ್ರಾರಂಭವಾಯಿತು. ಶಂಡಾಮರ್ಕರು ಸಮಾಧಾನ ಹೇಳಿದರು. ಶುಕ್ರಾಚಾರ್ಯರು ಬರುವವರೆಗೆ ಇವನು ಪಲಾಯನ ಮಾಡದಂತೆ ಇವನಿಗೆ ಕೇವಲ ರಾಜಧರ್ಮಗಳನ್ನು ಮಾತ್ರ ಉಪದೇಶ ಮಾಡುತ್ತ ಇದ್ದು ಬಿಡಿ ಎಂದು ಆದೇಶಿಸಿದ. ಪ್ರಹ್ಲಾದ ತನ್ನ ಕಾರ್ಯವನ್ನು ಮುಂದುವರಿಸಿದ. ಗುರುಗಳು ಗೃಹಕೃತ್ಯಕ್ಕಾಗಿ ಮನೆಗೆ ತೆರಳಿದಾಗ ದೈತ್ಯಬಾಲಕರನ್ನು ಹತ್ತಿರ ಕರೆದು ಅವರಿಗೆ ಉಪದೇಶ ಮಾಡಿದ.

★★★

ಪ್ರಹ್ಲಾದ ಹಿರಣ್ಯಕಶಿಪುಗಳ ಸಂವಾದದ ನೆಪದಲ್ಲಿ ಭಕ್ತಿಯ ಸ್ವರೂಪವನ್ನು ಶ್ರೀಹರಿಯ ನಿರತಿಶಯ ಸ್ವಾತಂತ್ರ್ಯವನ್ನೂ ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ. ಹಿರಣ್ಯಕಶಿಪುವು ಪ್ರಹ್ಲಾದನಲ್ಲಿ ದ್ವೇಷಮಾಡಲು ಅವನ ಭಗವದ್ಭಕ್ತಿಯೇ ಕಾರಣವೆಂದು ಹೇಳುವರು.

**ನಾರದ ಉವಾಚ**

**ಪೌರೋಹಿತ್ಯಾಯ ಭಗವಾನ್ ವೃತಃ ಕಾವ್ಯಃ ಕಿಲಾಸುರೈಃ ।**
**ಶಂಡಾಮರ್ಕೌ ಸುತೌ ತಸ್ಯ ದೈತ್ಯರಾಜಗೃಹಾಂತಿಕೇ ॥೧॥**

**ಭಗವಾನ್** ಮಂತ್ರವೇತ್ತರಾದ **ಕಾವ್ಯಃ** ಶುಕ್ರಾಚಾರ್ಯರು **ಅಸುರೈಃ** ದೈತ್ಯರಿಂದ **ಪೌರೋಹಿತ್ಯಾಯ** ಪುರೋಹಿತವೃತ್ತಿಗಾಗಿ **ವೃತಃ ಕಿಲ** ಸ್ವೀಕರಿಸಲ್ಪಟ್ಟಿದ್ದಿರಷ್ಟೇ. **ಅತಃ** ಆದ್ದರಿಂದ ಅಂದರೆ ಬೇರೆ ದೈತ್ಯರ ಮನೆಗಳಲ್ಲಿ ಪೌರೋಹಿತ್ಯ ಮಾಡಲು ಶುಕ್ರಾಚಾರ್ಯರು ತೆರಳಿದ್ದರಿಂದ **ತಸ್ಯ** ಅವರ **ಸುತೌ** ಮಕ್ಕಳಾದ **ಶಂಡಾಮರ್ಕೌ** ಶಂಡ ಮತ್ತು ಅಮರ್ಕ ಎಂಬುವವರು **ದೈತ್ಯರಾಜಗೃಹಾಂತಿಕೇ** ಹಿರಣ್ಯಕಶಿಪುವಿನ ಮನೆಯ ಸಮೀಪದಲ್ಲಿ ಪುರೋಹಿತರಾಗಿದ್ದರು. ॥೧॥

**ತೌ ರಾಜ್ಞಾ ಪ್ರಾಪಿತಂ ಬಾಲಂ ಪ್ರಹ್ಲಾದಂ ನಯಕೋವಿದಮ್ ।**
**ಪಾಠಯಾಮಾಸತುಃ ಪಾಠ್ಯಾನನ್ಯಾಂಶ್ಚಾಸುರಬಾಲಕಾನ್ ॥೨॥**

**ತೌ** ಆ ಶಂಡಾಮರ್ಕರು **ರಾಜ್ಞಾ** ಹಿರಣ್ಯಕಶಿಪುವಿನಿಂದ **ಪ್ರಾಪಿತಂ** ಅಧ್ಯಯನಕ್ಕಾಗಿ ಶಿಷ್ಯನನ್ನಾಗಿ ಕಳುಹಿಸಿದ(ಹೊಂದಿಸಲ್ಪಟ್ಟ)**ನಯಕೋವಿದಂ** ನೀತಿಕುಶಲರಾದ **ಬಾಲಂ** ಬಾಲಕರಾದ **ಪ್ರಹ್ಲಾದಂ** ಪ್ರಹ್ಲಾದರಾಜರನ್ನು **ಅನ್ಯಾನ್** ಇತರರಾದ **ಆಸುರಬಾಲಕಾನ್** ದೈತ್ಯರ ಮಕ್ಕಳನ್ನು **ಪಾಠ್ಯಾನ್** ಪಾಠಕ್ಕೆ ಯೋಗ್ಯವಾದ ವಿಷಯಗಳನ್ನು **ಪಾಠಯಾಮಾಸತುಃ** ಕಲಿಸಿದರು. ಅಥವಾ **ಪಾಠ್ಯಾನ್** ಕಲಿಸಬೇಕಾದ ದಂಡನೀತಿ ಮುಂತಾದವನ್ನು ಕಲಿಸಿದರು ಎಂದರ್ಥ. ॥೨॥

**ಯತ್ತತ್ರ ಗುರುಣಾ ಪ್ರೋಕ್ತಂ ಶುಶ್ರುವೇ ನ ಪಪಾಠ ಹ ।**
**ನ ಸಾಧು ಮನಸಾ ಮೇನೇ ಸ್ವರೂಪಾಸದ್ಗ್ರಹಾಶ್ರಯಮ್ ॥೩॥**

**ತತ್ರ** ಪಾಠಶಾಲೆಯಲ್ಲಿ **ಗುರುಣಾ** ಶಂಡಾಮರ್ಕರಿಂದ **ಯತ್ ಪ್ರೋಕ್ತಂ** ಏನು ಹೇಳಲ್ಪಟ್ಟಿತೋ **ತತ್** ಅದನ್ನು **ಶುಶ್ರುವೇ** ಕೇಳಿದನಷ್ಟೇ **ನ ಪಪಾಠ** ಅಭ್ಯಾಸ ಮಾಡಲಿಲ್ಲ **ಸ್ವರೂಪಾಸದ್ಗ್ರಹಾಶ್ರಯಂ** ಸ್ವರೂಪತಃ ಇಲ್ಲದಿರುವ ಅಥವಾ ಸ್ವರೂಪತಃ ಅಸಾಧುವಾದ ವೈಷ್ಣವಸಿದ್ಧಾಂತಕ್ಕೆ ವಿರುದ್ಧವಾದ ಪಕ್ಷವೇ ಆಶ್ರಯವಾಗಿವುಳ್ಳ ಅದನ್ನು, ಸ್ವತಂತ್ರನಾದ ಶ್ರೀಹರಿಯ ರೂಪಕ್ಕೆ ಶೂನ್ಯತ್ವವನ್ನು ಗ್ರಹಿಸುವ, ನಿರಾಕಾರನು ಹರಿ ಎಂಬ ಪಕ್ಷವೇ ಆಶ್ರಯವಾಗಿವುಳ್ಳ ಪ್ರಪಂಚಶೂನ್ಯತೆಯನ್ನು ಪ್ರತಿಪಾದಿಸುವ ಪಕ್ಷವನ್ನು ಆಶ್ರಯಿಸಿದ, ಜೀವಪರಮಾತ್ಮರ ಸ್ವರೂಪಗಳು ಬೇರೆ ಅಲ್ಲ ಒಂದೇ ಎಂಬ ಅದ್ವೈತಸಿದ್ಧಾಂತ- ವನ್ನಾಶ್ರಯಿಸಿದ ಎಂದೂ ಅರ್ಥಮಾಡಿರುವರು **ಮನಸಾ** ಮನಸ್ಸಿನಿಂದ **ನ ಸಾಧು ಮೇನೇ** ಒಳ್ಳೆಯದೆಂದು ತಿಳಿಯಲಿಲ್ಲ ಕಾರಣ ಪಠಿಸಲಿಲ್ಲ.

**ಏಕದಾಽಸುರರಾಟ್ ಪುತ್ರಮಂಕಮಾರೋಪ್ಯ ಲಾಲಯನ್ ।**
**ಪಪ್ರಚ್ಛ ಕಥ್ಯತಾಂ ವತ್ಸ ಮನ್ಯತೇ ಸಾಧು ಯದ್ಭವಾನ್ ॥೪॥**

**ಪಾಂಡವ** ಧರ್ಮರಾಜನೇ **ಏಕದಾ** ಒಂದು ಸಲ **ಅಸುರರಾಟ್** ಹಿರಣ್ಯಕಶಿಪುವು **ಪುತ್ರಂ** ಮಗನನ್ನು **ಅಂಕಂ ಆರೋಪ್ಯ** ತೊಡೆಯ ಮೇಲೆ ಕೂಡಿಸಿಕೊಂಡು **ವತ್ಸ** ಮಗುವೆ **ಭವಾನ್** ನೀನು **ಯತ್** ಯಾವುದನ್ನು **ಸಾಧು ಮನ್ಯತೇ** ಒಳ್ಳೆಯದೆಂದು ತಿಳಿದಿರುವಿಯೋ **ತತ್** ಅದು **ಕಥ್ಯತಾಂ** ಹೇಳಲ್ಪಡಲಿ **ಇತಿ** ಎಂದು **ಪಪ್ರಚ್ಛ** ಕೇಳಿದನು.

**ಪ್ರಹ್ಲಾದ ಉವಾಚ**

**ತತ್ ಸಾಧು ಮನ್ಯೇಽಸುರವರ್ಯ ದೇಹಿನಾಂ**
**ಸದಾ ಸಮುದ್ವಿಗ್ನಧಿಯಾಮಸದ್ಗ್ರಹಾತ್ ।**

**ಹಿತ್ವಾಽಽತ್ಮಪಾತಂ ಗೃಹಮಂಧಕೂಪಂ**
**ವನಂ ಗತೋ ಯದ್ಧರಿಮಾಶ್ರಯೇತ** ||೫||

**ಹೇ ಅಸುರವರ್ಯ** ಅಸುರೋತ್ತಮನಾದ ತಂದೆಯೇ **ಅಸದ್ಗ್ರಹಾತ್** ಬಂಧಕಗಳಾದ ವಿಷಯಗಳಲ್ಲಿ ಅತಿಶಯವಾದ ಆಸಕ್ತಿಯಿಂದ, ಇಲ್ಲದಿರುವ ಸ್ವಾತಂತ್ರ್ಯವಿಷಯಕ ದುರಾಗ್ರಹದಿಂದ, **ಸದಾ** ಯಾವಾಗಲೂ **ಸಮುದ್ವಿಗ್ನಧಿಯಾಂ** ನಿತ್ಯವು ಚಂಚಲವಾದ ಪರಾಧೀನವಾದ ಬುದ್ಧಿಯುಳ್ಳ **ದೇಹಿನಾಂ** ಜೀವರಿಗೆ **ಆತ್ಮಪಾತಂ** ತಮ್ಮನ್ನು ನರಕ ಮೊದಲಾದ ಅನರ್ಥಕ್ಕೆ ಈಡು ಮಾಡುವ **ಅಂಧಕೂಪಂ** ಅಜ್ಞಾನಾವಾಸಸ್ಥಾನವಾದ ಬೆಳಕಿಲ್ಲದ ಭಾವಿಯಂತೆ ಅಗಾಧವಾದ **ಗೃಹಂ** ಸಂಸಾರವನ್ನು ನಾನು ನನ್ನದು ಎಂಬ ಅಭಿಮಾನವನ್ನು **ಹಿತ್ವಾ** ಸಂಪೂರ್ಣವಾಗಿ ಬಿಟ್ಟು **ವನಂ** ಸಜ್ಜನರ ಸಹವಾಸವನ್ನು **ಗತಃ** ಹೊಂದಿದವನಾಗಿ **ಹರಿಂ** ಬಂಧಮೋಚಕನಾದ ಶ್ರೀಹರಿಯನ್ನು **ಆಶ್ರಯೇತ** ತನ್ನ ಸರ್ವಸ್ವಕ್ಕೂ ಸ್ವಾಮಿ ಎಂದು ಭಕ್ತಿಯಿಂದ ಆಶ್ರಯಿಸಬೇಕು **ಇತಿ ಯತ್** ಏನಿದೆಯೋ **ತತ್** ಅದು **ಅಂಧಕೂಪಂ** ಸಂಸಾರ ಎಂಬ ಹಾಳುಭಾವಿಯ ನಿರ್ಮೂಲನಕ್ಕೆ ಸಾಧನವೆಂದು **ಸಾಧು** ಚೆನ್ನಾಗಿ **ಮನ್ಯೇ** ತಿಳಿದಿರುವೆನು. ||೫||

**ನಾರದ ಉವಾಚ**

**ಶ್ರುತ್ವಾ ಪುತ್ರಗಿರೋ ದೈತ್ಯಃ ಪರಪಕ್ಷಸಮೀಹಿತಾಃ ।**
**ಜಹಾಸ ಬುದ್ಧಿರ್ಬಾಲಾನಾಂ ಭಿದ್ಯತೇ ಪರಬುದ್ಧಿಭಿಃ** ||೬||

**ಪರಪಕ್ಷಸಮೀಹಿತಾಃ** ಪೂರ್ವಪಕ್ಷವಿಷಯವಾಗಿ ಹೊರಟಿರುವ ಶತ್ರುವಾದ ವಿಷ್ಣುವಿನ ಪಕ್ಷದವರಿಗೆ ಒಪ್ಪಿಗೆಯಾಗುವ **ಪುತ್ರಗಿರಃ** ಮಗನ ಮಾತುಗಳನ್ನು **ಶ್ರುತ್ವಾ** ಕೇಳಿ **ದೈತ್ಯಃ** ಹಿರಣ್ಯಕಶಿಪುವು **ಜಹಾಸ** ನಕ್ಕನು **ಪರಬುದ್ಧಿಭಿಃ** ಶತ್ರುಪಕ್ಷದವರ ಬುದ್ಧಿಗಳಿಂದ **ಬಾಲಾನಾಂ** ಅರಿಯದ ಮಕ್ಕಳ **ಬುದ್ಧಿಃ** ಬುದ್ಧಿಯು ಮನಸ್ಸು **ಭಿದ್ಯತೇ** ತಪ್ಪು ಮಾರ್ಗಕ್ಕೆ ಎಳೆಯಲ್ಪಡುತ್ತದೆ. ದೈತ್ಯನು ನಕ್ಕನು ಎಂದು ಹೇಳಿದ್ದರಿಂದ ಪ್ರಹ್ಲಾದನು ಸಜ್ಜನರ ಉಪದೇಶಕ್ಕೆ ತತ್ವವನ್ನು ಹೇಳಿದ್ದೇ ಹೊರತು ಅಸುರಾವೇಶದಿಂದ ದುರಾಗ್ರಹಗ್ರಸ್ತನಾದ ಹಿರಣ್ಯಕಶಿಪುವಿಗೆ ತಿಳಿಸುವದಕ್ಕಲ್ಲ ಎಂದು ತಿಳಿಯುವದು. ಅದರ ಫಲವೇ ಪರಿಹಾಸ. ಅದನ್ನು ತತ್ವವೆಂದು ಅವನು ಪರಿಗ್ರಹಿಸಲಿಲ್ಲವೆಂದು ಭಾವ. ದೇವತಾಪಕ್ಷದವರು ಅರಿಯದ ಅಸುರರ ಮಕ್ಕಳ ಬುದ್ಧಿಯನ್ನು ಕೆಡಿಸುವರೆಂದೂ ಅಂದು ಕೊಂಡನು. ||೬||

ಮಗನಲ್ಲಿರುವ ಪ್ರೀತಿಯಿಂದ ಈ ನಗುವೇ ಹೊರತು ಈ ತತ್ತ್ವ ಅವನಿಗೆ ಅಭಿಮತವಲ್ಲವೆಂಬ ಅಭಿಪ್ರಾಯದಿಂದ ಹೇಳುತ್ತಾರೆ-

**ಸಮ್ಯಗ್ವಿಧಾರ್ಯತಾಂ ಬಾಲೋ ಗುರುಗೇಹೇ ದ್ವಿಜಾತಿಭಿಃ ।**
**ವಿಷ್ಣುಪಕ್ಷಪ್ರತಿಚ್ಛನ್ನೈರ್ನಭಿದ್ಯೇತಾಸ್ಯ ಧೀರ್ಯಥಾ ॥೭॥**

**ವಿಷ್ಣುಪಕ್ಷಪ್ರತಿಚ್ಛನ್ನೈಃ** ತಾವು ವಿಷ್ಣುಪಕ್ಷದವರೆಂದು ತೋರಿಸದಿರುವ, (ಮೇಲೆ ಅಸುರಪಕ್ಷದವರಂತೆ ಕಾಣಿಸಿದರೂ ಒಳಗೆ ವಿಷ್ಣುಸಿದ್ಧಾಂತವನ್ನು ಅನುಸರಿಸುವ) ಗೂಢ ಶತ್ರುಗಳಿಂದ, **ಅಸ್ಯ** ಈ ಹುಡುಗನ **ಬುದ್ಧಿಃ** ಬುದ್ಧಿಯು **ಯಥಾ** ಹೇಗೆ **ನ ಭಿದ್ಯೇತ** ಕೆಡಿಸಲಾಗುವದಿಲ್ಲವೋ **ತಥಾ** ಹಾಗೆ **ಬಾಲಃ** ಈ ನಮ್ಮ ಹುಡುಗನು **ದ್ವಿಜಾತಿಭಿಃ** ಬ್ರಾಹ್ಮಣರಾದ ನಿಮ್ಮಿಂದ **ಗುರುಗೇಹೇ** ಗುರುಕುಲದಲ್ಲಿ **ಸಮ್ಯಕ್** ಎಚ್ಚರಿಕೆಯಿಂದ **ವಿಧಾರ್ಯತಾಂ** ಪ್ರತ್ಯೇಕವಾಗಿಡಲ್ಪಡಲಿ. ॥೭॥

ಅಧೀನರಾಗದವರನ್ನು ಅಧೀನಮಾಡಿಕೊಳ್ಳಲು ನಾಲ್ಕು ಉಪಾಯಗಳು ಹೇಳಲ್ಪಟ್ಟವೆ. ಅದರಲ್ಲಿ ಬ್ರಾಹ್ಮಣರಿಗೆ ಸಾಮೋಪಾಯವೇ ಉತ್ತಮವೆಂದು ತಿಳಿಸಲು, ಬೇರೆ ಯಾರಾದರೂ ಪ್ರಹ್ಲಾದರಾಜರ ಬುದ್ಧಿಯನ್ನು ಕೆಡಿಸಿರುವರೋ ಅಥವಾ ಅಜ್ಞಾನವು ಅವರಿಗೆ ತಾನಾಗಿಯೇ ಬಂದಿದೆಯೋ ಎಂಬುದನ್ನು ತಿಳಿಯಲು, ಭಗವತ್ತತ್ವಜ್ಞಾನದ ನಿಶ್ಚಯಕ್ಕೂ, ದೈತ್ಯನ ಭಯದಿಂದಲೂ, ದೈತ್ಯಪುರೋಹಿತರು ಪ್ರಹ್ಲಾದನನ್ನು ಕೇಳಿದರೆಂದು ಹೇಳುತ್ತಾರೆ-

**ಗೃಹಮಾನೀತಮಾಹೂಯ ಪ್ರಹ್ಲಾದಂ ದೈತ್ಯಯಾಜಕಾಃ ।**
**ಪ್ರಶಸ್ಯ ಶ್ಲಕ್ಷ್ಣಯಾ ವಾಚಾ ಸಮಪೃಚ್ಛಂತ ಸಾಮಭಿಃ ॥೮॥**

**ದೈತ್ಯಯಾಜಕಾಃ** ದೈತ್ಯಪುರೋಹಿತರಾದ ಶಂಡಾಮರ್ಕರು **ಗೃಹಂ** ಮನೆಗೆ **ಆನೀತಂ** ಕರೆತರಲ್ಪಟ್ಟ **ಪ್ರಹ್ಲಾದಂ** ಪ್ರಹ್ಲಾದನನ್ನು **ಆಹೂಯ** ಕರೆದು **ಪ್ರಶಸ್ಯ** ಪ್ರಶಂಸನೆ ಮಾಡಿ **ಶ್ಲಕ್ಷ್ಣಯಾ** ಮಧುರವಾದ **ವಾಚಾ** ಮಾತಿನಿಂದ **ಸಾಮಭಿಃ** ಸಾಮೋಪಾಯಗಳಿಂದ **ಸಮಪೃಚ್ಛಂತ** ಕೇಳಿದರು. ॥೮॥

**ವತ್ಸ ಪ್ರಹ್ಲಾದ ಭದ್ರಂ ತೇ ಸತ್ಯಂ ಕಥಯ ಮಾ ಮೃಷಾ ।**
**ಬಾಲಾನತಿ ಕುತಸ್ತುಭ್ಯಮೇಷ ಬುದ್ಧಿವಿಪರ್ಯಯಃ ॥೯॥**

**ವತ್ಸ** ಮಗುವೇ **ಪ್ರಹ್ಲಾದ** ಪ್ರಹ್ಲಾದನೇ **ತೇ** ನಿನಗೆ **ಭದ್ರಂ** ಮಂಗಲವಾಗಲಿ **ಸತ್ಯಂ ಕಥಯ** ನಿಜ ಹೇಳು **ಮೃಷಾ ಮಾ ಕಥಯ** ಸುಳ್ಳನ್ನು ಹೇಳಬೇಡ **ತುಭ್ಯಂ** ನಿನಗೆ **ಬಾಲಾನ್** ನಿನ್ನ ವಯಸ್ಸಿನ ಹುಡುಗರನ್ನು **ಅತಿ** ಅತಿಕ್ರಮಿಸಿ(ಮೀರಿ)**ಏಷಃ** ಈ **ಬುದ್ಧಿವಿಪರ್ಯಯಃ** ತತ್ವಜ್ಞಾನವು **ಕುತಃ** ಯಾವುದರಿಂದ ಆಯಿತು ಅಥವಾ ಬಾಲಕರ ಬುದ್ಧಿಯನ್ನು ಮೀರಿ ಈ ನಿನ್ನ ಅನ್ಯಥಾಬುದ್ಧಿಯು ಯಾರಿಂದ ನಿನಗೆ ರುಚಿಸುವಂತೆ ಮಾಡಲ್ಪಟ್ಟಿತು. ಯಾರು ಉಪದೇಶಿಸಿದರು ? ॥೯॥

**ಬುದ್ಧಿಭೇದಃ ಪರಕೃತ ಉತಾಹೋ ತೇ ಸ್ವತೋ ಭವೇತ್ ।**
**ಭಣ್ಯತಾಂ ಶ್ರೋತುಕಾಮಾನಾಂ ಗುರೂಣಾಂ ಕುಲನಂದನ ॥೧೦॥**

**ಕುಲನಂದನ** ದೈತ್ಯಕುಲವನ್ನೇ ಸಂತೋಷಪಡಿಸುವ ಪ್ರಹ್ಲಾದನೇ **ಶ್ರೋತು-ಕಾಮಾನಾಂ** ಕೇಳಲಪೇಕ್ಷಿಸುತ್ತಿರುವ **ಗುರೂಣಾಂ** ನಿನ್ನ ಗುರುಗಳಾದ ನಮಗೆ (ಗುರುಗಳ ಸಮೀಪದಲ್ಲಿ) **ಭಣ್ಯತಾಂ** ನಿನ್ನಿಂದ ಸತ್ಯವು ಹೇಳಲ್ಪಡಲಿ **ತೇ** ನಿನ್ನ **ಬುದ್ಧಿಭೇದಃ** ಅನ್ಯಥಾಜ್ಞಾನವು **ಪರಕೃತಃ** ಮತ್ತೊಬ್ಬರಿಂದ ಉಂಟುಮಾಡಲ್ಪಟ್ಟಿತೋ **ಉತ ಅಹೋ** ಅಥವಾ **ಸ್ವತಃ** ಸ್ವಾಭಾವಿಕವಾಗಿಯೇ **ತೇ** ನಿನಗೆ **ಭವೇತ್** ಬಂದದ್ದೋ ಇದರಿಂದ ಮೇಲೆ ಹೇಳಿದ್ದನ್ನು ವಿವರಿಸಿದಂತಾಯಿತು '**ಗುರೂಣಾಂ**' ಎಂದದ್ದರಿಂದ ನಿಜ ಹೇಳಬೇಕು ಎಂದು ಸೂಚಿತವಾಯಿತು. ॥೧೦॥

ಏನು ಭಗವಂತನ ಸಾಮರ್ಥ್ಯ ? ಯಾವನ ಮಾಯೆಯಿಂದ ಮೋಹಿತರಾಗಿ ನೀವು ನನ್ನನ್ನೂ ಈ ರೀತಿ ಕೇಳುತ್ತಿರುವಿರಿ ಎಂಬ ಅಭಿಪ್ರಾಯದಿಂದ ಹೇಳುವನು.

ಉತ್ತರ ಹೇಳಲು ಮಂಗಳ ಮಾಡುತ್ತಾರೆ-

**ಪ್ರಹ್ಲಾದ ಉವಾಚ**

**ಪರಃ ಸ್ವಶ್ಚೇತ್ಯಸದ್ಗ್ರಾಹಃ ಪುಂಸಾಂ ಯನ್ಮಾಯಯಾ ಕೃತಃ ।**
**ವಿಮೋಹಿತಧಿಯಾಂ ದೃಷ್ಟಸ್ತಸ್ಮೈ ಭಗವತೇ ನಮಃ ॥೧೧॥**

**ವಿಮೋಹಿತಧಿಯಾಂ** ಅಜ್ಞಾನಾವೃತವಾದ ಮನಸ್ಸುಳ್ಳ ಜೀವರಲ್ಲಿ **ದೃಷ್ಟಃ** ಪ್ರತ್ಯಕ್ಷಕ್ಕೆ ವಿಷಯವಾದ **ಪುಂಸಾಂ** ಜೀವರಿಗೆ **ಪರಃ** ಈ ವಿಷಯದಲ್ಲಿ ವಿಷ್ಣುಭಿನ್ನರಾದ ದೇವತೆಗಳು ಸ್ವತಂತ್ರರು **ಸ್ವಃ** ಈ ವಿಷಯದಲ್ಲಿ ನಾನು ಸ್ವತಂತ್ರನು **ಇತಿ** ಎಂಬ **ಅಸದ್ಗ್ರಾಹಃ** 'ಏಕಮೇವಾದ್ವಿತೀಯಂ ಬ್ರಹ್ಮ' ಎಂಬ ಶ್ರುತಿಯಂತೆ ಸ್ವತಂತ್ರನಾದವನು ಶ್ರೀಹರಿಯೊಬ್ಬನೇ ಎಂದು ಪ್ರಮಾಣದಿಂದ ಸಿದ್ಧವಾಗಿರುವಾಗ ಅವನನ್ನು ಬಿಟ್ಟು ಬೇರೆಯವರಲ್ಲಿ ಸ್ವಾತಂತ್ರ್ಯಕಲ್ಪನೆ ಎಂಬ ಯಾವ ಈ ಅನ್ಯಥಾಜ್ಞಾನವು **ಯನ್ಮಾಯಯಾ** ಯಾವ ಶ್ರೀಹರಿಯ ಬಂಧಕ ಇಚ್ಛೆಯಿಂದ **ಕೃತಃ** ಎಲ್ಲಕ್ಕೂ ಅವನೇ ಕರ್ತೃವಾದ್ದರಿಂದ ಅವನಿಂದಲೇ ಕೊಡಲ್ಪಟ್ಟಿದೆಯೋ **ತಸ್ಮೈ** ಅಂತಹ ಶ್ರುತಿಪ್ರಸಿದ್ಧನಾದ **ಭಗವತೇ** ಮಹಾಮಹಿಮೋಪೇತನಾದ ಶ್ರೀಹರಿಗೆ **ನಮಃ** ನಮಸ್ಕಾರವು. ಆದ್ದರಿಂದ ಆ ಬಗೆಯ ಸ್ವಾತಂತ್ರ್ಯಾಭಿಮಾನವನ್ನು ನೀವು ಮಾಡಬಾರದೆಂದು ಅಭಿಪ್ರಾಯ.

ವಿಶೇಷ :-'ವಿಮೋಹಿತ ಧಿಯಾಂ' ಎಂದು ಹೇಳಿದ್ದರಿಂದ ಶ್ರೀಹರಿಯೇ ಸ್ವತಂತ್ರಕರ್ತಾ ಎಂಬುದು ತಿಳಿದು ಬರುವದು. 'ವಿಮೋಹಿತಧಿಯಾಂ ಪುಂಸಾಂ

ದೃಷ್ಟಃ ಅಸದ್ಗ್ರಾಹಃ ಯನ್ಮಾಯಯಾ ಕೃತಃ ತಸ್ಮೈ' ಎಂದಾದರೂ ಅನ್ವಯ. ಅಜ್ಞಾನಿಗಳಾದ ಚೇತನರಲ್ಲಿ ಅನುಭವಸಿದ್ಧವಾದ ಸ್ವಾತಂತ್ರ್ಯಾಭಿಮಾನವು ಯಾವನ ಮೋಹಕಶಕ್ತಿಯಿಂದ ಉಂಟುಮಾಡಲ್ಪಟ್ಟಿದೆಯೋ ಅವನಿಗೆ ಎಂದರ್ಥ.

ಬೇರೆಯವರು ಸ್ವತಂತ್ರ ಕರ್ತೃಗಳು ನಾನೂ ಸ್ವತಂತ್ರಕರ್ತೃ ಎಂಬ ಆಗ್ರಹವು ದುರಾಗ್ರಹ. ಪರಮಾತ್ಮನೇ ಸ್ವತಂತ್ರಕರ್ತೃ ಜೀವರು ಅವನ ಅಧೀನರು. ಈ ಬುದ್ಧಿ ಯಾವನಿಂದ ಬಂದಿತೋ ಅಂತಹ ಭಗವಂತನಿಗೆ, ನನಗೆ ಈ ವಿಧ ದುರಾಗ್ರಹ ಕೊಡದಿದ್ದುದರಿಂದ ಪ್ರತ್ಯುಪಕಾರ ಮಾಡಲಾಗದೇ ನಮಸ್ಕಾರ ಮಾತ್ರ ಮಾಡುವನೆಂದು ಭಾವ. ॥೧೧॥

'ಯನ್ಮಾಯಯಾ' ಎಂದು ಹೇಳಿದ್ದನ್ನೇ ಸ್ಪಷ್ಟಪಡಿಸುವರು-

**ಸ ಯದಾಽನುಗತಃ ಪುಂಸಾಂ ಪಶುಬುದ್ಧಿರ್ವಿಭಿದ್ಯತೇ ।**
**ಅನ್ಯ ಏಷ ತಥಾಽನ್ಯೋಽಹಮಿತಿ ದೇಹಗತಾಽಸತೀ ॥೧೨॥**

**ಸಃ** ಆ ಶ್ರೀಹರಿಯು **ಯದಾ** ಯಾವಾಗ **ಪುಂಸಾಂ** ಜೀವರಿಗೆ **ಅನುಗತಃ** ಈ ವಿಷಯದಲ್ಲಿ ಇವರು ಸ್ವತಂತ್ರರು ಈ ವಿಷಯದಲ್ಲಿ ನಾನು ಸ್ವತಂತ್ರನು ಎಂಬ ದುರಭಿಮಾನವನ್ನು ಹುಟ್ಟಿಸುವಲ್ಲಿ ಅನುಕೂಲನಾಗಿರುವನೋ **ತದಾ** ಆಗ **ದೇಹಗತಾ** ಲಿಂಗದೇಹದಲ್ಲಿರುವ(ಮನಸ್ಸಿನಲ್ಲಿರುವ) **ಅಸತೀ** ಭ್ರಾಂತಿರೂಪವಾದ (ಮೋಕ್ಷೋಪಯೋಗಿಯಲ್ಲದ ವೃತ್ತಿಜ್ಞಾನರೂಪವಾದ) **ಏಷಃ** ಈ ದೇವದತ್ತನು ಈ ಬ್ರಹ್ಮಾದಿ ದೇವತೆಗಳು **ಅನ್ಯಃ** ಸ್ವತಂತ್ರರು **ತಥಾ** ಹಾಗೆಯೇ **ಅಹಂ** ನಾನು **ಅನ್ಯಃ** ಸ್ವತಂತ್ರನು **ಇತಿ** ಎಂಬ **ಪಶುಬುದ್ಧಿಃ** ಅಜ್ಞಾನಿಗಳ ಜ್ಞಾನವು(ಭ್ರಾಂತಿಯು)**ವಿಭಿದ್ಯತೇ** ವಿಶೇಷವಾಗಿ ಉತ್ಪನ್ನವಾಗುವದು.

'ಅನ್ಯ ಏಷಃ ತಥಾ ಅನ್ಯೋಽಹಂ' ಎಂಬುದರಿಂದ 'ಅನ್ಯೋಽಸಾವನ್ಯೋಽಹಮಸ್ಮೀತಿ' 'ನ ಸ ವೇದ ಯಥಾ ಪಶುಃ' ಎಂಬ ಶ್ರುತಿಯನ್ನು ಹಿಡಿದಿರುವರು.

ಇದಕ್ಕೆ ಅದ್ವೈತಿಗಳು ಜೀವಪರಮಾತ್ಮರ ಭೇದವನ್ನು ನಿಷೇಧ ಮಾಡಿ ಈ ಶ್ರುತಿಯು ಜೀವಚಿತ್ತಿಗೂ ಪರಮಾತ್ಮಚಿತ್ತಿಗೂ ಐಕ್ಯವನ್ನು ಹೇಳುವದೆಂದು ಆಪಾತತಃ ತೋರುವ ಅರ್ಥವನ್ನು ಹೇಳುವರು. ಅದಕ್ಕನುಗುಣವಾಗಿ ಅರ್ಥಮಾಡಬೇಕೇ ಹೊರತು ಅದನ್ನು ಬಿಟ್ಟು ಈ ಅರ್ಥಾಂತರವನ್ನು ಹೇಳಲು ಪ್ರಮಾಣವೇನು ಎಂದು ಶಂಕಿಸಬಹುದು. ಅದಕ್ಕೆ ಪರಿಹಾರಕ ಪ್ರಮಾಣವನ್ನು ಆಚಾರ್ಯರು ತಿಳಿಸುವರು-

**... ತಾತ್ಪರ್ಯ ...**

**ಸ್ವಾತಂತ್ರ್ಯೇಣಾನ್ಯಸದ್ಭಾವನಿಷೇಧಾಯ ಶ್ರುತಿಸ್ತ್ವಿಯಂ ।**

**ಅನ್ಯೋಽಸಾವನ್ಯೋಽಹಮಿತಿ ಪಶ್ಯನ್ನಜ್ಞ ಇತಿ ಸ್ಮ ಹ ॥**

**ಆತ್ಮಾನಮಂತರ್ಯಮಯೇದಿತಿ ಭೇದಂ ಸ್ವರೂಪತಃ ।**
**ಆಹ ತದ್ಬ್ರಹ್ಮಗೋಽಧೀನಾ ಭಿನ್ನಾ ಜೀವಾಃ ಸದೈವ ತು ॥**

**ಸ್ವರೂಪಸತ್ತಾಕರ್ತೃತ್ವಂ ಭೋಗೋ ಮೋಕ್ಷಸ್ತಥೈವ ಚ ।**
**ಮುಕ್ತಸ್ಯಾವಸ್ಥಿತಿಶ್ಚೈವ ಸರ್ವಂ ವಿಷ್ಣೋರ್ವಶೇ ಸದಾ ॥ ಇತಿ ಬ್ರಹ್ಮತರ್ಕೇ ॥**

ಬ್ರಹ್ಮಾದಿಗಳು ಸ್ವತಂತ್ರರು ನಾನು ಸ್ವತಂತ್ರನು ಎಂದು ತಿಳಿದವನು ಅಜ್ಞನು ಎಂಬ ಅರ್ಥವನ್ನು ಹೇಳುವ 'ಅಥ ಯೋಽನ್ಯಾಂ ದೇವತಾಂ ಉಪಾಸ್ತೇ ಅನ್ಯೋ ಅಹಮಸ್ಮೀತಿ ನ ಸ ವೇದ ಯಥಾ ಪಶುಃ' ಎಂಬ ಶ್ರುತಿಯು ಶ್ರೀಪರಮಾತ್ಮನಿಂದ ವ್ಯತಿರಿಕ್ತರಾದ ಸ್ವತಂತ್ರರು ಇದ್ದಾರೆಂಬುದನ್ನು ವಿವರಿಸುತ್ತಾರೆ. ಸ್ವರೂಪಸತ್ತೆಯು ಕರ್ತೃತ್ವವು, ಭೋಗವು, ಮೋಕ್ಷವೂ, ಮುಕ್ತರ ಸ್ಥಿತಿಯು ಎಲ್ಲವೂ ಸರ್ವದಾ ಶ್ರೀವಿಷ್ಣುವಿನ ಅಧೀನವೇ ಎಂದು ಬ್ರಹ್ಮತರ್ಕದಲ್ಲಿದೆ. ಈ ಶ್ರುತ್ಯರ್ಥವು ಬೃಹದ್ಭಾಷ್ಯನ್ಯಾಯಾಮೃತಗಳಲ್ಲಿ ಇದೆ. ॥೧೨॥

ಜೀವಪರಮಾತ್ಮರು ಭಿನ್ನರಾದರೆ ಘಟಪಟಭೇದಜ್ಞಾನದಂತೆ ಜೀವನಿಗಿಂತ ಶ್ರೀಹರಿಯು ಭಿನ್ನನೆಂದು ಜ್ಞಾನವೇಕೆ ಹುಟ್ಟುತ್ತಿಲ್ಲ ಎಂದು ಶಂಕಿಸಿ ಪ್ರತಿಯೋಗಿಯಾದ ಶ್ರೀಹರಿಯ ಜ್ಞಾನವು ದುಸ್ಸಾಧ್ಯವಾದ್ದರಿಂದ ಎಂದು ಹೇಳುತ್ತಾರೆ.

ಶ್ರೀಹರಿಯು ದುರ್ವಿಜ್ಞೇಯನೆಂಬ ನಿನ್ನ ಬುದ್ಧಿಯು ಪರಕೃತವೇ ಸ್ವಾಭಾವಿಕವೇ ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾರೆ-

**ಸ ಏಷ ಆತ್ಮಾ ಸ್ವಪರೇತ್ಯಬುದ್ಧಿಭಿ-**
**ರ್ದುರನ್ವಯಾನುಕ್ರಮಣೋ ನಿರುಚ್ಯತೇ ।**
**ಮುಹ್ಯಂತಿ ಯದ್ವರ್ತ್ಮನಿ ವೇದವಾದಿನೋ**
**ಬ್ರಹ್ಮಾದಯೋ ಹ್ಯೇಷ ಭಿನತ್ತಿ ಮೇ ಮತಿಮ್ ॥೧೩॥**

**ಸಃ ಏಷಃ** ಅವರವರ ಕರ್ಮಾನುಗುಣವಾಗಿ ಅವರವರ ಯೋಗ್ಯತೆಗೆ ತಕ್ಕ ಜ್ಞಾನವನ್ನು ಕೊಡುವ **ಆತ್ಮಾ** ಸರ್ವಸ್ವಾಮಿಯಾದ ಪರಮಾತ್ಮನು **ಸ್ವಪರೇತ್ಯಬುದ್ಧಿಭಿಃ** ನಾನು ಸ್ವತಂತ್ರನು ಮತ್ತೊಬ್ಬನು ಸ್ವತಂತ್ರನು ಎಂಬ ಅನ್ಯಥಾಜ್ಞಾನವುಳ್ಳ ಯಥಾರ್ಥಜ್ಞಾನಕ್ಕೆ ವಿರೋಧಿಯಾದ ಜ್ಞಾನವುಳ್ಳ ಜೀವರಿಂದ **ದುರನ್ವಯಾನುಕ್ರಮಣಃ** ತಿಳಿಯಲಾಗದ ತತ್ತದ್ಯೋಗ್ಯತಾನುಗುಣ ಪ್ರವರ್ತನವುಳ್ಳವನೆಂದು ದುರ್ಜ್ಞೇಯವಾದ ಚೇಷ್ಟೆಯುಳ್ಳವನೆಂದು **ನಿರುಚ್ಯತೇ** ನಿಶ್ಚಯಿಸಲ್ಪಟ್ಟಿದೆ.

'ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ' ಎಂದು ಶ್ರುತಿಯಲ್ಲಿ ಹೇಳಿರುವಂತೆ ಬ್ರಹ್ಮಾದಿಗಳಿಗೆ ಶ್ರೀಹರಿಯ ಜ್ಞಾನವು ಇರುವದರಿಂದ ಪ್ರತಿಯೋಗಿಯಾದ ಶ್ರೀಹರಿಯ ಜ್ಞಾನವು ದುಃಸಾಧ್ಯವೆಂದು ಹೇಗೆ ಹೇಳದಿರಿ ಎಂದರೆ ಹೇಳುತ್ತಾರೆ.

ಅಥವಾ ಬ್ರಹ್ಮಾದಿಗಳಿಗೆ ಏನೂ ದುಸ್ಸಾಧ್ಯವಲ್ಲ ಇತರರಿಗೆ ಮಾತ್ರ ದುಸ್ಸಾಧ್ಯವೆಂದು ಹೇಳುತ್ತಾರೆ. **ಹಿ** ಏಕೆಂದರೆ **ವೇದವಾದಿನಃ** ವೇದಾರ್ಥಕುಶಲರಾದ **ಬ್ರಹ್ಮಾದಯಃ ಹಿ** (ಅತದ್ಗುಣಸಂವಿಜ್ಞಾನ ಬಹುವ್ರೀಹಿ)ರುದ್ರಾದಿಗಳು **ಯದ್ವರ್ತ್ಮನಿ** ಯಾವನ ಸ್ವರೂಪವನ್ನು ತಿಳಿಯುವಲ್ಲಿ **ಮುಹ್ಯಂತಿ** ಮುಗ್ಧರಾಗುವರೋ (ತಿಳಿಯಲಾರರೋ), ಆದ್ದರಿಂದ ಅವನು ದುರನ್ವಯಾನುಕ್ರಮಣನೆಂದು ನಿಶ್ಚಯಿಸಲ್ಪಟ್ಟಿರುವನು. ಇದರಿಂದ ಶ್ರೀಹರಿಯ ಅನುಗ್ರಹವಿಲ್ಲದೆ ಅವನ ಜ್ಞಾನವಿಲ್ಲ ಅನುಗ್ರಹವಿದ್ದರೆ ಉಂಟು. 'ಯಮೈವೇಷ ವೃಣುತೇ ತೇನ ಲಭ್ಯಃ' ಎಂಬ ಶ್ರುತಿ ಅನ್ವಯವ್ಯತಿರೇಕಗಳನ್ನು ತೋರಿಸಿರುವರು.

ಪ್ರಹ್ಲಾದ ನಿನ್ನ ಮಾತಿನಿಂದ ಈ ಬುದ್ಧಿಭೇದಕ್ಕೆ ಕಾರಣರಿದ್ದಾರೆ ಎಂದಾಯಿತು. ಅವರು ಯಾರು ಎಂಬುದನ್ನೇ ನಾವು ವಿಚಾರಿಸುತ್ತಿರುವದು ಎಂದರೆ ಉತ್ತರ ಕೊಡುತ್ತಾರೆ. **ಏಷಃ** ಯಾವನ ಸ್ವರೂಪವನ್ನು ಬ್ರಹ್ಮಾದಿಗಳು ಪೂರ್ಣವಾಗಿ ತಿಳಿಯಲಾರರೋ ಆ ಶ್ರೀಹರಿಯು, **ಮೇ** ನನ್ನ **ಮತಿಂ** ಬುದ್ಧಿಯನ್ನು, **ಭಿನತ್ತಿ** ತನ್ನ ವಿಷಯಕವಾಗಿ ಅಂದರೆ ಎಲ್ಲವೂ ಶ್ರೀಹರಿಯ ವಶ ಶ್ರೀಹರಿಯು ಯಾರ ಅಧೀನನಲ್ಲ ಶ್ರೀಹರಿಯ ಅನುಗ್ರಹದಿಂದಲೇ ಮೋಕ್ಷ ಮೊದಲಾದ ಎಲ್ಲ ಪುರುಷಾರ್ಥ ಪ್ರಾಪ್ತಿ, ಮುಂತಾದ ಜ್ಞಾನವನ್ನು ಉಂಟುಮಾಡುತ್ತಿರುವನು. ಇದನ್ನೇ ಹಿಂದಿನ ಪ್ರಮಾಣದಲ್ಲಿ 'ತದ್ಬ್ರಹ್ಮಣೋ ಅಧೀನಾ ಭಿನ್ನಾಃ ಜೀವಾ ಸದೈವ ತು' ಎಂದು ಹೇಳಿರುವರು ಇದು ವಿಜಯಧ್ವಜೀಯ.

**ಯಾದವಾರ್ಯರ ಪ್ರಕಾರ** ಃ- ಒಂದು ವೇಳೆ ಪರಮಾತ್ಮನಿಗೇನೇ ಸ್ವಾತಂತ್ರ್ಯೇಣ ಕರ್ತೃತ್ವವು ಪ್ರಾಮಾಣಿಕವೆಂದಾದರೆ ನೀವು ಹೇಳಿದ್ದು ಸರಿ ಹೇಗೆ ಎಂದರೆ ಹೇಳುವರು.

'ಸ ಏಷಃ ಏಕ ಏವ ಸ್ವಾತಂತ್ರ್ಯೇಣ ಕರ್ತಾ ಪರಮಾತ್ಮಾ ನಿರುಚ್ಯತೇ' ಅವನೊಬ್ಬ ಸ್ವತಂತ್ರಕರ್ತಾ ಎಂದು ಪರಮಾತ್ಮನು ಹೇಳಲ್ಪಡುವನು. 'ನಾನ್ಯೋಽತೋಽಸ್ತಿ ಕರ್ತಾ' 'ದ್ರವ್ಯಂ ಕರ್ಮ ಚ ಕಾಲಶ್ಚ' ಎಂಬಲ್ಲಿ ಪ್ರತಿಪಾದಿತನಾಗಿರುವನು.

ಹಾಗಾದರೆ ನಮಗೇಕೆ ತಿಳಿಯುವದಿಲ್ಲವೆಂದರೆ **ಸ್ವಪರೇತ್ಯಬುದ್ಧಿಭಿಃ** ನಾನು ಸ್ವಾತಂತ್ರ್ಯೇಣ ಕರ್ತಾ ಪರನೂ ಸ್ವಾತಂತ್ರ್ಯೇಣ ಕರ್ತಾ ಎಂದು ಯಥಾರ್ಥಜ್ಞಾನ

ವಿರೋಧಿಜ್ಞಾನವುಳ್ಳ ಪುರುಷರಿಂದ **ದುರನ್ವಯಾನುಕ್ರಮಣಃ** ದುರ್ಜ್ಞಾನ ಪ್ರವರ್ತನವುಳ್ಳವನು, ಮಿಥ್ಯಾಜ್ಞಾನಿಗಳಾದ್ದರಿಂದ ನಿಮಗೆ ಈ ವಿಧ ಸಮ್ಯಕ್‌ಜ್ಞಾನ ಬಂದಿಲ್ಲವೆಂದು ಭಾವ. ಈ ಮಿಥ್ಯಾಜ್ಞಾನ ನಮಗೇಕೆ ಎಂದರೆ ಕೈಮುತ್ಯ ಹೇಳುವರು. ಬ್ರಹ್ಮಾದಯಃ ಎಂದು ಬ್ರಹ್ಮದೇವರೇ ಕಾರಣರಾಗಿವುಳ್ಳ ಮರೀಚಿ ಮುಂತಾದವರು ಯಾವನ ವಿಷಯದಲ್ಲಿ ಮೋಹಗೊಳ್ಳುವರು ಅಂತಹ ಸ್ವತಂತ್ರಕರ್ತೃನಾದ ಹರಿಯು ಏಷಃ ಭಿನತ್ತಿ ನನ್ನ ಬುದ್ಧಿಯನ್ನು ನಿಮ್ಮ ಬುದ್ಧಿಯಿಂದ ಭಿನ್ನವಾಗಿ ಮಾಡುವನು. ತಾನೇ ಸ್ವಾತಂತ್ರ್ಯೇಣ ಕರ್ತಾ ಮುಂತಾದ ಬುದ್ಧಿಗಳನ್ನು ಹುಟ್ಟಿಸುವನು ಎಂದು ಭಾವ.

**ಯಥಾ ಭ್ರಾಮ್ಯತ್ಯಯೋ ಬ್ರಹ್ಮನ್ ಸ್ವಯಮಾಕರ್ಷಸನ್ನಿಧೌ ।**
**ತಥಾ ಮೇ ಭಿದ್ಯತೇ ಚೇತಶ್ಚಕ್ರಪಾಣೌ ಯದೃಚ್ಛಯಾ ॥೧೪॥**

**ಬ್ರಹ್ಮನ್** ಶಂಡಾಮರ್ಕರೆ **ಆಕರ್ಷಸನ್ನಿಧೌ** ಅಯಸ್ಕಾಂತದ ಸಮೀಪದಲ್ಲಿ **ಅಯಃ** ಕಬ್ಬಿಣವು **ಸ್ವಯಂ** ಸ್ವಾಭಾವಿಕವಾಗಿ **ಯಥಾ** ಹೇಗೆ **ಭ್ರಾಮ್ಯತಿ** ತಿರುಗುವದೋ (ಅಯಸ್ಕಾಂತದ ಕಡೆಗೆ ಚಲಿಸುವದೋ) **ತಥಾ** ಹಾಗೆಯೇ **ಚೇತಃ** ನನ್ನ ಮನಸ್ಸು **ಯದೃಚ್ಛಯಾ** ಆ ಶ್ರೀಹರಿಯ ಇಚ್ಛೆಯಿಂದ **ಚಕ್ರಪಾಣೌ** ಶ್ರೀಹರಿಯಲ್ಲಿ **ಭಿದ್ಯತೇ** ಶ್ರೀಹರಿಯನ್ನೇ ವಿಷಯೀಕರಿಸುವ ಶಕ್ತಿಯುಳ್ಳದ್ದಾಗಿ ಮಾಡಲ್ಪಡುತ್ತದೆ.(ಕಬ್ಬಿಣದ ಚಲನೆಯಂತೆ ಶ್ರೀಹರಿಕಡೆಗೆ ಚೇತನನ ಗಮನವೂ ಸ್ವಾಭಾವಿಕವೆಂದರ್ಥ) ॥೧೪॥

**ನಾರದ ಉವಾಚ**

**ಏತಾವದ್ ಬ್ರಾಹ್ಮಣಾಯೋಕ್ತ್ವಾ ವಿರರಾಮ ಮಹಾಮತಿಃ ।**
**ತಂ ನಿರ್ಭತ್ಸ್ಯಾಥ ಕುಪಿತಃ ಸುದೀನೋ ರಾಜಸೇವಕಃ ॥೧೫॥**

**ಆನೀಯತಾಮರೇ ವೇತ್ರಮಸ್ಮಾಕಮಯಶಸ್ಕೃತಃ ।**
**ಕುಲಾಂಗಾರಸ್ಯ ದುರ್ಬುದ್ಧೇಶ್ಚತುರ್ಥೋಽಸ್ಯೋದಿತೋ ದಮಃ ॥೧೬॥**

**ದೈತೇಯಚಂದನವನೇ ಜಾತೋಽಯಂ ಕಂಟಕದ್ರುಮಃ ।**
**ತನ್ಮೂಲೋನ್ಮೂಲಪರಶೋರ್ವಿಷ್ಣೋರ್ನಾಲಾಯಿತೋಽರ್ಭಕಃ ॥೧೭॥**

**ಇತಿ ತಂ ವಿವಿಧೋಪಾಯೈರ್ಭೀಷಯಂಸ್ತರ್ಜನಾದಿಭಿಃ ।**
**ಪ್ರಹ್ಲಾದಂ ಗ್ರಾಹಯಾಮಾಸ ತ್ರಿವರ್ಗಸ್ಯೋಪಪಾದನಮ್ ॥೧೮॥**

**ಮಹಾಮತಿಃ** ಶ್ರೀಹರಿಯೇ ಸರ್ವೋತ್ತಮನೆಂದು ತಿಳಿದಿರುವ ಪ್ರಹ್ಲಾದರು **ಬ್ರಾಹ್ಮಣಾಯ** ಶಂಡಾಮರ್ಕರಿಗೆ **ಏತಾವತ್** ಇಷ್ಟು ಮಾತ್ರ **ಉಕ್ತ್ವಾ** ಹೇಳಿ **ವಿರರಾಮ** ವಿಶ್ರಾಂತರಾದರು **ಅಥ** ಅನಂತರ **ಸುದೀನಃ** ಮಾತಿನಿಂದ ಪ್ರಹ್ಲಾದನನ್ನು ಶಿಕ್ಷಿಸಲು

ಅಸಮರ್ಥರಾದ **ರಾಜಸೇವಕಃ** ಜೀವಪರಮಾತ್ಮರಿಗೆ ಭೇದವಿದೆ ಎಂದು ತಿಳಿದಿದ್ದರೂ ದೈತ್ಯನ ಅಧೀನದಲ್ಲಿ ಇರುವದರಿಂದ ಅದನ್ನು ಒಪ್ಪಲು ಸಾಧ್ಯವಿಲ್ಲದ ರೀತಿಯಲ್ಲಿ ದೈತ್ಯಸೇವಕರಾದ ಶಂಡಾಮರ್ಕರು **ಕುಪಿತಃ ಸನ್** ಕೋಪಗೊಂಡವರಾಗಿ **ತಂ** ಆ ಬಾಲಕನನ್ನು **ನಿರ್ಭರ್ತ್ಸ್ಯ** ಹೆದರಿಸಿ (ಗದರಿಸಿ) **ಅರೇ** ಎಲವೋ **ವೇತ್ರಂ** ಬೆತ್ತವನ್ನು **ಆನೀಯತಾಂ** ತೆಗೆದುಕೊಂಡು ಬಾ **ಅಸ್ಮಾಕಂ** ಪಾಠ ಕಲಿಸುವ ನಮಗೆ **ಅಯಶಸ್ಕೃತಃ** ಅಪಕೀರ್ತಿಯನ್ನು ತರುವ **ಕುಲಾಂಗಾರಸ್ಯ** ದೈತ್ಯವಂಶನಾಶಕ್ಕೆ ಬೆಂಕಿಯಂತೆ ಕಾರಣನಾಗಿರುವ ಆದ್ದರಿಂದಲೇ **ದುರ್ಬುದ್ಧೇಃ** ಸ್ವತಂತ್ರನಾದ ಶ್ರೀಹರಿಯು ಸರ್ವೋತ್ತಮನೆಂಬ ದುಷ್ಟಜ್ಞಾನವುಳ್ಳ **ಅಸ್ಯ** ಈ ರಾಜಪುತ್ರನಿಗೆ **ಚತುರ್ಥಃ** ನಾಲ್ಕನೇಯದಾದ **ದಮಃ** ದಂಡವು **ಉದಿತಃ** ಉಚಿತವಾಗಿರುವದು.

'ಸುದೀನಃ' 'ರಾಜಸೇವಕಃ' ಎಂಬ ವಿಶೇಷಣಗಳಿಂದ ಹಣಕ್ಕಾಗಿ ದೈತ್ಯರಾಜನ ಸೇವೆಯಲ್ಲಿ ಇರುವದರಿಂದ ತನಗೆ ಸರಿಯೆಂದು ತಿಳಿದಿದ್ದರೂ ಉಪದೇಶಿಸುವಂತೆ ಇಲ್ಲವೆಂದೂ, ರಾಜಸೇವಕನಾದ್ದರಿಂದ ಭೇದಜ್ಞಾನವನ್ನು ಸರಿಯೆಂದು ಒಪ್ಪುವಂತೆ ಇಲ್ಲವೆಂದೂ ಇವೆರಡೂ ವಿತ್ತಸಾಧ್ಯವೆಂದೂ ತಿಳಿಸಿರುವರು.

**ದೈತೇಯಚಂದನವನೇ** ದೈತ್ಯರೆಂಬ ಶ್ರೀಗಂಧದ ಅರಣ್ಯದಲ್ಲಿ **ಕಂಟಕದ್ರುಮಃ** ಮುಳ್ಳಿನ ಗಿಡವಾದ ಜಾಲಿಯ ಮರದಂತೆ **ಜಾತಃ** ಹುಟ್ಟಿರುವ **ಅಯಂ ಅರ್ಭಕಃ** ಈ ಹುಡುಗನು **ತನ್ಮೂಲಂ** ಆ ಶ್ರೀಗಂಧದ ಮರದ ಬೇರುಗಳನ್ನು **ಉನ್ಮೂಲ್ಯ** ಕಿತ್ತು ಹಾಕುವಲ್ಲಿ **ಪರಶೋಃ** ಕೊಡಲಿಯಂತಿರುವ **ವಿಷ್ಣೋಃ** ದೈತ್ಯಶತ್ರುವಾದ ವಿಷ್ಣುವಿಗೋ **ನಾಲಾಯಿತಃ** ಹಿಡಿಯ ಕಟ್ಟಿಗೆಯಂತೆ ಆಗಿರುವನು. ದೈತ್ಯವಂಶದಲ್ಲಿಯೇ ಹುಟ್ಟಿ ಆ ವಂಶವನ್ನೇ ನಾಶಮಾಡುವ ವಿಷ್ಣುವಿಗೆ ಸಹಾಯಕನಾಗಿ ವಂಶನಾಶಕ್ಕೆ ಕಾರಣನಾಗಿರುವನೆಂದರ್ಥ. ಇವನ ನೆಪದಲ್ಲಿ ಶ್ರೀಹರಿಯು ದೈತ್ಯವಂಶವನ್ನೇ ನಾಶಮಾಡುವನೆಂದರ್ಥ.

**ಇತಿ** ಹೀಗೆಂದು **ತರ್ಜನಾದಿಭಿಃ** ಬೆದರಿಸುವದೇ ಮೊದಲಾದ **ವಿವಿಧೋಪಾಯೈಃ** ಅನೇಕ ಉಪಾಯಗಳಿಂದ **ಭೀಷಯನ್** ಭಯಪಡಿಸುತ್ತ **ತಂ ಪ್ರಹ್ಲಾದಂ** ಮಹಾಭಾಗವತರಾದ ಪ್ರಹ್ಲಾದರಾಜರಿಗೆ **ತ್ರಿವರ್ಗಸ್ಯ** ಧರ್ಮಾರ್ಥಕಾಮಗಳನ್ನು **ಉಪಪಾದನಂ** ಪ್ರತಿಪಾದಿಸುವ ಶಾಸ್ತ್ರವನ್ನು **ಗ್ರಾಹಯಾಮಾಸ** ಕಲಿಸಿದರು. ||೧೫-೧೮||

**ತತ ಏನಂ ಗುರುರ್ಜ್ಞಾತ್ವಾ ಜ್ಞಾತಜ್ಞೇಯಚತುಷ್ಟಯಮ್ ।**
**ದೈತ್ಯೇಂದ್ರಂ ದರ್ಶಯಾಮಾಸ ಮಾತೃಮೃಷ್ಟಮಲಂಕೃತಮ್ ||೧೯||**

**ತತಃ** ಅನಂತರ **ಗುರುಃ** ಉಪದೇಶಕರಾದ ಶಂಡಾಮರ್ಕರು **ಏನಂ** ಈ ಪ್ರಹ್ಲಾದ

ರಾಜರನ್ನು **ಜ್ಞಾತಜ್ಞೇಯಚತುಷ್ಟಯಂ** ತಿಳಿಯಬೇಕಾದ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕನ್ನೂ ತಿಳಿದವರನ್ನಾಗಿ ಅಥವಾ ತಿಳಿಯಬೇಕಾದ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಉಪಾಯಗಳನ್ನೂ ತಿಳಿದವರನ್ನಾಗಿ **ಜ್ಞಾತ್ವಾ** ತಿಳಿದು **ಮಾತೃಮೃಷ್ಟಂ** ತಾಯಿ ಮಾಡಿಸಿದ ಸ್ನಾನದಿಂದ ದೇಹನೈರ್ಮಲ್ಯ ಹೊಂದಿದ **ಅಲಂಕೃತಂ** ಆಭರಣಗಳಿಂದ ಅಲಂಕರಿಸಲ್ಪಟ್ಟ ಪ್ರಹ್ಲಾದರಾಜರನ್ನು **ದೈತ್ಯೇಂದ್ರಂ** ಹಿರಣ್ಯಕಶಿಪುವಿಗೆ **ದರ್ಶಯಾಮಾಸ** ತೋರಿಸಿದರು.

ವಿಶೇಷ :- ತ್ರಿವರ್ಗಶಾಸ್ತ್ರವನ್ನೇ ಹೇಳಿದ್ದರೂ 'ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ' ಎಂದು ಆಪಾತಪ್ರತೀತಾರ್ಥವನ್ನು ಅನುಸರಿಸಿ ಮೋಕ್ಷವನ್ನು ಹೇಳಿದ್ದಾರೆಂದು ಇಟ್ಟುಕೊಳ್ಳಬೇಕು. ಅಂದರೆ ಪೂರ್ವಾಪರವಿರೋಧ ಬರುವದಿಲ್ಲ. ಎರಡನೇ ಅರ್ಥದಲ್ಲಿ ವಿರೋಧಕ್ಕೆ ಅವಕಾಶವಿಲ್ಲ. ||೧೯||

**ಪಾದಯೋಃ ಪತಿತಂ ಬಾಲಂ ಪ್ರತಿನಂದ್ಯಾಽಽಶಿಷಾಽಸುರಃ ।**
**ಪರಿಷಜ್ಯ ಚಿರಂ ದೋರ್ಭ್ಯಾಂ ಪರಮಾಮಾಪ ನಿರ್ವೃತಿಮ್ ||೨೦||**

**ಅಸುರಃ** ಹಿರಣ್ಯಕಶಿಪುವು **ಪಾದಯೋಃ ಪತಿತಂ** ಕಾಲಿಗೆ ಬಿದ್ದ (ನಮಸ್ಕರಿಸಿದ) **ಬಾಲಂ** ಪ್ರಹ್ಲಾದನನ್ನು **ಆಶಿಷಾ** ಆಶೀರ್ವಾದದಿಂದ **ಪ್ರತಿನಂದ್ಯ** ಸಂತೋಷಪಡಿಸಿ **ದೋರ್ಭ್ಯಾಂ** ತೋಳುಗಳಿಂದ **ಚಿರಂ** ಬಹಳ ಹೊತ್ತು **ಪರಿಷ್ವಜ್ಯ** ಆಲಿಂಗಿಸಿಕೊಂಡು **ಪರಮಾಂ** ಅತಿಶಯವಾದ **ನಿರ್ವೃತಿಂ** ಆನಂದವನ್ನು **ಆಪ** ಹೊಂದಿದನು. ||೨೦||

**ಆರೋಪ್ಯಾಂಕಮವಘ್ರಾಯ ಮೂರ್ಧನ್ಯಶ್ರುಕಲಾಂಬುಭಿಃ ।**
**ಆಸಿಂಚನ್ ವಿಕಸದ್ವಕ್ತ್ರಮಿದಮಾಹ ಯುಧಿಷ್ಠಿರ ||೨೧||**

**ಯುಧಿಷ್ಠಿರ** ಧರ್ಮರಾಜನೇ **ಅಂಕಂ ಆರೋಪ್ಯ** ಪ್ರಹ್ಲಾದನನ್ನು ತೊಡೆಯ ಮೇಲೆ ಕೂಡಿಸಿಕೊಂಡು **ಮೂರ್ಧನಿ ಅವಘ್ರಾಯ** ತಲೆಯನ್ನು ಆಘ್ರಾಣಿಸಿ (ಮೂಸಿ ನೋಡಿ) **ಅಶ್ರುಕಲಾಂಬುಭಿಃ** ಆನಂದಾಶ್ರುಗಳ ಹನಿಗಳಿಂದ **ಆಸಿಂಚನ್** ಸಿಂಪಡಿಸುತ್ತ **ವಿಕಸದ್ವಕ್ತ್ರಂ**(ಯಥಾ ತಥಾ)ಸಂತೋಷದಿಂದ ಮುಖವರಳಿಸಿ(ಅರಳಿದ ಮುಖವುಳ್ಳವನು ಹೇಗೋ ಹಾಗೆ) **ಇದಂ** ಮುಂದೆ ಹೇಳುವ ಮಾತನ್ನು **ಆಹ** ಹೇಳಿದನು. ||೨೧||

**ಪ್ರಹ್ಲಾದಾನೂ(ದ್ಯ)ಚ್ಯತಾಂ ತಾತ ಸ್ವಧೀತಂ ಕಿಂಚಿದುತ್ತಮಮ್ ।**
**ಕಾಲೇನೈತಾವತಾ ಯುಷ್ಮನ್ ಯದಶಿಕ್ಷದ್ಗುರೋರ್ಭವಾನ್ ||೨೨||**

**ತಾತ ಪ್ರಹ್ಲಾದ** ಮಗೂ ಪ್ರಹ್ಲಾದನೇ **ಆಯುಷ್ಮನ್** ಚಿರಾಯುವೇ **ಭವಾನ್** ನೀನು **ಗುರೋಃ** ಗುರುಗಳಿಂದ **ಏತಾವತಾ ಕಾಲೇನ** ಇಷ್ಟು ಕಾಲವೂ **ಯತ್** ಏನೇನು ಪಾಠಗಳನ್ನು **ಅಶಿಕ್ಷತ್** ಕಲಿತಿರುವೆಯೋ ಅದರಲ್ಲಿ **ಸ್ವಧೀತಂ** ಚೆನ್ನಾಗಿ ಅಭ್ಯಾಸ

ಮಾಡಿದ **ಉತ್ತಮಂ** ನಿನಗೆ ಉತ್ತಮವೆನಿಸಿದ **ಕಿಂಚಿತ್** ಸ್ವಲ್ಪವಿಷಯವನ್ನು **ಅನೂಚ್ಯತಾಂ** ಗುರುಗಳು ಹೇಳಿದಂತೆ ಹೇಳು. ।।೨೨।।

ಪ್ರಹ್ಲಾದರಾಜರು ಚೆನ್ನಾಗಿ ಕಲಿತದ್ದನ್ನು ಅನುವಾದ ಮಾಡುತ್ತಾರೆ-

**ಪ್ರಹ್ಲಾದ ಉವಾಚ**

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ।।೨೩।।**

**ಇತಿ ಪುಂಸಾऽರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ।**
**ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇऽಧೀತಮುತ್ತಮಮ್ ।।೨೪।।**

**ವಿಷ್ಣೋಃ ಶ್ರವಣಂ** ಶ್ರೀಹರಿಯ ಮಾಹಾತ್ಮ್ಯಶ್ರವಣವು **ಕೀರ್ತನಂ** ಅವನ ನಾಮುಗಳನ್ನು ಬಾಯಿಯಿಂದ ಹೇಳುವದು **ಸ್ಮರಣಂ** ಮನಸ್ಸಿನಿಂದ ಅವನ ಮಾಹಾತ್ಮ್ಯವನ್ನು ನೆನೆಯುವದು **ಪಾದಸೇವನಂ** ಕೈಗಳಿಂದ ಭಗವದ್ಭಕ್ತರ ಪಾದಗಳನ್ನು ಒತ್ತುವದೇ ಮೊದಲಾದ ಸೇವೆ ಮಾಡುವದು **ಅರ್ಚನಂ** ತುಲಸೀ ಮೊದಲಾದವುಗಳಿಂದ ಪ್ರತಿಮೆಗಳಲ್ಲಿ ಭಗವಂತನಿದ್ದಾನೆಂದು ತಿಳಿದು ಪೂಜಿಸುವದು **ವಂದನಂ** ಶ್ರೀಹರಿಯ ಚರಾಚರಪ್ರತಿಮೆಗಳಿಗೆ ನಮಸ್ಕರಿಸುವದು, ಸ್ತೋತ್ರಮಾಡುವದು **ದಾಸ್ಯಂ** ನಾನು ಶ್ರೀಹರಿಯ ದಾಸನು ಎಂದು ತಿಳಿಯುವದು **ಸಖ್ಯಂ** ಶ್ರೀಹರಿಯಲ್ಲಿ ಅತ್ಯಂತ ಸ್ನೇಹ ಮಾಡುವದು **ಆತ್ಮನಿವೇದನಂ** ನಿಯಾಮಕನಾಗಿ ಶ್ರೀಹರಿಯು ನನ್ನಲ್ಲಿ ಇರುವನೆಂದು ಚೆನ್ನಾಗಿ ತಿಳಿಯುವದು ಮುಕ್ತರಲ್ಲಿಯೂ ಶ್ರೀಹರಿಯು ನಿಯಾಮಕನಾಗಿರುವನೆಂದು ಚೆನ್ನಾಗಿ ಅರಿಯುವದು. ಇದೇ ಆತ್ಮನಿವೇದನೆ. **ಇತಿ** ಮೇಲೆ ಹೇಳಿದಂತೆ **ನವಲಕ್ಷಣಾ** ಶ್ರವಣವೇ ಮೊದಲಾದ ಒಂಭತ್ತು ಚಿನ್ಹೆಗಳುಳ್ಳ(ಜ್ಞಾಪಕ) **ಭಕ್ತಿಃ** ಭಕ್ತಿಯು **ವಿಷ್ಣೌ** ಶ್ರೀಹರಿಯಲ್ಲಿ **ಅರ್ಪಿತಾ** ಯಾವದು ಶಾಸ್ತ್ರದಲ್ಲಿ ಪ್ರತಿಪಾದಿತವಾಗಿದೆಯೋ **ಸಾ** ಆ ಭಕ್ತಿಯು **ಭಗವತಿ** ಉತ್ತಮ ಕೀರ್ತಿಯುಳ್ಳ ಶ್ರೀಹರಿಯಲ್ಲಿ **ಅದ್ಧಾ** ಯಾವ ವ್ಯಾಜವೂ ಇಲ್ಲದೆ **ಕ್ರಿಯತೇ ಚೇತ್** ಮಾಡಲ್ಪಟ್ಟಿದ್ದೆ ಆದರೆ **ತತ್ ಅಧೀತಂ** ಆ ಅಭ್ಯಾಸವು **ಉತ್ತಮಂ** ಮುಕ್ತಿಗೆ ಕಾರಣವಾಗಿ ಶ್ರೇಷ್ಠವೆಂದು **ಮನ್ಯೇ** ತಿಳಿಯುತ್ತೇನೆ.

ವಿಶೇಷ ಃ- 'ವಿಷ್ಣೌ' ಎಂಬ ಸಪ್ತಮ್ಯರ್ಥದ ವಿವರಣೆಯೇ 'ಅರ್ಪಿತಾ' ಎಂಬುದು ಅದರ ವಿವರಣೆಯೇ 'ಕ್ರಿಯತೇ' ಎಂಬುದು. ಅದರ ವಿವರಣೆ ವಿಷಯೀಕ್ರಿಯತೇ ಎಂಬುದು. ಅಭ್ಯಾಸಮಾಡಿದ ಯಾವ ಶಾಸ್ತ್ರದಿಂದ ನವಪ್ರಕಾರವಾದ ಭಕ್ತಿಯು ವಿಷ್ಣುವಿಷಯಕವಾಗುವದೋ ಆ ಅಧೀತಶಾಸ್ತ್ರವು ಸಾಧು ಎಂದರ್ಥ. ।।೨೩,೨೪।।

'ಆತ್ಮನಿವೇದನಂ' ಎಂಬುದಕ್ಕೆ ದೇಹಸಮರ್ಪಣವೆಂದು ವ್ಯಾಖ್ಯಾನ ಅಪ್ರಾಮಾಣಿಕವೆಂಬ ಅಭಿಪ್ರಾಯದಿಂದ ಆಚಾರ್ಯರು ವ್ಯಾಖ್ಯಾನಿಸುವರು-

**... ತಾತ್ಪರ್ಯ ...**

**ಆತ್ಮಸ್ಥತ್ವೇನ ವೇದನಂ ಆತ್ಮನಿವೇದನಂ ।**

ಈ ವಿಷಯದಲ್ಲಿ ಪ್ರಮಾಣ.

**ಮುಕ್ತಸ್ಯಾಪಿ ಮಮಾಂತಸ್ಥೋ ನಿಯಂತ್ರೈವ ಹರಿಸ್ಸದಾ ।**
**ಇತಿ ಜ್ಞಾನಂ ಸಮುದ್ದಿಷ್ಟಂ ಸಮ್ಯಗಾತ್ಮನಿವೇದನಮ್ ॥ ಇತಿ ಚ ॥**

ಇದರಿಂದ ಆತ್ಮನಿ ಎಂಬುದು ಸಪ್ತಮ್ಯಂತಪದ ಆಧಾರವಾಚಿ ಎಂದು ಹೇಳಿದಂತಾಯಿತು. ತನ್ನಲ್ಲಿ ಸರ್ವದಾ ನಿಯಾಮಕನಾಗಿ ಶ್ರೀಹರಿಯು ಇರುವನೆಂಬ ಜ್ಞಾನವು ಆತ್ಮನಿವೇದನವು. ನಾನು ಮುಕ್ತಿಯನ್ನು ಹೊಂದಿದ ಮೇಲೆಯೂ ನನ್ನ ಒಳಗಿದ್ದು ಶ್ರೀಹರಿಯೇ ನಿಯಾಮಕನು ಎಂಬ ಜ್ಞಾನವು ಚೆನ್ನಾಗಿ ಆತ್ಮನಿವೇದನವೆನಿಸುತ್ತದೆ.

**ನಾರದ ಉವಾಚ**

**ನಿಶಮ್ಯೈತತ್ಸುತವಚೋ ಹಿರಣ್ಯಕಶಿಪುಸ್ತದಾ ।**
**ಗುರುಪುತ್ರಮುವಾಚೇದಂ ರುಷಾ ಪ್ರಸ್ಫುರಿತಾಧರಃ ॥೨೫॥**

**ತದಾ** ಆಗ **ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಏತತ್** ಶ್ರೀಹರಿಯಲ್ಲಿ ನವವಿಧಭಕ್ತಿಮಾಡಬೇಕೆಂದು ಹೇಳುವ ಶಾಸ್ತ್ರವೇ ಉತ್ತಮವೆಂದು ಹೇಳಿದ **ಸುತವಚಃ** ಮಗನ ಮಾತನ್ನು **ನಿಶಮ್ಯ** ಕೇಳಿ **ರುಷಾ** ಕೋಪದಿಂದ **ಪ್ರಸ್ಫುರಿತಾಧರಃ** ಚಲಿಸುವ ಕೆಳದುಟಿಯುಳ್ಳವನಾಗಿ **ಇದಂ** ಮುಂದೆ ಹೇಳುವ ಮಾತನ್ನು **ಗುರುಪುತ್ರಂ** ಶುಕ್ರಾಚಾರ್ಯರ ಮಕ್ಕಳಾದ ಶಂಡಾಮರ್ಕರಿಗೆ **ಉವಾಚ** ಹೇಳಿದನು. ॥೨೫॥

**ಹಿರಣ್ಯಕಶಿಪುರುವಾಚ**

**ಬ್ರಹ್ಮಬಂಧೋ ಕಿಮೇತತ್ತೇ ವಿಪಕ್ಷಂ ಶ್ರಯತಾಽಸತಾ ।**
**ಅಸಾರಂ ಗ್ರಾಹಿತೋ ಬಾಲೋ ಮಾಮನಾದೃತ್ಯ ದುರ್ಮತೇ ॥೨೬॥**

**ದುರ್ಮತೇ** ದುಷ್ಟಬುದ್ಧಿಯಾದ **ಬ್ರಹ್ಮಬಂಧೋ** ನೀಚ ಬ್ರಾಹ್ಮಣನೇ **ಮಾಂ** ನನ್ನನ್ನು **ಅನಾದೃತ್ಯ** ಆದರಿಸದೇ **ವಿಪಕ್ಷಂ** ನನಗೆ ಶತ್ರುವಾದ ವಿಷ್ಣುವಿನ ಪಕ್ಷವನ್ನು **ಶ್ರಯತಾ** ಆಶ್ರಯಿಸಿದ ಆದ್ದರಿಂದಲೇ **ಅಸತಾ** ದುಷ್ಟನಾದ **ತೇ** ನಿನ್ನಿಂದ **ಬಾಲಃ** ನನ್ನ ಮಗನು **ಅಸಾರಂ** ಕೆಲಸಕ್ಕೆ ಬಾರದ್ದನ್ನು **ಗ್ರಾಹಿತಃ** ಕಲಿಸಲ್ಪಟ್ಟಿರುವನು **ಏತತ್** ಇದು **ಕಿಂ** ಏನು ? ಈ ದುರ್ಬುದ್ಧಿಯು ನಿನಗೇಕೆ ಬಂದಿತು ಎಂದು ಅಭಿಪ್ರಾಯ. ॥೨೬॥

**ಸಂತಿ ಹ್ಯಸಾಧವೋ ಲೋಕೇ ದುರ್ಮೈತ್ರಾಶ್ಛದ್ಮವೇಕ್ಷಿಣಃ ।**
**ತೇಷಾಮುದೇತ್ಯಘಂ ಕಾಲೇ ರೋಗಃ ಪಾತಕಿನಾಮಿವ ॥೨೭॥**

**ಲೋಕೇ** ಜಗತ್ತಿನಲ್ಲಿ **ದುರ್ಮೈತ್ರಾಃ** ದುಷ್ಟಸ್ನೇಹವುಳ್ಳ **ಛದ್ಮವೇಷಿಣಃ** ಯೋಗ್ಯರಂತೆ ವೇಷ ಹಾಕಿದ **ಅಸಾಧವಃ** ದುಷ್ಟರು **ಸಂತಿ** ಇರುವರು **ಪಾತಕಿನಾಂ** ಪಾಪ ಮಾಡಿದವರಿಗೆ **ಕಾಲೇ** ಪಾಪವು ಫಲಿಸುವ ಕಾಲ ಬಂದಾಗ **ರೋಗ ಇವ** ಶರೀರದಲ್ಲಿ ರೋಗಗಳು ಹುಟ್ಟುವಂತೆ **ತೇಷಾಂ** ಆ ಅಸಾಧುಗಳಿಗೆ **ಕಾಲೇ** ಅವರ ದುಷ್ಟತನ ವ್ಯಕ್ತವಾಗುವ ಕಾಲ ಬಂದಾಗ **ಅಘಂ** ತನ್ನ ಸ್ವಾಮಿಗೂ ದ್ರೋಹ ಮಾಡಬೇಕೆಂಬ ದುರ್ಬುದ್ಧಿಯು, ಮನಸ್ಸಿನಲ್ಲಿದ್ದ ಗೂಢದ್ವೇಷವು **ಉದೇತಿ** ಹುಟ್ಟುವದು, ಪ್ರಕಾಶಕ್ಕೆ ಬರುವದು. **ಹಿ** ಗುರುವಾದರೂ ಅಂಥವನನ್ನು ಶಿಕ್ಷಿಸಬೇಕೆಂದು ಶಾಸ್ತ್ರಪ್ರಸಿದ್ಧಿ ಇರುವದು.

**ಗುರುರಪ್ಯವಲಿಪ್ತಸ್ಯ ಕಾರ್ಯಾಕಾರ್ಯಮಜಾನತಃ ।**
**ಉತ್ಪಥಂ ಪ್ರತಿಪನ್ನಸ್ಯ ಕಾರ್ಯಂ ಭವತಿ ಶಾಸನಮ್ ॥**

ಎಂದು ಶಾಸ್ತ್ರವಿದೆ ಎಂದರ್ಥ.ಮಿತ್ರನಂತೆ ಕಂಡರೂ ನಮಗೆ ದ್ರೋಹ ಮಾಡುವದು ಅಸಂಭಾವಿತವಲ್ಲವೆಂದು ಭಾವ. ॥೨೭॥

**ಗುರುಪುತ್ರ ಉವಾಚ**

**ನ ಮತ್ಪ್ರಣೀತಂ ನ ಪರಪ್ರಣೀತಂ**
**ಸುತೋ ವದತ್ಯೇಷ ತವೇಂದ್ರಶತ್ರೋ ।**
**ನೈಸರ್ಗಿಕೀಯಂ ಮತಿರಸ್ಯ ರಾಜನ್**
**ನಿಯಚ್ಛ ಮನ್ಯುಂ ಕ್ವ ತದಾತ್ಮಮಾನಃ ॥೨೮॥**

ಲೋಕದಲ್ಲಿ ಅಸಾಧುಗಳಿರಬಹುದು ಆದರೆ ನಾನು ಅಂಥವನಲ್ಲ. ಆದ್ದರಿಂದ ನಿನ್ನ ಮಗನು ಕಲಿತಿರುವದು **ನ ಮತ್ಪ್ರಣೀತಂ** ನಾನು ಕಲಿಸಿದ್ದಲ್ಲ **ನ ಪರಪ್ರಣೀತಂ** ಬೇರೆಯವರು ಕಲಿಸಿದ್ದೂ ಅಲ್ಲ **ಹೇ ಇಂದ್ರಶತ್ರೋ** ಇಂದ್ರನನ್ನು ಶಾಸನಮಾಡುವ ಸಾಮರ್ಥ್ಯವುಳ್ಳ ದೈತ್ಯರಾಜನೇ **ಏಷಃ** ಈ ನಿನ್ನ ಮಗನು (ಸುತಃ) **ನ ವದತಿ** ಹೇಳುತ್ತಿಲ್ಲ **ರಾಜನ್** ರಾಜನೇ **ಅಸ್ಯ** ಈ ನಿನ್ನ ಮಗನಿಗೆ **ಇಯಂ** ವಿಷ್ಣುವಿಷಯಕವಾದ **ಮತಿಃ** ಬುದ್ಧಿಯು **ನೈಸರ್ಗಿಕೀ** ಸ್ವಾಭಾವಿಕವಾದುದು ಆದ್ದರಿಂದ **ಮನ್ಯುಂ** ನನ್ನ ಮೇಲೆ ಕೋಪವನ್ನು **ನಿಯಚ್ಛ** ನಿಲ್ಲಿಸು **ತದಾ** ಪರಿಸ್ಥಿತಿಯು ಹೀಗಿರುವಾಗ **ಮಮ** ನನಗೆ **ಆತ್ಮಮಾನಃ ಕ್ವ** ನಾನು ಈ ಬುದ್ಧಿಯನ್ನು ಇವನಿಗೆ ಹೇಳಿಕೊಟ್ಟೇನೆಂಬ ಅಭಿಮಾನವು ನಿನ್ನನ್ನು ಅನಾದರ ಮಾಡಿ ಅಹಂಕಾರದಿಂದ ನಡೆದಿರುವೆನೆಂಬುದು ಎಲ್ಲಿಯದು, ಹೇಗೆ? ಆದ್ದರಿಂದ ನನ್ನ ಮೇಲೆ ಕೋಪವನ್ನು ತಡೆ ಹಿಡಿ ಎಂದರ್ಥ.

'ಆತ್ಮಮಾನಃ' ಎಂಬಲ್ಲಿ ಅಪೇಕ್ಷಿತವಾದದ್ದನ್ನು ಹೇಳಿ ಪೂರ್ತಿಮಾಡುವರು-

**... ತಾತ್ಪರ್ಯ ...**

**ಕ್ವ ತದಾಽಽತ್ಮಮಾನೋ ಮಮ?**

ಪ್ರಹ್ಲಾದನಿಗೆ ಭಗವಂತನ ಜ್ಞಾನ ಸ್ವಾಭಾವಿಕವಾಗಿರುವಾಗ ನಿನ್ನನ್ನು ತಿರಸ್ಕರಿಸುವ ಅಹಂಕಾರ ನನಗೆಲ್ಲಿಯದು. ಅಥವಾ **ಮಮ** ನನಗೆ **ಆತ್ಮಮಾನಃ** ಬ್ರಹ್ಮಜ್ಞಾನವು **ಕ್ವ** ಹೇಗೆ ಕೂಡುವದು. ಬ್ರಹ್ಮಜ್ಞಾನಿಗಳಿಗೆ ಛದ್ಮಾಚರಣಾದಿದೋಷಗಳು ಅಸಂಭಾವಿತವಾದವು. ಆದ್ದರಿಂದ ನನ್ನ ಮೇಲೆ ದೋಷಾರೋಪಣೆಯನ್ನು ಮಾಡಬೇಡ ಎಂದರ್ಥ. ।।೨೮।।

ಮಗನ ಮೇಲೆ ಕೋಪದಿಂದ ಹೇಳುತ್ತಾನೆ-

**ನಾರದ ಉವಾಚ**

**ಗುರುಣೈವಂ ಪ್ರತಿಪ್ರೋಕ್ತೋ ಭೂಯ ಆಹಾಸುರಃ ಸುತಮ್ ।**
**ನ ಚೇದ್ಗುರುಮುಖೀಯಂ ತೇ ಕುತೋಽಭದ್ರಾ ಸತೀ ಮತಿಃ ।।೨೯।।**

**ಏವಂ** ಮೇಲೆ ಹೇಳಿದಂತೆ **ಗುರುಣಾ** ಬಾಲಕನ ಗುರುಗಳಾದ ಶಂಡಾಮರ್ಕರಿಂದ **ಪ್ರತಿಪ್ರೋಕ್ತಃ** ಉತ್ತರಕೊಡಲ್ಪಟ್ಟ **ಅಸುರಃ** ಹಿರಣ್ಯಕಶಿಪುವು **ಭೂಯಃ** ಮತ್ತೆ **ಸುತಂ** ಪ್ರಹ್ಲಾದನನ್ನು ಕುರಿತು **ಆಹ** ಹೇಳಿದನು **ಹೇ ಭದ್ರ** ಮಂಗಳಕರನೇ **ತೇ** ನಿನಗೆ **ಇಯಂ** ಈಗ ನೀನು ಮಾಡಿದ **ಅಸತೀ** ವಿಷ್ಣುವಿಷಯಕವಾದ್ದರಿಂದ ನನಗೆ ಅಪ್ರಿಯವಾದ **ಮತಿಃ** ಬುದ್ಧಿಯು **ಗುರುಮುಖೀ ನ ಚೇತ್** ಗುರುಗಳ ಉಪದೇಶದಿಂದ ಬಂದದ್ದಲ್ಲವಾದರೆ **ಕುತಃ** ಮತ್ತೆ ಯಾರಿಂದ ಬಂದಿತು ಎಂದು ಕೇಳಿದನು. ।।೨೯।।

ನನ್ನ ಜ್ಞಾನವು ಸರಿಯಾದದ್ದೇ ನಿನ್ನ ಬುದ್ಧಿಯೇ ದುಷ್ಟವಾದದ್ದು ಎಂದು ತಂದೆಯನ್ನು ಆಕ್ಷೇಪಿಸುತ್ತ ಉತ್ತರ ಕೊಡುತ್ತಾರೆ-

**ಪ್ರಹ್ಲಾದ ಉವಾಚ**

**ಮತಿರ್ನಕೃಷ್ಣೇ ಪರತಃ ಸತೋಽಪಿ ವಾ**
**ಮಿಥೋಽಭಿಪದ್ಯೇತ ಗೃಹವ್ರತಾನಾಮ್ ।**
**ಅದಾಂತಗೋಭಿರ್ವಿಶತಾಂ ತಮಿಸ್ರಂ**
**ಪುನಃ ಪುನಶ್ಚರ್ವಿತಚರ್ವಣಾನಾಮ್ ।।೩೦।।**

**ಅದಾಂತಗೋಭಿಃ** ಇಂದ್ರಿಯ ನಿಗ್ರಹವಿಲ್ಲದವರ ಮಾತಿನಿಂದ **ತಾಮಿಸ್ರಂ** ನರಕ ಸುಖದಂತಿರುವ ವಿಷಯಸುಖಾನುಭವರೂಪಸಂಸಾರವನ್ನು **ವಿಶತಾಂ** ಅನುಭವಿಸುತ್ತಿರುವ ಅದರಲ್ಲಿಯೂ **ಪುನಃ ಪುನಃ** ಮತ್ತೆ ಮತ್ತೆ **ಚರ್ವಿತಚರ್ವಣಾನಾಂ** ಅನುಭವಿಸಿದ ವಿಷಯಗಳನ್ನೇ ಅನುಭವಿಸುತ್ತಿರುವ **ಗೃಹವ್ರತಾನಾಂ** ವನವಾಸಾದಿಗಳಿಲ್ಲದೇ(ವಾನಪ್ರಸ್ಥ)ಮನೆಯಲ್ಲಿಯೇ ಇರುವದೆಂಬ ವ್ರತವುಳ್ಳ ಜೀವರಿಗೆ (ಸಜ್ಜನ ಸಹವಾಸ ಮಾಡದೆ ದುಷ್ಟ ಹೆಂಡತಿಯ ಮಕ್ಕಳ ಮೊದಲಾದವರಲ್ಲಿಯೇ ಅಭಿಮಾನ ಮಾಡುವವರಿಗೆ) **ಪರತಃ** ಗುರುಗಳ ಉಪದೇಶದಿಂದಾಗಲಿ **ಸ್ವತಃ** ಸ್ವಪ್ರಯತ್ನದಿಂದಾಗಲಿ ಅಥವಾ **ಮಿಥಃ ಅಪಿ** ಇವೆರಡರಿಂದಲೂ ಆಗಲಿ **ಕೃಷ್ಣೇ** ಶ್ರೀಹರಿಯಲ್ಲಿ **ಮತಿಃ** ಜ್ಞಾನವು **ನ ವಿಪದ್ಯೇತ** ಹುಟ್ಟುವದಿಲ್ಲ **ಅದಾಂತಗೋಭಿಃ** ಬ್ರಹ್ಮಸೂತ್ರಾದಿ ನ್ಯಾಯಗಳಿಂದ, ವಿಚಾರ ಮಾಡದಿರುವ ವೇದವಾಕ್ಯಗಳಿಂದ **ತಮಿಸ್ರಂ** ಅತತ್ವಾರ್ಥವಿಷಯಕ ಅಜ್ಞಾನವನ್ನು, ಅನ್ಯಥಾಜ್ಞಾನವನ್ನು ಹೊಂದುತ್ತಿರುವೆ.

ಹೇಳಿದ್ದನ್ನೇ ಹೇಳುತ್ತಿರುವ **ಗೃಹವ್ರತಾನಾಂ** ಕಾಮ್ಯಕರ್ಮಗಳಲ್ಲಿಯೇ ಪ್ರವೃತ್ತರಾಗುವವರಿಗೆ **ಪರತಃ** ವೇದಗಳಿಂದ **ಸ್ವತಃ** ತಮ್ಮ ಪ್ರಯತ್ನದಿಂದಾಗಲಿ ವೇದಮುಖ್ಯಪ್ರತಿಪಾದ್ಯ ಶ್ರೀಹರಿಯೆಂಬ ಜ್ಞಾನ ಬರುವದಿಲ್ಲ ಹೀಗೂ ಅರ್ಥ.

ಇದನ್ನೇ ಸ್ಪಷ್ಟಪಡಿಸುವರು-

**ನ ತೇ ವಿದುಃ ಸ್ವಾರ್ಥಗತಿಂ ಹಿ ವಿಷ್ಣುಂ**
**ದುರಾಶಯಾ ಯೇ ಬಹಿರರ್ಥಭಾವಾಃ ।**
**ಅಂಧಾ ಯಥಾಽಂಧೈರುಪನೀಯಮಾನಾ**
**ವಾಚೀಶತಂತ್ರ್ಯಾಮುರುದಾಮ್ನಿ ಬದ್ಧಾಃ** ॥೩೧॥

**ಯೇ** ಯಾರು **ದುರಾಶಯಾಃ** ಸ್ವಾಭಾವಿಕವಾಗಿ ದುಷ್ಟಮನಸ್ಸುಳ್ಳವರೋ (ನೋಡುವದಕ್ಕೆ ಸುಂದರವಾಗಿರುವ ಪರಿಣಾಮದಲ್ಲಿ ಕೆಟ್ಟಮನಸ್ಸುಳ್ಳವರೋ) **ಬಹಿರರ್ಥಭಾವಾಃ** ಆಪಾತವಾಗಿ ತೋರುವ ಹೊರ ಅರ್ಥಗಳಲ್ಲಿಯೇ ತಾತ್ಪರ್ಯವುಳ್ಳವರೋ (ಶ್ರುತಿಯ ತಾತ್ಪರ್ಯ ತಿಳಿಯದಿರುವವರೆಂದರ್ಥ) **ಉರುದಾಮ್ನಿ** ಸ್ವರ್ಗಮೊದಲಾದ ಫಲ, ಇಂದ್ರಮೊದಲಾದ ದೇವತೆಗಳು, ಬ್ರಾಹ್ಮಣ ಮೊದಲಾದ ಅಧಿಕಾರಿಗಳು, ಹೆಸರು ಮೊದಲಾದವು ಈ ಬಗೆಯ ಬಲವಾದ ಹಗ್ಗದಲ್ಲಿ (ಹಗ್ಗದಂತಿರುವ) **ಈಶತಂತ್ರ್ಯಾಂ** ಶ್ರೀಹರಿಯ ವೇದವಾಕ್ಯರೂಪವಾದ ತಂತಿಯಲ್ಲಿ ಅಂಧಕಶಾಸ್ತ್ರದಲ್ಲಿ **ವಾಚಿ** ವಾಗ್ರೂಪವಾದದ್ದರಲ್ಲಿ **ಬದ್ಧಾಃ** ನಿಷ್ಠರಾದವರೋ **ತೇ** ಅವರು **ಅಂಧೈಃ** ಅಜ್ಞಾನಿಗಳಾದ ಗುರುಗಳಿಂದ

**ಉಪನೀಯಮಾನಾಃ** ಉಪದೇಶಿಸಲ್ಪಡುವ ಕರ್ಮಮಾರ್ಗವುಳ್ಳ **ಅಂಧಾಃ ಯಥಾ ತಥಾ** ಅಜ್ಞಾನಿಗಳು ಹೇಗೆ ಮತ್ತೊಂದು ದಾರಿಯನ್ನರಿಯರೋ ಹಾಗೆ **ಸ್ವಾರ್ಥಗತಿಂ** ತಮ್ಮ ಪುರುಷಾರ್ಥ ಸ್ವರೂಪನಾದ ತನ್ನ ಭಕ್ತರ ಪುರುಷಾರ್ಥವೆಲ್ಲವನ್ನೂ ಸಂಪಾದಿಸಿಕೊಡುವ ತಮ್ಮ ಪುರುಷಾರ್ಥಪ್ರದನಾದ ವಿಷ್ಣುವನ್ನು **ನ ವಿದುಃ** ತಿಳಿಯುವದಿಲ್ಲ **ಹಿ** 'ಅಂಧೇನೈವ ನೀಯಮಾನಾ ಯಥಾಽಂಧಾಃ'ಎಂಬ ಶ್ರುತಿ ಪ್ರಸಿದ್ಧಿಯಿದೆ. ।।೩೧।।

ಹಾಗಾದರೆ ಗೃಹವ್ರತರಿಗೆ ಮೋಕ್ಷೋಪಾಯ ಯಾವುದು ಎಂದರೆ ಅವರಿಗೆ ಭಗವದೇಕಾಂತ ಭಕ್ತರ ಪಾದಸೇವನೆಯಿಲ್ಲದೇ ಶ್ರೀಹರಿಯಲ್ಲಿ ಮನಸ್ಸು ಬರುವದಿಲ್ಲ ಎಂದು ಹೇಳುತ್ತಾರೆ-

**ನೈಷಾಂ ಮತಿಸ್ತಾವದುರುಕ್ರಮಾಂಘ್ರಿಂ ಸ್ಪೃಶತ್ಯನರ್ಥಾಪಗಮೋ ಯದರ್ಥಃ* ।**
**ಮಹೀಯಸಾಂ ಪಾದರಜೋಽಭಿಷೇಕಂ ನಿಷ್ಕಿಂಚನಾನಾಂ ನ ವೃಣೀತ ಯಾವತ್॥**

**ಏಷಾಂ** ಗೃಹವ್ರತರ **ಮತಿಃ** ಬುದ್ಧಿಯು **ಯಾವತ್** ಎಲ್ಲಿಯ ವರೆಗೆ **ಮಹೀಯಸಾಂ** ಮಹಾತ್ಮರಾದ **ನಿಷ್ಕಿಂಚನಾನಾಂ** ಸನ್ಯಾಸಿಗಳ, ದುಷ್ಟವಿಷಾಯಸಕ್ತಿ ಇಲ್ಲದ ಏಕಾಂತಭಕ್ತರ, **ಪಾದರಜೋಽಭಿಷೇಕಂ** ಪಾದಧೂಳಿಯನ್ನು ಶಿರಸಾ ಧರಿಸುವದನ್ನು **ನ ವೃಣೀತ** ಹೊಂದುವದಿಲ್ಲವೋ(ಅಥವಾ ಎಲ್ಲಿಯವರೆಗೆ ಏಕಾಂತಭಕ್ತರ ಪಾದಸೇವೆ ಮಾಡುವದಿಲ್ಲವೋ ಅಲ್ಲಿಯ ವರೆಗೆ) **ತಾವತ್** ಅಷ್ಟು ಕಾಲ **ಯದರ್ಥಃ** ಯಾವ ಶ್ರೀಹರಿಯ ಪಾದದರ್ಶನದ ಮುಖ್ಯಪ್ರಯೋಜನವು **(ಯದುತ್ಥಃ** ಎಂಬ ಪಾಠದಲ್ಲಿ ಯಾವ ಶ್ರೀಹರಿಯ ವಿಷಯಕವಾದ ಬುದ್ಧಿಯಿಂದ ಬರುವ ಫಲವು) **ಅನರ್ಥಾಪಗಮಃ** ಸಂಸಾರನಿವೃತ್ತಿಯೋ **ತಂ** ಅಂತಹ **ಉರುಕ್ರಮಾಂಘ್ರಿಂ** ಶ್ರೀಹರಿಯ ಪಾದವನ್ನು **ನ ಸ್ಪೃಶತಿ** ವಿಷಯೀಕರಿಸುವದಿಲ್ಲ.

ವಿಶೇಷ ಃ- ಅಥವಾ **ಯದುತ್ಥಃ** ಅನರ್ಥಾಪಗಮವು ಯಾವ ನಿಷ್ಕಿಂಚನರ ಪಾದರಜೋಭಿಷೇಕದಿಂದ ಪ್ರಕಾಶಿತವಾಗುವದೋ ಅಂತಹ ಪಾದರಜೋಭಿಷೇಕ ವನ್ನು ಎಂದೂ ಅನ್ವಯ ಮಾಡಬಹುದು. ।।೩೨।।

**ನಾರದ ಉವಾಚ**

**ಇತ್ಯುಕ್ತ್ವೋಪರತಂ ಪುತ್ರಂ ಹಿರಣ್ಯಕಶಿಪೂ ರುಷಾ ।**
**ಅಂಧೀಕೃತಾತ್ಮಾ ಸ್ವೋತ್ಸಂಗಾನ್ನಿರಸ್ಯತ ಮಹೀತಲೇ ।**
**ಆಹಾಮರ್ಷರುಷಾವಿಷ್ಟಃ ಕಷಾಯೀಕೃತಲೋಚನಃ ।।೩೩।।**

---

* 'ಯದುತ್ಥಃ' ಇತಿ ಪಾಠಾಂತರಂ ।

**ಇತ್ಯುಕ್ತ್ವಾ** ಹೀಗೆ ಹೇಳಿ **ಉಪರತಂ** ಸುಮ್ಮನಾದ **ಪುತ್ರಂ** ಮಗನಾದ ಪ್ರಹ್ಲಾದನನ್ನು **ರುಷಾ** ಸಿಟ್ಟಿನಿಂದ **ಅಂಧೀಕೃತಾತ್ಮಾ** ವಿವೇಕರಹಿತವಾದ ಮನಸ್ಸುಳ್ಳ **ಹಿರಣ್ಯಕಶಿಪುಃ** ಹಿರಣ್ಯಕಶಿಪುವು **ಸ್ವೋತ್ಸಂಗಾತ್** ತನ್ನ ತೊಡೆಯಿಂದ **ಮಹೀತಲೇ** ಭೂಮಿಗೆ **ನಿರಸ್ಯತ** ತಳ್ಳಿದನು **ಕಷಾಯೀಕೃತಲೋಚನಃ** ಕಣ್ಣುಗಳನ್ನು ಕೆಂಪು ಮಾಡಿಕೊಂಡು **ಅಮರ್ಷರುಷಾವಿಷ್ಟಃ** ಅಸಹನೆಯಿಂದುಂಟಾದ ಸಿಟ್ಟಿನಿಂದ ಕೂಡಿದವನಾಗಿ **ಆಹ** ಹೇಳಿದನು. ।।೩೩।।

**ಹಿರಣ್ಯಕಶಿಪುರುವಾಚ**

**ವಧ್ಯತಾಮಾಶ್ವಯಂ ವಧ್ಯೋಽನಿಸ್ಸಾರಯತ ನೈಋತಾಃ ।**
**ಅಯಂ ಮೇ ಭ್ರಾತೃಹಾ ಶೋಚ್ಯೋ ಹಿತ್ವಾ ಸ್ವಾನ್ ಸುಹೃದೋಽಧಮಃ ॥**

**ಪಿತೃವ್ಯಹಂತುಃ ಪಾದೌ ಯೋ ವಿಷ್ಣೋರ್ದಾಸವದರ್ಚತಿ ।**
**ವಿಷ್ಣೋರ್ವಾ ಸಾಧ್ವಸೌ ಕಿಂ ನು ಕರಿಷ್ಯತ್ಯಸಮಂಜಸಃ ।।೩೫।।**

**ಸೌಹೃದಂ ದುಸ್ತ್ಯಜಂ ಪಿತ್ರೋರತ್ಯಜತ್ಪಂಚಹಾಯನಃ ।।೩೬।।**

**ನೈಋತಾಃ** ರಾಕ್ಷಸರೇ **ನಿಸ್ಸಾರಯತ** ಇವನನ್ನು ಇಲ್ಲಿಂದ ಹೊರಗೆ ಹಾಕಿರಿ **ವಧ್ಯಃ** ವಧೆಗೆ ಅರ್ಹನಾದ **ಅಯಂ** ಇವನು **ಆಶು** ಬೇಗನೆ **ವಧ್ಯತಾಂ** ಕೊಲ್ಲಲ್ಪಡಲಿ **ಅಧಮಃ** ನೀಚನಾದ **ಯಃ ಅಯಂ** ಯಾವ ಇವನು **ಸ್ವಾನ್** ತನ್ನವರಾದ **ಸುಹೃದಃ** ಬಂಧುಗಳಾದ ನಮ್ಮನ್ನು **ಹಿತ್ವಾ** ಬಿಟ್ಟು **ಮೇ** ನನ್ನ **ಭ್ರಾತೃಹಾ** ತಮ್ಮನನ್ನು ಕೊಂದಿರುವ **ಪಿತೃವ್ಯಹಂತುಃ** ತನ್ನ ಚಿಕ್ಕಪ್ಪನ ಸಂಹಾರಕನಾದ **ವಿಷ್ಣೋಃ** ವಿಷ್ಣುವಿನ **ಪಾದೌ** ಪಾದಗಳನ್ನು **ದಾಸವದರ್ಚತಿ** ವಿಷ್ಣುಭೃತ್ಯನಂತೆ ಪೂಜಿಸುವನು **ಸಃ** ಅಂತಹ ಇವನು **ಶೋಚ್ಯಃ** ಶೋಚನೀಯನು. **ಅಸಮಂಜಸಃ** ಪಿತೃದ್ವೇಷಿಯಾದ **ಅಸೌ** ಇವನು **ವಿಷ್ಣೋರ್ವಾ** ವಿಷ್ಣುವಿಗಾದರು **ಸಾಧು ಕಿಂ ಕರಿಷ್ಯತಿ** ಏನು ಒಳ್ಳೆಯದು ಮಾಡಿಯಾನು **ಯಃ ಅಸೌ** ಯಾವ ಇವನು **ಪಂಚಹಾಯನಃ ಅಪಿ** ಐದು ವರ್ಷದವನಾದರೂ **ದುಸ್ತ್ಯಜಂ** ಬಿಡಲಾಗದ **ಪಿತ್ರೋಃ** ತಂದೆ ಮತ್ತು ಕಕ್ಕನ **ಸೌಹೃದಂ** ಸ್ನೇಹವನ್ನು **ಅತ್ಯಜತ್** ಬಿಟ್ಟಿರುವನು. ಇದರಿಂದ ಅಸಮಂಜಸತೆಯನ್ನು ತಿಳಿಸಿದಂತಾಯಿತು. ।।೩೪,೩೫,೩೬।।

**ಪರೋಽಪ್ಯವಶ್ಯಂ ಹಿತಕೃದ್ಯಥೌಷಧಂ**
**ಸ್ವದೇಹಜೋಽಪ್ಯಾಮಯವತ್ಸುತೋಽಹಿತಃ ।**
**ಛಿಂದ್ಯಾತ್ತದಂಗಂ ಹಿ ಯದಾತ್ಮನೋಽಹಿತಂ**
**ಶೇಷಂ ಸುಖಂ ಜೀವತಿ ಯದ್ವಿಸರ್ಜನಾತ್ ।।೩೭।।**

**ಅಪತ್ಯಂ** ಮಗುವು **ಪರಃ ಅಪಿ** ಪರಕೀಯನೇ ಆದರೂ **ಯಥಾ ಔಷಧಂ** ಅರಣ್ಯದಲ್ಲಿರುವ ಮೂಲಿಕೆಯಂತೆ **ಹಿತಕೃತ್** ಹಿತಕಾರಿಯೇ(ಶತ್ರುವಾದರೂ ದ್ವೇಷದಿಂದಾದರೂ ಹಿತಕಾರಿಯಾಗಿದ್ದರೆ ಅದೇ ಮಗನು ಔಷಧಿಯು ಕಹಿಯಾದರೂ ಒಳ್ಳೆಯದಾಗುವಂತೆ('ಹರೀತಕೀ ಮನುಷ್ಯಾಣಾಂ ಮಾತೇವ ಹಿತಕಾರಿಣೀ' ಅರಳೆಕಾಯಿ ಮನುಷ್ಯರಿಗೆ ತಾಯಿಯಂತೆ ಹಿತವನ್ನು ಉಂಟುಮಾಡುವದು.) ಶತ್ರುವು ಹಿತಕಾರಿಯಾದಲ್ಲಿ ಗ್ರಾಹ್ಯನೆಂದರ್ಥ. **ದೇಹಜಃ ಅಪಿ** ತನ್ನ ದೇಹದಲ್ಲಿಯೇ ಹುಟ್ಟಿದರೂ **ಸುತಃ** ಹಡೆದ ಮಗನೂ **ಆಮಯವತ್** ಖಾಯಿಲೆಯಂತೆ **ಅಹಿತಃ** ಅಹಿತಕಾರಿಯೇ. ದೇಹದಲ್ಲಿ ಹುಟ್ಟಿದ್ದಾದರೂ ದುಃಖಕಾರಿಯಾದ ಖಾಯಿಲೆಯು ಹೇಗೆ ತ್ಯಾಜ್ಯವೋ ಹಾಗೇ ಅಹಿತಕಾರಿಯಾದ ಮಗನೂ ತ್ಯಾಜ್ಯನೆಂದರ್ಥ. **ಯತ್** ಯಾವ ಅವಯವವು ಹಾವು ಕಚ್ಚಿ ವಿಷವೇರುವದಕ್ಕೆ ಕಾರಣವಾಗಿ **ಆತ್ಮನಃ** ತನಗೆ ಉಳಿದ ದೇಹಕ್ಕೆ **ಅಹಿತಂ** ಕೆಟ್ಟದ್ದೋ **ಯದ್ವಿಸರ್ಜನಾತ್** ಯಾವ ಅವಯವವನ್ನು ತೆಗೆದು ಹಾಕುವದರಿಂದ **ಶೇಷಂ ಅಂಗಂ** ಉಳಿದ ಅವಯವಗಳು **ಸುಖಂ ಜೀವತಿ** ವಿಷವೇರದೆ ಉಳಿಯುವದೋ **ತದಂಗಂ ಉತ** ಆ ಅವಯವವನ್ನು ಕೂಡ **ಛಿಂದ್ಯಾತ್** ಕತ್ತರಿಸಿ ಹಾಕಬೇಕು.

ವಿಶೇಷ :- ಹಾವು ಕಚ್ಚಿದ ಬೆರಳನ್ನು ಕತ್ತರಿಸಿ ಉಳಿದ ದೇಹವನ್ನು ಕಾಪಾಡಿಕೊಳ್ಳುವಂತೆ ನಾವು ಈ ಪ್ರಹ್ಲಾದನನ್ನು ಸಂಹರಿಸಿ ಉಳಿದ ಮಕ್ಕಳೂ ಕೆಡದಂತೆ ನೋಡಿಕೊಳ್ಳಬೇಕು ಎಂದು ಅಭಿಪ್ರಾಯ. ।।೩೭।।

**ಸರ್ವೈರುಪಾಯೈರ್ಹಂತವ್ಯಃ ಸಂಭೋಗಶಯನಾಸನೈಃ ।**
**ಸುಹೃಲ್ಲಿಂಗಧರಃ ಶತ್ರುರ್ಮುನೇರ್ದುಷ್ಟಮಿವೇಂದ್ರಿಯಮ್ ।।೩೮।।**

**ಸುಹೃಲ್ಲಿಂಗಧರಃ** ಸ್ನೇಹಿತನ ಚಿನ್ಹೆಗಳನ್ನು ಧರಿಸಿರುವ ಅಂದರೆ ವಸ್ತುತಃ ಸ್ನೇಹಿತನಲ್ಲದ **ಮುನೇಃ** ಮನನಶೀಲನಿಗೆ **ದುಷ್ಟಂ** ವಿಷಯಗಳ ಕಡೆ ಹರಿಯುವ **ಇಂದ್ರಿಯಂ ಇವ** ಇಂದ್ರಿಯದಂತೆ **ಶತ್ರುಃ** ಅಹಿತಕಾರಿಯಾದ **ಅಯಂ** ಈ ಪ್ರಹ್ಲಾದನು **ಸಂಭೋಗ** ವಿಷಮಿಶ್ರಿತ ಅನ್ನದ ಭೋಜನ **ಶಯನ** ಕಾಯ್ದ ಕಲ್ಲಿನ ಕಬ್ಬಿಣದ ಮೇಲೆ ಮಲಿಗಿಸುವದು **ಆಸನೈಃ** ಶೂಲ ಮೊದಲಾದವುಗಳ ಮೇಲೆ ಕೂಡಿಸುವದು ಇವೇ ಮೊದಲಾದ **ಸರ್ವೈಃ ಉಪಾಯೈಃ** ಎಲ್ಲ ಉಪಾಯಗಳಿಂದ **ಹಂತವ್ಯಃ** ಸಾಯಿಸಲ್ಪಡಬೇಕಾದವನು. ।।೩೮।।

**ನೈರ್ಋತಾಸ್ತೇ ಸಮುದ್ದಿಷ್ಟಾ ಭರ್ತ್ರಾ ವೈ ಶೂಲಪಾಣಯಃ ।**
**ತಿಗ್ಮದಂಷ್ಟ್ರಾಃ ಕರಾಲಾಸ್ಯಾಸ್ತಾಮ್ರಶ್ಮಶ್ರುಶಿರೋರುಹಾಃ ।।೩೯।।**

**ನದಂತೋ ಭೈರವಂ ನಾದಂ ಛಿಂಧಿ ಭಿಂಧೀತಿ ವಾದಿನಃ ।**
**ಆಸೀನಮಹನನ್ ಶೂಲೈಃ ಪ್ರಹ್ಲಾದಂ ಸರ್ವಮರ್ಮಸು ॥೪೦॥**

**ಶೂಲಪಾಣಯಃ** ಕೈಯಲ್ಲಿ ಶೂಲವನ್ನು ಹಿಡಿದಿರುವ **ತಿಗ್ಮದಂಷ್ಟ್ರಾಃ** ತೀಕ್ಷ್ಣವಾದ ಕೋರೆ ಹಲ್ಲುಗಳುಳ್ಳ **ಕರಾಲಾಸ್ಯಾಃ** ವಿಕಾರವಾದ ಮುಖವುಳ್ಳ **ತಾಮ್ರಶ್ಮಶ್ರು-ಶಿರೋರುಹಾಃ** ಕೆಂಪುಗಡ್ಡ ಮೀಸೆಗಳು ಮತ್ತು ತಲೆಕೂದಲುಗಳುಳ್ಳ **ಭರ್ತ್ರಾ** ಸ್ವಾಮಿಯಾದ ಹಿರಣ್ಯಕಶಿಪುವಿನಿಂದ **ಸಮುದ್ದಿಷ್ಟಾಃ** ಆಜ್ಞಪ್ತರಾದ **ತೇ ನೈರ್ಋತಾಃ** ಆ ರಾಕ್ಷಸರು **ಭೈರವಂ** ಭಯಂಕರವಾದ **ನಾದಂ (ಉದ್ದಿಶ್ಯ)** ಶಬ್ದಮಾಡುವ ಉದ್ದೇಶದಿಂದ **ನದಂತಃ** ಕಿರಚಾಡುವವರಾಗಿ **ಛಿಂಧಿ** ಕತ್ತರಿಸಿ **ಭಿಂಧಿ** ಸೀಳಿಹಾಕಿರಿ **ಇತಿ** ಎಂದು **ವಾದಿನಃ ಸಂತಃ** ಕೂಗುವವರಾಗಿ **ಆಸೀನಂ** ಕುಳಿತಿದ್ದ **ಪ್ರಹ್ಲಾದಂ** ಪ್ರಹ್ಲಾದನನ್ನು **ಸರ್ವಮರ್ಮಸು** ಎಲ್ಲ ಮರ್ಮಸ್ಥಳಗಳಲ್ಲಿ **ಶೂಲೈಃ** ಶೂಲ ಮೊದಲಾದ ಆಯುಧಗಳಿಂದ **ಅಹನನ್** ಹೊಡೆದರು. ॥೩೯,೪೦॥

**ಪರೇ ಬ್ರಹ್ಮಣ್ಯನಿರ್ದೇಶ್ಯೇ ಭಗವತ್ಯಖಿಲಾತ್ಮನಿ ।**
**ಯುಕ್ತಾತ್ಮನ್ಯಫಲಾ ಆಸನ್ನಪುಣ್ಯಸ್ಯೇವ ತತ್ಕ್ರಿಯಾಃ ॥೪೧॥**

**ಅನಿರ್ದೇಶ್ಯೇ** ಅದೃಶ್ಯತ್ವಾದಿಗುಣಗಳುಳ್ಳ **ಅಖಿಲಾತ್ಮನಿ** ರಮಾಬ್ರಹ್ಮಾದಿ ಸಮಸ್ತರಿಗೂ ನಿಯಾಮಕನಾದ **ಭಗವತಿ** ಮಹಾಮಹಿಮೋಪೇತನಾದ **ಪರೇ ಬ್ರಹ್ಮಣಿ** ಸರ್ವೋತ್ತಮನಾದ ಶ್ರೀಹರಿಯಲ್ಲಿ **ಯುಕ್ತಾತ್ಮನಿ** ಏಕಾಗ್ರವಾಗಿರುವ ಮನಸ್ಸುಳ್ಳ ಪ್ರಹ್ಲಾದನ ವಿಷಯದಲ್ಲಿ **ತತ್ಕ್ರಿಯಾಃ** ಆ ರಾಕ್ಷಸರ ಹೊಡೆಯುವದೇ ಮೊದಲಾದ ವಧೋಪಾಯಗಳು **ಅಪುಣ್ಯಸ್ಯ** ಪಾಪಿಯು ಮಾಡುವ **ಇವ** ಸಂಪತ್ತಿನ ಉಪಾಯಗಳಂತೆ **ಅಫಲಾಃ** ನಿಷ್ಫಲಗಳಾದವು. ॥೪೧॥

**ಪ್ರಯಾಸೇಽಪಹತೇ ತಸ್ಮಿನ್ ದೈತ್ಯೇಂದ್ರಃ ಪರಿಶಂಕಿತಃ ।**
**ಚಕಾರ ತದ್ವಧೋಪಾಯಾನ್ ನಿರ್ಬಂಧೇನ ಯುಧಿಷ್ಠಿರ ॥೪೨॥**

**ಯುಧಿಷ್ಠಿರ** ಧರ್ಮರಾಜನೇ **ತಸ್ಮಿನ್** ಆ ರಾಕ್ಷಸರು ಮಾಡಿದ **ಪ್ರಯಾಸೇ** ಪ್ರಹ್ಲಾದನನ್ನು ಕೊಲ್ಲಬೇಕೆಂಬ ಪ್ರಯತ್ನವು **ಅಪಹತೇ ಸತಿ** ವ್ಯರ್ಥವಾಗಲು **ಪರಿಶಂಕಿತಃ** ಪ್ರಹ್ಲಾದನನ್ನು ಕೊಲ್ಲಲಾಗುವದೋ ಇಲ್ಲವೋ ಎಂಬ ಶಂಕೆಯಿಂದ ಕೂಡಿದ **ದೈತ್ಯೇಂದ್ರಃ** ದೈತ್ಯಶ್ರೇಷ್ಠನಾದ ಹಿರಣ್ಯಕಶಿಪುವು **ನಿರ್ಬಂಧೇನ** ಕೊಲ್ಲಲೇಬೇಕೆಂಬ ಅಗ್ರಹದಿಂದ **ತದ್ವಧೋಪಾಯಾನ್** ಆ ಪ್ರಹ್ಲಾದನನ್ನು ಕೊಲ್ಲುವದಕ್ಕಾಗಿ ಕೆಲವು ಉಪಾಯಗಳನ್ನು **ಚಕಾರ** ಮಾಡಿದನು. ॥೪೨॥

ವಧೋಪಾಯಗಳನ್ನು ಹೇಳುತ್ತಾರೆ:-

**ದಿಗ್ಗಜೈರ್ದಂದಶೂಕೇಂದ್ರೈರಭಿಚಾರಾವಪಾತನೈಃ ।**
**ಮಾಯಾಭಿಃ ಸನ್ನಿರೋಧೈಶ್ಚ ಗರದಾನೈರಭೋಜನೈಃ ॥೪೩॥**

**ಹಿಮವಾಯ್ವಗ್ನಿಸಲಿಲೈಃ ಪರ್ವತಾಕ್ರಮಣೈರಪಿ ।**
**ನ ಶಶಾಕ ಯದಾ ಹಂತುಮಪಾಪಮಸುರಃ ಸುತಮ್ ॥೪೪॥**

**ಚಿಂತಾಂ ದೀರ್ಘತಮಾಂ ಪ್ರಾಪ್ತಸ್ತತ್ಕರ್ತುಂ ನಾಭ್ಯಪದ್ಯತ ।**
**ಏಷ ಮೇ ಬಹ್ವಸಾಧೂಕ್ತೋ ವಧೋಪಾಯಾಶ್ಚ ನಿರ್ಮಿತಾಃ ॥೪೫॥**

**ಯದಾ** ಯಾವಾಗ **ಅಸುರಃ** ಹಿರಣ್ಯಕಶಿಪುವು **ಅಪಾಪಂ** ನಿರಪರಾಧಿಯಾದ **ಸುತಂ** ಮಗನಾದ ಪ್ರಹ್ಲಾದನನ್ನು **ಯದಾ** ಯಾವಾಗ **ದಿಗ್ಗಜೈಃ** ಆನೆಗಳಿಂದಲೂ **ದಂದಶೂಕೇಂದ್ರಿಯೈಃ** ಶ್ರೇಷ್ಠಸರ್ಪಗಳಿಂದಲೂ **ಅಭಿಚಾರ** ಮರಣಕ್ಕಾಗಿ ಮಾಡುವ ಆಭಿಚಾರಿಕ ಯಾಗಗಳಿಂದ **ಅವಪಾತನೈಃ** ಕೋಡುಗಲ್ಲುಗಳಿಂದ ಕೆಳಕ್ಕೆ ತಳ್ಳುವದರಿಂದಲೂ **ಮಾಯಾಭಿಃ** ಶೂನ್ಯಕ್ರಿಯೆಗಳಿಂದ **ಸನ್ನಿರೋಧೈಃ** ಹೊರಬರಲಾಗದ ಆಳವಾದ ಮನೆಗಳಲ್ಲಿ ಇಟ್ಟು ಪೀಡಿಸುವದರಿಂದ **ಗರದಾನೈಃ** ವಿಷ ಹಾಕುವದರಿಂದಲೂ **ಅಭೋಜನೈಃ** ಆಹಾರ ಕೊಡದಿರುವದರಿಂದಲೂ **ಹಿಮ** ಮಂಜು **ವಾಯು** ಗಾಳಿ **ಅಗ್ನಿ** ಬೆಂಕಿ **ಸಲಿಲೈಃ** ನೀರು ಎರಚುವದರಿಂದಲೂ **ಪರ್ವತಾಕ್ರಮಣೈಃ ಅಪಿ** ಬೆಟ್ಟವನ್ನು ಹತ್ತಿಸುವದರಿಂದಲೂ ತಳ್ಳುವದರಿಂದಲೂ **ಹಂತುಂ** ಕೊಲ್ಲಲು **ನ ಶಶಾಕ** ಸಮರ್ಥನಾಗಲಿಲ್ಲವೋ **ತದಾ** ಆವಾಗ **ದೀರ್ಘತಮಾಂ ಚಿಂತಾಂ** ಹೇಗೆ ಕೊಲ್ಲಲಿ ಎಂಬ ಬಹುಕಾಲೀನ ಆಲೋಚನೆಯನ್ನು **ಪ್ರಾಪ್ತಃ ಸನ್** ಹೊಂದಿದವನಾಗಿ **ತತ್ ಕರ್ತುಂ** ವಧೆಮಾಡಲು **ನ ಅಭ್ಯಪದ್ಯತ** ಬೇರೇ ಉಪಾಯ ಕಾಣಲಿಲ್ಲ **ಏಷಃ** ಈ ಪ್ರಹ್ಲಾದನು **ಮೇ** ನನ್ನಿಂದ **ಬಹ್ವಸಾಧೂಕ್ತಃ** ಬಹಳ ಕೆಟ್ಟ ಮಾತುಗಳನ್ನಾಡಿಸಿ ಕೊಂಡ **ಚ** ಮತ್ತು **ವಧೋಪಾಯಾಃ** ಇವನನ್ನು ಕೊಲ್ಲುವ ಉಪಾಯಗಳು **ನಿರ್ಮಿತಾಃ** ಮಾಡಲ್ಪಟ್ಟವು. ॥೪೫॥

**ತೈಸ್ತೈರ್ದ್ರೋಹೈರಸದ್ಧರ್ಮೈರ್ಮುಕ್ತಃ ಸ್ವೇನೈವ ತೇಜಸಾ ।**
**ವರ್ತಮಾನೋಽವಿದೂರೇ ವೈ ಬಾಲೋಽಪ್ಯಜಡಧೀರಯಮ್ ।**
**ನ ವಿಸ್ಮರತಿ ಮೇಽನಾರ್ಯಂ* ಶುನಃಶೇಪ ಇವ ಪ್ರಭುಃ ॥೪೬॥**

**ಅಸದ್ಧರ್ಮೈಃ** ದುಷ್ಟರಾದ ಕಳ್ಳರೇ ಮೊದಲಾದವರಿಗೆ ಯೋಗ್ಯಗಳಾದ **ತೈಃ ತೈಃ** ನಾನು ಮಾಡಿಸಿದ ಆ ಆ **ದ್ರೋಹೈಃ** ವಧೋಪಾಯಗಳಿಂದ **ಸ್ವೇನೈವ ತೇಜಸಾ** ತನ್ನ(ಶ್ರೀಹರಿಯ)ಸಾಮರ್ಥ್ಯದಿಂದಲೇ **ಮುಕ್ತಃ** ತಪ್ಪಿಸಿಕೊಂಡನು. ಇಷ್ಟೆಲ್ಲ

* 'ಅನ್ಯಾಯಂ' ಇತಿ ಪಾಠಾಂತರಂ ।

ದ್ರೋಹವೆಸಗಿದರೂ **ಅವಿದೂರೇ** ತಂದೆಯೆಂದು ತನ್ನ ಸಮೀಪದಲ್ಲಿಯೇ (ಅಥವಾ ವಿದೂರೇ ಎಂದು ಪದಚ್ಛೇದ ಮಾಡಿದಾಗ ಗೌರವದಿಂದ ದೂರದಲ್ಲಿಯೇ) **ವರ್ತಮಾನಃ** ಇರುವ **ಬಾಲಃ ಅಪಿ** ಚಿಕ್ಕವನಾದರೂ **ಅಜಡಃ** ವಿವೇಕಿಯಾದ ಪಟುತರಬುದ್ಧಿಯುಳ್ಳ ಆದ್ದರಿಂದಲೇ **ಪ್ರಭುಃ** ಕೋಪವನ್ನು ತಡೆಯಲು ಸಮರ್ಥನಾದ **ಅಯಂ** ಇವನು **ಶುನಃಶೇಪಃ ಇವ** ಅಜೀಗರ್ತನ ಮಗನಾದ ಶುನಃಶೇಪನು ತಂದೆಯು ತನ್ನನ್ನು ಮಾರಿದನು. ಕೊಂಡವನು ತನ್ನನ್ನು ಯಾಗದ ಪಶುವನ್ನಾಗಿ ಮಾಡುವನೆಂಬುದನ್ನು ನೆನಸದಿರುವಂತೆ **ಮೇ** ನನ್ನಿಂದ **ಅನಾರ್ಯಂ** ಆದ ಮತ್ತು ಆಗಲಿರುವ ಮೂರ್ಖ ಕಾರ್ಯವನ್ನು **ನ ವಿಸ್ಮರತಿ** ನೆನಿಸುತ್ತಿಲ್ಲ.

ವಿಶೇಷ ಃ- ಅನ್ಯಾಯಂ ಎಂಬ ಪಾಠದಲ್ಲಿ ನೀತಿಶಾಸ್ತ್ರವಿರುದ್ಧವೆಂದರ್ಥ. ನನಗೆ ಇನ್ನೂ ನೂರು ಕೊಟ್ಟರೆ ನಾನಿವನನ್ನು ವಧೆಗೆ ಕೊಡುತ್ತೇನೆ ಎಂದು ತಂದೆ ಅಜೀಗರ್ತ ಹೇಳಿದ್ದನು. ಶುನಃಶೇಪಋಷಿಯು ಸಹಿಸಿಕೊಂಡಂತೆ ಇವನೂ ಸಹಿಸಿ ಕೊಂಡಿರುವನೆಂದರ್ಥ. ।।೪೬।।

**ಅಪ್ರಮೇಯಾನುಭಾವೋಽಯಮಕುತಶ್ಚಿದ್ಭಯೋಽಮರಃ ।**
**ನೂನಮೇತದ್ವಿರೋಧೇನ ಮೃತ್ಯುರ್ಮೇ ಭವಿತಾ ನ ವಾ ।।೪೭।।**

**ನೂನಂ** ನಿಶ್ಚಯವಾಗಿ **ಅಕುತಶ್ಚಿದ್ಭಯಃ** ಯಾವುದರಿಂದಲೂ ಹೆದರದ ಆದ್ದರಿಂದಲೇ **ಅಪ್ರಮೇಯಾನುಭಾವಃ** ಅಳೆಯಲಾಗದ ಸಾಮರ್ಥ್ಯವುಳ್ಳ **ಅಯಂ** ಪ್ರಹ್ಲಾದನು **ಅಮರಃ** ಸಾವಿಲ್ಲದ ದೇವತೆಯು **ಏತದ್ವಿರೋಧೇನ** ಈ ಮಹಾನುಭಾವನ ಮೇಲೆ ನಾನು ಮಾಡುತ್ತಿದ್ದ ದ್ವೇಷದಿಂದ **ಮೇ** ನನಗೆ **ಮೃತ್ಯುಃ** ಸಾವು **ನೂನಂ ಭವಿತಾ** ಆಗಿಯೇ ಆಗುವದು **ನ ವಾ** ಆಗದೇ ಇದ್ದರೂ ಇರಬಹುದು. ।।೪೭।।

**ಇತಿ ತಚ್ಚಿಂತಯಾ ಕಿಂಚಿನ್ಮ್ಲಾನಶ್ರಿಯಮಧೋಮುಖಮ್ ।**
**ಶಂಡಾಮರ್ಕಾವೌಶನಸೌ ವಿವಿಕ್ತ ಇತಿ ಹೋಚತುಃ ।।೪೮।।**

**ಇತಿ** ಮೇಲೆ ಹೇಳಿದಂತೆ **ತಚ್ಚಿಂತಯಾ** ಇವನನ್ನು ಕೊಲ್ಲುವದು ಹೇಗೆ ? ಇವನ ವಿರೋಧದಿಂದ ನಾನೇ ಸಾಯುವೆನೇ ? ಎಂಬ ಚಿಂತೆಯಿಂದ **ಕಿಂಚಿತ್** ಸ್ವಲ್ಪ **ಮ್ಲಾನಶ್ರಿಯಂ** ಬಾಡಿದ ಕಾಂತಿಯುಳ್ಳ ಆದ್ದರಿಂದಲೇ **ಅಧೋಮುಖಂ** ಕೆಳಗೆ ಮುಖಮಾಡಿದ **ತಂ** ಆ ಹಿರಣ್ಯಕಶಿಪುವನ್ನು ಕುರಿತು **ವಿವಿಕ್ತೇ** ಏಕಾಂತದಲ್ಲಿ **ಔಶನಸೌ** ಶುಕ್ರಾಚಾರ್ಯರ ಮಕ್ಕಳಾದ **ಶಂಡಾಮರ್ಕೌ** ಶಂಡಾಮರ್ಕರು **ಇತಿ** ಮುಂದೆ ಹೇಳುವಂತೆ **ಊಚತುಃ** ಹೇಳಿದರು **ಹ** ಅವರು ಹೇಳಿದ್ದರಲ್ಲಿ ತಾತ್ಪರ್ಯಾತಿಶಯವಿತ್ತು.

**ಜಿತಂ ತ್ವಯೈಕೇನ ಜಗತ್ತ್ರಯಂ ಭ್ರುವೋರ್ವಿಜೃಂಭಣತ್ರಸ್ತಸಮಸ್ತಧಿಷ್ಣ್ಯಮ್ ।**

**ನ ತಸ್ಯ ಚಿಂತ್ಯಂ ತವ ನಾಥ ಚಕ್ಷ್ಮಹೇ**
**ನ ವೈ ಶಿಶೂನಾಂ ಗುಣದೋಷಯೋಃ ಪದಮ್** ॥೪೯॥

**ನಾಥ** ಸ್ವಾಮಿಯೇ **ತ್ವಯಾ ಏಕೇನ** ನಿನ್ನೊಬ್ಬನಿಂದಲೇ **ಭ್ರುವೋಃ** ಹುಬ್ಬುಗಳ **ವಿಜೃಂಭಣ** ಹಾರಿಸುವಿಕೆಯಿಂದ **ತ್ರಸ್ತ** ಹೆದರಿದ **ಸಮಸ್ತ** ಎಲ್ಲ **ಧೀಷ್ಣ್ಯಂ** ಚಂದ್ರ ಸೂರ್ಯ ಮೊದಲಾದ ಲೋಕಪಾಲಕರುಳ್ಳ **ಜಗತ್ರಯಂ** ಮೂರು ಲೋಕವು **ಜಿತಂ** ಜಯಿಸಲ್ಪಟ್ಟಿರುವದು **ತಸ್ಯ** ಅಂತಹ ಶೂರನಾದ **ತವ** ನಿನಗೆ **ಚಿಂತ್ಯಂ** ಯೋಚಿಸಬೇಕಾದ ವಿಷಯವನ್ನು **ನ ಚಕ್ಷ್ಮಹೇ** ಕಾಣಲಾರೆವು ನೀನು ಪ್ರಹ್ಲಾದನ ವಧೆಯನ್ನು ಯೋಚಿಸಬೇಕಿಲ್ಲ ಏಕೆಂದರೆ **ಶಿಶೂನಾಂ** ತೊಟ್ಟಿಲಲ್ಲಿ ಮಲಗುವ ಮಕ್ಕಳಿಗೆ (ಬುದ್ಧಿವಿಕಾಸವಿಲ್ಲದವರಿಗೆ) **ಗುಣದೋಷಯೋಃ ಪದಂ** ಇದು ಒಳ್ಳೆಯದು, ಇದು ಕೆಟ್ಟದ್ದು ಎಂಬುದನ್ನು ಗ್ರಹಿಸುವ ಯೋಗ್ಯತೆವುಳ್ಳ ಅವರ ಅಂತಃಕರಣವು ಗುಣದೋಷಗಳಿಗೆ ನಿತ್ಯಸ್ಥಾನವು **ನ ವೈ** ಆಗಿರುವದಿಲ್ಲ.

ವಿಶೇಷ ಃ- ಮೊದಲನೇ ಅರ್ಥದಲ್ಲಿ ಪ್ರಹ್ಲಾದನು ಸರಿಯೆಂದು ತಿಳಿದು ಹೇಳಿದ್ದಲ್ಲ. ತಿಳಿಯುವಷ್ಟು ಅವನ ಬುದ್ಧಿಯು ವಿಕಾಸಗೊಂಡಿಲ್ಲ. ಆದ್ದರಿಂದ ಶತ್ರುವೆಂದು ಬಗೆದು ಕೊಲ್ಲಬೇಕಾಗಿಲ್ಲವೆಂದರ್ಥ. ಎರಡನೇಯ ಅರ್ಥದಲ್ಲಿ ಅವನ ಬುದ್ಧಿಯು ಹೀಗೆಯೇ ಇರುವದಿಲ್ಲ ಮುಂದೆ ವ್ಯತ್ಯಾಸವಾಗಬಹುದು ಆದ್ದರಿಂದ ಯೋಗ್ಯಪುತ್ರ ನಾಗಬಹುದು ಕೊಲ್ಲಲು ಅಗತ್ಯವಿಲ್ಲವೆಂದರ್ಥ. ಶಿಶುಗಳು ಗುಣದೋಷಗಳಿಗೆ ಆಶ್ರಯವೇ ಅಲ್ಲವೆಂದರ್ಥ. ॥೪೯॥

**ಇಮಂ ತು ಪಾಶೈರ್ವರುಣಸ್ಯ ಬದ್ಧಂ**
**ನಿಧೇಹಿ ಭೀತೋ ನ ಪಲಾಯತೇ ಯಥಾ ।**
**ಬುದ್ಧಿಶ್ಚ ಪುಂಸೋ ವಯಸಾऽऽರ್ಯಸೇವಯಾ**
**ಯಾವದ್ಗುರುರ್ಭಾರ್ಗವ ಆಗಮಿಷ್ಯತಿ** ॥೫೦॥

**ಯಾವತ್** ಎಲ್ಲಿಯ ವರೆಗೆ **ಗುರುಃ** ಗುರುಗಳಾದ **ಭಾರ್ಗವಃ** ಶುಕ್ರಾಚಾರ್ಯರು **ಆಗಮಿಷ್ಯತಿ** ಬರುವರೋ **ತಾವತ್** ಅದುವರೆಗೆ **ಯಥಾ** ಹೇಗೆ **ಅಯಂ** ಇವನು **ಭೀತಃ** ಹೆದರಿದವನಾಗಿ **ನ ಪಲಾಯತೇ** ಓಡಿ ಹೋಗುವದಿಲ್ಲವೋ **ತಥಾ** ಹಾಗೆಯೇ **ಇಮಂ** ಈ ನಿನ್ನ ಮಗನನ್ನು **ವರುಣಸ್ಯ ಪಾಶೈಃ** ವರುಣಪಾಶಗಳಿಂದ **ಬದ್ಧಃ** ಕಟ್ಟಿ **ನಿಧೇಹಿ** ಇಟ್ಟಿರು **ತು** ಈಗಂತು ಈ ಬುದ್ಧಿಯೇ ಇರುವದು **ವಯಸಾ** ವಯಸ್ಸು ಕಳೆದಂತೆ **ಆರ್ಯಸೇವಯಾ** ಪೂಜ್ಯರ ಸೇವೆಯಿಂದ **ಪುಂಸಃ** ಮನುಷ್ಯನಿಗೆ **ಬುದ್ಧಿಃ ಚ** ಒಳ್ಳೆಯ ಬುದ್ಧಿಯೂ **ಸ್ಯಾತ್** ಬರುವದು. ॥೫೦॥

**ತಥೇತಿ ಗುರುಪುತ್ರೋಕ್ತಮನುಜ್ಞಾಯೇದಮಬ್ರವೀತ್ ।**
**ಧರ್ಮಾ ಹ್ಯಸ್ಯೋಪದೇಷ್ಟವ್ಯಾ ರಾಜ್ಞಾಂ ಯೇ ಗೃಹಮೇಧಿನಾಮ್ ।।೫೧।।**

**ಗುರುಪುತ್ರೋಕ್ತಂ** ಶಂಡಾಮರ್ಕರು ಹೇಳಿದ್ದನ್ನು **ತಥಾ ಇತಿ** ಹಾಗೆ ಆಗಲಿ ಎಂದು **ಅನುಜ್ಞಾಯ** ಅಂಗೀಕರಿಸಿ **ಇದಂ** ಮುಂದೆ ಹೇಳುವ ಮಾತನ್ನು **ಅಬ್ರವೀತ್** ಹೇಳಿದನು **ಗೃಹಮೇಧಿನಾಂ** ಗೃಹಸ್ಥರಾದ **ರಾಜ್ಞಾಂ** ರಾಜರ **ಧರ್ಮಾಃ** ಧರ್ಮಗಳು **ಯೇ** ಯಾವುಗಳು **ತೇ** ಅವುಗಳೇ **ತಸ್ಯ** ಇವನಿಗೆ **ಉಪದೇಷ್ಟವ್ಯಾಃ** ಉಪದೇಶಿಸಲ್ಪಡಬೇಕು.

**ಧರ್ಮಮರ್ಥಂ ಚ ಕಾಮಂ ಚ ನಿತರಾಂ ಚಾನುಪೂರ್ವಶಃ ।**
**ಪ್ರಹ್ಲಾದಾಯೋಚತೂ ರಾಜನ್ ಪ್ರಶ್ರಿತಾವನತಾಯ ಚ ।।೫೨।।**

**ರಾಜನ್** ಧರ್ಮರಾಜನೇ ಆ ಗುರುಪುತ್ರರು **ಪ್ರಶ್ರಿತಾವನತಾಯ** ವಿನೀತನೂ ನಮ್ರನೂ ಆದ **ಪ್ರಹ್ಲಾದಾಯ** ಪ್ರಹ್ಲಾದನಿಗೆ **ಅನುಪೂರ್ವಶಃ** ಕ್ರಮವಾಗಿ **ಧರ್ಮಂ** ಧರ್ಮವನ್ನು **ಅರ್ಥಂ ಚ** ಅರ್ಥವನ್ನು **ಕಾಮಂ** ಕಾಮವನ್ನು **ನಿತರಾಂ ಊಚತುಃ ಚ** ಚೆನ್ನಾಗಿ ಹೇಳಿಕೊಟ್ಟರು. ।।೫೨।।

**ಯಥಾ ತ್ರಿವರ್ಗೋ ಗುರುಭಿರಾತ್ಮನೇ ಉಪಶಿಕ್ಷಿತಃ ।**
**ನ ಸಾಧು ಮೇನೇ ತಚ್ಛಿಕ್ಷಾಂ ದ್ವಂದ್ವಾರಾಮೋಪವರ್ಣಿತಾಮ್ ।।೫೩।।**

**ಗುರುಭಿಃ** ಶಂಡಾಮರ್ಕರಿಂದ **ಆತ್ಮನೇ** ತನಗೆ **ತ್ರಿವರ್ಗಃ** ಧರ್ಮ-ಅರ್ಥ-ಕಾಮಗಳು ಮಾತ್ರ **ಉಪಶಿಕ್ಷಿತಃ** ಕಲಿಸಲ್ಪಟ್ಟವು **ದ್ವಂದ್ವಾರಾಮೋಪವರ್ಣಿತಾಂ ಯಥಾ ತಥಾ** ರಾಗ ದ್ವೇಷಾದಿಗಳಿಂದ ಕೂಡಿದ ಬುದ್ಧಿಯುಳ್ಳವರಿಂದ ವಿವರಿಸಲ್ಪಡುವಂತೆ ವಿವರಿಸಲ್ಪಟ್ಟ **ತತ್ ಶಿಕ್ಷಾಂ** ಆ ತ್ರಿವರ್ಗೋಪದೇಶವನ್ನು **ಸಾಧು ನ ಮೇನೇ** ಸರಿಯೆಂದು ತಿಳಿಯಲಿಲ್ಲ. ರಾಗದ್ವೇಷಾದಿವ್ಯಾವೃತ್ತವಾದ ಬುದ್ಧಿಗಳಿಂದ ಎಂದೂ ಅರ್ಥ ಮಾಡಿರುವರು. ।।೫೩।।

**ಯದಾಽಽಚಾರ್ಯಃ ಪರಾವೃತ್ತೋ ಗೃಹಮೇಧೀಯಕರ್ಮಸು ।**
**ವಯಸ್ಯೈರ್ಬಾಲಕೈಸ್ತತ್ರ ಸೋಪಹೂತಃ ಕೃತಕ್ಷಣೈಃ ।।೫೪।।**

**ಯದಾ** ಯಾವಾಗ **ಆಚಾರ್ಯಃ** ಗುರುಗಳಾದ ಶಂಡಾಮರ್ಕರು **ಪರಾವೃತ್ತಃ ಸನ್** ಪಾಠ ಕಲಿಸುವದನ್ನು ಬಿಟ್ಟು **ಗೃಹಮೇಧೀಯಕರ್ಮಸು** ಗೃಹಸ್ಥರ ಕರ್ಮಗಳಾದ ಅಗ್ನಿಹೋತ್ರಾದಿಗಳಲ್ಲಿ (ವ್ಯಾಪೃತಃ) ಉದ್ಯುಕ್ತರಾದರೋ (ಅಥವಾ **ಗೃಹಮೇಧೀಯ -ಕರ್ಮಸು ಪರಾವೃತ್ತಃ** ಅಧ್ಯಯನ ಮಾಡಿಸುವದನ್ನು ಬಿಟ್ಟು ಅಗ್ನಿಹೋತ್ರಾದಿಗಳಲ್ಲಿ ತೊಡಗಿದರೋ) **ತತ್ರ** ಆಗ **ಕೃತಕ್ಷಣೈಃ** ಅವಕಾಶವನ್ನು ಪಡೆದ **ವಯಸ್ಯೈಃ** ಸಮಾನ ವಯಸ್ಸಿನ ಬಾಲಕರಿಂದ **ಸಃ** ಪ್ರಹ್ಲಾದನು **ಉಪಹೂತಃ** ಆಟಕ್ಕೆ ಕರೆಯಲ್ಪಟ್ಟನು. ।।೫೪।।

**ಅಥ ತಾನ್ ಶ್ಲಕ್ಷ್ಣಯಾ ವಾಚಾ ಪ್ರತ್ಯಾಹೂಯ ಮಹಾನ್ ಬುಧಃ ।**
**ಉವಾಚ ವಿದ್ವಾಂಸ್ತನ್ನಿಷ್ಠಾಂ ಕೃಪಯಾ ಪ್ರಹಸನ್ನಿವ ॥೫೫॥**

**ಅಥ** ಅವರ ಕರೆಯು ಬಂದನಂತರ **ತನ್ನಿಷ್ಠಾಂ** ಕ್ರೀಡಾದಲ್ಲಿ ಇಚ್ಛೆಯನ್ನು ಆ ಸ್ನೇಹಿತರಿಗೆ ತನ್ನಲ್ಲಿರುವ ಸ್ನೇಹವಿಶೇಷವನ್ನು **ವಿದ್ವಾನ್** ತಿಳಿದ **ಮಹಾನ್ ಬುಧಃ** ಶ್ರೀಹರಿಯ ಜ್ಞಾನವುಳ್ಳ ಪ್ರಹ್ಲಾದನು **ಶ್ಲಕ್ಷ್ಣಯಾ ಗಿರಾ** ಮಧುರಮಾತುಗಳಿಂದ **ತಾನ್** ಆ ಸ್ನೇಹಿತರನ್ನು **ಪ್ರತ್ಯಾಹೂಯ** ತನ್ನ ಬಳಿಗೆ ಕರೆದು **ಕೃಪಯಾ** ದಯೆಯಿಂದ **ಪ್ರಹಸನ್ ಇವ** ನಗುತ್ತ **ತಾನ್ ಪ್ರತಿ** ಅವರನ್ನು ಕರಿತು **ತನ್ನಿಷ್ಠಾಂ ಉವಾಚ** ಭಗವನ್ನಿಷ್ಠೆಯನ್ನು ಉಪದೇಶಿಸಿದನು. ॥೫೫॥

**ತೇ ತು ತದ್ಗೌರವಾತ್ ಸರ್ವೇ ತ್ಯಕ್ತಕ್ರೀಡಾಪರಿಚ್ಛದಾಃ ।**
**ಬಾಲಾ ನ ದೂಷಿತಧಿಯೋ ದ್ವಂದ್ವಾರಾಮೇರಿತೇಹಿತೈಃ ॥೫೬॥**

**ಪರ್ಯುಪಾಸತ ರಾಜೇಂದ್ರ ತನ್ನ್ಯಸ್ತಹೃದಯೇಕ್ಷಣಾಃ ।**
**ತಾನಾಹ ಕರುಣೋ ಮೈತ್ರೋ ಮಹಾಭಾಗವತೋಽಸುರಃ ॥೫೭॥**

**ಹೇ ರಾಜೇಂದ್ರ** ಧರ್ಮರಾಜನೇ **ದ್ವಂದ್ವರಾಮೇರಿತೇಹಿತೈಃ** ರಾಗದ್ವೇಷಯುತರಾದ ಗುರುಗಳ ಮಾತುಗಳಿಂದಲೂ, (ಪ್ರವೃತ್ತಿಗಳಿಂದಲೂ) ನ **ದೂಷಿತಧಿಯಃ** ಮನಸ್ಸು ಕೆಡದಿರುವ ಆದ್ದರಿಂದಲೇ **ತದ್ಗೌರವಾತ್** ಜ್ಞಾನಿಯಾದ ಪ್ರಹ್ಲಾದನಲ್ಲಿ ಗುರುಭಾವನೆಯುಳ್ಳ **ತೇ ಸರ್ವೇ** ಆ ಎಲ್ಲ ಹುಡುಗರು **ತ್ಯಕ್ತಕ್ರೀಡಾಪರಿಚ್ಛದಾಃ** ಆಟದ ಸಾಮಾನುಗಳನ್ನು ಬಿಟ್ಟವರಾಗಿ **ತನ್ನ್ಯಸ್ತಹೃದಯೇಕ್ಷಣಾಃ** ಪ್ರಹ್ಲಾದನಲ್ಲಿಯೇ ಮನಸ್ಸು ದೃಷ್ಟಿಯನ್ನು ಇಟ್ಟವರಾಗಿ ಅವನನ್ನು **ಪರ್ಯುಪಾಸತ** ಸುತ್ತುವರೆದು ಸೇವಿಸಿದರು. **ಕರುಣಃ** ಕೆಳಗಿನವರಲ್ಲಿ ದಯಾಳುವಾದ **ಮೈತ್ರಃ** ಸಮಾನರಲ್ಲಿ ಸ್ನೇಹವುಳ್ಳ, **ಮಹಾಭಾಗವತಃ** ಭಗವದ್ಭಕ್ತನಾದ **ಅಸುರಃ** ಮುಖ್ಯಪ್ರಾಣರಲ್ಲಿ ರಮಿಸುವ ಪ್ರಹ್ಲಾದನು **ತಾನ್** ಆ ದೈತ್ಯಬಾಲಕರನ್ನು ಕುರಿತು **ಆಹ** ಉಪದೇಶಿಸಿದನು. ॥೫೭॥

**॥ ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ಪಂಚಮೋಽಧ್ಯಾಯಃ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★

# ಅಥ ಷಷ್ಠೋऽಧ್ಯಾಯಃ

**ಸಾರಾಂಶ**

ಪ್ರಹ್ಲಾದ ದೈತ್ಯಬಾಲಕರಿಗೆ ಹೀಗೆ ಉಪದೇಶ ಮಾಡಿದ. ನೀವು ಯಾರೂ ಕೇವಲ ಆಟದಲ್ಲಿ ಕಾಲವನ್ನು ಕಳೆದು ಆಯುಷ್ಯವನ್ನು ವ್ಯರ್ಥಮಾಡಿಕೊಳ್ಳಬೇಡಿ. ಆಯುಷ್ಯ ಸ್ಥಿರವಲ್ಲ. ತತ್ತ್ವಜ್ಞಾನವನ್ನು ಸಂಪಾದಿಸಬೇಕು. ನಮ್ಮ ಗುರುಗಳು ಕೇವಲ ಲೌಕಕವಿದ್ಯೆಯನ್ನು ಉಪದೇಶಮಾಡುತ್ತಿದ್ದಾರೆ. ಕಾರಣ ಅವರ ಮಾತನ್ನು ಕೇಳುವ ಅವಶ್ಯಕತೆ ನಮಗಿಲ್ಲ. ಆಯುಷ್ಯ ಪರಮಾವಧಿ ನೂರು ವರ್ಷವಾದರೆ ಅದರಲ್ಲಿ ಅರ್ಧಭಾಗ ನಿದ್ರೆಯಲ್ಲಿ ಕಳೆಯುತ್ತದೆ. ಇನ್ನು ಅರ್ಧಭಾಗದಲ್ಲಿ ಇಪ್ಪತ್ತು ಬಾಲ್ಯದ ಆಟದಲ್ಲಿ. ಇಪ್ಪತ್ತು ಮುಪ್ಪಿನ ಅಶಕ್ತಿಯಲ್ಲಿ ಕಳೆದು ಹೋಗುತ್ತದೆ. ಉಳಿದ ಹತ್ತುವರ್ಷ ವಿಷಯ ಸುಖಸಂಪಾದನೆಯಲ್ಲಿ ಕಳೆದರೆ ಮೋಕ್ಷಕ್ಕೆ ಸಾಧನ ಯಾವಾಗ ? ಆದ್ದರಿಂದ ಎಳೆವಯಸ್ಸಿನಿಂದಲೇ ಭಗವತ್ಪ್ರೀತಿಕರವಾದ ನಿಷ್ಕಾಮಕರ್ಮಗಳಿಂದ ಅವನನ್ನು ಆರಾಧಿಸಬೇಕು. ಅವನೊಲಿದರೆ ಅಲಭ್ಯವೇನಿದೆ ? ಈ ನಿರ್ಮಲವಾದ ಜ್ಞಾನ ಬಹಳ ದುರ್ಲಭ. ಹಾಗಾದರೆ ನಿಮಗೆ ಹೇಗೆ ಪ್ರಾಪ್ತವಾಯಿತು ಎಂದು ದೈತ್ಯಬಾಲಕರು ಕೇಳಿದಾಗ ನಾರದರಿಂದ ನಾನು ಈ ತತ್ತ್ವಜ್ಞಾನವನ್ನು ಪಡೆದೆ ಎಂದು ಪ್ರಹ್ಲಾದರಾಜರು ತಮ್ಮ ಪೂರ್ವವೃತ್ತಾಂತವನ್ನು ಹೇಳಲು ಪ್ರಾರಂಭಿಸಿದರು.

★★★

ಶ್ರೀಮುಕುಂದನ ಪಾದಾರವಿಂದಗಳ ನಿರಂತರ ಸೇವೆಯೇ ಐಹಿಕ ಆಮುಷ್ಮಿಕ ಶಾಶ್ವತ ಆನಂದಗಳಿಗೆ ಕಾರಣವು ಬೇರೊಂದಿಲ್ಲ. ಆದ್ದರಿಂದ ಮುಮುಕ್ಷುಗಳು ಅದನ್ನೇ ಪ್ರತಿಪಾದನೆ ಮಾಡಬೇಕು ಎಂದು ಈ ಅಧ್ಯಾಯದಲ್ಲಿ ವಿವರಿಸುತ್ತಾರೆ. ಅದರಲ್ಲಿಯೂ ಮೊದಲು ಪ್ರಹ್ಲಾದರಾಜರು ಹುಡುಗರಿಗೆ ಏನು ಹೇಳಿದರೆಂದು ಹೇಳುತ್ತಾರೆ.

**ಪ್ರಹ್ಲಾದ ಉವಾಚ**

**ಹಂತಾರ್ಭಕಾ ಮೇ ಶೃಣುತ ವಚೋ ವಃ ಸರ್ವತಃ ಶಿವಮ್ ।**
**ವಯಸ್ಯಾನ್ ಪಶ್ಯತ ಮೃತಾನ್ ಕ್ರೀಡಾಂಧಾ ಮಾ ಪ್ರಮಾದ್ಯಥ ॥೧॥**

**ಹಂತ** ಅಯ್ಯೋ **ಅರ್ಭಕಾಃ** ದೈತ್ಯಬಾಲಕರೇ **ಮೇ** ನನ್ನ **ವಚಃ** ಮಾತನ್ನು **ಶೃಣುತ** ಕೇಳಿರಿ **ವಃ** ನಿಮಗೆ **ಸರ್ವತಃ** ಎಲ್ಲರಿಂದಲೂ **ಶಿವಂ** ಸುಖವು **ಸ್ಯಾತ್** ಆಗುವದು **ವಃ** ನಿಮಗೆ **ಸರ್ವತಃ** ಎಲ್ಲ ರೀತಿಯಿಂದಲೂ **ಶಿವಂ** ಶುಭಕರವಾದ **ವಚಃ** ಮಾತನ್ನು **ಶೃಣುತ** ಕೇಳಿರಿ. **ಮೃತಾನ್** ಮರಣಹೊಂದಿದ **ವಯಸ್ಯಾನ್** ಸ್ನೇಹಿತರನ್ನು **ಪಶ್ಯತ** ನೋಡಿರಿ. ಈ ದರ್ಶನದಿಂದ ವೈರಾಗ್ಯವನ್ನು ಹೊಂದಿರಿ ಹೀಗೆ ಸಂಸಾರದಲ್ಲಿ ವಿರಕ್ತಿ ಹುಟ್ಟಿಸುವದರಿಂದ ಇದು ಪುರುಷಾರ್ಥ(ಮೋಕ್ಷ)ಕ್ಕೆ ಕಾರಣವಾಗಿದೆ ಆದ್ದರಿಂದ ಮಂಗಳಕರವೆಂದರ್ಥ. ಹೀಗೆ ಹೇಳಿದ್ದರಿಂದ ಈಗ ನಮಗೆ ಬಾಲ್ಯ, ಮುಂದೆ ಶ್ರೇಯಸ್ಸಂಪಾದನೆಗೆ ಪ್ರಯತ್ನಿಸುತ್ತೇವೆ ಎಂಬ ಆಶೆಯು ನಿರಾಕೃತವಾಯಿತು. ನಮ್ಮ ಆಯುಷ್ಯವು ನಮ್ಮ ಕೈಯಲ್ಲಿಲ್ಲ. **ಕ್ರೀಡಾಂಧಾಃ** ಆಟದಲ್ಲಿ ಆಸಕ್ತರಾಗಿ, ಕುರುಡರಾಗಿ **ಮಾ ಪ್ರಮಾದ್ಯಥ** ಪ್ರಮಾದ ಹೊಂದಬೇಡಿರಿ. ॥೧॥

ಕ್ರೀಡೆಯಲ್ಲಿ ಆಸಕ್ತರಾಗುವದು ಹುಡುಗರ ಸ್ವಭಾವವೆಂದರೆ ಹೇಳುತ್ತಾರೆ-

**ನ ಪುರಾ ವಿವಶಂ ಬಾಲಾ ಆತ್ಮನೋಽರ್ಥೇ ಪ್ರಿಯೈಷಿಣಃ ।**
**ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಮ್ ॥೨॥**

**ಪುರಾ** ಹಿಂದೆ **ಬಾಲಾಃ** ಮಾರ್ಕಂಡೇಯರೇ ಮೊದಲಾದ ಬಾಲಕರು **ಆತ್ಮನಃ ಅರ್ಥೇ** ಹುಟ್ಟಿದಾಗಿನಿಂದ ತಮ್ಮ ಶ್ರೇಯಸ್ಸಿಗಾಗಿ **ಪ್ರಿಯೈಷಿಣಃ ಸಂತಃ** ಶ್ರೇಯಃಸಾಧನವಿಷಯವನ್ನೇ ವಿಚಾರಮಾಡುವವರಾಗಿ **ಆತ್ಮನಃ** ಶ್ರೀಹರಿಯ **ಪ್ರಿಯೈಷಿಣಃ** ಜ್ಞಾನವನ್ನೇ ಇಚ್ಛಿಸುವವರಾಗಿ **ವಿವಶಂ** ಕ್ರೀಡೆಯಲ್ಲಿ ವಿವಶವಾದುದನ್ನು **ನ ಕುರ್ವಂತಿ** ಮಾಡುತ್ತಿರಲಿಲ್ಲ. **ಯತ್** ಯಾವ ಕಾರಣ **ಅನರ್ಥೇ** ವಾಸ್ತವಿಕವಾಗಿ ಸಂಸಾರಕ್ಕೆ ಕಾರಣವಾದ್ದರಿಂದ ಪುರುಷಾರ್ಥವಲ್ಲದ ಈ ತ್ರಿವರ್ಗದಲ್ಲಿ **ಅರ್ಥಕಲ್ಪನಂ** ಇದೇ ಪುರುಷಾರ್ಥವೆಂದು ಆರೋಪಮಾಡಿ ಹೇಳುತ್ತಿರುವರೋ **ತತ್** ಆ ಕಾರಣ **ಗುರೂಕ್ತಮಪಿ** ನಮ್ಮ ಗುರುಗಳಾದ ಶಂಡಾಮರ್ಕರು ಹೇಳಿದ್ದೇ ಆದರೂ **ನ ಗ್ರಾಹ್ಯಂ** ಉತ್ತಮವಾದ ವಿದ್ಯೆ ಎಂದು ಕಲಿಯತಕ್ಕದ್ದಲ್ಲ. ನಮ್ಮ ಗುರುಗಳು ಹೇಳುತ್ತಿರುವ ವಿದ್ಯೆಯು ಶ್ರೇಯಸ್ಸಾಧನವಲ್ಲವೆಂದರ್ಥ.

ವಿಶೇಷ ಃ- 'ತ್ರೈವಿದ್ಯಾಂ ಮಾಂ ಸೋಮಪಾ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ' ಧರ್ಮಾರ್ಥಕಾಮಗಳನ್ನೇ ವೇದಗಳು ತಿಳಿಸುವವೆಂದು

ಅಜ್ಞಾನಿಗಳು ಸೋಮಪಾನ ಮಾಡಿ ಪಾಪದಿಂದ ಶುದ್ಧರಾಗಿ ಯಜ್ಞಗಳಿಂದ ನನ್ನನ್ನು ಪೂಜಿಸಿ ಸ್ವರ್ಗವನ್ನು ಪ್ರಾರ್ಥಿಸುವರು. 'ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ' ಅಜ್ಞಾನಿಗಳು ಇಷ್ಟಾ ಪೂರ್ತಗಳನ್ನೇ ಅತ್ಯಂತಶ್ರೇಷ್ಠವೆಂದು ತಿಳಿದು ಮತ್ತೊಂದನ್ನು ಶ್ರೇಯಸ್ಸೆಂದು ತಿಳಿಯುವದಿಲ್ಲ. ಮುಂತಾದ ವಾಕ್ಯಗಳು ತ್ರಿವರ್ಗವು ಅನರ್ಥವೆಂದು ತಿಳಿಸುವವು. ।।೨।।

ವೈಷಯಿಕ ಸುಖಭೋಗವೆಂಬುದು ಶ್ರೇಯಸ್ಸಾಧನವಾದ್ದರಿಂದ ಅವರು ಹೇಳಿದ್ದು ಗ್ರಾಹ್ಯವೇಕಲ್ಲ ಎಂದರೆ ಹೇಳುವರು-

**ಯದುಕ್ತ್ಯಾ ನ ಪ್ರಬುಧ್ಯೇತ ಸುಪ್ತಸ್ತ್ವಜ್ಞಾನನಿದ್ರಯಾ ।**
**ನ ಶ್ರದ್ದಧ್ಯಾನ್ಮತಂ ತಸ್ಯ ಯಥಾಽಂಧೋ ಹ್ಯಂಧನಾಯಕಃ ।।೩।।**

**ಅಜ್ಞಾನನಿದ್ರಯಾ ಸುಪ್ತಃ** ಅಜ್ಞಾನವೆಂಬ ನಿದ್ದೆಯಿಂದ ಅಂದರೆ ಅವಿದ್ಯೆಯಿಂದ ಸಂಸಾರದಲ್ಲಿ ಬಿದ್ದ ಮನುಷ್ಯನು **ಯದುಕ್ತ್ಯಾ** ಯಾವ ಗುರುವಿನ ಮಾತಿನಿಂದ **ನ ಪ್ರಬುಧ್ಯೇತ** ಎಚ್ಚೆತ್ತುಕೊಳ್ಳುವದಿಲ್ಲವೋ, ಅಂತಹ ಆತ್ಯಂತಿಕಸುಖಸಾಧನವಾದ ಅಜ್ಞಾನನಿವರ್ತಕವಾದ ಭಗವಂತನ ಜ್ಞಾನವನ್ನು ಪಡೆಯುವದಿಲ್ಲವೋ **ತಸ್ಯ** ಆ ಗುರುವಿನ **ಮತಂ** ಮತವನ್ನು **ನ ಶ್ರದ್ದಧ್ಯಾತ್** ನಂಬಬಾರದು **ಯಥಾ** ಹೇಗೆಂದರೆ **ಅಂಧಃ** ಕುರುಡನು **ಅಂಧನಾಯಕಃ** ಕುರುಡನನ್ನೇ ಮಾರ್ಗದರ್ಶಕನನ್ನಾಗಿ ಹೊಂದಿದಂತೆ **ಹಿ** ಇಬ್ಬರೂ ಕುರುಡರು ಆದ್ದರಿಂದ ಮಾರ್ಗಜ್ಞಾನವು ಆಗುವದಿಲ್ಲ.

ವಿಶೇಷ ಃ- ಇಬ್ಬರೂ ಕುರುಡರಾದ್ದರಿಂದ ಮಾರ್ಗಜ್ಞಾನವು ಆಗುವದಿಲ್ಲ. ಅದರಂತೆ ಇಲ್ಲಿಯೂ ಅಯೋಗ್ಯ ಉಪದೇಶದಿಂದ ಅಜ್ಞಾನಿಗೆ ಜ್ಞಾನಹುಟ್ಟುವದಿಲ್ಲ. ಆದ್ದರಿಂದ ಆ ಮಾತಿನಲ್ಲಿ ಶ್ರದ್ಧೆ ಬೇಡ. ಸಂಸಾರಕ್ಕೆ ಕಾರಣವಾದ ಅಜ್ಞಾನವಿರುವಾಗ ಆಗುವ ವೈಷಯಿಕಸುಖವು ದುಃಖದಿಂದ ಕೂಡಿದ್ದು. ಕಾರಣ ಅನರ್ಥರೂಪವೇ. ಆ ಕಾರಣಕ್ಕಾಗಿ ಗ್ರಾಹ್ಯವಲ್ಲ. ।।೩।।

'ಸಮೂಲಘಾತಮಘಂತಃ ಪರಾನ್ ನೋದ್ಯಂತಿ ಭೂಭೃತಃ' ಶತ್ರುಗಳನ್ನು ಮೂಲಸಹಿತ ನಾಶಮಾಡದಿರುವ ರಾಜರು ಅಭ್ಯುದಯವನ್ನು ಹೊಂದುವದಿಲ್ಲ.

'ನಿಕ್ಷಿಪ್ಯದರ್ಚಿಷಂ ಕಕ್ಷೇ ಶೇರತೇ ತೇಽಭಿಮಾರುತಂ' ಹುಲ್ಲಿನಲ್ಲಿ ಬೆಂಕಿಯನ್ನು ಇಟ್ಟು ಗಾಳಿಗೆ ಎದುರಾಗಿ ಹೋಗುವದು.

'ಆಪತ್ಸು ಮಿತ್ರಂ ಜಾನೀಯಾತ್ ಪುತ್ರಮುತ್ತರಜನ್ಮನಿ' ವಿಪತ್ತುಗಳು ಬಂದಾಗ ಸ್ನೇಹಿತನು, ಮುಂದಿನ ಜನ್ಮಕ್ಕಾಗಿ ಮಗನು ಎಂದು ತಿಳಿಯಬೇಕು.

**ಪ್ರಹ್ಲಾದ ಉವಾಚ**

**ಹಂತಾರ್ಭಕಾ ಮೇ ಶೃಣುತ ವಚೋ ವಃ ಸರ್ವತಃ ಶಿವಮ್ ।**
**ವಯಸ್ಯಾನ್ ಪಶ್ಯತ ಮೃತಾನ್ ಕ್ರೀಡಾಂಧಾ ಮಾ ಪ್ರಮಾದ್ಯಥ ॥೧॥**

**ಹಂತ** ಅಯ್ಯೋ **ಅರ್ಭಕಾಃ** ದೈತ್ಯಬಾಲಕರೇ **ಮೇ** ನನ್ನ **ವಚಃ** ಮಾತನ್ನು **ಶೃಣುತ** ಕೇಳಿರಿ **ವಃ** ನಿಮಗೆ **ಸರ್ವತಃ** ಎಲ್ಲರಿಂದಲೂ **ಶಿವಂ** ಸುಖವು **ಸ್ಯಾತ್** ಆಗುವದು **ವಃ** ನಿಮಗೆ **ಸರ್ವತಃ** ಎಲ್ಲ ರೀತಿಯಿಂದಲೂ **ಶಿವಂ** ಶುಭಕರವಾದ **ವಚಃ** ಮಾತನ್ನು **ಶೃಣುತ** ಕೇಳಿರಿ. **ಮೃತಾನ್** ಮರಣಹೊಂದಿದ **ವಯಸ್ಯಾನ್** ಸ್ನೇಹಿತರನ್ನು **ಪಶ್ಯತ** ನೋಡಿರಿ. ಈ ದರ್ಶನದಿಂದ ವೈರಾಗ್ಯವನ್ನು ಹೊಂದಿರಿ ಹೀಗೆ ಸಂಸಾರದಲ್ಲಿ ವಿರಕ್ತಿ ಹುಟ್ಟಿಸುವದರಿಂದ ಇದು ಪುರುಷಾರ್ಥ(ಮೋಕ್ಷ)ಕ್ಕೆ ಕಾರಣವಾಗಿದೆ ಆದ್ದರಿಂದ ಮಂಗಳಕರವೆಂದರ್ಥ. ಹೀಗೆ ಹೇಳಿದ್ದರಿಂದ ಈಗ ನಮಗೆ ಬಾಲ್ಯ, ಮುಂದೆ ಶ್ರೇಯಸ್ಸಂಪಾದನೆಗೆ ಪ್ರಯತ್ನಿಸುತ್ತೇವೆ ಎಂಬ ಆಶೆಯು ನಿರಾಕೃತವಾಯಿತು. ನಮ್ಮ ಆಯುಷ್ಯವು ನಮ್ಮ ಕೈಯಲ್ಲಿಲ್ಲ. **ಕ್ರೀಡಾಂಧಾಃ** ಆಟದಲ್ಲಿ ಆಸಕ್ತರಾಗಿ, ಕುರುಡರಾಗಿ **ಮಾ ಪ್ರಮಾದ್ಯಥ** ಪ್ರಮಾದ ಹೊಂದಬೇಡಿರಿ. ॥೧॥

ಕ್ರೀಡೆಯಲ್ಲಿ ಆಸಕ್ತರಾಗುವದು ಹುಡುಗರ ಸ್ವಭಾವವೆಂದರೆ ಹೇಳುತ್ತಾರೆ-

**ನ ಪುರಾ ವಿವಶಂ ಬಾಲಾ ಆತ್ಮನೋಽರ್ಥೇ ಪ್ರಿಯೈಷಿಣಃ ।**
**ಗುರೂಕ್ತಮಪಿ ನ ಗ್ರಾಹ್ಯಂ ಯದನರ್ಥೇಽರ್ಥಕಲ್ಪನಮ್ ॥೨॥**

**ಪುರಾ** ಹಿಂದೆ **ಬಾಲಾಃ** ಮಾರ್ಕಂಡೇಯರೇ ಮೊದಲಾದ ಬಾಲಕರು **ಆತ್ಮನಃ ಅರ್ಥೇ** ಹುಟ್ಟಿದಾಗಿನಿಂದ ತಮ್ಮ ಶ್ರೇಯಸ್ಸಿಗಾಗಿ **ಪ್ರಿಯೈಷಿಣಃ ಸಂತಃ** ಶ್ರೇಯಃಸಾಧನವಿಷಯವನ್ನೇ ವಿಚಾರಮಾಡುವವರಾಗಿ **ಆತ್ಮನಃ** ಶ್ರೀಹರಿಯ **ಪ್ರಿಯೈಷಿಣಃ** ಜ್ಞಾನವನ್ನೇ ಇಚ್ಛಿಸುವವರಾಗಿ **ವಿವಶಂ** ಕ್ರೀಡೆಯಲ್ಲಿ ವಿವಶವಾದುದನ್ನು **ನ ಕುರ್ವಂತಿ** ಮಾಡುತ್ತಿರಲಿಲ್ಲ. **ಯತ್** ಯಾವ ಕಾರಣ **ಅನರ್ಥೇ** ವಾಸ್ತವಿಕವಾಗಿ ಸಂಸಾರಕ್ಕೆ ಕಾರಣವಾದ್ದರಿಂದ ಪುರುಷಾರ್ಥವಲ್ಲದ ಈ ತ್ರಿವರ್ಗದಲ್ಲಿ **ಅರ್ಥಕಲ್ಪನಂ** ಇದೇ ಪುರುಷಾರ್ಥವೆಂದು ಆರೋಪಮಾಡಿ ಹೇಳುತ್ತಿರುವರೋ **ತತ್** ಆ ಕಾರಣ **ಗುರೂಕ್ತಮಪಿ** ನಮ್ಮ ಗುರುಗಳಾದ ಶಂಡಾಮರ್ಕರು ಹೇಳಿದ್ದೇ ಆದರೂ **ನ ಗ್ರಾಹ್ಯಂ** ಉತ್ತಮವಾದ ವಿದ್ಯೆ ಎಂದು ಕಲಿಯತಕ್ಕದ್ದಲ್ಲ. ನಮ್ಮ ಗುರುಗಳು ಹೇಳುತ್ತಿರುವ ವಿದ್ಯೆಯು ಶ್ರೇಯಸ್ಸಾಧನವಲ್ಲವೆಂದರ್ಥ.

ವಿಶೇಷ :- 'ತ್ರೈವಿದ್ಯಾಂ ಮಾಂ ಸೋಮಪಾ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ' ಧರ್ಮಾರ್ಥಕಾಮಗಳನ್ನೇ ವೇದಗಳು ತಿಳಿಸುವವೆಂದು

ಅಜ್ಞಾನಿಗಳು ಸೋಮಪಾನ ಮಾಡಿ ಪಾಪದಿಂದ ಶುದ್ಧರಾಗಿ ಯಜ್ಞಗಳಿಂದ ನನ್ನನ್ನು ಪೂಜಿಸಿ ಸ್ವರ್ಗವನ್ನು ಪ್ರಾರ್ಥಿಸುವರು. 'ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ' ಅಜ್ಞಾನಿಗಳು ಇಷ್ಟಾ ಪೂರ್ತಗಳನ್ನೇ ಅತ್ಯಂತಶ್ರೇಷ್ಠವೆಂದು ತಿಳಿದು ಮತ್ತೊಂದನ್ನು ಶ್ರೇಯಸ್ಸೆಂದು ತಿಳಿಯುವದಿಲ್ಲ. ಮುಂತಾದ ವಾಕ್ಯಗಳು ತ್ರಿವರ್ಗವು ಅನರ್ಥವೆಂದು ತಿಳಿಸುವವು. ।।೨।।

ವೈಷಯಿಕ ಸುಖಭೋಗವೆಂಬುದು ಶ್ರೇಯಸ್ಸಾಧನವಾದ್ದರಿಂದ ಅವರು ಹೇಳಿದ್ದು ಗ್ರಾಹ್ಯವೇಕಲ್ಲ ಎಂದರೆ ಹೇಳುವರು-

**ಯದುಕ್ತ್ಯಾ ನ ಪ್ರಬುಧ್ಯೇತ ಸುಪ್ತಸ್ತ್ವಜ್ಞಾನನಿದ್ರಯಾ ।**
**ನ ಶ್ರದ್ದಧ್ಯಾನ್ಮತಂ ತಸ್ಯ ಯಥಾಽಂಧೋ ಹ್ಯಂಧನಾಯಕಃ ।।೩।।**

**ಅಜ್ಞಾನನಿದ್ರಯಾ ಸುಪ್ತಃ** ಅಜ್ಞಾನವೆಂಬ ನಿದ್ದೆಯಿಂದ ಅಂದರೆ ಅವಿದ್ಯೆಯಿಂದ ಸಂಸಾರದಲ್ಲಿ ಬಿದ್ದ ಮನುಷ್ಯನು **ಯದುಕ್ತ್ಯಾ** ಯಾವ ಗುರುವಿನ ಮಾತಿನಿಂದ **ನ ಪ್ರಬುಧ್ಯೇತ** ಎಚ್ಚೆತ್ತುಕೊಳ್ಳುವದಿಲ್ಲವೋ, ಅಂತಹ ಆತ್ಯಂತಿಕಸುಖಸಾಧನವಾದ ಅಜ್ಞಾನನಿವರ್ತಕವಾದ ಭಗವಂತನ ಜ್ಞಾನವನ್ನು ಪಡೆಯುವದಿಲ್ಲವೋ **ತಸ್ಯ** ಆ ಗುರುವಿನ **ಮತಂ** ಮತವನ್ನು **ನ ಶ್ರದ್ದಧ್ಯಾತ್** ನಂಬಬಾರದು **ಯಥಾ** ಹೇಗೆಂದರೆ **ಅಂಧಃ** ಕುರುಡನು **ಅಂಧನಾಯಕಃ** ಕುರುಡನನ್ನೇ ಮಾರ್ಗದರ್ಶಕನನ್ನಾಗಿ ಹೊಂದಿದಂತೆ **ಹಿ** ಇಬ್ಬರೂ ಕುರುಡರು ಆದ್ದರಿಂದ ಮಾರ್ಗಜ್ಞಾನವು ಆಗುವದಿಲ್ಲ.

ವಿಶೇಷ ಃ- ಇಬ್ಬರೂ ಕುರುಡರಾದ್ದರಿಂದ ಮಾರ್ಗಜ್ಞಾನವು ಆಗುವದಿಲ್ಲ. ಅದರಂತೆ ಇಲ್ಲಿಯೂ ಅಯೋಗ್ಯ ಉಪದೇಶದಿಂದ ಅಜ್ಞಾನಿಗೆ ಜ್ಞಾನಹುಟ್ಟುವದಿಲ್ಲ. ಆದ್ದರಿಂದ ಆ ಮಾತಿನಲ್ಲಿ ಶ್ರದ್ಧೆ ಬೇಡ. ಸಂಸಾರಕ್ಕೆ ಕಾರಣವಾದ ಅಜ್ಞಾನವಿರುವಾಗ ಆಗುವ ವೈಷಯಿಕಸುಖವು ದುಃಖದಿಂದ ಕೂಡಿದ್ದು. ಕಾರಣ ಅನರ್ಥರೂಪವೇ. ಆ ಕಾರಣಕ್ಕಾಗಿ ಗ್ರಾಹ್ಯವಲ್ಲ. ।।೩।।

'ಸಮೂಲಘಾತಮಘಂತಃ ಪರಾನ್ ನೋದ್ಯಂತಿ ಭೂಭೃತಃ' ಶತ್ರುಗಳನ್ನು ಮೂಲಸಹಿತ ನಾಶಮಾಡದಿರುವ ರಾಜರು ಅಭ್ಯುದಯವನ್ನು ಹೊಂದುವದಿಲ್ಲ.

'ನಿಕ್ಷಿಪ್ಯ ದರ್ಚಿಷಂ ಕಕ್ಷೇ ಶೇರತೇ ತೇಽಭಿಮಾರುತಂ' ಹುಲ್ಲಿನಲ್ಲಿ ಬೆಂಕಿಯನ್ನು ಇಟ್ಟು ಗಾಳಿಗೆ ಎದುರಾಗಿ ಹೋಗುವದು.

'ಆಪತ್ಸು ಮಿತ್ರಂ ಜಾನೀಯಾತ್ ಪುತ್ರಮುತ್ತರಜನ್ಮನಿ' ವಿಪತ್ತುಗಳು ಬಂದಾಗ ಸ್ನೇಹಿತನು, ಮುಂದಿನ ಜನ್ಮಕ್ಕಾಗಿ ಮಗನು ಎಂದು ತಿಳಿಯಬೇಕು.

'ಯ ಉದಾಸ್ತೇ ಕಾರ್ಯೇಷು ಸ ನಿಂದ್ಯೋ ಯತತೋ ನರಃ' ಯಾವನು ತನ್ನ ಕಾರ್ಯದಲ್ಲಿ ಉದಾಸೀನನಾಗಿರುವನೋ ಆ ಮನುಷ್ಯನು ಪ್ರಯತ್ನದಿಂದ ನಿಂದ್ಯನು.

ಈ ಮೊದಲಾದ ನೀತಿ ಶಾಸ್ತ್ರವು ಶತ್ರು, ಮಿತ್ರ, ಉದಾಸೀನರನ್ನು ತಿಳಿಸುವದು. ಅದನ್ನು ಈ ಗುರುಗಳು ನಮಗೆ ತಿಳಿಸುತ್ತಿದ್ದಾರೆ. ಅಂದ ಮೇಲೆ ಅವರ ಮತದಲ್ಲಿ ವಿಶ್ವಾಸ ಇಡಬೇಡಿರೆಂದು ಹೇಗೆ ಹೇಳುತ್ತಿರುವೆ ಎಂದರೆ ಹೇಳುತ್ತಾರೆ-

**ಕಃ ಶತ್ರುಃ ಕ ಉದಾಸೀನಃ ಕಿಂ ಮಿತ್ರಂ ಚೇಹ ಆತ್ಮನಃ ।**
**ಭವತ್ಸ್ವಪಿ ನಯೈಃ ಕಿಂ ಸ್ಯಾದ್ದೈವಂ ಸಂಪದ್ವಿಪತ್ಪದಮ್ ।।೪।।**

**ಇಹ** ಇಲ್ಲಿ **ಆತ್ಮನಃ** ನನಗೆ **ಶತ್ರುಃ ಕಃ** ಶತ್ರುವು ಯಾರೂ ? **ಭವತ್ಸು ಅಪಿ** ನಿಮಗೂ **ಕಃ ಶತ್ರುಃ** ಯಾರು ಶತ್ರುಗಳು **ಕಃ ಉದಾಸೀನಃ** ಉದಾಸೀನರು ಯಾರು **ಮಿತ್ರಂ ಕಃ** ಮಿತ್ರರು ಯಾರು ? ಯಾರೂ ಇಲ್ಲ **ಅತಃ** ಆದ್ದರಿಂದ **ನಯೈಃ** ನೀತಿಶಾಸ್ತ್ರವನ್ನು ಕೇಳುವದರಿಂದ ಉಂಟಾದ ನೀತಿಗಳಿಂದ **ಕಿಂ ಸ್ಯಾತ್** ಏನು ಪ್ರಯೋಜನ ? ಏನೂ ಪ್ರಯೋಜನವಿಲ್ಲ. ನೀತಿಗಳಿಂದ ಆಪತ್‌ಪರಿಹಾರ ಸಂಪತ್‌ಪ್ರಾಪ್ತಿಯಾಗುವದು ಎಂದರೆ ಹೇಳುವರು **ಸಂಪದ್ವಿಪತ್ಪದಂ** ಸಂಪತ್ತು ವಿಪತ್ತುಗಳಿಗೆ ನಿಮಿತ್ತವು **ದೈವಂ ಏವ** ಸರ್ವೋತ್ಕೃಷ್ಟನಾದ ಶ್ರೀಮನ್ನಾರಾಯಣನೇ ಹೊರತು ನೀತಿಶಾಸ್ತ್ರಜ್ಞನಲ್ಲ. ಅವನಿಗೆ ಅನ್ವಯವ್ಯತಿರೇಕವಿಲ್ಲ ಅಂದರೆ ನೀತಿಶಾಸ್ತ್ರವಂತನಿಗೆ ಸಂಪತ್ ಪ್ರಾಪ್ತಿ ವಿಪತ್ಪರಿಹಾರ, ನೀತಿಶಾಸ್ತ್ರ ತಿಳಿಯದವನಿಗೆ ಇಲ್ಲ ಎಂಬುದಿಲ್ಲ ಎಂದರ್ಥ. ನಮ್ಮ ತಂದೆ ಮೊದಲಾದವರಲ್ಲಿ ಕಂಡಿದೆ ಎಂದರೆ **ಆತ್ಮನಃ** ದೇಹಕ್ಕೆ **ಭವತ್ಸು** ನಿಮ್ಮಲ್ಲಿರುವ **ನಯೈಃ ಅಪಿ** ನೀತಿಗಳಿಂದ **ಕಿಂ ಸ್ಯಾತ್** ಏನಾದೀತು? ಬರುವ ಮರಣಾದಿಗಳು ಬಂದೇ ಬರುವವು ಅವುಗಳನ್ನು ತಪ್ಪಿಸಲಾಗುವದಿಲ್ಲ. ಕಾಮಕ್ರೋಧಾದಿಗಳು ಅಜ್ಞಾನದಿಂದ ಬಂದವುಗಳು ಅವುಗಳನ್ನು ಕೇವಲ ನೀತಿಯಿಂದ ಹೋಗಲಾಡಿಸಲಾಗುವದಿಲ್ಲ ಎಂದೂ ಅರ್ಥ. ।।೪।।

ನೀತಿ ಶಾಸ್ತ್ರಬೇಡ. ಶ್ರೇಯಸ್ಸಾಧನವಾದ ಪ್ರವೃತ್ತಿಧರ್ಮ ತಿಳಿಸುವ ಶಾಸ್ತ್ರವನ್ನು ಅಭ್ಯಾಸ ಮಾಡಬಹುದಲ್ಲ ಎಂದರೆ ಹೇಳುವರು-

**ಯೋ ನ ಹಿಂಸ್ಯಾದ್ಧರ್ಮಕಾಮಮಾತ್ಮಾನಂ ಸ್ವಜನೇಽವಶಃ ।**
**ಪುನಃ ಶ್ರೀಲೋಕಯೋರ್ಹೇತುಃ ಸ ಮುಕ್ತಾಂಧ್ಯೋಽತಿದುರ್ಲಭಃ ।।೫।।**

**ಯಃ** ಯಾವನು **ಆತ್ಮಾನಂ** ಶ್ರೀಹರಿಯನ್ನು ಉದ್ದೇಶಿಸಿ **ಧರ್ಮಕಾಮಂ** ಧರ್ಮದ ಇಚ್ಛೆಯನ್ನು **ನ ಹಿಂಸ್ಯಾತ್** ಬಿಡುವದಿಲ್ಲವೋ, ಧರ್ಮಾನುಷ್ಠಾನ

ಮಾಡುತ್ತಾನೆಯೋ **ಸ್ವಜನೇ** ತನ್ನ ಜೊತೆಗೆ ಹುಟ್ಟಿದ ಇಂದ್ರಿಯಗಳಿಗೆ **ಅವಶಃ** ವಶನಲ್ಲವೋ, ಇಂದ್ರಿಯಗಳನ್ನು ತನ್ನ ವಶದಲ್ಲಿಟ್ಟು ಕೊಂಡಿರುವನೋ ಅಥವಾ **ಸ್ವಜನೇ** ಮಕ್ಕಳು ಮಡದಿ ಮಿತ್ರ ಮೊದಲಾದ ತನ್ನ ಜನರಿಗೆ **ಅವಶಃ** ಅಧೀನನಲ್ಲವೋ ತನ್ನ ಅನುಷ್ಠಾನಕ್ಕೆ ಅನುಕೂಲರಾದ ಸ್ವಜನರನ್ನು ಹೊಂದಿರುವನೋ ಆದ್ದರಿಂದಲೇ **ಮುಕ್ತಾಂಧ್ಯಃ** ಕುರುಡುತನವನ್ನು(ಅಜ್ಞಾನವನ್ನು)ಬಿಟ್ಟಿರುವನೋ **ಪುನಃ** ಮತ್ತು **ಶ್ರೀಲೋಕಯೋಃ** ಐಹಿಕಸಂಪತ್ತು ಮತ್ತು ಸ್ವರ್ಗಾದಿಲೋಕಗಳಿಗೆ **ಹೇತುಃ** ಕಾರಣನೋ ಅಥವಾ **ಪುನಃ** ನಿವೃತ್ತಿಧರ್ಮಾನುಷ್ಠಾನಾನಂತರ **ಶ್ರೀಲೋಕಯೋಃ ಹೇತುಃ** ಐಹಿಕ ಆಮುಷ್ಮಿಕ ಸಂಪತ್ತಿಗೆ ಕಾರಣನೋ **ಸಃ** ಅಂತಹ ಉತ್ತಮ ಪುರುಷನು **ಅತಿದುರ್ಲಭಃ** ಶ್ರೀಹರಿಯಲ್ಲಿಯೇ ಮನಸ್ಸುಳ್ಳವನಾದ್ದರಿಂದ ಕೋಟಿಗೊಬ್ಬನು (ಅತ್ಯಂತ ದುರ್ಲಭನು.) **ಪುನಃ** ಪ್ರವೃತ್ತಧರ್ಮ-ನಿವೃತ್ತಿಧರ್ಮಗಳನ್ನು ಅನುಷ್ಠಾನ ಮಾಡುವವರ ಫಲದಲ್ಲಿ ಭೇದವಿದೆ. ಪ್ರವೃತ್ತಿಧರ್ಮಾನುಷ್ಠಾನ ಮಾಡುವವನು 'ಇಮಂ ಲೋಕಹೀನತರಂ ವಾ ವಿಶಂತಿ' 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ' ಎಂಬ ವಾಕ್ಯಗಳಂತೆ ಸ್ವರ್ಗಾದಿಗಳಿಂದ ಪತನ ಹೊಂದುವನು. ನಿವೃತ್ತಿಧರ್ಮಾನುಷ್ಠಾನ ಮಾಡುವವನು ಜ್ಞಾನವೆಂಬ ಮೋಕ್ಷಸಾಮಗ್ರಿಯನ್ನು ಸಂಪಾದಿಸಿಕೊಂಡು ಅದರಿಂದ ಪಾಪವಿಲ್ಲದ ವೈಕುಂಠಲೋಕವನ್ನು ಸೇರುವನು. 'ಸ ಏತಸ್ಮಾತ್ ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' 'ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧಸತ್ವಃ ಕಾಮಯತೇ ಯಾಂಶ್ಚ ಕಾಮಾನ್ ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್ ತಸ್ಮಾದಾತ್ಮಜ್ಞಂ ಹ್ಯರ್ಚಯೇತ್ ಭೂತಿಕಾಮಃ' ಮುಂತಾದ ವಾಕ್ಯಗಳು ಶಾಶ್ವತಲೋಕಗಳನ್ನು ತಿಳಿಸುವವು.

೨) ಅಥವಾ **ಯಃ** ಯಾವನು **ಆತ್ಮಾನಂ** ತನ್ನ **ಧರ್ಮಕಾಮಂ** ಧರ್ಮಸಹಿತವಾದ ಕಾಮವುಳ್ಳ ಮನುಷ್ಯನನ್ನು **ನ ಹಿಂಸ್ಯಾತ್** ಹಿಂಸಿಸುವದಿಲ್ಲವೋ ತನ್ನನ್ನು ಪ್ರವೃತ್ತಿಧರ್ಮಾಕಾಂಕ್ಷಿಯನ್ನಾಗಿ ಮಾಡುವದಿಲ್ಲವೋ **ಧರ್ಮಕಾಮಂ** ಧಾರಕನಾದ ಶ್ರೀಹರಿಯಲ್ಲಿ ಕಾಮವುಳ್ಳ ತನ್ನನ್ನು ಅದರಿಂದ ತಪ್ಪಿಸುವದಿಲ್ಲವೋ **ಸಜ್ಜನೇ ವಶಃ** ಸಜ್ಜನ ಸೇವಾನಿರತನಾಗಿ ಅವರ ವಶನಾಗಿರುವನೋ ಮತ್ತು **ಶ್ರೀ** ಐಹಿಕಸಂಪತ್ತು ತಾನಾಗಿ ಬಂದದ್ದು **ಲೋಕ** ಅಪರೋಕ್ಷಜ್ಞಾನ ಇವುಗಳಿಗೆ ಪಾತ್ರನೋ **ಮುಕ್ತಾಂಧ್ಯಃ** ಅಜ್ಞಾನದಿಂದ ಬಿಡಲ್ಪಟ್ಟ ಅವನು **ಅತಿದುರ್ಲಭಃ** ದುರ್ಲಭನು. ಇಲ್ಲಿ ಪ್ರವೃತ್ತಿಧರ್ಮಾನುಷ್ಠಾನ ಮಾಡಿ ಅದರ ಫಲಾಪೇಕ್ಷೆಯಿಲ್ಲದೇ ಶ್ರೀಹರಿಯಲ್ಲಿಯೇ ಯಾವಾಗಲೂ ಭಕ್ತಿಯನ್ನು ಮಾಡುವ ಪುರುಷನು ಉತ್ತಮನೆಂದು ತಾತ್ಪರ್ಯ.

ವಿಶೇಷ :- ರಾಜಸೂಯಾದಿಯಾಗಗಳನ್ನು ಮಾಡಿ ಅಥವಾ ಮಾಡಿಸಿ ಮತ್ತೆ ಮತ್ತೆ ಸ್ವರಾಜ್ಯಸ್ವರ್ಗಗಳಿಗೆ ಕಾರಣನಾದವನು. ಜನನಮರಣಗಳ ಕೊನೆಯಲ್ಲಿ

ಇಲ್ಲವಾದ್ದರಿಂದ ಕುರುಡನೆನಿಸುವನು. ಇವನು ಸುಲಭ. ಆದರೆ ಇದಕ್ಕೆ ವಿರುದ್ಧವಾಗಿ ನಿವೃತ್ತಿಧರ್ಮಾನುಷ್ಠಾನಮಾಡಿ ಶ್ರೀಹರಿಯಲ್ಲಿ ಮನಸ್ಸುಳ್ಳವನು ಕುರುಡತನವನ್ನು ಹೋಗಲಾಡಿಸಿಕೊಂಡವನು ಇವನು ಜನನಮರಣಗಳ ಕೊನೆಗಂಡವನು. ಇಂಥವನು ಅತ್ಯಂತ ದುರ್ಲಭ. ।।೫।।

ನಿವೃತ್ತಿಧರ್ಮಾನುಷ್ಠಾನವೇ ಶ್ರೇಯಸ್ಸಾಧನವೆಂದಾದರೂ ಅದನ್ನು ಮಾಡುವದಕ್ಕೆ ಈ ಬಾಲ್ಯವಯಸ್ಸು ಸಕಾಲವಲ್ಲ ವೃದ್ಧಾಪ್ಯದಲ್ಲಿ ಮಾಡುವದಿದ್ದೇ ಇದೆ. 'ಬಾಲ್ಯೇ ವಿದ್ಯಾಂ ನಿಷೇವ್ಯೇತ ಯೌವನೇ ದಾರಸಂಗ್ರಹಂ । ಸ್ಥಾವೀರ್ಯೇ ಮೋಕ್ಷಮಾತಿಷ್ಠೇತ್ ಸರ್ವದಾ ಧರ್ಮಮಾಚರೇತ್' ಬಾಲ್ಯದಲ್ಲಿ ವಿದ್ಯೆಯನ್ನು, ಯೌವನದಲ್ಲಿ ಹೆಂಡತಿಯನ್ನು, ಮುಪ್ಪಿನ ಕಾಲದಲ್ಲಿ ಮೋಕ್ಷಸಾಧನೆಯನ್ನು ಎಲ್ಲ ಕಾಲಗಳಲ್ಲಿ ಧರ್ಮವನ್ನು ಸಂಪಾದಿಸಬೇಕು ಎಂದು ಸ್ಮೃತಿವಚನವಿದೆ. ಆದ್ದರಿಂದ ಮುಪ್ಪಿನ ಕಾಲದಲ್ಲಿ ನಿವೃತ್ತಿಧರ್ಮವನ್ನು ಏಕೆ ಮಾಡಬಾರದು ಎಂದರೆ ಹೇಳುತ್ತಾರೆ-

**ಕೌಮಾರ ಆಚರೇತ್ಪ್ರಾಜ್ಞೋ ಧರ್ಮಾನ್ ಭಾಗವತಾನಿಹ ।**
**ದುರ್ಲಭಂ ಮಾನುಷಂ ಜನ್ಮ ತದಪ್ಯಧ್ರುವಮರ್ಥದಮ್ ।।೬।।**

**ಪ್ರಾಜ್ಞಃ** ಜ್ಞಾನಿಯಾದವನು **ಇಹ** ಬಂದಿರುವ ಮನುಷ್ಯಜನ್ಮದಲ್ಲಿ ಬಂದೊದಗಿದ **ಕೌಮಾರೇ** ಬಾಲ್ಯಾವಸ್ಥೆಯಲ್ಲಿ **ಭಾಗವತಾನ್ ಧರ್ಮಾನ್** ಶ್ರೀಹರಿಗೆ ಪ್ರೀತಿಕರಗಳಾದ ಧರ್ಮಗಳನ್ನು **ಆಚರೇತ್** ಆಚರಿಸಬೇಕು. ಸ್ಮೃತಿಯಲ್ಲಿ 'ಸರ್ವದಾ' ಎಂದು ಹೇಳಿದ್ದರಿಂದ ವಿದ್ಯಾಭ್ಯಾಸಕಾಲದಲ್ಲಿಯೂ ಧರ್ಮಾನುಷ್ಠಾನಕರ್ತವ್ಯವೆಂದಾದ್ದರಿಂದ ಸ್ಮೃತಿವಿರೋಧವೇನೂ ಇಲ್ಲ. ಅನೇಕ ಯೋನಿಗಳಲ್ಲಿರುವ ದೇಹವು ಮೋಕ್ಷಕ್ಕೆ ಸಾಧನವಾಗುತ್ತದೆ ಎಂದರೆ ಹೇಳುತ್ತಾರೆ **ಯತ್** ಯಾವ **ಮಾನುಷಂ ಜನ್ಮ** ಮನುಷ್ಯನಾಗಿ ದೇಹವನ್ನು ಹೊಂದಿರುವದು ಇದೆಯೋ **ತದಪಿ** ಅದುವೇ **ಅರ್ಥದಂ** ವೇದಾಧಿಕಾರ ಗುರೂಪಸತ್ತಿಗಳಿಂದ ಜ್ಞಾನಮೊದಲಾದ ಪ್ರಯೋಜನವನ್ನು ತಂದು ಕೊಡುವದು ಬೇರೆ ತಿರ್ಯಗಾದಿದೇಹಗಳಲ್ಲವೆಂದರ್ಥ. **ತತ್** ಆ ಮನುಷ್ಯದೇಹವು **ದುರ್ಲಭಂ** ಸುಲಭವಾಗಿ ಸಿಗುವದಿಲ್ಲ. ಆದರೂ ಬಹುಕಾಲವಿರುವದಲ್ಲವೇ ಎಂದರೆ ಅಲ್ಲವೆಂದು ಹೇಳುತ್ತಾರೆ. **ಅಧ್ರುವಂ** ಬಹುಕಾಲ ಇರುವದಿಲ್ಲ. 'ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವ ಜಾಯತೇ ಪುನಃ' ಸಸ್ಯಗಳಂತೆ ಮನುಷ್ಯನು ಸಾಯುವನು ಮತ್ತೆ ಹುಟ್ಟುವನು 'ಅಪಿ ಸರ್ವಂ ಜೀವಿತಂ ಅಲ್ಪಮೇವ'(ಎಲ್ಲರ ಜೀವಿತ ಕಾಲವೂ ಅಲ್ಪವೇ) ಮುಂತಾದ ಶ್ರುತಿಗಳು ಮನುಷ್ಯದೇಹವು ಚಿರಸ್ಥಾಯಿ ಅಲ್ಲ ಎಂಬುದನ್ನು ತಿಳಿಸುವವು. ಅಧ್ರುವವಾಗಿದ್ದರೂ ಮನುಷ್ಯದೇಹಬರುವದೇ ದುರ್ಲಭ. ಅದರಲ್ಲಿಯೂ 'ಅರ್ಥದಂ' ಎಂದರೆ ಸಾಧನಾನುಕೂಲವಾದ ದೇಹ ಇನ್ನೂ

ದುರ್ಲಭ 'ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಂ' ಎಂಬ ವಾಕ್ಯವು ಇದನ್ನು ಸ್ಪಷ್ಟಪಡಿಸುತ್ತದೆ. ತಿರ್ಯಗಾದಿಜನ್ಮಗಳಲ್ಲಿ ಅಧಿಕಾರ ವಿಲ್ಲದಿರುವದರಿಂದ ಅಧಿಕಾರವಿರುವ ಮನುಷ್ಯಜನ್ಮವು ದುರ್ಲಭವಾದ್ದರಿಂದ, ಅದರಲ್ಲಿಯೂ ಜ್ಞಾನಾದಿಪ್ರಯೋಜನಕಾರಿ ದೇಹವು ದುರ್ಲಭತರವಾದ್ದರಿಂದ, ಅದೂ ಸ್ಥಿರವಲ್ಲದ್ದರಿಂದ ಬಾಲ್ಯದಲ್ಲಿಯೇ ಭಾಗವತಧರ್ಮಗಳನ್ನು ಆಚರಿಸಬೇಕು ಎಂದು ಅಭಿಪ್ರಾಯ. ಮೇಲೆ ಹೇಳಿದ ಸ್ಮೃತಿಯು ವೃದ್ಧಾಪ್ಯದಲ್ಲಿ ಧರ್ಮಾಚರಣೆ ಕರ್ತವ್ಯವೆಂದು ತಿಳಿಸುವದು ಹೊರತು ಬಾಲ್ಯದಲ್ಲಿ ಮಾಡಬಾರದೆಂದು ಹೇಳುವದಿಲ್ಲ.

ಮನುಷ್ಯದೇಹ ಹೇಗೆ ಪುರುಷಾರ್ಥಪ್ರದವಾಗುವದು? ದೇಹವೇ ಪುರುಷಾರ್ಥಪ್ರದವೆಂದಾದರೆ ಮನುಷ್ಯರೆಲ್ಲರಿಗೂ ಪುರುಷಾರ್ಥನೀಡಬೇಕು ಹಾಗೆ ಕಂಡಿಲ್ಲ ಕೇಳಿಲ್ಲ ಎಂದು ಶಂಕಿಸಿ ಹಾಗಾಗುವದಕ್ಕೆ ಮಾಡಬೇಕಾದ ಚಿಕಿತ್ಸೆಯನ್ನು ಹೇಳುತ್ತಾರೆ-

**ಯದಾ ಹಿ ಪುರುಷಸ್ಯೇಹ ವಿಷ್ಣೋಃ ಪಾದೋಪಸರ್ಪಣಮ್ ।**
**ಯದೇಷ ಸರ್ವಭೂತಾನಾಂ ಪ್ರಿಯ ಆತ್ಮೇಶ್ವರಃ ಸುಹೃತ್ ॥೭॥**

**ಯದಾ** ಯಾವಾಗ **ಪುರುಷಸ್ಯ** ಮುಮುಕ್ಷುವಾದ ಮನುಷ್ಯನಿಗೆ **ಇಹ** ಈ ಮನುಷ್ಯಜನ್ಮದಲ್ಲಿ **ವಿಷ್ಣೋಃ ಪಾದೋಪಸರ್ಪಣಂ** ಶ್ರೀಹರಿಯ ಪಾದಸೇವನೆಯು (ಸಂಭವತಿ) ಉಂಟಾಗುವದೋ **ತದಾ** ಆಗ **ಅರ್ಥದಂ** ಪುರುಷಾರ್ಥಪ್ರದವಾಗುವದು **ಹಿ** 'ಯಾವತ್ಸೇವಾಪರೇ ತತ್ವೇ ತಾವತ್ಸುಖವಿಶೇಷತಾ' ಎಷ್ಟೆಷ್ಟು ಸೇವಿಸುವನೋ ಅಷ್ಟಷ್ಟು ಸುಖವಿಶೇಷಕ್ಕೆ ಕಾರಣವಾಗುವದು **ಯತ್** ಏಕೆಂದರೆ **ಏಷಃ** ಈ ಶ್ರೀಹರಿಯು **ಸರ್ವಭೂತಾನಾಂ** ಎಲ್ಲ ಭೂತಗಳಿಗೂ **ಪ್ರಿಯಃ** ಪ್ರಿಯನು **ಆತ್ಮಾ** ಸ್ವಾಮಿಯು **ಈಶ್ವರಃ** ಮುಖ್ಯನಿಯಾಮಕನು **ಸುಹೃತ್** ನಿರ್ನಿಮಿತ್ತಬಂಧುವು. ಆದ್ದರಿಂದ ಅವನ ಸೇವೇಯೇ ಪುರುಷಾರ್ಥಪ್ರದ ಮತ್ತೊಬ್ಬರ ಸೇವೆಯಲ್ಲ .

ವಿಶೇಷ ಃ- 'ತದೇತತ್ಪ್ರೇಯಃ ಏಷ ಸರ್ವೇಶ್ವರಃ' ಮುಂತಾದ ಶ್ರುತಿಗಳು ಶ್ರೀಹರಿಯೇ ಭೂತಪ್ರಿಯ ಮುಂತಾಗಿ ಗುಣಯುಕ್ತನೆಂದು ತಿಳಿಸುವವು.

ಅಥವಾ ಮನುಷ್ಯದೇಹದಲ್ಲಿ ಯಾವಾಗ ನಿವೃತ್ತಿಧರ್ಮಾನುಷ್ಠಾನದಲ್ಲಿ ಮನಸ್ಸುಂಟಾಗುವದು ಎಂದರೆ ತಿಳಿಸುತ್ತಾರೆ. ಶ್ರೀಹರಿಯು ಭೂತಪ್ರಿಯತ್ವ-ಮೊದಲಾದಗುಣಯುಕ್ತನಾದ್ದರಿಂದ ಮುಮುಕ್ಷುವು ಅವನ ಸೇವೆಯನ್ನೇ ಮಾಡಬೇಕು. ಅದು ಮನುಷ್ಯಜನ್ಮದಲ್ಲಿ ಯಾವಾಗ ಉಂಟಾಗುವದೋ ಆವಾಗ ಭಾಗವತ-ಧರ್ಮಾನುಷ್ಠಾನಬುದ್ಧಿಯು ಬರುವದೆಂದು ಅನ್ವಯ ॥೭॥

ಈ ಕಾರಣದಿಂದಲೂ ಶ್ರೀಹರಿಸೇವಾರೂಪವಾದ ನಿವೃತ್ತಿಧರ್ಮಾನುಷ್ಠಾನ-ವನ್ನೇ ಮಾಡಬೇಕು ಪ್ರವೃತ್ತಿಧರ್ಮವನ್ನು ಮಾಡಬಾರದು. ವಿಷಯಸುಖಪ್ರಾಪ್ತಿಗಾಗಿ ಪ್ರವೃತ್ತಿಧರ್ಮಾನುಷ್ಠಾನವೆಂದೂ ಹೇಳಬಾರದು ದುಃಖದಂತೆ ಸುಖವೂ ಪ್ರವೃತ್ತಿಧರ್ಮಾನುಷ್ಠಾನವಿಲ್ಲದೆಯೇ ಸಿಗುವದೆಂದು ಹೇಳುವರು-

**ಸುಖಮೈಂದ್ರಿಯಕಂ ದೈತ್ಯಾ ದೇಹಯೋಗೇನ ದೇಹಿನಾಮ್ ।**
**ಸರ್ವತ್ರ ಲಭ್ಯತೇ ದೈವಾದ್ಯಥಾ ದುಃಖಮಯತ್ನತಃ ॥೮॥**

**ಹೇ ದೈತ್ಯಾಃ** ದೈತ್ಯವಂಶದಲ್ಲಿ ಹುಟ್ಟಿರುವ ಬಾಲಕರೇ **ದೇಹಿನಾಂ** ಜೀವರಿಗೆ **ದೇಹಯೋಗೇನ** ದೇಹಸಂಬಂಧದಿಂದ **ದೈವಾತ್** ಅದೃಷ್ಟಪ್ರೇರಕನಾದ ಶ್ರೀಹರಿಯಿಂದ **ಅಯತ್ನತಃ** ಪ್ರಯತ್ನಮಾಡದಿದ್ದರೂ **ದುಃಖಂ ಯಥಾ** ದುಃಖವು ಬರುವಂತೆ **ಐಂದ್ರಿಯಕಂ ಸುಖಂ** ಇಂದ್ರಿಯತೃಪ್ತಿರೂಪವಾದ ವಿಷಯಸುಖವು **ಸರ್ವತ್ರ** ಎಲ್ಲ ದೇಹಗಳಲ್ಲಿಯೂ **ಲಭ್ಯತೇ** ಬರುವದು.

'ಸುಖಸ್ಯಾನಂತರಂ ದುಃಖಂ ದುಃಖಸ್ಯಾನಂತರಂ ಸುಖಮ್' ಎಂಬ ವಾಕ್ಯಕ್ಕೆ ಅನುಗುಣವಾಗಿ ಆಯಾ ಕಾಲಕ್ಕೆ ದುಃಖವನ್ನು ತಂದು ಕೊಡುವ ಪ್ರಾರಬ್ಧಕರ್ಮ ಪ್ರೇರಕನಾದ ಶ್ರೀಹರಿಯು ತಪ್ಪದೇ ಆಯಾಕಾಲಕ್ಕೆ ಸುಖವನ್ನೂ ತಂದು ಕೊಡುವನೆಂದು ಹೇಳಿದಂತಾಯಿತು. ॥೮॥

**ತತ್ಪ್ರಯಾಸೋ ನ ಕರ್ತವ್ಯೋ ಆಯಾಸಾಯುರ್ವ್ಯಯಃ ಪರಮ್ ।**
**ನ ತಥಾ ವಿಂದತೇ ಕ್ಷೇಮಂ ಮುಕುಂದಚರಣಾಂಬುಜಮ್ ॥೯॥**

**ತತ್** ಆದ್ದರಿಂದ **ಪ್ರಯಾಸಃ** ಇಂದ್ರಿಯಸುಖಕ್ಕಾಗಿ ಪ್ರವೃತ್ತಿಧರ್ಮಾನುಷ್ಠಾನ ಮಾಡುವಲ್ಲಿ ಅತ್ಯಂತಕ್ಲೇಶವು **ನ ಕರ್ತವ್ಯಃ** ಮಾಡಬೇಕಿಲ್ಲ ಏಕೆಂದರೆ **ಪರಂ** ಕೇವಲ **ಆಯಾಸಾಯುರ್ವ್ಯಯಃ** ಆಯಾಸದಿಂದ ಆಯುಷ್ಯಹಾನಿಯೇ **ಅವಶಿಷ್ಯತೇ** ಉಳಿಯುವದು ಪ್ರವೃತ್ತಿಧರ್ಮಾನುಷ್ಠಾನವು ದುಃಖವಿಲ್ಲದ ಸ್ವರ್ಗಾದಿ-ಪ್ರದೋದ್ದೇಶದಿಂದ ಮಾಡುವಾಗ ದುಃಖಕ್ಕೆ ಸಮಾನವೆಂದು ಹೇಗೆ ನಿಂದಿಸುತ್ತೀರಿ ಎಂದರೆ ಹೇಳುತ್ತಾರೆ **ಮುಕುಂದಚರಣಾಂಬುಜಂ** ಮೋಕ್ಷಪ್ರದನಾದ ಶ್ರೀಹರಿಯ ಪಾದಾರವಿಂದಗಳನ್ನು **ಭಜನ್** ಸೇವಿಸುತ್ತ **ಯಥಾ** ಹೇಗೆ **ಕ್ಷೇಮಂ** ಶಾಶ್ವತಸುಖರೂಪ ಮೋಕ್ಷವನ್ನು **ವಿಂದತೇ** ಹೊಂದುವನೋ **ತಥಾ** ಹಾಗೆಯೇ **ನ** ಪ್ರವೃತ್ತಿ-ಧರ್ಮಾನುಷ್ಠಾನ ಮಾಡುವವನು ಹೊಂದುವದಿಲ್ಲ. ನಶ್ವರಸುಖವಾದ ಸ್ವರ್ಗಾದಿಗಳನ್ನೇ ಹೊಂದುವನೆಂದರ್ಥ. 'ಪ್ರವಾಹ್ಯೇತ ಅದೃಢಾ ಯಜ್ಞರೂಪಾ' ಹೇಗೆ ದೃಢವಲ್ಲದ ದೋಣಿಗಳು ಆಚೆ ದಡವನ್ನು ಸೇರಿಸದೇ ಮಧ್ಯದಲ್ಲಿ

ಮುಳಿಗಿಸುವವೋ ಹಾಗೆ ಯಜ್ಞರೂಪವಾದ ದೋಣಿಗಳು ಭಗವಂತನಿಗೆ ಪ್ರೀತಿಯನ್ನುಂಟು ಮಾಡಲಾರವು. ಅಥವಾ **ತಥಾ** ಹಾಗೆ ಪ್ರವೃತ್ತಿಧರ್ಮಾನುಷ್ಠಾನ ಮಾಡುವ ಪುರುಷನು ಕ್ಷೇಮಕರವಾದ ಶ್ರೀಹರಿಪಾದಾರವಿಂದಗಳನ್ನು **ನ ವಿಂದತೇ** ಹೊಂದುವದಿಲ್ಲವೆಂದೂ ಅನ್ವಯ ಮಾಡಬಹುದು ॥೯॥

**ತತೋ ಯತೇತ ಕುಶಲಃ ಕ್ಷೇಮಾಯ ಚ ತಮಾಶ್ರಿತಃ ।**
**ಶರೀರಂ ಪೌರುಷಂ ಯಾವನ್ನ ವಿಪದ್ಯೇತ ಪುಷ್ಕಲಮ್ ॥೧೦॥**

**ತತಃ** ಮತ್ತೊಬ್ಬರಿಂದ ಪ್ರಯೋಜನವಿಲ್ಲದಿರುವದರಿಂದಲೂ **ಕುಶಲಃ** ಪುರುಷಾರ್ಥವನ್ನು ಸಂಪಾದಿಸುವಲ್ಲಿ ಬುದ್ಧಿವಂತನಾದ ಅಧಿಕಾರಿಚೇತನನು **ಪುಷ್ಕಲಂ** ಪುಷ್ಟವಾದ **ಪೌರುಷಂ** ಬಲಿಷ್ಠನಾದ ಪುರುಷನಿಗೆ ಬಂದಿರುವ **ಶರೀರಂ** ಶರೀರವು **ಯಾವತ್** ಎಲ್ಲಿಯ ವರೆಗೆ **ನ ವಿಪದ್ಯೇತ** ಮರಣವೆಂಬ ವಿಪತ್ತಿಗೆ ಸಿಗುವದಿಲ್ಲವೋ ಶಿಥಿಲವಾಗುವದಿಲ್ಲವೋ **ತಾವತ್** ಅಷ್ಟರಲ್ಲಿಯೇ (ಅದಕ್ಕೂ ಮೊದಲೇ) **ತಂ** ಆ ಶ್ರೀಹರಿಯನ್ನೇ **ಆಶ್ರಿತಃ** ಆಶ್ರಯಿಸಿದವನಾಗಿ **ಕ್ಷೇಮಾಯ** ಮೋಕ್ಷಕ್ಕಾಗಿ **ಚ** ಏನೇನು ಅಭೀಷ್ಟವೋ ಅವುಗಳ ಪ್ರಾಪ್ತಿಗಾಗಿ **ಯತೇತ** ಪ್ರಯತ್ನಿಸಬೇಕು. ಉತ್ತರಾರ್ಧದಿಂದ ಬಾಲ್ಯದಲ್ಲಿಯೇ ಮೋಕ್ಷಕ್ಕಾಗಿ ಪ್ರಯತ್ನಿಸಬೇಕೆಂಬುದಕ್ಕೆ ಕಾರಣವನ್ನು ಹೇಳಿದರು.

'ಶತಾಯುರ್ವೈ ಪುರುಷಃ' ಎಂಬ ಪ್ರಮಾಣದಂತೆ ನೂರು ವರ್ಷಕಾಲ ಶರೀರ ವಿರುತ್ತದೆಂದು ನಿಶ್ಚಯವಿರುವಾಗ ಆ ಮಧ್ಯದಲ್ಲಿ ಅನೇಕ ಶ್ರೇಯಸ್ಸುಗಳನ್ನು ಸಂಪಾದಿಸಿಕೊಳ್ಳಲು ಸಾಧ್ಯವಿರುತ್ತದೆ. ಅಂದ ಮೇಲೆ ಬಾಲ್ಯದಲ್ಲಿಯೇ ನಿವೃತ್ತಿಧರ್ಮಾನುಷ್ಠಾನವೆಂಬ ಶ್ರೇಯಸ್ಸಿನ ಪ್ರಯತ್ನ ಮಾಡಬೇಕು ಎಂಬ ನಿಯಮ ಆವಶ್ಯಕವಲ್ಲ ಎಂದು ಶಂಕಿಸಿ, ಗರ್ಭವಾಸದಿಂದ ಹಿಡಿದು ನೂರು ವರ್ಷದವರೆಗೂ ತಾನಾಗಿಯೇ ಅಥವಾ ಬೇರೆ ಕಾರಣಗಳಿಂದ ಶರೀರನಾಶವು ಕಂಡುಬಂದಿರುವಾಗ ನೂರುವರ್ಷ ಶರೀರವಿರುತ್ತದೆಯೆಂಬ ನಿಶ್ಚಯವು ಸಾರ್ವಕಾಲಿಕವಲ್ಲ. ಯಾರಾದರೊಬ್ಬರ ಶರೀರವು ಅಷ್ಟು ಕಾಲವಿದ್ದರೂ ಶ್ರೇಯಸ್ಸಿಗಾಗಿ ಪ್ರಯತ್ನವು ಕಂಡುಬರುತ್ತಿಲ್ಲ. ಬೇರೆ ವ್ಯಾಪಾರದ ಆಯಾಸದಿಂದ ದಿನಕಳೆಯುವದು ಕಂಡು ಬರುವದು. ಹೊರತು ಸಾಧನಮಾಡುವದಿಲ್ಲ ಹೀಗಿರುವಾಗ ಒಂದು ಲಕ್ಷವರ್ಷ ಆಯುಷ್ಯವಿದ್ದರೂ ಮೋಕ್ಷಪ್ರದ ಶ್ರೀಹರಿಯ ಪಾದಕಮಲಗಳ ಸೇವೆ ಸಂಪಾದಿಸುವದು ಸುಲಭವಲ್ಲವೆಂದು ಹೇಳುತ್ತಾರೆ-

**ಪುಂಸೋ ವರ್ಷಶತಂ ಹ್ಯಾಯುಸ್ತದರ್ಧಮಜಿತಾತ್ಮನಃ ।**
**ನಿಷ್ಫಲಂ ಯದಸೌ ರಾತ್ರ್ಯಾಂ ಶೇತೇಽಂಧಂ ಪ್ರಾಪಿತಸ್ತಮಃ ॥೧೧॥**

**ಪುಂಸಃ** ಮನುಷ್ಯನಿಗೆ **ವರ್ಷಶತಂ ಆಯುಃ ಹಿ** ನೂರುವರ್ಷ ಆಯುಷ್ಯ-ಪ್ರಮಾಣಸಿದ್ಧ ಆದರೂ **ಯತ್** ಯಾವ ಕಾರಣ **ಅಸೌ** ಜಿತೇಂದ್ರಿಯನಲ್ಲದ ಇವನು **ಅಂಧಂ ತಮಃ** ಕುರುಡನಾಗಿಸುವ(ಅಜ್ಞಾನಿಯನ್ನಾಗಿ ಮಾಡುವ)ಕತ್ತಲೆಯನ್ನು **ಪ್ರಾಪಿತಃ ಸನ್** ಹೊಂದಲ್ಪಟ್ಟವನಾಗಿ **ರಾತ್ರ್ಯಾಂ** ರಾತ್ರಿಯಲ್ಲೆಲ್ಲ **ಶೇತೇ** ಮಲಗುವನೋ **ತತ್** ಆ ಕಾರಣದಿಂದ **ಅಜಿತಾತ್ಮನಃ** ನಿದ್ರೆಯನ್ನು ಜಯಿಸಲು ಸಹಾಯಕವಾದ ಮನೋಜಯವಿಲ್ಲದ ಈ ಪುರುಷನ **ತದರ್ಧಂ ಚ** ಆ ನೂರುವರ್ಷ ಆಯುಷ್ಯದ ಅರ್ಧವೂ **ನಿಷ್ಫಲಂ ಯಾತಿ** ನಿಷ್ಪ್ರಯೋಜನವಾಗಿ ಹೋಗುವದು. ॥೧೧॥

**ಮುಗ್ಧಸ್ಯ ಬಾಲ್ಯಕೌಮಾರ್ಯೈಃ ಕ್ರೀಡತೋ ಯಾತಿ ವಿಂಶತಿಃ ।**
**ಜರಯಾ ಗ್ರಸ್ತದೇಹಸ್ಯ ಯಾತ್ಯಕಲ್ಯಸ್ಯ ವಿಂಶತಿಃ ॥೧೨॥**

**ಬಾಲ್ಯಕೌಮಾರ್ಯೈಃ** ಬಾಲ್ಯಾವಸ್ಥೆ-ಕುಮಾರಾವಸ್ಥೆಗಳಿಂದ **ಮುಗ್ಧಸ್ಯ** ಪ್ರಯೋಜನ ಜ್ಞಾನವಿಲ್ಲದ ಆದ್ದರಿಂದಲೇ **ಕ್ರೀಡತಃ** ಆಟವಾಡುತ್ತಿರುವ ಇವನಿಗೆ **ವಿಂಶತಿಃ** ಇಪ್ಪತ್ತು ವರ್ಷಗಳು **ನಿಷ್ಫಲಂ ಯಾತಿ** ವ್ಯರ್ಥವಾಗುವವು **ಜರಯಾ** ಮುಪ್ಪಿನಿಂದ **ಗ್ರಸ್ತದೇಹಸ್ಯ** ಆವರಿಸಲ್ಪಟ್ಟ ದೇಹವುಳ್ಳ **ಅಕಲ್ಯಸ್ಯ** ಅಸಮರ್ಥನಾದ ಇವನಿಗೆ **ವಿಂಶತಿಃ** ಇಪ್ಪತ್ತು ವರ್ಷಗಳು ವ್ಯರ್ಥವಾಗುವವು. ॥೧೨॥

**ದುರಾಪೂರೇಣ ಕಾಮೇನ ಮೋಹೇನ ಚ ಬಲೀಯಸಾ ।**
**ಶೇಷಂ ಗೃಹೇಷು ಸಕ್ತಸ್ಯ ಪ್ರಮತ್ತಸ್ಯ ಪ್ರಯಾತಿ ಹಿ ॥೧೩॥**

**ದುರಾಪೂರೇಣ** ಪೂರೈಸಲಾಗದ **ಕಾಮೇನ** ವಿಷಯಾಭಿಲಾಷೆಯಿಂದಲೇ **ಬಲೀಯಸಾ** ಅತ್ಯಂತಬಲಿಷ್ಠವಾದ **ಮೋಹೇನ ಚ** ಅವಿವೇಕದಿಂದಲೂ **ಗೃಹೇಷು** ಹೆಂಡತಿ ಮನೆ ಮೊದಲಾದ ವಿಷಯಗಳಲ್ಲಿ **ಸಕ್ತಸ್ಯ** ಆಸಕ್ತನಾದ ಆದ್ದರಿಂದಲೇ **ಪ್ರಮತ್ತಸ್ಯ** ಮಹಾಪುರುಷಾರ್ಥದಲ್ಲಿ ಅವಹಿತನಲ್ಲದ ಇವನಿಗೆ **ಶೇಷಂ** ಉಳಿದ ಅರವತ್ತು ವರುಷ(ರಾತ್ರಿಯನ್ನು ಬಿಟ್ಟರೇ ಮೂವತ್ತು ವರ್ಷ) **ಪ್ರಯಾತಿ** ವ್ಯರ್ಥವಾಗುವದು **ಹಿ** ಆದ್ದರಿಂದ ಪ್ರಯತ್ನವಿಲ್ಲದೇ ಕ್ಷೇಮವು ಸಾಧ್ಯವಿಲ್ಲ. ಆದ್ದರಿಂದ ಬಾಲ್ಯದಲ್ಲಿಯೇ ನಿವೃತ್ತಿಧರ್ಮವನ್ನು ಪ್ರಯತ್ನಿಸಬೇಕೆಂದು ಅಭಿಪ್ರಾಯ.

ನಿದ್ರಾದಿಗಳಿಲ್ಲದಿದ್ದರೂ ಉಳಿದಕಾಲದಲ್ಲಿ ಶ್ರೇಯಸ್ಸಿನ ವಿಘ್ನಕ್ಕೆ ಕಾರಣವಿದೆಯೆಂದು ಹೇಳುತ್ತಾರೆ-

**ಪಶ್ಯಧ್ವಂ ಮತಿವೈಷಮ್ಯಂ ಜ್ಞಾತೀನಾಂ ನಃ ಕುಟುಂಬಿನಾಮ್ ।**
**ಶ್ರೇಯೋವಿಘಾತಾದಾಯಾಸಾದೀಹತಾಮನುಸಂಸೃತಿಮ್ ॥೧೪॥**

**ಅನುಸಂಸ್ಸೃತಿಂ** ಸಂಸಾರಕ್ಕೆ ತಕ್ಕಂತೆ, ತಾವು ಹುಟ್ಟಿರುವ ಜಾತಿಗೆ ತಕ್ಕಂತೆ **ಈಹತಾಂ** ಇಚ್ಛಿಸುವ, ಚೇಷ್ಟಿಸುವ, **ನಃ ಜ್ಞಾತೀನಾಂ** ನಮ್ಮ ದಾಯಾದರಾದ ಅಸುರರಾದ **ಕುಟುಂಬಿನಾಂ** ಗೃಹಸ್ಥರ **ಶ್ರೇಯೋವಿಘಾತಾತ್ ಆಯಾಸಾತ್** ಶ್ರೇಯಸ್ಸಿಗೆ ಘಾತಕವಾದ ಆಯಾಸದಿಂದ ಬಂದ **ಮತಿವೈಷಮ್ಯಂ** ಪರಸ್ಪರ ಕಲಹವನ್ನು, ಶ್ರೀಹರಿಯೊಡನೆ ಕಲಹವನ್ನು **ಪಶ್ಯಧ್ವಂ** ನೋಡಿರಿ.

ವಿಶೇಷ :- ಇದರಿಂದ ಕೇವಲ ಆಯುಷ್ಯದ ವ್ಯಯವಷ್ಟೇ ಅಲ್ಲ ಶ್ರೇಯೋವಿಘ್ನಕರ ಭಗವದ್ವೇಷವೂ ಇದೆಯೆಂದು ಹೇಳಿದಂತಾಯಿತು. 'ಅನುಸಂಸ್ಸೃತಿಂ' ಎಂದು ಹೇಳಿದ್ದರಿಂದ ಒಂದು ಕ್ಷಣವಾದರೂ ಶ್ರೇಯಃಪ್ರಯತ್ನಕ್ಕೆ ಉಳಿದಿಲ್ಲವೆಂದು ಸೂಚಿಸಿರುವರು. ||೧೪||

**ಇಲ್ಲಿ ಶ್ರೀಮದ್ವೇದೇಶತೀರ್ಥಪೂಜ್ಯಪಾದಶಿಷ್ಯರಾದ ಯದುಪತ್ಯಾಚಾರ್ಯ ವಿರಚಿತಸಪ್ತಮಸ್ಕಂಧವ್ಯಾಖ್ಯಾನಪ್ರಕಾಶಿಕಾ ಸಮಾಪ್ತವಾಯಿತು.**

★★★

**13ನೇ ಶ್ಲೋಕದಿಂದ ಶ್ರೀಸತ್ಯಧರ್ಮತೀರ್ಥವಿರಚಿತವಾದ 'ಶ್ರೀಮದ್ಭಾಗವತವಿವೃತಿ' ಎಂಬ ವ್ಯಾಖ್ಯಾನವು.**

**ಅತ್ಯಾಯಾಸೋ ನ ಕರ್ತವ್ಯೋ ಇತ್ಯಾಚಾರ್ಯವಚನಾನುಗಃ |**
**ಸಪ್ತಮಸ್ಕಂಧತಾತ್ಪರ್ಯಂ ವ್ಯಾಕರೋಮಿ ಮಿತೈಃ ಪದೈಃ ||**

ಅತಿಯಾದ ಆಯಾಸ ಪಡಬೇಡ ಎಂಬ ಆಚಾರ್ಯರ ಮಾತಿಗೆ ಅನುಸರಿಸಿ ಏಳನೇಸ್ಕಂಧದ ತಾತ್ಪರ್ಯದ ವ್ಯಾಖ್ಯಾನವನ್ನು ಮಿತವಾದ ಪದಗಳಿಂದ ಮಾಡುವೆನು. ಎಂದು ಭಾವ.

ಪ್ರಹ್ಲಾದನು ಬಾಲಕರನ್ನು ಕುರಿತು ನಿದ್ದೆಮೊದಲಾದ ಉಪದ್ರವಗಳಲ್ಲದೇ ಮಧ್ಯೆ ಇರುವ ಕಾಲವೂ ವಿಘ್ನಸಹಿತವೇ ಎಂಬುದನ್ನು ದೃಷ್ಟಾಂತ ಸಹಿತವಾಗಿ ಹೇಳುವನು-

**ಪಶ್ಯಧ್ವಂ** ನೋಡಿರಿ **ನಃ ಕುಟುಂಬಿನಾಂ** ಜ್ಞಾತಿಗಳ **ಮತಿವೈಷಮ್ಯಂ** ಕಲಹಕ್ಕೆ ಕಾರಣವಾದ ಬುದ್ಧಿವಿಷಮತೆಯನ್ನು ಕೆಲವು ಕಡೆ 'ಪಶ್ಯಧ್ವಮತಿವೈಷಮ್ಯಮ್' ಎಂದು ಪಾಠವಿದೆ ಆಗ ಅತಿವಿಷಮತೆಯನ್ನು ಎಂದರ್ಥ **ಶ್ರೇಯೋವಿಘಾತಾತ್** ಐಹಿಕಪಾರತ್ರಿಕ ಶ್ರೇಯಸ್ಸಿಗೆ ನಾಶಕವಾದ **ಆಯಾಸಾತ್** ಶ್ರಮದಿಂದ **ಅನು ಸಂಸ್ಕೃತಿಂ** ಎಂದು ಎರಡು ಪದಗಳು. ಸಂಸ್ಸೃತಿಂ ಅನು ಎಂದು ಅನ್ವಯ. ಪ್ರತಿಸಂಸಾರದಲ್ಲಿಯೂ ಚೇಷ್ಟಿಸುವವರ ಮತಿವೈಷಮ್ಯವನ್ನು ನೋಡಿರಿ ಎಂದರು. ||೧೪||

ನಾವು ಶ್ರೇಯಸ್ಕಾಮರಾಗದಿದ್ದರೂ ಈ ಸಂಸಾರದಲ್ಲಿ ಯಾವನಾದರೂ ಬುದ್ಧಿವಂತನು ಶ್ರೇಯಸ್ಕಾಮನಿದ್ದಾನೆಯೇ ಎಂದರೆ ಅಂಥವನು ಸುಲಭನಲ್ಲವೆಂದು ಹೇಳುವರು-

**ಕೋ ಗೃಹೇಷು ಪುಮಾನ್ ಸಕ್ತಮಾತ್ಮಾನಮಜಿತೇಂದ್ರಿಯಃ ।**
**ಸ್ನೇಹಪಾಶೈರ್ದೃಢೈರ್ಬದ್ಧಮುತ್ಸಹೇತ ವಿಮೋಚಿತುಮ್ ॥೧೫॥**

**ಅಜಿತೇಂದ್ರಿಯಃ** ಇಂದ್ರಿಯಜಯವಿಲ್ಲದ್ದರಿಂದಲೇ **ಗೃಹೇಷು** ಹೆಂಡತಿ ಮೊದಲಾದವರಲ್ಲಿ **ಸಕ್ತಃ** ಆಸಕ್ತನಾದ **ಕಃ ಪುಮಾನ್** ಯಾವ ಮನುಷ್ಯನು **ದೃಢೈಃ** ಶ್ರೀಹರಿಯ ಅನುಗ್ರಹವಿಲ್ಲದೇ ಪರಿಹರಿಸಲಾಗದ ಬಲವಾದ **ಸ್ನೇಹಪಾಶೈಃ** ಸ್ನೇಹ ಪಾಶಗಳಿಂದ **ಬದ್ಧಂ** ಕಟ್ಟಲ್ಪಟ್ಟ **ಆತ್ಮಾನಂ** ತನ್ನನ್ನು **ವಿಮೋಚಿತುಂ** ಬಿಡಿಸಿಕೊಳ್ಳಲು **ಉತ್ಸಹೇತ** ಉತ್ಸಾಹ ಗೊಂಡಾನು.

ವಿಶೇಷ ಃ- ಗೃಹಾದಿಗಳಲ್ಲಿ ಆಸಕ್ತನಾದವನಿಗೆ ಬಂಧವನ್ನು ಕಳೆದುಕೊಳ್ಳಲು ಉತ್ಸಾಹವೇ ಇಲ್ಲದಿರುವಾಗ ಮೋಚನೆಯಂತು ದೂರವೇ ಉಳಿಯಿತು ಎಂದು ಭಾವ. ॥೧೫॥

ಪ್ರವೃತ್ತಿಧರ್ಮದಿಂದ ಶ್ರೇಯಸ್ಸಾಗದಿದ್ದರೆ ಬೇಡ ವಿತ್ತವಿತರಣದಿಂದ ಪುರುಷಾರ್ಥಸಂಪಾದಿಸಬಹುದು ಎಂದ ಮೇಲೆ ಭಗವಂತನ ಸೇವೆಯೇ ಏಕೆ ಬೇಕು ಎಂದರೆ ಹೇಳುತ್ತಾರೆ-

**ಕೋ ನ್ವರ್ಥತೃಷ್ಣಾಂ ವಿಸೃಜೇತ್ ಪ್ರಾಣೇಭ್ಯೋಽಪಿ * ಗರೀಯಸೀಮ್ ।**
**ಯಂ ಕ್ರೀಣಾತ್ಯಸುಭಿಃ ಪ್ರೇಷ್ಠೈಸ್ತಸ್ಕರಃ ಸೇವಕೋ ವಣಿಕ್ ॥೧೬॥**

**ಪ್ರಾಣೇಭ್ಯಃ** ಪ್ರಾಣಿಗಳಿಗೆ ಅತ್ಯಂತ ಪ್ರೀತ್ಯಾಸ್ಪದವಾದ ಪ್ರಾಣಗಳಿಗಿಂತ **ಗರೀಯಸೀಂ** ಹೆಚ್ಚು ಪ್ರೀತಿಗೆ ಪಾತ್ರವಾದ **ಅರ್ಥತೃಷ್ಣಾಂ** ಧನದ ಆಶೆಯನ್ನು **ಕಃ ನು** ಯಾವನು ತಾನೇ **ವಿಸೃಜೇತ್** ಬಿಟ್ಟಾನು ಬಿಡುವದು ಅಸಾಧ್ಯವೆಂದರ್ಥ.(**ಯಃ** ಯಾವುದು **ಈಪ್ಸಿತಂ** ಇಷ್ಟವೋ ಅಂತಹ ಅರ್ಥತೃಷ್ಣೆಯನ್ನು ಎಂದರ್ಥ ಆ ಪಾಠದಲ್ಲಿ) ಹಣದ ಆಸೆಯನ್ನು ಬಿಡುವದು ಬಹುಕಷ್ಟವೆಂಬುದರಲ್ಲಿ ಅನುಭವವನ್ನು ಪ್ರಮಾಣವಾಗಿ ತೋರಿಸುತ್ತಾರೆ. **ಯಂ** ಯಾವ ಹಣವನ್ನು **ತಸ್ಕರಃ** ಕಳ್ಳನು **ಸೇವಕಃ** ರಾಜಭೃತ್ಯನು **ವಣಿಕ್** ವ್ಯಾಪಾರಿಯು **ಶ್ರೇಷ್ಠೈಃ** ತಮಗೆ ಅತ್ಯಂತ ಪ್ರಿಯವಾದ **ಅಸುಭಿಃ** ಪ್ರಾಣಗಳನ್ನು ಕೊಟ್ಟು **ಕ್ರೀಣಾತಿ** ಅದಕ್ಕೆ ಬದಲಾಗಿ ಪಡೆಯುವನು. ಅಂತಹ ಹಣದ ಆಸೆಯನ್ನು ಪಡೆಯುವರು ಎಂದನ್ವಯ.

* 'ಈಪ್ಸಿತಃ' ಇತಿ ಪಾಠಾಂತರ ।

ವಿಶೇಷ ៖- ಕಳ್ಳನು ಸಿಕ್ಕಿಬಿದ್ದರೆ ಪ್ರಾಣಕಳೆದುಕೊಳ್ಳುವನು. ರಾಜಭಟನು ಯುದ್ಧಾದಿಗಳಲ್ಲಿ ಸಾಯುವನು. ವ್ಯಾಪಾರಿಯು ದಾರಿಯಲ್ಲಿ ದರೋಡೆಕೋರರಿಂದ ಸಾಯುವನು. ಹೀಗೆ ಪ್ರಾಣಾಪಾಯದಿಂದ ಹಣವನ್ನು ಸಂಪಾದಿಸುತ್ತಾರೆ ಆದ್ದರಿಂದ ಹಣದಾಸೆಯು ಪ್ರಾಣಗಳಿಗಿಂತ ಪ್ರಿಯವೆಂದರ್ಥ. ಪ್ರತಿಯೊಬ್ಬ ಜೀವರಿಗೂ ಎಲ್ಲಕಾಲದಲ್ಲಿ ಈ ವಿಶೇಷವಿದ್ದೇ ಇರುವದು. ।।೧೬।।

ಅರ್ಥದಿಂದ ಭವದ ಚ್ಛೇದ ಆಗುವದು ಬೇಡ. ಕಾಮದಿಂದ ಆಗುವದು ಎಂದರೆ ಹೇಳುವರು. ಕಾಮವು ಒಳ್ಳೆಯದಾದರೆ ಅರ್ಥವೂ ಒಳ್ಳೆಯದು. ಅನರ್ಥಕಾರಿಯಲ್ಲ. ಅಸತ್ ಆದರೆ ಅದೂ ಒಳ್ಳೆಯದಲ್ಲ-

**ಕಥಂ ಪ್ರಿಯಾಯಾ ಅನುಕಂಪಿತಾಯಾಃ**
**ಸಂಗಂ ರಹಸ್ಯಂ ರುಚಿರಾಂಶ್ಚ ಮಂತ್ರಾನ್ ।**
**ಸುಹೃತ್ಸುತಸ್ನೇಹವಶಃ* ಶಿಶೂನಾಂ**
**ಕಲಾಕ್ಷರಾಣಾಮನುರಕ್ತಚಿತ್ತಃ** ।।೧೭।।

**ಅನುಕಂಪಿತಾಯಾಃ** ತನ್ನ ಕನಿಕರಕ್ಕೆ ಪಾತ್ರಳಾದ **ಪ್ರಿಯಾಯಾಃ** ಪ್ರೀತಿವಿಷಯಳಾದ ಸ್ತ್ರೀಯ **ರಹಸ್ಯಂ** ಏಕಾಂತದಲ್ಲಿ ಉಂಟಾದ **ಸಂಗಂ** ಸಂಬಂಧವನ್ನು, ರತಿಯನ್ನು, **ಕಥಂ ತ್ಯಜೇತ್** ಹೇಗೆ ಬಿಟ್ಟಾನು ? **ರುಚಿರಾನ್** ಅತ್ಯಂತ ಮನೋಹರಗಳಾದ **ಮಂತ್ರಾನ್** ಸಲ್ಲಾಪಗಳ ರಸದಿಂದ **ಅನುರಕ್ತಚಿತ್ತಃ** ಅನುರಾಗಯುಕ್ತ ಮನಸ್ಸುಳ್ಳವನು ಅವುಗಳನ್ನು ಹೇಗೆ ಬಿಟ್ಟಾನು? **ಸುಹೃತ್** ಸ್ನೇಹಿತರು, **ಸುತ** ಶಿಶುಗಳಲ್ಲದ ಮಕ್ಕಳು ಇವರಲ್ಲಿನ **ಸ್ನೇಹವಶಃ** ಸ್ನೇಹಕ್ಕೆ ವಶನಾದವನು ಅವುಗಳನ್ನು ಹೇಗೆ ಬಿಟ್ಟಾನು? **ಕಲಾಕ್ಷರಾಣಾಂ** ಅವ್ಯಕ್ತಮಧುರವಾದ ಮುದ್ದುಮಾತುಗಳನ್ನಾಡುವ **ಶಿಶೂನಾಂ** ಚಿಕ್ಕಮಕ್ಕಳ ಮಾತುಗಳಿಂದ **ಅನುರಕ್ತಚಿತ್ತಃ** ಅನುರಾಗದಿಂದ ಕೂಡಿದ ಮನಸ್ಸುಳ್ಳವನು ಅವುಗಳನ್ನು ಹೇಗೆ ಬಿಟ್ಟಾನು ?

ವಿಶೇಷ ៖- **ಸ್ನೇಹಸಿತ** ಎಂಬ ಪಾಠದಲ್ಲಿ ಸ್ನೇಹಬದ್ಧನೆಂದರ್ಥ. ।।೧೭।।

**ಪುತ್ರಾಃ ಸ್ಮರಂಸ್ತಾ ದುಹಿತೄರ್ಹೃದಯ್ಯಾ**
**ಭ್ರಾತೄನ್ ಸ್ವಸ್ರೂರ್ವಾ ಪಿತರೌ ಚ ದೀನೌ ।**
**ಗೃಹಾನ್ ಮನೋಜ್ಞಾನ್ ರುಚಿರಚ್ಛದಾಂಶ್ಚ**
**ವೃತ್ತೀಶ್ಚ ಕುಲ್ಯಾಃ ಪಶುಭೃತ್ಯವರ್ಗಾನ್** ।।೧೮।।

---

* 'ಸ್ನೇಹಸಿತಃ' ಇತಿ ಪಾಠಾಂತರ

**ಹೃದಯ್ಯಾಃ** ಹೃದಯಕ್ಕೆ ಪ್ರಿಯರಾದ **ಪ್ರತ್ತಾಃ** ದೂರದೇಶದಲ್ಲಿರುವವರಿಗೆ ಮದುವೆ ಮಾಡಿಕೊಟ್ಟ **ತಾಃ** ಆ **ದುಹಿತ್ರ್ಯಃ** ಹೆಣ್ಣು ಮಕ್ಕಳನ್ನು **ಸ್ಮರನ್** ಸ್ಮರಿಸುತ್ತ **ಕಥಂ ತ್ಯಜೇತ** ಹೇಗೆ ಬಿಟ್ಟಾನು ? **ಭ್ರಾತೄನ್** ಸಹೋದರರನ್ನು **ವಾ** ಮತ್ತು **ಸ್ವಸ್ರ್ಯಃ** ಅಕ್ಕತಂಗಿಯರನ್ನು **ದೀನೌ** ದೈನ್ಯಯುತರಾದ **ಪಿತರೌ** ತಂದೆತಾಯಿಗಳನ್ನು **ಮನೋಜ್ಞಾನ್** ಮನೋಹರಗಳಾದ **ಗೃಹಾನ್** ಮನೆಗಳನ್ನು **ರುಚಿರಚ್ಛದಾನ್** ಸುಂದರಪರಿಕರಗಳನ್ನು **ಕುಲ್ಯಾಃ ವೃತ್ತೀಃ** ವಂಶಪರಂಪಾರಗತ ಜೀವನೋಪಾಯ-ಗಳನ್ನು **ಪಶುಭೃತ್ಯವರ್ಗಾನ್** ದನ,ಆಕಳು ಮೊದಲಾದವುಗಳ ಗುಂಪನ್ನು **ಸ್ಮರನ್** ಸ್ಮರಿಸುತ್ತ ಹೇಗೆ ಬಿಟ್ಟಾನು ?

ವಿಶೇಷ :- 'ದೀನೌ' ಎಂದು ವಿಶೇಷಣ ಕೊಟ್ಟದ್ದರಿಂದ ತಂದೆ ತಾಯಿಗಳನ್ನು ಸೇವಿಸುವದಕ್ಕಾಗಿ ಸ್ಮರಿಸುತ್ತಿಲ್ಲ ಮತ್ತೇನೆಂದರೆ ಅನಿರ್ವಾಹವಾದಾಗ ಜನಾಪವಾದಕ್ಕೆ ಹೆದರಿ ರಕ್ಷಿಸಬೇಕಾಗುತ್ತದೆ ಆದ್ದರಿಂದ ಸ್ಮರಣೆಯೆಂದು ಸೂಚಿಸುವರು. ।।೧೮।।

**ತ್ಯಜೇತ ಕೋಶಸ್ಕ್ರ ಇವೇಹಮಾನಃ**
**ಕರ್ಮಾಣಿ ಲೋಭಾದವಿತೃಪ್ತಕಾಮಃ ।**
**ಔಪಸ್ಥ್ಯಜೈಹ್ವ್ಯಂ ಬಹುಮನ್ಯಮಾನಃ**
**ಕಥಂ ವಿರಜ್ಯೇತ ದುರಂತಮೋಹಃ ।।೧೯।।**

**ಕೋಶಸ್ಥಃ** ಇವ ತನ್ನ ಸುತ್ತಲೂ ಗೂಡನ್ನು ರಚಿಸಿಕೊಂಡು ತನ್ನ ಸಂಚಾರಕ್ಕೆ ಅಡ್ಡಿಮಾಡಿಕೊಳ್ಳುವ ರೇಷ್ಮೆ ಹುಳದಂತೆ **ಕರ್ಮಾಣಿ** ತನಗೆ ಬಂಧಕವಾದ ಕಾರ್ಯಗಳನ್ನೇ **ಈಹಮಾನಃ** ಮಾಡುವ **ಲೋಭಾತ್** ವಿಷಯಾಭಿಲಾಷೆಯಿಂದ **ಅವಿತೃಪ್ತಕಾಮಃ** ತೃಪ್ತನಾಗದ **ಔಪಸ್ಥ್ಯ** ಜನನೇಂದ್ರಿಯ ಸಂಬಂಧಿಸುಖವನ್ನೂ **ಜೈಹ್ವ್ಯಂ** ರಸನೇಂದ್ರಿಯ ಸಂಬಂಧಿಸುಖವನ್ನು **ಬಹು** ಅತಿಶಯವೆಂದು **ಮನ್ಯಮಾನಃ** ತಿಳಿದಿರುವ ಆದ್ದರಿಂದಲೇ **ದುರಂತಮೋಹಃ** ಕೊನೆಯಿಲ್ಲದ ವಿಷಯಮೋಹವುಳ್ಳ ಪುರುಷನು **ಕಥಂ ವಿರಜ್ಯೇತ** ವಿಷಯ ವಿರಕ್ತಿಯನ್ನು ಹೇಗೆ ಹೊಂದುವನು ? ।।೧೯।।

**ಕುಟುಂಬಪೋಷಾಯ ಚ ಯನ್ನಿಜಾಯುಃ**
**ನ ಬುಧ್ಯತೇಽರ್ಥಂ ವಿಹತಂ ಪ್ರಮತ್ತಃ ।**
**ಸರ್ವತ್ರ ತಾಪತ್ರಯದುಃಖಿತಾತ್ಮಾ**
**ನಿರ್ವಿದ್ಯತೇ ನ ಸ್ವಕುಟುಂಬರಾಮಃ ।।೨೦।।**

**ಚ** ಮತ್ತು **ಕುಟುಂಬಪೋಷಾಯ** ಕುಟುಂಬಪೋಷಣೆಗಾಗಿಯೇ ಹೋಗುವ **ನಿಜಾಯುಃ** ತನ್ನ ಆಯುಷ್ಯವನ್ನು **ನ ಬುಧ್ಯತೇ** ತಿಳಿಯುವದಿಲ್ಲ **ಪ್ರಮತ್ತಃ**

ಪುರುಷಾರ್ಥದಲ್ಲಿ ಅವಧಾನವಿಲ್ಲದ ಪುರುಷನು **ವಿಹಿತಂ ಅರ್ಥಂ** ಶಾಸ್ತ್ರದಲ್ಲಿ ಹೇಳಿದ ಪುರುಷಾರ್ಥವನ್ನು **ನ ಬುಧ್ಯತೇ** ತಿಳಿಯುವದಿಲ್ಲ **ಸರ್ವತ್ರ** ಎಲ್ಲ ವಿಷಯಗಳಲ್ಲಿಯೂ ಧರ್ಮಪಾಲಕನಾದ ಶ್ರೀಹರಿಯಿಂದ ದತ್ತವಾದ **ತಾಪತ್ರಯದುಃಖಿತಾತ್ಮಾ** ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ತಾಪಗಳಿಂದ ದುಃಖಗೊಂಡ ಮನಸ್ಸುಳ್ಳವನಾದರೂ **ಸ್ವಕುಟುಂಬರಾಮಃ** ಹೆಂಡತಿಮೊದಲಾದವರಲ್ಲಿ ಸಂತೋಷಪಡುವ ಪುರುಷನು **ನ ನಿರ್ವಿದ್ಯತೇ** ವಿರಕ್ತನಾಗುವದಿಲ್ಲ. ।।೨೦।।

ವಿದ್ವಾಂಸನೂ ಕೂಡ ನ್ಯಾಯದಿಂದ ಧನ ಬರದಿರುವಾಗ ಅನ್ಯಾಯ-ದಿಂದಲಾದರೂ ಧನ ಸಂಪಾದಿಸಲು ಪ್ರಯತ್ನಿಸುವನು. ಇದು ಪುತ್ರಾದಿಸ್ನೇಹ-ಮಾಹಾತ್ಮ್ಯವೆಂದು ಇಲ್ಲಿ ಹೇಳುವರು-

**ವಿತ್ತೇಷು ನಿತ್ಯಾಭಿನಿವಿಷ್ಟಚೇತಾ**
**ವಿದ್ವಾಂಶ್ಚ ದೋಷಂ ಪರವಿತ್ತಹರ್ತುಃ ।**
**ಪ್ರೇತ್ಯೇಹ ವಾಽಥಾಪ್ಯಜಿತೇಂದ್ರಿಯಸ್ತತ್**
**ಅಶಾಂತಕಾಮೋ ಹರತೇ ಕುಟುಂಬೀ ।।೨೧।।**

**ವಿತ್ತೇಷು** ಕುಟುಂಬ ರಕ್ಷಣೆಗೆ ಬೇಕಾದ ಹಣ ಮುಂತಾದ ಪದಾರ್ಥಗಳಲ್ಲಿ **ಅಭಿನಿವಿಷ್ಟಚೇತಾಃ** ಯಾವಾಗಲೂ ಆಸಕ್ತವಾದ ಮನಸ್ಸುಳ್ಳ **ಅಜಿತೇಂದ್ರಿಯಃ** ಇಂದ್ರಿಯ ಜಯವಿಲ್ಲದ **ಅಶಾಂತಕಾಮಃ** ವಿಷಯಕಾಮನೆ ಮುಗಿಯದ **ಕುಟುಂಬೀ** ಗೃಹಸ್ಥನು **ಪರವಿತ್ತಹರ್ತುಃ** ಮತ್ತೊಬ್ಬರ ಪದಾರ್ಥವನ್ನು ಅಪಹರಿಸುವ ಕಳ್ಳನಿಗೆ **ಇಹ** ಈ ಲೋಕದಲ್ಲಿ ದಂಡ ಮೊದಲಾದ **ಪ್ರೇತ್ಯ** ಸತ್ತ ಮೇಲೆ ನರಕವೇ ಮುಂತಾದ **ದೋಷಂ** ಶಿಕ್ಷೆಯನ್ನು **ವಿದ್ವಾನ್ ಅಪಿ** ತಿಳಿದವನಾದರೂ **ಅಥಾಪಿ** ಅನಂತರದಲ್ಲಿಯೂ **ತತ್ ಚ** (ಆ ದುಷ್ಕರ್ಮವನ್ನೇ) ಪರರ ಹಣವನ್ನು **ಹರತೇ** ಅಪಹರಿಸುವನು. ಇದರಿಂದ ಹಣದ ಅತಿಯಾದ ಆಸೆಯು ಪಾಪಸಾಧನವೆಂದು ತಿಳಿಸಿರುವರು. ।।೨೧।।

ಕೆಲವು ಶ್ಲೋಕಗಳಿಂದ ಮತ್ತೊಬ್ಬರನ್ನು ನಿಮಿತ್ತಮಾಡಿ ಹೇಳಿದ್ದನ್ನು ಸಾಕ್ಷಾತ್ತಾಗಿ ಬಾಲಕರನ್ನೇ ಸಮ್ಮುಖೀಕರಿಸಲು ವೈರಾಗ್ಯಾದಿಗಳ ಅಸಂಭವತ್ವವನ್ನು ಉಪಸಂಹರಿಸುವರು-

**ವಿದ್ವಾನಪೀತ್ಥಂ ದನುಜಾಃ ಕುಟುಂಬಂ**
**ಪುಷ್ಣನ್ ಸ್ವಲೋಕಾಯ ನ ಕಲ್ಪತೇ ವೈ ।**
**ಯಃ ಸ್ವೀಯಪಾರಕ್ಯವಿಭಿನ್ನಭಾವಃ**
**ತಮಃ ಪ್ರಪದ್ಯೇತ ಯಥಾ ವಿಮೂಢಃ ।।೨೨।।**

**ಹೇ ದನುಜಾಃ** ದೈತ್ಯಬಾಲಕರೇ **ಯತ್** ಯಾವ ಕಾರಣ **ಸ್ವೀಯಪಾರಕ್ಯ-ವಿಭಿನ್ನಭಾವಃ** ಇದರಲ್ಲಿ ನಾನು ಸ್ವತಂತ್ರನು ಇದರಲ್ಲಿ ಮತ್ತೊಬ್ಬನು ಅಸ್ವತಂತ್ರನು ಎಂಬ ಮೋಹವುಳ್ಳವನೋ **ತತಃ** ಆ ಕಾರಣದಿಂದ **ಇತ್ಥಂ** ಮೇಲೆ ಹೇಳಿದ ದೋಷಗಳನ್ನು **ವಿದ್ವಾನ್ ಅಪಿ** ಶಾಸ್ತ್ರ ಹಾಗೂ ಆಚಾರ್ಯರ ಮೂಲಕ ತಿಳಿದಿದ್ದರೂ **ಕುಟುಂಬಂ** ಹೆಂಡತಿ-ಮಕ್ಕಳನ್ನು **ಪುಷ್ಣನ್** ಪೋಷಿಸುತ್ತ **ಸ್ವಲೋಕಾಯ** ತನಗೆ ಕ್ಲೃಪ್ತವಾದ ಮೋಕ್ಷಕ್ಕೆ ಸಾಧನವಾದ ಸ್ವಯೋಗ್ಯಜ್ಞಾನಕ್ಕೆ **ನ ಕಲ್ಪತೇ** ಸಮರ್ಥನಾಗುವದಿಲ್ಲ**ವೈ** ಶಾಸ್ತ್ರಸಿದ್ಧವು **ವಿಮೂಢಃ** ಅನ್ಯಥಾಜ್ಞಾನಿಯು **ಯಥಾ** ಹೇಗೆ **ತಮಃ** ತಮಸ್ಸನ್ನು **ಪ್ರಪದ್ಯೇತ** ಹೊಂದುವನೋ **ತಥಾ** ಹಾಗೆ **ತಮಃ** ಗ್ಲಾನಿಯನ್ನುಂಟು ಮಾಡುವ ಅಜ್ಞಾನವನ್ನು ಮತ್ತೆ ಮತ್ತೆ ಜನನಮರಣಗಳನ್ನು(ನೀಚಯೋನಿಗಳನ್ನು) **ಪ್ರಪದ್ಯೇತ** ಹೊಂದುವನು.

ವಿಶೇಷ ಃ- ಯೋಗ್ಯತೆಮೀರಿ ಇವನು ನನ್ನವನು, ಇವನು ಪರಕೀಯನು ಎಂದು ವಿಭಿನ್ನ ಮನಸ್ಸುಳ್ಳ ಆದ್ದರಿಂದಲೇ ಮಿಥ್ಯಾಜ್ಞಾನಿಯಾದ ಕುಟುಂಬಿಯು ತಮಸ್ಸನ್ನು ಹೊಂದುವದಕ್ಕೆ ಕಾರಣವಾದ ಅಜ್ಞಾನವನ್ನೇ ಹೊಂದುವನು ಎಂದೂ ಅರ್ಥ ।।೨೨।।

ಶ್ರೀಹರಿಯ ಅನುಗ್ರಹವಿಲ್ಲದೆ ವಿದ್ವತ್ತು ಪುರುಷಾರ್ಥಸಾಧಕವಲ್ಲವೆಂದು ಹೇಳುತ್ತಾರೆ-

**ಯತೋ ನ ಕಶ್ಚಿತ್ ಕ್ವಚ ಕುತ್ರ ವಿದ್ವಾನ್**
**ದೀನಂ ಸ್ವಮಾತ್ಮಾನಮಲಂ ಸಮರ್ಥಃ ।**
**ವಿಮೋಚಿತುಂ ವಾಮದೃಶಾಂ ವಿಹಾರ-**
**ಕ್ರೀಡಾಮೃಗೋಽಯಂ ನಿಗಡೋಽಕ್ಷಿಸರ್ಗಃ ।।೨೩।।**

**ಯತಃ** ಯಾವ ಕಾರಣ **ವಾಮದೃಶಾಂ** ಸುಂದರಾಕ್ಷಿಯರ **ಅಕ್ಷಿಸರ್ಗಃ** ಕಡೆಗಣ್ಣಿನ ನೋಟವು **ನಿಗಡಃ** ಇವನಿಗೆ ಬೇಡಿಯಾಗಿದೆಯೋ **ಯತಃ** ಯಾವ ಕಾರಣ **ಅಯಂ** ಇವನು **ವಾಮದೃಶಾಂ** ಸ್ತ್ರೀಯರ **ವಿಹಾರಕ್ರೀಡಾಮೃಗಃ** ವಿಹಾರಕ್ಕೆ ಕ್ರೀಡಾ ಮೃಗವಾಗಿ-ರುವನೋ **ತತಃ** ಆ ಕಾರಣ **ಕ್ವಚ** ಯಾವ ಕಾಲದಲ್ಲಿಯೂ **ಕುತ್ರ ಚ** ಯಾವ ದೇಶ-ದಲ್ಲಿಯೂ **ಕ್ವಚಿತ್** ಯಾವನೂ **ವಿದ್ವಾನ್ ಚ** ಶಾಸ್ತ್ರಗುರೂಪದೇಶದಿಂದ ಸಂಸಾರವು ಅಸಾರ ಮತ್ತು ಅನಿತ್ಯವೆಂದು ತಿಳಿದಿದ್ದರೂ ಇವನು **ದೀನಂ** ದುಃಖಕ್ಕೆ ಸಿಲುಕಿದ **ಸ್ವಂ ಆತ್ಮಾನಂ** ತನ್ನನ್ನು **ವಿಮೋಚಿತುಂ** ಇದರಿಂದ ತಪ್ಪಿಸಿಕೊಳ್ಳಲು **ಅಲಂ** ಅತ್ಯಂತ **ಸಮರ್ಥಃ** ಶಕ್ತನು **ನ ಭವತಿ** ಆಗುವದಿಲ್ಲ. ।।೨೩।।

ಈ ವಿಧ ಸಂಸಾರವು ಕಂಸಾರಿಶರಣಾಗತಿ ಎಂಬ ಉಪಾಯದಿಂದ ಕಳೆಯುವದು ಎಂದು ಹೇಳುವರು-

**ತತೋಽತಿದೂರಾತ್ ಪರಿಹೃತ್ಯ ದೈತ್ಯಾ**
**ದೈತ್ಯೇಷು ಸಂಗಂ ವಿಷಯಾತ್ಮಕೇಷು ।**
**ಉಪೇತ ನಾರಾಯಣಮಾದಿದೇವಂ**
**ಸ ಮುಕ್ತಸಂಗೈರಿಷಿತೋಽಪವರ್ಗಃ ॥೨೪॥**

**ಹೇ ದೈತ್ಯಾಃ** ಜಾತಿಯಿಂದ ದೈತ್ಯರೇ **ತತಃ** ಬ್ರಹ್ಮಾರ್ಪಣಬುದ್ಧಿಯಿಂದ ಕೂಡಿದ ಧರ್ಮಾರ್ಥಕಾಮಗಳು ಸಂಸಾರಮೋಕ್ಷಕ್ಕೆ ಕಾರಣವಲ್ಲದ್ದರಿಂದ **ವಿಷಯಾತ್ಮಕೇಷು** ವಿಷಯದಲ್ಲಿಯೇ ಮನಸ್ಸಿಟ್ಟಿರುವ **ದೈತ್ಯೇಷು** ಶ್ರೀಹರಿಯ ದ್ವೇಷಿಗಳಲ್ಲಿ **ಸಂಗಂ** ಸಂಬಂಧವನ್ನು ಅವರ ಮತಾವಲಂಬನೆಯನ್ನು **ವಿದೂರಾತ್** ಬಹುದೂರದಿಂದಲೇ **ಪರಿಹೃತ್ಯ** ಬಿಟ್ಟು **ಆದಿದೇವಂ** ಸರ್ವಕಾರಣನಾದ **ನಾರಾಯಣಂ** ನಾರಾಯಣನನ್ನು **ಉಪೇತ** ಶರಣು ಹೊಂದಿರಿ **ಅಪವರ್ಗಃ** ಮೋಕ್ಷಸಾಧನನಾದ **ಸಃ** ಆ ಶ್ರೀಹರಿಯು **ಮುಕ್ತಸಂಗೈಃ** ವಿಷಯಸಂಗಬಿಟ್ಟವರಿಂದಲೇ **ಇಷಿತಃ** ಹೊಂದಲ್ಪಟ್ಟವನು.

ವಿಶೇಷ :- ಸಂಗವನ್ನು ತ್ಯಜಿಸಿದ ನಿಮ್ಮಿಂದ ಮೋಕ್ಷಹೊಂದಲ್ಪಡುವದು. ಅವಿದೂರಾತ್ ಎಂಬ ಪದಛೇದಪಕ್ಷದಲ್ಲಿ ಶೀಘ್ರದಲ್ಲಿ ನಾರಾಯಣನನ್ನು ಶರಣುಹೊಂದಿರಿ ಎಂದರ್ಥ. ವಿಷಯಸಂಗದಲ್ಲಿ ಬಾಧಕ ತಿಳಿಸಿ ಶ್ರೀಹರಿಯನ್ನು ಶರಣು ಹೊಂದಬೇಕು ಎಂದು ವಿಧಿಸಿರುವರು. ॥೨೪॥

ಪರಮಾತ್ಮನನ್ನು ಶರಣು ಹೊಂದುವದು ದುಸ್ಸಾಧ್ಯವಲ್ಲ ಎಂದು ಹೇಳುವರು-

**ನ ಹ್ಯಚ್ಯುತಂ ಪ್ರೀಣಯತೋ ಬಹ್ವಾಯಾಸೋಽಸುರಾತ್ಮಜಾಃ ।**
**ಆತ್ಮತ್ವಾತ್ಸರ್ವಭೂತಾನಾಂ ಸಿದ್ಧತ್ವಾದಿಹ ಸರ್ವತಃ ॥೨೫॥**

**ಅಸುರಾತ್ಮಜಾಃ** ದೈತ್ಯಪುತ್ರರೇ, ಶ್ರೀಹರಿಯು **ಸರ್ವಭೂತಾನಾಂ** ಎಲ್ಲ ಪ್ರಾಣಿಗಳಿಗೂ **ಇಹ** ದೇಹದಲ್ಲಿ **ಆತ್ಮತ್ವಾತ್** ಸ್ವಾಮಿಯಾಗಿರುವದರಿಂದ **ಸರ್ವತಃ** ಎಲ್ಲ ಕಡೆಗೂ **ಸಿದ್ಧತ್ವಾತ್** ವ್ಯಾಪ್ತನಾಗಿರುವದರಿಂದ **ಅಚ್ಯುತಂ** ಶ್ರೀಹರಿಯನ್ನು **ಪ್ರೀಣಯತಃ** ಪ್ರಸನ್ನೀಕರಿಸಿ ಕೊಳ್ಳುವವನಿಗೆ **ಬಹು ಆಯಾಸಃ** ಹೆಚ್ಚು ಆಯಾಸವು **ನ ಹಿ** ಇಲ್ಲ. ದೂರವಿಲ್ಲದಿರುವದರಿಂದಲೂ ಶರಣು ಹೊಂದಿದರೆ ತನ್ನವನೆಂದು ಸ್ವೀಕರಿಸುವಲ್ಲಿ ಸಂದೇಹವಿಲ್ಲದಿರುವದರಿಂದಲೂ ಆಯಾಸವಿಲ್ಲವೆಂದು ಭಾವ. 'ಯೋಗಕ್ಷೇಮಂ ವಹಾಮ್ಯಹಂ' 'ತದ್ವಂತಿಕೇ' 'ವ್ಯಾಪ್ಯ ನಾರಾಯಣಃ ಸ್ಥಿತಃ' ಮುಂತಾಗಿ ಪ್ರಮಾಣ ಇವೆ. ॥೨೫॥

ಇವನನ್ನೇ ಏಕೆ ಸೇವಿಸಬೇಕು ಎಂದರೆ ಹೇಳುವರು-

**ಪರಾವರೇಷು ಭೂತೇಷು ಬ್ರಹ್ಮಾಂತಸ್ಥಾವರಾದಿಷು ।**
**ಭೌತಿಕೇಷು ವಿಕಾರೇಷು ಭೂತೇಷ್ವಥ ಮಹತ್ಸು ಚ ॥೨೬॥**

**ಗುಣೇಷು ಗುಣಸಾಮ್ಯೇ ಚ ಗುಣವ್ಯತಿಕರೇ ತಥಾ ।**
**ಏಕ ಏವ ಪರೋ ಹ್ಯಾತ್ಮಾ ಭಗವಾನೀಶ್ವರೋಽವ್ಯಯಃ ॥೨೭॥**

**ಬ್ರಹ್ಮಾಂತಸ್ಥಾವರಾದಿಷು** ಬ್ರಹ್ಮದೇವರೇ ಕೊನೆಯಾಗಿ ಸ್ಥಾವರಗಳೆ ಮೊದಲಾಗಿರುವ ಅಂದರೆ ತೃಣಜೀವರಿಂದ ಹಿಡಿದು ಬ್ರಹ್ಮದೇವರ ವರೆಗೆ (ಎಲ್ಲ ಪದಾರ್ಥಗಳು ಭಗವಂತನ ಅಧೀನವೆಂಬಲ್ಲಿ ವಿಶೇಷವಿಲ್ಲವೆಂದು ತಿಳಿಸಲು 'ಬ್ರಹ್ಮಾಂತಸ್ಥಾವರಾದಿಷು' ಎಂದಿರುವರು ಇಲ್ಲವಾದರೆ ಬ್ರಹ್ಮಾದಿಸ್ಥಾವರಾಂತ ಎನ್ನುತ್ತಿದ್ದರು) **ಪರಾವರೇಷು** ಭೂತಭವಿಷ್ಯದ್ವರ್ತಮಾನ ಕಲ್ಪಗಳಲ್ಲಿನ ನೀಚೋಚ್ಚತಾರತಮ್ಯ ವಿಶಿಷ್ಟವಾದ **ಭೂತೇಷು** ಜೀವರಲ್ಲಿ **ಭೌತಿಕೇಷು** ಭೂತಸಂಬಂಧಿ ವಿಕಾರಗಳಾದ ಘಟಾದಿಗಳಲ್ಲಿ, ಬ್ರಹ್ಮಾಂಡ ಮೊದಲಾದವುಗಳಲ್ಲಿ **ಅಥ ಚ** ಪರಮಾಣುಗಳಲ್ಲಿ **ಮಹತ್ಸು ಭೂತೇಷು** ಆಕಾಶಮೊದಲಾದ ಪಂಚಮಹಾಭೂತಗಳಲ್ಲಿ ಮಹದಹಂಕಾರಾದಿಗಳಲ್ಲಿ **ಗುಣೇಷು** ಸತ್ತ್ವ ಮೊದಲಾದ ಗುಣಗಳಲ್ಲಿ **ಗುಣಸಾಮ್ಯೇ ಚ** ಪ್ರಳಯಕಾಲದಲ್ಲಿಯೂ **ತಥಾ** ಹಾಗೂ **ಗುಣವ್ಯತಿಕರೇ** ಗುಣವೈಷಮ್ಯ ರೂಪಸೃಷ್ಟಿಯಲ್ಲಿಯೂ **ಏಕಃ** ಮುಖ್ಯನಾದ **ಅವ್ಯಯಃ** ನಾಶರಹಿತನಾದ **ಪರಃ** ಪೂರ್ಣನಾದ ಸರ್ವವಿಲಕ್ಷಣನಾದ **ಆತ್ಮಾ** ಆದಾನಾದಿಕರ್ತೃವಾದ **ಭಗವಾನ್ ಹಿ** ಶ್ರೀಹರಿಯೇ **ಈಶ್ವರಃ** ನಿಯಾಮಕನು

ವಿಶೇಷ ಃ- ಎಲ್ಲ ದೇಶಕಾಲಗಳಲ್ಲಿ ಶ್ರೀಹರಿಯೇ ನಿಯಾಮಕ. ಬೇರೊಬ್ಬರು ದೇಶಾಂತರ ಕಾಲಾಂತರಗಳಲ್ಲಿ ಇಲ್ಲ. ಆದ್ದರಿಂದ ಅವನೇ ಶರಣ್ಯನು ಎಂದು ಭಾವ. ॥೨೬,೨೭॥

ವ್ಯಾಪ್ತನಾದ ಪರಮಾತ್ಮನಿಗೆ ಜೀವನೊಳಗಿದ್ದು ನಿಯಾಮಕತ್ವವು ಹೇಗೆ ಕೂಡುವದು ಎಂದರೆ ಹೇಳುವರು-

**ಪ್ರತ್ಯಗಾತ್ಮಸ್ವರೂಪೇಣ ಕಾಲರೂಪೇಣ ಚ ಸ್ವಯಮ್ ।**
**ವ್ಯಾಪ್ಯವ್ಯಾಪಕನಿರ್ದೇಶ್ಯೋ ಹ್ಯನಿರ್ದೇಶ್ಯೋ ವಿಕಲ್ಪಿತಃ ॥೨೮॥**

**ಅನಿರ್ದೇಶ್ಯಃ** ಸಾಕಲ್ಯೇನ ಹೇಳಲಾಗದ ಆದರೆ **ಸ್ವಯಂ** ತಾನೇ **ಪ್ರತ್ಯಗಾತ್ಮ-ಸ್ವರೂಪೇಣ** ಜೀವರ ಅಂತರ್ಯಾಮಿ(ಬಿಂಬ)ರೂಪದಿಂದ ಒಳಗೂ **ಚ** ಮತ್ತು **ಕಾಲ-ರೂಪೇಣ** ಹೊರಗೆ ವ್ಯಾಪ್ತವಾದ ಬ್ರಹ್ಮನೆಂದು ಕರೆಸಿಕೊಳ್ಳುವ ಕಾಲರೂಪದಿಂದಲೂ

**ವಿಕಲ್ಪಿತಃ** ಅಚಿಂತ್ಯ ಐಶ್ವರ್ಯವಿಶೇಷದಿಂದ ಶಕ್ತಿ-ವ್ಯಕ್ತಿಬಲದಿಂದ ವಿವಿಧನಾಗಿರುವನು ಆದ್ದರಿಂದಲೇ **ವ್ಯಾಪ್ಯವ್ಯಾಪಕನಿರ್ದೇಶ್ಯಃ** ಸಣ್ಣದರಲ್ಲಿದ್ದುಕೊಂಡು ಸಣ್ಣದೆಂದು ದೊಡ್ಡದರಲ್ಲಿದ್ದುಕೊಂಡು ದೊಡ್ಡವನೆಂದು ಅಂದರೆ ವ್ಯಾಪ್ಯವ್ಯಾಪಕನೆಂದು ಹೇಳಲ್ಪಡಲು ಶಕ್ಯನು. ಇದರಿಂದ ಪರಮಾತ್ಮನ ವ್ಯಾಪ್ತಿಪ್ರಕಾರವನ್ನು ತಿಳಿಸಿರುವರು. ಅವಿಕಲ್ಪಿತಃ ಎಂಬ ಪದಚ್ಛೇದಪಕ್ಷದಲ್ಲಿ ದೇಶಾಂತರ ಕಾಲಾಂತರಗಳಲ್ಲಿ ಬೇರೆಯವನೆಂದು ವಿಕಲ್ಪವಿಲ್ಲದವನೆಂದರ್ಥ.

ಈ ಶ್ಲೋಕದಲ್ಲಿ ಲೋಕೇಶ್ವರನಿಗೆ ಜೀವಾಭೇದ ಅದರಂತೆ ಕ್ಷಣಾದಿಕಾಲಾಭೇದ ತೋರುವದು. ಅದನ್ನು ಪರಿಹರಿಸಿಲು ಪ್ರಮಾಣ ಹೇಳುವರು-

**... ತಾತ್ಪರ್ಯ ...**

**ಅಂತರ್ಯಾಮೀ ಪ್ರತ್ಯಗಾತ್ಮಾ ವ್ಯಾಪ್ತಃ ಕಾಲೋ ಹರಿಃಸ್ಮೃತಃ । ಇತಿ ಚ ।**

ಇಲ್ಲಿ ಪ್ರತ್ಯಗಾತ್ಮನೆಂದರೆ ಅಂತರ್ಯಾಮಿ ಪರಮಾತ್ಮನು. ಜೀವನಲ್ಲ. ವ್ಯಾಪ್ತನಾದ ಶ್ರೀಹರಿಯು ಕಾಲನು ಎಂದು ಸ್ಮೃತಿಯಲ್ಲಿ ಹೇಳಿದೆ. ಈ ಬ್ರಹ್ಮತರ್ಕವಾಕ್ಯವು ಸ್ಮೃತಃ ಎಂದದ್ದರಿಂದ ತನಗೂ ಮೂಲವಾಗಿ ಸ್ಮೃತಿಯಿದೆ ಎಂದು ತಿಳಿಸಿದೆ. ।।೨೮।।

ಶ್ರೀಹರಿಯು ಸರ್ವತ್ರ ವ್ಯಾಪ್ತನಾದ ಮೇಲೆ ನಮಗೇಕೆ ಕಾಣುವದಿಲ್ಲ. ನೀನಾದರೂ ಅನಿರ್ದೇಶ್ಯನಿರ್ದೇಶ್ಯನೂ ಎಂದು ಹೇಳುವಿಯಲ್ಲ ಎಂದರೆ 'ಅಚಿಂತ್ಯಂ ಅವ್ಯಪದೇಶ್ಯಂ ಐಕಾತ್ಮ್ಯಪ್ರತ್ಯಯಸಾರಂ' ಎಂಬ ಶ್ರುತಿಯಿಂದ ಹಾಗೆ ನಿರೂಪಿತವೆಂದು ಹೇಳುತ್ತಾರೆ-

**ಕೇವಲಾನುಭವಾನಂದಸ್ವರೂಪಃ ಪರಮೇಶ್ವರಃ ।**
**ಮಾಯಯಾಽಂತರ್ಹಿತೈಶ್ವರ್ಯ ಈಯತೇ ಗುಣಸರ್ಗಯಾ ।।೨೯।।**

**ಪರಮೇಶ್ವರಃ** ಸರ್ವನಿಯಾಮಕನಾದ ಶ್ರೀಹರಿಯು **ಕೇವಲಾನುಭವಾನಂದ-ಸ್ವರೂಪಃ** ಜಡಮಿಶ್ರವಲ್ಲದ ಜ್ಞಾನಾನಂದಸ್ವರೂಪನು **ಗುಣಸರ್ಗಯಾ** ಗುಣಗಳ ಸೃಷ್ಟಿಗೆ ಕಾರಣವಾದ ಸತ್ವಾದಿಗುಣವ್ಯಕ್ತಿಗೆ ಕಾರಣವಾದ **ಮಾಯಯಾ** ಜಡಪ್ರಕೃತಿಯಿಂದ (ಜೀವಾವರಣವಾದ ಭಾವರೂಪ ಅಜ್ಞಾನದಿಂದ) **ಅಂತರ್ಹಿತೈಶ್ವರ್ಯಃ** ಜೀವರಿಗೆ ತಿಳಿಯದಿರುವ ಐಶ್ವರ್ಯವುಳ್ಳವನೆಂದು **ಈಯತೇ** ಶಾಸ್ತ್ರದಿಂದ ತಿಳಿದು ಬರುವನು.

ಈ ಶ್ಲೋಕದಲ್ಲಿ ಮಾಯಾವಿಯಾದ್ದರಿಂದ ಅವನು ತೋರುವದಿಲ್ಲವೆಂದು ಹೇಳಿದಂತೆ ಕಾಣುವದು ಕಾರಣ ಆಚಾರ್ಯರು ವ್ಯಾಖ್ಯಾನಮಾಡಿ ಪರಿಹರಿಸುವರು-

**... ತಾತ್ಪರ್ಯ ...**

**ಪ್ರಕೃತ್ಯಾ ತಮಸಾಽಽವೃತತ್ವಾದ್ಧರೇರೈಶ್ವರ್ಯಂ ನ ಜ್ಞಾಯತೇ ।**

'ಮಾಯಯಾ' ಎಂದರೆ ಪ್ರಕೃತಿಯಿಂದ ಅಂದರೆ ಪ್ರಾಕೃತವಾದ **ತಮಸಾ** ಅಜ್ಞಾನದಿಂದ ಆವೃತವಾದುದರಿಂದ ನಿಮ್ಮಂಥ ಜೀವರಿಗೆ ಶ್ರೀಹರಿಯ ಐಶ್ವರ್ಯ ತಿಳಿಯಲಾರದು. ಪರಮಾತ್ಮನ ಜ್ಞಾನಹುಟ್ಟಲು ಪ್ರತಿಬಂಧಕವಾದ ಜೀವಾವರಕವಾದ ಭಾವರೂಪ ಅಜ್ಞಾನದಿಂದ ಮುಚ್ಚಲ್ಪಟ್ಟದ್ದರಿಂದ (ಪ್ರತಿಬದ್ಧವಾದ್ದರಿಂದ) ಮಹದೈಶ್ವರ್ಯವುಳ್ಳವನಾದರೂ ಶ್ರೀಹರಿಯ ಐಶ್ವರ್ಯ ನಿಮಗೆ ತಿಳಿಯಲಾಗದು ಎಂದು ಭಾವ. ।।೨೯।।

**ತಸ್ಮಾತ್ಸರ್ವೇಷು ಭೂತೇಷು ದಯಾಂ ಕುರುತ ಸೌಹೃದಮ್ ।**
**ಭಾವಮಾಸುರಮುನ್ಮುಚ್ಯ ತಯಾ ತುಷ್ಯತ್ಯಧೋಕ್ಷಜಃ ।।೩೦।।**

**ತಸ್ಮಾತ್** ಎಲ್ಲ ಜೀವರೂ ಶ್ರೀಹರಿಯ ಆವಾಸಸ್ಥಾನವಾದ್ದರಿಂದ **ಆಸುರಭಾವಂ** ಶ್ರೀಹರಿಯನ್ನು ದ್ವೇಷಿಸುವ ಅಸುರಸ್ವಭಾವವನ್ನು **ಉನ್ಮುಚ್ಯ** ಬಿಟ್ಟು **ಸೌಹೃದಂ** (ಆಶ್ರಿತ್ಯ) ಸ್ನೇಹವನ್ನಾಶ್ರಯಿಸಿ **ಸರ್ವೇಷು ಭೂತೇಷು** ನಿಮಗಿಂತ ಕೆಳಗಿನ ಎಲ್ಲ ಸಜ್ಜೀವರಲ್ಲಿ **ದಯಾಂ** ಕೃಪೆಯನ್ನು **ಕುರುತ** ಮಾಡಿರಿ ಸಮಾನರಲ್ಲಿ **ಸೌಹೃದಂ** ಮೈತ್ರಿಯನ್ನು ಮಾಡಿರಿ ಉತ್ತಮರಲ್ಲಿ ಭಕ್ತಿಮಾಡಿರಿ **ತಯಾ** ಅದರಿಂದ **ಅಧೋಕ್ಷಜಃ** ಶ್ರೀಹರಿಯು **ತುಷ್ಯತಿ** ಸಂತುಷ್ಟನಾಗುವನು.

ವಿಶೇಷ :- ಇಲ್ಲಿ 'ತಯಾ' ಎಂದು ದಯೆಯನ್ನು ಮಾತ್ರ ಪರಾಮರ್ಶಿಸಿ 'ತೇನ' ಎಂದು ಸೌಹೃದವನ್ನು ಪರಾಮರ್ಶಿಸದಿರುವದು ದಯೆಯು ಅತ್ಯುಪಕಾರಕವು ಮೈತ್ರಿಯೇ ಅನತ್ಯುಪಕಾರಕವೆಂದು ತಿಳಿಸಲು ಎಂದು ತಿಳಿಯಬೇಕು.

'ತಸ್ಮಾತ್' ಎಂದರೆ ಯಾವುದರಿಂದ ಎಂದು ತಿಳಿಯುವದಿಲ್ಲ ಕಾರಣ ಪ್ರಮಾಣದಿಂದ ಪರಾಮೃಶ್ಯವಾದುದನ್ನು ತೋರಿಸುತ್ತ ಶ್ಲೋಕವನ್ನು ವ್ಯಾಖ್ಯಾನಿಸುವರು-

**... ತಾತ್ಪರ್ಯ ...**

**ವಿಷ್ಣೋರ್ಗೃಹತ್ವಾದ್ಭೂತೇಷು ದಯಾ ಕಾರ್ಯಾ ವಿಜಾನತಾ । ಇತಿ ಚ ।**

ಎಲ್ಲ ಕಡೆಯಲ್ಲಿ ಶ್ರೀಹರಿ ಇರುವನೆಂದು ಅನುಸಂಧಾನವುಳ್ಳವನು ಶ್ರೀಹರಿಯ ಗೃಹವೆಂದು ತಿಳಿದು ಎಲ್ಲ ಭೂತಗಳಲ್ಲಿ ದಯೆ ಮಾಡಬೇಕು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ।।೩೦।।

ಶ್ರೀಹರಿಯ ಸಂತುಷ್ಟಿಯ ಪ್ರಯೋಜನ ಹೇಳುತ್ತಾರೆ-

**ತುಷ್ಟೇ ಚ ತತ್ರ ಕಿಮಲಭ್ಯಮನಂತ ಆದ್ಯೇ**
**ಕಿಂ ತೈರ್ಗುಣವ್ಯತಿಕರೈರಿಹ ಯೇಽನುಸಿದ್ಧಾಃ ।**
**ಧರ್ಮಾದಿಭಿಃ ಕಿಮಗುಣೇನ ಚ ಕಾಂಕ್ಷಿತೇನ**
**ಸಾರಂ ಜುಷಾಂ ಚರಣಯೋರುಪಗಾಯತಾಂ ನಃ ॥೩೦॥**

**ಆದ್ಯೇ** ಎಲ್ಲಕ್ಕೂ ಕಾರಣನಾದ **ಅನಂತೇ** ಅಪರಿಚ್ಛನ್ನನಾದ ಉತ್ಪತ್ತಿನಾಶ-ರಹಿತನಾದ **ತತ್ರ** ಶ್ರೀಹರಿಯು **ತುಷ್ಟೇ ಚ** ಸಂತುಷ್ಟನಾದರೇ **ಅಲಭ್ಯಂ ಕಿಂ** ದೊರೆಯದಿರುವದಾವುದು ಎಲ್ಲವೂ ದೊರೆಯುವದೆಂದರ್ಥ. ಆದರೆ ಏಕಾಂತಭಕ್ತರು ಯಾವುದನ್ನು ಅಪೇಕ್ಷಿಸಬಾರದೆಂದು ಹೇಳುತ್ತಾರೆ. **ಚರಣಯೋಃ** ಶ್ರೀಹರಿಯ ಪಾದಕಮಲಗಳ **ಸಾರಂ** ಗುಣವೆಂಬ ಮಕರಂದವನ್ನು **ಜುಷಾಂ** ಸೇವಿಸುವ ಮತ್ತು **ಉಪಾಗಾಯತಾಂ** ಆ ಋಣವನ್ನು ಗಾನಮಾಡುವ **ನಃ** ನಮಗೆ ಏಕಾಂತಭಕ್ತರಿಗೆ **ಇಹ** ಈ ಜನ್ಮದಲ್ಲಿ **ಯೇ** ಯಾವ ವಿಷಯ ಸುಖಗಳು **ಅನುಸಿದ್ಧಾಃ** ಹುಟ್ಟಿನಿಂದಲೂ ದೊರೆತಿರುವವೋ **ತೈಃ ಗುಣವ್ಯತಿಕರೈಃ** ಶಬ್ದಾದಿವಿಷಯಸುಖಗಳಿಂದ **ಕಿಂ** ಏನು ಪ್ರಯೋಜನ ? ಏನೂ ಪ್ರಯೋಜನವಿಲ್ಲ. **ಕಾಂಕ್ಷಿತೇನ** ಅಪೇಕ್ಷಿಸಿದ **ಅಗುಣೇನ** ಗುಣಕಾರ್ಯವಲ್ಲದ ಮೋಕ್ಷದಿಂದ **ಕಿಂ** ಏನು ಪ್ರಯೋಜನ ಅಂದ ಮೇಲೆ **ಧರ್ಮಾದಿಭಿಃ** ನಶ್ವರಫಲಕೊಡುವ ಯಜ್ಞಾದಿಸಕಾಮಕರ್ಮಗಳಿಂದ **ಕಿಂ** ಪ್ರಯೋಜನವಾದರೂ ಏನು ? **ಸಾರಂ** ಜಗತ್ಸಾರನಾದ ಶ್ರೀಹರಿಯನ್ನು ಸೇವಿಸುವ ಪಾದಕಮಲಗಳನ್ನು ಗಾನಮಾಡುವ ಎಂದೂ ಅರ್ಥ ಮಾಡಬಹುದು.

ಈ ಶ್ಲೋಕದಲ್ಲಿಸರ್ವಾಪೇಕ್ಷಿತವಾದ ಮೋಕ್ಷಾಪೇಕ್ಷೆಯನ್ನು ಧರ್ಮಾದಿಗಳಂತೆ ಅಪೇಕ್ಷೆಮಾಡಬಾರದೆಂದು ಹೇಳಿದಂತೆ ತೋರುವದು ಅದು ಸರಿಯಲ್ಲ. ಮೋಕ್ಷಶಾಸ್ತ್ರವ್ಯರ್ಥವಾಗಬೇಕಾಗುವದು. ಆದ ಕಾರಣ ಪ್ರಮಾಣದಿಂದಲೇ ಅಭಿಪ್ರಾಯ ತಿಳಿಸುವರು-

**... ತಾತ್ಪರ್ಯ ...**

**'ಕಾಂಕ್ಷತೋ ಮೋಕ್ಷಗಮಪಿ ಸುಖಂ ನಾಕಾಂಕ್ಷತೋ ಯಥಾ' ॥ ಇತಿ ಚ ॥**

**ನಾಕಾಂಕ್ಷತಃ** ಅಪೇಕ್ಷಿಸದಿರುವವರಿಗೆ **ಯಥಾ** ಎಷ್ಟು **ಮೋಕ್ಷಗಂ ಸುಖಂ** ಮೋಕ್ಷದಲ್ಲಿ ಸುಖವಾಗುವದೋ **ತಥಾ** ಅಷ್ಟು **ಕಾಂಕ್ಷತಃ** ಅಪೇಕ್ಷಿಸಿದವರಿಗೆ ನ ಆಗುವದಿಲ್ಲ. ಅಪಕ್ವಭಕ್ತಿಯಿಂದ ಬರುವ ಮುಕ್ತಿಗಿಂತ ಪಕ್ವಭಕ್ತಿಯೇ ಉತ್ತಮ. ಅದು ಪರಮಾನಂದಸ್ವರೂಪವು ಮೋಕ್ಷದಲ್ಲಿ ಸುಖಾಧಿಕ್ಯಕ್ಕೆ ಕಾರಣವಾದುದು ಅಂದಮೇಲೆ ಧರ್ಮಾದಿಗಳಿಂದ ಪ್ರಯೋಜನವಿಲ್ಲ. ಶಬ್ದಾದಿವಿಷಯಗಳಿಂದ ಪ್ರಯೋಜನವಿಲ್ಲ.

ಕಾಂಕ್ಷಿತೇನ ಎಂದು ವಿಶೇಷಣಕೊಟ್ಟದ್ದರಿಂದ ಮೋಕ್ಷದಲ್ಲಿನ ಸುಖವನ್ನು ಅಪೇಕ್ಷಿಸುವವರಿಗೆ ಸುಖ ಅಲ್ಪ. ಅಪೇಕ್ಷಿಸದಿರುವ ಏಕಾಂತಭಕ್ತರಿಗೆ ಸುಖ ಅನಲ್ಪ(ಅಧಿಕ)ವೆಂದು ತಿಳಿಸಿರುವರು. ||೩೧||

ಹಾಗಾದರೆ ಧರ್ಮಾದಿಪ್ರತಿಪಾದಕ ಶಾಸ್ತ್ರ ಸಫಲ ಹೇಗಾಗಬೇಕು ಎಂದರೆ ಹೇಳುವರು-

**ಧರ್ಮಾರ್ಥಕಾಮ ಇತಿ ಯೋ ವಿಹಿತಸ್ತ್ರಿವರ್ಗ**
**ಈಕ್ಷಾತ್ರಯೀ ನಯದಮೌ ವಿವಿಧಾ ಚ ವಾರ್ತಾ ।**
**ಮನ್ಯೇ ತದೇತದಖಿಲಂ ನಿಗಮಸ್ಯ ಸತ್ಯಂ**
**ಸ್ವಾತ್ಮಾರ್ಪಣಂ ಸ್ವಸುಹೃದಃ ಪರಮಸ್ಯ ಪುಂಸಃ ||೩೨||**

**ಧರ್ಮಾರ್ಥಕಾಮಃ ಇತಿ** ಧರ್ಮ, ಅರ್ಥ, ಕಾಮ ಎಂಬ **ಯಃ** ಯಾವ **ತ್ರಿವರ್ಗಃ** ಮೂರು ಪುರುಷಾರ್ಥಗಳು **ವಿಹಿತಃ** ಆ ಆ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿವೆ ಅವುಗಳ **ಈಕ್ಷಾ** ಅನುಷ್ಠಾನವು, ಜ್ಞಾನವು, **ತ್ರಯೀ** ಮೂರು ವೇದಗಳು ಅವುಗಳ **ಈಕ್ಷಾ** ಶಬ್ದ ಮತ್ತು ಅರ್ಥಜ್ಞಾನಗಳು **ಯೌ** ಯಾವ **ನಯದವೌ** ನೀತಿಶಾಸ್ತ್ರದಂಡಶಾಸ್ತ್ರಗಳು ಅವುಗಳ **ಈಕ್ಷಾ** ತಾತ್ಪರ್ಯಜ್ಞಾನವು **ಯಾ** ಯಾವ **ವಿವಿಧಾ ವಾರ್ತಾ** ಕೃಷಿವಾಣಿಜ್ಯ ಮುಂತಾದ ವ್ಯಾಪಾರಗಳು ಅವುಗಳ **ಈಕ್ಷಾ** ಪ್ರಯೋಗಜ್ಞಾನವು **ಚ** ಋಗ್ವೇದೋ, ಯಜುರ್ವೇದಃ ಎಂದಾರಂಭಿಸಿ ಸರ್ವದೇವಯಜನಂ ವಿದ್ಯಾ ಎನ್ನುವವರೆಗೆ ಹೇಳಿರುವ ಸರ್ಪವಿದ್ಯಾ, ನಕ್ಷತ್ರವಿದ್ಯಾ, ಇತ್ಯಾದಿ ಎಲ್ಲ ವಿದ್ಯೆಗಳೇನುಂಟೋ ಅವುಗಳ ಜ್ಞಾನವು **ತದೇತದಖಿಲಂ** ಈ ಎಲ್ಲವೂ **ಸ್ವಸುಹೃದಃ** ನಿರ್ನಿಮಿತ್ತಬಂಧುವಾದ **ಪರಮಸ್ಯ** ಸರ್ವೋತ್ತಮನಾದ **ಪುಂಸಃ** ಶ್ರೀಹರಿಗೆ **ಸ್ವಾತ್ಮಾರ್ಪಣಂ ಚೇತ್** ತನ್ನನ್ನು ಅರ್ಪಿಸಲು ಉದ್ದಿಷ್ಟವಾದರೆ **ನಿಗಮಸ್ಯ** ಋಗ್ವೇದಾದಿವೇದಗಳ **ಸತ್ಯಂ** ಯಥಾರ್ಥಫಲವೆಂದು **ಮನ್ಯೇ** ತಿಳಿಯುತ್ತೇನೆ ಅಥವಾ ಇದೆಲ್ಲವು ವೇದದ **ಸತ್ಯಂ** ಅಬಾಧಿತಾರ್ಥವು ಫಲಸಾಧನವು ಎಂದರೆ ಇದಕ್ಕಿಂತ ನಿರ್ನಿಮಿತ್ತ ಬಂಧುವಾದ **ಅಸ್ಯ ಪುಂಸಃ** ಈ ಶ್ರೀಹರಿಯ **ಸ್ವಾತ್ಮಾರ್ಪಣಂ** ನವವಿಧಭಕ್ತಿಯಿಂದ ಸ್ವಾತ್ಮನಿವೇದನವು **ಪರಂ** ಅತ್ಯುತ್ತಮ ಸಾಧನವು ಎಂದಾದರೂ ಅನ್ವಯ. ಶ್ರೀಹರಿಗೆ ಸಮರ್ಪಿಸದ ಧರ್ಮಾದಿಗಳಿಂದ ಪ್ರಯೋಜನವಿಲ್ಲವೆಂದು ಪ್ರಹ್ಲಾದರಾಜರ ಅಭಿಪ್ರಾಯ. ||೩೨||

ಲೋಕದಲ್ಲಿ ಲೋಕೇಶ್ವರನಿಂದ ಉಪದಿಷ್ಟವಾದುದು, ಸಂಪ್ರದಾಯಾಗತವಾದದ್ದು ಅವಶ್ಯವಿಶ್ವಸನೀಯವಾಗಿ ಕಂಡಿದೆ. ಆದ್ದರಿಂದ ಸರ್ವಥಾ ವಿಶ್ವಾಸಮಾಡಲೇಬೇಕೆಂದು ಹೇಳುವರು-

**ಜ್ಞಾನಂ ತದೇತದಖಿಲಂ ದುರವಾಪಮಾಹ**
**ನಾರಾಯಣೋ ನರಸಖಃ ಕಿಲ ನಾರದಾಯ ।**
**ಏಕಾಂತಿನಾಂ ಭಗವತಸ್ತದಕಿಂಚನಾನಾಂ**
**ಪಾದಾರವಿಂದರಜಸಾಽಽಪ್ಲುತದೇಹಿನಾಂ ಸ್ಯಾತ್ ।।೩೩।।**

**ದುರವಾಪಂ** ಶ್ರೀಹರಿಯ ಅನುಗ್ರಹವಿಲ್ಲದೇ ಗುರೂಪದೇಶವಿಲ್ಲದೇ ಹೊಂದಲಾಗದ **ಅಖಿಲಂ** ಎಲ್ಲ **ತದೇತತ್** ಈ **ಜ್ಞಾನಂ** ಜ್ಞಾನವನ್ನು, ಶಾಸ್ತ್ರವನ್ನು **ನರಸಖಃ** ನರನೆಂಬ(ಶೇಷಾವೇಶೀ)ಸ್ನೇಹಿತನಾದ **ನಾರಾಯಣಃ** ಯಮಧರ್ಮ ಪುತ್ರನಾದ ನಾರಾಯಣನೆಂಬ ಅವತಾರದ ಶ್ರೀಹರಿಯು **ನಾರದಾಯ** ನಾರದರಿಗೆ **ಆಹ** ಹೇಳಿದನು. **ಕಿಲ** ಶ್ರೀಹರಿಯಿಂದ ಬಂದದ್ದಾದ್ದರಿಂದ ಅತ್ಯಂತ ಶ್ರದ್ಧೇಯವು. ಇಂತಹ ಜ್ಞಾನಕ್ಕೆ ಅಧಿಕಾರಿಗಳನ್ನು ಹೇಳುತ್ತಾರೆ. **ತತ್** ಆ ಜ್ಞಾನವು **ಭಗವತಃ** ಶ್ರೀಹರಿಯ **ಪಾದಾರವಿಂದರಜಸಾ** ಪಾದಕಮಲಗಳ ಧೂಳಿನಿಂದ **ಆಪ್ಲುತದೇಹಿನಾಂ** ಸ್ನಾನಮಾಡಿದ ದೇಹವುಳ್ಳ **ಅಕಿಂಚನಾನಾಂ** ಶ್ರೀಹರಿಯನ್ನು ಬಿಟ್ಟು ಬೇರೊಂದು ಪದಾರ್ಥವನ್ನು ಅಪೇಕ್ಷಿಸದಿರುವ **ಏಕಾಂತಿನಾಂ** ಏಕಾಂತ ಭಕ್ತರಿಗೆ **ಸ್ಯಾತ್** ಶ್ರೀಹರಿಯ ಅನುಗ್ರಹದಿಂದ ದೊರೆಯುವದು. ।।೩೩।।

ಈ ಜ್ಞಾನ ನಿನಗೆ ಹೇಗೆ ಬಂತು ಎಂದರೆ ಹೇಳುತ್ತಾರೆ-

**ಶ್ರುತಮೇತನ್ಮಯಾ ಪೂರ್ವಂ ಜ್ಞಾನಂ ವಿಜ್ಞಾನಸಂಯುತಮ್ ।**
**ಧರ್ಮಂ ಭಾಗವತಂ ಶುದ್ಧಂ ನಾರದಾದ್ದೇವದರ್ಶನಾತ್ ।।೩೪।।**

**ಪೂರ್ವಂ** ಹಿಂದೆ **ದೇವದರ್ಶನಾತ್** ಶ್ರೀಹರಿಯ ಅಪರೋಕ್ಷಿಗಳಾದ **ನಾರದಾತ್** ನಾರದಋಷಿಯಿಂದ **ಏತತ್** ಈ **ಭಾಗವತಂ** ಭಗವತ್ಸಂಬಂಧಿಯಾದ **ಶುದ್ಧಂ ಧರ್ಮಂ** ಮೋಕ್ಷಸಾಧನವಾದ ಧರ್ಮವನ್ನು **ವಿಜ್ಞಾನಸಂಯುತಂ** ತಾರತಮ್ಯಜ್ಞಾನ ವಿಶಿಷ್ಟವಾದ **ಜ್ಞಾನಂ** ಶ್ರೀಹರಿಯ ಜ್ಞಾನವು **ಮಯಾ** ನನ್ನಿಂದ **ಶ್ರುತಂ** ಕೇಳಲ್ಪಟ್ಟಿತು. ।।೩೪।।

ನೀನು ಎಲ್ಲಿಯೂ ಹೋಗಿಲ್ಲ. ನಾರದರೂ ಇಲ್ಲಿ ಬಂದಿಲ್ಲ. ಹೇಗೆ ನಿನ್ನ ಮಾತು ನಂಬುವದು ಎಂದು ಕೇಳುವರು ಬಾಲಕರು-

**ದೈತ್ಯಪುತ್ರಾ ಊಚುಃ**

**ಪ್ರಹ್ಲಾದ ತ್ವಂ ವಯಂ ಚಾಪಿ ನರ್ತೇಽನ್ಯಂ ವಿದ್ಮಹೇ ಗುರುಮ್ ।**
**ಏತಾಭ್ಯಾಂ ಗುರುಪುತ್ರಾಭ್ಯಾಂ ಬಾಲಾನಾಮಪಿ ಹೀಶ್ವರಃ ।।೩೫।।**

**ಹೇ ಪ್ರಹ್ಲಾದ** ಎಲೋ ಪ್ರಹ್ಲಾದನೇ **ತ್ವಂ** ನೀನು **ವಯಂ ಚ ಅಪಿ** ನಾವೂ ಕೂಡ **ಏತಾಭ್ಯಾಂ ಗುರುಪುತ್ರಾಭ್ಯಾಂ** ಈ ಶುಕ್ರಪುತ್ರರಾದ ಶಂಡಾಮರ್ಕರನ್ನು **ಋತೇ** ಬಿಟ್ಟು **ಅನ್ಯಂ ಗುರುಂ** ಬೇರೆ ಉಪದೇಶಕನನ್ನು **ನ ವಿದ್ಮಹೇ** ತಿಳಿಯೆವು **ಬಾಲಾನಾಂ** ಬಾಲಕರಿಗೆ **ಈಶ್ವರಃ** ಪರಮಾತ್ಮನು **ಅಸ್ತಿ ಅಪಿ** ಇರುವನೇನು ? ಅವನ ಜ್ಞಾನವೇ ಇಲ್ಲವಾದ್ದರಿಂದ ಹುಡುಗರ ಪಾಲಿಗೆ ಈಶ್ವರನೇ ಇಲ್ಲವೆಂದರ್ಥ. ಆದ್ದರಿಂದ ಶ್ರೀಹರಿಯು ಉಪದೇಶಕನಲ್ಲ **ಹಿ** ಯಾವ ಕಾರಣ **ಬಾಲಾನಾಂ** ಬಾಲಕರಾದ **ನಃ** ನಮಗೆ **ಈಶ್ವರಃ** ಹಿರಣ್ಯಕಶಿಪುವಿನ ರೂಪದಲ್ಲಿ ನಿಯಾಮಕನು **ಅಸ್ತಿ** ಇರುವನು. ನಾವೆಲ್ಲಿಯೂ ಹೋಗುವಂತಿಲ್ಲವೆಂದು ಭಾವ. ।।೩೫।।

**ಬಾಲಾಸ್ಯಾಂತಃಪುರಸ್ಥಸ್ಯ ಮಹತ್ಸಂಗೋ ದುರನ್ವಯಃ ।**
**ಛಿಂದಿ ನಃ ಸಂಶಯಂ ಸೌಮ್ಯ ಸ್ಯಾಚ್ಚೇದ್ವಿಸ್ರಂಭಕಾರಣಮ್ ।।೩೬।।**

**ಹೇ ಸೌಮ್ಯ** ಪ್ರಹ್ಲಾದನೇ **ಅಂತಃಪುರಸ್ಥಸ್ಯ ಬಾಲಸ್ಯ** ಅಂತಃಪುರದಲ್ಲಿರುವ ಬಾಲಕನಿಗೆ **ಮಹತ್ಸಂಗಃ** ಮಹಾತ್ಮರಾದ ನಾರದರ ಸಮಾಗಮವು **ದುರನ್ವಯಃ** ಕೂಡದು **ವಿಸ್ರಂಭಕಾರಣಂ** ನಂಬುವದಕ್ಕೆ ಕಾರಣವು **ಸ್ಯಾತ್ ಚೇತ್** ಇದ್ದುದಾದರೆ ಅದನ್ನು ಹೇಳಿ **ನಃ** ನಮಗೆ ಉಂಟಾದ **ಸಂಶಯಂ** ಮಹತ್ಸಮಾಗಮವು ಅಸಾಧ್ಯವೆಂಬ ಸಂಶಯವನ್ನು **ಛಿಂದಿ** ಪರಿಹರಿಸು. ।।೩೬।।

**।। ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ಷಷ್ಠೋಽಧ್ಯಾಯಃ ।।**

**।। ಶ್ರೀಕೃಷ್ಣಾರ್ಪಣಮಸ್ತು ।।**

★★★

# ಅಥ ಸಪ್ತಮೋಽಧ್ಯಾಯಃ

**ಸಾರಾಂಶ**

ದೈತ್ಯಬಾಲಕರಿಗೆ ಪ್ರಹ್ಲಾದರಾಜರು ತಮ್ಮ ಪೂರ್ವವೃತ್ತಾಂತವನ್ನು ವಿವರಿಸಿದರು. ನನ್ನ ತಂದೆ ಹಿರಣ್ಯಕಶಿಪುವು ತಪಸ್ಸಿಗಾಗಿ ಮಂದರಪರ್ವತಕ್ಕೆ ಹೋದಾಗ ಇತ್ತ ದೇವತೆಗಳು ದಾನವರ ಮೇಲೆ ಆಕ್ರಮಣ ನಡೆಸಿದರು. ಅಸುರರು ಹೆದರಿ ಓಡಿಹೋದರು. ಜಯಶಾಲಿಗಳಾದ ದೇವತೆಗಳು ನನ್ನ ತಂದೆಯ ಅರಮನೆಯನ್ನು ವಶಪಡಿಸಿಕೊಂಡರು. ನನ್ನ ತಾಯಿಯಾದ ಕಯಾಧುವನ್ನು ದೇವೇಂದ್ರ ಹಿಡಿದೊಯ್ಯಲು ತೊಡಗಿದ. ಆಗ ಅವಳು ಗರ್ಭಿಣಿ. ನಾನು ಅವಳ ಗರ್ಭದಲ್ಲಿದ್ದೆ. ಹರೀಚ್ಛೆಯಿಂದ ನಾರದರು ಬಂದು ದೇವೇಂದ್ರನನ್ನು ತಡೆದರು. ಪತಿವ್ರತೆಯಾದ ಕಯಾಧುವನ್ನು ಬಿಟ್ಟು ಬಿಡು ಎಂದರು. ದೇವೇಂದ್ರ ಹೇಳಿದ ಇವಳು ಗರ್ಭಿಣಿ. ಇವಳ ಉದರದಲ್ಲಿ ಬಲಿಷ್ಠವಾದ ದೈತ್ಯಸಂತಾನವಿದೆ. ಪ್ರಸವ ಪರ್ಯಂತ ಅವಳು ನನ್ನ ವಶದಲ್ಲಿದ್ದರೆ ಹುಟ್ಟುವ ಮಗುವನ್ನು ಕೊಂದು ಅವಳನ್ನು ಬಿಟ್ಟು ಬಿಡುತ್ತೇನೆ. ನಾರದರು ಹೇಳಿದರು ಈ ಸಂತಾನವನ್ನು ಕೊಲ್ಲುವುದು ನಿನ್ನಿಂದಾಗದು. ಇವನು ಮಹಾಭಗವದ್ಭಕ್ತ. ಹೀಗೆ ಹೇಳಿದಾಕ್ಷಣ ದೇವೇಂದ್ರ ಮಾತನಾಡದೇ ಅವಳಿಗೆ ಒಂದು ಪ್ರದಕ್ಷಿಣೆ ಹಾಕಿ ಹೊರಟುಹೋದ.

ನಾರದರು ನನ್ನ ತಾಯಿಯನ್ನು ತಮ್ಮ ಆಶ್ರಮದಲ್ಲಿ ಇರಿಸಿಕೊಂಡರು. ನನ್ನ ತಂದೆ ಹಿಂತಿರುಗಿ ಬರುವವರೆಗೆ ಅವಳು ಭಕ್ತಿಯಿಂದ ಮುನಿಯ ಸೇವೆಯನ್ನು ಮಾಡಿದಳು. ತನ್ನ ಗರ್ಭಕ್ಷೇಮವಾಗಿರುವದಕ್ಕೂ ಇಚ್ಛಾನುಸಾರ ಪ್ರಸವವಾಗುವದಕ್ಕೂ ಮುನಿಯಿಂದ ವರವನ್ನು ಪಡೆದಳು. ಆ ಸಮಯದಲ್ಲಿ ನಾರದರು ನನ್ನನ್ನು ಉದ್ದೇಶಿಸಿ ತಾಯಿಗೆ ತತ್ತ್ವೋಪದೇಶ ನೀಡಿದರು. ಅವಳು ಅದನ್ನು ಮರೆತರೂ ನಾನು ಮರೆತಿಲ್ಲ. ನಾರದರ ಅನುಗ್ರಹದಿಂದ ಇಂದಿಗೂ ಅವರು ನೀಡಿದ ತತ್ತ್ವಜ್ಞಾನ ನನ್ನಲ್ಲಿ ಹಾಗೆ ಹಚ್ಚುಹಸಿರಾಗಿ ಉಳಿದಿದೆ.

ನಮ್ಮ ಶರೀರಗಳ ಎಲ್ಲ ಚಟುವಟಿಕೆಗಳೂ ಭಗವಂತನ ಅಧೀನ. ಅವನು ನಾಶರಹಿತ, ದೋಷರಹಿತ, ಸ್ವತಂತ್ರ, ಸರ್ವಜ್ಞ, ಸರ್ವಾಶ್ರಯ, ಸರ್ವವ್ಯಾಪ್ತ, ಕರ್ಮಲೇಪರಹಿತ, ಚಿನ್ನದ ಗಣಿಗಳಲ್ಲಿ ಚಿನ್ನವಿದ್ದರೂ ಅದನ್ನು ತೆಗೆಯುವ ಉಪಾಯ ಬಲ್ಲವನಿಗೆ ಮಾತ್ರ ಗೊತ್ತು. ಅವನಿಗೇನೇ ಚಿನ್ನ ಲಭ್ಯ. ಹಾಗೆ ಎಲ್ಲೆಡೆ ಇರುವ ಭಗವಂತನನ್ನು ಕಾಣಲು ಭಕ್ತ್ಯಾದಿ ಉಪಾಯಗಳು ಬೇಕು. ಭಕ್ತ್ಯಾದಿ ಉಪಾಯಗಳಿಂದ ಯುಕ್ತನಾದವನಿಗೆ ಭಗವಂತನೆಂಬ ಬಂಗಾರದ ಪ್ರಾಪ್ತಿ. ಮುಕುಂದನನ್ನು ಒಲಿಸಲು ದೇವ, ಋಷಿ, ಬ್ರಾಹ್ಮಣ, ಸದಾಚಾರ, ದಾನ, ತಪಸ್ಸು, ಪೂಜೆ, ಶೌಚ, ಇದಾವುದೂ ಕಾರಣವಲ್ಲ. ನಿರ್ಮಲ ಭಕ್ತಿಬೇಕು. ಅದರಿಂದಲೇ ಭಗವಂತನನ್ನು ಹೊಂದಲು ಸಾಧ್ಯ. ಹೀಗೆ ಅನೇಕ ತತ್ವಗಳನ್ನು ಪ್ರಹ್ಲಾದರಾಜರು ದೈತ್ಯಬಾಲಕರಿಗೆ ಉಪದೇಶಿಸಿದರು.

★★★

ಮೋಕ್ಷಸಾಧನಗಳಲ್ಲಿ ಭಗವದ್ಭಕ್ತಿಯೇ ಶ್ರೀಹರಿಯ ಪರಮಪ್ರಸಾದ ಸಾಧನವಾದುದು. ಆದ್ದರಿಂದ ಅಧಿಕಾರಿಯು ಅದನ್ನೇ ಸಂಪಾದಿಸಬೇಕು ಇವೇ ಮೊದಲಾದ ಪ್ರಮೇಯಗಳನ್ನು ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ.

ಈ ಶಾಸ್ತ್ರವು ಭಕ್ತಿಪ್ರತಿಪಾದಕವಾದ್ದರಿಂದ ಮತ್ತೆ ಮತ್ತೆ ಪ್ರತಿಪಾದನ ಮಾಡಿದರೂ ಪುನರುಕ್ತಿ ಶಂಕೆಯಿಲ್ಲ. ಮೊದಲಿಗೆ ದೈತ್ಯಪುತ್ರರಿಂದ ಕೇಳಲ್ಪಟ್ಟ ಪ್ರಹ್ಲಾದರಾಜರು ಏನು ಮಾಡಿದರೆಂಬ ಧರ್ಮರಾಜರ ಶಂಕೆಯನ್ನು ವಿಧ್ಯಂಕಜರು(ನಾರದರು) ಪರಿಹರಿಸುವರೆಂದು ಹೇಳುವರು-

**ನಾರದ ಉವಾಚ**

**ಏವಂ ದೈತ್ಯಸುತೈಃ ಪೃಷ್ಟೋ ಮಹಾಭಾಗವತೋಽಸುರಃ ।**
**ಉವಾಚ ಸ್ಮಯಮಾನಸ್ತಾನ್ ಸ್ಮರನ್ ಮದನುಶಾಸನಮ್*** ॥೧॥

**ಏವಂ** ಹಿಂದಿನ ಅಧ್ಯಾಯದ ಕೊನೆಯಲ್ಲಿ ಹೇಳಿದಂತೆ **ದೈತ್ಯಸುತೈಃ** ದೈತ್ಯಬಾಲಕರಿಂದ **ಪೃಷ್ಟಃ** ಪ್ರಶ್ನಿಸಲ್ಪಟ್ಟ **ಮಹಾಭಾಗವತಃ** ಉತ್ತಮಭಗವದ್ಭಕ್ತರಾದ **ಅಸುರಃ** ದೈತ್ಯವಂಶದಲ್ಲಿ ಹುಟ್ಟಿದ ಪ್ರಹ್ಲಾದರಾಜರು **ಮದನುಶಾಸನಂ** ನನ್ನ (ನಾರದನಾದ) ಉಪದೇಶವನ್ನು **ಸ್ಮರನ್** ಸ್ಮರಿಸುತ್ತ **ಸ್ಮಯಮಾನಃ** ನಗುತ್ತ **ತಾನ್** ಆ ದೈತ್ಯಬಾಲಕರನ್ನು ಕುರಿತು **ಉವಾಚ** ಹೇಳಿದರು.

ವಿಶೇಷ :- ಮದನುಭಾಷಿತಂ ಎಂಬ ಪಾಠದಲ್ಲಿ ನಾನು ಹೇಳಿದ್ದನ್ನು ಎಂದರ್ಥ.

* 'ಭಾಷಿತಮ್' ಇತಿ ಪಾಠಾಂತರ.

**ಪ್ರಹ್ಲಾದ ಉವಾಚ**

**ಪಿತರಿ ಪ್ರಸ್ಥಿತೇಽಸ್ಮಾಕಂ ತಪಸೇ ಮಂದರಾಚಲಮ್ ।**
**ಯುದ್ಧೋದ್ಯೋಗಂ ಪರಂ ಚಕ್ರುರ್ವಿಬುಧಾ ದಾನವಾನ್ ಪ್ರತಿ ॥೨॥**

**ಪಿಪೀಲಿಕೈರಹಿರಿವ ದಿಷ್ಟ್ಯಾ ಲೋಕೋಪತಾಪನಃ ।**
**ಪಾಪೇನ ಪಾಪೋಽಭಕ್ಷೀತಿ ವಾದಿನೋ ವಾಸವಾದಯಃ ॥೩॥**

**ಅಸ್ಮಾಕಂ** ನಮ್ಮ **ಪಿತರಿ** ತಂದೆಯಾದ ಹಿರಣ್ಯಕಶಿಪುವು **ತಪಸೇ** ತಪಸ್ಸುಮಾಡಲು **ಮಂದರಾಚಲಂ** ಮಂದರ ಪರ್ವತಕ್ಕೆ **ಪ್ರಸ್ಥಿತೇ ಸತಿ** ಹೋಗಿರಲು **ವಾಸವಾದಯಃ** ಇಂದ್ರ ಮೊದಲಾದ **ವಿಬುಧಾಃ** ದೇವತೆಗಳು(ನಮ್ಮ ತಂದೆಯು ಕೂಡಲೇ ಹಿಂದಕ್ಕೆ ಬರುವದಿಲ್ಲವೆಂದು ತಿಳಿದವರಾಗಿ) **ಪಿಪೀಲಿಕೈಃ** ಇರುವೆಗಳಿಂದ **ಅಹಿಃ ಇವ** ಹಾವು ತಿನ್ನಲ್ಪಡುವಂತೆ **ಲೋಕತಾಪನಃ** ಜನರಿಗೆ ದುಃಖದಾಯಕನಾದ **ಪಾಪಃ** ಪಾಪಿಯಾದ ಹಿರಣ್ಯಕಶಿಪುವು **ಪಾಪೇನ** ತನ್ನ ಪಾಪದಿಂದಲೇ **ಅಭಕ್ಷಿ** ತಿನ್ನಲ್ಪಟ್ಟನು. **ದಿಷ್ಟ್ಯಾ** ದೈವಾತ್ ಲೋಕಕ್ಕೆ ಸುಖವಾಗಲಿ ಎಂದು **ವಾದಿನಃ** ಹೇಳುವವರಾಗಿ **ದಾನವಾನ್ ಪ್ರತಿ** ದೈತ್ಯರ ಮೇಲೆ **ಪರಂ** ಅತಿಶಯವಾದ **ಯುದ್ಧೋದ್ಯೋಗಂ** ಯುದ್ಧಪ್ರಯತ್ನವನ್ನು **ಚಕ್ರುಃ** ಮಾಡಿದರು. ಹಿಂದಿನ ವೈರವನ್ನು ಸ್ಮರಿಸಿ ಬಲವಾದ ಯುದ್ಧ ಮಾಡಿದರೆಂದರ್ಥ.

**ತೇಷಾಮತಿಬಲೋದ್ಯೋಗಂ ನಿಶಮ್ಯಾಸುರಯೂಥಪಾಃ ।**
**ವಧ್ಯಮಾನಾಃ ಸುರೈರ್ಭೀತಾಃ ದುದ್ರುವುಃ ಸರ್ವತೋ ದಿಶಮ್ ॥೪॥**

**ಕಲತ್ರಪುತ್ರವಿತ್ತಾಪ್ತಾನ್ ಗೃಹಾನ್ ಪಶುಪರಿಚ್ಛದಾನ್ ।**
**ನಾವೇಕ್ಷಮಾಣಾಸ್ತ್ವರಿತಾಃ ಸರ್ವೇ ಪ್ರಾಣಪರೀಪ್ಸವಃ ॥೫॥**

**ಸರ್ವೇ** ಎಲ್ಲ **ಅಸುರಯೂಥಪಾಃ** ದೈತ್ಯಸೇನಾಧಿಪತಿಗಳು **ತೇಷಾಂ** ದೇವತೆಗಳ **ಅತಿಬಲೋದ್ಯೋಗಂ** ಬಹಳಬಲದಿಂದ ಕೂಡಿದ ಯುದ್ಧಪ್ರಯತ್ನವನ್ನು **ನಿಶಮ್ಯ** ಕೇಳಿ **ಸುರೈಃ** ದೇವತೆಗಳಿಂದ **ವಧ್ಯಮಾನಾಃ** ಹೊಡೆಯಲ್ಪಟ್ಟವರಾಗಿ **ಸುರೈಃ ಭೀತಾಃ** ದೇವತೆಗಳಿಂದ ಹೆದರಿ **ಪ್ರಾಣಪರೀಪ್ಸವಃ** ಬದುಕುವ ಇಚ್ಛೆಯಿಂದ **ಕಲತ್ರ** ಹೆಂಡತಿ **ಪುತ್ರ** ಮಕ್ಕಳು **ವಿತ್ತ** ಹಣ **ಆಪ್ತಾನ್** ಬಂಧುಗಳನ್ನು **ಗೃಹಾನ್** ಮನೆಗಳನ್ನು **ಪಶುಪರಿಚ್ಛದಾನ್** ದನದ ಕೊಟ್ಟಿಗೆಗಳನ್ನು **ನಾವೇಕ್ಷಮಾಣಾಃ** ಗಮನಿಸದೇ(ಅವುಗಳನ್ನು ಬಿಟ್ಟು) **ತ್ವರಿತಾಃ** ಜಾಗ್ರತೆಯಾಗಿ **ಸರ್ವತೋ ದಿಶಂ** ಎಲ್ಲದಿಕ್ಕುಗಳಿಗೂ **ದುದ್ರುವುಃ** ಓಡಿದರು. ॥೪,೫॥

**ವ್ಯಲುಂಪನ್ ರಾಜಶಿಬಿರಮಮರಾ ಜಯಕಾಂಕ್ಷಿಣಃ(ಕಾಶಿನಃ) ।**
**ಇಂದ್ರಸ್ತು ರಾಜಮಹಿಷೀಂ ಮಾತರಂ ಮಮ ಚಾಗ್ರಹೀತ್ ॥೬॥**

**ಜಯಕಾಂಕ್ಷಿಣಃ (ಜಯಕಾಶಿನಃ)** ಯುದ್ಧದಲ್ಲಿ ಜಯಾಪೇಕ್ಷಿಗಳಾದ ದೈತ್ಯಜಯ-ದಿಂದ ಪ್ರಕಾಶಮಾನರಾದ ಜಯಸಂಬಂಧಿತ್ವಣವಿಶೇಷವುಳ್ಳ **ಅಮರಾಃ** ದೇವತೆಗಳು **ರಾಜಶಿಬಿರಂ** ಹಿರಣ್ಯಕಶಿಪುವಿನ ಅರಮನೆಯನ್ನು **ವ್ಯಲುಂಪನ್** ನಾಶಮಾಡಿದರು. **ಇಂದ್ರಸ್ತು** ಇಂದ್ರನಾದರೂ **ಮಮ ಮಾತರಂ** ನನ್ನ ತಾಯಿಯಾದ **ರಾಜಮಹಿಷೀಂ** ರಾಣಿಯಾದ ಕಯಾಧುವನ್ನು **ಅಗ್ರಹೀತ್** ಸೆರೆಹಿಡಿದನು. ।।೬।।

**ನೀಯಮಾನಾಂ ಭಯೋದ್ವಿಗ್ನಾಂ ರುದಂತೀಂ ಕುರರೀಮಿವ ।**
**ಯದೃಚ್ಛಯಾऽऽಗತಸ್ತತ್ರ ದೇವರ್ಷಿರ್ದದೃಶೇ ಪಥಿ ।।೭।।**

**ಪಥಿ** ದಾರಿಯಲ್ಲಿ **ನೀಯಮಾನಾಂ** ಇಂದ್ರನಿಂದ ಕರೆದುಕೊಂಡು ಹೋಗಲ್ಪಡುತ್ತಿದ್ದ **ಭಯೋದ್ವಿಗ್ನಾಂ** ಹೆದರಿ ಕಂಗಾಲಾದ **ಕುರರೀಂ ಇವ** ಜಿಂಕೆಯಂತೆ **ರುದಂತೀಂ** ಅಳುತ್ತಿದ್ದವಳನ್ನು **ತತ್ರ** ಆ ಸ್ಥಳಕ್ಕೆ **ಯದೃಚ್ಛಯಾ** ಶ್ರೀಹರಿ ಇಚ್ಛೆಯಂತೆ **ಆಗತಃ** ಬಂದ **ದೇವರ್ಷಿಃ** ದೇವರ್ಷಿಗಳಾದ ನಾರದರು **ದದೃಶೇ** ಕಂಡರು. ।।೭।।

**ಪ್ರಾಹ ಮೈನಾಂ ಸುರಪತೇ ನೇತುಮರ್ಹಸ್ಯನಾಗಸೀಮ್ ।**
**ಮುಂಚ ಮುಂಚ ಮಹಾಭಾಗ ಸತೀಂ ಪರಪರಿಗ್ರಹಾಮ್ ।।೮।।**

**ಹೇ ಮಹಾಭಾಗ** ಬಹುಭಾಗ್ಯಶಾಲಿಯಾದ **ಸುರಪತೇ** ದೇವರಾಜನೇ **ಅನಾಗಸೀಂ** ನಿರಪರಾಧಿಯಾದ **ಸತೀಂ** ಪತಿವ್ರತೆಯಾದ **ಪರಪರಿಗ್ರಹಾಂ** ಮತ್ತೊಬ್ಬರ ಹೆಂಡತಿಯಾದ **ಏನಾಂ** ಈಕೆಯನ್ನು **ನೇತುಂ** ಕರೆದುಕೊಂಡು ಹೋಗಲು **ಮಾ ಅರ್ಹಸಿ** ಯೋಗ್ಯನಲ್ಲ **ಮುಂಚ ಮುಂಚ** ಬಿಟ್ಟು ಬಿಡು ಎಂದು **ಪ್ರಾಹ** ಹೇಳಿದರು.

**ಇಂದ್ರ ಉವಾಚ**

**ಆಸ್ತೇऽಸ್ಯಾ ಜಠರೇ ವೀರ್ಯಮವಿಷಹ್ಯಂ ಸುರದ್ವಿಷಃ ।**
**ಆಸ್ಯತಾಂ ಯಾವತ್ಪ್ರಸವಂ ಮೋಕ್ಷ್ಯೇऽರ್ಥಪದವೀಂ ಗತಃ ।।೯।।**

**ಅಸ್ಯಾಃ** ಇವಳ **ಜಠರೇ** ಉದರದಲ್ಲಿ **ಸುರದ್ವಿಷಃ** ದೇವದ್ವೇಷಿ ಹಿರಣ್ಯಕಶಿಪುವಿನ **ಅವಿಷಹ್ಯಂ** ದೇವತೆಗಳಿಂದ ಸಹಿಸಲಾಗದ **ವೀರ್ಯಂ** ರೇತಸ್ಸು **ಆಸ್ತೇ** ಇರುವದು (ಅದು ಬದುಕಿದರೆ ನಮ್ಮ ಶತ್ರು ನಿರ್ಮೂಲವಾಗುವದಿಲ್ಲವೆಂದು ಅಭಿಪ್ರಾಯ) ಆದ್ದರಿಂದ **ಯಾವತ್ ಪ್ರಸವಂ** ಹಡೆಯುವವರೆಗೆ (ಮದ್ವಶೇ) **ಆಸ್ಯತಾಂ** ನನ್ನ ಅಧೀನದಲ್ಲಿರಲಿ **ಅರ್ಥಪದವೀಂ** ಶತ್ರುನಿರ್ಮೂಲನರೂಪಪ್ರಯೋಜನವನ್ನು **ಗತಃ** ಹೊಂದಿದವನಾಗಿ (ಆ ಶಿಶುವನ್ನು ಕೊಂದು) **ಮೋಕ್ಷ್ಯೇ** ಬಿಟ್ಟು ಬಿಡುತ್ತೇನೆ ಎಂದನು. ಇದರಿಂದ ಇಂದ್ರನಿಗೆ ಮಗನೇ ಆಗುತ್ತಾನೆಂದು ತಿಳಿದಿತ್ತು ಎಂದು ಸೂಚಿತವಾಯಿತು.

ಇಂದ್ರನೇ, ಇವಳಿಗೆ ಮಗನಾಗುವದು ನಿಜ ಆದರೂ ಅವನನ್ನು ರಕ್ಷಿಸುವವನು ಶ್ರೀಹರಿಯಿದ್ದಾನೆ ಕಾರಣ ನಿನ್ನಿಂದ ಕೊಲ್ಲಲು ಯೋಗ್ಯನಲ್ಲವೆಂದು ಹೇಳುವರು.

**ನಾರದ ಉವಾಚ**

**ಅಯಂ ನಿಷ್ಕಿಲ್ಬಿಷಂ ಸಾಕ್ಷಾನ್ಮಹಾಭಾಗವತೋ ಮಹಾನ್ ।**
**ತ್ವಯಾ ನ ಪ್ರಾಪ್ಯತೇ ಸಂಸ್ಥಾಮನಂತಾನುಚರೋ ಬಲೀ ॥೧೦॥**

**ನಿಷ್ಕಿಲ್ಬಷಃ** ಪಾಪರಹಿತನಾದ **ಸಾಕ್ಷಾತ್ ಮಹಾಭಾಗವತಃ** ಶ್ರೀಹರಿಯನ್ನು ಕಣ್ಣಾರೆಕಂಡ ಉತ್ತಮ ಭಗವದ್ಭಕ್ತನು **ಮಹಾನ್** ತನ್ನ ಗುಂಪಿನಲ್ಲಿ ಶ್ರೇಷ್ಠನಾದ **ಅನಂತಾನುಚರಃ** ಶ್ರೀಹರಿಯ ಸೇವಕನಾದ ಬಲೀ ಬಲಿಷ್ಠನಾದ **ಅಯಂ** ಈಕೆಯ ಮಗನು **ತ್ವಯಾ** ನಿನ್ನಿಂದ **ಸಂಸ್ಥಾಂ** ಮರಣವನ್ನು **ನ ಪ್ರಾಪ್ಯತೇ** ಹೊಂದುವದಿಲ್ಲ. ವಿಶೇಷಣಗಳು ಮರಣಹೊಂದದಿರುವದಕ್ಕೆ ಕಾರಣ ಸೂಚಿಸುವವು. ॥೧೦॥

**ಇತ್ಯುಕ್ತಸ್ತಾಂ ವಿಹಾಯೇಂದ್ರೋ ದೇವರ್ಷೇರ್ಮಾನಯನ್ ವಚಃ ।**
**ಅನಂತಪ್ರಿಯಭಕ್ತ್ಯೈನಾಂ ಪರಿಕ್ರಮ್ಯ ದಿವಂ ಯಯೌ ॥೧೧॥**

**ಇತಿ** ಈ ರೀತಿಯಾಗಿ **ಉಕ್ತಃ** ನಾರದರಿಂದ ಹೇಳಿಸಿಕೊಂಡ **ಇಂದ್ರಃ** ಇಂದ್ರನು **ದೇವರ್ಷೇಃ** ನಾರದರ **ವಚಃ** ಮಾತನ್ನು **ಮಾನಯನ್** ಗೌರವಿಸುತ್ತ **ತಾಂ** ಕಯಾಧು-ವನ್ನು **ವಿಹಾಯ** ಬಿಟ್ಟು **ಅನಂತಪ್ರಿಯಭಕ್ತ್ಯಾ** ಶೇಷದೇವರಿಗೆ ಪ್ರಿಯನಾದ ಶ್ರೀಹರಿ-ಯಲ್ಲಿರುವ ಭಕ್ತಿಯಿಂದ, ಶ್ರೀಹರಿಗೆ ಪ್ರಿಯವಾದ ಭಕ್ತಿಯಿಂದ, ಶ್ರೀಹರಿಗೆ ಪ್ರಿಯನಾದ, ಮುಂದೆ ಜನಿಸುವ ಹರಿಭಕ್ತನಲ್ಲಿ ಆದರದಿಂದ **ಏನಾಂ ಪರಿಕ್ರಮ್ಯ** ಇವಳನ್ನು ಪ್ರದಕ್ಷಿಣೆಮಾಡಿ **ದಿವಂ** ಸ್ವರ್ಗಕ್ಕೆ **ಯಯೌ** ಹೊರಟು ಹೋದನು. ॥೧೧॥

**ತತೋ ನೋ ಮಾತರಮೃಷಿಃ ಸಮಾನೀಯ ನಿಜಾಶ್ರಮಮ್ ।**
**ಆಶ್ವಾಸ್ಯೇ ಹೋಷ್ಯತಾಂ ವತ್ಸೇ ಯಾವತ್ ತೇ ಭರ್ತುರಾಗಮಃ ॥೧೨॥**

**ತತಃ** ಇಂದ್ರದೇವರು ನಮ್ಮ ತಾಯಿಯನ್ನು ಬಿಟ್ಟು ಹೋದಮೇಲೆ **ಋಷಿಃ** ನಾರದರು **ನಃ ಮಾತರಂ** ನಮ್ಮ ತಾಯಿಯನ್ನು **ನಿಜಾಶ್ರಮಂ** ತಮ್ಮ ಆಶ್ರಮಕ್ಕೆ **ಸಮಾನೀಯ** ಕರೆತಂದು **ಆಶ್ವಾಸ್ಯ** ಸಮಾಧಾನಪಡಿಸಿ **ವತ್ಸೇ** ಮಗಳೇ **ತೇ ಭರ್ತುಃ ಆಗಮಃ ಯಾವತ್ ತಾವತ್** ನಿನ್ನ ಗಂಡನು ಬರುವವರೆಗೆ ಇಹ ನಮ್ಮ ಆಶ್ರಮದಲ್ಲಿ **ಉಷ್ಯತಾಂ** ವಾಸಿಸು **ಇತಿ** ಎಂದು **ಆಹ** ಹೇಳಿದರು. ॥೧೨॥

**ತಥೇತ್ಯವಾತ್ಸೀದ್ ದೇವರ್ಷೇರಂತಿ ಸಾಪ್ಯಕುತೋಭಯಾ ।**
**ಯಾವದ್ ದೈತ್ಯಪತಿರ್ಘೋರಾತ್ ತಪಸೋ ನ ನ್ಯವರ್ತತ ॥೧೩॥**

**ಸಾ ಅಪಿ** ನಮ್ಮ ತಾಯಿಯು ಕೂಡ **ಅಕುತೋಭಯಾ** ಯಾರ ಭಯವೂ ಇಲ್ಲದೇ **ತಥಾ ಇತಿ** ಹಾಗೆಯೇ ಆಗಲಿ ಎಂದು **ದೈತ್ಯಪತಿಃ** ಹಿರಣ್ಯಕಶಿಪುವು **ಘೋರಾತ್ ತಪಸಃ** ಘೋರವಾದ ತಪಸ್ಸಿನಿಂದ **ಯಾವತ್ ನ ನ್ಯವರ್ತತ ತಾವತ್** ತಿರುಗಿಬರುವವರೆಗೆ **ದೇವರ್ಷೇಃ** ನಾರದರ **ಅಂತಿ** ಸಮೀಪದಲ್ಲಿ **ಅವಾತ್ಸೀತ್** ವಾಸಿಸಿದಳು.(ಅಂತಿಷತ್) 'ಯದಂತಿ ಯಚ್ಚ ದೂರಕೇ' ಮುಂತಾದ ಪ್ರಯೋಗಗಳಿವೆ. ।।೧೩।।

ಒಳಗಿರುವ ಗರ್ಭವು ಬಹುಕಾಲ ಹೇಗೆ ಉಳಿಯಿತು ಅಥವಾ ಅಲ್ಲಿಯೇ ಪ್ರಸವವಾಯಿತೇ ಎಂಬ ಶಂಕೆಯನ್ನು ಪರಿಹರಿಸುವರು.

**ಋಷಿಂ ಪರ್ಯಚರತ್ ತತ್ರ ಭಕ್ತ್ಯಾ ಪರಮಯಾ ಸತೀ ।**
**ಅಂತರ್ವತ್ನೀ ಸ್ವಗರ್ಭಸ್ಯ ಕ್ಷೇಮಾಯೇಚ್ಛಾಪ್ರಸೂತಯೇ ।।೧೪।।**

**ಅಂತರ್ವತ್ನೀ** ಗರ್ಭಿಣಿಯಾದ **ಸತೀ** ಪತಿವ್ರತೆಯಾದ **ಸಾ** ನಮ್ಮ ತಾಯಿಯು **ತತ್ರ** ಆ ಆಶ್ರಮದಲ್ಲಿ **ಸ್ವಗರ್ಭಸ್ಯ ಕ್ಷೇಮಾಯ** ತನ್ನ ಗರ್ಭದಲ್ಲಿರುವ ಶಿಶುವಿನ ಕ್ಷೇಮಕ್ಕಾಗಿ **ಇಚ್ಛಾಪ್ರಸೂತಯೇ** ತನಗೆ ಇಷ್ಟ ಬಂದಾಗ ಪ್ರಸವಿಸುವದಕ್ಕಾಗಿಯೂ **ಪರಮಯಾ ಭಕ್ತ್ಯಾ** ಶ್ರೇಷ್ಠವಾದ ಭಕ್ತಿಯಿಂದ **ಋಷಿಂ** ನಾರದರನ್ನು **ಪರ್ಯಚರತ್** ಸೇವಿಸಿದಳು. ।।೧೪।।

**ಋಷಿಃ ಕಾರುಣಿಕಃ ತಸ್ಯಾಃ ಪ್ರಾದಾದುಭಯಮೀಶ್ವರಃ ।**
**ಧರ್ಮಸ್ಯ ತತ್ತ್ವಂ ಜ್ಞಾನಂ ಚ ಮಾಮಪ್ಯುದ್ದಿಶ್ಯ ನಿರ್ಮಲಮ್ ।।೧೫।।**

**ಕಾರುಣಿಕಃ** ದಯಾಳುಗಳಾದ **ಈಶ್ವರಃ** ವರಕೊಡಲು ಸಮರ್ಥರಾದ **ಋಷಿಃ** ನಾರದರು **ತಸ್ಯಾಃ** ಅವಳಿಗೆ **ಉಭಯಂ** ಗರ್ಭಕ್ಷೇಮ,ಇಚ್ಛಾಪ್ರಸವ ಇವೆರಡನ್ನು **ಪ್ರಾದಾತ್** ಅನುಗ್ರಹಿಸಿದರು.(ಈ ವರದ ಪ್ರಭಾವದಿಂದ ಆಕೆಯು ಹಿರಣ್ಯಕಶಿಪು ಹಿಂತಿರುಗಿ ಬಂದಮೇಲೆ ಪ್ರಸವಿಸಿದ್ದರಿಂದ ಗುರೂಪದೇಶಕಾಲದಲ್ಲಿ ಪ್ರಹ್ಲಾದ ಐದುವರ್ಷದವನಾಗಿದ್ದನೆಂಬುದು ಯುಕ್ತವಾಗುವದು) **ಮಾಂ** ಗರ್ಭದಲ್ಲಿದ್ದ ನನ್ನನ್ನು **ಅಪಿ** ಅಮುಖ್ಯವಾಗಿ ನಮ್ಮ ತಾಯಿಯನ್ನು **ಉದ್ದಿಶ್ಯ** ಉದ್ದೇಶಿಸಿ **ನಿರ್ಮಲಂ** ಮೋಕ್ಷಕ್ಕೆ ಉಪಯುಕ್ತವಾದ, ಶುದ್ಧವಾದ **ಧರ್ಮಸ್ಯ ತತ್ತ್ವಂ** ಧಾರಕನಾದ ಶ್ರೀಹರಿಯ ಸ್ವರೂಪವನ್ನು, ನಿವೃತ್ತಿಧರ್ಮಸ್ವರೂಪವನ್ನು, **ಜ್ಞಾನಂ ಚ** ಅವುಗಳ ಜ್ಞಾನಸಾಧನವಾದುದನ್ನು **ತಸ್ಯಾಃ** ನಮ್ಮ ತಾಯಿಗೆ **ಪ್ರಾದಾತ್** ಉಪದೇಶಿಸಿದರು.

ವಿಶೇಷ ಃ- ನಮ್ಮ ತಾಯಿಗೆ ಉಪದೇಶಿಸುವ ನೆಪದಿಂದ ಗರ್ಭದಲ್ಲಿದ್ದ ನನಗೆ ಉಪದೇಶಿಸಿದರೆಂದರ್ಥ ।।೧೫।।

**ತತ್ತು ಕಾಲಸ್ಯ ದೀರ್ಘತ್ವಾತ್ ಸ್ತ್ರೀತ್ವಾತ್ ಮಾತುಸ್ತಿರೋದಧೇ ।**
**ಋಷಿಣಾಽನುಗೃಹೀತಂ ಮಾಂ ನಾಧುನಾಪ್ಯಜಹಾತ್ ಸ್ಮೃತಿಃ ॥೧೬॥**

**ತತ್** ಶ್ರೀಹರಿಯ ಸ್ವರೂಪೋಪದೇಶ, ಜ್ಞಾನಸಾಧನೋಪದೇಶ ಎರಡೂ ಕೂಡ **ಕಾಲಸ್ಯ ದೀರ್ಘತ್ವಾತ್** ಸಾವಿರಾರು ವರ್ಷಗಳಾದ್ದರಿಂದ **ಸ್ತ್ರೀತ್ವಾತ್** ಹೆಂಗಸಾಗಿ ವಿಷಯ ಲೋಲುಪಳು ಆದ್ದರಿಂದ **ಮಾತುಃ** ನಮ್ಮ ತಾಯಿಗೆ **ತಿರೋದಧೇ** ಮರೆತು ಹೋಯಿತು **ತು** ಆದರೆ **ಋಷಿಣಾ** ನಾರದರಿಂದ **ಅನುಗೃಹೀತಂ** ಅನುಗ್ರಹಿಸಲ್ಪಟ್ಟ **ಮಾಂ** ನನ್ನನ್ನು **ಅಧುನಾ ಅಪಿ** ಈಗಲೂ **ಸ್ಮೃತಿಃ** ಸ್ಮರಣೆಯು, ಅವುಗಳ ಜ್ಞಾನವು **ನ ಅಜಹಾತ್** ಬಿಡಲಿಲ್ಲ. ನನಗೆ ಜ್ಞಾಪಕವಿದೆ ಎಂದರ್ಥ. ॥೧೬॥

ಹಸಿಶುಂಠಿಯ ವರ್ತಕನಿಗೆ ಹಡಗಿನ ಚಿಂತೆಯಿಂದೇನು ಎಂಬಂತೆ ನಮಗೆ ಇದರಿಂದೇನು ಪ್ರಯೋಜನವೆಂದರೆ ಹೇಳುತ್ತಾರೆ.

**ಭವತಾಮಪಿ ಭೂಯಾನ್ಮೇ ಯದಿ ಶ್ರದ್ದಧತೇ ವಚಃ ।**
**ವೈಶಾರದೀ ಧೀಃ ಶ್ರದ್ಧಾಽತಃ ಸ್ತ್ರೀಬಾಲಾನಾಂ ಚ ಮೇ ಯಥಾ ॥೧೭॥**

**ಮೇ** ನನ್ನ **ವಚಃ** ಮಾತನ್ನು **ಯದಿ ಶ್ರದ್ದಧತೇ** ವಿಶ್ವಾಸದಿಂದ ನೀವು ತಿಳಿದರೆ **ತರ್ಹಿ** ಆಗ **ಮೇ** ನನಗೆ **ಯಥಾ** ಹೇಗೋ ಹಾಗೆ **ಭವತಾಂ ಅಪಿ** ನಿಮಗೂ **ವೈಶಾರದೀ** ಭಗವದ್ವಿಷಯಕವಾದ **ಧೀಃ**ಜ್ಞಾನವು **ಭೂಯಾತ್** ಆಗುವದು. ನಿಮಗೆ ಮಾತ್ರ ಅಲ್ಲ **ಸ್ತ್ರೀಬಾಲಾನಾಂ ಚ** ಸ್ತ್ರೀಯರಿಗೆ, ಬಾಲಕರಿಗೂ **ಯದಿ ಶ್ರದ್ಧಾ** ಶ್ರದ್ಧೆ ಇದ್ದರೆ **ಅತಃ** ಆಗ **ಚ** ಅವರಿಗೂ **ವೈಶಾರದೀ ಧೀಃ** ಭಗವದ್‌ಜ್ಞಾನವು **ಭೂಯಾತ್** ಉಂಟಾಗುವದು. ಕಾರಣ ನಿಮಗೂ ಪ್ರಯೋಜನವಿದೆ ಎಂದು ಭಾವ. ॥೧೭॥

ಪ್ರಹ್ಲಾದರಾಜರು ಆ ದೈತ್ಯಬಾಲಕರಿಗೆ ತಮ್ಮ ಮಾತಿನಲ್ಲಿ ಶ್ರದ್ಧೆಯನ್ನು ಹುಟ್ಟಿಸಿ ನಾರದರು ತಮಗೆ ಉಪದೇಶಿಸಿದ ಜ್ಞಾನವನ್ನು ಅವರಿಗೆ ಉಪದೇಶಿಸುತ್ತಾರೆ. ಅಥವಾ 'ಜಾತಃ ಕಂಸವಧಾರ್ಥಾಯ' ಮುಂತಾದ ಸ್ಮೃತಿಗಳಲ್ಲಿ 'ಜನಿತೋತ ವಿಷ್ಣೋಃ' ಮುಂತಾದ ಶ್ರುತಿಗಳಲ್ಲಿಯೂ ಶ್ರೀಹರಿಗೆ ಜನ್ಮಾದಿಗಳನ್ನು ಹೇಳಿದಂತೆ ಕಂಡು ಬರುತ್ತದೆ. ಹೀಗೆ ಜನ್ಮಾದಿಗಳನ್ನು ಹೊಂದಿರುವ ಶ್ರೀಹರಿಯು ಜೀವನಂತೆ ದುಃಖಕ್ಕೆ ಆಕರವಾದ ಶರೀರದಲ್ಲಿರುವಾಗ ದುಃಖಾದಿಭೋಗವು ಅನಿವಾರ್ಯ ಅಂದ ಮೇಲೆ ವ್ಯಾಕುಲಚಿತ್ತನಾದ ಅವನು ನಾವು ಮಾಡುವ ಸರ್ವಸಮರ್ಪಣಕ್ಕೆ ತಕ್ಕ ಫಲವನ್ನು ಹೇಗೆ ಕೊಡಲು ಸಾಧ್ಯ ಮುಂತಾದ ದೈತ್ಯಪುತ್ರರ ಮನಸ್ಸಿನಲ್ಲಿರುವ ಶಂಕೆಯನ್ನು ಪರಿಹರಿಸಲು, ದೇಹ, ಜೀವರು ಭಿನ್ನರೆಂದೂ, ಶ್ರೀಹರಿಯೂ ಅವೆರಡರಿಂದಲೂ ಅತ್ಯಂತ ವಿಲಕ್ಷಣನೆಂದೂ ಎಲ್ಲವೂ ನಿಮಿತ್ತಕಾರಣನಾದ ಅವನ ಅಧೀನವೆಂದೂ

ತಿಳಿದು ದೇಹಾದಿಗಳಲ್ಲಿ ಮಮತೆಯನ್ನು ಬಿಡಬೇಕೆಂದೂ ಮುಂದಿನ ಮೂರು ಶ್ಲೋಕಗಳಿಂದ ಹೇಳುತ್ತಾರೆಃ-

**ಜನ್ಮಾದ್ಯಾಃ ಷಡಿಮೇ ಭಾವಾ ದೃಷ್ಟಾ ದೇಹಸ್ಯ ನಾತ್ಮನಃ ।**
**ಫಲಾನಾಮಿವ ವೃಕ್ಷಸ್ಯ ಕಾಲೇನೇಶ್ವರಮೂರ್ತಿನಾ ॥೧೮॥**

**ಈಶ್ವರಮೂರ್ತಿನಾ** ಈಶ್ವರರೂಪವಾದ **ಕಾಲೇನ** ಕಾಲವಿಶೇಷದಿಂದ ಕಾಲನಾಮಕನಾದ ಶ್ರೀಹರಿಯಿಂದ **ವೃಕ್ಷಸ್ಯ** ಮಾವಿನ ಮರವೇ ಮೊದಲಾದ ಗಿಡಗಳ **ಫಲಾನಾಂ** ಹಣ್ಣು ಮೊದಲಾದವುಗಳ **ಇವ** ಉತ್ಪತ್ತಿ ಮೊದಲಾದ ಭಾವಗಳು ಕಂಡು ಬರುವಂತೆ **ದೃಷ್ಟಾಃ** ಪ್ರತ್ಯಕ್ಷ ಸಿದ್ಧಗಳಾದ **ಇಮೇ** ಈ **ಜನ್ಮಾದ್ಯಾಃ ಜನ್ಮ** ಉತ್ಪತ್ತಿ **ಅಸ್ತಿ** ಇರುವಿಕೆ **ವೃದ್ಧಿ** ಉಪಚಯ **ಪರಿಣಾಮ** ಕ್ಷೀಣಿಸುವದು **ಅಪಕ್ಷಯ** ನಾಶ ಎಂಬ **ಷಡ್ಭಾವಾಃ** ಆರು ವಿಕಾರಗಳು **ಆತ್ಮನಃ** ಶ್ರೀಹರಿಯಿಂದ **ದೇಹಸ್ಯ** ದೇಹಕ್ಕೇ **ಭವಂತಿ** ಆಗುವವು. **ನ ಆತ್ಮನಃ** ಶ್ರೀಹರಿಗೆ ಶರೀರದಲ್ಲಿದ್ದರೂ ಆಗುವದಿಲ್ಲ.

ವಿಶೇಷ ಃ- ಜೀವನಿಗೂ ಈ ವಿಕಾರಗಳಿಲ್ಲ ಆದರೆ ಶ್ರೀಹರಿಗೆ ಸ್ವತಂತ್ರವಾಗಿ ಇಲ್ಲ. ಜೀವನಿಗೆ ಶ್ರೀಹರಿಯ ಇಚ್ಛೆಯಿಂದ ಇಲ್ಲ ಎಂದು ವ್ಯತ್ಯಾಸವನ್ನು ತಿಳಿಯಬೇಕು. ಇದರಿಂದ ಜನ್ಮಾದಿವಿಕಾರಗಳು ದೇಹಗಳಿಗಿರುತ್ತವೆ ಹೊರತು ಜೀವನಿಗಲ್ಲ. ಪರಮಾತ್ಮನಿಗಂತೂ ಇಲ್ಲವೇ ಇಲ್ಲ ಎಲ್ಲವೂ ಶ್ರೀಹರಿಯ ಅಧೀನವೆಂದು ತಿಳಿಸಿದಂತಾಯಿತು.

ಜನ್ಮಾದ್ಯಾಃ ಷಡಿಮೇ ಭಾವಾಃ ಮುಂತಾದ ಮೂರು ಶ್ಲೋಕಗಳಲ್ಲಿ ಜನ್ಮಾದಿ ಆರು ವಿಕಾರಗಳು ದೇಹಕ್ಕೆ ಕಂಡಿವೆ ಆತ್ಮನಃ ನ ಜೀವನಿಗೆ ಇಲ್ಲ. ಆತ್ಮಾ ಜೀವನು 'ಪರ್ಯೈಃ ನಿತ್ಯತ್ವಾದಿದ್ವಾದಶಲಕ್ಷಣೈಃ ಯುಕ್ತಃ ಎಂದೂ, ವಿದ್ವಾನ್ ದೇಹದೇಹಿಸ್ವರೂಪಂ ಜಾನನ್ ದೇಹಾದೌ ಮೋಹದಂ ಅಹಂ ಮಮೇತಿ ಅಸದ್ಭಾವಂ ಅಸಂತಂ ಆಗ್ರಹಂ ತ್ಯಜೇತ್' ಎಂಬ ಅನ್ಯಥಾ ಪ್ರತೀತಿಯನ್ನು ಪ್ರಮಾಣದಿಂದ ಪರಿಹರಿಸುವರು.

**... ತಾತ್ಪರ್ಯ ...**

**ಷಡ್ವಿಕಾರಾ ಶರೀರಸ್ಯ ನ ವಿಷ್ಣೋಸ್ತದ್ಗತಸ್ಯ ತು ।**
**ತದಧೀನಂ ಶರೀರಂ ಚ ಜ್ಞಾತ್ವಾ ತನ್ಮಮತಾಂ ತ್ಯಜೇತ್ ॥ ಇತಿ ಚ ॥**
**ಹೇತುತ್ವಾದ್ವಿಷ್ಣ್ವಧೀನತ್ವಂ ಶರೀರಸ್ಯ ॥೧೮॥**

ಉತ್ಪತ್ತಿಮೊದಲಾದ ಆರು ವಿಕಾರಗಳು ಶರೀರಕ್ಕೆ ಇವೆ. ಶರೀರದಲ್ಲಿರುವ ಶ್ರೀಹರಿಗೆ ಇಲ್ಲ. ಶರೀರವು ಶ್ರೀಹರಿಯ ಅಧೀನವೆಂದು ತಿಳಿದು ದೇಹಾದಿಗಳಲ್ಲಿ ನಾನು ನನ್ನದು ಎಂಬ ಅಭಿಮಾನವನ್ನು ಬಿಡಬೇಕು. ಶ್ರೀಹರಿಯು ಸ್ವರೂಪತಃ

ವಿನಾಶರಹಿತನು ನೈಮಿತ್ತಿಕನಾಶವಿಲ್ಲದವನು, ಸರ್ವದೋಷರಹಿತನು, ಮುಖ್ಯನು, ಪ್ರಕೃತ್ಯಾದಿಗಳನ್ನು ತಿಳಿದವನು, ಸರ್ವೋಪಜೀವ್ಯನು, ನಿರ್ವಿಕಾರನು, ಸಂಪೂರ್ಣವಾಗಿ ತನ್ನ ಸ್ವರೂಪವನ್ನು ತಿಳಿದವನು ಸ್ವತಂತ್ರನು. ಒಳಗೂ ಹೊರಗೂ ವ್ಯಾಪ್ತನು, ವಿಷಯಸಂಗವಿಲ್ಲದವನು, ಅಜ್ಞಾನಾದಿ ಆವರಣವಿಲ್ಲದವನು, ಈ ೧೨ ಲಕ್ಷಣಗಳಲ್ಲಿ ಸೇರಿದ ಶರೀರಹೇತುತ್ವರೂಪಲಕ್ಷಣದಿಂದ ವಿಷ್ಣುವು ಶರೀರಕ್ಕೆ ನಿಮಿತ್ತಕಾರಣನಾದುದರಿಂದ ಶರೀರವು ಶ್ರೀವಿಷ್ಣುವಿನ ಅಧೀನವೆಂದು ತಿಳಿಯಬೇಕು. ದೇಹಾದಿಗಳಲ್ಲಿ ನಾನು ನನ್ನದು ಎಂಬ ಅಭಿಮಾನವನ್ನು ಬಿಡಬೇಕು. ಶ್ರೀವಿಷ್ಣುಭಕ್ತಿ ಮೊದಲಾದ ಉಪಾಯಗಳಿಂದ ಭೇದವನ್ನು ತಿಳಿದು ಪರಬ್ರಹ್ಮನ ಜ್ಞಾನವನ್ನು ಸಂಪಾದಿಸಿಕೊಂಡು ವೈಕುಂಠಾದಿಭಗವಲ್ಲೋಕಗಳನ್ನು ಹೊಂದಬೇಕು.

ಇದರಿಂದ ಆತ್ಮಶಬ್ದಜೀವಪರವಲ್ಲ ವಿಷ್ಣುಪರವೆಂದು ತಿಳಿಸಿದಂತಾಯಿತು. ತುಷ್ಯತು ಎಂಬ ನ್ಯಾಯದಿಂದ 'ಜನಿತೋತ ವಿಷ್ಣೋಃ' ಎಂಬ ಶ್ರುತಿಗೆ ಮೇಲ್ಕಂಡ ಅರ್ಥವನ್ನಿಟ್ಟುಕೊಂಡು ಬಂದ ಶಂಕೆ ಪರಿಹರಿಸಿರುವರು. ವಾಸ್ತವಿಕವಾಗಿ ಆ ಶ್ರುತಿಯಲ್ಲಿ ವಿಷ್ಣು ಎಂದರೆ ಶ್ರೀಹರಿ ಅಲ್ಲವೇ ಅಲ್ಲ. ಆ ಶ್ರುತಿಯನ್ನು 'ವಿಷ್ಣುರಿತಿ ಯಜಮಾನಸ್ಯ ಯಜ್ಞಸ್ಯ ವಾ ನಾಮ ತೌ ಸೋಮೂದ್ಭವತಃ ಇತಿ ಸೋಮೋ ಜನಿತಾ ಉತ ವಿಷ್ಣೋ' ಎಂದು ಹೇಳಲ್ಪಡುವದು ಎಂದು ಶ್ರೀಮನ್ಯಾಯಸುಧೆಯಲ್ಲಿ ವ್ಯಾಖ್ಯಾನಿಸಿರುವರು. ಅಥವಾ 'ಪ್ರತ್ಯಕ್ಷತ್ವಂ ಹರೇರ್ಜನ್ಮ ನ ತಸ್ಯ ಪ್ರಾಕೃತಾ ಮೂರ್ತಿಃ' ಮುಂತಾದ ಪ್ರಮಾಣಾನುಸಾರ ಜನಿತಪದದ ಅರ್ಥ ಪ್ರಾದುರ್ಭಾವವೇ ಹೊರತು ದುರ್ಭಾವವಲ್ಲ ಎಂದು ಭಾವ. ॥೧೮॥

ಹಿಂದಿನ ಶ್ಲೋಕದಲ್ಲಿ 'ಆತ್ಮನಃ' ಎಂಬುದಕ್ಕೆ ವಿಷ್ಣುವೆಂದೇ ಏಕೆ ಅರ್ಥ ಮಾಡಬೇಕು 'ಕ್ಷೇತ್ರಜ್ಞಃ ಪುರುಷೋ ಹ್ಯಾತ್ಮಾ ಸಂಸಾರೀ ಚೇತನೋ ಮತಃ' 'ಆತ್ಮಾ ಯತ್ನೇ ಧೃತೌ ಜೀವೇ ಮುದೇ' ವಾಕ್ಯದಂತೆ ಜೀವನೇ ಏಕಾಗಬಾರದು ಎಂದರೆ ಜೀವವ್ಯಾವರ್ತಕಗಳಾದ ವಿಷ್ಣುವಿಗೆ ಮಾತ್ರ ಬರುವ ಲಕ್ಷಣಗಳನ್ನು ಈ ಶ್ಲೋಕದಲ್ಲಿ ಹೇಳುತ್ತಾರೆ.

**ಆತ್ಮಾ ನಿತ್ಯೋಽವ್ಯಯಃ ಶುದ್ಧಃ ಏಕಃ ಕ್ಷೇತ್ರಜ್ಞ ಆಶ್ರಯಃ ।**
**ಅವಿಕ್ರಿಯಃ ಸ್ವದೃಗ್ ವಶ್ಯಃ(ಹೇತುಃ) ವ್ಯಾಪಕೋಽಸಂಗ್ಯನಾವೃತಃ ॥೧೯॥**

**ಆತ್ಮಾ** ಪರಮಾತ್ಮನು **ನಿತ್ಯಃ** ಸ್ವರೂಪನಾಶವಿಲ್ಲದವನು('ನಿತ್ಯೋಽನಿತ್ಯಾನಾಂ' 'ಅವಿನಾಶೀ ವಾ ಅರೇ ಅಯಮಾತ್ಮಾ' ಎಂದಿರುವದರಿಂದ ಮುಖ್ಯನಿತ್ಯನು **ಅವ್ಯಯಃ** ಪರೇ ಅವ್ಯಯೇ ಎಂದಿರುವದರಿಂದ ನೈಮಿತ್ತಕನಾಶರಹಿತನು, ಅನಿತ್ಯತ್ವ, ದೇಹಹಾನಿ, ಅಪೂರ್ಣತಾ, ದುಃಖಪ್ರಾಪ್ತಿಗಳೆಂಬ ನಾಲ್ಕು ವಿಧನಾಶರಹಿತನು.

ಅವಯವಾದಿ ವ್ಯಯವಿಲ್ಲದ ದಿವ್ಯವಿಗ್ರಹವುಳ್ಳವನು ಅಥವಾ 'ಅವಯಃ ಶೈಲಮೇಷಾರ್ಕಾಃ' ಎಂದು ಅಭಿಧಾನವಿರುವದರಿಂದ ಅವಿಃ ಎಂದರೆ ಸೂರ್ಯನು, ಅವನಲ್ಲಿ ಯಾತೀತೀ ಯಃ ಅಂದರೆ ಸೂರ್ಯನಲ್ಲಿರುವವನು, ಕೃಷ್ಣಾವತಾರದಲ್ಲಿ ಗೋವರ್ಧನವನ್ನೆತ್ತಿದವನು. **ಶುದ್ಧಃ** ಪ್ರಾಕೃತ ಶರೀರರಹಿತನು ಅವಿದ್ಯಾರಾಗಾದಿ-ದೋಷವಿಲ್ಲದವನು, ('ನಿರಂಜನಃ' ಎಂದು ಶ್ರುತಿ ಇರುವದರಿಂದ) ಸಾಂತತ್ವಸಾತಿ-ಶಯತ್ವಾದಿರಹಿತನು **ಏಕಃ** ಮುಖ್ಯನು ('ಏಕಮೇವ ಅದ್ವಿತೀಯಂ''ಏಕೋ ನಾರಾಯಣ ಆಸೀತ್' ಎಂದಿದೆ ಆದ್ದರಿಂದ ಮುಖ್ಯಕರ್ತನು) ಅಥವಾ ಕರೋತೀತಿ ಕಃ, ಏಕತ್ವಾತ್ ಏ ಅವ್ಯಯವಾದ್ದರಿಂದ ವಿಭಕ್ತಿಲೋಪಃ ಏಚಾಸೌ ಕಶ್ಚ ಏಕಃ । ಇದನ್ನೇ ಗೀತಾತಾತ್ಪರ್ಯನ್ಯಾಯದೀಪಿಕಾ ಗಳಲ್ಲಿ ಹೀಗೆ ಹೇಳಿದ್ದಾರೆ. 'ಏಕಃ ಸರ್ವೋತ್ತಮೋ ಅಪಿ ಅಸತ್ಯತಃ ಏಕಃ ಸರ್ವಾಧಿಕೋ ಜ್ಞೇಯಃ ಏಕ ಏವ ಕರೋತಿ ಯತ್' । ಏಕಶಬ್ದಃ ಕಥಂ ಸರ್ವೋತ್ತಮತ್ವವಾಚೀ ಇತ್ಯತ ಆಹ ಏಕೇತಿ ಏಕತ್ವಾತ್ ಏ, ಕರೋತೀತಿ ಕಃ ಇತ್ಯರ್ಥಃ । ಅನ್ಯನಿರಪೇಕ್ಷಕರ್ತಾ ಹಿ ಸರ್ವೋತ್ತಮ ಇತಿ । ಹೀಗಿರುವದರಿಂದ ಏಕ ಎಂದರೆ ಸರ್ವೋತ್ತಮನೆಂದರ್ಥ, **ಕ್ಷೇತ್ರಜ್ಞಃ** 'ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ' ಎಂದಿರುವದರಿಂದ ಶರೀರವೆಂಬ ಕ್ಷೇತ್ರವನ್ನು ಪ್ರಕೃತ್ಯಾದಿ ಕ್ಷೇತ್ರವನ್ನು ತಿಳಿದವನು. **ಆಶ್ರಯಃ** ಎಲ್ಲರಿಗೂ ಉಪಜೀವ್ಯನು. 'ಯಸ್ಮಿನ್ನಿದಂ ಸಂಚ ವಿಚೈಧಿ ಸರ್ವಂ', ಯಸ್ಮಿನ್ ದ್ಯೌಃ ಪೃಥವೀ ಚಾಂತರಿಕ್ಷಂ' ಎಂದಿರುವದರಿಂದ ಸರ್ವಾಶ್ರಯನು. **ಅವಿಕ್ರಿಯಃ** ವಿಕಾರರಹಿತನು ('ನಿರ್ವಿಕಾರೋಽಕ್ಷರಶುದ್ಧಃ' ಎಂದಿದೆ) **ಸ್ವದೃಕ್** ತನ್ನನ್ನು ತಾನೇ ತಿಳಿದಿರುವವನು.('ತದ್ಬ್ರಹ್ಮಾ ವೇದ ಅಹಂ ಬ್ರಹ್ಮಾಸ್ಮೀತಿ' ಎಂದಿದೆ) **ವಶ್ಯಃ** ಎಲ್ಲವನ್ನು ತನ್ನ ಅಧೀನದಲ್ಲಿಟ್ಟುಕೊಂಡವನು ಸ್ವತಂತ್ರನು (ವಶಂ ಯಾಪಯತೀತಿ ವಶ್ಯಃ) **ವ್ಯಾಪಕಃ** ಅನನ್ಯಾಧೀನವ್ಯಾಪ್ತಿವುಳ್ಳವನು (ಇದರಿಂದ 'ಸಮನಾ' ಎಂದು ಹೇಳಿದ್ದರಿಂದ ಲಕ್ಷ್ಮಿಯೂ ವ್ಯಾಪಕಗಳು ಎಂಬ ಸಂಶಯಪರಿಹೃತವಾಯಿತು) **ಅಸಂಗೀ** ಪ್ರಕೃತಿಸಂಭಂದವಿಲ್ಲದವನು. ವಿಷಯ ಸಂಗರಹಿತನು. 'ಅಸಂಗೋ ಹ್ಯಯಂ ಪುರುಷಃ' ಎಂದಿರುವದರಿಂದ ಕರ್ತೃವಾಗಿದ್ದರೂ ಪುಣ್ಯಪಾಪಲೇಪವಿಲ್ಲದವನು. **ಅನಾವೃತಃ** ಅಜ್ಞಾನಾದಿ ಆವರಣರಹಿತನು **ಅನೇನ** ಮುಖ್ಯಪ್ರಾಣನಿಂದಲೂ **ಆ** ಚೆನ್ನಾಗಿ ಸ್ವಾಮಿ ಎಂದು **ವೃತಃ** ಸ್ವೀಕರಿಸಲ್ಪಟ್ಟವನು. ಎಂದರ್ಥ. **ವಶ್ಯಃ** ಎಂಬಲ್ಲಿ **ಹೇತುಃ** ಎಂಬ ಪಾಠವಿದ್ದಾಗ ಎಲ್ಲಕ್ಕೂ ನಿಮಿತ್ತಕಾರಣನೆಂದರ್ಥ. ।।೧೯।।

**ಏತೈರ್ದ್ವಾದಶಭಿರ್ವಿದ್ವಾನ್ ಆತ್ಮನೋ ಲಕ್ಷಣೈಃ ಪರೈಃ ।**
**ಅಹಂ ಮಮೇತ್ಯತದ್ಭಾವಂ ದೇಹಾದೌ ಮೋಹಜಂ ತ್ಯಜೇತ್ ।।೨೦।।**

**ಏತೈಃ** ಮೇಲೆ ಹೇಳಿದ ಈ **ಷಡ್ಭಿಃ** ಅತಿವ್ಯಾಪ್ತಿಮೊದಲಾದದೋಷಗಳಿಲ್ಲದ ಧರ್ಮಿಯಿಂದಲೂ, ಪರಸ್ಪರವಾಗಿಯೂ ಅತಿಭಿನ್ನಗಳಾದ್ದರಿಂದ ಲೋಕವಿಲಕ್ಷಣ-ಗಳಾದ **ದ್ವಾದಶಭಿಃ** ಹನ್ನೆರಡು **ಆತ್ಮನಃ ಲಕ್ಷಣೈಃ** ಶ್ರೀಹರಿಯ ಸ್ವರೂಪಲಕ್ಷಣಗಳಿಂದ ಕೂಡಿರುವನೆಂದು **ವಿದ್ವಾನ್** ತಿಳಿದ ಜ್ಞಾನಿಯು **ದೇಹಾದೌ** ದೇಹ ಮೊದಲಾದ ವಿಷಯಗಳಲ್ಲಿ **ಮೋಹಜಂ** ಭ್ರಾಂತಿಯಿಂದ ಬಂದಿರುವ **ಅಹಂ ಮಮೇತಿ ಅತದ್ಭಾವಂ** ನಾನು ನನ್ನದು ಎಂಬ ಭ್ರಾಂತಿಯನ್ನು **ತ್ಯಜೇತ್** ಬಿಡಬೇಕು.

ವಿಶೇಷ :- ನಾನಲ್ಲದ ದೇಹವನ್ನು ನಾನೆಂದು ತಿಳಿಯುವದು, ನನ್ನ ಅಧೀನ ವಲ್ಲದ್ದನ್ನು ನನ್ನ ಅಧೀನ ಎಂದು ತಿಳಿಯುವದು ಭ್ರಮೆಯೇ ತಾನೇ. ।।೨೦।।

ಶ್ರೀಹರಿಯು ಜೀವರಿಂದ ಭಿನ್ನನೆಂಬ ಜ್ಞಾನವು ಬರುವ ಬಗೆಯನ್ನು ಹೇಳುವರು.

**ಹೇಮಂ ಯಥಾ ಗ್ರಾವಸು ಹೇಮಕಾರಃ**
**ಕ್ಷೇತ್ರೇಷು ಯೋಗೈಸ್ತದಭಿಜ್ಞ ಆಪ್ನುಯಾತ್ ।**
**ಕ್ಷೇತ್ರೇಷು ದೇಹೇಷು ತಥಾಽಽತ್ಮಯೋಗೈ**
**ರಧ್ಯಾತ್ಮವಿದ್ ಬ್ರಹ್ಮಗತಿಂ ಲಭೇತ್ ।।೨೧।।**

**ಯಥಾ** ಹೇಗೆ **ತದಭಿಜ್ಞಃ** ಬಂಗಾರವನ್ನು ಹೇಗೆ ಪಡೆಯಬೇಕೆಂದು ಬಲ್ಲ **ಹೇಮಕಾರಃ** ಬಂಗಾರಮಾಡುವವನು **ಯೋಗೈಃ** ಉಜ್ಜುವದು ಊದುವದು ಮೊದಲಾದ ಉಪಾಯಗಳಿಂದ **ಗ್ರಾವಸು ಕ್ಷೇತ್ರೇಷು** ಕಲ್ಲಿನ ಭೂಮಿಯಲ್ಲಿ, ಒರೆಗಲ್ಲಿನಲ್ಲಿ **ಹೇಮಂ** ಬಂಗಾರವನ್ನು **ಆಪ್ನುಯಾತ್** ಹೊಂದುವನೋ **ತಥಾ** ಹಾಗೆ **ಅಧ್ಯಾತ್ಮವಿತ್** ದೇಹದಲ್ಲಿರುವ ಮನಸ್ಸು ಮೊದಲಾದವನ್ನು ಬಲ್ಲ ೨) ಶ್ರೀಹರಿಯನ್ನು ಪ್ರತಿಪಾದಿಸುವ ಶಾಸ್ತ್ರವನ್ನು ಬಲ್ಲ ೩) ಸರ್ವೋತ್ತಮನಾದ ಬಿಂಬಬರೂಪಿ ಶ್ರೀಹರಿಯನ್ನು ಬಲ್ಲ ೪) ಸ್ವೋತ್ತಮರಾದ ಗುರುಗಳ ಉಪದೇಶದಿಂದ ಶ್ರೀಹರಿಯನ್ನು ತಿಳಿದ ಮುಮುಕ್ಷುವು **ಆತ್ಮಯೋಗೈಃ** ಪ್ರಾಣಾಯಮ ಭಕ್ತಿ ಮೊದಲಾದ ಉಪಾಯಗಳಿಂದ **ಕ್ಷೇತ್ರೇಷು** ಶ್ರೀಹರಿಯ ವಾಸಸ್ಥಾನಗಳಾದ **ದೇಹೇಷು** ಶರೀರಗಳಲ್ಲಿ **ಬ್ರಹ್ಮಗತಿಂ** ಪೂರ್ಣನಾದ ಶ್ರೀಹರಿಯ ಜ್ಞಾನವನ್ನು ಶ್ರೀಹರಿಯ ಸ್ಥಾನಗಳಾದ ವೈಕುಂಠಾದಿಲೋಕಗಳನ್ನು **ಲಭೇತ್** ಹೊಂದುವನು.

ವಿಶೇಷ :- ಸಾತ್ವಿಕಮೊದಲಾದಸ್ವಭಾವಗಳಿಗೆ ಅಧ್ಯಾತ್ಮವೆಂದು ಹೆಸರು. ಮಹಾಭೂತಮೊದಲಾದವುಗಳಿಗೂ ಅಧ್ಯಾತ್ಮವೆನ್ನುವರು. ಗುರೂಪದೇಶ ಮೊದಲಾದವುಗಳನ್ನು ಸಂಪಾದಿಸಬೇಕೆಂದು ಅಭಿಪ್ರಾಯ. ।।೨೧।।

ಆತ್ಮನು ಕ್ಷೇತ್ರಜ್ಞನೆಂದು ಹೇಳಿದರಷ್ಟೆ. ಅದರಲ್ಲಿ ಕ್ಷೇತ್ರಶಬ್ದಾರ್ಥವಾದ ಪ್ರಕೃತ್ಯಾದಿಗಳನ್ನು ಹೇಳುವರು.

**ಅಷ್ಟೌ ಪ್ರಕೃತಯಃ ಪ್ರೋಕ್ತಾಸ್ತ್ರಯ ಏವ ಹಿ ತದ್ಗುಣಾಃ ।**
**ವಿಕಾರಾಃ ಷೋಡಶಾಚಾರ್ಯೈಃ ಪುಮಾನೇಕಃ ಸಮನ್ವಯಾತ್ ॥೨೨॥**

**ಆಚಾರ್ಯೈಃ** ಕಪಿಲ ಮನು ಮೊದಲಾದ ಪೂರ್ವಾಚಾರ್ಯರಿಂದ **ಪ್ರಕೃತಯಃ** ಪ್ರಕೃತಿಗಳು **ಅಷ್ಟೌ** ಮೂಲಪ್ರಕೃತಿ-ಮಹತತ್ತ್ವ-ಅಹಂಕಾರತತ್ತ್ವ-ಆಕಾಶ-ವಾಯು -ತೇಜಸ್ಸು-ನೀರು-ಭೂಮಿ ಎಂದು ಎಂಟು **ಪ್ರೋಕ್ತಾಃ** ಹೇಳಲ್ಪಟ್ಟಿವೆ. ಸತ್ವಮೊದಲಾದಗುಣತ್ರಯಗಳು ಪ್ರಕೃತಿಯಲ್ಲಿಯೇ ಸೇರುವದರಿಂದ ಎಂಟು ಎಂದು ಹೇಳಿದ್ದು ಯುಕ್ತವೆನ್ನುತ್ತಾರೆ. **ತ್ರಯಃ** ಸತ್ತ್ವ-ರಜಸ್ಸು-ತಮಸ್ಸು ಎಂಬ ಮೂರು ಪದಾರ್ಥಗಳು **ತದ್ಗುಣಾಃ** ಏವ ಪ್ರಕೃತಿಯ ಗುಣಗಳೇ ಆದ್ದರಿಂದ ಎಂಟು ಎಂಬುದು ಸರಿ. ಪ್ರಕೃತಿಯಿಂದ ಹುಟ್ಟಿದವಿಕಾರಗಳು ಪ್ರಕೃತಿಗ್ರಹಣದಿಂದ ತೆಗೆದುಕೊಳ್ಳಲು ಬರುತ್ತವೆಯಾದ್ದರಿಂದ ಪ್ರಕೃತಿಗಳು ಎಂಟು ಎಂಬುದು ಅಸಂಭಾವಿತವಲ್ಲ. **ವಿಕಾರಾಃ** ಪ್ರಕೃತಿಯ ವಿಕಾರಗಳು ಷೋಡಶ. ಮನಸ್ಸೂ ಸೇರಿ ಹನ್ನೊಂದು ಇಂದ್ರಿಯಗಳು ಶಬ್ದಾದಿ ಐದು ತನ್ಮಾತ್ರಾಗಳು ಹೀಗೆ ಹದಿನಾರು ಎಂದು ಹೇಳಲ್ಪಟ್ಟಿವೆ. ಶ್ರೀಹರಿಯು ಇವುಗಳಲ್ಲಿ ಅನುಗತನಾದ್ದರಿಂದ ಅವನನ್ನೇಕೆ ಹೇಳಲಿಲ್ಲ ಎಂದರೆ ಹೇಳುತ್ತಾರೆ. **ಸಮನ್ವಯಾತ್** ಸಮನ್ವಯಂ ಪ್ರಾಪ್ಯ ಇವುಗಳಲ್ಲಿ ಅನುಗತಿ ಹೊಂದಿ ಇರುವ **ಪುಮಾನ್** ಪರಮಪುರುಷನಾದ ನಾರಾಯಣನು **ಏಕಃ** ಒಬ್ಬನು ಶುದ್ಧನು. ಆದ್ದರಿಂದ ವಿಕಾರಗಳಲ್ಲಿ ಅವನನ್ನು ಹೇಳಿಲ್ಲ. ಹೀಗೆ ಇಪ್ಪತ್ತು ನಾಲ್ಕು ತತ್ವಗಳು ಕ್ಷೇತ್ರಗಳೆಂದು ತದ್ಗತನಾಗಿ ಇರುವ ಶ್ರೀಹರಿಯು ಇಪ್ಪತ್ತೈದನೇಯ ತತ್ವವೆಂದು ಹೇಳಿದೆ.

ಮೇಲಿನ ಶ್ಲೋಕದಲ್ಲಿ ಇಪ್ಪತ್ತೈದು ತತ್ವಗಳನ್ನು ಹೇಳಿದೆ. ಅಲ್ಲಿ ಸಾಧಾರಣವಾದ 'ಪುಮಾನ್' ಎಂಬ ಶಬ್ದವಿರುವದರಿಂದ ಜೀವನನ್ನು ಸ್ವೀಕರಿಸಬೇಕೇ, ಶ್ರೀಹರಿಯನ್ನು ಸ್ವೀಕರಿಸಬೇಕೇ ಎಂದು ಪ್ರಶ್ನೆ ಬಂದಾಗ ವಿವಕ್ಷಾ ಭೇದದಿಂದ ಇಬ್ಬರನ್ನೂ ಸ್ವೀಕರಿಸಬೇಕೆಂದು ಪ್ರಮಾಣದಿಂದ ಹೇಳುವರು.

**... ತಾತ್ಪರ್ಯ ...**

**ಅಭಿಮಾನ್ಯಪೇಕ್ಷಯಾ ವಿಷ್ಣುಃ ಪಂಚವಿಂಶ ಇತಿ ಸ್ಮೃತಃ ।**
**ಜಡವ್ಯಪೇಕ್ಷಯಾ ಜೀವಃ ಸಮ್ಯಗ್ ಜ್ಞೇಯೋ ಹರಿಃ ಸ್ಮೃತಃ ॥ಇತಿ ಚ॥**

ಅಭಿಮನ್ಯಮಾನವಾದ ಜಡವನ್ನು ಇಟ್ಟುಕೊಂಡಾಗ ಪುಮಾನ್ ಜೀವನು ಇಪ್ಪತ್ತೈದನೇಯ ತತ್ವ. ಅಭಿಮಾನಿಚೇತನರನ್ನು ಇಟ್ಟುಕೊಂಡಾಗ ಪರಮಚೇತನನಾದ

ಶ್ರೀಹರಿಯು ಇಪ್ಪತ್ತಾರನೆಯ ತತ್ವ ಎಂದು ಸಮನ್ವಯಾತ್ ನಿಯಾಮಕನಾಗಿ ಎಲ್ಲರಲ್ಲಿರುವನೆಂದು ತಿಳಿಯಬೇಕು. ಯಾವಾಗ ಪ್ರಕೃತಿ ಮೊದಲಾದ ೨೪ ತತ್ವಗಳು ತದಭಿಮಾನಿದೇವತೆಗಳು ಎರಡನ್ನು ವಿವಕ್ಷಾ ಮಾಡಿಕೊಂಡರೆ ಇವರಿಗೆ ನಿಯಾಮಕನಾದ ಶ್ರೀವಿಷ್ಣುವು ೨೫ನೇಯವನು. ಜಡಗಳನ್ನು ವಿವಕ್ಷಾಮಾಡಿದಾಗ ೨೪ತತ್ವಗಳು(ಜಡ) ಜೀವನು ೨೫ನೇ ತತ್ವ, ಶ್ರೀಹರಿ ೨೬ನೇ ತತ್ವ ಎಂದು ತಿಳಿಯಬೇಕು. ಪ್ರಕೃತಿಪದದಿಂದ ಜಡಪ್ರಕೃತಿಮಾತ್ರ ಇಟ್ಟುಕೊಂಡರೆ ಲಕ್ಷ್ಮೀದೇವಿ ೨೬ನೇಯವಳು ಶ್ರೀವಿಷ್ಣುವು ೨೭ನೇಯವನು. ।।೨೨।।

ತತ್ವಗಳ ಸಂಖ್ಯೆಯನ್ನು ಹೇಳಿದ್ದರಿಂದ ಪ್ರಕೃತಕ್ಕೆ ಏನು ಉಪಯೋಗ ಎಂದರೆ ಹೇಳುತ್ತಾರೆ.

**ದೇಹಸ್ತು ಸರ್ವಸಂಘಾತೋ ಜಗತ್ತಸ್ಥುರಿತಿ ದ್ವಿಧಾ ।**
**ತತ್ರೈವ ಮೃಗ್ಯಃ ಪುರುಷೋ ನೇತಿ ನೇತೀತ್ಯತತ್ ತ್ಯಜನ್(ಅತತ್ಯಜಾ) ॥**

**ದೇಹಸ್ತು** ಈ ಪ್ರಾಣಿಗಳಿಗೆ ಕಂಡು ಬರುವ ದೇಹವಾದರೂ **ಸರ್ವಸಂಘಾತಃ** ಪ್ರಕೃತಿ, ಪ್ರಾಕೃತ ಸಮೂಹದಿಂದ ನಿರ್ಮಿತವಾದುದು **ಜಗತ್** ಸಮಸ್ತಪ್ರಪಂಚವು **ಜಗತ್** ಜಂಗಮವೆಂದು **ತಸ್ಥುಃ** ಸ್ಥಾವರವೆಂದೂ **ದ್ವಿಧಾ** ಎರಡು ರೀತಿಯಾಗಿದೆ **ಅತತ್** ವ್ಯಾಪ್ತನಾದ ಬ್ರಹ್ಮನಿಂದ ಭಿನ್ನಗಳಾದ ಪ್ರಕೃತಿಮೊದಲಾದವುಗಳನ್ನು **ತ್ಯಜನ್** ಬಿಡುತ್ತಾರೆ ಅಂದರೆ ಯಾವಾಗಲೂ ಅವುಗಳಿಂದ ಭಿನ್ನನಾಗಿರುವ **ಪುರುಷಃ** ಪೂರ್ಣಷಡ್ಗುಣನಾದ ಶ್ರೀಹರಿಯು **ಅತ ಏವ** ದೇಹವೆಂಬ ಈ ಪ್ರಪಂಚದಲ್ಲಿಯೇ 'ನೇತಿ ನೇತಿ ಸ ಏಷ ನೇತಿ ನೇತೀತ್ಯಾತ್ಮಾ'ಎಂಬ ಶ್ರುತಿಯಲ್ಲಿ ಹೇಳಿರುವಂತೆ ಪ್ರಕೃತಿಯಲ್ಲಿ ಪ್ರಾಕೃತವಾದ ಮಹತತ್ವಾದಿಗಳಲ್ಲಿ ಈ ರೀತಿಯಾಗಿ ಸರ್ವಜಗದ್ವಿಲಕ್ಷಣ ನೆಂದು **ಮೃಗ್ಯಃ** ವಿಚಾರಮಾಡಿ ತಿಳಿಯಬೇಕಾದವನು. ಅಥವಾ **ಅತತ್** ಪ್ರಾಕೃತದೇಹವನ್ನು **ತ್ಯಜನ್** ಯಾವನು ಬಿಡುತ್ತಾನೆಯೋ ಅವನಿಂದ ಮೃಗ್ಯನು. ಜಗತ್ತೇ ಅಸಾರವೆಂದು ಬಿಟ್ಟ ಅಧಿಕಾರಿಯಿಂದ ಎಂದಾದರೂ ಅರ್ಥ. ಅತತ್ಯಜಾ ಎಂಬ ಪಾಠದಲ್ಲಿ ಜಗತ್ತನ್ನು ಬಿಟ್ಟವನಿಂದ ಎಂಬರ್ಥವು ಸ್ಪಷ್ಟ. ।।೨೩।।

ವಿಶೇಷ :- ಹೀಗೆ ಹೇಳಿದ್ದರಿಂದ ದೇಹವನ್ನೇಕೇ ಬೇರೆ ಹೇಳಲಿಲ್ಲವೆಂಬ ಶಂಕೆಗೆ ಉತ್ತರವಿತ್ತಂತಾಯಿತು. **ತು** ಎಂಬುದರಿಂದ ತತ್ವಗಳಿಗಿಂತ ಅವುಗಳ ಅಭಿಮಾನಿ ಬ್ರಹ್ಮಾದಿಚೇತನರಿಗಿಂತ ಭಿನ್ನನೆಂದು ಶ್ರೀಹರಿಯನ್ನು ತಿಳಿಯಬೇಕೆಂಬ ಅಭಿಪ್ರಾಯದಿಂದ ಈ ತತ್ವಗಳ ಸಂಖ್ಯೆಯನ್ನು ಹೇಳಿದ್ದು ಎಂದು ತಿಳಿಸಿರುವರು ದೇಹಶಬ್ದದಿಂದ ಪ್ರಪಂಚವೇ ವಿವಕ್ಷಿತವೆಂಬ ಅಭಿಪ್ರಾಯದಿಂದ ಆ ದೇಹವನ್ನು ವಿಭಾಗಿಸುತ್ತಾರೆ. ಜಗತ್ ಪದವನ್ನು ಆವೃತ್ತಿಮಾಡಿಕೊಳ್ಳಬೇಕು.

ಯಾವ ಉಪಾಯದಿಂದ ಮೃಗ್ಯನೆಂದು ಹೇಳುತ್ತಾರೆ.

**ಅನ್ವಯವ್ಯತಿರೇಕೇಣ ವಿವೇಕೇನಾಗತಾತ್ಮನಾ ।**
**ಸರ್ಗಸ್ಥಾನಸಮಾಮ್ನಾಯೈರ್ವಿಮೃಶದ್ಭಿರಸತ್ವರೈಃ ॥೨೪॥**

೧) **ಅನ್ವಯವ್ಯತಿರೇಕೇಣ** ಅನ್ವಯಸಹಿತವಾದ ವ್ಯತಿರೇಕದಿಂದ ಎಲ್ಲಿ ಎಲ್ಲಿ ಜಗತ್ತಿದೆಯೋ ಅಲ್ಲಲ್ಲಿ ಬ್ರಹ್ಮನಿದ್ದಾನೆ ಎಂಬ ಅನ್ವಯ. ಎಲ್ಲಿ ಎಲ್ಲಿ ಬ್ರಹ್ಮನಿರುವನೋ ಅಲ್ಲೆಲ್ಲ ಜಗತ್ತಿಲ್ಲವೆಂಬುದು ವ್ಯತಿರೇಕ. ಪರಿಚ್ಛಿನ್ನವಾದ್ದರಿಂದ ಬ್ರಹ್ಮನಂತೆ ವ್ಯಾಪ್ತವಲ್ಲ. ೨) ಶ್ರೀಹರಿಯಿದ್ದರೆ ದೇಹವಿರುತ್ತದೆ ಎಂಬುದು ಅನ್ವಯ. ಶ್ರೀಹರಿ ಇಲ್ಲದಿದ್ದರೆ ದೇಹವಿಲ್ಲ ಎಂಬುದು ವ್ಯತಿರೇಕ. ೩) ಸಮನ್ವಯಾತ್ ಎಂದು ಹೇಳಿದ್ದರಿಂದ ಸೂಚಿತವಾದ ಸರ್ವತ್ರ ವಸನದಿಂದ ಅನ್ವಯ. ಅಸಂಗೀ ಎಂದು ಹೇಳಿದ್ದರಿಂದ ಸೂಚಿತಜಗದ್ವೈಲಕ್ಷಣ್ಯ ಎಂಬ ವ್ಯತಿರೇಕ ಹೀಗೆ ಅನ್ವಯವ್ಯತಿರೇಕಗಳಿಂದ ಅಥವಾ ಶ್ರೀಹರಿಯು ಇದ್ದರೆ ವಿರಿಂಚಾದಿಪ್ರಪಂಚವು ಕಾರ್ಯಪ್ರವರ್ತಕವಾಗುವದು ಇಲ್ಲವಾದರೆ ಇಲ್ಲ ಎಂಬ ಅನ್ವಯ ವ್ಯತಿರೇಕಗಳಿಂದ **ವಿವೇಕೇನ** ಯುಕ್ತಿನಿಶ್ಚಿತವಾದ ವಿವೇಕಜ್ಞಾನದಿಂದ **ಆಗತೇನ** ಯುಕ್ತವಾದ **ಆತ್ಮನಾ** ಮನಸ್ಸಿನಿಂದ ೨) ಅನ್ವಯವ್ಯತಿರೇಕದಿಂದ **ಆಗತಾತ್ಮನಾ** ಸ್ವರೂಪವನ್ನು ಹೊಂದಿದ(ಹುಟ್ಟಿದ) **ವಿವೇಕೇನ** ಜಗದ್ಭಿನ್ನನೆಂಬ ಜ್ಞಾನದಿಂದ, ವ್ಯಾಪ್ತಿಜ್ಞಾನವನ್ನು ಉಂಟುಮಾಡುವ ಪ್ರಮಾಣವೇ ಇಲ್ಲವಾದ್ದರಿಂದ ಅನ್ವಯವ್ಯತಿರೇಕಯುಕ್ತಿಗಳು ಆಭಾಸಗಳೇ ಆಗುವದರಿಂದ ನಿರ್ಣಯವಾಗುವದಿಲ್ಲವಲ್ಲ ಎಂದರೆ ಹೇಳುತ್ತಾರೆ **ಅಸತ್ವರೈಃ** ಮೇಲೆ ತೋರುವ ಅರ್ಥಕ್ಕಿಂತಭಿನ್ನವಾದ ಅರ್ಥವುಳ್ಳ **ವಿಮೃಶದ್ಭಿಃ** 'ಕೋ ನ ಆತ್ಮಾ ಕಿಂ ಬ್ರಹ್ಮ' ಮುಂತಾಗಿ ವಿಚಾರಮಾಡುವ **ಸರ್ಗಸ್ಥಾನಸಮಾಮ್ನಾಯೈಃ** ಸೃಷ್ಟಿಸ್ಥಿತಿಸಂಹಾರ ಮೊದಲಾದವುಗಳ ಕರ್ತೃವನ್ನು ತಿಳಿಸುವ ಉಪಕ್ರಮಾದಿತಾತ್ಪರ್ಯಲಿಂಗಗಳಿಂದ ಸಹಿತವಾದ 'ಯತೋ ವಾ ಇಮಾನಿ ಭೂತಾನಿ ಜಾಯಂತೇ ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯ-ಭಿಸಂವಿಶಂತಿ, ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ', ಇತ್ಯಾದಿ ನಿರ್ದೋಷಗುಣೋಪೇತವೇದಗಳಿಂದ **ಅಸತ್ವರೈಃ** ಸಾವಧಾನಮನಸ್ಕರಾದ **ವಿಮೃಶದ್ಭಿಃ** ವಿಮರ್ಶಾಪರವಾದ ಅಧಿಕಾರಗಳಿಂದ ಅತ್ಮೈವ ಮೃಗ್ಯಃ ಎಂದು ಹಿಂದಕ್ಕೆ ಅನ್ವಯ.

ವಿಶೇಷ :- ವಿವೇಕವೆಂದರೆ ಶ್ರೀಹರಿಯು ಸರ್ವಜ್ಞಸರ್ವಶಕ್ತ ಅದುಃಖಿ, ಜೀವನಾದರೂ ಅಲ್ಪಜ್ಞ ಅಲ್ಪಶಕ್ತಿ ದುಃಖಿ ಎಂಬ ವಿರುದ್ಧಗುಣಗಳಿರುವದರಿಂದ ಈಶ ಜೀವರು ಭಿನ್ನರೆಂಬ ನಿಶ್ಚಯ. 'ಸರ್ವೇ ಸ್ವರಾಃ ಘೋಷವಂತೋ ಬಲವಂತೋ ವಕ್ತವ್ಯಾಃ (ಪ್ರಜಾಪತೇರಾತ್ಮಾನಂ) ಇಂದ್ರೋ ಬಲಂ ದದಾತೀತಿ ಸರ್ವೇ

ಉಷ್ಮಾಣೋ ಗ್ರಸ್ತಾ ಅನಿರಸಾಂ ವಿವೃತೌ ವಕ್ತವ್ಯಾ ಪರಿದದಾತೀತಿ ಸರ್ವೇ ಸ್ಪರ್ಶಾ ಲೇಶತೋ ಅನಭಿಹಿತಾ ವಕ್ತವ್ಯಾಮೃತ್ಯೋರಾತ್ಮಾನಂ ಪರಿಹರತೀತಿ' ಎಂಬ ಶ್ರುತಿಯು ಶೀಘ್ರವಾಗಿ ಉಚ್ಚರಿಸಬಾರದು ಎಂದು ತಿಳಿಸಿದೆ. ಸ್ತ್ರೀಶೂದ್ರಾದಿಗಳಿಂದ ಹೇಗೆ ತಿಳಿಯುವದು ಎಂಬ ಶಂಕೆ ಪರಿಹರಿಸಲು ಶ್ರುತಿಮುಂತಾದ ಪದವಿಡದೆ ಆಮ್ನಾಯ ಎಂಬ ಪದವಿನ್ನಿಟ್ಟು ಸಂಪ್ರದಾಯದಿಂದ ಎಂಬರ್ಥ ಸೂಚಿಸಿರುವರು. ಸಂಪ್ರದಾಯವೆಂದರೆ 'ಆಗಮೋ ಗ್ರಂಥನಿಬದ್ಧವಾಕ್ಯಂ ಸಂಪ್ರದಾಯಸ್ತೂಪದೇಶ-ಪದಂ ಪರಾಮಾತ್ರಂ ಇತಿ ಭೇದ' ಎಂದು ಪ್ರಮೇಯ ದೀಪಿಕಾದಲ್ಲಿ ಹೇಳಿದೆ. ।।೨೪।।

**ಬುದ್ಧೇರ್ಜಾಗರಣಂ ಸ್ವಪ್ನಃ ಸುಷುಪ್ತಿರಿತಿ ವೃತ್ತಯಃ ।**
**ತಾ ಯೇನೈವಾನುಭೂಯಂತೇ ಸೋಽಧ್ಯಕ್ಷಪುರುಷಃ ಪರಃ ।।೨೫।।**

**ಬುದ್ಧೇಃ** ಜೀವನಿಗೆ **ಜಾಗರಣಂ, ಸ್ವಪ್ನಃ, ಸುಷುಪ್ತಿಃ ಇತಿ ವೃತ್ತಯಃ** ಜಾಗ್ರತ್ಸ್ವಪ್ನ ಸುಷುಪ್ತಿ ಎಂದು ಮೂರು ಅವಸ್ಥೆಗಳು ಇವೆ **ತಾಃ** ಈ ಮೂರು ಅವಸ್ಥೆಗಳು **ಯೇನ ಏವ** ಯಾವ ಶ್ರೀಹರಿಯಿಂದಲೇ ಪ್ರೇರಿತನಾದ ಜೀವನಿಂದ **ಅನುಭೂಯಂತೇ** ಅನುಭವಿಸಲ್ಪಡುವವೋ **ಸಃ** ಅವಸ್ಥಾತ್ರಯಪ್ರೇರಕನಾದ **ಪರಃ ಪುರುಷಃ** ಜೀವಾದಿಭಿನ್ನನಾದ ಶ್ರೀಹರಿಯು **ಅಧ್ಯಕ್ಷಃ** ಜಾಗ್ರದಾದ್ಯವಸ್ಥಾಗಳಲ್ಲಿ ಇಂದ್ರಿಯ ಸುಖದುಃಖಭಾಗಿಯಾದ **ಪುರುಷಃ** ಜೀವನು **ಪರಃ** ಅವಸ್ಥಾತ್ರಯ ಪ್ರೇರಕ ವಿಶ್ವಾದಿರೂಪ ಶ್ರೀಹರಿಗಿಂತ ಭಿನ್ನನು ಎಂದು ಉತ್ತರಾರ್ಧಕ್ಕೆ ಎರಡರ್ಥ ಏವಕಾರದಿಂದ ಶ್ರೀಹರಿಯೇ ಅವಸ್ಥಾಪ್ರೇರಕನು ಹೊರತು ಕಾಲಾದಿಗಳಲ್ಲವೆಂದು ತಿಳಿಸಿರುವರು. ।।೨೫।।

ವಿಶೇಷ ಃ- 'ಸತ್ವಬುದ್ಧ್ಯಾದಿಶಬ್ದೈಸ್ತು ಜೀವೋಽಪಿ ಕ್ವಚಿದೀರ್ಯತೇ' ಎಂದು ಪ್ರಮಾಣವಿದೆ.

ಮೇಲಿನ ಶ್ಲೋಕದಲ್ಲಿ 'ಬುದ್ಧೇಃ' ಎಂದರೆ ಮನಸ್ಸೂ ಮನೋವೃತ್ತಿಯೂ ಯಾವನಿಂದ ಅನುಭವಿಸಲ್ಪಡುವದೋ ಸಃ ಆಯಾ ಜೀವನು, ಪರಃ ಪುರುಷಃ ಎಂದು ಜೀವನಿಗೆ ಪರತ್ವವನ್ನು ಹೇಳಲ್ಪಡುತ್ತದೆ ಅಥವಾ ಪರಪುರುಷಭಗವದೈಕ್ಯ ಹೇಳ್ಪಡುತ್ತದೆ ಎಂಬ ಅನ್ಯಥಾ ಪ್ರತೀತಿಯನ್ನು ಬುದ್ಧಿಶಬ್ದವನ್ನು ವ್ಯಾಖ್ಯಾನಿಸಿ ಪ್ರಮಾಣವನ್ನು ಉದಾಹರಿಸಿ ಪರಿಹರಿಸುವರು.

**... ತಾತ್ಪರ್ಯ ...**

**ಬುದ್ಧೇಃ ಜೀವಸ್ಯ ।**

**ಸತ್ತ್ವಬುದ್ಧ್ಯಾದಿ ಶಬ್ದೈಸ್ತು ಜೀವೋಽಪಿ ಕ್ವಚಿದೀರ್ಯತೇ ।**
**ಜಾಗ್ರದಾದ್ಯಾಃ ಕರ್ಮಜಾಶ್ಚೈವ ಸುಖದುಃಖೇ ಚ ತಸ್ಯ ಹಿ ॥**
**ಜಾಗ್ರದಾದೇಃ ಪರೋ ದ್ರಷ್ಟಾ ಸುಖನಿಷ್ಠೋ ಹರಿಃ ಸ್ಮೃತಃ ॥೨೫॥**

ಬುದ್ಧೇಃ ಎಂಬುದಕ್ಕೆ ಜೀವನಿಗೆ ಎಂದರ್ಥ. ಕೆಲವು ಕಡೆ ಸತ್ವ ಬುದ್ಧಿಮೊದಲಾದ ಶಬ್ದಗಳಿಂದ ಜೀವನೂ ಹೇಳಲ್ಪಡುತ್ತಾನೆ. ಜಾಗ್ರದಾದ್ಯವಸ್ಥೆಗಳು, ಕರ್ಮದಿಂದ ಉಂಟಾಗುವ ಪುಣ್ಯಪಾಪಾದಿಗಳು, ಸುಖದುಃಖಗಳೂ ಯಾವ ಶ್ರೀಹರಿಯಿಂದ ಜೀವನಿಗೆ ಆಗುತ್ತವೆಯೋ, ಅಂತಹ ಜಾಗ್ರದಾದ್ಯವಸ್ಥೆಗಳನ್ನು ಶ್ರೀಹರಿಯು ನೋಡುವವನು ಪೂರ್ಣಸುಖವುಳ್ಳವನು. ॥೨೫॥

'ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ । ಪ್ರಾಜ್ಞಃ ಕಾರಣಬದ್ಧಸ್ತು' ಎಂಬ ಮಾಂಡೂಕ್ಯೋಪನಿಷತ್ತಿನ ವಾಕ್ಯದಂತೆ ವಿಶ್ವಾದಿರೂಪನಾದ ನಾರಾಯಣನು ಜೀವನಂತೆ ಬದ್ಧನಾಗಿರುವದರಿಂದ ಜೀವನಿಂದ ನಾರಾಯಣನು ಭಿನ್ನನೆಂದು ಹೇಗೆ ತಿಳಿಯುವದು ಎಂದರೆ ಹೇಳುತ್ತಾರೆ. ಹಿಂದಿನ ಶ್ಲೋಕದಲ್ಲಿ ಬುದ್ಧಿ ಎಂದು ಕರಿಸಿಕೊಳ್ಳಲ್ಪಡುವ ಜೀವನಿಗೆ ಅವಸ್ಥಾತ್ರಯಗಳೆಂಬ ಸಂಸಾರಾನುಭವವು ಭಗವಂತನಿಂದ ಆಗುವದು ಎಂದು ಹೇಳಿದೆ. ಅದು ಹೇಗೆ? ಭಗವಂತನು ಯಾವುದೊಂದನ್ನು ನಿಮಿತ್ತಮಾಡಿಕೊಳ್ಳದೇ ಸಂಸಾರಾನುಭವವನ್ನು ಮಾಡಿಸಲಾರನಲ್ಲ ಎಂದರೆ ಸಂಸಾರಕಾರಣಗಳನ್ನು ಈ ಮೂರು ಶ್ಲೋಕಗಳಿಂದ ಹೇಳುತ್ತಾರೆ.

**ಏಭಿಸ್ತ್ರಿವರ್ಣೈಃ ಪರ್ಯಸ್ತೈರ್ಬುದ್ಧಿಭೇದೈಃ ಕ್ರಿಯೋದ್ಭವೈಃ ।**
**ಸರೂಪಮಾತ್ಮನೋ ಧತ್ತೇ ಗಂಧೈರ್ವಾಯುರಿವಾನ್ವಯಾತ್ ॥೨೬॥**

**ಸಃ** ಆ ನಾರಾಯಣನು **ಕ್ರಿಯೋದ್ಭವೈಃ** ೧)ಕರ್ಮದಿಂದ ಹುಟ್ಟಿದ ೨) ಕ್ರಿಯೆಯ ಉತ್ಪತ್ತಿಗೆ ಕಾರಣಗಳಾದ **ಪರ್ಯಸ್ತೈಃ** ಜೀವನಲ್ಲಿ ಅನಾದಿಕಾಲದಿಂದ ಒಂದು ಕಡೆ ಸೇರಿದ **ಬುದ್ಧಿಭೇದೈಃ** ಜೀವರ ತಾರತಮ್ಯವೆಂಬ ಭೇದಕ್ಕೆ ಜ್ಞಾಪಕಗಳಾದ **ಏಭಿಃ** ಜೀವಸಂಬಂಧಿಗಳಾದ **ತ್ರಿವರ್ಣೈಃ** ೧) ಮುರು ಬಗೆಯಾಗಿ ಹೇಳಲ್ಪಡುವ ಶುಕ್ಲಕೃಷ್ಣರಕ್ತವರ್ಣಗಳುಳ್ಳ ಸತ್ವಾದಿಗುಣಕಾರ್ಯವಾದ್ದರಿಂದ ತ್ರಿವರ್ಣವೆನಿಸುವ ಪ್ರಕೃತಿಕಾರ್ಯವಾದ್ದರಿಂದ 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಎಂದಿರುವದರಿಂದ ತ್ರಿವರ್ಣಗಳಾದ ಜಾಗರಣಸ್ವಪ್ನಸುಷುಪ್ತಿ ಎಂಬ ಕ್ರಮವಾಗಿ ಶುಕ್ಲರಕ್ತಕೃಷ್ಣಗಳಾದ ಅವಸ್ಥೆಗಳೊಂದಿಗೆ, ಸತ್ವಾದಿಗುಣಗಳೊಂದಿಗೆ **ಅನ್ವಯಾತ್** ಬಲಗಣ್ಣು ಮೊದಲಾದವುಗಳಲ್ಲಿದ್ದು ಸಂಪರ್ಕವನ್ನು ಹೊಂದಿರುವದರಿಂದ **ಗಂಧೈಃ** ಗಂಧಕ್ಕೆ ಆಶ್ರಯಗಳಾದ ಹೂವಿನ ಸೂಕ್ಷ್ಮಪರಾಗಗಳೊಂದಿಗೆ **ಅನ್ವಯಾತ್** ಸಂಬಂಧದಿಂದ **ವಾಯುಃ ಇವ** ಗಾಳಿಯು ಸುಗಂಧಿ, ದುರ್ಗಂಧಿ ಉಭಯಗಂಧಿ,

ಎಂದು ಅಜ್ಞಜನರ ಬುದ್ಧಿಗೂ, ಈ ಗಂಧವು ಪಾರ್ಥಿವ ಭಾಗಕ್ಕೆ ಸೇರಿದ್ದೇ ಹೊರತು ವಾಯುವಿನದಲ್ಲವೆಂದು ಜ್ಞಾನಿಗಳ ಬುದ್ಧಿಗೂ ವಿಷಯವಾದಂತೆ **ಆತ್ಮನಃ** ಜೀವನ **ಸರೂಪಂ** ಸಾದೃಶ್ಯವನ್ನು, ಬದ್ಧನೆಂಬ ವ್ಯವಹಾರವನ್ನು ಅಜ್ಞರ ದೃಷ್ಟಿಯಿಂದಲೂ, ಬದ್ಧತೆಯು ಇವನೊಂದಿಗೆ ಇರುವ ಜೀವನದೇ ಹೊರತು ಪರಮಾತ್ಮನಿಗೆ ಸಂಬಂಧಿಸಿದ್ದಲ್ಲವೆಂಬ ವ್ಯವಹಾರವನ್ನು ಜ್ಞಾನಿಗಳ ದೃಷ್ಟಿಯಿಂದಲೂ **ಧತ್ತೇ** ಹೊಂದಿರುವನು. ಜ್ಞಾನಿಗಳು ಜ್ಞಾನಾನಂದಾದಿಸಾದೃಶ್ಯವುಳ್ಳವನೆಂದು ತಿಳಿಯುವರೆಂದು ಅಭಿಪ್ರಾಯ. ಶುಕ್ಲಸತ್ವದಿಂದ ಜಾಗರಣ, ರಕ್ತ ರಜಸ್ಸಿನಿಂದ ಸ್ವಪ್ನ, ಕೃಷ್ಣ ತಮಸ್ಸಿನಿಂದ ಸುಷುಪ್ತಿ ಅವಸ್ಥೆಗಳು ಬರುವವು. ಕರ್ಮಗಳೂ ಹೀಗೆಯೇ ಸಾತ್ವಿಕ, ರಾಜಸ, ತಾಮಸಗಳೆನಿಸುವವು. 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ' ಎಂಬ ಶ್ರುತಿಯು ಪ್ರಕೃತಿಯ ಗುಣಗಳ ವರ್ಣಗಳನ್ನು ತಿಳಿಸುವದು.

ವಾಯುವು ಗಂಧಸ್ವರೂಪವಲ್ಲ. ಹಾಗಿದ್ದಲ್ಲಿ ಯಾವಾಗಲೂ ವಾಸನೆ ಇರಲೇಬೇಕು. ಹಾಗಿಲ್ಲ ಆದ್ದರಿಂದ ಗಂಧದಿಂದ ವಾಯುವು ಹೇಗೆ ಭಿನ್ನವೋ ಹಾಗೆ ಶ್ರೀಹರಿಯು ಬದ್ಧನಾದ ಜೀವನಿಂದ ಭಿನ್ನನು ಎಂಬುದನ್ನು ಪ್ರಮಾಣದಿಂದ ತಿಳಿಸುವರು.

**... ತಾತ್ಪರ್ಯ ...**

**ಸ ಜೀವೇನ ಸಹ ಸ್ಥಾನಾತ್ತತ್ಸ್ವರೂಪಃ ಪ್ರದೃಶ್ಯತೇ ।**
**ಅಜ್ಞದೃಷ್ಟ್ಯಾ ನ ಜ್ಞದೃಷ್ಟ್ಯಾ ಯಥಾ ಗಂಧಯುತೋಽನಿಲಃ ॥**

ಶ್ರೀಹರಿಯು ದೇಹದಲ್ಲಿ ಜೀವರಿಂದ ಕೂಡಿಕೊಂಡಿರುವದರಿಂದ ಅಜ್ಞರ ದೃಷ್ಟಿಗೆ ಭ್ರಾಂತಿಯಿಂದ ಜೀವಾಭಿನ್ನ(ಅವನ ಸ್ವರೂಪ) ಎಂದು ತೋರುತ್ತಾನೆ. ಪ್ರಾಜ್ಞರ ದೃಷ್ಟಿಯಿಂದ ಹಾಗೆ ಕಾಣುವದಿಲ್ಲ. ಭಿನ್ನನಾಗಿಯೇ ಕಾಣುತ್ತಾನೆ. ಹೇಗೆ ವಾಯುವು ಅಜ್ಞರ ದೃಷ್ಟಿಯಿಂದ ಪುಷ್ಪಗಳ ಸಂಬಂಧದಿಂದ ಗಂಧವುಳ್ಳದ್ದಾಗಿ ಕಾಣುತ್ತದೆಯೋ ಹಾಗೆಯೇ. 'ಬುದ್ಧಿಭೇದೈಃ ಜೀವಾನಾಂ ತಾರತಮ್ಯಜ್ಞಾಪಕೈಃ । 'ಬುದ್ಧಿಭೇದೈಃ' ಎಂಬುದಕ್ಕೆ ಜೀವರಿಗೆ ತಾರತಮ್ಯ ತಿಳಿಸುವ ಎಂದರ್ಥ. 'ತತ್ಸೃಷ್ಟ್ವಾ ತದೇವಾನುಪ್ರಾವಿಶತ್' ಎಂಬ ಶ್ರುತಿಯಿಂದ ಶ್ರೀಹರಿಗೆ ದೇಹವೆಂಬ ಪ್ರಪಂಚದ ಸಂಬಂಧವಿದೆ ಎಂದು ಹೇಳಿದಂತಾಯಿತು ಅದರ ಕಾರ್ಯಗಳಾದ ಸುಖದುಃಖಾದಿಗಳಿಲ್ಲವೆಂದು ಭಾವ.

**ಶ್ರೀಸತ್ಯಧರ್ಮತೀರ್ಥರ ವ್ಯಾಖ್ಯಾನ**

ಈ ಶ್ಲೋಕದಲ್ಲಿ 'ಗಂಧೈಃ' ಎನ್ನುವದಕ್ಕೆ ಗಂಧಕ್ಕೆ ಆಶ್ರಯವಾದ ದ್ರವ್ಯದ (ಪೃಥಿವಿಯ)ಸೂಕ್ಷ್ಮಾವಯವಗಳಿಂದ ಸಂಬಂಧ ಎಂದರ್ಥ. ಈ ವಿಷಯವನ್ನು

'ವಾಯುರ್ಗಂಧಾನಿವಾಶಯಾತ್' ಎಂಬ ಗೀತಾವಚನವು 'ಗಂಧಾನೀವ ಸೂಕ್ಷ್ಮಾಣಿ'ಎಂಬ ಗೀತಾಭಾಷ್ಯದ ವಚನವು 'ಅನೇಕೇಷು ಆಕೃಷ್ಯಮಾಣೇಷು ಗಂಧೋಪಾದಾನೇ ಅಭಿಪ್ರಾಯಮಾಹ ಗಂಧಾನೀವೇತಿ ಗಂಧವತಃ ಪುಷ್ಪದ್ರವ್ಯವಾನಿವ ಇತ್ಯರ್ಥಃ'ಎಂಬ ಟೀಕಾವಚನವು.

ವಿವರಣೆ :- ಇಲ್ಲಿ ಗಂಧಶಬ್ದವು ಗುಣವಾಚಕವಾದರೆ ಗುಣಕ್ಕೆ ಸೂಕ್ಷ್ಮತ್ವವಿಲ್ಲದ್ದರಿಂದ 'ಸೂಕ್ಷ್ಮಾಣಿ' ಎಂದು ಉಪಮಾನ ಉಪಮೇಯ ಸಾಧಾರಣಧರ್ಮ ಹೇಳಿದ್ದರ ವಿರೋಧ ಬರುವದು. ಮತ್ತು 'ಯಥಾ ಗಂಧಸ್ಯ ಭೂಮೇಶ್ಚ ನ ಭಾವೋ ವ್ಯತಿರೇಕತಃ' ಎಂದು ತೃತೀಯ ಸ್ಕಂಧದಲ್ಲಿ ಹೇಳಿದ್ದರಿಂದ ಆಶ್ರಯವನ್ನು ಗುಣವನ್ನು ಆಕರ್ಷಿಸಲಾಗುವದಿಲ್ಲ ಎಂದರೆ ಹೇಳುವರು. 'ಯಥಾ ಗಂಧವತಃ ಇತಿ'। ಗಂಧೋ ಗಂಧಕ ಆಮೋದೇ ಲೇಶೇ ಸಂಬಂಧಗರ್ವಯೋಃ । ಸ ಏವ ದ್ರವ್ಯವಚನೋ ಬಹುತ್ವೇ ಪುಂಸಿ ಚ ಸ್ಮೃತಃ । ಇತ್ಯುಕ್ತೇಃ ಗಂಧಶಬ್ದಸ್ಯ ದ್ರವ್ಯವಾಚಿತ್ವಾದಿತಿ ಭಾವಃ । ಏತೇನ ಗಂಧಾನಿತಿ ಬಹುವಚನಂ ಚ ಸಮಾಹಿತಮ್ ।' (ಪುಲ್ಲಿಂಗಬಹುವಚನವಿದ್ದುದರಿಂದ ದ್ರವ್ಯವಾಚಕ ಎಂಬುದು ಯುಕ್ತ) ಪುಷ್ಪಾವಯವಗಳು ಬರುತ್ತವೆ ಎಂಬ ಪಕ್ಷಕ್ಕೆ 'ವ್ಯತಿರೇಕೋ ಗಂಧವತ್' ಎಂಬ ಸೂತ್ರವಿರೋಧವು ಬರುವದಿಲ್ಲ, ಅಲ್ಲಿಯೂ ಭಾಗಗಮನವೇ ಅಭಿಪ್ರೇತವಾಗಿದೆ. ಇಲ್ಲವಾದರೆ ಅಂಶಿಯನ್ನು ಬಿಟ್ಟು ಅಂಶವು ಹೋಗುತ್ತದೆ ಎಂಬುದಕ್ಕೆ ಗಂಧದೃಷ್ಟಾಂತ ಕೊಡುವದು ಸರಿಯಾಗದು. ಗಂಧವು ಗುಣವಾದ್ದರಿಂದ ಅದಕ್ಕೆ ಅಂಶತ್ವವಿಲ್ಲ. 'ಗುಣಾದ್ವಾ ಆಲೋಕವತ್' ಎಂಬಲ್ಲಿ ಹೇಳಿದಂತೆ ಆಲೋಕದಂತೆ ಗುಣವೇ ಏಕೆ ಆಗಬಾರದು ಎಂದು ಕೇಳುವಂತಿಲ್ಲ ವೈಷಮ್ಯವಿದೆ. ಆಲೋಕಕ್ಕೆ ಆಗಮನವು ಯುಕ್ತವಾಗಿದೆ. ಅದು ತನ್ನ ಆಶ್ರಯವನ್ನು ಬಿಡದೇ ಬೇರೆಡೆಗೂ ಇರುತ್ತದೆ. ಗಂಧವು ತನ್ನ ಆಶ್ರಯವನ್ನು ಬಿಟ್ಟು ಬೇರೆಡೆಗೆ ಬರುತ್ತದೆ. ಗುಣಕ್ಕೆ ಆಶ್ರಯಬಿಟ್ಟು ಇರುವಿಕೆ ಇಲ್ಲವಾದ್ದರಿಂದ ಯುಕ್ತಿ ವಿರುದ್ಧವೂ ಆಗಿದೆ. ಹಾಗಾದರೆ ವ್ಯತಿರೇಕಸೂತ್ರದ ಚಂದ್ರಿಕಾವಿರೋಧ ಬರುತ್ತದೆಯಲ್ಲ ಎಂದರೆ ಹಾಗೆ ಹೇಳುವಂತಿಲ್ಲ. ಅಲ್ಲಿ ಸ್ಥೂಲಾವಯವ ಆಗಮನವನ್ನು ನಿರಾಕರಿಸಿದ್ದಾರೆ. ಇಲ್ಲಿಯಾದರೂ ಸೂಕ್ಷ್ಮಭಾಗಗಮನ ಅಂಗೀಕರಿಸಿದ್ದಾರೆ. ಆದ್ದರಿಂದಲೇ 'ಸೂಕ್ಷ್ಮಾಣು' ಎಂದಿದ್ದಾರೆ ಎಂದು ತಿಳಿಯಬೇಕು. ಹೀಗೆ ಹೇಳಿದ್ದರಿಂದ 'ಯಥಾ ಪುಷ್ಪಾದ್ಗಂಧ ಪೃಥಗ್ಗಚ್ಛತಿ'। ಎಂಬ ಭಾಷ್ಯವು 'ಯಥಾ ಪುಷ್ಪಾದ್ಗಂಧಃ ಪೃಥಗ್ಗಚ್ಛತೀತಿ ದೃಷ್ಟಾಂತಾನ್ನ ವಿರೋಧಃ'ಎಂಬ ತತ್ವಪ್ರದೀಪಿಕೆಯೂ ವ್ಯಾಖ್ಯಾನಿಸಿದಂತಾಯಿತು.

ವಸ್ತುತಸ್ತು ಗುಣಗಮನವನ್ನು ಒಪ್ಪಿದರೂ ಬಾಧಕವೇನು ಕಾಣುವದಿಲ್ಲ. ಭಾಗವತದ ನಿರಂಶತ್ವಯುಕ್ತಿಗಳಿಂದ ಬಾಧ ಬರುತ್ತದೆಯಲ್ಲ ಎಂದರೆ ಹಾಗೆ

ಹೇಳುವಂತಿಲ್ಲ. ಭಾಗವತವು ಗಂಧವು ಭೂಮಿಯ ಗುಣ. ಬೇರೆ ಭೂತದ ಗುಣವಲ್ಲ ಎಂದು ಹೇಳುವ ತಾತ್ಪರ್ಯವುಳ್ಳದ್ದು. ಆದ್ದರಿಂದಲೇ ಗೀತಾವಿವೃತಿಯಲ್ಲಿ ಭಾಷ್ಯಟೀಕಾಗಳಂತೆ 'ಗಂಧಾನಿವ' ಗಂಧವತಃ ಪುಷ್ಪಾದ್ಯವಯವಾನಿವ' ಎಂದು ವ್ಯಾಖ್ಯಾನಿಸಿರುವರು. ಕಾರಣ ಅದರ ವಿಸಂವಾದವಿಲ್ಲ. ಆದ್ದರಿಂದ ಆ ಅರ್ಥವನ್ನು ಸ್ವೀಕರಿಸುತ್ತೇವೆ. ಇನ್ನು ಗುಣ ನಿರಂಶವಾದ್ದರಿಂದ ಅದಕ್ಕೆ ಗಮನ ಹೇಗೆ ಎನ್ನುವಂತಿಲ್ಲ.

'ನ ಚಾನವಯವಂ ವಸ್ತು ಕ್ವಚಿ ಸ್ಯಾನ್ಮಾನಗೋಚರಂ । ತಸ್ಮಾದ್ಗುಣಾದಿಕಮಪಿ ನಾಸ್ತ್ಯನಂಶತಯಾ ಕ್ವಚಿತ್ ।' ಎಂಬ ಪ್ರಮಾಣಾನುಸಾರ ಗುಣವೂ ಸಾಂಶವೇ. ನನು ಗುಣಾನಾಂ ನಿರವಯವತ್ವಾತ್ ಕಥಂ ನ ಅನವಯಂ ವಸ್ತು ಕ್ವಚಿತ್ ಇತ್ಯುಚ್ಯತೇ ಇತ್ಯತ ಆಹ ತಸ್ಮಾದಿತೀತಿ' ಎಂದು, ಗೀತಾತಾತ್ಪರ್ಯನ್ಯಾಯ-ದೀಪಿಕಯೋಃ ಗುಣಾನಾಂ ಸಾಂಶತೋಕ್ತೇಃ ಗಮನಸಂಭವಾತ್ ಇತಿ' ಹಾಗಾದರೆ ಗೀತಾಭಾಷ್ಯ ಪ್ರಮೇಯದೀಪಿಕಾ ವಿರೋಧ ಬರುವದಲ್ಲ ಎನ್ನುವಂತಿಲ್ಲ. ಅಲ್ಲಿ 'ಗಂಧಾನ್' ಎಂದು ಬಹುವಚನ ಸ್ವಾರಸ್ಯದಿಂದ ಹಾಗೆ ವ್ಯಾಖ್ಯಾನ ಮಾಡುವದು ನ್ಯಾಯವೇ. ನಾವೇನು ದ್ರವ್ಯಗಮನವಿಲ್ಲವೆಂದೇನು ಹೇಳುವದಿಲ್ಲ. ಕಿಂತು ಗುಣಗಮನವು ಸಂಭವಿಸುವದೆಂದು ಹೇಳುವೆವು. ಉದಾಹರಿಸಿದ ಟಿಪ್ಪಣಿವಿರೋಧಗಳಿಗೆಲ್ಲ ಉತ್ತರಕೊಟ್ಟಾಗಿದೆ. ಗುಣಗಳಿಗೆ ಅನಂಶತ್ವವನ್ನು ಪರರ ರೀತಿಯಿಂದ ಟಿಪ್ಪಣಿಯು ಹೇಳುತ್ತದೆ ಎನ್ನಲು ಬರುವದು. ಹೀಗೆ ಮಾಡಿದರೆ ಚಂದ್ರಿಕೆಯ ವಿರೋಧವೂ ಬರುವದಿಲ್ಲ ಎಂದು ತಿಳಿಯಬೇಕು.

'ಯಥಾ ಪುಷ್ಪಗಂಧಸ್ಯ ನ್ವಾಂಶ್ಯರ್ವಿಭಾಗಃ ತಥಾ' ಎಂದು ಹೇಳುವ ತಂತ್ರದೀಪಿಕೆಯೂ ಇದೇ ಅರ್ಥಕ್ಕೆ ಸಮ್ಮತಿ ಸೂಚಿಸಿದೆ ಎಂದು ತಿಳಿಯಬೇಕು. ಇಲ್ಲಿ ಗಂಧಃ ಎಂಬ ಏಕವಚನವು. ಅಭಿನವಚಂದ್ರಿಕೆಯು ''ಯದ್ಯಪಿ ಗಂಧೋ ಗುಣಃ ನಾಂಶಃ ತಥಾಪಿ ಗುಣೋ ಅಪಿ ಯದಾ ವ್ಯತಿರಿಚ್ಚತೇ ಕಿಮು ತದಾ ಅಂಶಸ್ಯ ಅಂಶಿವ್ಯತಿರೇಕೇ ವಕ್ತವ್ಯಂ ಇತಿ ಭಾವೇನ ಗುಣೋ ದೃಷ್ಟಾಂತತ್ವೇನ ಉಪಾತ್ತ ಇತಿ ಪ್ರವೃತ್ತಾ ಗುಣಾಗಮನಂ ಅನುಗುಣಂ ಆವೇದಯತಿ ।'' ''ಗುಣಾದ್ವಾ ಆಲೋಕವತ್'' ಎಂಬುದಕ್ಕೆ ಲೋಕದಲ್ಲಿ ಗುಣದಲ್ಲಿ ದ್ರವ್ಯವನ್ನು ಆಶ್ರಯಿಸಿ ಗಮನವು ಕಂಡಿದೆ ಆದ್ದರಿಂದ ಅದರಲ್ಲಿ ಮಾತ್ರವಿಶೇಷಕಲ್ಪಕವಿಲ್ಲ. ಗೀತಾಭಾಷ್ಯತಾಮ್ರಪರ್ಣೀಯದಲ್ಲಿ 'ನನು ವ್ಯತಿರೇಕೋ ಗಂಧವತ್' ಎಂಬಲ್ಲಿ ಗಂಧಗುಣಕ್ಕೆ ಗುಣಿಯನ್ನು ಬಿಟ್ಟು ಗಮನ ಹೇಳಿದೆ. ಇಲ್ಲಿಯೂ ಹಾಗೆ ಅರ್ಥಮಾಡಲು ಬರುವಾಗ ಭಾಷ್ಯದಲ್ಲಿ ಲಕ್ಷಣಯಾ ಸೂಕ್ಷ್ಮಗಳನ್ನು ತೆಗೆದುಕೊಳ್ಳುವದು ಯುಕ್ತವಲ್ಲ ಎಂದರೆ ಹಾಗಲ್ಲ. ಇಲ್ಲಿ ಗಂಧದಂತೆ ಪುಷ್ಪಾವಯವಗಮನವನ್ನು ಹೇಳಿದ್ದರೂ ಗಂಧಮಾತ್ರಕ್ಕೆ ಗಮನವನ್ನು ನಿಷೇಧಿಸಿಲ್ಲ.

ಇಂದ್ರಿಯಸೂಕ್ಷ್ಮಗಳಿಗೆ ಗಮನವಿಷಯದಲ್ಲಿ ದ್ರವ್ಯಸೂಕ್ಷ್ಮಗಮನದ ದೃಷ್ಟಾಂತತ್ವವು ಸುಸಂಬದ್ಧವಾಗುವದು ಎಂಬ ಅಭಿಪ್ರಾಯದಿಂದ ಸೂಕ್ಷ್ಮವನ್ನು ತೆಗೆದುಕೊಂಡದ್ದು ಹೊರತು ಮುಖ್ಯಾನುಪಪತ್ತಿಯಿಂದಲ್ಲ. ಮತ್ತು ದೀಪಪ್ರಭಾಕ್ಕೆ ದ್ರವತಾ ನಿರಾಸಮಾಡುವ ಪ್ರಸಂಗದಲ್ಲಿ 'ತಸ್ಯ ದ್ರವ್ಯತ್ವಸಾಧಕತ್ವೇ ವಿವಾದಾತ್' ಎಂಬ ಟೀಕಾ, ಹಾಗೆಯೇ ಉತ್ತರಾಧಿಕರಣದಲ್ಲಿ ಗುಣವಾಗಿದ್ದರೂ ಗಂಧಕ್ಕೆ ದ್ರವ್ಯವನ್ನು ಬಿಟ್ಟು ಇರುವಿಕೆಯನ್ನು ಹೇಳುವದರಿಂದ ಎಂದು ಭಾವ ಎಂದು ಹೇಳುವ ಅಂತ್ಯಾಧಿಕರಣದ ಚಂದ್ರಿಕೆಯೂ ಗುಣಗಮನವನ್ನೇ ಸ್ಪಷ್ಟಪಡಿಸುವವು. ಗೀತಾಭಾಷ್ಯ ಭಾವಬೋಧದಲ್ಲಿ 'ತಸ್ಯ ದ್ರವ್ಯತ್ವಸಾಧಕತ್ವೇ ವಿವಾದಾತ್'ಎಂದು ಹೇಳುವ ಟೀಕಾಕಾರದಿಂದ ಉತ್ತರಾಧಿಕರಣದಲ್ಲಿ ಗುಣಸ್ಯಾಪಿ ಗಂಧಸ್ಯ ದ್ರವ್ಯಂ ವಿಹಾಯ ವೃತ್ತೇರ್ವಕ್ಷ್ಯಮಾಣತ್ವಾತ್'। ಮುಂತಾಗಿ ಪುನಃ ಪ್ರವೇಶಕಲ್ಪನೇ ಪ್ರಮಾಣಾಭಾವಾತ್ । ಎಂದು ಹೇಳುವ ಟೀಕಾಕಾರರಿಂದಲೂ ಗುಣಕ್ಕೆ ಗಮನವು ಅಂಗೀಕೃತ. ಆದ್ದರಿಂದ ತದ್ವಿರುದ್ಧವಾಗಿ ಅವಯವಗಮನವನ್ನು ಹೇಗೆ ಅಂಗೀಕರಿಸುವದು ಎಂದು ಶಂಕಿಸಿ ಸ್ಥೂಲಾವಯವ (ಗಮನ) ಅಂಗೀಕಾರ ದೂಷಿಸಲ್ಪಟ್ಟಿದೆ ಅತಿಪರಮಸೂಕ್ಷ್ಮಅವಯವಾಗಮನವನ್ನು ಅಂಗೀಕರಿಸಿ ಈಗ ಹೇಳುತ್ತದೆಂದು ಹೇಳಿದ್ದರಿಂದ ಇದನ್ನು ಹೇಗೆ ಉದಾಹರಿಸಿದಿರಿ ಎನ್ನಬಾರದು. ಉತ್ತರ ಕೊಟ್ಟಾಗಿದೆ. ಕಿಂ ಚ ಆಹುಃ ಎಂದು ಹೇಳಿದ್ದರ ಅಸ್ವಾರಸ್ಯ ಸೂಚಿತವಾಗಿದೆ. 'ತದ್ದ್ರವ್ಯತ್ವೇ ತ್ವವಿವಾದಂ'। ಪರಭಾಷ್ಯದಲ್ಲಿ ಹೇಗೆ ಗುಣವಾದ ಗಂಧವು ಗಂಧವುಳ್ಳ ದ್ರವ್ಯವಿಲ್ಲದೆ ಇರುವದು ಸಾಧ್ಯವೋ (ಗಂಧವುಳ್ಳ ಹೂಗಳು ಬರದಿದ್ದರೂ ಹೂವಿನ ಗಂಧ ತಿಳಿಯುವದು) ಹಾಗೆ ಅಣುವಾಗಿರುವ ಜೀವನ ಚೈತನ್ಯಗುಣದ ವ್ಯತಿರೇಕವು ಆಗುವದು ಆದ್ದರಿಂದ ಗುಣವಾದುದರಿಂದ ಆಶ್ರಯವಿಶ್ಲೇಷಾನುಪಪತ್ತಿಯೂ ಅನೈಕಾಂತಿಕವು. ಗುಣವಾದ ಗಂಧಕ್ಕೆ ಆಶ್ರಯವಿಶ್ಲೇಷ ಕಂಡಿದೆ. ಗಂಧಕ್ಕೂ ಆಶ್ರಯದ ಜೊತೆಗೇನೆ ವಿಶ್ಲೇಷ ಎಂದರೆ ಅಲ್ಲಿ ಯಾವ ಮೂಲದ್ರವ್ಯದಿಂದ ವಿಶ್ಲೇಷವಾಗುವದೋ ಆ ದ್ರವ್ಯನಾಶವಾಗಬೇಕಾಗುವದು. ಮೊದಲಿಗಿಂತ ಕ್ಷಯವಾಗದಿರುವದೆ ತಿಳಿದುಬರುವದು. ಇಲ್ಲವಾದರೆ ಮೊದಲಿರುವ ಗುರುತ್ವಾದಿಗಳು ಹೋಗಬೇಕಾಗುವದು.

ಗಂಧಾಶ್ರಯಗಳು ಬೇರೆಯಾಗಿ ಹೋದವುಗಳು ಅಲ್ಪವಾದುದರಿಂದ ಕಂಡು ಬರುವದಿಲ್ಲ. ಸೂಕ್ಷ್ಮವಾಗಿರುವ ಗಂಧಪರಮಾಣುಗಳು ಎಲ್ಲ ಕಡೆಗೆ ಪಸರಿಸಿ ಗಂಧಬುದ್ಧಿಯನ್ನು ಹುಟ್ಟಿಸುವವು. ಮೂಗಿನಲ್ಲಿ ಪ್ರವೇಶಿಸುವದಿಲ್ಲ ಎಂದರೆ ಸರಿಯಲ್ಲ. ಪರಮಾಣುಗಳು ಅತೀಂದ್ರಿಯವಾಗಿವೆ. ಗಂಧವು ಸ್ಪಷ್ಟವಾಗಿ ತಿಳಿಯುವದು. ನಾಗಕೇಶರ ಮುಂತಾದವುಗಳಲ್ಲಿ ಜಗತ್ತಿನಲ್ಲಿ ಗಂಧವುಳ್ಳ ದ್ರವ್ಯವನ್ನು

ಆಘ್ರಾಣಿಸಿದೆ ಎಂಬ ಪ್ರತೀತಿ ಇಲ್ಲ ಗಂಧವನ್ನು ಆಘ್ರಾಣಿಸಿದೆ ಎಂದು ಲೌಕಿಕರು ತಿಳಿಯುತ್ತಾರೆ. ರೂಪದ್ರವ್ಯಗಳಲ್ಲಿ ಆಶ್ರಯಬಿಟ್ಟುಹೋಗುವಿಕೆ ಕಂಡಿಲ್ಲ ಗಂಧಕ್ಕೂ ಸರಿಯಲ್ಲ. ಆಶ್ರಯಬಿಡುವದು ಎಂಬುದು ಸರಿಯಲ್ಲ. ಇದು ಪ್ರತ್ಯಕ್ಷವಾದ್ದರಿಂದ ಅನುಮಾನ ಪ್ರವರ್ತಿಸಲಾರದು. ಲೋಕದಲ್ಲಿ ಹೇಗೆ ಕಂಡಿದೆ ಹಾಗೆ ಅನುಸರಿಸಬೇಕು ನಿರೂಪಣೆ ಮಾಡುವವರು ಬೇರೆ ರೀತಿಯಲ್ಲು ರಸವೆಂಬ ಗುಣ ನಾಲಿಗೆಗೆ ತಿಳಿಯುವದು ಅಂದಮಾತ್ರಕ್ಕೆ ರೂಪಾದಿಗುಣಗಳು ನಾಲಿಗೆಗೆ ತಿಳಿಯಲಿ ಎನ್ನಲಾಗುವದಿಲ್ಲ. ಆದ್ದರಿಂದ ಗುಣಕ್ಕೆ ಗಮನವು ದ್ರವ್ಯಾಂಶವಲ್ಲದಿದ್ದರೂ ಸಾಂಶವಾದುದರಿಂದ ಉಪಪನ್ನವಾಗುವದು ಎರಡೂ ರೀತಿ ವಾಕ್ಯಗಳಿರುವದರಿಂದ ಎರಡೂ ಸರಳವಾದ ಪಕ್ಷಗಳೇ ಗಂಧಃ ಸುರಭಿಃ ಅಸುರಭಿಃ ಮಿಶ್ರಃ ಎಂಬ ಗಂಧಾಃ ತೈಃ ಎಂದು ಬಹುವಚನೋಪಪತ್ತಿ ಆ ಪಕ್ಷದಲ್ಲಿ ತಿಳಿಯಬೇಕು. ।।೨೬।।)

ಜೀವೇಶ್ವರಾಭೇದವನ್ನು ತಿಳಿದರೆ ಭಾಧಕವನ್ನು ಹೇಳುವರು

**ಏತದ್ವಾರೋ ಹಿ ಸಂಸಾರೋ ಗುಣಕರ್ಮನಿಬಂಧನಃ ।**
**ಅಜ್ಞಾನಮೂಲೋಽಪಾರ್ಥೋಽಪಿ ಪುಂಸಃ ಸ್ವಪ್ನ ಇವಾಪ್ಯತೇ ।।೨೭।।**

**ಹಿ** ಯಾವ ಕಾರಣ **ಪುಂಸಃ** ಜೀವನಿಗೆ **ಸಂಸಾರಃ** ಜನ್ಮಮರಣರೂಪವಾದ ಸಂಸಾರಬಂಧವು **ಗುಣಕರ್ಮನಿಬಂಧನಃ** ಸತ್ವಮೊದಲಾದ ಗುಣಗಳು ತನ್ನಿಮಿತ್ತಕ ಸಾತ್ವಿಕಾದಿ ಕರ್ಮಗಳೇ ನಿಮಿತ್ತವಾಗಿವುಳ್ಳದ್ದೋ ಆ ಕಾರಣ **ಏತದ್ವಾರಃ** ಈ ಜೀವೇಶ್ವರ ಅಭೇದ ಜ್ಞಾನವೇ ಮೂಲಕಾರಣವಾಗಿರುವ **ಅಪಾರ್ಥಃ ಅಪಿ** ಪುರುಷಾರ್ಥವಿಲ್ಲದ ದುಃಖರೂಪವಾದ ಸಂಸಾರವು **ಸ್ವಪ್ನೇ ಇವ** ಕನಸಿನಲ್ಲಿ ವಾಸನಾಮಯವಾದ ಆನೆ ಕುದುರೆ ಮೊದಲಾದವುಗಳು ಅವರ್ಜನೀಯವಾಗಿ ಅನುಭವಕ್ಕೆ ಬರುವಂತೆ ಜಾಗ್ರದವಸ್ಥೆಯಲ್ಲಿ ನಾನೇ ರಾಜಾ ಎನ್ನುವವನು ದುಃಖಕ್ಕೀಡಾಗುವಂತೆ ನಿಯಾಮಕನಾದ ಶ್ರೀಹರಿಯಿಂದ ಜೀವನಿಗೆ **ಆಪ್ಯತೇ** ಬಂದು ಒದಗುವದು. **ಹಿ** ಯಾವ ಕಾರಣ **ಪುಂಸಃ** ತಮೋಯೋಗ್ಯಜೀವನಿಗೆ **ಸಂಸಾರಃ** ಅಂಧಂತಮಸ್ಸು **ಗುಣಕರ್ಮನಿಬಂಧನಃ** ತಮೋಗುಣ ತಾಮಸಕರ್ಮನಿಮಿತ್ತಕವೋ ಆ ಕಾರಣ **ಏತದ್ವಾರಃ** ಈ ಜೀವೇಶ್ವರಾಭೇದನಿಶ್ಚಯಮೂಲಕವಾದುದು **ಅಜ್ಞಾನಮೂಲಃ** ವಿಪರೀತಜ್ಞಾನಮೂಲಕವಾದದ್ದು **ಅಪಾರ್ಥಃ** ಅಲ್ಲಿಂದ ನಿವೃತ್ತಿಯೇ ಇಲ್ಲದ ನಿತ್ಯವಾದ **ಅಪಿ** ದುಃಖಭೂಯಿಷ್ಠವಾದ ಅಂಧಂತಮಸ್ಸು, **ಸ್ವಪ್ನಃ ಇವ** ಜಾಗ್ರದವಸ್ಥೆಯಲ್ಲಿ ನೋಡಿದ ಅಥವಾ ಕೇಳಿದ ಪದಾರ್ಥಗಳ ಸಂಸ್ಕಾರದಿಂದ ಉಂಟಾದ ಸ್ವಪ್ನದಲ್ಲಿ ತನ್ನ ತಲೆಯನ್ನು ತಾನೇ ಕಡಿದುಕೊಂಡು ದುಃಖಕ್ಕೆ ಕಾರಣವಾಗುವಂತೆ ಜಾಗ್ರದವಸ್ಥೆಯೂ ಕೂಡ ನಾನೇ ರಾಜನೆಂದು ಹೇಳುವವನಿಗೆ

ಅನರ್ಥಪರಂಪರೆಗೆ ಕಾರಣವಾಗುವಂತೆ ಜೀವನ ದುಷ್ಕರ್ಮಗಳಿಂದ **ಆಪ್ಯತೇ** ಬಂಧ ಬರುವದು.

(ಈ ಶ್ಲೋಕದಲ್ಲಿ ಸಂಸಾರವು ಅವಿದ್ಯೋಪಾದಾನಕವಾದ್ದರಿಂದ ಅಪಾರ್ಥ ಎಂದರೆ ಮಿಥ್ಯಾ ಅನಿರ್ವಚನೀಯ ಎಂಬ ವಿಪರೀತ ಅರ್ಥವಾಗದಿರಲು ಏತದ್ವಾರಂ ಸ್ವಪ್ನ ಇವ ಎಂಬುದನ್ನು ವ್ಯಾಖ್ಯಾನಿಸಿಲ್ಲ. ಪುಂಸಃ ಎಂಬ ಪದದಿಂದ ಹೇಳಲ್ಪಟ್ಟ ಬುದ್ಧಿ (ಜೀವ) ಸನ್ನಿಧಿಯಿಂದ ಹಿಂದೆ 'ಬುದ್ಧಿಭೇದ್ಯೈಃ' ಎಂಬುದನ್ನು ಅಲ್ಲಿ ವ್ಯಾಖ್ಯಾನಿಸಿರುವದರಿಂದ ಸ್ವಲ್ಪ ಸ್ವಯಂ ಅನುವಾದ ಮಾಡಿ ಪ್ರಮಾಣ ಉದಾಹರಿಸಿ ಅನ್ಯಥಾ ಪ್ರತೀತಿಯನ್ನು ನಿವಾರಿಸುವರು.)

**... ತಾತ್ಪರ್ಯ ...**

**ಅದೃಷ್ಟೇರ್ಜೀವಪರಯೋರ್ಭೇದಸ್ಯಾಪ್ನೋತಿ ಸಂಸೃತಿಮ್ ।**
**ಅಭೇದನಿಶ್ಚಯಾದ್ಯಾತಿ ತಮೋ ನಾಸ್ತ್ಯತ್ರ ಸಂಶಯಃ ॥ ಇತಿ ಚ ॥**

**ಬುದ್ಧಿಭೇದ್ಯೈಃ ಜೀವಾನಾಂ ತಾರತಮ್ಯಜ್ಞಾಪಕೈಃ ।**
**ದುಃಖರೂಪೋ ಅಪಿ ಸಂಸಾರೋ ಬುದ್ಧಿಪೂರ್ವಮವಾಪ್ಯತೇ ॥**

**ಯಥಾ ಸ್ವಪ್ನೇ ಶಿರಚ್ಛೇದಂ ಸ್ವಯಂ ಕೃತ್ವಾಽತ್ಮನೋಽವಶಃ ।**
**ತತೋ ದುಃಖಮವಾಪ್ನೋತ ತಥಾ ಜಾಗರಿತೇಽಪಿ ತು ॥**
**ಜಾನನ್ನಪ್ಯಾತ್ಮನೋ ದುಃಖಮವಶಸ್ತು ಪ್ರವರ್ತತೇ ॥ ಇತಿ ಚ ॥**

ಜೀವಪರಮಾತ್ಮರಿಗೆ ಇರುವ ತಾತ್ವಿಕವಾದ ವೈಲಕ್ಷಣ್ಯವನ್ನು ಜೀವನು ತಿಳಿಯದಿರುವದರಿಂದ ಸಂಸಾರವನ್ನು, ಜೀವಪರಮಾತ್ಮರಿಗೆ ಅಭೇದನಿಶ್ಚಯದಿಂದ ತಮಸ್ಸನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ. (ಇಷ್ಟರ ವರೆಗೆ ೨೫ನೇ ಶ್ಲೋಕದಲ್ಲಿ ಬಂದಿದೆ ಸತ್ಯಧರ್ಮರ ಪ್ರಕಾರ ಇಲ್ಲ)

೨೬ನೇಶ್ಲೋಕದಲ್ಲಿ ಬುದ್ಧಿಭೇದ್ಯೈಃ ಎಂಬುದಕ್ಕೆ ಬುದ್ಧೀನಾಂ ಜೀವ ಭೇದಯಂತೀತಿ ಭೇದಾಃ ತರತಮಜ್ಞಾಪಕವಿರುದ್ಧಧರ್ಮಗಳಿಂದ ಎಂದರ್ಥ. ಕೆಲವರು ಈ ವಾಕ್ಯವನ್ನು ಹಿಂದಿನ ತಾತ್ಪರ್ಯದಲ್ಲಿ ಸೇರಿದ್ದೆನ್ನುವರು.

ದುಃಖವನ್ನು ಉಣಿಸುವ(ದುಃಖಂ ರೂಪಯತೀತಿ)ಅಥವಾ ದುಃಖಬಹುಲವಾದ್ದರಿಂದ ದುಃಖರೂಪವೆನಿಸುವ ಸಂಸಾರವು ಭೇದಪ್ರತಿಬಂಧಕಬುದ್ಧಿಯಿಂದ ಹೊಂದಲ್ಪಡುವದು. ಜೀವನಿಂದ ಹೇಗೆ ಸ್ವಪ್ನದಲ್ಲಿ ತನ್ನ ತಲೆಯನ್ನು ತಾನೆ ಕತ್ತರಿಸಿಕೊಂಡು ದುಃಖವನ್ನು ಅವಶಃ ವಿಷ್ಣುವಿನ ಅಧೀನನಾಗಿ ಹೊಂದುತ್ತಾನೋ ಅವನಾದರೂ ಹೀಗೇಕೆ ಮಾಡುವನೆಂದರೆ ಉತ್ತರ ಅವಶಃ. ಮತ್ತೊಬ್ಬರ ಅಧೀನನಲ್ಲ

ಸ್ವತಂತ್ರನು. ಅಂದರೆ ಜೀವನ ಕರ್ಮಾನುಸಾರ ಶ್ರೀಹರಿ ಆ ರೀತಿ ತೋರಿಸುವನು. ಕತ್ತರಿಸಿದ ತಲೆ ನೋಡಿ (ತತಃ) ದುಃಖಹೊಂದುವನು. ಅದರಂತೆ ಎಚ್ಚರ ವಿರುವಾಗಲೂ ಭೇದಾಜ್ಞಾನದಿಂದ ಅಂದರೆ ನಾನೇ ರಾಜಾ ಎಂದು ತಿಳಿದು ದುಃಖಪಡುವಂತೆ ಜೀವನಿಗೆ ದೇವದೇವನಾದ ಶ್ರೀಹರಿಯಿಂದ ಅಭೇದ ತಿಳಿದು ದುಃಖ ಹೊಂದುವನು. ತು ಶಬ್ದದಿಂದ ಕರ್ತೃತ್ವಾಭಿಮಾನವಿರುವದರಿಂದ ಸ್ವಪ್ನಕ್ಕಿಂತ ವ್ಯತ್ಯಾಸ ಜಾಗರಕ್ಕೆ ತಿಳಿಸಿರುವರು. ಎರಡನೇ 'ತು' ಶಬ್ದ ಅವರವರ ಯೋಗ್ಯತಾನುಸಾರ ಎಂಬ ವಿಶೇಷ ತಿಳಿಸುವದು. ಸ್ವಪ್ನೇ ಇವ ಭಗವಂತನು ಇದ್ದಾಗಲೇ ಎಂದರ್ಥ. ಮೂಲಾರ್ಥ ಹೇಳುವಾಗ ಮಾಡಿರುವರು. ಸ್ವಪ್ನ ಪದಕ್ಕೆ ಭಗವದ್ವಾಚಕತ್ವವನ್ನು ಆರನೇ ಸ್ಕಂಧದಲ್ಲಿ ಬೃಹದಾರಣ್ಯಕಭಾಷ್ಯ ಉದಾಹರಿಸಿ ತಿಳಿಸಿರುವರು. 'ಸೋऽಯಮಾತ್ಮಾ ಚತುಷ್ಪಾತ್ ಜಾಗರಿತಸ್ಥಾನಃ' ಮುಂತಾದ ಮಾಂಡೂಕೋಪನಿಷತ್ ಭಾಷ್ಯದಲ್ಲಿ 'ಚತುರ್ಧಾ ಅವಸ್ಥಿತೋ ದೇಹೇ ಪರಮಾತ್ಮಾ ಸನಾತನಃ । ವೈಶ್ವಾನರೋ ಜಾಗರಿತಸ್ಥಾನಗೋ ಗಜವಕ್ತ್ರಕಃ' ಮುಂತಾಗಿ ಹೇಳಿದ ಸ್ವಪ್ನಾದಿನಿಯಾಮಕ ರೂಪವಿಶೇಷವೆಂದು ತಿಳಿಯಬೇಕು. ।।೨೭।।

ಅರ್ಥಕ್ರಿಯಾಕಾರಿ ಆದ್ದರಿಂದ ಸ್ವಾಪ್ನಪದಾರ್ಥಗಳು ಸುಳ್ಳಲ್ಲವೆಂದು ಹೇಳುತ್ತಾರೆ.

**ಮನೋಮಯತ್ವಾತ್ ಸರ್ವಾರ್ಥಾಃ ಸ್ವಪ್ನಜಾಗರಯೋಃ ಸಮಾಃ ।**
**ದೃಷ್ಟಾನರ್ಥಾನಪಿ ಧ್ಯಾತುಃ ಶೋಕಮೋಹಭಯಪ್ರದಾಃ ।।೨೮।।**

**ಮನೋಮಯತ್ವಾತ್** ಭಗವಂತನಿಂದ ಮಾನಸಿಕ ಸಂಸ್ಕಾರಗಳನ್ನು ಉಪಾದಾನ-ಕಾರಣ ಮಾಡಿಕೊಂಡು ಸೃಷ್ಟವಾದುದರಿಂದ ಮನಸ್ಸಿನಿಂದ ಮಾಡಿದ ಕರ್ಮನಿಮಿತ್ತಕವಾಗಿ ಪ್ರಕೃತ್ಯುಪಾದಾನಕವಾಗಿ ಭಗವಂತನಿಂದ ಸೃಷ್ಟವಾದ್ದರಿಂದ **ಸರ್ವಾರ್ಥಾಃ** ತಾದಾತ್ಮ್ಯವನ್ನು ಬಿಟ್ಟು ಎಲ್ಲ ಪದಾರ್ಥಗಳೂ **ಸ್ವಪ್ನ ಜಾಗರಯೋಃ** ಸ್ವಪ್ನಾವಸ್ಥೆಯಲ್ಲಿ ಮತ್ತು ಜಾಗ್ರದವಸ್ಥೆಯಲ್ಲಿ **ಸಮಾಃ** ಸಮಾನವಾದವು ಏಕವಿಧವಾದವು ಸತ್ಯ ಮತ್ತು ಅನಿತ್ಯಗಳೆಂದರ್ಥ. ಸತ್ಯವೆಂದು ತಿಳಿಸಲು ಅರ್ಥಕ್ರಿಯಾಕಾರಿತ್ವವನ್ನು ಹೇಳುತ್ತಾರೆ. **ದೃಷ್ಟಾನ್ ಅರ್ಥಾನ್ ಅಪಿ** ಈ ದುರ್ವಿಷಯಗಳಿಂದ ಅನರ್ಥವಾಗುವದೆಂದು ಅನುಭವಿಸಿದ್ದಾಗಿದ್ದರೂ ಅವುಗಳನ್ನೇ ಮತ್ತೆ ಮತ್ತೆ **ಧ್ಯಾತುಃ** ಆಲೋಚಿಸುವ ಜೀವನಿಗೆ **ಶೋಕಮೋಹಭಯಪ್ರದಾಃ** ಶೋಕಮೋಹಭಯಗಳನ್ನುಂಟು ಮಾಡುವವು.

ಹೀಗೆ ಹೇಳಿದ್ದರಿಂದ ಸಾಮ್ಯವು ಸತ್ಯತ್ವ ಅನಿತ್ಯತ್ವಗಳಲ್ಲಿಯೇ ಹೊರತು ಮಿಥ್ಯಾತ್ವದಲ್ಲಿ ಅಲ್ಲವೆಂದು ತಿಳಿಸಿರುವರು. ಇಲ್ಲದಿದ್ದರೆ 'ಶೋಕಮೋಹ-

ಭಯಪ್ರದಾಃ' ಎಂದು ಹೇಳಿದ್ದು ಅಸಂಗತವಾಗುವದು. ಮಿಥ್ಯಾಪದಾರ್ಥಗಳು ಅರ್ಥಕ್ರಿಯಾಕಾರಿಗಳಲ್ಲ. ಸ್ವಪ್ನಸತ್ಯತೆ ಸಾಧಿಸಬೇಕಿಲ್ಲ ಸಿದ್ಧವೆಂದು ತಿಳಿಸಲು ಜಾಗರಸಮಾನವಾಗಿಯೂ ಅದರಲ್ಲಿಯೂ ಮೊದಲು ಸ್ವಪ್ನವನ್ನು ಹೇಳಿರುವರು. 'ದೃಷ್ಟಾನರ್ಥಾನ್' ಎಂಬುದು ಒಂದೇ ಪದ ಮಾಡಿದ್ದರಿಂದ ಅರ್ಥಪದ ಹೆಚ್ಚು ಎಂಬ ಶಂಕೆ. ತಾನ್ ಎಂದರೆ ಸಾಕಾಗುತ್ತಿತ್ತು. ಆದ್ದರಿಂದ ಅವಶಃ ಎಂಬ ತಾತ್ಪರ್ಯವು ನಿರ್ಮೂಲ ಎಂಬ ಶಂಕೆಯೂ ಏಕಕಾಲದಲ್ಲಿ ನಿರಾಕೃತವಾದವು ಎಂದು ತಿಳಿಯಬೇಕು. 'ಸ್ವಪ್ನಮಾಯಾಸ್ವರೂಪಾ' ಮುಂತಾದ ಬಹುವಾಕ್ಯಗಳು ಅಸ್ಥಿರತ್ವಾಭಿಪ್ರಾಯಕಗಳು. 'ಅನಿತ್ಯತ್ವವಿಕಾರಿತ್ವಪಾರತಂತ್ರ್ಯಾದಿ ರೂಪತಃ । ಸ್ವಪ್ನಾದಿಸಾಮ್ಯಂ ಜಗತೋ ನ ತು ಭೇದನಿವರ್ತ್ಯತಾ'।। ಎಂದಿದೆ.

'ಪರಸ್ಯ ನಿರ್ಗುಣಸ್ಯಾಪಿ ಗುಣಸಂಗಾ ಜನಿರ್ಮೃತಿಃ ।
ವ್ಯಕ್ತಂ ಜನ್ಮಾಪ್ಯಯಪ್ರೋಕ್ತಂ ಶಯಾನಸ್ಯೇವ ನ ಸ್ವತಃ ।
ಹರಿಸಂಚಿಂತಯಾ ಸರ್ವೇ ಪ್ರಯಾಂತಿ ಪರಮಂ ಪದಮ್'।।

**ಶಯಾನಸ್ಯ** ಮಲಗಿರುವವನಿಗೆ **ಗುಣಸಂಗಾ** ಸ್ವಪ್ನದಲ್ಲಿ ರಜೋಗುಣ ಸಂಬಂಧವಾದ **ಜನಿಃ** ಹುಟ್ಟು **ಮೃತಿ** ಸಾವು **ನ ಸ್ವತಃ** ಮಲಗಿರುವ ದೇಹದ ಸಂಯೋಗವಿಯೋಗಗಳಿಂದ ಅಲ್ಲ **ಇವ** ಅದರಂತೆ **ನಿರ್ಗುಣಸ್ಯ** ಪ್ರಾಕೃತಗುಣ-ರಹಿತನಾದ **ಪರಸ್ಯಾಪಿ** ದೇಹದಲ್ಲಿರುವ ಗುಣಪೂರ್ಣನಾದ ಜೀವಭಿನ್ನನಾದ ಶ್ರೀಹರಿಗೂ **ಜನಿಃ ಮೃತಿಃ** ಹುಟ್ಟಿದನು, ಸತ್ತನು ಎಂಬ ವ್ಯವಹಾರವು **ಗುಣಸಂಗಾ** ಗುಣಕಾರ್ಯವಾದ ಜೀವಕರ್ಮನಿಮಿತ್ತಕವಾದ ದೇಹದ ಸಂಬಂಧವು **ನ ಸ್ವತಃ** ತನ್ನ ಕರ್ಮದ ಫಲವಾದ ದೇಹಸಂಯೋಗವಿಯೋಗದ ಪ್ರಯುಕ್ತವಲ್ಲ. 'ಅಜಾಯಮಾನೋ ಬಹುಧಾ ವಿಜಾಯತೇ'। ಎಂದಿದೆ. **ಜನ್ಮಾಪ್ಯಯಪ್ರೋಕ್ತಂ** ಜನ್ಮಮರಣಶಬ್ದಗಳಿಂದ ಇದೇ ಮುಖ್ಯಾರ್ಥವಾಗಿ ಶ್ರೀಹರಿಯ ವಿಷಯದಲ್ಲಿ ಉಕ್ತವಾಗಿದೆ ಎಂದು **ವ್ಯಕ್ತಂ** ಶಾಸ್ತ್ರಗಳಲ್ಲಿ ಸ್ಪಷ್ಟವಾಗಿದೆ **ಹರಿಸಂಚಿಂತಯಾ** ಇಂತಹ ಹರಿಯನ್ನು ಭಕ್ತಿಯಿಂದ ಚಿಂತನೆಮಾಡುವದರಿಂದ **ಸರ್ವೇ** ಎಲ್ಲ ಅಧಿಕಾರಿಜೀವರು **ಪರಮಂ ಪದಂ** ಸರ್ವೋತ್ತಮವಾದ ಶ್ರೀಹರಿಯ ಸ್ಥಾನವನ್ನು **ಪ್ರಾಯಂತಿ** ಮತ್ತೆ ತಿರುಗಿ ಬರದಂತೆ ಹೊಂದುವರು.

ಈ ಮೇಲಿನ ಶ್ಲೋಕವು ಕೆಲವು ಪುಸ್ತಕಗಳಲ್ಲಿದೆ. ಇದು ಸ್ಪಷ್ಟವಾಗಿ ಪ್ರಕ್ಷಿಪ್ತ. ದುರ್ಗಮಾರ್ಥವಾಗಿದ್ದರೂ ವಿಜಯಧ್ವಜರಾಗಲಿ, ಸತ್ಯಧರ್ಮರಾಗಲಿ, ವ್ಯಾಸತತ್ವಜ್ಞರಾಗಲಿ ವ್ಯಾಖ್ಯಾನಮಾಡಿಲ್ಲ. ಆದರೂ ಮುದ್ರಿತಪುಸ್ತಕದಲ್ಲಿ (ವಾಲಿ) ಇರುವದರಿಂದ ವ್ಯಾಖ್ಯಾನಸಿದೆ. ವ್ಯಾಖ್ಯಾನಗಳಲ್ಲಿ 'ಮನೋಮಯತ್ವಾತ್'(೨೮)

'ತಸ್ಮಾತ್' (೨೯)ನೇಯದಾಗಿ ಕಂಡು ಬರುವವು. ಮಧ್ಯೇ ಈ ಶ್ಲೋಕವಿಲ್ಲ. ಬನ್ನಂಜೆ ಗೋವಿಂದಾಚಾರ್ಯರು 'ಮನೋಮಯತ್ವಾತ್' ಎಂಬುದು ಪ್ರಕ್ಷಿಪ್ತವೆನ್ನುತ್ತಾರೆ. ಆದರೆ ಮೂರು ಜನ ವ್ಯಾಖ್ಯಾನಿಸಿರುವದರಿಂದ ಪ್ರಕ್ಷಿಪ್ತವೆನ್ನಲಾಗದು. ।।೨೮।।

ಜೀವೇಶ್ವರಾಭೇದಜ್ಞಾನದಿಂದ ಸಂಸಾರಬರುವದೆಂದು ಬಾಧಕ ಹೇಳಿ ಭೇದಜ್ಞಾನದಿಂದ ಶ್ರೀಹರಿಯನ್ನು ಸೇವಿಸಿಬೇಕು ಎಂದು ವಿಪರ್ಯಯ ಪರ್ಯವಸಾನ ಹೇಳುವ ನೆಪದಿಂದ ಸಂಸಾರಬೀಜವನ್ನೇ ಶಕ್ತಿಗುಂದಿಸುವ ಉಪಾಯವನ್ನು ಹೇಳುವರು-

**ತಸ್ಮಾದ್ ಭವದ್ಭಿಃ ಕರ್ತವ್ಯಃ ಕರ್ಮಣಾಂ ತ್ರಿಗುಣಾತ್ಮನಾಮ್ ।**
**ಬೀಜನಿರ್ಹರಣೇ ಯೋಗಃ ಪ್ರವಾಹೋ ಪರಮೋ ಧಿಯಃ ।।೨೯।।**

**ತಸ್ಮಾತ್** ಗುಣಕರ್ಮಗಳಿಂದ ಬಂದ ಅಭೇದಜ್ಞಾನದಿಂದ ಜೀವರಿಗೆ ಸಂಸಾರವು ಬರುವದರಿಂದ **ತ್ರಿಗುಣಾತ್ಮನಾಂ** ಗುಣತ್ರಯಾತ್ಮಕಗಳಾದ **ಕರ್ಮಣಾಂ** ಕರ್ಮಗಳಿಗೆ **ಬೀಜನಿರ್ಹರಣೇ** ಸಂಸಾರಕಾರಣಶಕ್ತಿಯನ್ನು ಕಳೆಯುವ **ಯೋಗಃ** ಉಪಾಯವಾದ **ಧಿಯಃ** ಮನಸ್ಸಿನ **ಪ್ರವಾಹೋಪರಮಃ** ಸಜಾತೀಯ ವಿಜಾತೀಯ ಜ್ಞಾನಗಳು ಮಧ್ಯದಲ್ಲಿ ಬರದಂತೆ ವಿಷಯವನ್ನು ಸಂತತವಾಗಿ ತಿಳಿಯುವ ನಿಪುಣೋಪಾಸನೆಯೆಂಬ ಪ್ರವಾಹದ **ಉಪರಮಃ** ರುದ್ರನನ್ನು ಪಾಲಿಸುವ ಸರ್ವಾಧಿಕನಾದ ಪರಮೇಶ್ವರನಲ್ಲಿ ನಿರಂತರ ಅವನ ಪಾದಸ್ಮರಣೆಯ(ಸಂಚಿಂತನೆ)ರೂಪವಾದ ಉಪಾಸನೆಯಿಂದ ಸಂತೋಷಪಡುವಿಕೆಯು **ಭವದ್ಭಿಃ** ನಿಮ್ಮಿಂದ **ಕರ್ತವ್ಯಃ** ಮಾಡಲ್ಪಡತಕ್ಕದ್ದು.

ಮೇಲಿನ ಶ್ಲೋಕದಲ್ಲಿ 'ಧಿಯಃ ಪ್ರವಾಹೋ ಪರಮಃ'ಎಂಬುದರಿಂದ ಹರಿಸ್ಮರಣ ವಿಚ್ಛೇದಕತ್ವವು ಯೋಗಕ್ಕೆ ಹೇಳಿದಂತೆ ಕಾಣುವದು. ಅದನ್ನು ಆಚಾರ್ಯರು ಹೀಗೆ ಪರಿಹರಿಸುವರು.

**ತಾತ್ಪರ್ಯ :- ಧಿಯಃ ಪ್ರವಾಹಸ್ಯ ಉಪರಮಃ ಪರಮೇಶ್ವರೇ ರಮಣಮ್ ।**

ಬುದ್ಧಿಯ ಪ್ರವಾಹಕ್ಕೆ ಉಪರಮ ಎಂದರೆ ಸರ್ವದಾ ಶ್ರೀಹರಿಯಲ್ಲಿಯೇ ಬುದ್ಧಿಯನ್ನು ಇಡುವದು ಎಂದು ಭಾವ.

'ಧಿಯಃ ಪ್ರವಾಹೋ ಪರಮ'ಎಂದು ಅನುವಾದ ಮಾಡಿ 'ಪರಮೇಶ್ವರೇ ರಮಣಂ' ಎಂದು ವ್ಯಾಖ್ಯಾನಿಸಿರುವರು. 'ಉಕಾರಃ ಕ್ಷೇತ್ರಪೇ ಶಂಭೌ ಹರ ಮೌ ತಾಶ್ವ ಶುಚೌ ಹರೌ'ಎಂದು ಏಕಾಕ್ಷರ ರತ್ನಮಾಲಾ ಇರುವದರಿಂದ ಉ ಎಂದರೆ ಶಿವ ಅವನನ್ನು ಪಾಲಿಸುವದರಿಂದ ಉಪ ಎಂದರೆ ವಿಷ್ಣುವು ಆ ಪರಮೇಶ್ವರನಲ್ಲಿ ರಮಣವೆಂದರ್ಥ ಮಾಡಿರುವರು. ಇದರಿಂದ 'ಈಶ್ವರಾತ್ ಪರಮಃ ಪರಮೇಶ್ವರಃ'

ಎಂದು ತಾತ್ಪರ್ಯದಲ್ಲಿಯ ಪರಮೇಶ್ವರಪದದ ವಿಗ್ರಹವನ್ನು ತಿಳಿಸಿದಂತಾಯಿತು. ರುದ್ರದೇವರಿಗಿಂತ ಉತ್ತಮರಾದ ಬ್ರಹ್ಮದೇವರಿರುವಾಗ ಅವರನ್ನು ಬಿಟ್ಟು ಸತಿಪತಿಪಾಲಕ(ರುದ್ರಪಾಲಕ)ನೆಂದು ಶ್ರೀಹರಿಯನ್ನು ಹೇಳಿದ್ದೇಕೆ ಎಂಬ ಶಂಕೆಗೆ ಸಮಾಧಾನ 'ಧಿಯಃ'ಎಂದು ಮೂಲದಲ್ಲಿ ಹೇಳಿರುವದರಿಂದ ರುದ್ರದೇವರು 'ಧೀಃ ಭೀಃ ಸರ್ವಂ ಮನ ಏವ' ಎಂದಿರುವದರಿಂದ ಧೀನಿಯಾಮಕರಾದ್ದರಿಂದ ಅವರನ್ನು ಸ್ವೀಕರಿಸಿದ್ದು ಉಚಿತವೆಂದು ತಿಳಿಯಬೇಕು. 'ಉಪೋಧಿಕೇ ಚ' ಎಂದು ಸೂತ್ರಾತ್ ಎಂದು ತಾತ್ಪರ್ಯಾಂತರದಲ್ಲಿ ಹೇಳಿರುವದರಿಂದ ಸರ್ವಾಧಿಕನಲ್ಲಿ ರಮಣ ಎಂದಾದರೂ ಅರ್ಥ ಮಾಡಬಹುದು. ।।೨೯।।

ಮನಸ್ಸಿಗೆ ರಮಾರಮಣನಲ್ಲಿ ರಮಣವು ಯಾವ ಸಾಧನದಿಂದ ಆಗುವದು ಎಂದರೆ ಹೇಳುವರು.

**ತತ್ರೋಪಾಯಸಹಸ್ರಾಣಾಮಯಂ ಭಗವತೋದಿತಃ ।**
**ಯದೀಶ್ವರೇ ಭಗವತಿ ಭಕ್ತಿಸ್ಯಾನ್ನಾನ್ಯಥಾ ರತಿಃ ।।೩೦।।**

**ತತ್ರ** ಶ್ರೀಹರಿರಮಣವಿಷಯದಲ್ಲಿ ಇರುವ **ಉಪಾಯಸಹಸ್ರಾಣಾಂ ಮಧ್ಯೇ** ಸಾವಿರಾರು ಉಪಾಯಗಳಲ್ಲಿ **ಅಯಂ** ಈ ಭಕ್ತಿಯೋಗವು **ಭಗವತಾ** ನರಸಖನಾದ ನಾರಾಯಣನಿಂದ, ನಾರದರಿಂದ, ವೇದವ್ಯಾಸರಿಂದ **ಉದಿತಃ** ಹೇಳಲ್ಪಟ್ಟದ್ದು. (ಅವರ ಮಾತನ್ನೇ ಹೇಳುವರು) **ಭಗವತಿ** ಷಡ್ಗುಣೈಶ್ವರ್ಯಸಂಪನ್ನನಾದ **ಈಶ್ವರೇ** ಸರ್ವೋತ್ತಮನಿಯಾಮಕನಾದ ಶ್ರೀಹರಿಯಲ್ಲಿ **ಯದಿ** ಯಾವಾಗ **ನಾನ್ಯಥಾ ರತಿಃ** ಅನನ್ಯವಿಷಯಕವಾದ **ಭಕ್ತಿಃ** ಭಕ್ತಿಯು **ಸ್ಯಾತ್** ಉಂಟಾಗುವದೋ **ತದಾ** ಆಗ **ಮುಕ್ತಿಃ ಸ್ಯಾತ್** ಮೋಕ್ಷವಾಗುವದು.

ವಿಶೇಷ ಃ- ೧.'ಭಕ್ತಿಃ ಇತಿ ಯತ್' ಭಕ್ತಿ ಎಂಬುದೇನುಂಟೋ ತದೇವ ಮುಕ್ತಿಸಾಧನಂ ಅದೇ ಮುಕ್ತಿಗೆ ಸಾಧನವು ೨. 'ಯದಿ ಭಕ್ತಿಃ ಸ್ಯಾತ್'ಭಕ್ತಿ ಉಂಟಾದರೆ 'ರತಿಃ ಸ್ಯಾತ್' ಪರಮಾತ್ಮನಲ್ಲಿ ರಮಣ (ಆನಂದವು) ಆಗುವದು. ಅನ್ಯಥಾ ಭಕ್ತಿ ಹುಟ್ಟದಿದ್ದಲ್ಲಿ ರತಿಃ ಶ್ರೀಹರಿಯಲ್ಲಿ ಆನಂದವು (ಆಸಕ್ತಿಯು) ಸ್ವರೂಪಸುಖಾನುಭವವು (ಮೋಕ್ಷವು) ನ ಸ್ಯಾತ್ ಆಗುವದಿಲ್ಲ.

'ಭಗವತಾ' ಎಂದು ಹೇಳಿದ್ದರಿಂದ ವಿರಕ್ತನಾದ್ದರಿಂದ, ಸಮಗ್ರೈಶ್ವರ್ಯವುಳ್ಳ-ವನಾದ್ದರಿಂದ ವಂಚಿಸಲು ಪ್ರಯೋಜನವಿಲ್ಲ ಆಪ್ತಿಮೂಲವಾದ್ದರಿಂದ ಗ್ರಾಹ್ಯವೆಂದು ಹೇಳಿರುವರು. 'ಉಪಾಯಸಹಸ್ರಾಣಾಂ' ಎಂಬುದು ನಿರ್ಧಾರಣೇ ಷಷ್ಠೀ ಶೀಘ್ರಫಲೋಪಲಂಭಕವಾದ್ದರಿಂದ ಉಪಾಯದೊಳಗೆ ಸೇರಿಯೂ ಶ್ರೇಷ್ಠವಾದುದು ಎಂದು ಭಾವ. ।।೩೦।।

ಭಕ್ತಿಯು ಹುಟ್ಟುವ ರೀತಿಯನ್ನು ಭಕ್ತಿಲಕ್ಷಣವನ್ನು ಕೆಲವು ಶ್ಲೋಕಗಳಿಂದ ಹೇಳುವರು.

**ಗುರುಶುಶ್ರೂಷಯಾ ಭಕ್ತ್ಯಾ ಸರ್ವಲಾಭಾರ್ಪಣೇನ ಚ ।**
**ಸಂಗೇನ ಸಾಧುಭಕ್ತಾನಾಮೀಶ್ವರಾರಾಧನೇನ ಚ ॥೩೦॥**

**ಭಕ್ತ್ಯಾ ಗುರುಶುಶ್ರೂಷಯಾ** ಗುರುಗಳಲ್ಲಿ ತಾರತಮ್ಯಾನುಗುಣಭಕ್ತಿಯಿಂದ ಗುರುಗಳನ್ನು ಸೇವಿಸುವದರಿಂದ ೨.ಅಥವಾ ಗುರುಗಳಿಂದ ಶ್ರವಣಮಾಡಬೇಕೆಂಬ ಇಚ್ಛೆಯಿಂದ 'ಪ್ರಾರಂಭಮಾತ್ರಮಿಚ್ಛಾ ವಾ ವಿಷ್ಣುಧರ್ಮೇ ನ ನಿಷ್ಫಲಾ, ನಾನಾಗುರುಮುಖಾಂಭೋಜಾತ್' ಎಂದು ಇದೆ. 'ಶುಶ್ರೂಷಾ ಶ್ರವಣೇಚ್ಛಾಯಾಂ ಪರಿಚರ್ಯಾ ಕಥಾನಯೋಃ' ಎಂದು ವಿಶ್ವವಿದೆ. 'ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ'ಎಂದೂ ಇದೆ **ಚ** ಮತ್ತು **ಹರೌ** ಶ್ರೀಹರಿಯಲ್ಲಿ **ಸರ್ವಲಾಭಾರ್ಪಣೇನ** ಯಜ್ಞಾದಿಗಳಿಂದ ಬಂದ ಎಲ್ಲ ಪುಣ್ಯಸಮರ್ಪಣದಿಂದ ೨.ಅಥವಾ ತನ್ನಿಂದ ಏನೇನು ಹೊಂದಲ್ಪಟ್ಟಿದೆಯೋ ಅದರ ಕರ್ತೃತ್ವ ಸಮರ್ಪಣದಿಂದ ೩.ಅಥವಾ **ಸರ್ವೇಷಾಂ** ಎಲ್ಲ 'ಲಾಭಾನಾಂ ಲಭ್ಯಂತೇ ಇತಿ ಲಾಭಾಃ' ಅಂದರೆ ವಿತ್ತಾದಿಗಳನ್ನು ಏ ಭಗವಂತನಲ್ಲಿ ಅರ್ಪಣ ಮಾಡುವದರಿಂದ 'ಅಕಯಪ್ರವಿಸಂಭೂಮಸಖಹಾಃ ವಿಷ್ಣುವಾಚಕಾಃ' 'ಅಕಾರೋ ವಾಸುದೇವಃ ಸ್ಯಾತ್' । ಆ ವಿಷ್ಣಾವೇಷತ್ವೇನವ್ಯಯಃ ಎಂದು 'ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ'ಎಂದಿದೆ. ಅ ಅರ್ಪಣಂ ಎಂಬಲ್ಲಿ ಸವರ್ಣದೀರ್ಘವು ಸಾಧು. **ಭಕ್ತಾನಾಂ ಸಂಗೇನ** ನಿರ್ವ್ಯಾಜಭಕ್ತರಾದ ವೈಷ್ಣವರ ಸೇವಾರೂಪ ಪ್ರಸಂಗದಿಂದ **ಈಶ್ವರಾರಾಧನೇನ** ಪಂಚರಾತ್ರದಲ್ಲಿ ಹೇಳಿದ ಪಾಂಚಕಾಲಿಕ ರಮಾರಮಣ ಪೂಜೆಯಿಂದಲೂ ॥೩೦॥

**ಶ್ರದ್ಧಯಾ ತತ್ಕಥಾಯಾಂ ಚ ಕೀರ್ತನೈರ್ಗುಣಕರ್ಮಣಾಮ್ ।**
**ತತ್ಪಾದಾಂಬುರುಹಧ್ಯಾನಾತ್ ತಲ್ಲಿಂಗೇಕ್ಷಾರ್ಹಣಾದಿಭಿಃ ॥೩೧॥**

**ತತ್ಕಥಾಯಾಂ** ಕಥಾಶ್ರವಣದಲ್ಲಿ **ಶ್ರದ್ಧಯಾ** ಆಸ್ತಿಕ್ಯಬುದ್ಧಿಯಿಂದ **ಗುಣಕರ್ಮಣಾಂ** ಭಗವಂತನ ಗುಣಕರ್ಮಗಳ **ಕೀರ್ತನೈಃ** ಹರೇ,ರಾಮ,ಕೃಷ್ಣ ಎಂದು ಉಚ್ಚಾರಮಾಡುವದರಿಂದ **ತತ್ಪಾದಾಂಬುರುಹಧ್ಯಾನಾತ್** ಶ್ರೀಹರಿಯ ಪಾದಾರವಿಂದಧ್ಯಾನದಿಂದ **ತಲ್ಲಿಂಗೇಕ್ಷಾರ್ಹಣಾಧಿಭಿಃ** ಶ್ರೀಹರಿಯ ಚಲಾಚಲ ರೂಪಗಳೆನಿಸಿದ ಬ್ರಾಹ್ಮಣ-ಶಿಲಾಪ್ರತಿಮಾದಿಗಳನ್ನು ನೋಡುವದು (ಪರೋಕ್ಷವಾಗಿ ತಿಳಿಯುವದು) ಸತ್ಕರಿಸುವದು, ಪೂಜಿಸುವದು.

**ಹರಿಃ ಸರ್ವೇಷು ಭೂತೇಷು ಭಗವಾನಾಸ್ತ ಈಶ್ವರಃ ।**
**ಇತಿ ಭೂತಾನಿ ಮನಸಾ ಕಾಮೈಸ್ತೈಃ ಸಾಧು ಮಾನಯೇತ್ ॥೩೩॥**

**ಸರ್ವೇಷು ಭೂತೇಷು** ಎಲ್ಲ ಪ್ರಾಣಿಗಳಲ್ಲಿ **ಭಗವಾನ್** ಶ್ರೀಹರಿಯು **ಈಶ್ವರಃ ಸನ್** ನಿಯಾಮಕನಾಗಿ **ಆಸ್ತೇ** ಇದ್ದಾನೆ **ಇತಿ ಮನಸಾ ಏವ** ಎಂಬ ಅನುಸಂಧಾನದಿಂದಲೇ **ತೈಃ ಕಾಮೈಃ** ಅವರು ಅಪೇಕ್ಷಿಸಿದ ವಿಷಯಗಳಿಂದ **ಭೂತಾನಿ** ಪ್ರಾಣಿಗಳನ್ನು **ಸಾಧು** ಚೆನ್ನಾಗಿ **ಮಾನಯೇತ್** ಸತ್ಕರಿಸಬೇಕು. ॥೩೩॥

**ಏವಂ ನಿರ್ಜಿತಷಡ್ವರ್ಗೈಃ ಕ್ರಿಯತೇ ಭಕ್ತಿರೀಶ್ವರೇ ।**
**ವಾಸುದೇವೇ ಭಗವತಿ ಯಯಾ ಸಂಲಭತೇ ರತಿಮ್ ॥೩೪॥**

**ಏವಂ** ಮೇಲೆ ಹೇಳಿದಂತೆ ಸಾಧನಾನುಷ್ಠಾನದಿಂದ **ನಿರ್ಜಿತಷಡ್ವರ್ಗೈಃ** ಅರಿಷಡ್ವರ್ಗವನ್ನು ಗೆದ್ದ ಇಂದ್ರಿಯಗಳಿಂದ (ಅಧಿಕಾರಿಗಳಿಂದ) **ಈಶ್ವರೇ ವಾಸುದೇವೇ ಭಗವತಿ** ಶ್ರೀಹರಿಯಲ್ಲಿ **ಭಕ್ತಿಃ ಕ್ರಿಯತೇ** ಭಕ್ತಿಯು ಮಾಡಲ್ಪಡುವದು **ಯಯಾ** ಯಾವುದರಿಂದ **ರತಿಂ ಸಂಲಭತೇ** ಶ್ರೀಹರಿಯಲ್ಲಿ ಉಪಾಸನೆಯನ್ನು, ಅಪರೋಕ್ಷವನ್ನು, ಸ್ವರೂಪಾನಂದವನ್ನು **ಲಭತೇ** ಹೊಂದುವನು. ॥೩೪॥

ಭಕ್ತಿಯಿದೆ ಎಂದು ತಿಳಿಯುವದು ಹೇಗೆ ಎಂದರೆ ಅವರ ವ್ಯವಹಾರದಿಂದ ಎಂದು ಭಕ್ತರು ಇರುವ ರೀತಿಯನ್ನು ಹೇಳುವರು.

**ನಿಶಮ್ಯಕರ್ಮಾಣಿ ಗುಣಾನತುಲ್ಯಾನ್**
**ವೀರ್ಯಾಣಿ ಲೀಲಾತನುಭಿಃ ಕೃತಾನಿ ।**
**ಯದಾಽತಿಹರ್ಷೋತ್ಪುಲಕಾಶ್ರುಗದ್ಗದಃ**
**ಪ್ರೋತ್ಕಂಠ ಉದ್ಗಾಯತಿ ರೌತಿ ನೃತ್ಯತಿ ॥೩೫॥**

**ಯದಾ** ಯಾವಾಗ **ಕರ್ಮಾಣಿ** ಜಗತ್ಸೃಷ್ಟ್ಯಾದಿಗಳನ್ನು, ಕಂಸ ಸಂಹಾರಾದಿಗಳನ್ನು **ಅತುಲ್ಯಾನ್** ಅಸದೃಶವಾದ **ಗುಣಾನ್** ಜ್ಞಾನಾನಂದಾದಿಗುಣಗಳನ್ನು **ಲೀಲಾತನುಭಿಃ** ಕ್ರೀಡೆಗಾಗಿ ತೆಗೆದುಕೊಂಡ ಅವತಾರರೂಪಗಳಿಂದ **ಕೃತಾನಿ** ಮಾಡಲ್ಪಟ್ಟ **ವೀರ್ಯಾಣಿ** ಭೂಮಿಯನ್ನು ಎತ್ತುವದಕ್ಕೆ ಬೇಕಾದ ಪರಾಕ್ರಮವನ್ನು **ನಿಶಮ್ಯ** ಕೇಳಿ **ಪುಮಾನ್** ಅಧಿಕಾರಿ ಚೇತನನು **ಅತಿಹರ್ಷೋತ್ಪುಲಕಾಶ್ರುಗದ್ಗದಃ ಸನ್** ಅತ್ಯಂತ ಸಂತೋಷದಿಂದ ರೋಮಾಂಚಿತನಾಗಿ ಆನಂದಾಶ್ರುವುಳ್ಳವನಾಗಿ ಬಿಗಿದ ಕಂಠದಿಂದ **ಪ್ರೋತ್ಕಂಠಃ** ದೊಡ್ಡ ಧ್ವನಿಯಿಂದ **ಯದಾ** ಯಾವಾಗ **ಕಶ್ಚಿತ್** ಒಬ್ಬ **ಉದ್ಗಾಯತಿ** ಗಟ್ಟಿಯಾಗಿ ಹಾಡುವನೋ **ರೌತಿ** ಒಬ್ಬ ಭಕ್ತನು ಅಳುವನೋ ಅಥವಾ ಶಬ್ದಮಾಡುವನೋ **ನೃತ್ಯತಿ** ಕುಣಿಯುವನೋ. (**ತದಾ** ಎಂದು ಮುಂದೆ ಅನ್ವಯ).

**ಯದಾ ಗ್ರಹಗ್ರಸ್ತ ಇವ ಕ್ವಚಿದ್ ರುದನ್**
**ಹಸತ್ಯಥಾ ಕ್ರಂದಯತೇ ಜನಾನ್ಮುಹುಃ ।**
**ಮುಹುರ್ಮುಹುರ್ವಕ್ತಿ ಹರೇ ಜಗತ್ಪತೇ**
**ನಾರಾಯಣೇತ್ಯಾತ್ಮಗತಿರ್ಗತತ್ರಪಃ ॥೩೬॥**

**ಯದಾ** ಯಾವಾಗ **ಗ್ರಹಗ್ರಸ್ತ ಇವ** ಪಿಶಾಚ ಹಿಡಿದವನಂತೆ **ಕ್ವಚಿತ್** ಒಂದು ಸಲ **ಹಸತಿ** ಕಾರಣವಿಲ್ಲದೆ ನಗುವನೋ **ಆಕ್ರಂದಯತೇ** ಗಟ್ಟಿಯಾಗಿ ಕೂಗುವನೋ **ಧ್ಯಾಯತಿ** ಧ್ಯಾನ ಮಾಡುವನೋ **ಜನಂ** ಪಾಮರಜನರನ್ನು (ಭಕ್ತ ಜನರನ್ನು) ಅಥವಾ **ಅಜನಂ** ಪಾಮರರಲ್ಲದ ಮಹನೀಯರನ್ನು **ವಂದತೇ** ನಮಿಸುವನೋ('ಜನೋ ಲೋಕೇ ಮಹರ್ಲೋಕಾತ್ ಪರಲೋಕೇ ಚ ಪಾಮರೇ' ಎಂದು ವಿಶ್ವ) **ಶ್ವಸನ್** ಸ್ವಾಶೋಚ್ಛಾಸ ಮಾಡುತ್ತ, ಮೇಲುಸಿರು ಬಿಡುತ್ತ, **ಗತತ್ರಪಃ** ಲಜ್ಜೆಯಿಲ್ಲದೇ **ಆತ್ಮಗತಿಃ** ಭಗವದ್ವಿಷಯಕ ಮನೋಗತಿಉಳ್ಳವನಾಗಿ ಸ್ವಚ್ಛಂದ ಪ್ರವೃತ್ತಿಯುಳ್ಳವನಾಗಿ **ಮುಹುಃ** ಮತ್ತೆ ಮತ್ತೆ **ಹರೇ ಜಗತ್ಪತೇ** ನಾರಾಯಣ, ಹರಿಯೇ ಜಗದೊಡೆಯನೇ ನಾರಾಯಣನೇ **ಇತಿ** ಎಂದು **ವಕ್ತಿ** ಹೇಳುವನೋ **ತದಾ** ಎಂದು ಮುಂದಕ್ಕೆ ಅನ್ವಯ.

**ತದಾ ಪುಮಾನ್ ಮುಕ್ತಸಮಸ್ತಬಂಧನ-**
**ಸ್ತದ್ಭಾವಭಾವಾನುಕೃತಾಶಯಾಕೃತಿಃ ।**
**ನಿರ್ದಗ್ಧಬೀಜಾನುಶಯೋ ಮಹೀಯಸಾ**
**ಭಕ್ತಿಪ್ರಯೋಗೇಣ ಸಮೇತ್ಯಧೋಕ್ಷಜಮ್ ॥೩೭॥**

**ತದಾ** ಆಗ **ಮುಕ್ತಸಮಸ್ತಬಂಧನಃ** ಹೆಂಡತಿ ಮಕ್ಕಳು ಮೊದಲಾದವುಗಳಲ್ಲಿ ಸ್ನೇಹವಿಲ್ಲದವನಾಗಿ ಎಲ್ಲ ಸಂಸಾರಾನುಭವವನ್ನು ಬಿಟ್ಟವನಾಗಿ **ತದ್ಭಾವಭಾವಾನು-ಕೃತಾಶಯಾಕೃತಿಃ** ಶ್ರೀಹರಿಯ ಸ್ವರೂಪದಲ್ಲಿ ಭಕ್ತಿಗೆ ಅನುಕೂಲವಾಗಿ ಪ್ರಕಟ ಮಾಡಿದ ಮನಸ್ಸು ಮತ್ತು ಮೈಗಳುಳ್ಳವನಾಗಿ **ನಿರ್ದಗ್ಧಬೀಜಾನುಶಯಃ** ಸಂಪೂರ್ಣವಾಗಿ ಸುಟ್ಟು ಹೋದ ಕರ್ಮಬೀಜವುಳ್ಳ ಸಂಸಾರವುಳ್ಳವನಾಗಿ **ಮಹೀಯಸಾ** ಯಾವುದರಿಂದಲೂ ತಪ್ಪಿಸಲಾಗದ **ಭಕ್ತಿಪ್ರಯೋಗೇಣ** ಭಕ್ತಿ ಎಂಬ ಮೋಕ್ಷೋಪಾಯದಿಂದ **ಅಧೋಕ್ಷಜಂ** ಇಂದ್ರಿಯಗಳಿಗೆ ಅವಿಷಯನಾದ ಶ್ರೀಹರಿಯನ್ನು **ಸಮೇತಿ** ಹೊಂದುವನು. ಅಪರೋಕ್ಷದಿಂದ ಕಾಣುವನು. ಇದರಿಂದ ಭಕ್ತಿಯ ಉದ್ರೇಕದ ಫಲ ಹೇಳಿದಂತಾಯಿತು.

ಯದ್ಯಪಿ 'ನಿಶಮ್ಯ'ಮುಂತಾದ ಎರಡು ಪದ್ಯಗಳಿಗೆ ಸಂಗತವಾದ 'ಕೇಚಿತ್' ಎಂಬ ಪ್ರಮಾಣವನ್ನು ಮೊದಲು ಉದಾಹರಿಸಿ ಕ್ರಮಾನುಸಾರವಾಗಿ 'ತದ್ಭಾವ-ಭಾವಾನುಕೃತಾಶಯಾ ಕೃತಿಃ' ಎಂಬುದನ್ನು ವ್ಯಾಖ್ಯಾನಿಸಬೇಕು. ಆದರೂ ಮೂರು

ಶ್ಲೋಕಗಳಿಗೂ ಒಂದೇ ಅನ್ವಯವೆಂದು ತಿಳಿಸಲು ಅದರ ತಾತ್ಪರ್ಯಕ್ಕೆ ಸ್ವಭಾವಮಾತ್ರಾವೇದಕತ್ವವನ್ನೂ ತಿಳಿಸಲು ತದ್ಭಾವಭಾವಪದದ ಮೇಲ್ನೋಟಕ್ಕೆ ತೋರುವ ಅರ್ಥವು ಅತಿವಿರುದ್ಧವಾದ್ದರಿಂದ ಅದನ್ನು ಸಹಿಸದ ಆನಂದತೀರ್ಥಮುನಿಗಳು ಮೊದಲಿಗೆ ತದ್ಭಾವಭಾವಪದವನ್ನು ಉದ್ಗಾನ ಮೊದಲಾದ ಎಲ್ಲವೂ ಭಕ್ತಿಪೂರ್ವಕವಾಗಿರಬೇಕೆಂದು ತಿಳಿಸಲೋ ಅವನ ಆಕೃತಿ ಎಂಥದ್ದು ಎಂಬ ಪ್ರಶ್ನೆ ಬಂದಾಗ 'ಕೇಚಿತ್' ಮುಂತಾದ ಅವಸರಪ್ರಾಪ್ತವಾದ್ದರಿಂದ ಅನಂತರ ವಕ್ತವ್ಯತೆಯನ್ನು ತಿಳಿಸಲು ಅನುವಾದಮಾಡಿ ವ್ಯಾಖ್ಯಾನಿಸಿರುವರು.

**... ತಾತ್ಪರ್ಯ ...**

**ತದ್ಭಾವಭಾವಃ ತದ್ಯಥಾಸ್ವರೂಪಂ ಭಕ್ತಿಃ ।**

ತದ್ಭಾವಭಾವಃ ಎಂಬುದಕ್ಕೆ ತದ್ಯಥಾ ಸ್ವರೂಪಂ ಭಕ್ತಿಃ ಎಂದರ್ಥ ಅಂದರೆ **ತಸ್ಯ** ಭಗವಂತನ **ಭಾವೇ ಯಥಾ ಸ್ವರೂಪೇ** ಯಥಾವಸ್ಥಿತಸ್ವರೂಪದಲ್ಲಿ **ಭಾವಃ** ಭಕ್ತಿಯು ಎಂದರ್ಥ ಮಾಡಿದಂತಾಯಿತು. 'ಭಾವೋ ಭಕ್ತಿಸ್ಸಮುದ್ದಿಷ್ಟಾ ತದ್ವಾನ್ ಭಾವುಕ ಉಚ್ಯತೇ'ಎಂದು ಬೃಹದ್ಭಾಷ್ಯದಲ್ಲಿ ಹೇಳಿದೆ.

ಒಬ್ಬನಲ್ಲಿಯೇ ಉದ್ಗಾನಾದಿಗಳೆಲ್ಲವೂ ಇರುವದಿಲ್ಲವೆಂದು ಹೇಳುವರು.

**ಕೇಚಿದ್ಭಕ್ತಾ ವಿನೃತ್ಯಂತಿ ಗಾಯಂತಿ ಚ ಯಥೇಪ್ಸಿತಮ್ ।**
**ಕೇಚಿತ್ತೂಷ್ಣೀಂ ಜಪಂತ್ಯೇವ ಕೇಚಿಚ್ಚೋಭಯಕಾರಿಣಃ ॥ಇತಿ ಚ॥**

ಕೆಲವು ಭಕ್ತರು ವಿಶೇಷವಾಗಿ ಸಂತೋಷದಿಂದ ಕುಣಿದಾಡುತ್ತಾರೆ. ಕೆಲವರು ಇಚ್ಛಾನುಸಾರಗಾಯನ ಮಾಡುತ್ತಾರೆ. ಕೆಲವರು ಧ್ಯಾನಮಾಡುತ್ತಾರೆ. ಕೆಲವರು ನರ್ತನ-ಗಾಯನ, ಗಾಯನ-ಜಪ, ನರ್ತನ-ಜಪ, ಈ ರೀತಿ ಎರಡನ್ನೂ ಮಾಡುವರು ಎಂದು ಭಾವ. ॥೩೭॥

ಭಕ್ತಿಯು ಹುಟ್ಟಿದ ಮೇಲೆ ಭಗವಂತನ ಕಥೆಯು ಮೋಕ್ಷಸುಖ ಜನಕವೆಂದು ಹೇಳುತ್ತಾರೆ.

**ಅಧೋಕ್ಷಜಾಲಾಪಮಿಹಾಶುಭಾತ್ಮನಃ**
**ಶರೀರಿಣಃ ಸಂಸೃತಿಚಕ್ರಶಾತನಮ್ ।**
**ತದ್ಬ್ರಹ್ಮನಿರ್ವಾಣಸುಖಂ ವಿದುರ್ಬುಧಾ-**
**ಸ್ತತೋ ಭಜಧ್ವಂ ಹೃದಯೇ ಹೃದೀಶ್ವರಮ್ ॥೩೮॥**

**ಅಶುಭಾತ್ಮನಃ** ಭಕ್ತನಾಗುವ ಮೊದಲು ದುರ್ವಿಷಯಗಳಲ್ಲಿ ಮನಸ್ಸುಳ್ಳ **ಶರೀರಿಣಃ**

ನಿಂದಿತವಾದ ಶರೀರವುಳ್ಳ ಜೀವನಿಗೆ **ಅಧೋಕ್ಷಜಾಲಾಪಂ** ಶ್ರೀಹರಿಯ ಕೀರ್ತನೆಯು **ಇಹ** ಇಲ್ಲಿ **ಸಂಸೃತಿಚಕ್ರಶಾತನಂ** ಸಂಸಾರಚಕ್ರವನ್ನು ನಾಶಮಾಡುವದು **ತತ್** ಆ ಶ್ರೀಹರಿಕಥಾಕಥನವು ಅತಿಶಯಭಕ್ತಿಯುಳ್ಳ ಭಕ್ತನಿಗೆ **ಬ್ರಹ್ಮನಿರ್ವಾಣಸುಖಂ** ಶ್ರೀಹರಿಯ ಅನುಗ್ರಹದಿಂದ ಬರುವ **ಮೋಕ್ಷಸುಖವು ಇತಿ** ಎಂದು **ಬುಧಾಃ** ಜ್ಞಾನಿಗಳು **ವಿದುಃ** ತಿಳಿದಿರುವರು **ತತಃ** ಆದ್ದರಿಂದ(ಇಂತಹ ಸುಖಸಾಧನವಾದ್ದರಿಂದ) **ಹೃದಯೇ** ಸ್ಥೂಲದೇಹಹೃದಯದಲ್ಲಿ ಅಂಗುಷ್ಠಪರಿಮಿತನಾಗಿರುವ **ಹೃದಿ** ಜೀವನ ಸ್ವರೂಪಹೃದಯದಲ್ಲಿ ಜೀವಾಂಗುಷ್ಠಪರಿಮಿತನಾಗಿರುವ **ಈಶ್ವರಂ** ನಿಯಾಮಕನನ್ನು ಅಥವಾ **ಹೃದೀಶ್ವರಂ** ಹೃದಯದಲ್ಲಿರುವ ಅಂತಃಕರಣನಿಯಾಮಕನಾದ ಪ್ರಾಜ್ಞನನ್ನು **ಭಜಧ್ವಂ** ಸೇವಿಸಿರಿ.

ವಿಶೇಷ :- ಹಾಗಾದರೆ ಅವನು ಪರಿಚ್ಛಿನ್ನನೇ ಎಂದರೆ ಅಲ್ಲವೆಂದು ಹೇಳುವರು **ತತ್** ಎಂದು. ವ್ಯಾಪ್ತನೆಂದರ್ಥ. ತತತ್ವಾತ್ ತತ್ । 'ಬುಧಾಃ ವಿದುಃ' ಎಂದುದರಿಂದ ಅಧೋಕ್ಷಜಾಲಾಪರೂಪಕಾರಣಕ್ಕೆ ಸಂಸೃತಿಚಕ್ರಶಾತನಂ ಮತ್ತು ಬ್ರಹ್ಮನಿರ್ವಾಣಸುಖಂ ಎಂಬ ಕಾರ್ಯಕ್ಕೂ ಇರುವ ಕಾರ್ಯಕಾರಣಭಾವ ಅವ್ಯಭಿಚರಿತವೆಂದು ಸೂಚಿಸಿರುವರು. ವಿದುರ್ಬುಧಾಃ ಎಂಬುದರಿಂದ ಆ ಜ್ಞಾನಿಗಳು ದುಃಸಹವಾಸಿಗಳಲ್ಲ ಎಂದೂ ಇಲ್ಲಿ ತಿಳಿಸಿರುವರು. ವಿರುದ್ಧಾಃ ದುರ್ಬುಧೇಭ್ಯಃ **ವಿದುರ್ಬುಧಾಃ** ದುಷ್ಟಬುಧರ ಸಹವಾಸವಿಲ್ಲದವರೆಂದು ಭಾವ. ಬಾಲಕರಿಗೆ ಇತಿಕರ್ತವ್ಯತೆಯನ್ನು ಉಪದೇಶಿಸುವರು **ವಿದುರ್ಬುಧಾಃ ಸತಃ ಭಜಧ್ವಂ** ದುಷ್ಟಬುಧರ ವಿರುದ್ಧರಾಗಿ ಸೇವಿಸಿರಿ ಎಂದು.

ಈ ಶ್ಲೋಕದಲ್ಲಿ ಬ್ರಹ್ಮನಿರ್ವಾಣಸುಖಂ ಎಂಬುದಕ್ಕೆ ನಿರ್ವಾಣ ಅಶರೀರನಾದ ಯಾವ ಬ್ರಹ್ಮನಿರುವನೋ ತದಾತ್ಮಕವಾದ ಏನು ಸುಖವೋ ಎಂದಾಗಲಿ, ಅವನು ಅನುಭವಿಸುವ ಸುಖವನ್ನು ಎಂದಾಗಲಿ ವಿಪರೀತ ಅರ್ಥ ಆಗುವದು. ಅದನ್ನು ನಿರಾಸಮಾಡಲು ಅದನ್ನು ಅನುವಾದ ಮಾಡಿ ವ್ಯಾಖ್ಯಾನಿಸುವರು.

**... ತಾತ್ಪರ್ಯ ...**

**ಬ್ರಹ್ಮನಿರ್ವಾಣಸುಖಂ ಬ್ರಹ್ಮನಿಮಿತ್ತನಿರ್ವಾಣಸುಖಂ ।**

ಬ್ರಹ್ಮನಿರ್ವಾಣಸುಖಂ ಎಂಬುದಕ್ಕೆ ಪರಬ್ರಹ್ಮನೇ ನಿಮಿತ್ತ ಕಾರಣವಾಗಿವುಳ್ಳ, ಮೋಕ್ಷದಲ್ಲಿರುವ ಸುಖವನ್ನು ಎಂದರ್ಥವು (ಅಂದರೆ ಶ್ರೀಹರಿಕಥಾಶ್ರವಣದಿಂದಲೂ ಸುಷುಪ್ತಿಯಲ್ಲಿ ಆದಂತೆ ಸ್ವರೂಪಸುಖವು ಅಭಿವ್ಯಕ್ತವಾಗುವದು ಎಂದರ್ಥ. 'ಮುಕ್ತಿಃ ಕೈವಲ್ಯ ನಿರ್ವಾಣಂ ಶ್ರೇಯೋ ನಿಃಶ್ರೇಯಸಾಮೃತಂ' ಎಂದು ಅಮರವಿದೆ. 'ನಿರ್ವಾಣಂ ಗಜಮಜ್ಜನೇऽಪವರ್ಗೇ ಚ' ಎಂದು ವಿಶ್ವವಿದೆ. ।।೩೮।।

ಬಹುದೂರದಲ್ಲಿ ಶ್ರೀಹರಿಯು ಇರುವದರಿಂದ ಬಹುಪಾಥೇಯ ಸಾಧ್ಯವಾದ್ದರಿಂದ ಭಾಗೀರಥಿಯಾತ್ರೆಯಂತೆ ಶ್ರೀಹರಿಯ ಉಪಾಸನೆಯು ಕಷ್ಟಸಾಧ್ಯವಲ್ಲವೆ ಎಂದರೆ ಇಲ್ಲವೆಂದು ಹೇಳುವರು.

**ಕೋಽತಿಪ್ರಯಾಸೋಽಸುರಬಾಲಕಾ ಹರೇ**
**ರುಪಾಸನೇ ಸ್ವೇ ಹೃದಿ ಛಿದ್ರವತ್ ಸತಃ ।**
**ಅಸ್ಯಾತ್ಮನಃ ಸಖ್ಯುರಶೇಷದೇಹಿನಾಂ**
**ಸಾಮಾನ್ಯತಃ ಕಿಂ ವಿಷಯೋಪಪಾದನೈಃ ॥೩೯॥**

**ಹೇ ಅಸುರಬಾಲಕಾಃ** ದೈತ್ಯಬಾಲಕರೇ **ಅಸ್ಯ ಆತ್ಮನಃ** ಈ ಜೀವನಿಗೆ **ಸ್ವೇ** ಸ್ವಾಧೀನವಾದ(ತನ್ನ)**ಹೃದಿ** ಹೃದಯದಲ್ಲಿ **ಛಿದ್ರವತ್** ಆಕಾಶದಂತೆ **ಸತಃ** ಇರುವ **ಅಶೇಷಜೀವಾನಾಂ** ಎಲ್ಲ ಜೀವರಿಗೂ **ಸಾಮಾನ್ಯತಃ** ಸಾಧಾರಣವಾಗಿ ಅವರವರ ಹೃದಯದಲ್ಲಿರುವದರಿಂದ **ಸಖ್ಯುಃ** ಸ್ನೇಹಿತನಾದ **ಹರೇಃ** ಶ್ರೀಹರಿಯ **ಉಪಾಸನೇ** ಉಪಾಸನೆಯಲ್ಲಿ **ಅತಿಪ್ರಯಾಸಕಃ** ಅತ್ಯಂತಪ್ರಯಾಸ ಯಾವುದು ನ ಇಲ್ಲ. **ವಿಷಯೋಪಪಾದನೈಃ** ತ್ರಿವರ್ಗವಿಷಯಗಳನ್ನು ತಿಳಿಸುವ ಶಾಸ್ತ್ರಗಳಿಂದ **ಕಿಂ** ಏನು ಪ್ರಯೋಜನ ಬೇರೆ ಬೇರೆ ದೇಶಗಳಿಗೆ ಹೋಗುವದರಿಂದ ಏನೂ ಪ್ರಯೋಜನವಿಲ್ಲ.

ಈ ಶ್ಲೋಕದಲ್ಲಿ ಅಶೇಷದೇಹಿನಾಂ ಸಾಮಾನ್ಯತೋ ವಿಷಯೋಪಪಾದನೈಃ ಕಿಂ ಎಂದು ಅನ್ವಯಭ್ರಮವನ್ನು ಪರಿಹರಿಸಲು ಸ್ವಯಂ ಅನ್ವಯ ತೋರಿಸುವರು.

**... ತಾತ್ಪರ್ಯ ...**

**ಅಶೇಷದೇಹಿನಾಂ ಸಾಮಾನ್ಯತೋ ಹೃದಿಸ್ಥತ್ವೇನ ।**

ಎಲ್ಲ ಪ್ರಾಣಿಗಳಲ್ಲಿ ಸಾಧಾರಣವಾಗಿ ಹೃದಯದಲ್ಲಿರತಕ್ಕ ರೂಪದಿಂದ ಉಪಾಸನೆ ಮಾಡಲು ಯಾವ ಆಯಾಸವೂ ಇಲ್ಲವೆಂದು ಭಾವ.

'ದ್ವಾಸುಪರ್ಣಾ ಸಯುಜಾ ಸಖಾಯಾ' ಎಂದಿರುವದರಿಂದ ಸಖ್ಯುಃ ಎಂದಿದ್ದಾರೆ. 'ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚಾನ್ನೇತಿ ಚೇನ್ನ ನಿಚಾಯತ್ವಾದೇವಂ ವ್ಯೋಮವಚ್ಚ'ಎಂಬ ಸೂತ್ರದಲ್ಲಿ ಆಕಾಶದಂತೆ ಹೃದಯದಲ್ಲಿದ್ದಾನೆಂದು ಹೇಳಿದೆ. ಈ ವಿಷಯದಲ್ಲಿ ಶಾಸ್ತ್ರಬೇಕಿಲ್ಲ ಅಥವಾ ವಿಷಯಸಂಪಾದನದಿಂದ ಪ್ರಯೋಜನವಿಲ್ಲ. ಭಕ್ತಿಯುಕ್ತನಲ್ಲದಿದ್ದರೆ ಕಃ ಜನಃ ಅತಿಪ್ರಯಾಸಃ ಪ್ರಯಾಸದಿಂದ ಅತಿಕ್ರಾಂತನಾದವನು ಯಾವನು ಯಾರೂ ಇಲ್ಲವೆಂದು ಭಾವ.

**ರಾಯಃ ಕಲತ್ರಂ ಪಶವಃ ಸುತಾದಯೋ**
**ಗೃಹಾ ಮಹೀ ಕುಂಜರಕೋಶಭೂತಯಃ ।**

**ಸರ್ವೇಽರ್ಥಕಾಮಾಃ ಕ್ಷಣಭಂಗುರಾಯುಷಃ**
**ಕುರ್ವಂತಿ ಮರ್ತ್ಯಸ್ಯ ಕಿಯತ್ಪ್ರಿಯಂ ಚಲಾಃ** ॥೪೦॥

**ರಾಯಃ** ಹೊರಗಿರುವ ಧನವು **ಕಲತ್ರಂ** ಹೆಂಡತಿಯು **ಪಶವಃ** ದನಕರಗಳು **ಸುತಾದಯಃ** ಮಕ್ಕಳು, ಅಣ್ಣ-ತಮ್ಮಂದಿರು ಮುಂತಾದವರು **ಗೃಹಾಃ** ಮನೆಗಳು **ಮಹೀ** ಭೂಮಿಯು **ಕುಂಜರಾಃ** ಆನೆಗಳು **ಕೋಶಃ** ಧನದ ಭಂಡಾರ ಅಥವಾ ಭೂಮಿಯಲ್ಲಿಟ್ಟ ಹಣವು **ಭೂತಯಃ** ಇನ್ನಿತರ ಐಶ್ವರ್ಯಗಳು **ಸರ್ವಾರ್ಥಕಾಮಾಃ** ಎಲ್ಲ ಕಾಮ್ಯವಾದ ಪದಾರ್ಥಗಳು **ಚಲಾಃ** ಅಸ್ಥಿರವಾದವುಗಳು **ಕ್ಷಣಭಂಗುರಾಯುಷಃ** ಕ್ಷಣಗಳಿಂದ ನಾಶವಾಗುವ ಆಯುಷ್ಯವುಳ್ಳ **ಮರ್ತ್ಯಸ್ಯ** ಮನುಷ್ಯನಿಗೆ **ಕಿಯತ್ ಪ್ರಿಯಂ ಕುರ್ವಂತಿ** ಎಷ್ಟು ಪ್ರಿಯವನ್ನು ಮಾಡುವವು ?

ವಿಶೇಷ :- ಇವನು ನಾಶಸ್ವಭಾವದ ದೇಹವುಳ್ಳವನು ಅವುಗಳೂ ಅತ್ಯಂತ ಅಸ್ಥಿರವಾದವು ಇವತ್ತು ಇವನಲ್ಲಿದ್ದರೆ ನಾಳೆ ಬೇರೆಡೆ ಹೋಗುವವು ಅವುಗಳನ್ನು ಸಂಪಾದಿಸುವದರಿಂದ ಬಹಳ ಪ್ರಿಯ ಹೇಗೆ ಎಂದು ಭಾವ.

'ಕ್ಷಣಭಂಗುರಾಯುಷಃ' ಎಂಬುದು 'ಅರ್ಥಕಾಮಾಃ' ಎಂಬುದಕ್ಕೆ ವಿಶೇಷಣವಾದಾಗ ಸ್ವರೂಪನಾಶವುಳ್ಳ ಎಂದರ್ಥ. 'ಮರ್ತ್ಯಸ್ಯ' ಎಂಬುದಕ್ಕೆ ವಿಶೇಷಣವಾದಾಗ ಯಾವ ಕ್ಷಣದಲ್ಲಿಯಾದರೂ ನಾಶವಾಗುವ ಆಯುಷ್ಯವುಳ್ಳ ಎಂದರ್ಥ. ॥೪೦॥

ಯಜ್ಞಾದಿಗಳನ್ನು ಮಾಡುವದರಿಂದ ಅಕ್ಷಯ ಸ್ವರ್ಗಾದಿಗಳು ದೊರೆಯುವದರಿಂದ ನೀವು ಹೇಳಿದ್ದನ್ನೇ ಏಕೆ ಮಾಡಬೇಕು ಎಂದರೆ ಪ್ರವೃತ್ತಕರ್ಮಫಲಗಳಾದ ಸ್ವರ್ಗಾದಿಗಳನ್ನು ದೂಷಿಸುವರು.

**ಏವಂ ಹಿ ಲೋಕಾಃ ಕ್ರತುಭಿಃ ಕೃತಾ ಅಮೀ**
**ಕ್ಷಯಿಷ್ಣವಃ ಸಾತಿಶಯಾ ನ ನಿರ್ಮಲಾಃ ।**
**ತಸ್ಮಾದದೃಷ್ಟಶ್ರುತದೂಷಣಂ ಪರಂ**
**ಭಕ್ತೈಕಯೇಶಂ ಭಜ ಸಂಭಜತಾತ್ಮಲಬ್ಧಯೇ** ॥೪೦॥

**ಕ್ರತುಭಿಃ** ಯಜ್ಞಾದಿಗಳಿಂದ **ಕೃತಾಃ** ಸಂಪಾದಿತವಾದ **ಅಮೀ ಲೋಕಾಃ** ಸ್ವರ್ಗಾದಿಗಳು **ಏವಂ** ಅರ್ಥಕಾಮುಗಳಂತೆ **ಕ್ಷಯಿಷ್ಣವಃ** ನಶ್ವರವಾದವುಗಳು **ಸಾತಿಶಯಾಃ** ತನಗಿಂತಲೂ ಅತಿಶಯಿತವಾದ ಸುಖವುಳ್ಳ ಲೋಕಾಂತರಗಳುಳ್ಳವುಗಳು **ನ ನಿರ್ಮಲಾಃ** ಅಪ್ರಾಕೃತಗಳಲ್ಲ, ರಾಗಾದಿದೋಷರಹಿತಗಳಲ್ಲ **ತಸ್ಮಾತ್** ಆದ್ದರಿಂದ **ಅದೃಷ್ಟಶ್ರುತದೂಷಣಂ** ಎಂದೂ ನೋಡದ ಕೇಳದ ದೋಷಗಳುಳ್ಳ

(ದೋಷರಹಿತನಾದ) 'ಗುಣಾಶ್ರುತಾ ಸುವಿರುದ್ಧಾಶ್ಚ ದೇವೇ ಸಂತಿ ಅಶ್ರುತಾ ಅಪಿ ನೈವಾತ್ರಶಂಕಾ । ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ' ಎಂದು ಶ್ರುತಿ ಇದೆ. ಕ್ಷಯಿಷ್ಣುತ್ವ ಸಾತಿಶಯತ್ವ ಅನಿರ್ಮಲತ್ವ ಮೊದಲಾದ ದೋಷಗಳುಳ್ಳ **ಪರಂ** ವಿಲಕ್ಷಣನಾದ **ಏಕಂ** ಸರ್ವೋತ್ತಮನಾದ **ಈಶಂ** ನಿರವಧಿಕ ಈಶ್ವರನನ್ನು, ಲಕ್ಷ್ಮೀಗೆ ಸುಖಕರನಾದ ಲಕ್ಷ್ಮೀಗೆ ನಿಯಾಮಕನಾದ ಶ್ರೀಹರಿಯನ್ನು **ಆತ್ಮಲಬ್ಧಯೇ** ಸ್ವಸ್ವರೂಪಾನಂದಪ್ರಾಪ್ತಿಗಾಗಿ **ಭಕ್ತ್ಯಾ** ಭಕ್ತಿಯಿಂದ **ಭಜತ** ಸೇವಿಸಿರಿ.

ವಿಶೇಷ :- ಏಕಯೇಶಂ ಎಂಬ ಪಾಠದಲ್ಲಿ ಏಕಯಾ ಎಂದು ಭಕ್ತಿಗೆ ವಿಶೇಷಣ. ಅನನ್ಯಸಾಧಾರಣವಾದ ಎಂದರ್ಥ. ಹಿಶಬ್ದದಿಂದ 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ । ಕರ್ಮಚಿತೋ ಲೋಕಃ ಕ್ಷೀಯತೇ ಎವಮೇವ ಅಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ । ಅನ್ಯೈವಂ ವಿತ್ ಮಹತ್ ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಂತ ತಕ್ಷೀಯತೇ ಏವ' ಮುಂತಾದ ಪ್ರಮಾಣಪ್ರಸಿದ್ಧಿಯನ್ನು ತಿಳಿಸುವರು. ಏವಂ ಶಬ್ದದಿಂದ ಯಯಾತಿಯ ಪಾಪದಂತೆ ಪಾಪವನ್ನು ಸೂಚಿಸುವರು. ಕ್ಷೀ ಕ್ಷಯೇ ಎಂಬ ಧಾತುವಿಗೆ ಭುವಶ್ಚ ಎಂಬಲ್ಲಿಯ ಅನುಕ್ತಸಮುಚ್ಚಾಯಕ ಚ ಶಬ್ದದಿಂದ ಇಷ್ಣುಚ್ ಪ್ರತ್ಯಯ ಬಂದು ಆರ್ಧಧಾತುಕವಾದ್ದರಿಂದ ಗುಣವಾಗಿ ಅಯಾದೇಶವಾದಾಗ ಕ್ಷಯಿಷ್ಣು ಎಂದಾಗುವದು. ।।೪೧।।

ಹಾಗಾದರೆ ವಿಹಿತಕರ್ಮಗಳನ್ನು ಮಾಡಬಾರದೇನು ಎಂದರೆ ವಿಹಿತಕರ್ಮವು ಶ್ರೀಹರಿಗೆ ಸಮರ್ಪಿತವಾದರೆ ಅನಶ್ವರಫಲಪ್ರಾಪ್ತಿಗೆ ಕಾರಣವಾಗುವದು. ಅಸಮರ್ಪಿತವಾದುದು ಅನಶ್ವರಫಲಪ್ರಾಪ್ತಿಕಾರಣವಾಗಲಾರದು ಕಾರಣ ವ್ಯರ್ಥವು ಎಂದು ಹೇಳುವರು.

**ಯದರ್ಥಮಿಹ ಕರ್ಮಾಣಿ ವಿಧ್ಯಂಗಾನ್ಯಸಕೃನ್ನರಃ ।**
**ಕರೋತ್ಯತೋ ವಿಪರ್ಯಾಸಮಮೋಘಂ ವಿಂದತೇ ಫಲಮ್ ।।೪೨।।**

**ನರಃ** ಮನುಷ್ಯನು **ಇಹ** ಲೋಕದಲ್ಲಿ **ವಿಧ್ಯಂಗಾನಿ** ವಿಧಿಗಳಿಂದ ವಿಹಿತಗಳಾದ **ಕರ್ಮಾಣಿ** ಜ್ಯೋತಿಷ್ಟೋಮಾದಿಯಾಗಗಳನ್ನು **ಯದರ್ಥಂ** ಯಾವ ಸ್ವರ್ಗಾದಿಫಲೋದ್ದೇಶದಿಂದ **ಅಸಕೃತ್** ಅನೇಕ ಬಾರಿ **ಕರೋತಿ** ಮಾಡುವನು **ಅತಃ** ಶ್ರೀಹರಿಗೆ ಸಮರ್ಪಿಸದೇ ಫಲಾಪೇಕ್ಷೆಯಿಂದ ಮಾಡಿದ ಕರ್ಮದಿಂದ **ವಿಪರ್ಯಾಸಂ** ಇಷ್ಟಪಟ್ಟ ಫಲಕ್ಕಿಂತ ವಿಪರೀತವಾದ **ಅಮೋಘಂ** ದುಃಖಸಂಪಾದಕವಾದ್ದರಿಂದ ವ್ಯರ್ಥವಲ್ಲದ **ಫಲಂ** ಕಷ್ಟರೂಪವಾದ ನಾಶರೂಪವಾದ ಫಲವನ್ನು **ವಿಂದತೇ** ಹೊಂದುವನು **ಯದರ್ಥಂ** ಪರಮಾತ್ಮನ ಪ್ರೀತಿಗಾಗಿ **ಅಸಕೃತ್** ಮೇಲಿಂದ ಮೇಲೆ

**ವಿಧ್ಯಂಗಾನಿ** ವಿಹಿತಕರ್ಮಗಳನ್ನು **ಕರೋತಿ** ಮಾಡುವನೋ **ಅತಃ** ಪ್ರೀತನಾದ ಆ ಪರಮಾತ್ಮನಿಂದ **ಅವಿಪರ್ಯಾಸಂ** ನಾಶರಹಿತವಾದ **ಅಮೋಘಂ** ಅತ್ಯುತ್ತಮವಾದ **ಫಲಂ** ಮೋಕ್ಷವನ್ನು **ವಿಂದತೇ** ಹೊಂದುವನು. ಭಗವಂತನ ಪ್ರೀತಿಗಾಗಿ ಕರ್ಮ ಮಾಡಬೇಕೆಂದು ಭಾವ. ।।೪೨।।

ಇದನ್ನೇ ವಿವರಿಸುವರು.

**ಸುಖಾಯ ದುಃಖಮೋಕ್ಷಾಯ ಸಂಕಲ್ಪ ಇಹ ಕರ್ಮಣಃ ।**
**ಸಮಾಪ್ನೋತೀಹಯಾ ದುಃಖಮನೀಹಾಯಾಂ ಸುಖೋನ್ನತಿಮ್ ।।೪೩।।**

**ಇಹ** ಲೋಕದಲ್ಲಿ **ಕರ್ಮಣಃ** ಕರ್ಮದ **ಸಂಕಲ್ಪಃ** ಮಾನಸಿಕವ್ಯಾಪಾರ ವಿಶೇಷವು **ಸುಖಾಯ** ಸುಖ ಹೊಂದುವದಕ್ಕಾಗಿ **ದುಃಖಮೋಕ್ಷಾಯ** ದುಃಖನಿವೃತ್ತಿಗಾಗಿ (ಈ ಸುಖಕ್ಕಾಗಿ ಈ ದುಃಖನಿವೃತ್ತಿಗಾಗಿ ಈ ಕರ್ಮಮಾಡುತ್ತೇನೆ ಎಂದು) **ಸದಾ** ಯಾವಾಗಲೂ ಇರುವದು (ಸಂಕಲ್ಪ ಮಾಡುವನೆಂದರ್ಥ) ಆದರೆ **ಈಹಯಾ ಚೇತ್** ಫಲಾಪೇಕ್ಷೆಯಿಂದ ಮಾಡಿದ್ದಾದರೆ **ಸದಾ** ಯಾವಾಗಲೂ **ದುಃಖಂ ಆಪ್ನೋತಿ** ದುಃಖವನ್ನು ಹೊಂದುವನು **ಅನೀಹಯಾ ಚೇತ್** ಫಲಾಪೇಕ್ಷೆಯಿಲ್ಲದೆ ಬ್ರಹ್ಮಾರ್ಪಣಬುದ್ಧಿಯಿಂದ ಮಾಡಿದರೆ **ಸುಖೋನ್ನತಿಂ** ಪೂರ್ಣಸುಖವನ್ನು, ಮೋಕ್ಷವನ್ನು **ಸದಾ ಆಪ್ನೋತಿ** ಯಾವಾಗಲೂ ಹೊಂದುವನು. 'ಸಂಕಲ್ಪಃ ಕರ್ಮಮಾನಸಂ'ಎಂದು ಅಮರವಿದೆ. ಉನ್ನತಿಂ ಎಂಬುದರಿಂದ ಅಸಂಕಲ್ಪಿತಕ್ಕೆ ಮಹತ್ವವನ್ನು ಹೇಳಿರುವರು. ।।೪೩।।

ಶಾಶ್ವತಸುಖ(ಮೋಕ್ಷ)ವನ್ನು ಅಪೇಕ್ಷಿಸದೆ ಶರೀರದಲ್ಲಿ ಸುಖವನ್ನು ಅಪೇಕ್ಷಿಸುವನು ಅದಕ್ಕಾಗಿ ಪ್ರಯತ್ನಿಸುವವನು ವಿಮೂಢನಾದ್ದರಿಂದ, ಜ್ಞಾನಿಗಳಿಂದ ಅತ್ಯಂತ ಹಾಸ್ಯಕ್ಕೆ ಗುರಿಯಾಗುವನು ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ಕಾಮಾನ್ ಕಾಮಯತೇಽಕಾಮ್ಯಾನ್ ಯದರ್ಥ ಇಹ ಪೂರುಷಃ ।**
**ಸ ವೈ ದೇಹಸ್ತು ಪಾರಕ್ಯೋ ಭಂಗುರೋಽಪೇತ್ಯುಪೈತಿ ಚ ।।೪೪।।**

**ಇಹ** ಜಗತ್ತಿನಲ್ಲಿ **ಪೂರುಷಃ** ಮನುಷ್ಯನು **ಯದರ್ಥೇ** ಯಾವ ದೇಹದಲ್ಲಿರುವ ಇಂದ್ರಿಯಭೋಗಕ್ಕಾಗಿ **ಕಾಮ್ಯಾನ್** ಅಜ್ಞಾನಿಗಳಿಂದ ಅಪೇಕ್ಷಿತಗಳಾದ ಅಥವಾ **ಅಕಾಮ್ಯಾನ್** ಜ್ಞಾನಿಗಳಿಂದ ಅನಪೇಕ್ಷಿತಗಳಾದ **ಕಾಮಾನ್** ವಿಷಯಗಳನ್ನು **ಕಾಮಯತೇ** ಅಪೇಕ್ಷಿಸುವನೋ **ಸಃ ದೇಹಃ** ಆ ದೇಹವು **ಪಾರಕ್ಯಃ** ಮರಣಕ್ಕೆ ಮೊದಲು ಸ್ತ್ರೀ ಮೊದಲಾದವರಿಗೆ ಭೋಗ್ಯವಾಗುವದು ಮರಣಾನಂತರ ನಾಯಿನರಿಗಳಿಗೆ ಭೋಗ್ಯವಾಗುವದು **ಭಂಗುರಃ** ನಶ್ವರವಾದುದು **ಯಾತಿ** ಹೋಗುವದು **ಚ** ಮತ್ತು

(ದೋಷರಹಿತನಾದ) 'ಗುಣಾಶ್ರುತಾ ಸುವಿರುದ್ಧಾಶ್ಚ ದೇವೇ ಸಂತಿ ಅಶ್ರುತಾ ಅಪಿ ನೈವಾತ್ರಶಂಕಾ । ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ' ಎಂದು ಶ್ರುತಿ ಇದೆ. ಕ್ಷಯಿಷ್ಣುತ್ವ ಸಾತಿಶಯತ್ವ ಅನಿರ್ಮಲತ್ವ ಮೊದಲಾದ ದೋಷಗಳುಳ್ಳ **ಪರಂ** ವಿಲಕ್ಷಣನಾದ **ಏಕಂ** ಸರ್ವೋತ್ತಮನಾದ **ಈಶಂ** ನಿರವಧಿಕ ಈಶ್ವರನನ್ನು, ಲಕ್ಷ್ಮೀಗೆ ಸುಖಕರನಾದ ಲಕ್ಷ್ಮೀಗೆ ನಿಯಾಮಕನಾದ ಶ್ರೀಹರಿಯನ್ನು **ಆತ್ಮಲಬ್ಧಯೇ** ಸ್ವಸ್ವರೂಪಾನಂದಪ್ರಾಪ್ತಿಗಾಗಿ **ಭಕ್ತ್ಯಾ** ಭಕ್ತಿಯಿಂದ **ಭಜತ** ಸೇವಿಸಿರಿ.

ವಿಶೇಷ :- ಏಕಯೇಶಂ ಎಂಬ ಪಾಠದಲ್ಲಿ ಏಕಯಾ ಎಂದು ಭಕ್ತಿಗೆ ವಿಶೇಷಣ. ಅನನ್ಯಸಾಧಾರಣವಾದ ಎಂದರ್ಥ. ಹಿಶಬ್ದದಿಂದ 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ । ಕರ್ಮಚಿತೋ ಲೋಕಃ ಕ್ಷೀಯತೇ ಏವಮೇವ ಅಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ । ಅನ್ಯೈವಂ ವಿತ್ ಮಹತ್ ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಂತ ತಕ್ಷೀಯತೇ ಏವ' ಮುಂತಾದ ಪ್ರಮಾಣಪ್ರಸಿದ್ಧಿಯನ್ನು ತಿಳಿಸುವರು. ಏವಂ ಶಬ್ದದಿಂದ ಯಯಾತಿಯ ಪಾಪದಂತೆ ಪಾಪವನ್ನು ಸೂಚಿಸುವರು. ಕ್ಷೀ ಕ್ಷಯೇ ಎಂಬ ಧಾತುವಿಗೆ ಭುವಶ್ಚ ಎಂಬಲ್ಲಿಯ ಅನುಕ್ತಸಮುಚ್ಚಾಯಕ ಚ ಶಬ್ದದಿಂದ ಇಷ್ಣುಚ್ ಪ್ರತ್ಯಯ ಬಂದು ಆರ್ಧಧಾತುಕವಾದ್ದರಿಂದ ಗುಣವಾಗಿ ಅಯಾದೇಶವಾದಾಗ ಕ್ಷಯಿಷ್ಣು ಎಂದಾಗುವದು. ॥೪೧॥

ಹಾಗಾದರೆ ವಿಹಿತಕರ್ಮಗಳನ್ನು ಮಾಡಬಾರದೇನು ಎಂದರೆ ವಿಹಿತಕರ್ಮವು ಶ್ರೀಹರಿಗೆ ಸಮರ್ಪಿತವಾದರೆ ಅನಶ್ವರಫಲಪ್ರಾಪ್ತಿಗೆ ಕಾರಣವಾಗುವದು. ಅಸಮರ್ಪಿತವಾದುದು ಅನಶ್ವರಫಲಪ್ರಾಪ್ತಿಕಾರಣವಾಗಲಾರದು ಕಾರಣ ವ್ಯರ್ಥವು ಎಂದು ಹೇಳುವರು.

**ಯದರ್ಥಮಿಹ ಕರ್ಮಾಣಿ ವಿಧ್ಯಂಗಾನ್ಯಸಕೃನ್ನರಃ ।**
**ಕರೋತ್ಯತೋ ವಿಪರ್ಯಾಸಮಮೋಘಂ ವಿಂದತೇ ಫಲಮ್ ॥೪೨॥**

**ನರಃ** ಮನುಷ್ಯನು **ಇಹ** ಲೋಕದಲ್ಲಿ **ವಿಧ್ಯಂಗಾನಿ** ವಿಧಿಗಳಿಂದ ವಿಹಿತಗಳಾದ **ಕರ್ಮಾಣಿ** ಜ್ಯೋತಿಷ್ಟೋಮಾದಿಯಾಗಗಳನ್ನು **ಯದರ್ಥಂ** ಯಾವ ಸ್ವರ್ಗಾದಿಫಲೋದ್ದೇಶದಿಂದ **ಅಸಕೃತ್** ಅನೇಕ ಬಾರಿ **ಕರೋತಿ** ಮಾಡುವನು **ಅತಃ** ಶ್ರೀಹರಿಗೆ ಸಮರ್ಪಿಸದೇ ಫಲಾಪೇಕ್ಷೆಯಿಂದ ಮಾಡಿದ ಕರ್ಮದಿಂದ **ವಿಪರ್ಯಾಸಂ** ಇಷ್ಟಪಟ್ಟ ಫಲಕ್ಕಿಂತ ವಿಪರೀತವಾದ **ಅಮೋಘಂ** ದುಃಖಸಂಪಾದಕವಾದ್ದರಿಂದ ವ್ಯರ್ಥವಲ್ಲದ **ಫಲಂ** ಕಷ್ಟರೂಪವಾದ ನಾಶರೂಪವಾದ ಫಲವನ್ನು **ವಿಂದತೇ** ಹೊಂದುವನು **ಯದರ್ಥಂ** ಪರಮಾತ್ಮನ ಪ್ರೀತಿಗಾಗಿ **ಅಸಕೃತ್** ಮೇಲಿಂದ ಮೇಲೆ

**ವಿಧ್ಯಂಗಾನಿ** ವಿಹಿತಕರ್ಮಗಳನ್ನು **ಕರೋತಿ** ಮಾಡುವನೋ **ಅತಃ** ಪ್ರೀತನಾದ ಆ ಪರಮಾತ್ಮನಿಂದ **ಅವಿಪರ್ಯಾಸಂ** ನಾಶರಹಿತವಾದ **ಅಮೋಘಂ** ಅತ್ಯುತ್ತಮವಾದ **ಫಲಂ** ಮೋಕ್ಷವನ್ನು **ವಿಂದತೇ** ಹೊಂದುವನು. ಭಗವಂತನ ಪ್ರೀತಿಗಾಗಿ ಕರ್ಮ ಮಾಡಬೇಕೆಂದು ಭಾವ. ।।೪೨।।

ಇದನ್ನೇ ವಿವರಿಸುವರು.

**ಸುಖಾಯ ದುಃಖಮೋಕ್ಷಾಯ ಸಂಕಲ್ಪ ಇಹ ಕರ್ಮಣಃ ।**
**ಸಮಾಪ್ನೋತೀಹಯಾ ದುಃಖಮನೀಹಾಯಾಂ ಸುಖೋನ್ನತಿಮ್ ।।೪೩।।**

**ಇಹ** ಲೋಕದಲ್ಲಿ **ಕರ್ಮಣಃ** ಕರ್ಮದ **ಸಂಕಲ್ಪಃ** ಮಾನಸಿಕವ್ಯಾಪಾರ ವಿಶೇಷವು **ಸುಖಾಯ** ಸುಖ ಹೊಂದುವದಕ್ಕಾಗಿ **ದುಃಖಮೋಕ್ಷಾಯ** ದುಃಖನಿವೃತ್ತಿಗಾಗಿ (ಈ ಸುಖಕ್ಕಾಗಿ ಈ ದುಃಖನಿವೃತ್ತಿಗಾಗಿ ಈ ಕರ್ಮಮಾಡುತ್ತೇನೆ ಎಂದು) **ಸದಾ** ಯಾವಾಗಲೂ ಇರುವದು (ಸಂಕಲ್ಪ ಮಾಡುವನೆಂದರ್ಥ) ಆದರೆ **ಈಹಯಾ ಚೇತ್** ಫಲಾಪೇಕ್ಷೆಯಿಂದ ಮಾಡಿದ್ದಾದರೆ **ಸದಾ** ಯಾವಾಗಲೂ **ದುಃಖಂ ಆಪ್ನೋತಿ** ದುಃಖವನ್ನು ಹೊಂದುವನು **ಅನೀಹಯಾ ಚೇತ್** ಫಲಾಪೇಕ್ಷೆಯಿಲ್ಲದೆ ಬ್ರಹ್ಮಾರ್ಪಣಬುದ್ಧಿಯಿಂದ ಮಾಡಿದರೆ **ಸುಖೋನ್ನತಿಂ** ಪೂರ್ಣಸುಖವನ್ನು, ಮೋಕ್ಷವನ್ನು **ಸದಾ ಆಪ್ನೋತಿ** ಯಾವಾಗಲೂ ಹೊಂದುವನು. 'ಸಂಕಲ್ಪಃ ಕರ್ಮಮಾನಸಂ'ಎಂದು ಅಮರವಿದೆ. ಉನ್ನತಿಂ ಎಂಬುದರಿಂದ ಅಸಂಕಲ್ಪಿತಕ್ಕೆ ಮಹತ್ವವನ್ನು ಹೇಳಿರುವರು. ।।೪೩।।

ಶಾಶ್ವತಸುಖ(ಮೋಕ್ಷ)ವನ್ನು ಅಪೇಕ್ಷಿಸದೆ ಶರೀರದಲ್ಲಿ ಸುಖವನ್ನು ಅಪೇಕ್ಷಿಸುವನು ಅದಕ್ಕಾಗಿ ಪ್ರಯತ್ನಿಸುವವನು ವಿಮೂಢನಾದ್ದರಿಂದ, ಜ್ಞಾನಿಗಳಿಂದ ಅತ್ಯಂತ ಹಾಸ್ಯಕ್ಕೆ ಗುರಿಯಾಗುವನು ಎಂಬ ಅಭಿಪ್ರಾಯದಿಂದ ಹೇಳುತ್ತಾರೆ.

**ಕಾಮಾನ್ ಕಾಮಯತೇಽಕಾಮ್ಯಾನ್ ಯದರ್ಥ ಇಹ ಪೂರುಷಃ ।**
**ಸ ವೈ ದೇಹಸ್ತು ಪಾರಕ್ಯೋ ಭಂಗುರೋಽಪೇತ್ಯುಪೈತಿ ಚ ।।೪೪।।**

**ಇಹ** ಜಗತ್ತಿನಲ್ಲಿ **ಪೂರುಷಃ** ಮನುಷ್ಯನು **ಯದರ್ಥೇ** ಯಾವ ದೇಹದಲ್ಲಿರುವ ಇಂದ್ರಿಯಭೋಗಕ್ಕಾಗಿ **ಕಾಮ್ಯಾನ್** ಅಜ್ಞಾನಿಗಳಿಂದ ಅಪೇಕ್ಷಿತಗಳಾದ ಅಥವಾ **ಅಕಾಮ್ಯಾನ್** ಜ್ಞಾನಿಗಳಿಂದ ಅನಪೇಕ್ಷಿತಗಳಾದ **ಕಾಮಾನ್** ವಿಷಯಗಳನ್ನು **ಕಾಮಯತೇ** ಅಪೇಕ್ಷಿಸುವನೋ **ಸಃ ದೇಹಃ** ಆ ದೇಹವು **ಪಾರಕ್ಯಃ** ಮರಣಕ್ಕೆ ಮೊದಲು ಸ್ತ್ರೀ ಮೊದಲಾದವರಿಗೆ ಭೋಗ್ಯವಾಗುವದು ಮರಣಾನಂತರ ನಾಯಿನರಿಗಳಿಗೆ ಭೋಗ್ಯವಾಗುವದು **ಭಂಗುರಃ** ನಶ್ವರವಾದುದು **ಯಾತಿ** ಹೋಗುವದು **ಚ** ಮತ್ತು

**ಉಪೈತಿ** ಬರುವದು ಆದ್ದರಿಂದ ಈ ದೇಹಕ್ಕಾಗಿ ವಿಷಯಗಳನ್ನು ಅಪೇಕ್ಷಿಸುವದು ಅನರ್ಥವೆಂದು ಭಾವ. ॥೪೪॥

ಅತ್ಯಂತ ಸಮೀಪ ತಾನೇ ಎಂದು ಕೊಂಡ(ತನ್ನದೇ ಎಂದು ಕೊಂಡ) ದೇಹವೆ ಈ ರೀತಿಯಾದ ಮೇಲೆ ಅದರ ಸಂಬಂಧಿಗಳಾದ ವಸ್ತುಗಳ ಪಾಡೇನು ಎಂದು ಹೇಳುತ್ತಾರೆ.

**ಕಿಮುವ್ಯವಹಿತಾऽಪತ್ಯದಾರಾಗಾರಧನಾದಯಃ ।**
**ರಾಜ್ಯಕೋಶಗಜಾಮಾತ್ಯಭೃತ್ಯಾಪ್ತಾಮಮತಾಸ್ಪದಾಃ ॥೪೫॥**

**ವ್ಯವಹಿತಾಃ** ದೇಹಕ್ಕಿಂತ ದೂರವಾದ ಆದರೆ **ಮಮತಾಸ್ಪದಾಃ** ನನ್ನದು ನನ್ನವರು ಎಂಬ ಮಮತೆಗೆ ವಿಷಯರಾದ(ವಾದ)**ಅಪತ್ಯ** ಮಕ್ಕಳು **ದಾರಾ** ಹೆಂಡತಿ **ಆಗಾರ** ಮನೆ **ಧನಾದಯಃ** ಹಣ ಮೊದಲಾದವು **ರಾಜ್ಯಕೋಶ** ರಾಜ್ಯ, ಕೋಶ, **ಗಜ** ಆನೆ **ಅಮಾತ್ಯ** ಮಂತ್ರಿ **ಭೃತ್ಯ** ಸೇವಕ ಮತ್ತು **ಆಪ್ತಾಃ** ಬಂಧುಗಳು **ಕಿಮು** ಪಾರಕ್ಯರೆಂದು ಭಂಗುರವೆಂದು ಬರುವರು. ಬಿಟ್ಟು ಹೋಗುವರು ಎಂದು ಬೇರೆ ಹೇಳಬೇಕಿಲ್ಲ ತಾನೆ.

ವಿಷಯ ಭೋಗಕ್ಕಾಗಿ ಶ್ರೀನಾರಾಯಣನು ದೇಹವನ್ನು ಧರಿಸುವನೆಂದು ಕೆಲವರು ಹೇಳುವರಲ್ಲ ಎಂದರೆ ಉತ್ತರಕೊಡುತ್ತಾರೆ.

**ಕಿಮೇತೈರಾತ್ಮನಸ್ತುಚ್ಛೈಃ ಸಹ ದೇಹೇನ ನಶ್ವರೈಃ ।**
**ಅನರ್ಥೈರರ್ಥಸಂಕಾಶೈರ್ಪೂರ್ಣಾ(ರ್ನಿತ್ಯಾ)ನಂದಮಹೋದಧೇಃ ॥**

**ನಿತ್ಯಾನಂದಮಹೋದಧೇಃ** ಯಾವಾಗಲೂ ಆನಂದಸಮುದ್ರನಾದ **ಆತ್ಮನಃ** ಶ್ರೀಹರಿಗೆ **ತುಚ್ಛೈಃ** ಹೇಯವಾದ, ಕೆಲಸಕ್ಕೆ ಬಾರದ **ದೇಹೇನ ಸಹ** ಪ್ರಾಕೃತದೇಹದೊಂದಿಗೆ **ನಶ್ವರೈಃ** ಅನಿತ್ಯಗಳಾದ **ಅರ್ಥಸಂಕಾಶೈಃ** ಪುರುಷಾರ್ಥಗಳಂತೆ ಕಾಣುವ ಆದರೆ **ಅನರ್ಥೈಃ** ದುಃಖಕ್ಕೆ ಕಾರಣಗಳಾದ(ಪ್ರಯೋಜನವಿಲ್ಲದ, ಪ್ರಯೋಜನವಿದ್ದಂತೆ ಕಾಣುವ) **ಏತೈಃ** ಈ ಪ್ರಾಕೃತವಿಷಯಗಳಿಂದ **ಕಿಂ** ಏನು ಪ್ರಯೋಜನ ?

೨) ಅಥವಾ ಚಿಂದಾನಂದಸರೂಪನಾದ ಜೀವನಿಗೆ ಭೌತಿಕ ವಿಷಯಗಳಿಂದ ಏನೂ ಪ್ರಯೋಜನವಿಲ್ಲವೆಂದು ಹೇಳುತ್ತಾರೆ.

**ನಿತ್ಯಾನಂದಮಹೋದಧೇಃ** ಆನಂದಸ್ವರೂಪನಾದ,ಪೂರ್ಣಾನಂದನಾದ ಶ್ರೀಹರಿಯೇ ಮಹೋದಧಿಯಂತೆ ಗಮ್ಯಸ್ಥಾನವಾಗಿರುವ ೨) ಪೂರ್ಣವಾದ ಆನಂದ ಮಹೋತ್ಸವಗಳನ್ನು ಕೊಡುವ ಶ್ರೀಹರಿಯು ಇರುವ ಜೀವನಿಗೆ

ಇವುಗಳಿಂದೇನು ಅಥವಾ **ನಿತ್ಯಾನಂದಮಹೋದಧೇಃ** ಲ್ಯಬ್ ಲೋಪನಿಮಿತ್ತಾ ಪಂಚಮೀ **ನಿತ್ಯಾನಂದಮಹೋದಧಿಂ ವಿಹಾಯ** ಶ್ರೀಹರಿಯನ್ನು ಬಿಟ್ಟು **ತುಚ್ಛೈಃ** ಕೆಲಸಕ್ಕೆ ಬಾರದ ಈ ವಿಷಯಗಳಿಂದ ಜೀವನಿಗೇನು ಪ್ರಯೋಜನ. ಅಥವಾ ವಿಷಯಗಳ ನಶ್ವರತೆಗೆ ಕಾರಣವೇನು ಎಂದರೆ ಕಾರಣವನ್ನು ಹೇಳುವರು. **ಪೂರ್ಣಾನಂದಮಹೋದಧೇಃ** ಪೂರ್ಣಾನಂದಮಹೋದಧಿಯಾದ ಈಶ್ವರನಿಂದಲೇ ಎಂದರ್ಥ ಅಂದರೆ ಶ್ರೀಹರಿಗೆ ಸಮರ್ಪಣ ಮಾಡದಿದ್ದರೆ ಅವನೇ ವಿಘಟಕನೆಂದು ಭಾವ. ಹಾಗಾದರೆ ಸಮರ್ಪಣ ಮಾಡುವದರಿಂದ ಅನಶ್ವರಫಲಲಾಭ ನಮಗೆ ಆಗುವದಾದರೆ ಸಮರ್ಪಣದಿಂದ ಶ್ರೀಹರಿಗೆ ನೂತನಾನಂದಲಾಭವಿದೆಯೋ ಇಲ್ಲವೋ. ಇದೆ ಎಂದರೆ ಅಪೂರ್ಣನಾಗುವನು ಇಲ್ಲವೆಂದರೆ ಅವನಿಗೆ ತೃಪ್ತಿ ಇಲ್ಲದ್ದರಿಂದ ಸಮರ್ಪಣ ಮಾಡುವದು ಬೇಕಿಲ್ಲ ಎಂದರೆ ಹೇಳುವರು. ಕಿಮೇತ್ಯೈಃ ಪೂರ್ಣಾನಂದಮಹೋದಧೇಃ ಎಂದು. ಅಂದರೆ ಸ್ವಕೀಯಕರ್ತವ್ಯವೆಂದು ತನ್ನ ಉನ್ನತಿಗಾಗಿ ಎಲ್ಲವನ್ನು ಭಗವಂತನಿಗೆ ಅರ್ಪಣ ಮಾಡುವದು ಎಂದು ಭಾವ.

ವಿಶೇಷ ಃ- ಜೀವಪರ ಹೇಳಿದ ಅರ್ಥಮಾಡುವಾಗ **ಪೂರ್ಣಾನಂದಃ** ಹರಿಃ ಮಹೋದಧಿರಿವ ಮಹೋದಧಿಃ ಅಂತತಃ ಗಮ್ಯಸ್ಥಾನಂ ಯಸ್ಯ ತಸ್ಯ ಮಹೋದಧೇಃ ಆತ್ಮನಃ ಜೀವನಿಗೆ ಎಂದು ವಿಗ್ರಹ. ಮತ್ತು ಪೂರ್ಣಶ್ಚ ಪೂರ್ಣಂ ಚ ಪೂರ್ಣೇ, ಆನಂದಶ್ಚ ಮಹಶ್ಚ ಆನಂದಮಹಸಿ, ಪೂರ್ಣೇ ಆನಂದಮಹಸೀ ದದಾತೀತಿ ಪೂರ್ಣಾನಂದಮಹೋದಃ ಸಃ ಧೀಯತೇ ಅಸ್ಮಿನ್ ಇತಿ ಅಧಿಕರಣೇ ಕಿಃ ಪೂರ್ಣಾನಂದಮಹೋದಃ ಪೂರ್ಣಾನಂದಮಹೋದಧೇಃ ಆತ್ಮನ ಎಂದನ್ವಯ.

ವಿಚಾರ ಮಾಡಿದರೆ ಸರಿಯಲ್ಲವಾದ್ದರಿಂದ ದೇಹಾದಿಗಳಿಂದ ಪ್ರಯೋಜನ-ವಿಲ್ಲವೆಂದು ಹೇಳುವರು.

**ನಿರೂಪ್ಯತಾಮಿಹ ಸ್ವಾರ್ಥಃ ಕಿಯಾನ್ ದೇಹಭೃತೋಽಸುರಾಃ ।**
**ನಿಷೇಕಾದಿಷ್ವವಸ್ಥಾಸು ಕ್ಲಿಶ್ಯಮಾನಸ್ಯ ಕರ್ಮಭಿಃ ॥೪೭॥**

**ಹೇ ದೇಹಭೃತಃ** ದೇಹಧಾರಿಗಳಾದ **ಅಸುರಾಃ** ದೈತ್ಯರೇ **ನಿಷೇಕಾದಿಷು ಅವಸ್ಥಾಸು** ಗರ್ಭಾದಾನ ಮೊದಲಾದ ಮರಣಪರ್ಯಂತ ನಾನಾವಸ್ಥೆಗಳಲ್ಲಿ **ಕರ್ಮಭಿಃ** ಭಗವದ್ಭಕ್ತಿಯಿಲ್ಲದ ಕರ್ಮಗಳಿಂದ **ಕ್ಲಿಶ್ಯಮಾನಸ್ಯ** ದುಃಖಪಡುವ **ದೇಹಭೃತಃ** (ಷಷ್ಠೀ) ಜೀವನಿಗೆ **ಇಹ** ಈ ದೇಹದಲ್ಲಿ **ಸ್ವಾರ್ಥಃ** ತನ್ನ ಪ್ರಯೋಜನವಾದರೂ **ಕಿಯಾನ್** ಎಷ್ಟು **ಇತಿ** ಎಂದು **ನಿರೂಪ್ಯತಾಂ** ನಿಮ್ಮಿಂದ ಹೇಳಲ್ಪಡಲಿ. ನೀವೇ ಹೇಳಿರಿ ಎಂದರ್ಥ. ಏನೂ ಪ್ರಯೋಜನವಿಲ್ಲವೆಂದು ಭಾವ. ॥೪೭॥

ಪ್ರವಾಹವಾಗಿ ನಿಯತವಾದ ಸಂಸಾರದ ನಿವೃತ್ತಿಯು ಕಂಸಾರಿಯ ಜ್ಞಾನವಿಲ್ಲದೆ ಆಗಲಾರದು ಕಾರಣ ಅವನ ಜ್ಞಾನ ಅದಕ್ಕೆ ಕಾರಣವೆಂದು ತಿಳಿದು ಭಜಿಸುವದು ಆವಶ್ಯಕವೆಂದು ಎರಡು ಶ್ಲೋಕಗಳಿಂದ ಹೇಳುವರು.

**ಕರ್ಮಾಣ್ಯಾರಭತೇ ದೇಹೀ ದೇಹೇನಾತ್ಮಾನುವರ್ತಿನಾ ।**
**ಕರ್ಮಭಿಸ್ತನುತೇ ದೇಹಮುಭಯಂ ತ್ವವಿವೇಕತಃ ॥೪೮॥**

**ದೇಹೀ** ಜೀವನು **ಆತ್ಮಾನುವರ್ತಿನಾ** ಶ್ರೀಹರಿಯ ಅಧೀನವಾದ **ದೇಹೇನ** ದೇಹದಿಂದ **ಕರ್ಮಾಣಿ ಆರಭತೇ** ಕರ್ಮಗಳನ್ನು ಮಾಡುತ್ತೇವೆ **ಕರ್ಮಭಿಃ** ತಾನು ಮಾಡಿದ ಕರ್ಮಗಳಿಂದ **ದೇಹಂ ತನುತೇ** ಮುಂದಿನ ದೇಹಗಳನ್ನು ಸಂಪಾದಿಸಿಕೊಳ್ಳುತ್ತಾನೆ **ಉಭಯಂ ತು** ದೇಹಕರ್ಮಗಳು **ಅವಿವೇಕತಃ** ಶ್ರೀಹರಿಯ ಅಜ್ಞಾನದಿಂದ ಇರುವವು **ತು** ಎಲ್ಲರಿಗೂ ಒಂದೇ ವಿಧ ಅಜ್ಞಾನವಿಲ್ಲ. ॥೪೮॥

**ತಸ್ಮಾದರ್ಥಾಶ್ಚ ಕಾಮಾಶ್ಚ ಧರ್ಮಾಶ್ಚ ಯದಪಾಶ್ರಯಾಃ ।**
**ಭಜತಾನೀಹಯಾ ಆತ್ಮಾನಮನೀಹಂ ಹರಿಮೀಶ್ವರಮ್ ॥೪೯॥**

**ತಸ್ಮಾತ್** ಶ್ರೀಹರಿಯ ಜ್ಞಾನದಿಂದಲೇ ಮೋಕ್ಷವಾದ್ದರಿಂದ **ಅರ್ಥಾಃ ಚ ಕಾಮಾಃ ಚ ಧರ್ಮಾಃ ಚ** ಅರ್ಥ, ಕಾಮ, ಧರ್ಮಗಳು **ಯದಪಾಶ್ರಯಾಃ** ಯಾವ ಶ್ರೀಹರಿಯಿಂದಲೇ ಕೊಡಲ್ಪಟ್ಟಿರುವವೋ **ತಂ** ಅಂತಹ **ಅನೀಹಂ** ಕ್ಲೇಶವಿಲ್ಲದೆ ಜಗತ್ಸ್ರಷ್ಟ್ಯಾದಿಗಳನ್ನು ಮಾಡುವ **ಈಶ್ವರಂ** ನಿಯಾಮಕಶ್ರೇಷ್ಠನಾದ **ಆತ್ಮಾನಂ** ಸ್ವಾಮಿಯಾದ **ಹರಿಂ** ಶ್ರೀಹರಿಯನ್ನು **ಅನೀಹಯಾ** ಯಾವ ಫಲಾಪೇಕ್ಷೆಯೂ ಇಲ್ಲದೇ **ಭಜತ** ಸೇವಿಸಿರಿ.

ಈ ಶ್ಲೋಕದಲ್ಲಿ ಸರ್ವಕರ್ತೃವಾದ ಲೋಕೇಶ್ವರನಿಗೆ 'ಅನೀಹಂ' ಎಂದು ಯಾವ ಚೇಷ್ಟೆ ಇಲ್ಲವೆಂದು ಹೇಳುವದು ಎಂಬ ಅಪಾರ್ಥವನ್ನು ಪ್ರಮಾಣದಿಂದ ಪರಿಹರಿಸುವರು.

**ತಾತ್ಪರ್ಯ :- ಅಪ್ರಯತ್ನೇನ ಕರಣಮನೀಹಾ ಪ್ರೋಚ್ಯತೇ ಬುಧೈಃ ।**

ಪ್ರಯತ್ನವಿಲ್ಲದೇ(ಪ್ರಯಾಸವಿಲ್ಲದೆ) ಮಾಡುವ ಕ್ರಿಯೆಗೆ ಅನೀಹಾ ಎಂದು ಜ್ಞಾನಿಗಳು ಕರೆಯುವರು ಎಂದು ಭಾವ. 'ಬುಧೈಃ ಪ್ರೋಚ್ಯತೇ' ಎಂದು ಹೇಳಿದ್ದರಿಂದ ಈ ಮಾತು ಪಾಮರರದಲ್ಲ, ಒಬ್ಬ ವಿವೇಕಿಯದೂ ಅಲ್ಲ, ನಾಲಿಗೆ ಮೇಲಿನದೂ ಅಲ್ಲ ಎಂದು ತಿಳಿಸಿರುವರು. ಅಕ್ಲಿಷ್ಟಕಾರಿಯಾದ್ದರಿಂದಲೂ ಅನೀಹನೆನ್ನುವರು. ಶ್ರೀಹರಿಗೆ 'ಅನೀಹೋ ಅಕ್ಲಿಷ್ಟಕಾರಿತ್ವಾತ್' ಎಂದು ಬೇರೆ ಕಡೆಗೆ ಹೇಳಿದೆ. ॥೪೯॥

ಶ್ರೀಹರಿಯನ್ನೇ ಭಜಿಸಲು ಕಾರಣವನ್ನು ಹೇಳುತ್ತಾರೆ

**ಸರ್ವೇಷಾಮಪಿ ಭೂತಾನಾಂ ಹರಿರಾತ್ಮೇಶ್ವರಃ ಪ್ರಿಯಃ ।**
**ಭೂತೈರ್ಮಹದ್ಭಿಃ ಸ್ವಕೃತೈಃ ಕೃತಾನಾಂ ಬೀಜಸಂಜ್ಞಿತಃ ॥೫೦॥**

**ಸ್ವಕೃತೈಃ** ತನ್ನಿಂದ ಸೃಷ್ಟವಾದ **ಮಹದ್ಭಿಃ ಭೂತೈಃ** ಪಂಚಮಹಾಭೂತಗಳಿಂದ **ಕೃತಾನಾಂ** ನಿರ್ಮಿತವಾದ **ಭೂತಾನಾಂ** ಸ್ಥೂಲದೇಹವುಳ್ಳ ಜೀವರಿಗೆ **ಬೀಜಸಂಜ್ಞಿತಃ** ವ್ಯಂಜಕನಾದ್ದರಿಂದ ಬೀಜನೆಂದು ಕರಿಸಿಕೊಳ್ಳುವ ಶ್ರೀಹರಿಯು **ಸರ್ವೇಷಾಂ ಅಪಿ** ಎಲ್ಲ ಜೀವರಿಗೂ **ಆತ್ಮಾ** ಅಂತರ್ಯಾಮಿಯು **ಪ್ರಿಯಃ** ಪ್ರಿಯಕರನು **ಈಶ್ವರಃ** ನಿಯಾಮಕನು.

ಈ ಶ್ಲೋಕವು ಪರಮಾತ್ಮನು ಬೀಜವೆಂದು ಹೇಳುತ್ತದೆ. ಆದ್ದರಿಂದ ಅವನು ಪರಿಣಾಮಿಕಾರಣ(ಉಪಾದಾನ) ಎಂದು ತಿಳಿದು ಬರುವದು. ಅದನ್ನು ಸಬೀಜವಾಗಿ (ಕಾರಣ ಸಹಿತವಾಗಿ) ಬೀಜ ಪದಾರ್ಥವನ್ನು ಪ್ರಮಾಣದಿಂದ ಹೇಳಿ ಪರಿಹರಿಸುವರು.

**... ತಾತ್ಪರ್ಯ ...**

**ವ್ಯಂಜನಾತ್ ಜಗತೋ ವಿಷ್ಣುರ್ಬೀಜಂ ನ ಪರಿಣಾಮತಃ ॥ಇತಿ ಚ॥**

ತನ್ನ ಉಪಾದಾನದಿಂದ ಹುಟ್ಟುವ ಜಗತ್ತಿಗೆ ವ್ಯಕ್ತಿಯನ್ನು ಹೊಂದಿಸುವದರಿಂದ ಭಗವಂತನು ಬೀಜನೆನಿಸುವನು ಹೊರತು ವಿಕೃತನಾದ್ದರಿಂದ ಅಲ್ಲ. ಮೂಲದಲ್ಲಿಯ ಸಂಜ್ಞಾಪದವು ಬೀಜನೆಂದು ಕರೆಯುವದೇ ಹೊರತು ಪ್ರಸಿದ್ಧ ಬೀಜದಂತೆ ವಸ್ತುತಃ ಉಪಾದನನಲ್ಲವೆಂದು ಸೂಚಿಸುತ್ತ ಈ ಪ್ರಮಾಣ ಸೂಚಿಸಿರುವರು. ॥೫೦॥

ಹೀನ ಜಾತಿಯಲ್ಲಿ ಹುಟ್ಟಿದ ನಮಗೆ ಅವನಿಂದ ಮೋಕ್ಷವಾಗುವದೇ ಎಂದರೆ ಜಾತಿಯು ಮುಖ್ಯವಲ್ಲವೆಂದು ಹೇಳುತ್ತಾರೆ.

**ದೇವೋಽಸುರೋ ಮನುಷ್ಯೋ ವಾ ಯಕ್ಷೋ ಗಂಧರ್ವಃ ಏವ ವಾ ।**
**ಭಜನ್ ಮುಕುಂದಚರಣಂ ಸ್ವಸ್ತಿಮಾನ್ ಸ್ಯಾದ್ ಯಥಾ ವಯಮ್॥೫೧॥**

**ವಯಂ** ನಾವು (ಪ್ರಹ್ಲಾದರು) **ಯಥಾ** ಹೇಗೆ ಕ್ಷೇಮವುಳ್ಳವರಾದೆವೋ **ತಥಾ** ಹಾಗೆ **ದೇವಃ** ದೇವತೆಯಾಗಲಿ **ಅಸುರಃ** ಅಸುರನಾಗಲಿ **ಮನುಷ್ಯಃ** ಮನುಷ್ಯನಾಗಲಿ **ಯಕ್ಷಃ** ಯಕ್ಷನಾಗಲಿ **ಗಂಧರ್ವಃ ಏವ ಚ** ಗಂಧರ್ವನೇ ಆಗಲಿ **ಮುಕುಂದಚರಣಂ** ಮೋಕ್ಷಪ್ರದನಾದ ಶ್ರೀಹರಿಯ ಪಾದವನ್ನು **ಭಜನ್** ನನ್ನಂತೆ ಭಕ್ತಿಯಿಂದ ಸೇವಿಸುತ್ತ, **ಸ್ವಸ್ತಿಮಾನ್ ಸ್ಯಾತ್** ಶಾಶ್ವತ ಸತ್ತೆ ಉಳ್ಳವನಾಗುವನು ಮುಕ್ತನಾಗುವನು ಅದಕ್ಕೆ ಸೂಚಕವಾದ ಐಹಿಕ ಕ್ಷೇಮವುಳ್ಳವನೂ ಆಗುವನು. ॥೫೧॥

ಬಹಳ ಜನರು ಆದರಲ್ಲಿಯೂ ಚಂಚಲಮನಸ್ಸಿನ ಹುಡುಗರಿಗೆ ಸಾಮೂಹಿಕವಾಗಿ ಹೇಳಿದಲ್ಲಿ ಸ್ಥೈರ್ಯ ಬರುವದಿಲ್ಲ ಮತ್ತು 'ನನ್ನ ಮುಖ ನೋಡಿ ಹೇಳಲಿಲ್ಲ ಇವನು ಎಂದು ಕೋಪವೂ ಬರುವದು ಆದ್ದರಿಂದ ಹೇಳಿದ್ದನ್ನೇ ಮತ್ತೆ ಹೇಳುವರು.

**ನಾಲಂ ದ್ವಿಜತ್ವಂ ದೇವತ್ವಮೃಷಿತ್ವಂ ವಾಽಸುರಾತ್ಮಜಾಃ ।**
**ಪ್ರೀಣನಾಯ ಮುಕುಂದಸ್ಯ ನ ವೃತ್ತಂ ನ ಬಹುಜ್ಞತಾ ॥೫೨॥**

**ಹೇ ಅಸುರಾತ್ಮಜಾಃ** ದೈತ್ಯಬಾಲಕರೇ **ಮುಕುಂದಸ್ಯ ಪ್ರೀಣನಾಯ** ಶ್ರೀಹರಿಯನ್ನು ಸಂತೋಷಪಡಿಸಲು **ದ್ವಿಜತ್ವಂ** ಬ್ರಾಹ್ಮಣ್ಯ ಮಾತ್ರವಿದ್ದರೆ **ನಾಲಂ** ಸಾಲದು **ದೇವತ್ವಂ** ದೇವತೆಯಾಗಿರುವದು **ಋಷಿತ್ವಂ** ಸದಾಚಾರ ಮಾತ್ರ **ನಾಲಂ** ಸಾಲದು **ಬಹುಜ್ಞತಾ** ಬಹಳ ಶಾಸ್ತ್ರಗಳನ್ನು ತಿಳಿಯುವದು **ನಾಲಂ** ಸಾಲದು ಇವುಗಳ ಜೊತೆಗೆ ಭಕ್ತಿಯು ಇರಬೇಕೆಂದು ಭಾವ. ॥೫೨॥

**ನ ದಾನಂ ನ ತಪೋ ನೇಜ್ಯಾ ನ ಶೌಚಂ ನ ವ್ರತಾನಿ ಚ ।**
**ಪ್ರೀಯತೇಽಮಲಯಾ ಭಕ್ತ್ಯಾ ಹರಿರನ್ಯದ್ವಿಡಂಬನಮ್ ॥೫೩॥**

**ನ ದಾನಂ** ದಾನಮಾತ್ರಸಾಲದು **ನ ತಪಃ** ತಪಸ್ಸು ಸಾಲದು **ನ ಇಜ್ಯಾ** ಯಜ್ಞಾದಿಗಳು ಸಾಲವು **ನ ಶೌಚಂ** ಬಾಹ್ಯಂತರ ಶೌಚಗಳು ಮಾತ್ರ ಸಾಲವು **ಚ** ಮತ್ತು **ವ್ರತಾನಿ** ವ್ರತಗಳು ಸಾಲವು **ಹರಿಃ** ಶ್ರೀಹರಿಯು **ಅಮಲಯಾ** ನಿರ್ಮಲವಾದ **ಭಕ್ತ್ಯಾ** ಭಕ್ತಿಯಿಂದ **ಪ್ರೀಯತೇ** ಪ್ರೀತನಾಗುವನು **ಅನ್ಯತ್** ಭಕ್ತಿಯಿಲ್ಲದ ಇವೆಲ್ಲವು **ವಿಡಂಬನಂ** ಹರಿಪ್ರೀತಿ ಜನಕಗಳಂತೆ ಕಾಣುವವು ಆದರೆ ಹರಿಪ್ರೀತಿಜನಕವಲ್ಲ ಆದ್ದರಿಂದ ಫಲದೊರೆಯದು. ॥೫೩॥

ಮತ್ತೆ ಭಕ್ತಿಯನ್ನೇ ವಿಧಾನ ಮಾಡುತ್ತಾರೆ

**ತತೋ ಹರೌ ಭಗವತಿ ಭಕ್ತಿಂ ಕುರುತ ದಾನವಾಃ ।**
**ಆತ್ಮೌಪಮ್ಯೇನ ಸರ್ವತ್ರ ಸರ್ವಭೂತಾತ್ಮನೀಶ್ವರೇ ॥೫೪॥**

**ತತಃ** ಭಕ್ತಿಯಿಲ್ಲದೆ ಇವೆಲ್ಲವೂ ನಿಷ್ಫಲಗಳಾದ್ದರಿಂದ **ಹೇ ದಾನವಾಃ** ದಾನವರೆ **ಆತ್ಮೌಪಮ್ಯೇನ** ೧) ನನ್ನ ದೃಷ್ಟಾಂತದಿಂದ ೨) ನಿಮ್ಮಯೋಗ್ಯತೆಗೆ ತಕ್ಕಂತೆ ೩) ನಿಮ್ಮ ದೇಹದಲ್ಲಿ ನೀವು ಸ್ನೇಹಮಾಡುವಂತೆ **ಸರ್ವತ್ರ,** ಎಲ್ಲ ಅವಸ್ಥೆಗಳಲ್ಲಿಯೂ **ಸರ್ವಭೂತಾತ್ಮನಿ** ಎಲ್ಲರ ಅಂತರ್ಯಾಮಿಯಾದ ಎಲ್ಲರಲ್ಲಿಯೂ ಸನ್ನಿಹಿತನಾದ **ಈಶ್ವರೇ** ಸ್ವಾಮಿಯಾದ **ಭಗವತಿ** ಸಮಗ್ರ ಐಶ್ವರ್ಯಸಂಪನ್ನನಾದ ಶ್ರೀಹರಿಯಲ್ಲಿ **ಭಕ್ತಿಂ ಕುರುತ** ಭಕ್ತಿಯನ್ನು ಮಾಡಿರಿ. ॥೫೪॥

ಜಾತಿಯು ಮುಖ್ಯವಲ್ಲವೆಂದು ಹೇಳುತ್ತ ಭಕ್ತಿವಂತರಾದ ಬೇರೆ ಬೇರೆ ಜಾತಿಯವರು ಮುಕ್ತಿಗೆ ಹೋದರೆಂದು ಹೇಳುತ್ತಾರೆ.

**ದೈತೇಯಾ ಯಕ್ಷರಕ್ಷಾಂಸಿ ಸ್ತ್ರಿಯಃ ಶೂದ್ರಾ ವ್ರಜೌಕಸಃ ।**
**ಖಗಾ ಮೃಗಾ ಪಾಪಜೀವಾ ಸಂತಿ ಹ್ಯಚ್ಯುತತಾಂ ಗತಾಃ ॥೫೫॥**

**ದೈತೇಯಾಃ** ಶಿಶುಪಾಲ ಮೊದಲಾದವರು(ದೈತ್ಯರು)**ಯಕ್ಷರಕ್ಷಾಂಸಿ** ನಲಕೂಬರಮಣೀಗ್ರೀವ ಮೊದಲಾದ ಯಕ್ಷರು, ಊರ್ವಶಿ ಆವಿಷ್ಟಳಾದ ಪೂತನಾ ಮೊದಲಾದ ರಾಕ್ಷಸರು **ಸ್ತ್ರಿಯಃ** ಗೋಪಿಕಾಸ್ತ್ರೀಯರು **ಶೂದ್ರಾಃ** ವಿದುರ ಹಿಡಂಬಿ ಘಟೋತ್ಕಚ ಮೊದಲಾದ ಶೂದ್ರರು **ವ್ರಜೌಕಸಃ** ಗೋಪಾಲಕರು **ಖಗಾಃ** ಜರಿತಾರಿ ಮೊದಲಾದ ಹಕ್ಕಿಗಳು **ಮೃಗಾಃ** ಪಶುಗಳು **ಪಾಪಜೀವಾಃ** ನಾಶವಿಲ್ಲದ ಮೋಕ್ಷವನ್ನು **ಗತಾಃ** ಹೊಂದಿದವರು **ಸಂತಿ** ಇರುವರು. **ಹಿ** ಆದ ಕಾರಣ ಭಕ್ತಿಯನ್ನು (**ಕುರುತ** ಮಾಡಿರಿ. ಎಂದು ಹಿಂದಕ್ಕೆ ಅನ್ವಯ)

ವಿಶೇಷ ಃ- 'ಪಾಪಜೀವಾ' ಎಂದರೆ ನಿಷಿದ್ಧಕರ್ಮ ಮಾಡಿದ ಓತಿಕಾಟ (ಕೃಕಲಾಸ ದೇಹ ಪಡೆದ ನೃಗಚಕ್ರವರ್ತಿ) ಎಂದು ಅರ್ಥಮಾಡಿರುವರು.

ಈ ಶ್ಲೋಕದಲ್ಲಿ 'ಅಚ್ಯುತತಾಂ ಗತಾಃ' ಎಂಬುದಕ್ಕೆ ಭಗವಂತನೇ ಆದನೆಂದು ಅರ್ಥ ತೋರುವದು ಅದನ್ನು ನಿರಾಕರಿಸಲು ವ್ಯಾಖ್ಯಾನಿಸುವರು.

**... ತಾತ್ಪರ್ಯ ...**

**ಅಚ್ಯುತತಾಂ ಚ್ಯುತಿವರ್ಜನಂ ।**

ಚ್ಯುತಿಯಿಲ್ಲದ ಮೋಕ್ಷವನ್ನು ಎಂದರ್ಥ ಹೊರತು ವಿಷ್ಣುತಾದಾತ್ಮ್ಯವೆಂದಲ್ಲ ನ ಚ್ಯುತಾ ಅಚ್ಯುತಾಃ ತೇಷಾಂ ಭಾವಃ ಅಚ್ಯುತತಾ ॥೫೫॥

**ಏತಾವಾನೇವ ಲೋಕೇಽಸ್ಮಿನ್ ಪುಂಸಾಂ ಸ್ವಾರ್ಥಃ ಪರಃ ಸ್ಮೃತಃ ।**
**ಏಕಾಂತಭಕ್ತಿರ್ಗೋವಿಂದೇ ಯತ್ ಸರ್ವತ್ರ ತದೀಕ್ಷಣಮ್ ॥೫೬॥**

**ಗೋವಿಂದೇ** ವೇದಪ್ರತಿಪಾದ್ಯನಾದ ಶ್ರೀಹರಿಯಲ್ಲಿ **ಏಕಾಂತಭಕ್ತಿಃ** ಫಲಾಪೇಕ್ಷೆ ಇಲ್ಲದ ಭಕ್ತಿಯು **ಸರ್ವತ್ರ** ಎಲ್ಲರಲ್ಲಿಯೂ **ತದೀಕ್ಷಣಂ** ಎಲ್ಲಕ್ಕೂ ಸತ್ತಾಪ್ರದನಾಗಿ ಇರುವನೆಂದು ತಿಳಿಯುವದು **ಇತಿ ಯತ್** ಎಂಬುದೇನುಂಟೋ **ಏತಾವಾನೇವ** ಇದಿಷ್ಟೇ **ಅಸ್ಮಿನ್ ಲೋಕೇ** ಈ ಲೋಕದಲ್ಲಿ **ಪುಂಸಾಂ** ಅಧಿಕಾರಿಗಳಿಗೆ **ಪರಃ** ಅತ್ಯುತ್ತಮವಾದ **ಸ್ವಾರ್ಥಃ** ಸತ್ಪ್ರಯೋಜನವು **ಸ್ಮೃತಃ** ಶಾಸ್ತ್ರದಲ್ಲಿ ಹೇಳಲ್ಪಟ್ಟಿರುವದು.

ವಿಶೇಷ :- 'ಶುನಿ ಚೈವ ಶ್ವಪಾಕೇ ಚ ಪಂಡಿತಾ ಸಮದರ್ಶಿನಃ । ಎಂದು ಗೀತೆಯಲ್ಲಿ ಹೇಳಿದೆ. ಇಲ್ಲಿ 'ಏಕಾಂತ ಭಕ್ತಿ ಗೋವಿಂದ' ಎಂಬುದರಿಂದ ಮೂಲರೂಪ ಅವತಾರರೂಪಗಳಿಗೆ ವ್ಯತ್ಯಾಸ ತಿಳಿಯುವವರನ್ನು ನಿರಾಕರಿಸಿರುವರು. 'ಅವಿರೋಧೇನ ಗೋವಿಂದೇ ಸಂತ್ಯಸ್ಥೂಲಾದಿಕಾನಿ ಚ' ಎಂಬ ಅನುವ್ಯಾಖ್ಯಾನದಲ್ಲಿ ಮೂಲರೂಪದ ಅಣುತ್ವಮಹತ್ವ ಏಕಕಾಲದಲ್ಲಿ ಇವೆ ಎಂಬ ವಿಷಯದಲ್ಲಿ ಗೋವಿಂದೇ ಎಂದದ್ದರಿಂದ ಯಶೋದಾ ಪ್ರತ್ಯಕ್ಷಪ್ರಮಾಣವೆಂದು ಹೇಳಿದಂತಾಯಿತು ಎಂದಿದ್ದಾರೆ. ।।೫೬।।

॥ ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ಸಪ್ತಮೋಽಧ್ಯಾಯಃ ॥

॥ ಶ್ರೀಕೃಷ್ಣಾರ್ಪಣಮಸ್ತು ॥

★★★



# ಅಥ ಅಷ್ಟಮೋಽಧ್ಯಾಯಃ

**ಸಾರಾಂಶ**

ದೈತ್ಯಬಾಲಕರು ಪ್ರಹ್ಲಾದನ ಉಪದೇಶವನ್ನು ಕೇಳಿ ಅದನ್ನೇ ಅನುಷ್ಠಾನಮಾಡತೊಡಗಿದರು. ಇದನ್ನು ತಿಳಿದ ಹಿರಣ್ಯಕಶಿಪು ಮತ್ತೆ ಮಗನನ್ನು ಕೊಲ್ಲಲು ತೀರ್ಮಾನಿಸಿದ. ವಿನಯದಿಂದ ಕೈ ಮುಗಿದು ನಿಂತ ಪ್ರಹ್ಲಾದನನ್ನು ಹಿರಣ್ಯಕಶಿಪು ಮತ್ತೆ ನನ್ನ ಆಜ್ಞೆಯನ್ನು ಉಲ್ಲಂಘಿಸಿದೆಯಾ ಎಂದು ಜೋರಾಗಿ ಕಿರುಚಿದ. ಪ್ರಹ್ಲಾದ ಹೇಳುತ್ತಾನೆ. 'ಎಲ್ಲರಿಗೂ ಬಲ ನೀಡುವವನು ಭಗವಂತ. ಅವನು ಸರ್ವಶಕ್ತ ನಿನ್ನ ಈ ಆಸುರೀ ಬುದ್ಧಿಯನ್ನು ಬಿಟ್ಟು ಎಲ್ಲರಲ್ಲಿ ಆ ಭಗವಂತನನ್ನು ಕಾಣು' ಎಂದು. ಈ ಮಾತನ್ನು ಕೇಳಿ ಹಿರಣ್ಯಕಶಿಪು ಹೇಳಿದ. ಮೂರ್ಖ ನನ್ನ ಮುಂದೆ ನನ್ನ ಶತ್ರುವನ್ನು ಮಿತಿಮೀರಿ ಹೋಗಳುತ್ತಿರುವ ನಿನ್ನ ಈ ಬಂಡ ಬುದ್ಧಿಯನ್ನು ಕಂಡರೆ ನನ್ನ ಕೈಯಿಂದ ಸಾಯಲು ಬಯಸುತ್ತಿರುವೆ ಎಂದು ನನಗೆ ಸ್ಪಷ್ಟವಾಗುತ್ತಿದೆ. ಹೇಳು ನನಗಿಂತ ಬೇರೆ ಮತ್ತೊಬ್ಬ ಜಗದೀಶ್ವರ ಎಲ್ಲಿ ಇದ್ದಾನೆ ? ಎಲ್ಲ ಕಡೆ ಅವನಿರುವದಾದರೆ ಈ ಕಂಬದಲ್ಲಿ ಏಕೆ ಕಾಣುಸುತ್ತಿಲ್ಲ ? ಹೀಗೆ ಹೇಳುತ್ತ ಹಿರಣ್ಯಕಶಿಪು ಖಡ್ಗ ಹಿಡಿದು ಸಿಂಹಾಸನದಿಂದ ಮೇಲೆ ಹಾರಿ ಮುಷ್ಠಿಯಿಂದ ಕಂಬವನ್ನು ಹೊಡೆದ. ಆಗ ಕಂಬದೊಳಗಿನಿಂದ ಬ್ರಹ್ಮಾಂಡ ಕಟಾಹವನ್ನು ಭೇದಿಸುವಂತಹ ಅತಿ ಭಯಂಕರವಾದ ಶಬ್ದ ಉಂಟಾಯಿತು. ಭಗವಂತ ಬ್ರಹ್ಮದೇವರ ವರವನ್ನು ಸತ್ಯಮಾಡುವದಕ್ಕಾಗಿ ಅತ್ಯದ್ಭುತವಾದ ನರಸಿಂಹರೂಪವನ್ನು ಸ್ತಂಭದಲ್ಲಿ ವ್ಯಕ್ತಮಾಡಿದ. ಕಂಬದಿಂದ ಪ್ರಾದುರ್ಭವಿಸಿದ ನರಸಿಂಹದೇವರು ಸ್ವಲ್ಪ ಹೊತ್ತು ಅವನೊಡನೆ ಚೇಷ್ಟೆ ಮಾಡಿದಂತೆ ಯುದ್ಧವನ್ನು ಮಾಡಿ ಭಯಾನಕವಾದ ಅಟ್ಟಹಾಸವನ್ನು ಮಾಡುತ್ತ ಆತನನ್ನು ಸಂಧ್ಯಾಕಾಲದಲ್ಲಿ ಹೊಸ್ತಿಲ ಮೇಲೆ ತೊಡೆಯಲ್ಲಿ ಹಾಕಿಕೊಂಡರು. ಆ ಹಿರಣ್ಯಕಶಿಪುವಿನ ಉದರವನ್ನು ಸೀಳಿ ಕರಳನ್ನು ತೆಗೆದು ಮಾಲೆಯಾಗಿ ಧರಿಸಿ ಸಿಂಹಾಸನದಲ್ಲಿ ಕುಳಿತರು. ಕೋಪಗ್ರಸ್ಥವಾದ ನರಸಿಂಹದೇವರ ಮುಖವನ್ನು ನೋಡಲು ಯಾರೂ ಧೈರ್ಯಮಾಡಲಿಲ್ಲ. ದೇವತೆಗಳೆಲ್ಲ ಪುಷ್ಪವೃಷ್ಟಿ

ಮಾಡಿದರು. ನಂತರ ಬ್ರಹ್ಮಾದಿದೇವತೆಗಳು ಒಬ್ಬೊಬ್ಬರಾಗಿ ಸ್ತೋತ್ರಮಾಡಿದರು. ಋಷಿಗಳು ಪಿತೃಗಳು ಸಿದ್ಧರು ವಿದ್ಯಾಧರರು ನಾಗರು, ಯಕ್ಷರು, ಕಿನ್ನರು ಗಂಧರ್ವರು ಇತ್ಯಾದಿಯಾಗಿ ಅನೇಕ ಬುದ್ಧಿಜೀವಿಗಳು ನರಸಿಂಹದೇವರನ್ನು ಸ್ತುತಿಸತೊಡಗಿದರು.

★★★

ಭಗವಂತನಲ್ಲಿ ಭಕ್ತಿ ಮಾಡಬೇಕೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದೆ. ಶ್ರೀಹರಿಯೂ ಕೂಡ ನಮ್ಮಂತೆ ಜನನಾದಿಗಳುಳ್ಳವನೆಂದಾದರೆ ನಿರತಿಶಯ ಭಕ್ತಿಯುಂಟಾಗಲಾರದು ಆದ ಕಾರಣ ಶ್ರೀನೃಸಿಂಹದೇವರ ಪ್ರಾದುರ್ಭಾವವನ್ನು ಅದರ ದೃಷ್ಟಾಂತದಿಂದ ಎಲ್ಲ ಭಗವದ್ರೂಪಗಳು ಹೀಗೆಯೆ. ಎಂಬುದನ್ನು ತಿಳಿಸಲು, ದೈತ್ಯಪುತ್ರರು ಪ್ರಹ್ಲಾದ ಹೇಳಿದ್ದನ್ನು ಆಹ್ಲಾದದಿಂದ ಮಾಡಿದರೋ ಮಾಡಲಿಲ್ಲವೋ ಎಂಬ ಧರ್ಮರಾಜನ ಶಂಕೆಯನ್ನು ಪರಿಹರಿಸುವರು.

ಪ್ರಹ್ಲಾದನನ್ನು ರಕ್ಷಿಸಲು ನರಸಿಂಹದೇವರು ಅವತರಿಸಿದರೆಂದು ಹೇಳುವರು ಈ ಮುಂದಿನ ಚರಿತ್ರೆಯು ವೈರಾಗ್ಯವೇ ಮೊದಲಾದ ಅಂಗೋಪಾಂಗಗಳಿಂದ ಮನೋಹರಳಾದ ಭಕ್ತಿಯೆಂಬ ಸುಂದರಿಯ ಸುಂದರವಾದ ಅವಯವಗಳ ಸನ್ನಿವೇಶ ಪರಮಪುರುಷಾರ್ಥಸಾಧನವು ಎಂಬ ವಿಷಯವನ್ನು ಸದೃಷ್ಟಾಂತವಾಗಿ ತಿಳಿಸಲು ನರಸಿಂಹಾವತಾರವನ್ನು ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ. ಮೊದಲಿಗೆ ಧರ್ಮರಾಜನ ಶಂಕೆಯನ್ನು ಪರಿಹರಿಸುತ್ತಾರೆ.

**ನಾರದ ಉವಾಚ**

**ಅಥ ದೈತ್ಯಸುತಾಃ ಸರ್ವೇ ಶ್ರುತ್ವಾ ತದನುವರ್ಣಿತಮ್ ।**
**ಜಗೃಹುರ್ನಿರವದ್ಯತ್ವಾನ್ನೈವ ಗುರ್ವನುಶಿಕ್ಷಿತಮ್** ॥೧॥

**ಅಥ** ಅನಂತರ **ಸರ್ವೇ ದೈತ್ಯಸುತಾಃ** ಎಲ್ಲ ದೈತ್ಯಬಾಲಕರು **ನಿರವದ್ಯತ್ವಾತ್** ತಾವು ಪ್ರಹ್ಲಾದ ಹೇಳಿದ್ದನ್ನು ಸ್ವೀಕರಿಸಿಲು ಕಾರಣವಾದ ದೋಷರಹಿತರಾದ್ದರಿಂದ ಮತ್ತು ಪ್ರಹ್ಲಾದನು ಹೇಳಿದ ವಿಷಯವು ದೋಷರಹಿತವಾದ್ದರಿಂದ **ತದನುವರ್ಣಿತಂ** ಪ್ರಹ್ಲಾದನು ಹೇಳಿದ್ದನ್ನು **ಶ್ರುತ್ವಾ** ಕೇಳಿ **ಜಗೃಹುಃ** ಸ್ವೀಕರಿಸಿದರು **ಗುರ್ವನುಶಿಕ್ಷಿತಂ** ಗುರುಗಳು ಹೇಳಿದ್ದನ್ನು **ನಿರವದ್ಯತ್ವಾತ್** ನಿತರಾಂ ಅವಧ್ಯತ್ವಾತ್ ಬಹಳ ದೋಷವುಳ್ಳದ್ದಾದ್ದರಿಂದ **ನೈವ ಜಗೃಹುಃ** ಸ್ವೀಕರಿಸಲಿಲ್ಲ. ॥೧॥

**ಅಥಾಚಾರ್ಯಸುತಸ್ತೇಷಾಂ ಬುದ್ಧಿಮೇಕಾಂತಸಂಸ್ಥಿತಾಮ್ ।**
**ಆಲಕ್ಷ್ಯ ಭೀತಸ್ತ್ವರಿತೋ ರಾಜ್ಞ ಆವೇದಯದ್ ಯಥಾ** ॥೨॥

**ಅಥ** ಅನಂತರ **ಆಚಾರ್ಯಸುತಃ** ಶುಕ್ರಾಚಾರ್ಯರ ಮಕ್ಕಳಾದ ಶಂಡಾಮರ್ಕರು **ತೇಷಾಂ** ದೈತ್ಯಬಾಲಕರ **ಏಕಾಂತಸಂಸ್ಥಿತಾಂ** ಕೊನೆಗೆ ಒಬ್ಬನೇ ಉಳಿಯುವವನಾದ್ದರಿಂದ ಏಕಾಂತ ಎಂದರೆ ಲಕ್ಷ್ಮೀಕಾಂತನು ಅವನಲ್ಲಿ ಸ್ಥಿರವಾಗಿರುವ ಅಥವಾ ನಿರ್ಣಯದಲ್ಲಿರುವ (ಅಂತ ಎಂದರೆ ನಿರ್ಣಯ ಎಂದರ್ಥ. ಈ ಅರ್ಥವನ್ನು 'ಉಭಯೋರಪಿ ದೃಷ್ಟೋಽಂತಃ' ಎಂಬ ಗೀತೆಗೆ ಭಾಷ್ಯ ಬರೆಯುವಾಗ ಆಚಾರ್ಯರು ಹೇಳಿರುತ್ತಾರೆ.) ಅಥವಾ ತಮ್ಮ ಸಮೂಹದಲ್ಲಿಯೇ ಇರುವ ಈಗ ಪಕ್ವವಾದ **ತೇಷಾಂ** ಅವರ **ಬುದ್ಧಿಂ** ಬುದ್ಧಿಯನ್ನು **ಯಥಾ** ಯಥಾವತ್ತಾಗಿ ಅಥವಾ ಪ್ರಹ್ಲಾದನು ಹೇಳಿದಂತೆ ಗ್ರಹಿಸಿರುವದನ್ನು **ಆಲಕ್ಷ್ಯ** ನೋಡಿ **ರಾಜ್ಞಃ ಭೀತಃ** ಹಿರಣ್ಯಕಶಿಪುವಿಗೆ ಹೆದರಿ **ತ್ವರಿತಃ** ಜಾಗರುಕತೆಯಿಂದ **ರಾಜ್ಞಃ (ರಾಜ್ಞೇ) ಆವೇದಯತ್** ರಾಜನಿಗೆ ಇದ್ದ ಸ್ಥಿತಿಯನ್ನು ತಿಳಿಸಿದರು. ।।೨।।

**ಶ್ರುತ್ವಾ ತದಪ್ರಿಯಂ ದೈತ್ಯೋ ದುಸ್ಸಹಂ ತನಯಾನಯಮ್ ।**
**ಕೋಪಾವೇಶಚಲದ್ಗಾತ್ರಃ ಪುತ್ರಂ ಹಂತುಂ ಮನೋ ದಧೇ ।।೩।।**

**ದೈತ್ಯಃ** ಹಿರಣ್ಯಕಶಿಪುವು **ಅಪ್ರಿಯಂ** ತನಗೆ ಪ್ರಿಯವಲ್ಲದ ಆದ್ದರಿಂದಲೇ **ದುಸ್ಸಹಂ** ತನ್ನಿಂದ ಸಹಿಸಲಾಗದ **ತನಯಾನಯಂ** ತನ್ನ ಸಿದ್ಧಾಂತಕ್ಕೆ ವಿರುದ್ಧವಾದ ಸಿದ್ಧಾಂತದಲ್ಲಿರುವದೆಂಬ ಮಗನ ಅವಿನಯವನ್ನು **ಶ್ರುತ್ವಾ** ಕೇಳಿ **ಕೋಪಾವೇಶಚಲದ್ಗಾತ್ರಃ** ಕೋಪದ ಭರದಿಂದ ಚಲಿಸುವ ಶರೀರವುಳ್ಳವನಾಗಿ **ಪುತ್ರಂ** ಮಗನನ್ನು **ಹಂತುಂ** ಕೊಲ್ಲಲು **ಮನಃ ದಧೇ** ಮನಸ್ಸು ಮಾಡಿದನು.

ವಿಶೇಷ :- ತನಾಯನಯವನ್ನು ಕೇಳಿ ತನಯನನ್ನು ಕೊಲ್ಲಲು ಎನ್ನದೆ ಪುತ್ರನನ್ನು ಎಂದು ಹೇಳಿದ್ದರಿಂದ ಪುನ್ನಾಮಕನರಕದಿಂದ ರಕ್ಷಕನಾರೋ ಅವನು ಪುತ್ರನೆಂದಿರವದರಿಂದ 'ವಿವಕ್ಷರತ್ಯಾಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವಃ' ಎಂದು ಮುಂದಿರುವದರಿಂದ ತನ್ನ ತಾರಕನು ಎಂದು ವ್ಯಾಸರು ಸೂಚಿಸಿರುವರು.

**ಕ್ಷಿಪ್ತ್ವಾ ಪರುಷಯಾ ವಾಚಾ ಪ್ರಹ್ಲಾದಮತದರ್ಹಣಮ್ ।**
**ಆಹೇಕ್ಷಮಾಣಃ ಪಾಪೇನ ತಿರಶ್ಚೀನೇನ ಚಕ್ಷುಷಾ ।।೪।।**

**ಅತದರ್ಹಣಃ** ನಿಷ್ಠುರ ವಚನಕ್ಕೆ ಯೋಗ್ಯನಲ್ಲದ **ಪ್ರಹ್ಲಾದಂ** ಪ್ರಹ್ಲಾದನನ್ನು **ಪರುಷಯಾ** ಕ್ರೂರವಾದ **ವಾಚಾ** ಮಾತಿನಿಂದ **ಕ್ಷಿಪ್ತ್ವಾ** ಆಕ್ಷೇಪಿಸಿ **ಪಾಪೇನ** ಪಾಪಸಾಧನವಾದ **ತಿರಶ್ಚೀನೇನ** ವಕ್ರವಾದ **ಚಕ್ಷುಷಾ** ಕಣ್ಣಿನಿಂದ **ಈಕ್ಷಮಾಣಃ** ನೋಡುವವನಾಗಿ **ಆಹ** ಬಿರುನುಡಿ ನುಡಿದನು.

ವಿಶೇಷ ಃ- **ಪಾಪೇನ** ಪ್ರಹ್ಲಾದನನ್ನು ಸಾಯಿಸಲು ಪ್ರಯತ್ನ ಮಾಡಲು ಕಾರಣವಾದ ತನ್ನ ಪಾಪದಿಂದ ಎಂದು ಹೀಗೂ ಅರ್ಥ. ಅಥವಾ **ಹೇ ಪಾಪೇನ** ಪಾಪಿಗಳಲ್ಲಿ ಶ್ರೇಷ್ಠನೇ ಎಂದು ಕ್ರೂರವಾದ ಮಾತಿನಿಂದ ಆಕ್ಷೇಪಿಸಿ ಹೀಗೂ ಅರ್ಥ.

**ಪ್ರಶ್ರಯಾವನತಂ ದಾಂತಂ ಬದ್ಧಾಂಜಲಿಮವಸ್ಥಿತಮ್ ।**
**ಸರ್ಪಃ ಪದಾऽऽಹತ ಇವ ಶ್ವಸನ್ ಪ್ರಕೃತಿದಾರುಣಃ ॥೫॥**

**ಪ್ರಕೃತಿದಾರುಣಃ** ಸ್ವಭಾವದಿಂದ ದುಷ್ಟನಾದ ಹಿರಣ್ಯಕಶಿಪುವು **ಪದಾಹತಃ ಸರ್ಪ ಇವ** ಕಾಲಿನಿಂದ ತುಳಿಯಲ್ಪಟ್ಟ ಹಾವಿನಂತೆ **ಶ್ವಸನ್** ನಿಟ್ಟುಸಿರು ಬಿಡುತ್ತ **ಪ್ರಶ್ರಯಾವನತಂ** ವಿನಯದಿಂದ ಬಾಗಿದ **ದಾಂತಂ** ಇಂದ್ರಿಯ ನಿಗ್ರಹವುಳ್ಳ **ಬದ್ಧಾಂಜಲಿಂ** ಕೈಗಳನ್ನು ಕಟ್ಟಿರುವ **ಅವಸ್ಥಿತಂ** ಎದುರಿಗೆ ನಿಂತಿರುವ ಪ್ರಹ್ಲಾದನಿಗೆ ಹೇಳಿದನು.

ವಿಶೇಷ ಃ- ಸರ್ಪವು ಕಾಲಿಲ್ಲದ್ದಾದ್ದರಿಂದ ಮೂಗಿಲ್ಲದವರಿಗೆ ಮೂಗು ತೋರಿಸಿದರೆ ಕೋಪ ಬರುವಂತೆ ಪದಾಹತಃ ಕಾಲು ತೋರುವದರಿಂದ ಕೋಪ ಉಚಿತವೇ ಆಗಿದೆ. ॥೫॥

**ಹಿರಣ್ಯಕಶಿಪುರುವಾಚ**

**ಹೇ ದುರ್ವಿನೀತ ಮಂದಾತ್ಮನ್ ಕುಲಭೇದಕರಾಧಮ ।**
**ಸ್ತಬ್ಧಂ ಮಚ್ಛಾಸನೋದ್ಧೂತಂ ನೇಷ್ಯೇ ತ್ವಾಽದ್ಯ ಯಮಕ್ಷಯಮ್ ॥೬॥**

**ಹೇ ದುರ್ವಿನೀತ** ವಿನಯ ರಹಿತನೇ **ಮಂದಾತ್ಮನ್** ಮೂರ್ಖನೇ, ಅಲ್ಪಬುದ್ಧಿಯುಳ್ಳವನೇ **ಕುಲಭೇದಕರ** ನಮ್ಮ ಕುಲವನ್ನೇ ನಾಶಮಾಡುವವನೇ **ಅಧಮ** ನೀಚನೇ **ಸ್ಥಬ್ಧಂ** ಗರ್ವಿಷ್ಠನಾದ **ಮಚ್ಛಾಸನೋದ್ಧೂತಂ** ನನ್ನ ಆಜ್ಞೆಯನ್ನು ಮೀರಿದ **ತ್ವಾ** ನಿನ್ನನ್ನು **ಅದ್ಯ** ಈಗ **ಯಮಕ್ಷಯಂ** ಯಮನ ಮನೆಗೆ **ನೇಷ್ಯೇ** ಸೇರಿಸುತ್ತೇನೆ **ಯಂ** ಯಾವನನ್ನು **ಅಕ್ಷಯಂ** ನಾಶರಹಿತನೆಂದು ಹೇಳುತ್ತಿರುವಿಯೋ ಅವನನ್ನೂ ಯಮನ ಮನೆಗೆ ಕಳಿಸುವೆನು ಎಂದು ಆವೃತ್ತಿಮಾಡಿ, ಅನ್ವಯಮಾಡಿ ಅರ್ಥಮಾಡಬೇಕು. ॥೬॥

**ಕ್ರುದ್ಧಸ್ಯ ಯಸ್ಯ ಕಂಪಂತೇ ತ್ರಯೋ ಲೋಕಾಃ ಸಹೇಶ್ವರಾಃ ।**
**ತಸ್ಯ ಮೇऽಭಿಹಿತಂ ಮೂಢ(ಮೂಲ)ಶಾಸನಂ ಕಿಂಬಲೋऽತ್ಯಗಾಃ ॥೭॥**

**ಕ್ರುದ್ಧಸ್ಯ** ಕೋಪಗೊಂಡ **ಯಸ್ಯ** ಯಾವ ನನ್ನಿಂದ **ಸಹೇಶ್ವರಾಃ** ಪಾಲಕರಿಂದ ಕೂಡಿದ **ತ್ರಯೋಲೋಕಾಃ** ಮೂರು ಲೋಕಗಳು **ಕಂಪಂತೆ** ನಡಗುವವೋ **ತಸ್ಯ ಮೇ** ಅಂತಹ ನನ್ನಿಂದ **ಅಭಿಹಿತಂ** ಹೇಳಲ್ಪಟ್ಟ **ಶಾಸನಂ** ಆಜ್ಞೆಯನ್ನು **ಮೂಢ** ಮೂರ್ಖನೇ

**ಕಿಂ ಬಲಃ** ಯಾರ ಬಲವುಳ್ಳವನಾಗಿ **ಅತ್ಯಗಾಃ** ಅತಿಕ್ರಮಿಸಿದೆ. ನಿನಗೆ ಬಲವಿತ್ತವರಾರೆಂದು ಭಾವ.

ವಿಶೇಷ :- **ಕೋ ಬಲಂ** ಎನ್ನದೇ ಕಿಂ ಬಲಂ ಎಂದು ಹೇಳಿದ್ದರಿಂದ ಇವನಿಗೆ ಬಲಕೊಟ್ಟಿದ್ದು ಜಡವೋ ಗಂಡೋ ಹೆಣ್ಣೋ ನಪುಂಸಕವೋ ಎಂಬ ನಿರ್ಣಯವಿಲ್ಲದ್ದರಿಂದ ಎಲ್ಲದಕ್ಕೂ ಅನುಕೂಲವಾಗುವಂತೆ ಹೇಳಿರುವರು. 'ಮೂಢಶಾಸನಂ' ಎಂದು ಬೇರೆ ಪದಗಳ ವ್ಯವಧಾನವಿಲ್ಲದೇ ಹೇಳಿರುವದರಿಂದ ಮೂಢಸ್ಯ ಶಾಸನಂ ಮೂಢಶಾಸನಂ ಎಂಬ ಸಮಾಸದಿಂದ ಬರುವ ಅರ್ಥವಿಶೇಷವನ್ನು ಹಿರಣ್ಯಕಶಿಪುವಿನ ಮೌಢ್ಯವನ್ನು ಆಂತರಂಗಿಕವಾದುದನ್ನು ಸೂಚಿಸುವರು. ಅಥವಾ ಮೂಲಶಾಸನಂ ಎಂಬ ಪಾಠಾಂತರವನ್ನು ಇಟ್ಟು ಕೊಳ್ಳುವದಾದರೆ ಮೂಲಭೂತವಾದ ಅಪ್ಪಣೆಯನ್ನು ಎಂದರ್ಥ. ॥೭॥

ತಂದೆಯಿಂದ ಕೇಳಲ್ಪಟ್ಟು ಹೆದರಿ ಸುಮ್ಮನೆ ನಿಂತನೆ ಓಡಿದನೆ ಎಂದರೆ 'ಕಿಂ ಬಲಂ' ಎಂಬುದಕ್ಕೆ ಉತ್ತರಿಸಿದನೆಂದು ಹೇಳುವರು-

**ಪ್ರಹ್ಲಾದ ಉವಾಚ**

**ನ ಕೇವಲಂ ಮೇ ಭವತಶ್ಚ ರಾಜನ್**
**ಸ ವೈ ಬಲಂ ಬಲಿನಾಂ ಚಾಪರೇಷಾಮ್ ।**
***ಪರಾವರೇಷಾಂ ಸ್ಥಿರಜಂಗಮಾ ಯೇ**
**ಬ್ರಹ್ಮಾದಯೋ ಯೇನ ವಶಂ ಪ್ರಣೀತಾಃ ॥೮॥**

**ರಾಜನ್** ಹಿರಣ್ಯಕಶಿಪುವೇ **ಯೇ** ಯಾವ **ಅಮೀ** ಈ **ಪರಾವರೇ** ಉತ್ತಮರು, ಅಧಮರು ಎಂದು ತಾರತಮ್ಯೋಪೇತರಾದ **ಬ್ರಹ್ಮಾದಯಃ** ಬ್ರಹ್ಮದೇವರೇ ಮೊದಲಾದ **ಸ್ಥಿರಜಂಗಮಾಃ** ಚರಾಚರವಸ್ತುಗಳು **ಯೇನ** ಯಾವ ಬಲಿಷ್ಠನಾದ ಶ್ರೀಹರಿಯಿಂದ **ವಶಂ ಪ್ರಣೀತಾಃ** ಸ್ವಾಧೀನ ಮಾಡಿಕೊಳ್ಳಲ್ಪಟ್ಟಿರುವರೋ(ಯಾರ ವಶರಾಗಿರುವರೋ ಎಂದರ್ಥ.) **ಸಃ** ಆ ಶ್ರೀಹರಿಯು **ಕೇವಲಂ ಮೇ** ನನಗಷ್ಟೇ **ಬಲಂ** ಬಲವು ನ ಅಲ್ಲ **ಭವತಶ್ಚ** ನಿನಗೂ **ಬಲಂ** ಬಲವಾಗಿರುವನು. **ಬಲಿನಾಂ** ಎಲ್ಲರಿಗಿಂತ ಬಲಿಷ್ಠವೆಂದು ಪ್ರಸಿದ್ಧರಾಗಿರುವ **ಅಪರೇಷಾಂ ಚ** ಬ್ರಹ್ಮಾದಿಗಳಿಗೂ **ಬಲಂ** ಬಲವಾಗಿರುವನು.

ವಿಶೇಷ :- ಅಥವಾ ಕೇವಲಂ ಮೇ ಭವತಶ್ಚ ಇತಿ ದ್ವಯೋರೇವ ಸ ಬಲಂ ನ ಕಿಂತು ಯೇ ಭವತಾ ನ ವಶಂ ಪ್ರಣೀತಾಃ ತೇ ಬ್ರಹ್ಮಾದಯಃ ಯೇನ ವಶಂ

* 'ಪರಾವರೇಽಮೀ' ಇತಿ ಪಾಠಾಂತರ.

ಪ್ರಣೇತಃ ಸಃ ಸ ವೈ ಸರ್ವೇಷಾಂ ಬಲಂ ಎಂದು ಅನ್ವಯ ಮಾಡಬಹುದು. ನನಗೆ ನಿನಗೆ ಮಾತ್ರ ಬಲ ಕೊಟ್ಟವನಲ್ಲ. ನೀನು ಯಾರನ್ನು ವಶಪಡಿಸಿಕೊಳ್ಳಲಿಲ್ಲವೋ ಅಂಥ ಬ್ರಹ್ಮಾದಿಗಳನ್ನು ವಶದಲ್ಲಿಟ್ಟುಕೊಂಡ ಶ್ರೀಹರಿಯು ಬಲಿಷ್ಠರೆಂದು ಪ್ರಸಿದ್ಧರಾದ ಎಲ್ಲರಿಗೆ ಬಲಪ್ರದನೆಂದು ಭಾವ.

ಪರಾವರೇಷಾಂ ಎಂಬಲ್ಲಿ ಪರೇ ಚ ಅವರೇ ಚ ತೇಷಾಂ ಎಂದು ದ್ವಂದ್ವದಲ್ಲಿ ಸುಡಾಗಮ ಆರ್ಷ. ಪರೈಃಸಹಿತಾ ಅವರಾ ಎಂದು ಮಧ್ಯಮ ಪದಲೋಪಿ ಸಮಾಸವನ್ನು ಮಾಡಬಹುದು. ಪರಾವರೇ ಅಮೀ ಎಂಬ ಪಾಠದಲ್ಲಿ 'ವಿಭಾಷಾ ಜಸಿ' ಎಂಬುದರಿಂದ ಸರ್ವನಾಮಕಾರ್ಯ ಉಪಪನ್ನವಾಗುವದು. ವೈ ಶಬ್ದದಿಂದ 'ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಮ್ । ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ' ಮುಂತಾದ ಶ್ರುತಿಯನ್ನು 'ಬಲಮಿಂದ್ರಸ್ಯ ಗಿರಿಶೋ ಗಿರಿಶಸ್ಯ ಬಲಂ ಮರುತ್। ಮರುತಸ್ತು ಹರಿಃ ಸಾಕ್ಷಾತ್ ನ ಹರೇರ್ಬಲರಮನ್ಯತಃ' ಮುಂತಾದ ಸ್ಮೃತಿಯನ್ನು ಸೂಚಿಸುವರು. ಪಿತಃ ಎನ್ನದೇ ರಾಜನ್ ಎಂದ್ದರಿಂದ ರಾಜ ಎಂದರೆ ಚಂದ್ರ ಅವನಂತೆ ಶೀಘ್ರದಲ್ಲಿ ಕ್ಷಯವಾಗುವಿ ಎಂದು ಸೂಚಿಸಿರುವರು. ಮತ್ತು ದುಷ್ಪರ ಸಂಬಂಧ ಹೇಳುವದರಲ್ಲಿ ಬಿಡುವ ಇಚ್ಛೆಯಿಂದ ರಾಜನ್ ಎಂದಿರುವರು ತಂದೆ ಎಂಬ ಅನುಬಂಧ ಹೇಳಲು ಇಚ್ಛಿಸದೇ ರಾಜನ್ ಎಂದು ಶಿಕ್ಷಾಧ್ಯಕ್ಷತೆಯನ್ನು ಅಂಗೀಕರಿಸುವರು. ।।೮।।

'ಸ್ಥಾಣುಮನ್ಯೇ ಪ್ರಪದ್ಯಂತೇ' ಎಂಬ ಶ್ರುತಿಯಂತೆ ಕೆಲವರು ಶಿವನೇ ಬಲವೆಂದು ಹೇಳುತ್ತಾರೆ 'ಕಾಲಾದ್ಭವಂತಿ ಭೂತಾನಿ ಮನ್ಯಂತೇ ಕಾಲಚಿಂತಕಾಃ' ಎಂಬ ಪ್ರಮಾಣಾನುಸಾರ ಕೆಲವರು ಕಾಲವೇ ಬಲವೆನ್ನುತ್ತಾರೆ ಅಂದ ಮೇಲೆ ವಿಷ್ಣುವೇ ಎಲ್ಲರಿಗೂ ಬಲವೆಂದು ಹೇಗೆ ನಿರ್ಣಯ ಎಂದರೆ ಹೇಳುತ್ತಾರೆ-

**ಸ ಈಶ್ವರಃ ಕಾಲ ಉರುಕ್ರಮೋಽಸಾ-**
**ವೋಜಃ ಸಹಃ ಸತ್ವ ಬಲೇಂದ್ರಿಯಾತ್ಮಾ ।**
**ಸ ಏವ ವಿಶ್ವಂ ಪರಮಃ ಸ್ವಶಕ್ತಿಭಿಃ**
**ಸೃಜತ್ಯವತ್ಯತ್ತಿ ಗುಣತ್ರಯೇಶಃ** ।।೯।।

**ಸಃ ಅಸೌ ಈ ಉರುಕ್ರಮಃ** ಮಹಾಪರಾಕ್ರಮಿಯಾದ ತ್ರಿವಿಕ್ರಮನಾದ ವಿಷ್ಣುವು **ಈಶ್ವರಃ** ಈಶ್ವರಶಬ್ದದಿಂದ ಮುಖ್ಯವಾಚ್ಯನು **ಕಾಲಃ** ಕಾಲಾಂತರ್ಗತನು ಕಾಲ ಶಬ್ದವಾಚ್ಯನು ('ಕಲ ಕಾಮಧೇನೌ' ಎಂದಿರುವದಿರಂದ ಅಪೇಕ್ಷಿತ ಸರ್ವಪ್ರದನು ಎಂದರ್ಥ) **ಓಜಃ** ತಡೆದುಕೊಳ್ಳುವ ಸಾಮರ್ಥ್ಯ **ಸಹಃ** ಸಹನೆ **ಸತ್ವ** ಇರುವಿಕೆ **ಬಲಂ** ಬಲವು ಇಂದ್ರಿಯಗಳು ಅವುಗಳಿಗೆ **ಆತ್ಮಾ** ಸ್ವಾಮಿಯು **ಸಃ ಏವ** ಆ ಶ್ರೀಹರಿಯೇ

**ಪರಮಃ** ಸರ್ವೋತ್ತಮನು **ಗುಣತ್ರಯೇಶಃ** ಸತ್ವರಜಸ್ತಮೋಗುಣಗಳಿಗೆ ನಿಯಾಮಕನಾದವನು **ಸ್ವಶಕ್ತಿಭಿಃ** ಸ್ವರೂಪಶಕ್ತಿಗಳಿಂದ (ಕಾರ್ಯತ್ರಯಾನುಗುಣವಾಗಿ ಬಹುವಚನ) **ವಿಶ್ವಂ** ಪ್ರಪಂಚವನ್ನು **ಸೃಜತಿ** ಸೃಷ್ಟಿಸುವನು **ಅವತಿ** ರಕ್ಷಿಸುವನು **ಅತ್ತಿ** ಸಂಹರಿಸುವನು.

ವಿಶೇಷ ಃ- ಸ್ವೇನ ಶಕ್ತಿಃ ಯೇಷಾಂ ತೇ ಸ್ವಶಕ್ತಯಃ ತಾಭಿಃ ತನ್ನಿಂದ ಶಕ್ತಿಯನ್ನು ಹೊಂದುವ ಪ್ರಕೃತಿ ಮೊದಲಾದವುಗಳಿಂದ ಎಂದೂ ಅರ್ಥ. ಮೂರುಕಾರ್ಯಗಳಿಗೆ ಕಾರಣಗಳಾದ ಗುಣತ್ರಯಗಳಿಗೆ ಸ್ವಾಮಿಯಾದುದರಿಂದ ಮೂರು ಕಾರ್ಯಗಳನ್ನು ಮಾಡುವದು ಉಪಪನ್ನವೆಂದು ತಿಳಿಯಬೇಕು. ಪೂರ್ವಾರ್ಧದಿಂದ ಜಗತ್ಕರ್ತೃತ್ವಕ್ಕೆ ಉಪಯೋಗಿಯಾದ ಗುಣಪೂರ್ಣತೆಯನ್ನು ಹೇಳಿರುವರು. ಉತ್ತರಾರ್ಧದಿಂದ ಜಗಜನ್ಮಾದಿಕರ್ತೃತ್ವ ಹೇಳಿರುವರು. ||೯||

ಬಿಡಬೇಕಾದದ್ದನ್ನು ಮಾಡಬೇಕಾದುದನ್ನು ಹೇಳುತ್ತಾರೆ-

**ಜಹ್ಯಾಸುರಂ ಭಾವಮಿಮಂ ತ್ವಮಾತ್ಮನಃ(ಸ್ವಭಾವತಃ)**
**ಸಮಂ ಮನೋ ಧತ್ಸ್ವ ನ ಸಂತಿ ವಿದ್ವಿಷಃ ।**
**ಋತೇಽಜಿತಾದಾತ್ಮನ ಉತ್ಪಥಸ್ಥಿತಾತ್**
**ತದ್ ವಿಧ್ಧ್ಯನಂತಸ್ಯ ಮಹತ್ ಸಮರ್ಹಣಮ್** ||೧೦||

**ಇಮಂ** ಈ **ಆತ್ಮನಃ** ನಿನ್ನ **ಆಸುರಂ ಭಾವಂ** ಶ್ರೀಹರಿಯು ಇಲ್ಲ ಎಲ್ಲಕ್ಕೂ ನಾನೇ ಸ್ವಾಮಿ ಎಂಬ ಅಭಿಪ್ರಾಯವನ್ನು ಅಥವಾ ಮನಸ್ಸನ್ನು **ಜಹಿ** ಬಿಟ್ಟು ಬಿಡು **ಸ್ವಭಾವತಃ** ಸ್ವತಂತ್ರನಾದ ಶ್ರೀಹರಿಯಲ್ಲಿ ಮನಸ್ಸಿಡುವದರಿಂದ **ಮನಃ** ಮನಸ್ಸನ್ನು **ಸಮಂ** ಅವರವರ ಯೋಗ್ಯತೆಗೆ ತಕ್ಕಂತೆ ನ್ಯೂನಾತಿರೇಕವಿಲ್ಲದಂತೆ ಸಮನಾಗಿ **ಧತ್ಸ್ವ** ಧರಿಸು (ಎಲ್ಲ ಕಡೆಯಲ್ಲಿ ರಕ್ಷಕನಾಗಿ ಶ್ರೀಹರಿ ಇದ್ದಾನೆ ಎಂದು ಮನಸ್ಸನ್ನು ಧರಿಸು ಎಂದೂ ಅರ್ಥ) **ಉತ್ಪಥಸ್ಥಿತಾತ್** ತತ್ವಮಾರ್ಗಕ್ಕೆ ವಿರುದ್ಧವಾದ ಮಾರ್ಗದಲ್ಲಿ ನಿರತವಾದ **ಅಜಿತಾತ್** ಗೆಲ್ಲದಿರುವ **ಆತ್ಮನಃ** ಮನಸ್ಸು ಮೊದಲಾದ ಇಂದ್ರಿಯಗಳನ್ನು **ಋತೇ** ಬಿಟ್ಟು ಅಂದರೆ ಶುದ್ಧ ಮನಸ್ಸಿನಿಂದ ವಿಚಾರ ಮಾಡಿದರೆ **ವಿದ್ವಿಷಃ** ಶತ್ರುಗಳು **ನ ಸಂತಿ** ಇರುವದಿಲ್ಲ. ಹಾಗಾದರೆ ಯಾರು ಸಮಬುದ್ಧಿಗಳೆಂದು ನಿನಗೆ ಸಮ್ಮತರೋ ಅಂಥ ದೇವತೆಗಳಿಗೂ 'ಯುದ್ಧೋದ್ಯೋಗಪರಂ ಚಕ್ರುರ್ವಿಬುಧಾಃ ದಾನವಾನ್ ಪ್ರತಿ' ಎಂದು ಹೇಳಿರುವದು ಹೇಗೆ ಕೂಡುವದು ಎಂದರೆ ಅವರ ಸಮತ್ವವು ಅವರವರ ಯೋಗ್ಯತಾನುಸಾರವೆಂದು ಸಮತ್ವದ ಫಲವನ್ನು ಹೇಳುವರು. **ತತ್** ಈ ಬಗೆಯ ಮನಃಸಮತೆಯು ಅವರವರ ಯೋಗ್ಯತೆಗೆ ತಕ್ಕಂತೆ ಮನೋಧಾರಣೆಯು **ಅನಂತಸ್ಯ** ಗುಣಪೂರ್ಣನಾದ ನಾಶರಹಿತನಾದ ಶ್ರೀಹರಿಗೆ ಮಹತ್‌ಪ್ರೀತಿಕರವಾದ

ಶ್ರೇಷ್ಠವಾದ ದೊಡ್ಡವರಿಂದ ಮಾಡಲ್ಪಡುವ **ಸಮರ್ಹಣಂ** ಪೂಜೆಯು **ಇತಿ** ಎಂದು **ವಿದ್ಧಿ** ತಿಳಿ.

ವಿಶೇಷ ಃ- ಸಮಬುದ್ಧಿಯುಳ್ಳವರಿಗೆ ಆ ಸ್ಥಾನದಲ್ಲಿ ದ್ವೇಷಾದಿಗಳು ಮಾಡುವದು ಯುಕ್ತವೇ. ವಿದ್ಧ್ಯನಂತಸ್ಯ ಎಂದು ವಿಧಿನಾ ಸಹಿತೋ ಅನಂತಃ ವಿಧ್ಯನಂತಃ ತಸ್ಯ । ಪೂಜೆಯೆಂದು ತಿಳಿ ಅಥವಾ (ಮಹತ್ಸಮರ್ಹಣಂ ಎಂಬುದಕ್ಕೆ.) **ಮಹತಃ** ಮಹತತ್ವಾಭಿಮಾನಿಯಾದ ಬ್ರಹ್ಮನ ಸಮರ್ಹಣವೆಂದು **ವಿದ್ಧಿ** ತಿಳಿ ಎಂದರ್ಥ. ।।೧೦।।

**ದಸ್ಯೂನ್ ಪುರಂ ಷಣ್ಣವಿಜಿತ್ಯ ಲುಂಪತೋ**
**ಮನ್ಯಂತ ಏಕೇ ಸ್ವಜಿತಾ ದಿಶೋ ದಶ ।**
**ಜಿತಾತ್ಮನೋ ಜ್ಞಸ್ಯ ಸಮಸ್ಯ ದೇಹಿನಾಂ**
**ಸಾಧೋಃ ಸ್ವಮೋಹಪ್ರಭವಾಃ ಕುತಃ ಪರೇ ।।೧೧।।**

**ಏಕೇ** ನಿನ್ನಂಥ ಕೆಲವರು **ಷಡ್ ದಸ್ಯೂನ್** ಆರು ಇಂದ್ರಿಯಗಳೆಂಬ ಕಳ್ಳರನ್ನು **ಅವಿಜಿತ್ಯ** ಗೆಲ್ಲದೇ **ದಶ ದಿಶಃ** ಹತ್ತು ದಿಕ್ಕುಗಳನ್ನು **ಸ್ವಜಿತಾಃ** ತನ್ನಿಂದ ಗೆಲ್ಲಲ್ಪಟ್ಟಿವೆ ಎಂದು **ಮನ್ಯಂತೇ** ತಿಳಿಯುವರು. ಆ ಕಳ್ಳರು ಏನು ಮಾಡುವರೆಂದರೆ ಹೇಳುವರು. **ಪುರಂ** ದೇಹವನ್ನು **ಲುಂಪತಃ** ನಾಶಗೊಳಿಸುವ ಕದಿಯುವ ಕಳ್ಳರನ್ನು ಎಂದನ್ವಯ **ಜ್ಞಸ್ಯ** ಜ್ಞಾನಿಯಾದ **ಜಿತಾತ್ಮನಃ** ಮನೋಜಯವುಳ್ಳ **ಸಮಸ್ಯ** ಸಮಬುದ್ಧಿಯುಳ್ಳ **ಸಾಧೋಃ** ಷಡಿಂದ್ರಿಯ ಜಯವುಳ್ಳ **ದೇಹಿನಾಂ** ಜೀವನಿಗೆ **ಸ್ವಮೋಹಪ್ರಭವಾಃ** ಆತ್ಮ ಆತ್ಮೀಯ ಮೋಹದಿಂದ ಉಂಟಾಗುವ **ಪರೇ** ಬಾಹ್ಯಶತ್ರುಗಳು **ಕುತಃ ಸ್ಯುಃ** ಏಕೆ ಇರುವರು. ಇರಲಾರರು. ಮೋಹಾದಿರೂಪಕಾರಣವಿಲ್ಲದಿರುವದರಿಂದ ಎಂದು ಭಾವ. **ಏಕೇ** ಸಜ್ಜನರು **ಪುರಂ ಲುಂಪತಃ** ದೇಹವನ್ನು ಕೊಳ್ಳೆಹೊಡೆಯುವ **ಷಟ್ ದಸ್ಯೂನ್** ಆರು ಕಳ್ಳರನ್ನು **ಅವಿಜಿತ್ಯ** ಗೆಲ್ಲದೇ **ದಶ ದಿಶಃ** ಹತ್ತು ದಿಕ್ಕುಗಳನ್ನು **ಸ್ವಜಿತಾಸು ಅತ್ಯಂತಂ ಅಜಿತಾಃ ಇತಿ ಮನ್ಯಂತೇ** ಗೆದ್ದಿಲ್ಲವೆಂದೇ ತಿಳಿಯುವರು. ಆಂತರ ಶತ್ರುಜಯವಿಲ್ಲದೇ ಬಾಹ್ಯಶತ್ರುಜಯ ಸಾಧ್ಯವಿಲ್ಲವೆಂದು ಭಾವ. ಆದ್ದರಿಂದ ಕ್ರುದ್ಧಸ್ಯ ಎಂಬ ಮಾತು ಭ್ರಾತೃಹಾ ಮುಂತಾದ ಮಾತು ಅಸಂಬದ್ಧವೆಂದು ಭಾವ. ।।೧೧।।

**ಹಿರಣ್ಯಕಶಿಪುರುವಾಚ**

**ವ್ಯಕ್ತಂ ತ್ವಂ ಮರ್ತುಕಾಮೋಽಸಿ ಯೋಽತಿಮಾತ್ರಂ ವಿಕತ್ಥಸೇ ।**
**ಮುಮೂರ್ಷೂಣಾಂ ಹಿ ಮಂದಾತ್ಮನ್ ನನು ಸ್ಯುರ್ವಿಪ್ಲುತಾ ಗಿರಃ ।।೧೨।।**

**ಯಃ** ಯಾವ ನೀನು **ಅತಿಮಾತ್ರಂ** ಬಹಳವಾಗಿ **ವಿಕತ್ಥಸೇ** ನನ್ನ ವೈರಿಯನ್ನು

ಶ್ಲಾಘನ ಮಾಡಿರುವಿಯಾದ್ದರಿಂದ **ತ್ವಂ** ನೀನು **ವ್ಯಕ್ತಂ** ಸ್ಪಷ್ಟವಾಗಿ **ಮರ್ತುಕಾಮಃ ಅಸಿ** ಸಾಯಲಿಚ್ಛಿಸುವಿ **ಮಂದಾತ್ಮನ್** ಅಲ್ಪಬುದ್ಧಿಯೇ **ಮುಮೂರ್ಷೂಣಾಂ** ಸಾಯಲು ಇಚ್ಛಿಸುವವರಿಗೆ **ವಿಪ್ಲುತಾಃ** ಅತಲಸ್ಪರ್ಶಿಗಳಾದ **ಗಿರಃ** ಮಾತುಗಳು **ಸ್ಯುಃ** ಬರುವವು **ನನು** ನಿಶ್ಚಯ ಶ್ರೀಹರಿಯನ್ನು ಬಿಟ್ಟು ಇತರರನ್ನು **ನ ನಮಃ** ನಮಸ್ಕರಿಸುವದಿಲ್ಲ. **ನ ಸ್ತುಮಃ** ಸ್ತುತಿಸುವದಿಲ್ಲ **ಇತಿ** ಎಂಬ ವಿಪ್ಲುತಾಗಿರಃ ಹೀಗೂ ಮಾಡಬಹುದು. ॥೧೨॥

ನನ್ನ ಮಾತೇಕೋ ವಿಪ್ಲುತ ಎಂದರೆ ಪ್ಲುತಸ್ವರದಿಂದ ಕೂಡಿದ್ದರಿಂದ ಎಂದು ಹೇಳುವನು.

**ಯಸ್ತ್ವಯಾ ಮಂದಭಾಗ್ಯೋಕ್ತೋ ಮದನ್ಯೋ ಜಗದೀಶ್ವರಃ ।**
**ಕ್ವಾಸೌ ಯದಿ ಸ ಸರ್ವತ್ರ ಕಸ್ಮಾತ್ ಸ್ತಂಭೇ ನ ದೃಶ್ಯತೇ ॥೧೩॥**

**ಹೇ ಮಂದಭಾಗ್ಯ** ದರಿದ್ರನೇ, ದುರ್ದೈವಿಯೇ, ಅಲ್ಪಪುಣ್ಯಶಾಲಿಯೇ **ತ್ವಯಾ** ನಿನ್ನಿಂದ **ಉಕ್ತಃ** ಹೇಳಲ್ಪಟ್ಟ **ಮದನ್ಯಃ** ನನ್ನಿಂದ ಭಿನ್ನನಾದ **ಯಃ** ಯಾವ **ಜಗದೀಶ್ವರಃ** ಜಗತ್ತಿನ ನಿಯಾಮಕನೋ **ಅಸೌ** ಅವನು **ಕ್ವ** ಎಲ್ಲಿರುವನು ಎಂದು ತಂದೆಯ ಪ್ರಶ್ನೆ. ಅದಕ್ಕೆ ಉತ್ತರ **ಸಃ ಸರ್ವತ್ರ** ಅವನು ಎಲ್ಲ ಕಡೆ ಇರುವನು ಎಂದು **ಯದಿ ಸರ್ವತ್ರ** ಎಲ್ಲ ಕಡೆಗೆ ಇರುವದಾದರೆ **ಸ್ತಂಭೇ** ಎದುರಿಗಿರುವ ಈ ಕಂಬದಲ್ಲಿ **ಕಸ್ಮಾತ್ ನ** ಏಕೆ ಇಲ್ಲ ಎಂದು ಕೇಳಿದ ತಂದೆ. **ದೃಶ್ಯತೇ** ಕಾಣುವನು ಎಂದು ಹೇಳಿದ ಮಗ. ಹೀಗೆ ಮಾಡುವದರಿಂದ 'ಗೋಪಾಯೇತ' ಎಂಬ ಮುಂದಿನ ಮಾತು ಸರಿಹೋಗುವದು ಎಂದು ಸತ್ಯಧರ್ಮರ ಅಭಿಪ್ರಾಯ, ಉಳಿದವರು 'ನ ದೃಶ್ಯತೇ' ಎಂದೇ ಪ್ರಶ್ನೆ ಮಾಡಿರುವರು ಅವರ ಅಭಿಪ್ರಾಯ ಪ್ರಹ್ಲಾದನ ಮಾತು ಸುಳ್ಳು ಎಂದು ಹಿರಣ್ಯಕಶುಪಿನ ಅಭಿಪ್ರಾಯವೆಂದು. ಇಲ್ಲಿ ಪ್ರಶ್ನೋತ್ತರ ಜ್ಞಾಪಕವಿಲ್ಲ ಹೀಗೇಕೆ ವ್ಯಾಖ್ಯಾನಿಸುವಿರಿ ಎನ್ನುವಂತಿಲ್ಲ. ತತ್ವನಿರ್ಣಯದಲ್ಲಿ 'ಯದ್ದೋಷಾ ಲವಣಂ' ಎಂಬುದನ್ನು ವ್ಯಾಖ್ಯಾನಮಾಡುವಾಗ 'ಕಥಂ ಇತಿ ಪಿತಾ' 'ಲವಣಂ ಇತಿ ಪುತ್ರಃ' ಮುಂತಾಗಿ ಹೇಳಿರುವರು. ಹೇ ಮಂದಭಾಗ್ಯ ಎಂಬುದೆ ಪ್ರಶ್ನೋತ್ತರ ಗಮಕವಾಗಿದೆ. ॥೧೩॥

ದೃಶ್ಯತೇ ಎಂದು ಹೇಳಿದ್ದನ್ನು ಸಹಿಸದೇ ಹೇಳುವನು-

**ಸೋಽಹಂ ವಿಕತ್ಥಮಾನಸ್ಯ ಶಿರಃ ಕಾಯಾದ್ಧರಾಮಿ ತೇ ।**
**ಗೋಪಾಯೇತ ಹರಿಸ್ತ್ವಾದ್ಯ ಯಸ್ತೇ ಶರಣಮೀಪ್ಸಿತಃ ॥೧೪॥**

**ಸಃ ಅಹಂ** ನಿನ್ನಿಂದ ತಿರಸ್ಕೃತನಾದ ನಾನು **ವಿಕತ್ಥಮಾನಸ್ಯ** ಅಸಂಬದ್ಧ ಮಾತನಾಡುವ **ತೇ** ನಿನ್ನ **ಶಿರಃ** ತಲೆಯನ್ನು **ಕಾಯಾತ್** ಸಂಪೂರ್ಣಶರೀರದಿಂದ

**ಹರಾಮಿ** ಅಪಹರಿಸುವೆನು ('ವರ್ತಮಾನಸಾಮೀಪ್ಯವಿರುವದರಿಂದ 'ವರ್ತಮಾನ-ವ್ಯಪದೇಶ' ಎಂದಾಗಲಿ, 'ಕ್ರಿಯಾಪ್ರಬಂಧೇ ಲಟ್ ಸಂಭವತಿ' ಎಂದಾಗಲಿ ಉಪಪತ್ತಿ ತಿಳಿಯಬೇಕು. ಪದಸಂಸ್ಕಾರ ಪಕ್ಷದಲ್ಲಿಯಾದರೂ ಅಧ್ಯಾಹಾರಾದಿಗಳಿಂದ ಭವಿಷ್ಯತ್‌ಕಾಲಿಕಸಂಹಾರವೇ ತೋರುವದು ಎಂದಾಗಲಿ ತಿಳಿಯುವದು. ಇದರ ವಿಸ್ತಾರವನ್ನು 'ವ್ಯಾಖ್ಯಾಂ ಕರೋಮಿ' ಎಂಬ ಅನುವ್ಯಾಖ್ಯಾನದ ವರ್ತಮಾನ-ಸಾಮೀಪ್ಯೇವರ್ತಮಾನವ್ಯಪದೇಶಃ ಎಂಬ ಸುಧಾವಾಕ್ಯಾರ್ಥ ಚಂದ್ರಿಕಾದಿಂದ ತಿಳಿಯಬೇಕು.) **ಯಃ** ಯಾವನು ನಿನಗೆ ಇಷ್ಟನೋ **ಸಃ ಹರಿಃ** ಆ ಶ್ರೀಹರಿಯು **ತ್ವಾ** ನಿನ್ನನ್ನು **ಅದ್ಯ** ಈಗ **ಗೋಪಾಯೇತ್** ರಕ್ಷಿಸಲಿ. ||೧೪||

**ವಿಜಯಧ್ವಜೀಯ**- ಇಂದ್ರಿಯವನ್ನು ಜಯಿಸುವ ಎಂದು ಹೇಳಿದ್ದು ಅಸಂಭಾವಿತವಾದ್ದರಿಂದ ಸರಿಯಲ್ಲವೆಂದರೆ ಹೇಳುತ್ತಾರೆ-

**ನಾರದ ಉವಾಚ**

**ಏವಂ ದುರುಕ್ತೈರ್ಮುಹುರರ್ದಯನ್ ರುಷಾ**
**ಸುತಂ ಮಹಾಭಾಗವತಂ ಮಹಾಸುರಃ ।**
**ಖಡ್ಗಂ ಪ್ರಗೃಹ್ಯೋತ್ಪತಿತೋ ವರಾಸನಾತ್**
**ಸ್ತಂಭಂ ತತಾಡಾತಿಬಲಃ ಸ್ವಮುಷ್ಟಿನಾ ||೧೫||**

**ಅತಿಬಲಃ** ಅತ್ಯಂತಬಲಿಷ್ಠನಾದ **ಮಹಾಸುರಃ** ಹಿರಣ್ಯಕಶಿಪುವು **ಏವಂ** ಮೇಲೆ ಹೇಳಿದಂತೆ **ದುರುಕ್ತೈಃ** 'ವಧ್ಯತಾಂ ಆಶು ಅಸೌ ಪಾಪಃ' 'ಶಿರಃ ಕಾಯಾದ್ಧರಾಮಿ ತೇ' ಮುಂತಾದ ದುಷ್ಟಮಾತುಗಳಿಂದ **ಮಹಾಭಾಗವತಃ** ದೊಡ್ಡಭಗವದ್ಭಕ್ತರಾದ **ಸುತಂ** ಮಕ್ಕಳಾದ ಪ್ರಹ್ಲಾದರಾಜರನ್ನು **ಮುಹುಃ** ಪುನಃ ಪುನಃ **ರುಷಾ** ಸಿಟ್ಟಿನಿಂದ **ಅರ್ದಯನ್** ಪೀಡಿಸುತ್ತ **ಖಡ್ಗಂ** ಖಡ್ಗವನ್ನು **ಪ್ರಗೃಹ್ಯ** ಹಿಡಿದುಕೊಂಡು **ವರಾಸನಾತ್** ತಾನು ಕುಳಿತ ಸಿಂಹಾಸನದಿಂದ **ಉತ್ಪತಿತಃ ಸನ್** ಹಾರಿದವನಾಗಿ **ಸ್ವಮುಷ್ಟಿನಾ** ತನ್ನ ಕೈಮುಷ್ಟಿಯಿಂದ **ಸ್ತಂಭಂ ತತಾಡ** ಕಂಬಕ್ಕೆ ಹೊಡೆದನು.

ವಿಶೇಷ ಃ- ಇಲ್ಲಿ ಒಂದು ಸಂದೇಹ 'ನಿಸ್ತಂಭಾಂ ಬಹುರಮ್ಯಾಂ ಚ ಸಭಾ' ಎಂದು ಖಂಬವಿಲ್ಲದಿರುವ ರಮ್ಯವಾದ ಸಭೆಯೆಂದು ಕೂರ್ಮಪುರಾಣಾದಿಗಳಲ್ಲಿದೆ. ಕಾರಣ ಸ್ತಂಭಕ್ಕೆ ಹೊಡೆದನೆಂದು ಹೇಳಿದ್ದು ಹೇಗೆ ಎಂದು ಶಂಕೆ ಮಾಡುವಂತಿಲ್ಲ. ಅಲಂಕಾರಾದಿಗಳನ್ನು ಮಾಡಲು ಅರಮನೆಗೆ ಸಂಬಂಧವಿಲ್ಲದ ಖಂಬಗಳು ರಾಜಸಭೆಯಲ್ಲಿ ಇರುವದು ಸಂಭಾವಿತವಾಗಿದೆ. 'ಕಸ್ಮಾತ್ ಸ್ತಂಭೇ ನ ದೃಶ್ಯತೇ' ಎಂದು ಖಂಬವನ್ನು ಹೇಳಿದ್ದರಿಂದ ಅದನ್ನು ತಯಾರಿಸಿರುವ ಸಂಭವವು ಇದೆ.

ಇನ್ನು 'ಪದಾಸ್ತಂಭಂ ತತಾಡಾಶು' ಎಂದು ಪುರಾಣಾಂತರದಲ್ಲಿ ಸ್ಪಷ್ಟ ಹೇಳಿರುವಾಗ ಇಲ್ಲಿ 'ಮುಷ್ಟಿನಾ' ಎಂದು ಹೇಳಿದುದು ಹೇಗೆ ಎಂದರೆ ಇದು ಸರಿಯಲ್ಲ.

ಸಿಂಹಸ್ಯಾರ್ಧಂ ತನುಂ ಕೃತ್ವಾ ನರಸ್ಯಾರ್ಧಂ ತನುಂ ತದಾ ।
ನೃಸಿಂಹವಪುರವ್ಯಕ್ತೋ ಹಿರಣ್ಯಕಶಿಪೋಃ ಪುರಃ ॥

ಆವಿರ್ಬಭೂವ ಸಹಸಾ'' ಮುಂತಾಗಿ ಕೂರ್ಮಪುರಾಣದಲ್ಲಿ, 'ಭಗವಾನಪಿ ದೇವೇಶೋ ನಾರಸಿಂಹಮಥಾಕರೋತ್ । ಸ್ತೂಯಮಾನೋ ಮುನಿಗಣೈ-ರ್ಹಿರಣ್ಯಕಶಿಪೋಃ ಪುರಮ್ ॥ ತತ್ರ ಗತ್ವಾ' ಮುಂತಾಗಿ ನೃಸಿಂಹಪುರಾಣದಲ್ಲಿ ಯಾಗಲಿ, 'ನಾರಸಿಂಹಮನಾಧೃಷ್ಯಂ ದೇವದಾನವರಕ್ಷಸಾಮ್ । ಹಿರಣ್ಯಕಶಿಪೋಸ್ಥಾನಂ ಜಗಾಮ ಪ್ರಭುರೀಶ್ವರಃ ॥ ನರಸ್ಯಾರ್ಧತನುಂ ಕತ್ವಾ ಸಿಂಹಸ್ಯಾರ್ಧತನುಂ ತಥಾ । ತತೋಽಪಶ್ಯತ ವಿಸ್ತೀರ್ಣಾಂ ಹಿರಣ್ಯಕಶಿಪೋಃ ಸಭಾಮ್' ॥ ಮುಂತಾದ ಮತ್ಸ್ಯಪುರಾಣದಲ್ಲಾಗಲಿ. ಸ್ತಂಭವನ್ನು ಹೊಡೆದದ್ದನ್ನಾಗಲಿ ಸ್ತಂಭದಿಂದ ಉದ್ಭವಿಸಿದ್ದನ್ನಾಗಲಿ ಹೇಳದಿರುವದರಿಂದ ಕಾಲಿನಿಂದಲೋ, ಮುಷ್ಟಿಯಿಂದಲೋ ಎಂಬ ಚಿಂತೆಯೂ ದೂರವೆ ಉಳಿಯಿತು. ಆದ್ದರಿಂದ ಅದು ಕಲ್ಪಭೇದದಿಂದ ಸಮಾಧೇಯವೆಂದಾದರೆ ಇದು ಕಲ್ಪಭೇದದಿಂದಲೇ ಸಮಾಹಿತವಾಗುವದು. ಅಲ್ಲದೆ 'ಸ್ವಮುಷ್ಟಿನಾ ಖಡ್ಗಂ ಪ್ರಗೃಹ್ಯ ಪಾದೇನ (ಶೇಷ) ತತಾಡ' ಎಂದೂ ಅನ್ವಯಿಸಬಹುದು. ಅಂದರೆ ಮುಷ್ಟಿಯಿಂದ ಖಡ್ಗ ತೆಗೆದುಕೊಂಡು ಹಾರಿ ಪಾದದಿಂದ ಹೊಡೆದನು ಎಂದರ್ಥ. ಅತ್ಯುತ್ಕಟಪಾಪವಲ್ಲದ್ದರಿಂದ ತಕ್ಷಣ ಸಂಹಾರವಾಗಬಾರದಿತ್ತು. ಆದ್ದರಿಂದ ಕಾಲಿನಿಂದ ಒದ್ದನೆಂದು ಹೇಳುವದೇ ಯುಕ್ತವಾದುದು. ಮುಷ್ಟಿಯಿಂದ ಹೊಡಿಯುವದಾದರೆ ಖಡ್ಗವನ್ನು ತೆಗೆದುಕೊಳ್ಳುವದು ಅಯುಕ್ತವಾಗುವದು. ಪಾದದಿಂದ ಎಂದೆ ರುಕ್ಮಣೀಶವಿಜಯದಲ್ಲಿ ಹೇಳಿದೆ. ರಾಜರಿಂದ 'ಯದಾ ನೃಸಿಂಹಾಕೃತಿರಾವಿರಾಸೀತ್ ಪದಾಹತಾತ್ ಸ್ತಂಭವರಾದ್ಧಿ ಪೂರ್ವಂ । ತದಾನು ಕಾ ಸ್ತ್ರೀ ಸುಷುವೇ ಮುಕುಂದಂ ಸ ಕಸ್ಯ ವೀರ್ಯಾದಜನಿಷ್ಟ ಕಾಯಃ' ಎಂದು ಸ್ತಂಭದಿಂದ ಉದ್ಭವವು ಉದಾಹರಿಸಿದ ಎಲ್ಲದರಲ್ಲಿಯೂ ದೊರೆಯದಿದ್ದರೂ ಭಗವಂತನಿಗೆ ಎಲ್ಲ ಜನರಂತೆ ಪ್ರಸಕ್ತವಾದ ಜನನವನ್ನು ನಿರಾಕರಿಸಲು 'ಯಥಾ ನೃಸಿಂಹಾಕೃತಿರಾವಿರಾಸೀತ್ ಸ್ತಂಭಾತ್' ಎಂದು ದೃಷ್ಟಾಂತ ಕೊಡಲು ಯೋಗ್ಯವಾಗುವಂತೆ ಅಲ್ಲಲ್ಲಿ ಕಂಭವಾಚಕ ಪದವನ್ನು ಅಧ್ಯಾಹಾರ ಮಾಡಿ ವಿದ್ವಾಂಸರು ಯೋಜಿಸಬೇಕು ಎಂದು ಸತ್ಯಧರ್ಮರ ಅಭಿಪ್ರಾಯ. ॥೧೫॥

**ತದ್ವೈವ ತಸ್ಮಿನ್ ನಿನದೋಽತಿಭೀಷಣೋ**
**ಬಭೂವ ಯೇನಾಂಡಕಟಾಹಮಸ್ಫುಟತ್ ।**
**ಯಂ ವೈ ಸ್ವಧಿಷ್ಣ್ಯೋಪಗತಂ ಹ್ಯಜಾದಯಃ**
**ಶ್ರುತ್ವಾ ಸ್ವಧಾಮಾಪ್ಯಯಮಂಗ ಮೇನಿರೇ** ॥೧೬॥

**ಅಂಗ** ಧರ್ಮರಾಜನೇ **ತದಾ ಏವ** ಯಾವಾಗ ಕಂಬಕ್ಕೆ ಹೊಡೆದನೋ ಆವಾಗಲೇ **ತಸ್ಮಿನ್** ಆ ಕಂಬದಲ್ಲಿ **ಅತಿಭೀಷಣಃ** ಭಯಂಕರವಾದ(ಅತ್ಯಂತಂ ಭೀಷಯತಿ ಜನಾನ್ ಇತಿ ಅತಿಭೀಷಣಃ ಅತ್ಯಂತಂ ಭೀಷಣಂ ಯಸ್ಮಾತ್ ಅತಿಭೀಷಣಃ) **ನಿನದಃ** ಶಬ್ದವು **ಬಭೂವ** ಉಂಟಾಯಿತು.('ಶಬ್ದೋ ನಿನಾದ ನಿನದ ಧ್ವನಿದಧ್ವಾರವಸ್ವನಾಃ' ಎಂದು ಅಮರವಿದೆ) **ಯೇನ** ಯಾವ ಶಬ್ದದಿಂದ **ಅಂಡಕಟಾಹಂ** ಬ್ರಹ್ಮಾಂಡಖರ್ಪರವು **ಅಸ್ಫುಟತ್** ಒಡೆದು ಹೋದಂತೆ ಭಾಸವಾಯಿತು **ಅಜಾದಯಃ** ಬ್ರಹ್ಮಾದಿಗಳು **ಯಂ** ಯಾವ ಶಬ್ದವನ್ನು **ಸ್ವಧಿಷ್ಣ್ಯೋಪಗತಂ** ತಮ್ಮ ತಮ್ಮ ಸತ್ಯಲೋಕಾದಿಗಳಿಗೆ ತನ್ನಿಂದ ಹುಟ್ಟಿದ ಶಬ್ದಾಂತರದ್ವಾರಾ ಬಂದದ್ದನ್ನು **ಶ್ರುತ್ವಾ** ಕೇಳಿ **ಸ್ವಧಾಮಾಪ್ಯಯಂ** ತಮ್ಮ ತಮ್ಮ ಮನೆಗಳ ನಾಶವೆಂದು **ಮೇನಿರೇ** ತಿಳಿದರು. ಶಬ್ದ ಕೇಳಿ ಪ್ರಲಯಕಾಲ ಸಮೀಪಿಸಿತೆಂದು ಊಹಿಸಿದರೆಂದು ಭಾವ.

ವಿಶೇಷ :- 'ಅಜಾದಯಃ' ಎಂಬುದು ಅತದ್ಗುಣಸಂವಿಜ್ಞಾನಬಹುವ್ರೀಹಿ ರುದ್ರಾದಿಗಳು ಎಂದರ್ಥ ಬ್ರಹ್ಮದೇವರಿಗೆ ಭ್ರಮವಿಲ್ಲತಾನೆ. ಯದ್ಯಪಿ 'ಕಟಾಹೋ ಘೃತಲೇಪಾದಿ ಪಾಕಪಾತ್ರೇ ಚ ಕೂರ್ಪರೇ' ಎಂಬ ವಿಶ್ವದಲ್ಲಿ ಕಟಾಹ ಶಬ್ದ ಪುಲ್ಲಿಂಗವಾಗಿ ಹೇಳಿದೆ. ಆದರೂ 'ಲಿಂಗಮಶಿಷ್ಯಂ' ಎಂದು ವ್ಯಾಕರಣಭಾಷ್ಯ-ದಲ್ಲಿರುವದರಿಂದಾಗಲಿ ಬ್ರಹ್ಮಾಂಡಕಟಾಹವು ಒಡೆಯಲಿಲ್ಲ ಕಿಂತು ಒಡೆದಂತೆ ಭಾಸಮಾನವಾಯಿತು ಎಂದು ತಿಳಿಸಲು ನಪುಂಸಕಲಿಂಗದಲ್ಲಿ ಹೇಳಿದ್ದು ಎಂದು ತಿಳಿಯಬೇಕು. ॥೧೬॥

**ಅಭಿಕ್ರಮನ್ ಪುತ್ರವಧೇಪ್ಸುರೋಜಸಾ**
**ನಿಶಮ್ಯ ನಿರ್ಹ್ರಾದಮಪೂರ್ವಮದ್ಭುತಮ್ ।**
**ಅಂತಃ ಸಭಾಯಾಂ ನ ದದರ್ಶ ತತ್ಪದಂ**
**ವಿತತ್ರಸುರ್ಯೇನ ಸುರಾರಿಯೂಥಪಾಃ** ॥೧೭॥

**ಪುತ್ರವಧೇಪ್ಸುಃ** ಮಗನನ್ನು ಕೊಲ್ಲಲಿಚ್ಛಿಸಿದ ಆ ಹಿರಣ್ಯಕಶಿಪುವು **ಓಜಸಾ** ಸಾಮರ್ಥ್ಯದಿಂದ **ಅಭಿಕ್ರಮನ್** ಮಗನ ಕಡೆಗೆ ನಡೆದು ಬರುತ್ತ **ಯೇನ** ಯಾವ

ಶಬ್ದದಿಂದ **ಸುರಾರಿಯೂಥಪಾಃ** ದೈತ್ಯಸೇನಾನಾಯಕರು **ವಿತತ್ರಸುಃ** ಹೇದರಿದರೋ **ತಂ** ಅಂತಹ **ಅಪೂರ್ವಂ** ಹಿಂದೆಂದೂ ಕೇಳದ **ಅದ್ಭುತಂ** ಆಶ್ಚರ್ಯಕರವಾದ **ನಿಹ್ರಾದಂ** ಶಬ್ದವನ್ನು **ನಿಶಮ್ಯ** ಕೇಳಿ **ಸಭಾಯಾಂ ಅಂತಃ** ಸಭೆಯ ಮಧ್ಯದಲ್ಲಿ ಸ್ತಂಭದಲ್ಲಿ **ತತ್ಪದಂ** ಆ ಶಬ್ದಕ್ಕೆ ನಿಮಿತ್ತವನ್ನು ಆ ಶಬ್ದ ಮಾಡಿದವನನ್ನು **ನ ದದರ್ಶ** ಕಾಣಲಿಲ್ಲ.

ವಿಶೇಷ ಃ- ಈ ನಾದದಿಂದ ಹಿರಣ್ಯಕಶಿಪುವು ಹೆದರಲಿಲ್ಲ ಎಂಬುದರಿಂದ ತಾತ್ಕಾಲಿಕ ಅವನ ಬಲಿಷ್ಠತೆ ತಿಳಿಯುವದು. 'ಯೇ ಪೂರ್ವಂ ನ ವಿತತ್ರಸುಃ ತೇ ಅಪಿ ಸುರಾದಿಯೂಥಪಾಃ ವಿತತ್ರಸುಃ' ಹೀಗೂ ಅನ್ವಯಮಾಡಿ ಹಿಂದೆ ಯಾರು ಹೆದರಿರಲಿಲ್ಲವೋ ಅಂಥ ದೈತ್ಯಸೇನಾಪತಿಗಳು ಹೆದರಿದರೆಂದರ್ಥ. ಸುರಾಶ್ಚ ಅರಯಶ್ಚ ತೇಷಾಂ ಯೂಥಪಾಃ ಎಂದು ಮಾಡಬಹುದು. ಇದರಿಂದ ಹಿಂದಿನ ಶ್ಲೋಕದಲ್ಲಿ ದೇವತೆಗಳು ತಮ್ಮ ಮನೆಗಳು ನಾಶವಾಗುವದೆಂದು ತಿಳಿದರು ಎಂದು ಹೇಳಿದ್ದರ ಸ್ವಾರಸ್ಯ ಬರುವದು. ದೇವತೆಗಳು ದೈತ್ಯರು ಅವರ ಸೇನಾಪತಿಗಳೂ ಹೆದರಿದರು ಎಂದರ್ಥ. ॥೧೬॥

ನಿನಾದದಿಂದಲೇ ಹಿರಣ್ಯಕಶಿಪುವಿನ ಸಂಹಾರಮಾಡಲು ಸಾಧ್ಯ ಆದರೂ ತನ್ನ ಭೃತ್ಯವರ್ಗದ ಮಾತನ್ನು ಸತ್ಯಗೊಳಿಸಲು ವಿಲಕ್ಷಣಲಕ್ಷಣವುಳ್ಳ ತನ್ನ ಸ್ವರೂಪವನ್ನು ವ್ಯಕ್ತಗೊಳಿಸಿದನೆಂದು ಹೇಳುವರು-

**ಸತ್ಯಂ ವಿಧಾತುಂ ನಿಜಭೃತ್ಯಭಾಷಿತಂ**
**ವ್ಯಾಪ್ತಿಂ ಚ ಭೂತೇಷ್ವಖಿಲೇಷು ಚಾತ್ಮನಃ ।**
**ಅದೃಶ್ಯತಾತ್ಯದ್ಭುತರೂಪಮುದ್ವಹನ್**
**ಸ್ತಂಭೇ ಸಭಾಯಾಂ ನ ಮೃಗಂ ನ ಮಾನುಷಮ್** ॥೧೮॥

**ನಿಜಭೃತ್ಯಭಾಷಿತಂ** ಏಕಾಂತಭಕ್ತನಾದ ಪ್ರಹ್ಲಾದನ ('ಸ ಸರ್ವತ್ರ' ಎಂಬ ಮಾತನ್ನು,) ಅಥವಾ **ನಿಜೇನ** ತನ್ನಿಂದಲೇ **ಭೃತ್ಯೌ ಪ್ರತಿ** ಜಯ-ವಿಜಯರನ್ನು ಕುರಿತು **ಭಾಷಿತಂ** 'ಮಯ್ಯೆವ ವಧ್ಯೌ ಭವತಂ ತ್ರಿಜನ್ಮಸು' ಮೂರು ಜನ್ಮಗಳಲ್ಲಿ ನನ್ನಿಂದಲೇ ಮರಣವುಳ್ಳವರಾಗಿರಿ ಎಂಬ ಮಾತನ್ನು ಅಥವಾ ಪ್ರಹ್ಲಾದನೂ ಕೂಡ ಐಹಿಕ ಅಪೇಕ್ಷೆ ಉಳ್ಳವನೇ ಆದ್ದರಿಂದ ಅವನ ಮಾತಿನಿಂದೇನು ಕೆಲಸ, ಅವನ ಮಾತನ್ನೇಕೆ ಸತ್ಯ ಮಾಡಬೇಕು ಅವನು ಹಾಗಲ್ಲವೆಂದೂ ಹೇಳುವರು. **ನಿಜಭೃತ್ಯ** ತನ್ನ ರಕ್ಷಣೆಗಾಗಿ **ಅಭಾಷಿತಮ್** ಆಡದ ಪ್ರಹ್ಲಾದನ ಮಾತು ನಿರುಪಾಧಿಕ ಎಂದು ಭಾವ. **ನಿಜಭೃತ್ಯಾಃ** ಸನಕಾದಿಗಳು ಅವರಿಂದ **ಭಾಷಿತಂ** 'ದುರ್ಜನ್ಮತ್ರಿಕಸಂಪತ್ಯನಂತರಂ ಮುಕ್ತಾ ಭವತ' ಮೂರು ದುಷ್ಟಜನ್ಮಗಳು ಬಂದ ನಂತರ ಮುಕ್ತರಾಗಿರಿ ಎಂದು ಸಂಹಾರವಿಲ್ಲದೆ

ಮುಂದಿನ ಎರಡುಜನ್ಮ ನಂತರ ಮುಕ್ತಿ ಆಗುವದಿಲ್ಲವಾದ್ದರಿಂದ ಅವರ ಮಾತನ್ನು ಸತ್ಯಗೊಳಿಸಲು ಅಥವಾ **ನಿಜಸ್ಯ** ಸ್ವಕೀಯರಾದ ಬ್ರಹ್ಮದೇವರ **ಭೃತ್ಯ** ಹಿರಣ್ಯಕಶಿಪು ಅವನಿಂದ **ಭಾಷಿತಂ** ಕೇಳಿಕೊಂಡ 'ಭೂತೇಭ್ಯಸ್ತ್ವದ್ವಿಸೃಷ್ಟೇಭ್ಯೋ ಮೃತ್ಯುರ್ಮಾಭೂನ್ಮಮ ಪ್ರಭೋ । ನಾಂತರ್ಬಹಿರ್ನನರ್ದೈರ್ನಮೃಗೈಃ' ಮುಂತಾದ ನಿನ್ನಿಂದ ಸೃಷ್ಟವಾದ ಪ್ರಾಣಿಗಳಿಂದ ಮರಣವಾಗಬಾರದು ಹಗಲಾಗಬಾರದು, ರಾತ್ರಿಯಾಗಬಾರದು, ಮನುಷ್ಯರಿಂದಾಗಬಾರದು, ಮೃಗಗಳಿಂದಾಗಬಾರದು ಮುಂತಾದ ಮಾತನ್ನು ಸತ್ಯಗೊಳಿಸಲು. ಅಥವಾ ಹಿರಣ್ಯಕಶಿಪುವಿಗೆ **ನಿಜಭೃತ್ಯ** ತನ್ನ ಭೃತ್ಯರಾದ ಬ್ರಹ್ಮದೇವರು 'ತಥಾಸ್ತು' ಎಂದು ಹೇಳಿದ್ದನ್ನು ಸತ್ಯಮಾಡಲು. ಅಥವಾ 'ನೂನಂ ಏತದ್ವಿರೋಧೇನ ಮೃತ್ಯುರ್ಮೇ ಭವಿತಾ ಧ್ರುವಂ' ಎಂದು ಪ್ರಹ್ಲಾದನ ವಿರೋಧ ಮಾಡಿದರೆ ನನಗೆ ಸಾವು ನಿಶ್ಚಿತ ಎಂದು ತನ್ನ ವಿಷಯದಲ್ಲಿ ಮತ್ತು ಮಗನ ವಿಷಯದಲ್ಲಿ 'ಗೋಪಾಯೇತ' ನಿನ್ನ ಸ್ವಾಮಿ ಇದ್ದರೆ ಈಗ ಬಂದು ರಕ್ಷಿಸಲಿ ನೋಡೋಣ ಎಂದು ಸ್ವಕೀಯರಾದ ಬ್ರಹ್ಮಭೃತ್ಯನಾದ ಹಿರಣ್ಯಕಶುಪುವಿನ ಮಾತುಗಳನ್ನು ಸತ್ಯಮಾಡಲು. ಅಥವಾ **ನಿಜೇನ** ತನ್ನಿಂದಲೇ **ಭೃತ್ಯಾನಾಂ** ಭೃತ್ಯರ ವಿಷಯದಲ್ಲಿ **ಭಾಷಿತಂ** ಹೇಳಿದ 'ನ ಮೇ ಭಕ್ತಃ ಪ್ರಣಶ್ಯತಿ'ನನ್ನ ಭಕ್ತರು ನಾಶಹೊಂದುವದಿಲ್ಲ ಎಂದು ಹೇಳಿದ್ದನ್ನು. ಅಥವಾ 'ಪ್ರಿಯೋ ಹಿ ಜ್ಞಾನಿನೋತ್ಯರ್ಥಂ'''ಯೋಗಕ್ಷೇಮಂ ವಹಾಮ್ಯಹಂ' ಜ್ಞಾನಿಗಳು ನನಗೆ ಅತ್ಯಂತ ಪ್ರಿಯರು. ಅವರ ಯೋಗಕ್ಷೇಮವನ್ನು ವಹಿಸುವೆನು ಎಂಬ ತನ್ನ ಮಾತನ್ನು ಸತ್ಯಮಾಡಲು. ಅಥವಾ **ನಿಜಭೃತ್ಯಸ್ಯ** ತನ್ನ ಭೃತ್ಯ ನಾರದನಿಂದ **ಭಾಷಿತಂ** ಹೇಳಿದ 'ಅಯಮಕುತಶ್ಚಿದ್ಭಯೋಽಮರಃ' ಇವನು ಯಾರಿಂದಲೂ ಭಯವಿಲ್ಲದವನು ಎಂಬ ಮಾತನ್ನು ಅಥವಾ **ನಿಜೇನ** ತನ್ನಿಂದ **ಭಾಷಿತಂ** ಹೇಳಿದ 'ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್' ಎಂಬ ಮಾತು ಮತ್ತು ಭೃತ್ಯೈಃ ಭಾಷಿತಂ 'ಮಾಂ ರಕ್ಷತು ವಿಭುರ್ನಿತ್ಯಂ' ಮುಂತಾದ ನಾನು ಸಂಸಾರಸಾಗರದಿಂದ ಉದ್ಧರಿಸುವೆನು ಸ್ವಾಮಿಯು ನಮ್ಮನ್ನು ರಕ್ಷಿಸಲಿ ಮುಂತಾದ ಮಾತುಗಳನ್ನು ಅಥವಾ **ನಿಜೇ** ತನ್ನ ವಿಷಯದಲ್ಲಿ **ಭೃತ್ಯೈಃ** ಶ್ರೀಮದಾಚಾರ್ಯರು, ಟೀಕಾಚಾರ್ಯರೇ ಮೊದಲಾದವರುಗಳಿಂದ ಭಾಷಿತಂ 'ನ ಶುಕ್ಲರಕ್ತಪ್ರಭವೋಽಸ್ಯ ದೇಹಃ' ಎಂಬ ಮಾತನ್ನು ಶ್ರೀಹರಿಯ ದೇಹ ಪುರುಷನ ಶುಕ್ಲಸ್ತ್ರಿಯರಕ್ತದಿಂದ ಉಂಟಾದುದಲ್ಲ ಎಂಬ ಮಾತನ್ನು **ಸತ್ಯಂ** ನಿಜವಾಗಿ **ವಿಧಾತುಂ** ಮಾಡಲು **ಅಖಿಲೇಷು ಭೂತೇಷು** ಅಸಂಕುಚಿತವಾಗಿ ಚರಾಚರಗಳಲ್ಲಿ ಒಂದನ್ನೂ ಬಿಡದೇ **ಆತ್ಮನಃ** ಚೆನ್ನಾಗಿ ವ್ಯಾಪ್ತನಾದುದರಿಂದ ಆತ್ಮ ಶಬ್ದವಾಚ್ಯನಾದ ತನಗೆ **ವ್ಯಾಪ್ತಿಂ ಚ** ವ್ಯಾಪ್ತಿಯನ್ನು **ಸತ್ಯಂ ವಿಧಾತುಂ ಚ** ಸತ್ಯ ಮಾಡುವದಕ್ಕಾಗಿಯೂ **ಅತ್ಯದ್ಭುತರೂಪಂ** ಬ್ರಹ್ಮದೇವರ ವರ

ಸತ್ಯಮಾಡುವದಕ್ಕೆ ಕಾರಣವಾದುದರಿಂದ ಅತ್ಯಾಶ್ಚರ್ಯಕರವಾದುದನ್ನು **ಉದ್ವಹನ್** ಸ್ವೀಕರಿಸುತ್ತಾ ಅದೆಂಥ ರೂಪವೆಂದರೆ **ನ ಮೃಗಂ** ನ ವಿದ್ಯತೇ ಮೃಗಃ ಮೃಗಾಕಾರಃ (ಸರ್ವಂ ವಾಕ್ಯಂ ಸಾವಧಾರಣಂ ಎಂದು ಹೇಳಿರುವದರಿಂದ) ಕೇವಲ ಮೃಗಾಕಾರವಿಲ್ಲದ **ನ ಮಾನುಷಂ** ಕೇವಲ ಮನುಷ್ಯಾಕಾರವಿಲ್ಲದ **ಮೃಗಂ** ಸಿಂಹದಂತೆಯೂ **ಮಾನುಷಂ** ಮನುಷ್ಯರಂತೆಯೂ ಇರುವ ರೂಪವನ್ನು ಸ್ವೀಕರಿಸಿ **ಸಭಾಯಾಂ** ಸಭೆಯಲ್ಲಿರುವ **ಸ್ತಂಭೇ** ಕಂಬದಲ್ಲಿ **ಅದೃಶ್ಯತ** ಕಾಣಿಸಿ ಕೊಂಡನು. ||೧೮||

**ಸ ಸತ್ವಮೇವಂ ಪರಿತೋ ವಿಪಶ್ಯನ್**
**ಸ್ತಂಭಸ್ಯ ಮಧ್ಯಾದನು ನಿರ್ಜಿಹಾನಮ್ ।**
**ನಾಯಂ ಮೃಗೋ ನಾಪಿ ನರೋ ವಿಚಿತ್ರಂ**
**ಅಹೋ ಕಿಮೇತನ್ನೃಮೃಗೇಂದ್ರರೂಪಮ್ ||೧೯||**

**ಸಃ** ಹಿರಣ್ಯಕಶಿಪುವು(**ಪರಿತಃ** ಸುತ್ತಲೂ)**ಸ್ತಂಭಸ್ಯ** ಕಂಬದ **ಮಧ್ಯಾತ್** ಮಧ್ಯದಿಂದ **ಅನುನಿರ್ಜಿಹಾನಂ** ಹೊರಬರುತ್ತಿದ್ದ **ಏವಂ** ಈ ರೀತಿಯ **ಸತ್ವಂ** ಪ್ರಾಣಿಯನ್ನು **ಪರಿತಃ** ಸುತ್ತಲೂ, ಎಲ್ಲ ರೀತಿಯಿಂದಲೂ ಎಲ್ಲ ಕಡೆಗೆ, **ವಿಪಶ್ಯನ್** ವಿಶೇಷವಾಗಿ ನೋಡುತ್ತ **ಅಯಂ** ಕಾಣುವ ಈ ಪದಾರ್ಥವು **ನ ಮೃಗಃ** ಸಿಂಹವಷ್ಟೇ ಅಲ್ಲ. **ನರೋ ಅಪಿ ನ** ಕೇವಲ ಮನುಷ್ಯನೂ ಅಲ್ಲ **ವಿಚಿತ್ರಂ** ವಿಲಕ್ಷಣವಾದ **ಅವಿಚಿತ್ರಂ** (ಚಿತ್ರಾ ಮಾಯಾ ಸಾ ವಿಗತಾ ಯಸ್ಮಾತ್ ತದ್ವಿಚಿತ್ರಂ ತನ್ನ ಭವತೀತಿ ಅವಿಚಿತ್ರಂ) ಮಾಯಿಕವಾದುದು **ನೃಮೃಗೇಂದ್ರರೂಪಂ** ಮನುಷ್ಯ ಮತ್ತು ಸಿಂಹರೂಪದ **ಏತತ್** ಈ ಪ್ರಾಣಿಯು **ಕಿಂ** ಏನಿರಬಹುದು **ಅಹೋ** ಆಶ್ಚರ್ಯ **ಇತಿ** ಎಂದು ವಿಚಾರಮಾಡುವ ಎಂದು ಮುಂದಿನ ಶ್ಲೋಕದಿಂದ ಅನ್ವಯ.

ವಿಶೇಷ ಃ- 'ಚಿತ್ರಾಮಾಯಾಯಂ ಸರ್ಪನಕ್ಷತ್ರನದೀಭೇದೇಷು ಚ ಸ್ತ್ರಿಯಾ' ಎಂದು ಅಮರಸುಧಾದಲ್ಲಿ ಚಿತ್ರಭಾನು ಪದಾರ್ಥ ಹೇಳುವಾಗ ಚಿತ್ರಶಬ್ದದ ಅರ್ಥ. 'ಚಿತ್ರಂ ಭದ್ರಂ' ಎಂದು. ಋಗ್ಭಾಷ್ಯದಲ್ಲಿ ಹೇಳಿದ್ದನ್ನೂ ಅನುಸಂಧಾನ ಮಾಡಬೇಕು.

'ಸತ್ವಂ ಪ್ರಾಣಿಷು ಜಂತುಷು'ಎಂದು ವಿಶ್ವವಿದೆ. **ಸಸತ್ವಂ** ಬಲಸಹಿತವಾದ ಎಂದೂ ಅರ್ಥ ಮಾಡಬಹುದು. 'ಸತ್ವಂ ಬಲೇ ಚ' ಎಂದೂ ವಿಶ್ವದಲ್ಲಿ ಹೇಳಿದೆ. **ಅನು** ಪ್ರದರ್ಶನಾನಂತರ **ನಿರ್ಜಿಹಾನಂ** ಬರುತ್ತಿರುವ ಪದಾರ್ಥವನ್ನು ಹೀಗೂ ಅರ್ಥ

**ಮೀಮಾಂಸಮಾನಸ್ಯ ಸಮುತ್ಥಿತೋಽಗ್ರತೋ**
**ನೃಸಿಂಹರೂಪ(ರೂಪಂ)ಸ್ತದಲಂ ಭಯಾನಕಮ್ ।**

**ಪ್ರತಪ್ತಚಾಮೀಕರ(ಕಾರ್ತಸ್ವರ)ಚಂಡಲೋಚನಂ**
**ಸ್ಫುರತ್ ಸಟಾಕೇಸರಜೃಂಭಿತಾನನಮ್** ॥೨೦॥

**ಮೀಮಾಂಸಮಾನಸ್ಯ** ವಿಚಾರಮಾಡುತ್ತಿದ್ದ ಹಿರಣ್ಯಕನ **ಅಗ್ರತಃ** ಮುಂದೆ **ನೃಸಿಂಹರೂಪಃ** ನರಸಿಂಹರೂಪಿಯಾದ ಶ್ರೀಹರಿಯು **ಸಮುತ್ಥಿತಃ** ನಿಂತನು **ತತ್** ಆ ರೂಪವೂ **ಅಲಂ** ಅತ್ಯಂತ **ಭಯಾನಕಂ** ಭಯಜನಕವು (ರೂಪಂ ಎಂಬ ಪಾಠದಲ್ಲಿ ಸಮುದ್ವಹನ್ ಸಮುತ್ಥಿತಃ ಎಂದು ಅನ್ವಯ ಮಾಡಿಕೊಂಡು ವ್ಯಕ್ತನಾದನೆಂದು ಅರ್ಥ ಮಾಡಬೇಕು.)**ಪ್ರತಪ್ತಚಾಮೀಕರಚಂಡಲೋಚನಂ** ಪುಟಕ್ಕೆ ಹಾಕಿದ ಚಿನ್ನದಂತೆ ಕ್ರೂರವಾದ ಕಣ್ಣುಗಳುಳ್ಳ **ಸ್ಫುರತ್** ಪ್ರಕಾಶಿಸುವ **ಸಟಾಕೇಸರಜೃಂಭಿತಾನನಂ** ಕುತ್ತಿಗೆಯ ಮೇಲಿನ ರೋಮಗಳನ್ನು ಹೊಂದಿರುವ ಮತ್ತು ತೆರೆದ ಬಾಯಿಯುಳ್ಳ.

ವಿಶೇಷ ಃ- 'ಚಾಮೀಕರಂ ಜಾತರೂಪಂ ಮಹಾರಜತಕಾಂಚನೇ । ರುಕ್ಮಂ ಕಾರ್ತಸ್ವರಂ ಜಾಂಬೂನದಮಷ್ಟಾಪದೇ ಸ್ತ್ರಿಯಾಂ' ಎಂದು ಅಮರ. ಕಾರ್ತಸ್ವರ ಎಂಬ ಪಾಠದಲ್ಲಿ ಕೃತಸ್ವರ ಎಂಬ ಆಕರ(ಖನಿ)ದಲ್ಲಿ ಹುಟ್ಟಿದ್ದೆಂದು ಅರ್ಥ. ಚಂ ಎಂದರೆ ಚಾಕಚಕ್ಯದಿಂದ ನೋಡಲಾಗದ ಎಂದರ್ಥ. ಪ್ರತಪ್ತಚಾಮೀಕರವತ್ ಚಂಡಾನಿ ಲೋಚನಾನಿ ಯಸ್ಯ ತತ್ (ತ್ರ್ಯಕ್ಷಂ ಎಂದು ಹೇಳಿದ್ದರಿಂದ ಬಹುವಚನ) 'ಹಿರಣ್ಯಾಕ್ಷಸವಿತಾದೇವ ಆಗಾತ್' ಎಂದು ಶ್ರುತಿ ಇದೆ. 'ಸಟಜಟಾಕೇಸರಯೋಃ' ಎಂದು ವಿಶ್ವವಿದೆ. ಅದರಲ್ಲಿಯೂ ಹೆಗಲಿನ ಮೇಲಿರುವ ಕೂದಲನ್ನು ತೆಗೆದುಕೊಳ್ಳಬೇಕು. ಕೇಸರ ಶಬ್ದವೂ ಸಹ ಸಟಾದಲ್ಲಿದೆ ಎಂದು ವಿಶ್ವದಲ್ಲಿರುವದರಿಂದ ಕುತ್ತಿಗೆಯದ್ದಲ್ಲದೇ, ಕಿವಿ ಮುಂತಾದ ಸ್ಥಳದಲ್ಲಿರುವ ಕೂದಲನ್ನು ಕೇಸರಪದದಿಂದ ಸ್ವೀಕರಿಸಬೇಕು. ಸ್ಫುರತ್ಸಟಾಕೇಸರಂ ಚ ತತ್ ಜೃಂಭಿತಾನನಂ ಚ ಎಂದು ವಿಶೇಷಣದ್ವಯಕ್ಕೆ ಕರ್ಮಧಾರಯಸಮಾಸ ಮಾಡಬೇಕು. ॥೨೦॥

ಆ ಪರಮಾತ್ಮನ ರೂಪವನ್ನೇ ಕೆಲವು ಪದ್ಯಗಳಿಂದ ವರ್ಣಿಸುವರು-

**ಕರಾಲದಂಷ್ಟ್ರಂ ಕರವಾಲಚಂಚಲಂ**
**ಕ್ಷುರಾಂತಜಿಹ್ವಂ ಭ್ರುಕುಟೀಮುಖೋಲ್ಬಣಮ್ ।**
**ಸ್ತಬ್ಧೋರ್ಧ್ವಕರ್ಣಂ ಗಿರಿಕಂಧರಾದ್ಭುತ-**
**ವ್ಯಾತ್ತಾಸ್ಯನಾಸಂ ಹನುಭೇದಭೀಷಣಮ್** ॥೨೧॥

**ಕರಾಲದಂಷ್ಟ್ರಂ** ಕ್ರೂರವಾದ ಕೋರೆ ಹಲ್ಲುಗಳು **ಕರವಾಲಚಂಚಲಂ** ಖಡ್ಗದಂತೆ ಚಂಚಲವಾದ **ಕ್ಷುರಾಂತಜಿಹ್ವಂ** ಚೂರಿಯ ಕೊನೆಯಂತೆ ಇರುವ ನಾಲಿಗೆಯುಳ್ಳ **ಭ್ರುಕುಟೀಮುಖೋಲ್ಬಣಂ** ಹುಬ್ಬಿನ ಗಂಟಿನ ತುದಿಯಿಂದ ಕ್ರೂರವಾದ

**ಸ್ತಬ್ಧೋರ್ಧ್ವಕರ್ಣಂ** ನಿಗರಿನಿಂತ ಕಿವಿಗಳುಳ್ಳ(ಮೇಲೆ ಮಾಡಿದ ಕಿವಿಗಳುಳ್ಳ) ಚಲಿಸದ ಉದ್ದವಾಗಿ ಮೇಲಕ್ಕೆ ನಿಂತಿರುವ ಕಿವಿಗಳುಳ್ಳ **ಗಿರಿಕಂಧರಾದ್ಭುತವ್ಯಾತ್ತಾಸ್ಯನಾಸಂ** ಪರ್ವತ ಗುಹೆಯಂತೆ ಮೂಲಕಾಣದಿರುವದರಿಂದ ಆಶ್ಚರ್ಯಕರವಾದ ಅಗಲಿಸಿದ ಬಾಯಿ ಮತ್ತು ಮೂಗಿನ ಹೊರಳೆಗಳುಳ್ಳ **ಹನುಭೇದಭೀಷಣಂ** ಎರಡು ಭಾಗವಾಗಿ ತೆರೆದ ಕಪೋಲಾವಯವಗಳಿಂದ ಭಯಜನಕವಾದ,

**ದಿವಿಸ್ಪೃಶತ್ಕಾಯಮದೀರ್ಘಪೀವರ**
**ಗ್ರಿವೋರುವಕ್ಷಃ ಸ್ಥಮಲ್ಪಮಧ್ಯಮಮ್ ।**
**ಚಂದ್ರಾಂಶುಗೌರೈಶ್ಚುರಿತಂ ತನೂರುಹೈ-**
**ರ್ವಿಶ್ವಗ್ಭುಜಾನೀಕಶತೈರ್ನಖಾಯುಧಮ್(ಧೈಃ)** **॥೨೨॥**

**ದಿವಿಸ್ಪೃಶತ್ಕಾಯಂ** ಅಂಬರಚುಂಬಿಯಾದ ಶರೀರವುಳ್ಳ **ಅದೀರ್ಘ-ಪೀವರಗ್ರೀವೋರುವಕ್ಷಸ್ಥಲಂ ಅದೀರ್ಘ** ಉದ್ದವಲ್ಲದ **ಪೀವರ** ಪುಷ್ಟವಾದ (ದಪ್ಪ) **ಗ್ರೀವಾ** ಕುತ್ತಿಗೆ **ಊರು** ತೊಡೆಗಳು **ವಕ್ಷಸ್ಥಲಂ** ಹಾಗೂ ಎದೆಯುಳ್ಳ **ಅಲ್ಪಮಧ್ಯಮಂ** ಸಣ್ಣಹೊಟ್ಟೆಯುಳ್ಳ ಅಥವಾ ಸಣ್ಣಟೊಂಕ ಉಳ್ಳ **ಚಂದ್ರಾಂಶುಗೌರೈಃ** ಚಂದ್ರನ ಕಿರಣಗಳಂತೆ ಬೆಳ್ಳಗಿರುವ ಅಥವಾ **ಚಂದ್ರಸ್ಯ** ಸುವರ್ಣದ **ಅಂಶವಃ** ತಂತಿಗಳಂತೆ **ಗೌರೈಃ** ಪೀತವರ್ಣವುಳ್ಳ **ತನೂರುಹೈಃ** ಕೂದಲುಗಳಿಂದ **ಚುರಿತಂ** ವ್ಯಾಪ್ತವಾದ **ವಿಷ್ವಗ್ಭುಜಾನೀಕಶತೈಃ ಛುರಿತಂ** ಸುತ್ತಲೂ ಎಲ್ಲ ಕಡೆಗೂ ಹರಡಿರುವ ಅನೇಕ ಭುಜಗಳುಳ್ಳ (ಅನೇಕಶಬ್ದ ಪರ್ಯಾಯವಾದುದು ಅನೀಕಶಬ್ದ) ಅಥವಾ ನೂರಾರು ಯುದ್ಧಗಳನ್ನು ಮಾಡಿದ ಭುಜಗಳುಳ್ಳ (ಗಳಿಂದ) ಎಂದರ್ಥ. ಅಥವಾ ವಿಷಗ್ಭುಜಾಶ್ಚ ತೇ ಅನೀಕಶತಾಶ್ಚ ತೈಃ ಸುತ್ತಲು ಕೈಗಳು ಮತ್ತು ಸೈನ್ಯಗಳುಳ್ಳ ಎಂದರ್ಥ. 'ಅನೀಕಂ ತು ರಣೇ ಸೈನ್ಯೇ ವ್ಯಲಿಕೇ ವಿಷಯಲಂಪಟೇ ಮುಂತಾದ ಅನೇಕಾರ್ಥಗಳಿವೆ ಎಂದು ವಿಶ್ವ. ಭಯದಿಂದ ಹೀಗೆ ಹಿರಣ್ಯಕಶಿಪು ತಿಳಿದನು ಎಂದಾದರೂ ಹೇಳಬಹುದು. ॥೨೨॥

ವಿಶೇಷ :- ದಿವಿ(ಗಗನ) ಎಂಬಲ್ಲಿ ಸಪ್ತಮಿಗೆ 'ಹೃದ್ಯುಭ್ಯಾಂ ಚ' ಎಂಬುದರಿಂದ ಲೋಪವಾಗಿಲ್ಲ ಎಂದು ಕೆಲವರು ಹೇಳುವರು. ಸ್ವರ್ಗಪರ್ಯಂತ ವ್ಯಾಪ್ತವಾದ ದೇಹವುಳ್ಳ ದಿವಿಸ್ಪೃಶಶಬ್ದಕ್ಕೆ ಸಂಜ್ಞಾತ್ವವಿರುವದರಿಂದ 'ಹಲಂತಾತ್ ಸಂಜ್ಞಾಯಾಂ' ಎಂಬುದರಿಂದ ಅಲುಕ್ ಎನ್ನುತ್ತಾರೆ ಮಂದನಂದಿನಿಕಾರರು.

ಅಸೂಕ್ಷ್ಮಕಟಂ ಎಂದಿದೆ ಸತ್ಯಧರ್ಮರ ಟಿಪ್ಪಣಿಯಲ್ಲಿ ಛತ್ವರ ಮುಂತಾಗಿ ನಿಪಾತಿತವಾದ ಪೀವರಶಬ್ದವು ಪುಷ್ಟವಾಚಕವಾಗಿದೆ. ವಿಶೇಷ್ಯಾನುಸಾರ ಪ್ರಯೋಜ್ಯವಾಗಿದೆ. 'ಪೀವರೇ ಕಚ್ಛಪೇ ಸ್ಥೂಲೇ' ಎಂದು ವಿಶ್ವ. ಮಧ್ಯಾನ್ಮಃ ಎಂದು ಮಧ್ಯಶಬ್ದದ ಮೇಲೆ ಮಪ್ರತ್ಯಯ ಮಾಡಿದರೆ ಮಧ್ಯಮ ಎಂದಾಗುವದು.

'ಚಂದ್ರಃ ಸುಧಾಂಶುಕರ್ಪೂರ್ರಂ ಪಿಲ್ಲಸ್ವರ್ಣವಾರಿಷು' ಎಂದು ವಿಶ್ವವಿದೆ.(ಪಿಲ್ಲ ಎಂದರೆ ರೋಗದಿಂದ ನೀರು ಸೋರುವ ಕಣ್ಣು, ಕಣ್ಣುಳ್ಳವನು) 'ಗೌರಃ ಪೀತೇ ಅರುಣೇ ಶ್ವೇತೇ' ಎಂದು ವಿಶ್ವ. ಚಂದ್ರ ಮತ್ತು ಅಂಶು ಎಂದರೆ ಸೂರ್ಯ ಅವರೀರ್ವರಂತೆ ಗೌರ್ಯೈಃ ಬೆಳ್ಳಗೆ ಮತ್ತು ಕೆಂಪಗೆ ಇರುವ ಎಂದರ್ಥ. ಎರಡು ಆಕಾರಗಳಿರುವದರಿಂದ ಎರಡು ತರಹದ ಕೂದಲಗಳು ಯುಕ್ತವೆಂದು ತಿಳಿಯಬೇಕು.

**ದುರಾಸದಂ ಸರ್ವನಿಜೇತರಾಯುಧ-**
**ಪ್ರವೇಕವಿದ್ರಾವಿತದೈತ್ಯದಾನವಮ್ ।**
**ಪ್ರಾಯೇಣ ಮೇಯಂ ಹರಿಣೌರಸಾರಿಣಾ**
**ವಧಃ ಸ್ಮೃತೋಽನೇನ ಸಮುದ್ಯತಸ್ಯ ಕಿಮ್ ॥೨೩॥**

**ದುರಾಸದಂ** ಹೊಂದಲಸಾಧ್ಯವಾದ **ಸರ್ವ** ಎಲ್ಲ ನಿಜ ಸ್ವರೂಪಭೂತವಾದ **ಇತರ** ಅವುಗಳಿಂದ ಭಿನ್ನವಾದ ಚಕ್ರ ಮುಂತಾದ **ಆಯುಧಪ್ರವೇಕ** ಆಯುಧ ಶ್ರೇಷ್ಠಗಳಿಂದ **ವಿದ್ರಾವಿತ** ಓಡಿಸಲ್ಪಟ್ಟ **ದೈತ್ಯದಾನವಂ** ದೈತ್ಯದಾನವರುಳ್ಳ ರೂಪವು **ಸಮುದ್ಯತಸ್ಯ** ಯುದ್ಧಕ್ಕೆ ಸನ್ನದ್ಧನಾದ ಅಥವಾ ಮಗನನ್ನು ಕೊಲ್ಲಲು ಉದ್ಯುಕ್ತನಾದ **ಮೇ** ನನಗೆ **ಔರಸಾರಿಣಾ** ಸಹಜಶತ್ರುವಾದ **ಹರಿಣಾ** ಶ್ರೀಹರಿಯಿಂದ **ಪ್ರಾಯೇಣ** ಬಹುಶಃ **ಅಯಂ** ಮುಂದೆ ಬರುವ **ವಧಃ ಸ್ಮೃತಃ ಕಿಂ** ಸಂಹಾರವು ಯೋಚಿಸಲ್ಪಟ್ಟಿದೆಯೇ, ಅಥವಾ ಮೇ ಯೋ ವಧಃ ಸ್ಮೃತಃ (ಜಾತಸ್ಯ ಹಿ ಧ್ರುವೋ ಮೃತ್ಯುಃ ಎಂದು ಹುಟ್ಟಿದವನಿಗೆ ಸಾವು ನಿಶ್ಚಿತ ಎಂದು ಹೇಳಲ್ಪಟ್ಟಿದೆಯೋ ಹೀಗೂ ಅರ್ಥ.

ವಿಶೇಷ :- 'ಔರಸಾರಿಣಾ' ಔರಸ ಎಂದರೆ ನನ್ನ ಮಗ ಅವನ ನಿಮಿತ್ತದಿಂದ ಅರಿಣಾ ದ್ವೇಷಿಯಾದ ಹರಿಯಿಂದ ಬರುವದು ಪ್ರಾಯಃ ಇದೆ ಇರಬೇಕು ಎಂದು ಊಹಿಸಿದನು. ಇಲ್ಲಿ ನಿಜೇತರಾಯುಧ ಎಂಬಲ್ಲಿ ನಿಜಸ್ವರೂಪಗಳಾದ ಉಗುರು ಇತರ ಅವುಗಳಿಂದ ಭಿನ್ನವಾದ ಚಕ್ರಾದ್ಯಾಯುಧಗಳು ಎಂದರ್ಥ ಮಾಡಬೇಕೆ ಹೊರತು ನಿಜಾಃ ಸ್ವರೂಪಭೂತಾಃ ಇತರೇ ತದ್ಭಿನ್ನಾ ಚಕ್ರಾದ್ಯಾಯುಧಪ್ರವೇಕಾಃ ಎಂದು ಅಂದರೆ ಚಕ್ರಾದ್ಯಾಯುಧಗಳೇ ಸ್ವರೂಪಭೂತ, ಭಿನ್ನವಾದವು ಎಂದು ಹೇಳಿದಂತೆ ಆಗುತ್ತದೆ ಅದು ಸರಿಯಲ್ಲ. 'ಭೂಷಣಾಯುಧಲಿಂಗಾಖ್ಯಾ ಧತ್ತೆ' ಎಂಬ ಆರನೇ ಸ್ಕಂಧದಲ್ಲಿ ನಾರಾಯಣವರ್ಮದ ತಾತ್ಪರ್ಯದಲ್ಲಿ 'ಭೂಷಾಹೇತಿಧ್ವಜೇಷ್ವಜಃ' ಎಂದು ಭೂಷಣ ಆಯುಧಧ್ವಜಗಳಲ್ಲಿ ಅವನಿರುವದರಿಂದ ಆ ಹೆಸರನ್ನು ಹೊಂದಿರುವನು ಎಂದು ಹೇಳಿರುವರು. ಇದರಿಂದ ಚಕ್ರಾದ್ಯಾಯುಧಗಳು ಭಿನ್ನಗಳೆಂದು ತಿಳಿಯುವದು. ಸ್ವರೂಪಭೂತವಾದ ಆಯುಧಗಳಿದ್ದರೆ ಆಯುಧಾತ್ಮಕವಾದ್ದರಿಂದಲೇ ಆ ಆ ಶಬ್ದವಾಚ್ಯತ್ವ ಹೇಳುವದು ಸುಲಭವಾಗಿತ್ತು.

**ಸುದರ್ಶನಾದ್ಯಾಯುಧಾನಿ ಪೃಥ್ವಾದ್ಯಾಶ್ಚಕ್ರವರ್ತಿನಃ ।**
**ಇತ್ಯಾದಿವಿಷ್ಣುನಾಽಽವಿಷ್ಟಾ ಭಿನ್ನಾ ಸಂಸಾರಿಣೋ ಹರೇಃ ॥**

ಎಂದು ಗೀತಾತಾತ್ಪರ್ಯದಲ್ಲಿಯೂ ಸ್ಪಷ್ಟವಾಗಿ ಭೇದವನ್ನೇ ಹೇಳಿದೆ. ಆದ್ದರಿಂದ ಚಕ್ರಾದಿಗಳು ಭಗವಂತನಿಂದ ಭಿನ್ನಗಳೇ. ಹಾಗಾದರೆ 'ಚಕ್ರೀ ಹರಿಃ' ಎಂದು ಹೇಗೆ ಹೇಳುವದು ಎಂದರೆ ಚಕ್ರಸಂಯೋಗವಿರುವದರಿಂದಲೇ ಎಂದು ಹೇಳುವೆವು. ಚಕ್ರವು ನಾಶವಾದರೆ ಅದರಸಂಯೋಗವಾದರೂ ಅಸಂಭಾವಿತವೆ ಅಲ್ಲವೆ ಎಂದರೆ ಚಕ್ರವಿಲ್ಲದೇ ಅದರ ಸಂಯೋಗವು ಶಕ್ತ್ಯಾತ್ಮನಾ ಇರುವದು ಎಂದು ಅಂಗೀಕರಿಸಿದೆ ಎಂದು ಸತತ್ವರತ್ನಮಾಲಾದಲ್ಲಿ ಹೇಳಿದೆ. ಅರ್ಥಾತ್ ಇದೆ ಅರ್ಥವು 'ಬಿಭ್ರದ್ರಾಪಿಂ ಹಿರಣ್ಯಂ' ಎಂಬ ಋಗ್ಭಾಷ್ಯಟೀಕಾಟಿಪ್ಪಣಿಗಳಲ್ಲಿ ಹೇಳಿದೆ. ॥೨೩॥

ಈ ರೀತಿ ಭೀಕರ ಆಕಾರವನ್ನು ನೋಡಿ ಈ ರೀತಿ ಊಹಿಸದನೆಂದು ಹೇಳುವರು. ಮೇಲೆ ಹೇಳಿದಂತೆ ವಿಚಾರಮಾಡಿ ಓಡಿಹೋದನೇ ಎಂದರೆ ಇಲ್ಲವೆನ್ನುತ್ತಾರೆ-

**ಏವಂ ಬ್ರುವಂಸ್ತ್ವಭ್ಯಪತದ್ ಗದಾಯುಧೋ**
**ನದನ್ ನೃಸಿಂಹಂ ಪ್ರತಿ ದೈತ್ಯಕುಂಜರಃ ।**
**ಅಲಕ್ಷಿತೋಽಗ್ನೌ ಪತಿತಃ ಪತಂಗಮೋ**
**ಯದಾ ನೃಸಿಂಹೌಜಸಿ ಸೋಽಸುರಸ್ತಥಾ ॥೨೪॥**

**ಏವಂ** ಮೇಲೆ ಹೇಳಿದಂತೆ ಮಾನಸಿಕ ವಿಚಾರವನ್ನೇ **ಬ್ರುವನ್** ಬಾಯಿಂದ ಹೇಳುತ್ತ **ಗದಾಯುಧಃ** ಗದೆಯೇ ಆಯುಧವಾಗಿವುಳ್ಳ **ದೈತ್ಯಕುಂಜರಃ** ದೈತ್ಯಶ್ರೇಷ್ಠನು(ದೈತ್ಯನೆಂಬ ಆನೆಯು)**ನದನ್** ಸಿಂಹನಾದ ಮಾಡುತ್ತ **ನೃಸಿಂಹಂ ಪ್ರತಿ** ನರಸಿಂಹ ರೂಪಿಯಾದ ಶ್ರೀಹರಿಯ ಕಡೆಗೆ **ಅಭ್ಯಪತತ್** ಹಾರಿದನು. ಅದು ಹೇಗಿತ್ತೆಂದರೆ ಉದಾಹರಣೆ ಹೇಳುವರು. **ಅಲಕ್ಷಿತಃ** ಸಾಹಸಿಯಾದ ಅಥವಾ ದೂರಾಲೋಚನೆ ಇಲ್ಲದ **ಪತಂಗಮಃ** ರೆಕ್ಕೆ ಹುಳವು **ಯಥಾ** ಹೇಗೆ **ಅಗ್ನೌ ಪತಿತೋ ಭವತಿ** ಬೆಂಕಿಯಲ್ಲಿ ಬೀಳುವರೋ **ತಥಾ** ಹಾಗೆ ಸಾಹಸಿಯಾದ ಆ ಅಸುರನು **ನೃಸಿಂಹೋಜಸಿ** ನರಸಿಂಹನ ಸಾಮರ್ಥ್ಯದಲ್ಲಿ **ಪತಿತಃ** ಬಿದ್ದನು.

ವಿಶೇಷ :- ಅಗ್ನೌ ಪತಿತಃ ಪತಂಗಮಃ ಅಲಕ್ಷಿತಃ ಅಭೂತ್ ಎಂದೂ ಯೋಜಿಸಬಹುದು. ಬೆಂಕಿಯಲ್ಲಿ ಬಿದ್ದ ಪತಂಗವು ಹೇಗೆ ಅದೃಶ್ಯವಾಗುವದೋ ಹಾಗೆ ನರಸಿಂಹನ ಸಾಮರ್ಥ್ಯದಲ್ಲಿ ಬಿದ್ದ ಆ ದೈತ್ಯನು ಕಾಣದಾದನು ಎಂದರ್ಥ. 'ಲಕ್ಷ ದರ್ಶನಾಂಕನಯೋಃ' ಎಂದು ಧಾತು ಇರುವದರಿಂದ ದೀರ್ಘದರ್ಶನವಿಲ್ಲದ

ಎಂದರ್ಥ ಮಾಡಿದೆ. ಕೆಲವು ಕಡೆ ಪಾಠವಿದೆ ಅದು ಸರಳವೂ ಆಗಿದೆ. ಏಕಾಕ್ಷರ ನ್ಯೂನತಾ ದೋಷಕ್ಕಿಂತಲೂ ಪತಂಗಮ ಎಂಬ ಪಾಠದಲ್ಲಿ 'ಪತಂಗಃ ಶಲಭೇ ಶಾಲಿಪ್ರಭೇದೇ ವಿಹಗೆ ರವೌ' ಎಂದು ವಿಶ್ವದಲ್ಲಿ ಹೇಳಿರುವದರಿಂದ ವಿಹಂಗಮ ಶಬ್ದದಂತೆ ಅನುಶಾಸನ ಕಾಣದ್ದರಿಂದ ಪತಂಗಶಬ್ದ ಪರ್ಯಾಯಪತಂಗಮಶಬ್ದ ಎಂದು ಕಲ್ಪಿಸುವದು. ದೊಡ್ಡದೋಷವೆನ್ನುತ್ತಾರೆ ಕೆಲವರು.

ಸಿಂಹವು ಯದ್ಯಪಿ ಆನೆಗೆ ಮಾರಕವಾದ್ದರಿಂದ ಹೇಳಿದ ಈ ದೃಷ್ಟಾಂತ ಅನುರೂಪವೇ ಆಗಿದೆ. ಆದರೂ ಆನೆಯನ್ನು ಕೊಲ್ಲಲು ಸ್ವಲ್ಪವಾದರು ಆಯಾಸ-ಸಂಭಾವಿತ ಅದೂ ಕೂಡ ಇಲ್ಲಿ ಅಸಂಭಾವಿತ ಎಂದು ಅಸ್ವಾರಸ್ಯದಿಂದಲೋ, ಹರಿಯು ಮೃಗೇಂದ್ರ, ಈ ಅಸುರ ಗಜೇಂದ್ರ, ಎಂದಾದರೆ ಒಂದು ಕಡೆಗೆ ಇಲ್ಲದಿದ್ದರೂ ಸ್ವಪ್ನದಲ್ಲಿ ಹರಿಯನ್ನು ಕಂಡರು ಕನಸಿನಲ್ಲಿ ಆನೆಯು ಸಿಂಹವನ್ನು ಕಂಡು ಸಾಯುವಂತೆ ಇವನಿಗೆ ಮರಣ ಆಗುವುದು ಎಂಬ ಅಸ್ವಾರಸ್ಯದಿಂದ ಪತಂಗದ ದೃಷ್ಟಾಂತ ಹೇಳಿರುವರು. ಅಗ್ನಿಯಲ್ಲಿ ಬಿದ್ದ ಪತಂಗದಂತೆ ಎಂದು. ।।೨೪।।

ತಮೋಗುಣಸ್ವಭಾವದ ಹಿರಣ್ಯಾದಿಗಳ ಪಾಡೇನು ಎಂದು ಹೇಳುವರು-

**ನ ತದ್ವಿಚಿತ್ರಂ ಖಲು ಸತ್ವಧಾಮನಿ**
**ಸ್ವತೇಜಸಾ(ಂಶೇನ)ಯೋ ನು ಪುರಾಽಪಿಬತ್ತಮಃ ।**
**ತತೋಽಭಿಪದ್ಯಾಭ್ಯಹನನ್ಮಹಾಸುರೋ**
**ರುಷಾ ನೃಸಿಂಹಂ ಗದಯೋರುವೇಗಯಾ ।।೨೫।।**

**ಯಃ** ಯಾವ ಪುರುಷರೂಪಿ ಶ್ರೀಹರಿಯು **ಪುರಾ** ಸೃಷ್ಟಿಗೆ ಮೊದಲು **ತಮಃ** ಪ್ರಲಯಕಾಲದಲ್ಲಿ ಆವರಿಸಿದ್ದ ದುರ್ಗಾಭಿಮನ್ಯಮಾನವಾದ ಕತ್ತಲೆಯನ್ನು **ಖಲು** ನಿಷೇಧಿಸಿ,ತುಚ್ಛೀಕರಿಸಿ **ಸ್ವತೇಜಸಾ** ತನ್ನ ಸಾಮರ್ಥ್ಯದಿಂದ **ಅಪಿಬತ್ ನು** ಕುಡಿದನೋ ಅಂಥ **ಸತ್ವಧಾಮನಿ** ಬಲ,ಜ್ಞಾನಗಳು ಸೇರಿ ಶರೀರವಾಗಿವುಳ್ಳ, ಬಲವೇ ದೇಹವಾಗಿವುಳ್ಳ, ಬಲಾದಿಗಳಿಗೆ ಆಶ್ರಯನಾದ ಅಪರಿಮಿತ ಪರಾಕ್ರಮಶಾಲಿಯಾದ **ತಸ್ಮಿನ್** ಆ ಶ್ರೀಹರಿಯಲ್ಲಿ **ತತ್** ದೈತ್ಯನನ್ನು ಹುಳದಂತೆ ಮಾಡುವದು ಇಲ್ಲಿಯವರೆಗೆ ಹೇಳಿದ ಎಲ್ಲ ಮಾಹಾತ್ಮ್ಯವು **ನ ವಿಚಿತ್ರಂ** ಆಶ್ಚರ್ಯಕರವಲ್ಲ **ತತಃ** ಅನಂತರ **ಅಭಿಪದ್ಯ** ನರಸಿಂಹದೇವರನ್ನು ಸಮೀಪಿಸಿ **ಉರುವೇಗಯಾ** ಬಹುವೇಗವುಳ್ಳ **ಗದಯಾ** ಗದೆಯಿಂದ **ರುಷಾ** ಸಿಟ್ಟಿನಿಂದ **ಮಹಾಸುರಃ** ಹಿರಣ್ಯಕಶಿಪುವು **ನೃಸಿಂಹಂ** ನರಸಿಂಹದೇವರನ್ನು **ಅಭ್ಯಹನತ್** ಹೊಡೆದನು.

ವಿಶೇಷ ಃ- ಅಂಶೇನ ಎಂಬ ಪಾಠದಲ್ಲಿ ಪುರುಷರೂಪದಿಂದ ಎಂದರ್ಥ. ಯಚ್ಛಬ್ದ ಅಧ್ಯಾಹಾರ ಮಾಡಬೇಕು. 'ಯೋ ನು' ಎಂಬ ಪಾಠದಲ್ಲಿ ಅಧ್ಯಾಹಾರವಿಲ್ಲ ಮತ್ತು ಭಗವದಾತ್ಮಕತೇಜಸ್ಸಿಗೆ ಸಾಕ್ಷಾತ್ತಾಗಿ ತಮೋನಾಶಕತ್ವ ಇರುವುದರಿಂದ ಸುಂದರವು. ।।೨೫।।

ಆ ಅಸುರನ ಜೊತೆಗೆ ಯುದ್ಧಮಾಡಿ ಅವನಿಗೆ ಲೋಕದಲ್ಲಿ ಕೀರ್ತಿ ಶಾಶ್ವತವಾಗಿ ಕೊಡಲು ಲೋಕೇಶ್ವರನು ಸ್ವಲ್ಪ ಲೀಲೇ ಮಾಡಿದನೆಂದು ಕೆಲವು ಪದ್ಯಗಳಿಂದ ಹೇಳುವರು.

**ತಂ ವಿಕ್ರಮಂತಂ ಸಗದಂ ಗದಾಧರೋ**
**ಮಹೋರಗಂ ತಾರ್ಕ್ಷ್ಯಸುತೋ ಯಥಾಽಗ್ರಹೀತ್ ।**
**ಸ ತಸ್ಯ ಹಸ್ತೋತ್ಕಲಿತಸ್ತದಾಽಸುರೋ**
**ವಿಕ್ರೀಡತೋ ಯದ್ವದಹಿರ್ಗರುತ್ಮತಃ ।।೨೬।।**

**ಗದಾಧರಃ** ಕೌವೋದಕೀ ಎಂಬ ಗದೆಯನ್ನು ಧರಿಸಿದ ನೃಸಿಂಹರೂಪಿ ಶ್ರೀಹರಿಯು **ಸಗದಂ** ಗದಾಪಾಣಿಯಾದ **ವಿಕ್ರಮಂತಂ** ತನ್ನ ಕಡೆಗೆ ಬರುತ್ತಿರುವ. ಅಥವಾ ವಿವಿಧ ಕ್ರಮವುಳ್ಳವರಂತೆ ಹೆಜ್ಜೆ ಹಾಕುವ **ತಂ** ಆ ರಾಕ್ಷಸನನ್ನು **ತಾರ್ಕ್ಷ್ಯಸುತಃ** ಗರುಡನು **ಮಹೋರಗಂ** ದೊಡ್ಡ ಹಾವನ್ನು **ಯಥಾ** ಹೇಗೆ ಹಿಡಿಯುವನೋ **ತಥಾ** ಹಾಗೆ **ಅಗ್ರಹೀತ್** ಹಿಡಿದನು. **ತದಾ** ಆಗ **ಸಃ ಅಸುರಃ** ಆ ದೈತ್ಯನು **ವಿಕ್ರೀಡತಃ** ಚೆಲ್ಲಾಟವಾಡುವ **ಗರುತ್ಮತಃ** ಗರುಡನಿಂದ **ಅಹಿಃ** ಸರ್ಪವು **ಯದ್ವತ್ಉತ್ಕಲಿತಃ ಭವತಿ** ಹೇಗೆ ತಪ್ಪಿಸಿಕೊಳ್ಳುವುದೋ **ತದ್ವತ್** ಹಾಗೆ **ವಿಕ್ರೀಡತಃ ತಸ್ಯ** ಚೆಲ್ಲಾಟವಾಡುತ್ತಿದ್ದ ಆ ನರಸಿಂಹನ **ಹಸ್ತೋತ್ಕಲಿತಃ** ಕೈಯಿಂದ ತಪ್ಪಿಸಿಕೊಂಡವನಾಗಿ **ಅಭೂತ್** ಆದನು.

ವಿಶೇಷ ಃ- 'ವಿಕ್ರೀಡತಃ' ಎಂದು ಹೇಳಿದ್ದರಿಂದ ಕ್ರೀಡೆಗಾಗಿ ನರಸಿಂಹನು ಅವನನ್ನು ಬಿಟ್ಟನೇ ಹೊರತು ಅಸಾಮರ್ಥ್ಯದಿಂದಲ್ಲವೆಂಬ ಅಭಿಪ್ರಾಯವನ್ನು ತಿಳಿಸಿರುವರು ।।೨೬।।

ಶ್ರೀಹರಿಯ ಲೋಕಾನುಕರಣವನ್ನು ತಿಳಿಯದಿರುವ ಭಿನ್ನ ಭಕ್ತರಾದ ದೇವತೆಗಳು ಏನು ತಿಳಿದರೆಂದು ಹೇಳುತ್ತಾರೆ.

ಭಗವಂತನ ಕ್ರೀಡೆಯು ಭಿನ್ನ ಭಕ್ತರಿಗೆ ಸಂಶಯ, ಅಸುರರಿಗೆ ಮೋಹಜನಕವು ಎಂಬ ಅಭಿಪ್ರಾಯದಿಂದ ಹೇಳುವರು-

**ಅಸಾಧ್ವಮನ್ಯಂತ ಹತೌಜಸಾऽಮರಾ**
**ಘನಚ್ಛದಾ ಭಾರತ ಸರ್ವಧೀಷ್ಣ್ಯಪಾಃ ।**
**ತಂ ಮನ್ಯಮಾನೋ ನಿಜವೀರ್ಯಶಂಕಿತಂ**
**ಯದ್ಧಸ್ತಮುಕ್ತೋ ನೃಹರಿಂ ಮಹಾಸುರಃ ॥೨೭॥**

**ಹೇ ಭಾರತ** ಧರ್ಮರಾಜನೇ **ಯತ್** ಯಾವ ಕಾರಣ **ಹಸ್ತಮುಕ್ತಃ** ನರಸಿಂಹನ ಕೈ ಹಿಡಿತದಿಂದ ತಪ್ಪಿಸಿಕೊಂಡ **ಮಹಾಸುರಃ** ಹಿರಣ್ಯಕಶಿಪುವು **ತಂ ನೃಹರಿಂ** ಆ ನರಹರಿಯನ್ನು **ನಿಜವೀರ್ಯಶಂಕಿತಂ** ತನ್ನ ಪರಾಕ್ರಮದಿಂದ ಹೆದರಿದವನನ್ನಾಗಿ **ಮನ್ಯಮಾನಃ ಅಭೂತ್** ತಿಳಿದವನಾದನೋ **ತತ್** ಆಕಾರಣದಿಂದ **ಘನಚ್ಛದಾ ಇವ** ಮೋಡದಿಂದ ಮುಚ್ಚಿಹೋದವರಂತೆ **ಹತೌಜಸಃ** ಕಾಂತಿಹೀನರಾದ, ಆಶ್ರಯ ರಹಿತರಾದ **ಸರ್ವದಿಷ್ಣ್ಯಪಾಃ** ಚಂದ್ರ ಮೊದಲಾದ ಎಲ್ಲ **ಅಮರಾಃ** ದೇವತೆಗಳು **ತತ್** ನರಸಿಂಹನು ದೈತ್ಯನನ್ನು ಬಿಟ್ಟಿದ್ದನ್ನು **ಅಸಾಧು ಇತಿ ಅಮನ್ಯಂತ** ಅನುಚಿತವೆಂದು ತಿಳಿದರು. ಅಥವಾ **ಘನಚ್ಛದಾ ಇವ** ಮೋಡದಿಂದ ಮುಚ್ಚಿ ಹೋದ ಚಂದ್ರಾದಿಗಳಂತೆ ಕಾಂತಿಹೀನರಾದ **ಸರ್ವಧೀಷ್ಣ್ಯಪಾಃ** ಎಲ್ಲ ದೇವತೆಗಳು **ಹತೌಜಸಃ ಸಂತಃ** ಸಾಮರ್ಥ್ಯ ಕಳೆದುಕೊಂಡವರಾಗಿ ತಮ್ಮ ಜೀವನವನ್ನು **ಅಸಾಧು ನ** ನಮಗೆ ಮಂಗಳವಿಲ್ಲ ಎಂದು **ಅಮನ್ಯತ** ತಿಳಿದರು.

ವಿಶೇಷ ಃ- ಅಸುರಃ ಯದ್ಧಸ್ತಮುಕ್ತಃ ತಂ ನೃಹರಿಂ ನಿಜವೀರ್ಯಶಂಕಿತಂ ಅಮನ್ಯತ ಎಂದಾದರೂ ಅನ್ವಯ. ಇದರಿಂದ ವರವನ್ನಿತ್ತು ಈಗ ರುದ್ರದೇವರಿಂದ ಆಶ್ವಾಸನೆ ಪಡೆದ ಪಾಮರರಂತೆ ಅಮರರ ವಿಚಾರ ಹೀಗೆ ಬರುವದು ಸರಿಯಲ್ಲ ಎಂಬ ಮಂದಾಶಂಕಾ ಪರಿಹೃತವಾಯಿತು. ॥೨೭॥

ಕೈತಪ್ಪಿಸಿಕೊಂಡ ಅಸುರನು ಓಡಿಹೋದನೆ ಅಥವಾ ನರಸಿಂಹನ ಮೇಲೆ ಬಿದ್ದನೇ ಎಂಬ ಸಂಶಯಬೇಡವೆಂದು ಹೇಳುತ್ತಾರೆ-

**ಪುನಸ್ತಮಾಸಜ್ಜತ ಖಡ್ಗಚರ್ಮಣೀ**
**ಪ್ರಗೃಹ್ಯ ವೇಗೇನ ಗತಶ್ರಮೋ ಮೃಧೇ ।**
**ತಂ ಶ್ಯೇನವೇಗಂ ಶತಚಂದ್ರವರ್ಮಭಿ-**
**ಶ್ಚರಂತಮಚ್ಛಿದ್ರಮುಪರ್ಯಧೋ ಹರಿಃ ॥೨೮॥**

**ಗತಶ್ರಮಃ** ಶ್ರಮಪರಿಹರಿಸಕೊಂಡ(ಹೋಗಲ್ಪಟ್ಟ ಶ್ರಮವುಳ್ಳ)ಅಸುರನು **ಖಡ್ಗಚರ್ಮಣೀ** ಕತ್ತಿ ಮತ್ತು ಗುರಾಣಿಗಳನ್ನು **ಪ್ರಗೃಹ್ಯ** ಹಿಡಿದುಕೊಂಡು **ಮೃಧೇ** ಯುದ್ಧದಲ್ಲಿ **ವೇಗೇನ** ವೇಗದಿಂದ **ಪುನಃ** ಮತ್ತೆ **ತಂ** ಆ ನರಸಿಂಹನನ್ನು **ಆಸಜ್ಜತ**

ಕುರಿತು ಆಸಕ್ತನಾದನು (ನರಸಿಂಹನೊಡನೆ ಯುದ್ಧಕ್ಕೆ ಬಂದನೆಂದರ್ಥ)**ಹರಿಃ** ನರಸಿಂಹದೇವರು **ಉಪರ್ಯಧಃ** ಮೇಲೆ ಕೆಳಗೆ **ಅಚ್ಛಿದ್ರಂ ಯಥಾ ತಥಾ** ಅವಕಾಶವಿಲ್ಲದಂತೆ **ಶತಚಂದ್ರವರ್ಮಭಿಃ** ಖಡ್ಗ ಮತ್ತು ಗುರಾಣಿಗಳಿಂದ **ಚರಂತಂ** ಸುತ್ತಾಡುತ್ತಿದ್ದ **ಶ್ಯೇನವೇಗಂ** ಗಿಡಗಪಕ್ಷಿಯಂತೆ ವೇಗವುಳ್ಳ **ತಂ** ಆ ಅಸುರನನ್ನು **ಜಗೃಹೇ** ಎಂದು ಮುಂದೆ ಅನ್ವಯ.

ವಿಶೇಷ ಃ- ಶತಚಂದ್ರಶಬ್ದವು ಖಡ್ಗಚರ್ಮಣೀ ಎಂದು ಹಿಂದೆ ಹೇಳಿದ್ದರಿಂದ ಖಡ್ಗಪರವಾಗಿದೆ. ಚರ್ಮ ಒಂದೇ ಆದ್ದರಿಂದ ಅದನ್ನು ತಿರುಗಿಸುವ ಚಾತುರ್ಯದಿಂದ ಅನೇಕವಾಗಿ ಕಾಣುವದರಿಂದಲೂ 'ದಿತಿಃ ಪಾಶಾನ್' ಎಂಬಲ್ಲಿಯಂತೆ ಅವಯವಗಳು ಬಹಳವಾದ್ದರಿಂದಲೋ ಬಹುವಚನ ಉಪಪನ್ನವೆಂದು ತಿಳಿಯಬೇಕು. ಶತಂ ಚ ತೇ ಚಂದ್ರಾಶ್ಚ (ಚರ್ಮೋಪರಿನಿವಿಷ್ಟಾಶ್ಚ) ಚರ್ಮ ಚ ತೈಃ ಎಂದೂ ಮಾಡಬಹುದು. ಅಂದರೆ ಢಾಲಿನ ಮೇಲೆ ಅಲಂಕಾರಕ್ಕೆ ಅಂಟಿಸಿದ ನೂರುಚಂದ್ರ (ಚಿತ್ರ ಅಥವಾ ಪ್ರತಿಮಾ) ಹಾಗೂ ವರ್ಮಗಳಿಂದ ಎಂದರ್ಥ. ಶತಚಂದ್ರಾಃ ಚರ್ಮ ಚ ಚರತಾ ಅನೇನ ಸಹ ಚರಂತೀತಿ ಏವಮುಕ್ತಿಃ (ಚರತೀತಿ ಚರಃ ಚರೇಮ ಅಮತೀತಿ ಚರ್ಮಃ) **ಶತಚಂದ್ರಃ** ಖಡ್ಗಚರ್ಮಣೀ ಪಾರ್ಶ್ವದ್ವಂದ್ವವೃತೇ ದ್ವೇ ಶತಚಂದ್ರಚರ್ಮಾಣಿ ಹೀಗೂ ಮಾಡಬಹುದು ಅಂದರೆ ಎರಡೂ ಕಡೆಗೆ ಹಿಡಿದ ಎರಡು ಗುರಾಣಿಗಳು ಮತ್ತು ಖಡ್ಗ ಸೇರಿ ಬಹುವಚನ. ಖಡ್ಗ ಚರ್ಮಣೀ ಎಂದು ಹಿಂದೆ ಹೇಳಿದ್ದರ ವಿರೋಧ ಬರುವದಲ್ಲ ಎಂದರೆ, ಖಡ್ಗೇನ ಸಹಿತೇ ಚ ತೇ ಚರ್ಮಣೀ ಚ ಎಂದು ಉತ್ತರಪದಲೋಪ ಸಮಾಸ ಮಾಡಿದರೆ ವಿರೋಧ ಬರುವದಿಲ್ಲ. ಅಥವಾ ಶತಚಂದ್ರಚರ್ಮಭಿಃ ಬಹಳ ಬಾಹುಗಳಲ್ಲಿರುವ ಇವುಗಳಿಂದ ಸಹಿತನಾದ ಹರಿಯು ಜಗೃಹೇ ಎಂದನ್ವಯ. ಅವುಗಳಿಗೆ ಕೃತ್ಯವಿಲ್ಲ ಕಾರಣ ಅನಾವಶ್ಯಕವಾದ್ದರಿಂದ ಅದನ್ನು ಹೇಳುವದು ಬೇಕಿಲ್ಲ ಎಂದರೆ ಈ ಶಂಕೆಯು ಅನೇಕ ಬಾಹುಗಳ ವಿಷಯದಲ್ಲಿಯೂ ಚೆನ್ನಾಗಿ ಬರುವದು ಅಲ್ಲವೇ ಏಕೆ ಕೇಳಲಿಲ್ಲ. ವಿಚಾರಮಾಡಿದರೆ ನನಗೇನೇ ಸ್ವಾಭಾವಿಕವಾದುದು ಬಾಹುಬಾಹುವಿಧ್ಯ ಹೇಳಿದುದು ಎಂದು ಉತ್ತರ ದೊರೆಯಿತು, ಕಾರಣ ಪ್ರಶ್ನಿಸಲಿಲ್ಲ ಎನ್ನುವದಾದರೆ ಇಲ್ಲಿಯೂ ಅಂದರೆ ಅನೇಕ ಕೈಗಳಲ್ಲಿ ಖಡ್ಗಢಾಲುಗಳನ್ನು ಹಿಡಿಯುವದು ಅವನ ಸ್ವಭಾವ ಅದನ್ನು ಹೇಳಿದೆ. ಹಿರಣ್ಯಕಶಿಪುವನ್ನು ಹಿಡಿಯಲು ಅವುಗಳಿಂದ ಪ್ರಯೋಜನ ಇರಬೇಕಿಲ್ಲವೆಂದು ಭಾವ. ।।೨೮।।

**ಕೃತ್ವಾಟ್ಟಹಾಸಂ *ಖರಕಮುತ್ಸ್ವನೋಲ್ಬಣಂ**
**ನಿಮೀಲಿತಾಕ್ಷಂ ಜಗೃಹೇ ಮಹಾಜವಃ ।**

**ವಿಷ್ವಕ್ ಸ್ಫುರಂತಂ ಗ್ರಹಣಾತುರಂ ಹರಿ***
**ರ್ವ್ಯಾಲೋ ಯಥಾಽಽಖುಂ ಕುಲಿಶಾಕ್ಷತತ್ವಚಮ್ ॥೨೯॥**

**ಮಹಾಜವಃ** ಬಹುವೇಗವುಳ್ಳ **ಹರಿಃ** ನರಸಿಂಹನು **ಉತ್ಸ್ವನೋಲ್ಬಣಂ** ಉಚ್ಚವಾದ ಶಬ್ದದಿಂದ ಕ್ರೂರನಾದ **ಖರಂ** ಗಡುಸಾದ **ಅಟ್ಟಹಾಸಂ** ದೊಡ್ಡ ನಗುವನ್ನು ಅಥವಾ ಆರ್ಭಟವನ್ನು **ಕೃತ್ವಾ** ಮಾಡಿ **ವ್ಯಾಲಂ** ಸರ್ಪವು **ಆಖುಂ ಯಥಾ** ಇಲಿಯನ್ನು ಹಿಂಡಿದಂತೆ **ನಿಮೀಲಿತಾಕ್ಷಂ** ಭಯದಿಂದ ಕಣ್ಣುಮುಚ್ಚಿದ **ವಿಷ್ವಕ್** ಸುತ್ತಲೂ **ಸ್ಫುರಂತಂ** ಸುತ್ತಾಡುತ್ತಿದ್ದ **ಕುಲಿಶಾಕ್ಷತತ್ವಚಂ** ಹಿಂದೆ ಇಂದ್ರನ ವಜ್ರಾಯುಧದಿಂದ ಗಾಯಗೊಂಡ ಚರ್ಮವುಳ್ಳ ದೈತ್ಯನನ್ನು **ಜಗೃಹೇ** ಹಿಡಿದುಕೊಂಡನು. **ಗ್ರಹಣಾತುರಂ ಅಕರೋತ್** ಹಿಡಿತದಿಂದ ಭೀತನನ್ನಾಗಿ ಮಾಡಿದನು.

ವಿಶೇಷ ಃ- ಭಯದಿಂದ ದೈನ್ಯಸ್ವರದಿಂದ ಗೋಳಿಡುವಂತೆ ಮಾಡಿದನೆಂದು ಅಭಿಪ್ರಾಯ. ವಿಷ್ವಕ್ ಎಂಬುದರಿಂದ ಅವನ ಯುದ್ಧಕೌಶಲ್ಯವನ್ನು ಸೂಚಿಸುವರು. ಗ್ರಹಾಣಾತುರಂ ಅಗ್ರಹೀತ್ ಎಂದಾದರೂ ಅನ್ವಯ. ಹಿಡಿತದಿಂದ ಹೆದರಿದವನನ್ನು ಹಿಡಿದನೆಂದರ್ಥ. 'ಖರಕೇಸರೋಲ್ಬಣಃ' ಎಂಬ ಪಾಠದಲ್ಲಿ ನರಸಿಂಹದೇವರಿಗೆ ವಿಶೇಷಣ. **ಖರ** ತೀಕ್ಷ್ಣವಾದ **ಕೇಸರ** ಕುತ್ತಿಗೆ ಮೇಲಿನ ಕೂದಲಿನಿಂದ **ಉಲ್ಬಣಃ** ಕ್ರೂರನಾದ ಎಂದರ್ಥ. **ನಿಮೀಲಿತಾಕ್ಷಂ** ನನ್ನ ಅಣ್ಣನಾದ ಹಿರಣ್ಯಾಕ್ಷನ ಮರಣವಾಗಿದೆ ಕಾರಣ ಹಿರಣ್ಯಾಕ್ಷನಾದ ಶ್ರೀನರಹರಿ ವಿಷಯದಲ್ಲಿ ಕಣ್ಣಿಗೆ ತೆರೆಯಬೇಕು ಎಂದಾಗಲಿ. ಶ್ರಮದಿಂದಾಗಲಿ ಕಣ್ಣು ಮುಚ್ಚಿದನೆಂದು ತಿಳಿಯಬೇಕು. **ಅಹರಿಃ** ಕೇವಲ ಹರಿಯೂ ಅಲ್ಲ ,ಕೇವಲ ಸಿಂಹನೂ ಅಲ್ಲ, ಕಿಂತು ನರಸಿಂಹನು ಅಗ್ರಹೀತ್ ಹಿಡಿದನು ಎಂದರ್ಥ. ಈ ರೀತಿ ವ್ಯಾಖ್ಯಾನ ಮಾಡಿದ್ದರಿಂದ (ಸತ್ಯಧರ್ಮರು) 'ಗ್ರಹಣಾತುರೋ ಅಹರಿಃ' ಎಂದು ಪಾಠವಿರಬೇಕು ಎಂದು ತಿಳಿಯುವದು. ಆಗ ಗ್ರಹಣಾತುರಃ ಎಂಬುದಕ್ಕೆ ಗ್ರಹಣೇ ಆತುರಃ ಎಂದು ವಿಗ್ರಹಮಾಡಿ ಅಸುರನನ್ನು ಹಿಡಿಯುವಲ್ಲಿ ಔತ್ಸುಕ್ಯವುಳ್ಳ (ತವಕವುಳ್ಳ) ಎಂದರ್ಥ ನರಸಿಂಹನಿಗೆ (ಅಹರಿಗೆ) ವಿಶೇಷಣವೆಂದು ತಿಳಿಯಬೇಕು ।।೨೯।।

ಬ್ರಹ್ಮದೇವರ ವರವನ್ನು ಆದರಿಸಲು ಸಿಂಹದ ಮುಖ ಮನುಷ್ಯನ ದೇಹತೆಗೆದುಕೊಂಡಂತೆ ಕಾಲ, ಸ್ಥಳ, ಮೊದಲಾದವುಗಳನ್ನು ನೋಡಿ ವರಕ್ಕೆ ಅನುಕೂಲಗಳೇ ವಾದುದರಿಂದಲೂ ಅದನ್ನು ಆದರಿಸಿದನೆಂದು ಹೇಳುವರು-

**ದ್ವಾರ್ಯೂರಾವಾಪಾತ್ಯ ದದಾರ ಲೀಲಯಾ**
**ನಖೈರ್ಯಥಾಽಹಿಂ ಗರುಡೋ ಮಹಾವಿಷಮ್ ।**

* 'ಖರತೇಸರೋಲ್ಬಣಃ' * 'ಗ್ರಹಣಾತುರೋಽಹರಿಃ' ಇತಿ ಪಾಠಾಂತರ.

**ಸಂರಂಭದುಷ್ಪ್ರೇಕ್ಷಕರಾಲಲೋಚನೋ**
**ವ್ಯಾತ್ತಾನನಾಂತಂ ವಿಲಿಹನ್ ಸ್ವಜಿಹ್ವಯಾ** ॥೩೦॥

**ಹರಿಃ** ನರಸಿಂಹರೂಪಿಯಾದ ಶ್ರೀಹರಿಯು **ಸಂರಂಭ** ದೈತ್ಯನಲ್ಲಿ ದ್ವೇಷದಿಂದ ತತ್ಕಾಲದಲ್ಲಿ ಪ್ರಕಟಿತವಾದ ಬಹುಕೋಪದಿಂದ **ದುಷ್ಪ್ರೇಕ್ಷ್ಯ** ನೋಡಲಾಗದ **ಕರಾಲಲೋಚನಃ ಸನ್** ಭಯಂಕರ ಕಣ್ಣುಗಳುಳ್ಳವನಾಗಿ **ಸ್ವಜಿಹ್ವಯಾ** ತನ್ನ ನಾಲಿಗೆಯಿಂದ **ವ್ಯಾತ್ತಾನನಾಂತಂ** ತೆರೆದ ಬಾಯಿ ಕೆಳದುಟಿಯನ್ನು **ವಿಲಿಹನ್** ಒರಿಸಿಕೊಳ್ಳುತ್ತ(ನೆಕ್ಕಿಕೊಳ್ಳುತ್ತ) **ಗರುಡಃ** ಗರುಡನು **ಮಹಾವಿಷಂ** ಅತಿಶಯ ವಿಷವುಳ್ಳ **ಅಹಿಂ** ಸರ್ಪವನ್ನು **ಯಥಾ** ಹೇಗೆ **ತಥಾ** ಹಾಗೆ **ದ್ವಾರಿ** ಹೊಸ್ತಿಲ ಮೇಲೆ ಕುಳಿತವನಾಗಿ ('ನಾಂತಃ ನ ಬಹಿಃ' ಎಂದು ವರವಿರುವದರಿಂದ) **ಊರೌ** ತೊಡೆಯ ಮೇಲೆ (ಭೂಮಿ, ನೀರುಗಳಲ್ಲಿ ಮರಣ ಬೇಡವೆಂದು ವರಕ್ಕೆ ಅನುಕೂಲ) **ಅಪಾತ್ಯ** ಮೇಲ್ಮುಖಮಾಡಿ ಕೆಡವಿಕೊಂಡು **ಲೀಲಯಾ** ಕ್ರೀಡೆಯಿಂದ ಅನಾಯಾಸವಾಗಿ **ನಖೈಃ** ಉಗುರುಗಳಿಂದ **ದದಾರ** ಸೀಳಿದನು.

ವಿಶೇಷ ಃ- ಆಯುಧದಿಂದ ಬೇಡ ಎಂಬುದರಕ್ಕನುಗುಣವಾದುದು ಇದು. ಇದರಂತೆ 'ಸಂಧ್ಯಾಯಾಂ' ಎಂದೂ ಸೇರಿಸಿಕೊಳ್ಳಬೇಕು. ಅದರಿಂದ ಹಗಲಾಗ-ಬಾರದು, ರಾತ್ರಿಯಾಗಬಾರದು ಎಂಬ ವರವನ್ನು ಅನುಸರಿಸಿದಂತಾಗುವದು. ನರಸಿಂಹ ಎಂಬುದರಿಂದ ಮೃಗಗಳಿಂದ ಮನುಷ್ಯರಿಂದ ಆಗಬಾರದೆಂಬುದನ್ನು ಬ್ರಹ್ಮದೇವರಿಂದ ಸೃಷ್ಟವಾದ್ದುದರಿಂದ ಆಗಬಾರದೆಂಬುದನ್ನು ಪ್ರಾಣವಿಲ್ಲದ್ದರಿಂದ ಪ್ರಾಣವಿರುವದರಿಂದ ಆಗಬಾರದು ಎಂಬ ಬ್ರಹ್ಮದೇವರ ವರಗಳನ್ನು ಉಳಿಸಿರುವನು ಎಂದು ತಿಳಿಯಬೇಕು. ನರಸಿಂಹನು ಕೇವಲ ಮನುಷ್ಯನಲ್ಲ ಕೇವಲ ಮೃಗವೂ ಅಲ್ಲ ಬ್ರಹ್ಮ ಸೃಷ್ಟನೂ ಅಲ್ಲ ಕಲ್ಲಿನಂತೆ ಪ್ರಾಣರಹಿತನಲ್ಲ ಪ್ರಾಣಿಗಳಂತೆ ವಾಯುವಿಕಾರ ಶ್ವಾಸವುಳ್ಳವನೂ ಅಲ್ಲ. 'ಊರಾವಾಪಾತ್ಯ' ಎಂದು ಹ್ರಸ್ವವೇದಸಮವೆಂದು ತಿಳಿಸುವದಲ್ಲದೆ ದೈತ್ಯನಿಗೆ ವೃದ್ಧಿಯಿಲ್ಲವೆಂದೂ ಸೂಚಿಸುವದು ॥೩೦॥

ಹಿರಣ್ಯಕಶಿಪುವಿನ ವಧೆಯ ನಂತರ ನರಸಿಂಹನಿದ್ದ ರೀತಿಯನ್ನು ಅವನು ಮಾಡಿದ ಕೆಲಸವನ್ನು ಅವನ ಅವಯವಗಳಿಂದ ಆದ ವಿಶೇಷವ್ಯಾಪಾರವನ್ನು ಹೇಳುತ್ತಾರೆ-

**ಅಸೃಗ್ವಸಾ(ವಲ್ಕೈಃ)ವಲಾಕ್ತಾರುಣಕೇಸರಾನನೋ**
**ಯಥಾಽಂತ್ರಮಾಲೀ ದ್ವಿಪಹತ್ಯಯಾ ಹರಿಃ ।**
**ನಖಾಂಕುರೋತ್ಪಾಟಿತಹೃತ್ಸರೋರುಹಂ**
**ವಿಸೃಜ್ಯ ತಸ್ಯಾನುಚರಾನುಧಾಯುಧಾನ್** ॥೩೦॥

**ಅಹನ್ ಸಮಂತಾನ್ನಖಶಸ್ತ್ರಪಾಣಿಭಿಃ**
**ದೋರ್ದಂಡಯೂಥಾನುಪಥಾನ್ ಸಹಸ್ರಶಃ ।**
**ಸಟಾವಧೂತಾ ಜಲದಾಃ ಪರಾಪತನ್**
**ಗ್ರಹಾಶ್ಚ ತದ್ದೃಷ್ಟಿವಿನಷ್ಟರೋಚಿಷಃ ॥೩೨॥**

**ಸಃ** ನರಸಿಂಹದೇವನು **ಹರಿಃ** ಸಿಂಹವು **ದ್ವಿಪಹತ್ಯಯಾ** ಆನೆಯ ಸಂಹಾರದಿಂದ **ಯಥಾ** ಹೇಗೋ **ತಥಾ** ಹಾಗೇ **ಅಸೃಗ್ವಸಾ** ರಕ್ತಮೇದಸ್ಸಿನಿಂದ 'ಅಸಗ್ವಲ್ಲೈಃ' ಎಂಬ ಪಾಠದಲ್ಲಿ ರಕ್ತದ ಹನಿಗಳಿಂದ **ಆಕ್ತ** ತೊಯ್ದ **ಅರುಣಕೇಸರಾನನಃ** ಕೆಂಪಾದ ಕೂದಲು ಮತ್ತು ಮುಖವುಳ್ಳವನಾಗಿ **ಆಂತ್ರಮಾಲೀ** ಕರಳು ಮಾಲೆಯುಳ್ಳವನಾಗಿ **ನಖಾಂಕುರ** ಉಗರುಗಳೆಂಬ ಹೊಸದಾಗಿ ಹುಟ್ಟಿದ ಗಿಡಗಳಿಂದ ಉತ್ಪಾಟಿಸಲ್ಪಟ್ಟ **ಹೃತ್ಸರೋರುಹಂ** ಹೃದಯಕಮಲವುಳ್ಳ(**ತಂ**) ಆ ದೈತ್ಯನನ್ನು **ವಿಸೃಜ್ಯ** ಕೆಳಗೆ ಹಾಕಿ **ತಸ್ಯ** ಅವನ **ಉದಾಯುಧಾನ್** ಆಯುಧಗಳನ್ನು ಎತ್ತಿಹಿಡಿದ **ದೋರ್ದಂಡ- ಯೂಥಾನುಪಥಾನ್** ನರಸಿಂಹದೇವರ ದಂಡದಂತಿರುವ ತೋಳುಗಳ ಸಮೂಹದ ಮಾರ್ಗದಲ್ಲಿ ಬಂದ **ಸಹಸ್ರಶಃ** ಸಾವಿರಾರು **ಅನುಚರಾನ್** ಹಿಂಬಾಲಕರನ್ನು **ನಖಶಸ್ತ್ರಪಾಣಿಭಿಃ** ಉಗುರು,ಶಸ್ತ್ರ ಮತ್ತು ಕೈಗಳಿಂದ **ಸಮಂತಾತ್** ಸುತ್ತಲೂ **ಅಹನ್** ಕೊಂದನು.

ವಿಶೇಷ ಃ- **ಸಹಸ್ರಶಃ** ಎಂಬಲ್ಲಿ 'ಸ್ವಾರ್ಥೇ ಶಪ್ರತ್ಯಯ.' ಪ್ರಾತಿಸ್ವಿಕವಾಗಿ ಸಾವಿರಸಾವಿರ ಎಂದರ್ಥ. ಇಷ್ಟು ಆಯಾಸದಿಂದ ಈಶನಿಗಾದರೂ ಕ್ಲೇಶವಾಗದೇ ಎಂದರೆ ಹೇಳುವರು. **ಸಹಸ್ರಂ** ಅನಂತಂ **ಶಂ** ಸುಖಂ ಯಸ್ಯ ಸಃ **ಸಹಸ್ರಶಃ** ಅನಂತಸುಖವುಳ್ಳ ನರಸಿಂಹನೆಂದರ್ಥ. ಇದರಿಂದ ಶ್ರೀಹರಿಗೆ ಕ್ಲೇಶವಿಲ್ಲವೆಂದು ಅಭಿಪ್ರಾಯ ಬರುವದು. 'ಹಸ್ರೇಣ ಸಹಿತಃ ಸಹಸ್ರಃ ಸಹಸ್ರಸ್ಯ ಶಂ ಯೇನ ಸಃ ಸಹಸ್ರಶಃ' ಹೀಗೂ ಮಾಡಬಹುದು. ತನ್ನ ದೂಷಕನಾದ ತಂದೆಯೆನಿಸಿದ ಮೂರ್ಖನಾದ ಹಿರಣ್ಯಕಶಿಪುವಿನಿಂದ ಸಹಿತನಾದ ಪ್ರಹ್ಲಾದನಿಗೆ ಸುಖವನ್ನು ನೀಡಿದ ಶ್ರೀಹರಿ ಎಂದರ್ಥ. ಆ ಕಾಲದಲ್ಲಿ ನರಸಿಂಹಾಕಾರದಿಂದ ಮಾಡಲ್ಪಟ್ಟ ಕಾರ್ಯವು ಅಸದೃಶವೆಂದು ಹೇಳುತ್ತಾನೆ. **ಸಟಾವಧೂತಾ** ನರಸಿಂಹದೇವರ ಕುತ್ತಿಗೆಯ ಮೇಲಿನ ಕೂದಲಿನಿಂದ ಅಲ್ಲಾಡಿಸಲ್ಪಟ್ಟ **ಜಲದಾಃ** ಮೋಡಗಳು **ಪರಾಪತನ್** ಕೆಳಗೆ ಬಿದ್ದವು. (ಮೇಖಮಂಡಲದವರೆಗೆ ಜಟೆಗಳು ವ್ಯಾಪಿಸಿದ್ದವು ಎಂದು ಭಾವ). **ಗ್ರಹಾಃ ಚ** ಸೂರ್ಯ,ಚಂದ್ರ ಮೊದಲಾದ ಗ್ರಹಗಳು **ತದ್ದೃಷ್ಟಿವಿನಷ್ಟರೋಚಿಷಃ** ಅವನ ನೋಟದಿಂದ ಕಾಂತಿಯನ್ನು ಕಳೆದುಕೊಂಡವರಾದರು. 'ರೋಚಿಗೋಚಿರುಭೇ ಕ್ಲೀಬೇ' ಎಂದು ಅಮರ. ॥೩೧,೩೨॥

**ಅಂಭೋಧಯಃ ಶ್ವಾಸಹತಾ ವಿಚುಕ್ಷುಭ**
**ರ್ನಿರ್ಹ್ರಾದಭೀತಾ ದಿಗಿಭಾ ಜಹು(ರ್ಮದಂ)ರ್ದಿಶಃ ।**

**ದ್ಯೌಸ್ತತ್ಸಟಾಕ್ಷಿಪ್ತ(ತತ್ಸಟೋಕ್ಷಿಪ್ತ)ವಿಮಾನಸಂಕುಲಾ**
**ಪ್ರೋತ್ಸರ್ಪತ ಕ್ಷ್ಮಾ ಚ ಪದಾऽತಿಪೀಡಿತಾ ॥೩೩॥**

**ಅಂಭೋಧಯಃ** ಸಪ್ತಸಮುದ್ರಗಳು **ಶ್ವಾಸಹತಾಃ** ನರಸಿಂಹದೇವರ ಸ್ವರೂಪಭೂತಶ್ವಾಸಗಳಿಂದ ಬಡಿಯಲ್ಪಟ್ಟವುಗಳಾಗಿ **ವಿಚುಕ್ಷುಭುಃ** ಅಲ್ಲೋಲಕಲ್ಲೋಲ ವಾದವು **ನಿಹ್ರಾದಭೀತಾಃ** ಅವನ ನಾದದಿಂದ ಹೆದರಿದ **ದಿಗಿಭಾಃ** ದಿಗ್ಗಜಗಳು **ದಿಶಃ** ದಿಕ್ಕುಗಳನ್ನು **ಜಹುಃ** ಬಿಟ್ಟು ಓಡಿದವು ('ಜಹುರ್ಮದಂ' ಎಂಬ ಪಾಠದಲ್ಲಿ ಮದೋದಕವನ್ನು ಸುರಸಿದವೆಂದರ್ಥ) **ದ್ಯೌಃ** ಅಂತರಿಕ್ಷವು **ತತ್ಸಟಾ** ಆ ನರಸಿಂಹನ ಕೇಸರಗಳಿಂದ **ಆಕ್ಷಿಪ್ತ** ಚೆಲ್ಲಾಪಿಲ್ಲಿ ಮಾಡಲ್ಪಟ್ಟ ('ಉತ್ಕ್ಷಿಪ್ತ' ಎಂಬ ಪಾಠದಲ್ಲಿ ಮೇಲೆಕ್ಕೆ ಎಸೆಯಲ್ಪಟ್ಟ ಎಂದರ್ಥ) **ವಿಮಾನಸಂಕುಲಾಃ** ವಿಮಾನಗಳ ಸಮೂಹವುಳ್ಳದ್ದಾಯಿತು. **ಪದಾ** ಅವನ ಹೆಜ್ಜೆಯಿಂದ **ಅತಿಪೀಡಿತಾ** ಬಹಳ ತೊಂದರೆಗೊಳಗಾಗಿ **ಕ್ಷ್ಮಾ** ಭೂಮಿಯು **ಪ್ರೋತ್ಸರ್ಪತ್** ಮೇಲೆಕ್ಕೆ ಸರಿಯಿತು. ॥೩೩॥

**ಶೈಲಾಸಮುತ್ಪೇತುರಮುಷ್ಯ ರಂಹಸಾ**
**ತತ್ತೇಜಸಾ ಖಂ ಕಕುಭೋ ನ ರೇಜಿರೇ ।**
**ತತಃ ಸಭಾಯಾಮುಪವಿಷ್ಟಮುತ್ತಮೇ**
**ನೃಪಾಸನೇ ಸಂಭೃತತೇಜಸಂ ವಿಭುಮ್ ॥೩೪॥**

**ಅಮುಷ್ಯ** ಈ ನರಸಿಂಹದೇವರ **ರಂಹಸಾ** ವೇಗದಿಂದ **ಶೈಲಾಃ** ಬೆಟ್ಟಗಳು **ಸಮುತ್ಪೇತುಃ** ಉರಳಿದವು. **ತತ್ತೇಜಸಾ** ಅವನ ಕಾಂತಿಯಿಂದ **ಖಂ** ಆಕಾಶವು **ಕಕುಭಃ** ದಿಕ್ಕುಗಳು **ನ ರೇಜಿರೇ** ಶೋಭಿಸಲಿಲ್ಲ. 'ರಂಹಶ್ಚ ಗುಹ್ಯೇ ಸುರತೇ ಚ ವೇಗೇ' ಎಂದು ನಾಮನಿಧಾನವಿದೆ.'ಅನಂತಂ ಸುರವರ್ತ್ಮ ಖಂ । ದಿಶಸ್ತು ಕಕುಭಃ ಕಾಷ್ಠಾ'ಎಂದು ಅಮರವಿದೆ **ತತಃ** ಅನಂತರ **ಸಭಾಯಾಂ** ಸಭೆಯಲ್ಲಿ **ಉತ್ತಮೇ ನೃಪಾಸನೇ** ಶ್ರೇಷ್ಠವಾದ ಸಿಂಹಾಸನದಲ್ಲಿ **ಉಪವಿಷ್ಟಂ** ಕುಳಿತಿರುವ **ಸಂಭೃತತೇಜಸಂ** ಜಗದ್ವ್ಯಾಪಿಯಾದ ಪ್ರಭಾವವುಳ್ಳ **ವಿಭುಂ** ಸಮರ್ಥನಾದ ನರಸಿಂಹನನ್ನು ನೃಪಾಸನೇ ಎಂಬುದನ್ನು ಆವೃತ್ತಿಮಾಡಿಕೊಂಡು **ನೃಪಸ್ಯ** ಹಿರಣ್ಯಕನ **ಆಸನೇ** ಮರಣರೂಪನಿರಸನವಾದಾಗ, ಪ್ರಹ್ಲಾದನು ಇನ್ನು ಅಧಿಕಾರಿಯಾದ್ದರಿಂದ ಅಲ್ಲಿ ಕುಳಿತನೆಂದು ಅರ್ಥವಿಶೇಷವನ್ನು ತಿಳಿಯಬೇಕು.

ವಿಶೇಷ :- ಇದರಿಂದ ರಾಜಾಸಿಂಹಾಸನವೆಂಬ ಶಬ್ದ(ಹೆಸರು)ಅಂದಿನಿಂದ ಸಾರ್ಥಕವಾಯಿತು ಎಂದು ಸೂಚಿತವಾಗುವದು. ಏನೋ ಅಪೂರ್ವವಾದ ಆಸನಕಾಣಿಸಿತು ಎಂದು ಕುಳಿತಿದ್ದಲ್ಲ. ದುರಾತ್ಮನ ಉಪವೇಶದಿಂದ ಬಂದ ಅಸ್ಪೃಶ್ಯತೆಯನ್ನು ನಿವಾರಿಸಿ ಪ್ರಹ್ಲಾದನ ಉಪವೇಶಕ್ಕೆ ಸದಾತ್ಮತೆಯನ್ನುಂಟು

ಮಾಡಲೆಂದೇ ತಿಳಿಯಬೇಕು. ।।೩೪।।

(೩೩ನೇ ಶ್ಲೋಕದಲ್ಲಿ 'ಶ್ವಾಸಹತಾಃ' ಎಂಬುದಕ್ಕೆ ಸ್ವರೂಪಭೂತಶ್ವಾಸ ಶ್ರೀಹರಿಗೆ ಇದೆ. ಆದ್ದರಿಂದ ಅವನಲ್ಲಿರಲು ಯೋಗ್ಯವಾದ ಸ್ವರೂಪಭೂತ ಶ್ವಾಸದಿಂದ ಸಮುದ್ರಗಳು ಚಲಿಸಿದವು ಎಂದರ್ಥ ಮಾಡಿದೆ. ಸ್ವರೂಪಭೂತವಾದ ಶ್ವಾಸವಿದೆ ಎಂಬ ವಿಷಯದಲ್ಲಿ ಪ್ರಮಾಣಗಳು ಮುಂದಿನಂತೆ. ವ್ಯಾಸತೀರ್ಥೀಯದಲ್ಲಿ, **'ಅವಾಯ್ವನಾಕಾಶಮತೇಜಮಿತಿ'** (ಪ್ರತೀಕ)ತದಾರಬ್ಧದೇಹರಹಿತಂ ಎಂದು ಹೇಳಿರುವರು. ಪಂಚಭೂತಾತ್ಮಕ ದೇಹವಿಲ್ಲದವನೆಂದರ್ಥ. ಇನ್ನು ತತ್ವಪ್ರಕಾಶಿಕಾ ತಾಮ್ರಪರ್ಣಿಗಳಾದ ವಾಕ್ಯಾರ್ಥಮುಕ್ತಾವಲಿ,ಪ್ರಮೇಯಮುಕ್ತಾವಲಿಗಳಲ್ಲಿ 'ವಾಯ್ವಾದಯಃ ಶರಿರೋಪಾದನತಯಾ ಪ್ರಸಕ್ತಾಃ ಲೋಕೇ ತಥಾ ಪ್ರಸಿದ್ಧಾನಾಂ ವಿಷಯಾವರಣಶೂನ್ಯೇ ಅಪ್ರಾಕೃತವಿಗ್ರಹೇ ಸರ್ವಾತ್ಮನಾ ನಿರಾಸಃ ಇತಿ ಭಾವಃ'ಎಂದಾರಂಭಿಸಿ 'ವಿಸ್ತರಸ್ತು' ಎಂಬಲ್ಲಿ ವರೆಗಿನ ಮಾತು. ಜಗತ್ತಿನಲ್ಲಿ ಶರೀರಾಕಾರವೆಂದು ಪ್ರಸಿದ್ಧವಾದ ಭೂತಗಳು ಆವರಣವಿಲ್ಲದ ಅಪ್ರಾಕೃತ ದೇಹವುಳ್ಳ ಶ್ರೀಹರಿಯಲ್ಲಿ ಸರ್ವಥಾ ಇಲ್ಲವೆಂದು ಭಾವ. ತಮೋವಾಯ್ವಾದೀನಾಮಿತಿ ಎಂದು ಪ್ರತೀಕ ಹಿಡಿದು 'ಯದ್ಯಪಿ' ಎಂದಾರಂಭಿಸಿ ಈಶ್ವರಾತ್ಮಕ ವಾಯ್ವಾಕಾಶಗಳನ್ನು ಹೇಳಿದರೂ ವಿರೋಧವಿಲ್ಲ ಎಂದು ಹೇಳಿ 'ಅನ್ಯವಸ್ತು ಸ್ವಭಾವ ಸ್ಥೌಲ್ಯಾದ್ಯಭಾವ' ಎಂಬಲ್ಲಿವರೆಗೆ ಎಲ್ಲರಿಗೂ ಇರುವ ಭೂತವಾಯ್ವಾದಿಗಳಾಗಲಿ ಸ್ಥೂಲತೆಯಾಗಲಿ ಎಲ್ಲವೆಂದು ಹೇಳಿದೆ.

ಭಾವರತ್ನಕೋಶದಲ್ಲಿಯೂ 'ತಮೋವಾಯ್ವಾದೀನಾಂ ಸರ್ವಾತ್ಮನೇತಿ' ಎಂದು ಪ್ರತೀಕ ಹಿಡಿದು ಅದು 'ಖಂ ಅಸುಖಂ' ಎಂಬಲ್ಲಿ ಹೇಗೆ ಅಸುಖಂ ಎಂಬುದರಿಂದ ಬಾಹ್ಯಸುಖ ನಿಷೇಧ ಮಾಡಿದರೂ, ಅದುಃಖಂ ಎಂಬುದರಿಂದ ದುಃಖ ಮಾತ್ರ ನಿಷೇಧ ಮಾಡಿದೆಯೋ ಹಾಗೆಯೇ ಇಲ್ಲಿಯೂ 'ಅಸ್ಥೂಲಂ' ಮುಂತಾದವುಗಳಿಗೆ ಪ್ರಾಕೃತ ಸ್ಥೌಲ್ಯಾದಿಗಳು ಇಲ್ಲವೆಂದು ಹೇಳಿದ್ದರೂ, ತಮೋ ವಾಯ್ವಾದೌ ಸರ್ವಾತ್ಮನಾ ಮುಂತಾದ ಸ್ಥಳದಲ್ಲಿ ಸರ್ವಾತ್ಮನಾ ತಮವಾಯುಗಳ ನಿಷೇಧ ಮಾಡಿದೆ ಎಂದು ಚಂದ್ರಿಕಾದಲ್ಲಿ ಹೇಳಿದೆ. 'ಪ್ರಸಿದ್ಧ ಸ್ಥೂಲಸೂಕ್ಷ್ಮಾದಿವೈಲಕ್ಷಣ್ಯಾಜ್ಜನಾರ್ದನಃ। ಅಸ್ಥೂಲಾದಿರಿತಿ ಪ್ರೋಕ್ತೋ ನೈವ ಸ್ಥೌಲಾದ್ಯಭಾವತಃ ।। ಅನಾವೃತ್ತೇಸ್ತಮೋನಾಸ್ಯ ಸ್ವಾತಂತ್ರ್ಯಾನ್ನಾದ್ಯತೇ ಕ್ವಚಿತ್ ।' ಎಂದು ಅಕ್ಷರಬ್ರಾಹ್ಮಣವಿದೆ. ಅದರಂತೆ ಸುಧೆಯೂ 'ಇಹಾಚ್ಛಾಯತಮಃ ಇತ್ಯಾದೇ ಅಸಂಕುಚಿತವೃತ್ತಿತ್ವಮೇವ ವಿಜ್ಞೇಯಂ' ಎಂದು ಉದಾಹರಿಸಿ ಷೋಡಶಕಲಾಂತ ಭೂತಾನಾಂ ಭಾವಾನಾಂ ನಿವೃತ್ತಿಃ ಜ್ಞಾತವ್ಯಾ' ಎಂದು ತಾವು ವ್ಯಾಖ್ಯಾನ ಮಾಡಿ, 'ತಥಾ ಚ ಆಥರ್ವಣಭಾಷ್ಯಂ 'ಷೋಡಶಕಲಾ-

ಶರೀರೋ ನ ಭವತೀತಿ ನಿಷ್ಕಲಃ' ಎಂದು ಸಮ್ಮತಿಯಾಗಿ ಕೊಟ್ಟು ವಾಯ್ವಾದಿಗಳಿಗೆ ಈ ವಿಧ ವೈಲಕ್ಷಣ್ಯ ತಿಳಿಸಲು ಸುಧೆಯಲ್ಲಿ 'ಅಚ್ಛಾಯತಮ ಇತ್ಯಾದೇಃ ಅಸಂಕುಚಿತವೃತ್ತಿತ್ವಮೇವ' ಎಂದು ಛಾಯಾ ತಮಸ್ಸುಗಳನ್ನು ಸ್ವಶಬ್ದೇನ (ವಾಚಕಶಬ್ದಗಳಿಂದಲೂ) ವಾಯು ಆಕಾಶಾದಿಗಳನ್ನು ಆದಿಶಬ್ದದಿಂದಲೂ ಗ್ರಹಣ ಮಾಡಿರುವರು ಎಂದು ಹೇಳುವರು. ಛಾಯಾತಮಸ್ಸು ವಾಯು ಆಕಾಶ ಇವುಗಳಿಗೆಲ್ಲ ಪ್ರಸ್ಥಾನ ಭೇದದಿಂದ 'ತಮೋ ವಾಯ್ವಾದೀನಾಂ' ಎಂಬುದಕ್ಕೂ 'ಅಚ್ಛಾಯತಮ ಇತ್ಯಾದೇ' ಎಂಬುದಕ್ಕೆ ಸ್ವಶಬ್ದೇನ ಮುಂತಾಗಿ ಗತಿಯು ವಿಚಾರಿತವಾಗಿದೆ. ಆದ್ದರಿಂದ ಚಂದ್ರಿಕೆಯು ಸ್ವಾರ್ಥಸಾಧನ ವಿದ್ರಾವಿತನಿದ್ರಾ ಎಂದು ಸಂತೋಷಪಟ್ಟಿರುವರು ಸ್ವಾರ್ಥಸಾಧನ ಮಾಡಲು ನಿದ್ರೆಯನ್ನು ಕಳೆದುಕೊಂಡಿರುವದು ಅಂದರೆ ಜಾಗರೂಕವಾಗಿರುವದು ಎಂದ ಭಾವ.

ಆದರೆ ಇದು ಸಾಹಸಮಾತ್ರ ಮುಖ್ಯತಃ ನೈರ್ಭರ್ಯವಾದರೂ ಸ್ವರೂಪ ಸ್ವಶನ ಇದೆ ಎಂದು ಹೇಳುವಲ್ಲಿ. ಅಕ್ಷರಬ್ರಾಹ್ಮಣವಾದರೂ ಅವಿವಾದಸ್ಥಳದಲ್ಲಿಯೇ ಪ್ರಮಾಣಶ್ವಸನಾಸ್ತಿತ್ವ ಆಶ್ವಾಸನದಲ್ಲಿ ಪ್ರಮಾಣವಲ್ಲ ಎಂದು ಮೇಲ್ನೋಟಕ್ಕೆ ತಿಳಿಯುವದು. ಆದ್ದರಿಂದ ನಾವೇನೂ ಪರಾಕ್ರಮಿಸಿಲ್ಲವೆನ್ನುವರು ಸತ್ಯಧರ್ಮರು. ತತ್ತ್ವೋದ್ಯೋತ ಟೀಕೆಯಲ್ಲಿ 'ಅವಾತ್ತಂ ವಾತಪ್ರೇರಣಯಾ ಶೂನ್ಯಂ (ವಿನಾ)'ಎಂದು ವ್ಯಾಖ್ಯಾನ ಮಾಡಿರುವರು. ಹೀಗೆ ಮಾಡಿದಲ್ಲಿ 'ತಮೋವಾಯ್ವಾದೀನಾಂ ಸರ್ವಾತ್ಮನಾ ನಿವೃತ್ತಿಃ' ಎಂಬ ತತ್ವಪ್ರಕಾಶಿಕಾ ವಿರೋಧ ಬರುವದಿಲ್ಲ ಎಂದರೆ, ಅಲ್ಲಿಯೂ ವಾಯುಪದಕ್ಕೆ ವಾಯುಪ್ರೇರಣಾ ಎಂದೇ ಅರ್ಥ. ಆದ್ದರಿಂದಲೇ 'ಶ್ವಸಿತಂ ಮಾತರಿಶ್ವನಾ' ಎಂಬಲ್ಲಿ ವಿಷ್ಣುವಿಗೂ ಶ್ವಾಸವಾಯು ಹೇಳಿದೆ. ಅದಾದರೋ ಚಿದಾನಂದಾದ್ಯಾತ್ಮಕವೇ ಆದುದು ಚಿದಾನಂದಾದ್ಯಾತ್ಮಕ ಮೊದಲಾದ ಅಂಗಗಳ ಜೊತೆಗೆ ಹೇಳಿದ್ದರಿಂದ ಎಂದು ಪ್ರಹ್ಲಾದಕೃಷ್ಣಾಚಾರ್ಯರ ಅಥರ್ವಣ ವಿವರಣದಲ್ಲಿರುವ ಮಾತು. ಇದರಂತೆ ಪರಿಮಳ ಬಿದರಳ್ಳಿ ಆಚಾರ್ಯರೆ ಮುಂತಾದವರ ವಚನಗಳು ಇವೆ. ವಾಸ್ತವಿಕವಾಗಿ ಯಾವ ವಾಯು ಇಲ್ಲವೆಂಬುದೆ ನಿಷ್ಕಂಟಕವಾದ ವಾಟ(ಮಾರ್ಗ). ಅಪೀಡಿತವಾದ 'ಅತಮೋವಾಯ್ವಾದಿನಾಂ ಸರ್ವಾತ್ಮನಾ ನಿವೃತ್ತಿಃ' ಎಂಬ ತತ್ವಪ್ರಕಾಶಿಕೆಯ ಮಾತು ಇನ್ನು 'ವಾತಪ್ರೇರಣ-ಶೂನ್ಯಂ' ಎಂಬುದಾಗಲಿ ಷೋಡಶಕಲಾಂತರ್ಗತ ಶರೀರಾರಂಭಕ ವಾತರಾಹಿತ್ಯವೇ ನಿವೃತ್ತಿ ಶಬ್ದಕ್ಕೆ ಅರ್ಥ ಎಂದಂಗೀಕರಿಸಿ ತಮ್ಮ ಹಾದಿಗೆ ಅದು ಸರ್ವಾತ್ಮನಾ ಎಂಬುದು ಸರ್ವಾತ್ಮನಾ ಅವಕಾಶ ಕೊಡಲಾರದು. ತತ್ವದ್ಯೋತ ಟೀಕೆಯಾದರೂ 'ಆನೀತ್' ಎಂದು ಪ್ರಾಪ್ತವಾದ ಆನನಕ್ಕೆ ಪ್ರಾಯಃ ವಾಯುಪ್ರೇರಣೆಯು ಎಲ್ಲ ಕಡೆ ಕಂಡಿದ್ದರಿಂದ ಇಲ್ಲಿಯೂ ಹಾಗೆ ಎಂದು ಶಂಕಾ ಪರಿಹಾರ ಮಾತ್ರ ಮಾಡಿದೆ.

ಆದ್ದರಿಂದ ನಿಮಗೆ ಕಾರಣವನ್ನು ಸ್ಥಾಧಿಸಲಾದರದು (ವಾಯುಸಂಬಂಧಸಾಧಕವಲ್ಲ) ಕಿಂತು ಉದಾಸೀನವಾಗಿದೆ.

ಚಂದ್ರಿಕೆಯೂ ನಿದ್ರಿಸುತ್ತಿಲ್ಲ 'ಇಹ ಅಚ್ಛಾಯಮತಮಮಿತ್ಯಾದೇರಸಂಕುಚಿತ ವೃತ್ತಿತ್ವಮೇವ ಜ್ಞೇಯಂ' ಎಂಬ ಸುಧೆಯು ಅವಧಾರಣ ಸಹಿತವಾದುದರಿಂದ ಇವೇ ಮೊದಲಾದ ವಿಚಿಕಿತ್ಸೆಗಳಿಗೆ ಚಿಕಿತ್ಸಾ ಅಲ್ಲ. ಈ ಸುಧೆಯನ್ನು ವಾಕ್ಯಾರ್ಥಚಂದ್ರಿಕೆಯಲ್ಲಿ ವ್ಯಾಖ್ಯಾನಿಸಿರುವರು. 'ನನು ಯದ್ಯಸ್ಥೂಲಾದಿಪದಾನಾಂ ಲೌಕಿಕಸ್ಥೌಲ್ಯಾದಿ-ರಾಹಿತ್ಯಾರ್ಥಕತ್ವೇನ ಅಲೌಕಿಕತಮೋವಾಯ್ವಾದಿಸಿದ್ಧಿಸ್ಯಾದಿತ್ಯತ ಆಹ । ಅಸ್ಥೂಲಂ ಅನಣ್ವೋಸ್ತರ್ಹಿ ಅಚ್ಛಾಯಮತಮೋ ಅವಾಯ್ವನಾಕಾಶಪದಾನಾಮಪಿ ಲೌಕಿಕಛಾಯಾತಮೋ ವಾಯ್ವಾದಿರಾಹಿತ್ಯಾರ್ಥತ್ವಾಪತ್ಯಾ ಅಲೌಕಿಕತಮೋ ವಾಯ್ವಾದಿಸಿದ್ಧಿಃ ಸ್ಯಾದಿತ್ಯತ ಆಹ । ಅಸ್ಥೂಲಮನಣ್ವಿತ್ಯಾದಿ ವಾಕ್ಯೇ ಅಸ್ಥೂಲಾದಿಪದಾನಾಂ ಪ್ರಾಕೃತಸ್ಥೌಲ್ಯಾದಿಮಾತ್ರನಿಷೇಧಕತಯಾ ಸಂಕುಚಿತಾರ್ಥತ್ವೇ ಅಪಿ ಅಚ್ಛಾಯಂ ಅತಮೋ ಅವಾಯ್ವನಾಕಾಶಂ ಇತ್ಯಾದಿನಾಂ ಸರ್ವಾತ್ಮನಾ ತಮ ಆದಿ ನಿಷೇಧಕತಯಾ ಅಸಂಕುಚಿತಾರ್ಥತ್ವಮೇವ ಜ್ಞೇಯಂ । ಅದುಃಖಂ ಅಸುಖಂ ಇತ್ಯೇಕಸ್ಮಿನ್‌ಅಪಿ ವಾಕ್ಯೇ ಅಸುಖಂ ಇತ್ಯನೇನ ಬಾಹ್ಯಸುಖನಿಷೇಧೇ ಅಪಿ ಅದುಃಖಂ ಇತ್ಯನೇನ ದುಃಖಮಾತ್ರನಿಷೇಧದರ್ಶನೇನ ಯೋಗ್ಯತ್ವ ಅಯೋಗ್ಯತ್ವಯೋರೇವ ಸಂಕೋಚಾಸಂಕೋಚನಿಯಾಮಕತಯಾ ಏಕವಾಕ್ಯಸ್ಥತ್ವಾದೇರಪ್ರಯೋಜಕತ್ವಾದಿತಿ ಭಾವ ಇತಿ ॥

'ಅಸ್ಥೂಲಂ ಅನಣು' ಎಂಬ ಪದಗಳಿಗೆ ಪ್ರಾಕೃತಸ್ಥೌಲ್ಯಮಾತ್ರ-ನಿಷೇಧಕಗಳಾದ್ದರಿಂದ ಸಂಕುಚಿತಾರ್ಥ ಹೇಳಿದರೂ, 'ಅಚ್ಛಾಯತಮಂ ಅವಾಯ್ವಾನಾಕಾಶಂ' ಮುಂತಾದವುಗಳಿಗೆ ಸರ್ವಾತ್ಮನಾ ತಮ ಆದಿಗಳ ನಿಷೇಧಕಗಳಾದ್ದರಿಂದ ಅಸಂಕುಚಿತನಾರ್ಥತ್ವವನ್ನೇ ತಿಳಿಯಬೇಕು. 'ಅದುಃಖಂ ಅಸುಖಂ' ಎಂದು ಒಂದೇ ವಾಕ್ಯದಲ್ಲಿ ಅಸುಖಂ ಎಂಬುದರಿಂದ ಬಾಹ್ಯಾಸುಖ ನಿಷೇಧ ಮಾಡಿದರೂ ಅದುಃಖಂ ಎಂಬುದರಿಂದ ದುಃಖಸಾಮಾನ್ಯನಿಷೇಧ ಮಾಡುವದು ಕಂಡಿದ್ದರಿಂದ ಯೋಗ್ಯಸ್ವಾಯೋಗ್ಯತ್ವಗಳೇ ಸಂಕೋಚಾ-ಸಂಕೋಚಗಳಿಗೆ ನಿಯಾಮಕಗಳು ಹೊರತು ಒಂದೇ ವಾಕ್ಯದಲ್ಲಿರುವದು ಅಪ್ರಯೋಜಕವೆಂದು ಭಾವ.

ಇನ್ನು ಅಭಿನವಚಂದ್ರಿಕೆಯಲ್ಲಿಯೂ ಅಸ್ಥೂಲಾದಿ ಪದಗಳಿಗೆ ಲೌಕಿಕ ಸ್ಥೌಲ್ಯಾದ್ಯಭಾವಪರತ್ವ ಹೇಳುವದು ಸರಿಯಲ್ಲ. ಅತಮೋಽವಾಯುಪದಗಳಿಗೂ ಲೌಕಿತಮೋವಾಯು ನಿವರ್ತಕತ್ವ ಬಂದು ಪರಮೇಶ್ವರನಿಗ ಅಲೌಕಿತಮವಾಯು

ಛಾಯಾ ಆಕಾಶಗಳು ಇರುವ ಪ್ರಸಂಗ ಬರುವದು ಎಂದರೆ ಹೇಳುವರು 'ತಮೋ ವಾಯ್ವಾದೀನಾಮತಿ'' ಎಂದು. ಆದಿಪದದಿಂದ ಛಾಯಾಕಾಶಗಳನ್ನು ಸ್ವೀಕರಿಸಬೇಕು. ಅಸ್ಥೂಲಂ ಮುಂತಾದವುಗಳು ಪ್ರಾಯಪಾಠವಿದ್ದರೂ 'ಅಚ್ಛಾಯಂ' ಮುಂತಾದವುಗಳಿಗೆ ಸರ್ವಾತ್ಮನಾ ಛಾಯಾದಿಗಳ ನಿಷೇಧವೇ ಅರ್ಥವೆಂದು ಸ್ವೀಕರಿಸಬೇಕು. ಅಲೌಕಿಕಛಾಯಾದಿಗಳು ಅಪ್ರಾಮಾಣಿಕಗಳಾದುದರಿಂದ ಪ್ರಾಯಪಾಠವು ತ್ಯಾಜ್ಯವಾಗಿದೆ. ಇಲ್ಲವಾದರೆ ಅದುಃಖಮಸುಖಂ ಎಂಬಲ್ಲಿ ಪ್ರಾಯಪಾಠವನ್ನು ಅನುಸರಿಸಲು ಅದುಃಖಂ ಎಂಬುದಕ್ಕೆ ಪ್ರಾಕೃತದುಃಖರಹಿತ ವೆಂದರ್ಥವಾಗಬೇಕಾಗುವದು ಎಂದು ಭಾವ ಎಂದಿದ್ದಾರೆ.

ಭಾವ ಬೋಧದಲ್ಲಿಯೂ 'ತಮೋ ವಾಯ್ವಾದೀನಾಂ ಸರ್ವಾತ್ಮನೇತಿ' ಹೇಗೆ ಅದುಃಖಮಸುಖಂ ಎಂಬಲ್ಲಿ ಅಸುಖಂ ಎಂಬುದರಿಂದ ಬಾಹ್ಯಸುಖ ನಿಷೇಧಮಾಡಿದರೂ ಅದುಃಖ ಎಂಬುದರಿಂದ ಯಾವ ದುಃಖವೂ ಇಲ್ಲವೆಂದು ನಿಷೇಧಿಸಿರುವರೋ, ಹಾಗೆ ಅಸ್ಥೂಲಂ ಮುಂತಾದವುಗಳಲ್ಲಿ ಪ್ರಾಕೃತಸ್ಥೂಲ್ಯಾದಿ-ಗಳನ್ನು ನಿಷೇಧಿಸಿದರೂ ಅತಮೋಽವಾಯ್ವನಾಕಾಶಂ ಎಂಬಲ್ಲಿ ಸರ್ವಾತ್ಮನಾ ತಮ ಆದಿಗಳು ಇಲ್ಲವೆಂದೇ ಸರ್ವಾತ್ಮನಾ ನಿಷೇಧವೆಂದರ್ಥ ಎಂದಿದ್ದಾರೆ.

ಗುರ್ವರ್ಥದೀಪಿಕೆಯಲ್ಲಿಯೂ ಲೌಕಿಕಸ್ಥೌಲ್ಯಾದಿರಾಹಿತ್ಯ ಎಂಬಲ್ಲಿ ಲೋಕಪದದಿಂದ ಪರತಂತ್ರವು ಹೇಳಲ್ಪಡುವದು. ಅಸ್ಥೂಲ ಮುಂತಾದದವುಗಳಲ್ಲಿ ಪರತಂತ್ರ ಜಡಸ್ಥೌಲ್ಯಾದಿರಾಹಿತ್ಯವನ್ನು ಸ್ವತಂತ್ರ ಅಜಡಸ್ಥೌಲ್ಯಾದಿ ಸಾಹಿತ್ಯವು ಅಭಿಪ್ರೇತವಾಗಿದೆ. ಇಲ್ಲವಾದರೆ 'ಅಣೋರಣೀಯಾನ್ ಮಹತೋ ಮಹೀಯಾನ್' ಮುಂತಾದ ಶ್ರುತಿಗೆ ನಿರರ್ಥಕತೆ ಬರಬೇಕಾಗುವದು. ಅಂದ ಮೇಲೆ ಅವುಗಳ ಪ್ರಾಯಪಾಠದಿಂದ ಛಾಯಾತಮೋ ವಾಯ್ವಾಕಾಶಗಳಿಗೂ ದ್ವೈವಿಧ್ಯ ಬರಲಿ ಎಂದರೇ ಹೇಳುವರು'ತಮೋವಾಯ್ವಾದೀನಾಂ ಇತಿ. ಛಾಯೆಯು ಮೊದಲನೆಯದಾಗಿದ್ದರೂ ತಮೋರೂಪವಾದ್ದರಿಂದ ಪ್ರತ್ಯೇಕವಾಗಿ ಹೇಳಿಲ್ಲ. ಹೇಗೆ ಒಂದೇ ವಾಕ್ಯದಲ್ಲಿದ್ದರೂ 'ಅದುಃಖಮಸುಖಂ' ಎಂಬ ಶ್ರುತಿಯಲ್ಲಿ ದುಃಖವು ಸರ್ವಥಾ ಇಲ್ಲ. ಸುಖದಲ್ಲಿ ದ್ವೈವಿಧ್ಯ(ಪ್ರಾಕೃತವಿಲ್ಲ ಅಪ್ರಾಕೃತವಿದೆ ಎಂದು) ವಿಲ್ಲವೋ ಹಾಗೆಯೇ ಇಲ್ಲಿಯೂ ಎಂದಿದ್ದಾರೆ.

ಶ್ವಾಸಾಶ್ವಾಸವಿಶ್ವಪತೇಃ ಶ್ವಸತೋಽಸ್ಯಾದಿವಾಗ್ಬಲಾಃ ।
ಕೇಚಿತ್ ದ್ವಾವಪತಿದ್ವಂದ್ವೌ ಪಕ್ಷೌಜೇಂಪ್ಸಾವಲಿತ್ಯತಃ ॥

ಕೇಚಿದ್ವ್ಯವಸ್ಥೆಯೇತ್ಯಾಹುರ್ವಾಯಂ ಚ ಶ್ರಮಶಾಮಕಾಃ ।
ಶ್ವಾಸಾಃ ಸ್ವರೂಪಭೂತಾನೇತ್ಯತ್ರ ನಿರ್ಭೃತನಿರ್ಭರಾಃ ॥

**ಟೀಕೈತರೇಯಋಗ್ಭಾಷ್ಯಾದಿದಿಶಾ ರುಚ್ಯತೇಽಚ್ಯುತೇ ।**
**ನನೋ ಗೃಹ್ಣಂತು ಕೇ ವಾಪಿ ನ ಗೃಹ್ಣಂತು ಪ್ರದರ್ಶ್ಯತೇ ।**
**ಯುಕ್ತಿಶ್ಚೋಕ್ತೇತರಾ ತಾಂ ತು ವಿದಾಂಕುರ್ವಂತ ಬಿಂದವಃ ।।**

'ಶ್ವಸತೋಽಸ್ಯನಸ್ತಃ' ಮುಂತಾದ ವಾಕ್ಯಬಲದಿಂದ ಜಗದೊಡೆಯನಿಗೆ ಸ್ವಾಸೋತ್ಸಾಸಗಳಿವೆ ಎನ್ನುತ್ತಾರೆ ಕೆಲವುರು. ಮಿಶ್ರವಾಕ್ಯಗಳಿರುವದರಿಂದ ವಿರುದ್ಧವಾಗದ ಎರಡುಪಕ್ಷಗಳು ಎನ್ನುತ್ತಾರೆ ಹಲವರು. (ಸ್ವರೂಪವಾದವು ಇವೆ ಭಿನ್ನವಾದವು ಇಲ್ಲ ಎಂದು). ಮತ್ತೆ ಕೆಲವರು ಸ್ವರೂಪಭೂತವಾದುದು ಇದ್ದೇ ಇದೆ ಜಡವಾದುದೇ ಇಲ್ಲವೇ ಇಲ್ಲ ಎಂದು ವ್ಯವಸ್ಥೆಮಾಡುವರು. ನಾವಾದರೂ ಶ್ರಮಶ್ಯಾಮಕ (ಪರಿಹಾರಕ)ವಾದ ಸ್ವರೂಪಭೂತವಾದ ಶ್ವಾಸವೂ ಇಲ್ಲ ಎಂಬಲ್ಲಿ (ನಿಶ್ಚಿತವಾದ ಭಾರವುಳ್ಳವರಾಗಿರುವೆವು) ನೈರ್ಭರ್ಯವುಳ್ಳವರು. ಟೀಕಾ ಐತರೇಯ, ಋಗ್ಭಾಷ್ಯ ಮುಂತಾದವುಗಳಲ್ಲಿ ಹೇಳಿದಂತೆ ಅಚ್ಯುತನಲ್ಲಿ ಪ್ರಕಾಶಿಸುತ್ತದೆ. ಅದನ್ನು ಸ್ವೀಕರಿಸಲಿ ಬಿಡಲಿ ನಾವಂತು ಬೇರೆಯ ಯುಕ್ತಿಗಳನ್ನು ತಿಳಿಸುವೆವು. ಅದನ್ನು ಜ್ಞಾನಿಗಳು ಸ್ವೀಕರಿಸಲಿ ಎನ್ನುತ್ತಾರೆ ಸತ್ಯಧರ್ಮರು.

'ಚಕ್ಷುಶ್ರೋತ್ರಂ ಮನೋ ವಾಕ್ ಪ್ರಾಣಃ ಶ್ರಯತೇ' ಎಂಬ ಉಪನಿಷದ್ಭಾಷ್ಯದಲ್ಲಿ 'ಅಗ್ನಿವಾತ ದಿನೇಶಾನಾಂ ಉತ್ಥಾನಾನಿ ಪೃಥಕ್ ಪೃಥಕ್ । ವದನಂ ನಾಸಿಕಾನೇತ್ರಂ ಇತ್ಯೇತಾನಿ ಪರಾತ್ಮನಃ ।। ಅದನಾಘ್ರಾಣದೃಷ್ಟ್ಯಾಖ್ಯಭೋಗತ್ರಯ ವಿಭಾಗತಃ । ಮುಖನಸಾಚಕ್ಷುಷಾಂ' ಪ್ರಾಣನಿಗೆ ಪರಮಾತ್ಮನ ಮೂಗಿನಿಂದ ಉತ್ಪತ್ತಿ ಮತ್ತು ಅದನ್ನು ಆಶ್ರಯಿಸಿಕೊಂಡಿರುವನೆಂದೂ ಹೇಳಿದೆ. ಅದರಂತೆ ಬೇರೆ ಸ್ಥಳದಲ್ಲಿಯೂ 'ನಾಸಿಕಾತೋ ಭೂನ್ಮುಖ್ಯವಾಯೋಃಸುತೋ ಮರುತ್ । ಪ್ರಾಣೋ ವಾಯುಃ' ಎಂದು ಎರಡು ರೀತಿ ಹೇಳಿದೆ. ವಿಸ್ವಾಸವಿದ್ದಲ್ಲಿ(ರೆ) ಮಾತರಿಶ್ವನಿಗೆ ನಾಸಿಕಾದಿಂದ ಉತ್ಪತ್ತಿ ಮತ್ತು ತದಾಶ್ರಿತತ್ವ ಹೇಳಿದ್ದು ಸುಸಂಬದ್ಧವಾದ್ದರಿಂದ (ವೆಂದು) ಪ್ರಮಾಣದಲ್ಲಿ ಹೇಳಿದ ನಾಸಿಕಾದಿಂದ ಮುಖ್ಯವಾಯುಸುತನು ಹುಟ್ಟಿದನೆಂದು ಹೇಳಿದ್ದು ಅಸಂಭಾವಿತವಾಗ ಬೇಕಾಗುವದು. 'ಋಗ್ವೇದಾದಿಕಮಸ್ಯೈವ ಶ್ವಸಿತಂ ಪ್ರಾಹ ಚಾಪರಾ । ವಾಚೋ ಬಭೂವುರುಶತೀರ್ಹಯಗ್ರೀವಾದಿತಿ ಸ್ಫುಟಮ್ । ವಚೋಭಾಗವತೇಪ್ಯಸ್ತಿ ಬ್ರಹ್ಮಾಂಡೇ ಅಪಿ ತಥಾ ಪರಮ್ ।। 'ಹಯಗ್ರೀವಾದಿ ಮಾವಿದ್ಯಾ ಶ್ವಸಿತತ್ವೇನ ನಿಸ್ಸೃತಾಃ' ಎಂದು ಭಾಷ್ಯೆಯಟೀಕಾಗಳಲ್ಲಿ 'ಅಸ್ಯಮಹತೋ ಭೂತಸಸ್ಯ ನಿಶ್ವಸಿತಂ ಏತದೃಗ್ವೇದೋ ಯಜುರ್ವೇದಃ ಸಾಮವೇದೋ ಅಥರ್ವಾಗಿರಂಃ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಃ ಸೂತ್ರಾಣಿ ಅನುವ್ಯಾಖ್ಯಾನಾನಿ ಅಸ್ಯೈವ ಏತಾನಿ ನಿಶ್ವಸಿತಾಃ

ಇತ್ಯಪರಾಶ್ರುತಿಃ । ಋಗ್ವೇದಾದಿಕಂ ಅಸ್ಯೈವ ವಿಷ್ಣೋರೇವ ನಿಶ್ವಸಿತಂ ಪ್ರಾಹ' । 'ತೇನಾಪಿ ತಸ್ಯ ಋಷಿತ್ವಂ ಜ್ಞಾಯತೇ' ನಿಶ್ವಸಿತಮಿವ ಅನಾಯಸೇನ ಆದಿಕಾಲೇ ತೇನ ಉಚ್ಚರಿತಂ ಇತ್ಯರ್ಥ । 'ವಾಚೋ ಬಭೂವುರುಶತೀಃ ಶ್ವಸತೋಽಸ್ಯ ನಸ್ತಃ ಇತಿ' ಭಾಗವತೇ ಸ್ಫುಟಂ ಏತಂ ಅರ್ಥಂ ಪ್ರತಿಪಾದಯತ್ ವಚೋ ಅಸ್ತಿ. ಎಂದು ಹೇಳಿರುವದರಿಂದ ಸಶ್ವಾಸೋತ್ಶ್ವಾಸದಂತೆ ಅನಾಯಾಸವಾಗಿ ಉಚ್ಚರಿಸಿದ್ದು ಎಂದಿರುವದರಿಂದ ಆಯಾಸವನ್ನು ಸಂಪಾದಿಸಿಬೇಕಿಲ್ಲ .ಅಜ್ಞಾನಕಾರ್ಯವಾದ್ದರಿಂದ ನಿದ್ರೆಯು ಭಗವಂತನಲ್ಲಿ ಅವಕಾಶವನ್ನು ಪಡೆಯುವದಿಲ್ಲ. ಅದರಂತೆ ಶ್ವಾಸವೂ ಶ್ರಮಶಮನಕ್ಕಾಗಿ ಅವಶ್ಯ ಹೇಳಬೇಕಾದುದು. ಶ್ರಮವೇ ಇಲ್ಲದಿರುವದರಿಂದ ಪರಿಹಾರಕ ಶ್ವಾಸವೂ ಇಲ್ಲವೆಂಬುದು ಮನೋಹಾರಿಯಾಗಿದೆ. 'ಶ್ವಸಿತಂ ಮಾತರಿಶ್ವಾ' 'ಶ್ವಸತೋಽಸ್ಯ ನಸ್ತಋಶ್ವೈಸ್ವೇಜ- ದಲಕವ್ರಾತಂ' ಮುಂತಾದವುಗಳಲ್ಲಿ ಪ್ರಸ್ತುತ ವಾಕ್ಯದಲ್ಲಿಯೂ ಅಷ್ಟಮಸ್ಕಂಧದಲ್ಲಿ ಹೇಳಿದ್ದರ ಛಾಯೆಯ ಛಾಯೆಯನ್ನು ಆಶ್ರಯಿಸಿ ವ್ಯಾಖ್ಯಾನ ಮಾಡಬಹುದು. ಇನ್ನು 'ಸಂತತಂ ಚಿಂತಯೇತ್ಕಂಠಂ ಭಾಸ್ವತ್ಕೌಸ್ತುಭಭಾಸಕಮ್ । ವೈಕುಂಠಸ್ಯಾಖಿಲಾವೇದಾಃ ಉದ್ಗೀರ್ಯಂತೇ ಅನಿಶಂ ಯತಃ' ಎಂದು ಆಚಾರ್ಯರು 'ಕಂಠತಃ ಕಠಂ ಅನಿಶಂ ಯತಃ' ಎಂದು ಹೇಳಿದ್ದು ಶ್ವಾಸವಿದೆ ಎಂಬ ಔತ್ಕಂಠ್ಯವನ್ನು ಕುಂಠಿತಗೊಳಿಸುವದು. 'ನಸ್ತೋಮುಖಾದಪಿ ನಿರಂತರ ಮುದ್ಗಿರಂತಂ' 'ಹಯಾಸ್ಯನಾಸಾಪುಟವಾತಜಾತಃ' ಎರಡನೇ ಸ್ಕಂಧದಲ್ಲಿ 'ಸವಾಸೂದನಾಂ ಚ ವಾಯೋಶ್ಚ ಕನ್ನಾಸೇ ಪರಮಾಯನೇ' ಮುಂತಾದವುಗಳು ಇದಕ್ಕೆ ಅನುಕೂಲಗಳೇ. ಸಿಂಹದ ಮುಖವಿರುವದರಿಂದ ಅದರ ಸಾಮ್ಯ ಬರಲು ಶ್ವಾಸಗಳನ್ನು ಸೃಷ್ಟಿಮಾಡಿ ತೋರಿಸುವದು ಸಂಭಾವಿತವಾಗಿದೆ ಎಂದು ತಿಳಿಯಬೇಕು.

ಸರ್ವಾತ್ಮನೇತಿ ನ ವ್ಯಚೋದದ್ಯಾತ್ಸರ್ವಾತ್ಮನಾಂತರಮ್ ।
ಆಪೀಡಿತಂ ತದಸ್ಮಾಭಿರ್ನಾಪೀಡಿತಮಪೀಡಿತಮ್ ॥
ಅಸಂಕುಚಿತವೃತ್ತಿತ್ವೇಮೇವೇತಿ ಗುರುಗೀರಪಿ ॥

ನ ಸಂಕುಚಿಸ್ಯಾತ್ ವೃತ್ತಿ ತಂದ್ರೀಸ್ಯಾತ್ ನೋ ಯಾತಿ ಚಂದ್ರಿಕಾ ।
ಆಯಾಸಂ ಯಾಸ್ಯತಿ ನ ಸಾಽಪ್ಯನಾಯಾಸೇನ ನಿಃಸೃತಿಮ್ ॥
ವದಿಂತೀ ಗೌರವೀ ವಾಣೀ ತಥಾ ಗುರ್ವರ್ಥದೀಪಿಕಾ ॥೨॥

ವಾಕ್ಯಾರ್ಥಚಂದ್ರಿಕಾ ಭಾವಬೋಧಾಭಿನವಚಂದ್ರಿಕಾಃ ।
ತದ್ವೈತರೇಯೋಪನಿಷದ್‌ಭಾಷ್ಯಂ ಚೇತ್ಯೇವಮಾದಿನಾ ॥೩॥

ವಿಶ್ವೇಶ್ವರೇ ಸ್ವಾಪಸಮಃ ಶ್ವಾಸೋ ಯಚ್ಛ್ರಮಶಾಮಕಃ ।
ನಾಂಗೀಕಾರ್ಯಮತೋ ಸ್ಮಾಕಂ ಜಾನೀಹಿತಿ ಜನಾಃ ಪರೇ ॥೪॥

ನ ವಾ ಜಾನಂತಿ ಜಾನಂತು ತದ್ವ್ರಜ್ಯಾಂ ನ ವ್ರಜಂತ್ಯಜ ॥೫॥

ತತ್ವಪ್ರಕಾಶಿಕೆಯ 'ಸರ್ವಾತ್ಮಾ' ಎಂಬ ಮಾತು ಶ್ರೀಹರಿಗೆ ಶ್ವಾಸವಾಯು ಇದೆ ಎನ್ನಲು ಸರ್ವಾತ್ಮನಾ ಅವಕಾಶ ಕೊಡಲಾರದು. ಆ ಮಾತನ್ನು ನಾವು ಪೀಡಿಸಿಲ್ಲ ಅಪೀಡಿತವಾದ ಅರ್ಥವನ್ನೇ ಹೇಳಿರುವೆವು. 'ಅಂಸಕುಚಿತವೃತ್ತಿತ್ವಮೇವ' ಎಂಬ ಗುರುಗಳಾದ ಟೀಕಾಕೃತ್ಪಾದರ ಶ್ರೀಮನ್ನ್ಯಾಯಸುಧೆಯೂ ಸಂಕೋಚ ಮಾಡಲು ಬರಲಾದದ್ದು. ಚಂದ್ರಿಕೆಯೂ ಆಲಸ್ಯವನ್ನು ಹೊಂದುವದಿಲ್ಲ. ನಿಃಶ್ವಸಿತ ಶಬ್ದಕ್ಕೆ ಅನಾಯಾಸದಿಂದ ಹೊರಟ(ಉಚ್ಚಾರಿತ) ಎಂದು ಅರ್ಥ ಹೇಳುವ ಗುರುಗಳಮಾತು ಆಯಾಸವನ್ನು ನೀಡುವದಿಲ್ಲ. ಅದರಂತೆ ಗುರ್ವರ್ಥದೀಪಿಕಾ, ವಾಕ್ಯಾರ್ಥ-ಚಂದ್ರಿಕಾ, ಭಾವಬೋಧ, ಅಭಿನವಚಂದ್ರಿಕಾ, ಐತರೇಯೋಪನಿಷದ್ಭಾಷ್ಯ ಮುಂತಾದವುಗಳಿಂದ ಜಗದೊಡೆಯನಲ್ಲಿ ನಿದ್ರೆಗೆ ಸಮಾನವಾದ ಶ್ರಮಪರಿಹಾರಕವಾದ ಶ್ವಾಸವನ್ನು ಅಂಗೀಕರಿಸಬಾರದು. ಹೀಗೆ ನಮ್ಮ ಅಭಿಪ್ರಾಯವನ್ನು ತಿಳಿ ಬೇರೆ ಜನರು ತಿಳಿಯುವದಿಲ್ಲ ತಿಳಿದರೂ ತಿಳಿಯಲಿ ಶ್ರೀಹರಿಯೆಂತು ಶ್ವಾಸಸಮೂಹವನ್ನು ಹೊಂದುವದಿಲ್ಲವೆಂದು ಶ್ಲೋಕಗಳ ಅಭಿಪ್ರಾಯ.

'ತತ್ತಟಾಕ್ಷಿಪ್ತವಿಮಾನಸಂಕುಲಾ' ಎಂಬುದಕ್ಕೆ ನರಸಿಂಹದೇವರ ಕೇಸರಗಳಿಂದ ಮೇಲಕ್ಕೆ ಎಸೆಯಲ್ಪಟ್ಟ ಎಂದರೆ ಆಕಾಶಯಾನಗಳ ಸಮೂಹವುಳ್ಳ ಎಂದರ್ಥ. 'ವಿಮಾನೋ ವ್ಯೋಮಯಾನೇ ಚ ಸಪ್ತಭೂಮಗೃಹೇऽಪಿ ಚ । ಘೋಟಕೇ ಯಾನಮಾತ್ರೇ ಚ ಪುನ್ನಪುಂಸಕಯೋಕರಪಿ' ಎಂದು ಶಬ್ದಮಂಜರಿ ಇದೆ. 'ವ್ಯಮಯಾನಂ ವಿಮಾನೋಸ್ತ್ರೀ' ಎಂದು ಅಮರವಿದೆ. ವಿವಿಧತಯಾ ವಿಶಿಷ್ಟಂ ವಾ ಮಾನಯಂತೀತಿ ವಿಮಾನಃ' ಅನೇಕ ರೀತಿಯಾಗಿ ಶ್ರೇಷ್ಠವಾಗಿ ಗೌರವಿಸುವ-ದೆಂದರ್ಥ. ಕ್ಷ್ಮಾ ಭೂಮಿಯೂ ತತ್ಸಟಾ ಎಂಬಲ್ಲಿಯ ಸಮಸ್ತಪದವಾದರೂ ತತ್ ಪದವು ಷಷ್ಠ್ಯಂತವಾಗಿ ಅನ್ವಯಿಸುವದು. ತಸ್ಯ ಪದಾ ಅತಿ ಪೀಡಿತಾ ಸತೀ **ಪ್ರೋತ್ಸರ್ಪತ** ಶ್ರೀಹರಿಯಪಾದದಿಂದ ಅತ್ಯಂತ ಪೀಡಿತವಾಗಿ ತಗ್ಗುದಿನ್ನಿಯಾಗಿ ಸರಿದುಕೊಂಡಿತು. ಅಥವಾ ಮುಂದಿನ ಶ್ಲೋಕದಲ್ಲಿ ಅಮುಷ್ಯ ಎಂಬ ಪದವನ್ನು ಆಕರ್ಷಿಸಿಯಾದರೂ ಅನ್ವಯಿಸಿಬಹುದು. 'ಪದಾತಿನಾ ಪೀಡಿತಾ' ಎಂದಾದರೂ ಮಾಡಬಹುದು. ಈ ಪಕ್ಷದಲ್ಲಿ ಪಾದದ ಸಂಖ್ಯೇ ಇಷ್ಟೇ ಎಂದಿಲ್ಲ. 'ಪದಾಪತ್ತಿಪತಂಗೆ' ಎಂದು ಅಮರವಿದೆ. 'ಪದ್ಭ್ಯಾಂ ಭೂಮಿರಜಾಯತ' ಎಂದಿರುವದರಿಂದ ತಂದೆಯೇ ಮಗನನ್ನು ಮಾರುತ್ತಾನೆ. ಎಂಬ ನ್ಯಾಯದಿಂದ ಭೂಮಿಯು ಹಾರಿದ್ದು ಬೇರೆ ಗತಿಯಲ್ಲದೇ ಯುಕ್ತವೇ ಆಗಿದೆ. (ಸಮೀಪಿಸಿದ್ದು) ಕರೇಣ ಎನ್ನದೆ ಪದಾ ಎಂದು ಹೇಳಿದ್ದರಿಂದ ಈ ಅರ್ಥ ಧ್ವನಿತವಾಗಿದೆ. ॥೩೩-೩೪॥

ಪ್ರತಿಭಟನು ಕಾಣದಿರುವದರಿಂದ ಭಗವಂತನು ಕುಳಿತಿದ್ದು ಎಂದು ಹೇಳುವರು-

**ಅಲಕ್ಷಿತದ್ವೈರಥಮತ್ಯಮರ್ಷಣಂ**
**ಪ್ರಪಂಚವಕ್ತ್ರಂ ನ ಬಭಾಜ ಕಶ್ಚನ ।**
**ನಿಶಾಮ್ಯ ಲೋಕತ್ರಯಮಸ್ತಕಜ್ವರಂ**
**ತಮಾದಿದೈತ್ಯಂ ಹರಿಣಾ ಹತಂ ಮೃಧೇ ॥೩೫॥**

**ಅಲಕ್ಷಿತದ್ವೈರಥಂ** ಎರಡನೆಯ ರಥದ ಸಂಬಂಧಿಯಾದ(ದ್ವಿತೀಯಸ್ಯ ರಥಸ್ಯ ಅಯಂ ದ್ವೈರಥಃ ದ್ವಿತೀಯತ್ವೇನ ಆಭಿಮುಖ್ಯೇನ ರಥಂತಿ ಯಃ ಸಃ ದ್ವಿರಥಃ ಸ ಏವ ದ್ವೈರಥಃ) ಎದುರಾಳಿಯು ಅಲಕ್ಷಿತಃ ಯೇನ ಸಃ **ತಂ** ಅವನನ್ನು ಕಾಣದಿರುವ **ಪ್ರಚಂಡವಕ್ತ್ರಂ** ಭಯಂಕರಮುಖವುಳ್ಳ **ಅತ್ಯಮರ್ಷಣಂ** ಸಹಿಸಲಸಾಧ್ಯವಾದ ನರಸಿಂಹನನ್ನು **ಕಶ್ಚನ** ಯಾರೂ **ನ ಬಭಾಜ** ಸಮೀಪಸಲಿಲ್ಲ ಭಯದಿಂದ ದೂರ ಉಳಿದರು ಎಂದರ್ಥ. **ಲೋಕತ್ರಯಮಸ್ತಕಜ್ವರಂ** ಮೂರು ಲೋಕಗಳಿಗೆ ತಲೆ ಬೇನೆಯಾಗಿರುವ **ತಂ ಆದಿದೈತ್ಯಂ** ಆ ಹಿರಣ್ಯಕಶಿಪುವನ್ನು **ಮೃಧೇ** ಯುದ್ಧದಲ್ಲಿ **ಹರಿಣಾ** ನರಸಿಂಹದೇವರಿಂದ **ಹತಂ ನಿಶಾಮ್ಯ** ಕೊಲ್ಲಲ್ಪಟ್ಟಿದ್ದನ್ನು ಕಂಡು ॥೩೫॥

**ಪ್ರಹರ್ಷವೇಗೋತ್ಕಲಿತಾನನಾ ಮುಹುಃ**
**ಪ್ರಸೂನವರ್ಷೈರ್ವವೃಷುಃ ಸುರಸ್ತ್ರಿಯಃ ।**
**ತದಾ ವಿಮಾನಾವಲಿಭಿರ್ನಭಸ್ಥಲಂ(ಸ್ತಲಂ)**
**ದಿದೃಕ್ಷತಾಂ ಸಂಕುಲಮಾಸ ನಾಕಿನಾಮ್ ॥೩೬॥**

**ಪ್ರಹರ್ಷವೇಗೋತ್ಕಲಿತಾನನಾಃ** ಆನಂದಾತಿರೇಕದಿಂದ ವಿಕಸಿತವಾದ(ಅರಳಿದ) ಮುಖವುಳ್ಳ **ಸುರಸ್ತ್ರಿಯಃ** ದೇವತಾಸ್ತ್ರೀಯರು **ಮುಹುಃ** ಮತ್ತೆ ಮತ್ತೆ **ಪ್ರಸೂನವರ್ಷೈಃ ವವೃಷುಃ** ಹೂಮಳೆ ಗರೆದರು. ಹಿಂದೆ 'ಕಶ್ಚನ ನ ಬಭಾಜ' ಎಂದು ಹೇಳಿ 'ಸುರಸ್ತ್ರಿಯಃ' ಎಂದು ಇಲ್ಲಿ ಹೇಳಿದ್ದರಿಂದ ಸ್ತ್ರೀಯರಿಗೆ ನೋಡಲು ತಂದೆಯಾದುದರಿಂದ ಮರಣಭೀತಿ ಇಲ್ಲ ಎಂದು ಧ್ವನಿತವಾಗುವದು. ಪುರುಷರಿಗೆ ಬಂದ ಕೋಪಶಮನ ಮಾಡುವದು ಸ್ತ್ರೀಯರಿಗೆ ಸುಲಭಸಾಧ್ಯವೆಂದು ಭಾವ. ದೇವಸ್ತ್ರೀಯರು ಸುರಿಸಿದ ಹೂಮಳೆಯ ಸುವಾಸನೆಯನ್ನು ಆಘ್ರಾಣಿಸಿದ್ದರಿಂದ ಸ್ವಲ್ಪ ಕೋಪಶಾಂತ-ವಾಗಿರುವದು. ಇದು ನಮಗೂ ಸಮಯವೆಂದು ತಿಳಿದು ಮಿಕ್ಕವರು ನೋಡಲು ಧಾವಿಸಿದರೆಂದು ಹೇಳುವರು **ತದಾ** ಆ ಕಾಲದಲ್ಲಿ **ದಿದೃಕ್ಷತಾಂ** ನರಸಿಂಹದೇವರನ್ನು ನೋಡಲಿಚ್ಛಿಸುವ **ನಾಕಿನಾಂ** ದೇವತೆಗಳ **ವಿಮಾನಾವಲಿಭಿಃ** ವಿಮಾನಗಳ ಸಾಲುಗಳಿಂದ **ನಭಃಸ್ಥಲಂ** ಆಕಾಶಸ್ಥಾನವು **ಸಂಕುಲಂ ಆಸ** ತುಂಬಿಕೊಂಡಿತು.

ವಿಶೇಷ ಃ- 'ವಿಥ್ಯಾಲಿರಾವಲಿಃ ಪಂಕ್ತಿಃ' ಎಂದು ಅಮರವಿದೆ. ನಭಸ್ತಲಂ ಎಂಬ ಪಾಠದಲ್ಲಿ ಆಕಾಶಪ್ರದೇಶವೆಂದರ್ಥ. ನ ವಿದ್ಯತೇ ಅಕಂ ದುಃಖಂ ಯತ್ರ ಸಃ ನಾಕಃ ಸ್ವಃ 'ಸ್ವರವ್ಯಯಂ ಸ್ವರ್ಗನಾಕಃ' ಎಂದು ನಾಕಃ ನಿವಾಸತ್ವೇನ ಅಸ್ತಿ ಯೇಷಾಂ ಇತಿ ನಾಕಿನಃ ದಿವಿಷದಃ ತೇಷಾಂ 'ನಭ್ರಾಣ' ಎಂಬ ಸೂತ್ರದಿಂದ ನಞಗೆ ಪ್ರಕೃತಿಭಾವ. ದೃಶಧಾತುವಿಗೆ ಸನ್ ಪ್ರತ್ಯಯ, ದ್ವಿತ್ವ, ಹಲಾದಿಶೇಷ, ಷತ್ವಕ್ಷತ್ವಗಳಾದಾಗ ದಿದೃಕ್ಷತಾ ಎಂದಾಗುವದು. ।।೩೬।।

**ಸುರಾನಕಾ(ಸುರಣಕಾಃ)ದುಂದುಭಯೋ(ಜಘ್ನಿರೇ)ವಿನೇದಿರೇ**
**(ಗಾಂಧರ್ವ)ಗಂಧರ್ವಮುಖ್ಯಾ ನನೃತುರ್ಜಗುಸ್ತ್ರಿಯಃ ।।೩೭।।**

**ಸುರಾನಕಾಃ** ದೇವತೆಗಳ ಪಟಹವೆಂಬ ವಾದ್ಯಗಳು(ತಮಟೆ)(ಢಕ್ಕಾ ಡಮರು) **ದುಂದುಭಯಃ** ನಗಾರಿಗಳು **ವಿನೇದಿರೇ** ತಾವೇ ಬಾರಿಸಿದವು ('ಜಘ್ನಿರೇ' ಎಂಬ ಪಾಠದಲ್ಲಿ ಬಾರಿಸಿದಂತೆ ಧ್ವನಿ ಮಾಡಿದವೆಂದರ್ಥ.) **ಗಂಧರ್ವಮುಖ್ಯಾಃ** ಗಂಧರ್ವಶ್ರೇಷ್ಠರು **ಜಗುಃ** ಹಾಡಿದರು **ಸ್ತ್ರಿಯಃ** ಅವರ ಪತ್ನಿಯರು **ನನೃತುಃ** ನರ್ತನ ಮಾಡಿದರು (**ಆನಯತಿ** ಯೋಧರನ್ನು ಉತ್ಸಾಹಉಳ್ಳವರನ್ನಾಗಿ ಮಾಡುವದು.)

ವಿಶೇಷ ಃ- ಸುರಾಣಕಾಃ ಎಂಬ ಪಾಠದಲ್ಲಿ ದುಂದುಭಿಗೆ ವಿಶೇಷಣ. ದಿಕ್ಕುಗಳನ್ನು ಪ್ರತಿಧ್ವನಿಗೊಳಿಸುವ ಎಂದರ್ಥ. (ಶಬ್ದಾರ್ಥಕವಾದ ರಣಧಾತುವಿಗೆ ಣ್ವುಲ್ ಪ್ರತ್ಯ, ರಾಣಯಂತಿ ಹರಿತಃ ಪ್ರತಿಸ್ವರಯಂತಿ ಯೇ ತೇ ಸುರಾಣಕಾಃ) 'ಹರಿವಂಶದಲ್ಲಿ ಸ್ವಯಮೇವ ಪ್ರವಾದ್ಯಂತೇ ದೇವತೂರ್ಯಣ್ಯನೇಕಶಃ' ಎಂದು ಹೇಳಿದೆ. ಯಾರೂ ಬಾರಿಸದೇ ತಾವೇ ಧ್ವನಿಮಾಡಿದವೆಂದರ್ಥ. ದುಂದುಂ ಎಂಬ ಶಬ್ದದಿಂದ ಭಾತಿ ತೋರುವದರಿಂದ ಇದಕ್ಕೆ ದುಂದುಭಿ ಎನ್ನುವರು. ಗಂಧಂ ಸೌರಭಂ ಅರ್ವಂತಿ ಗಚ್ಛಂತಿ ಗಂಧರ್ವಾ ಸುಗಂಧವನ್ನು ಹೊಂದಿರುವರು ಎಂದರ್ಥ. 'ಗಾಂಧರ್ವ' ಎಂಬ ಪಾಠ ಕೆಲವೆಡೆ ಇದೆ. ಎರಡೂ ಪಕ್ಷದಲ್ಲಿ 'ಶಕಂಧ್ವಾದಿ' ಎಂಬುದರಿಂದ ಪರರೂಪವನ್ನು ತಿಳಿಯಬೇಕು. ದಿವ್ಯಗಾಯನ ಮಾಡುವವರೆಂದರ್ಥ.

**ತ ಉಪಾವ್ರಜ್ಯ(ತದುಪವ್ರಜ್ಯ)ವಿಬುಧಾ ಬ್ರಹ್ಮೇಂದ್ರಗಿರಿಶಾದಯಃ ।**
**ಋಷಯಃ ಪಿತರಃ ಸಿದ್ಧಾ ವಿದ್ಯಾಧರಮಹೋರಗಾಃ ।।೩೮।।**

**ತೇ** ಆ ದೇವತೆಗಳು (ನಾಕಿಪದದಿಂದ ಹೇಳಲ್ಪಟ್ಟವರು ಅಥವಾ ಯಾರು ಹಿಂದೆ ಇದಕ್ಕಾಗಿ ಪ್ರಾರ್ಥನೆ ಮಾಡಿದ್ದರೋ ಅವರು ಎಂದಾದರೂ ಅರ್ಥ) **ಬ್ರಹ್ಮೇಂದ್ರ-ಗಿರಿಶಾದಯಃ** ಬ್ರಹ್ಮದೇವರು, ಇಂದ್ರದೇವರು, ರುದ್ರದೇವರೇ ಮೊದಲಾದ **ವಿಬುಧಾಃ** ದೇವತೆಗಳು **ಋಷಯಃ** ಋಷಿಗಳು **ಪಿತರಃ** ಪಿತೃಗಳು **ಸಿದ್ಧಾಃ** ಸಿದ್ಧರು

**ವಿದ್ಯಾಧರಾಃ** ವಿದ್ಯಾಧರರು **ಮಹೋರಗಾಃ** ಸರ್ಪಗಳು **ಉಪಾವ್ರಜ್ಯ** ಸಮೀಪಿಸಿ ಈಡಿರೇ ಎಂದು ಮುಂದೆ ಅನ್ವಯ.

ವಿಶೇಷ ಃ- (ದಯೆ ಇಲ್ಲದಿರುವದು ಸರ್ವಸಾಧಾರಣವಾದುದರಿಂದ ಯಾರನ್ನು ಎಲ್ಲಿ ಹೇಳಿದರೇನು ಎಂಬ ಅಭಿಪ್ರಾಯದಿಂದ ಮಧ್ಯದಲ್ಲಿ ಇಂದ್ರನನ್ನು ಸೇರಿಸಿರುವರು. ಬ್ರಹ್ಮೇಂದ್ರಗಿರಿಶೇಷಾಃ ನ ವಿದ್ಯತೇ ದಯಾ ಯಸ್ಯ ಸಃ ಬ್ರಹ್ಮೇಂದ್ರಗಿರಿಶೇಷಾದಯಃ ಯಾವ ಕಾರಣ ದಯೆ ಇಲ್ಲದವನೋ ಆ ಕಾರಣ ಸ್ತುತಿಸಿದರು ಎಂದನ್ವಯ.)'ತದುಪವ್ರಜ್ಯ' ಎಂಬ ಪಾಠದಲ್ಲಿ **ತತ್** ನರಸಿಂಹದೇವರು ಕುಳಿತ ಸ್ಥಳವನ್ನು **ಉಪವ್ರಜ್ಯ** ಸಮೀಪಿಸಿ ಎಂದರ್ಥ. ।।೩೮।।

**ಮನವಃ ಪ್ರಜಾನಾಂ ಪತಯೋ ಗಂಧರ್ವಾಪ್ಸರಚಾರಣಾಃ ।**
**ಯಕ್ಷಾಃ ಕಿಂಪುರುಷಾಸ್ತಾತ ವೇತಾಲಾಃ ಸಹ ಕಿನ್ನರಾಃ ।।೩೯।।**

**ತಾತ** ಧರ್ಮರಾಜನೇ **ಮನವಃ** ಮನುಗಳು **ಪ್ರಜಾನಾಂ ಪತಯಃ** ಪ್ರಜೇಶ್ವರನು **ಗಂಧರ್ವಾಪ್ಸರಚಾರಣಾಃ** ಗಂಧರ್ವರು, ಅಪ್ಸರೆಯರು, ಚಾರಣರು **ಯಕ್ಷಾಃ** ಯಕ್ಷರು **ಕಿಂಪುರುಷಾಃ** ಕಿಂಪುರುಷರು **ಸಹ ಕಿನ್ನರಾಃ** ಕಿನ್ನರರಿಂದ ಕೂಡಿದ **ವೇತಾಲಾಃ** ವೇತಾಳರು (ಬೇತಾಳರು)

ವಿಶೇಷ ಃ- ಇಲ್ಲಿ ಅಪ್ಸರಃಶಬ್ದಪರ್ಯಾಯವಾದ ಅಕಾರಾಂತವಾದ ಅಪ್ಸರ ಶಬ್ದವಿದು. 'ಏಕಾಮಪ್ಸರಾಂ' ಮುಂತಾಗಿ ಭಾಷ್ಯವಿದೆ. ಅಪ್ಸರಾಣಾಂ ಸಮೂಹಃ ಅಪ್ಸರಂ, ಗಂಧರ್ವಾಶ್ಚ ಅಪ್ಸರಂ ಚ ಚಾರಣಾಶ್ಚ ಎಂದು ವಿಗ್ರಹ. ಸಕಾರಾಂತವಾದ ಎಲ್ಲ ಶಬ್ದಗಳು ಅಕಾರಾಂತವಾಗಿವೆ ಆದ್ದರಿಂದ ದ್ವಿರೂಪಕೋಶದಲ್ಲಿ ಸಜಾತೀಯವಾದ ತಮಸಾಚತಮಂ ಮುಂತಾಗಿ ತೋರಿಸಿರುವದರಿಂದ ಅಕಾರಾಂತವೆಂದು ತಿಳಿಯಬೇಕು. ।।೩೯।।

**ತೇ ವಿಷ್ಣುಪಾರ್ಷದಾ ಸರ್ವೇ ಸುನಂದಕುಮುದಾದಯಃ ।**
**ಮೂರ್ಧ್ನಿ ಬದ್ಧಾಂಜಲಿಪುಟಾ ಆಸೀನಂ ತೀವ್ರತೇಜಸಮ್ ।**
**ಈಡಿರೇ ನರಶಾರ್ದೂಲಂ ನಾತಿದೂರಚರಾಃ ಪೃಥಕ್ ।।೪೦।।**

**ತೇ** ಪ್ರಸಿದ್ಧರಾದ **ಸರ್ವೇ** ಎಲ್ಲ **ಸುನಂದಕುಮುದಾದಯಃ** ಸುನಂದಕುಮುದರೆ ಮೊದಲಾದ(ಇದರಿಂದ ಇನ್ನು ಜಯವಿಜಯರು ತಮ್ಮ ಮೂಲರೂಪ ಹೊಂದಿರುವದರಿಂದ ಇವರನ್ನು ಮೊದಲಿಗರನ್ನಾಗಿ ಸ್ವೀಕರಿಸಿದ್ದು ಎಂದು ತಿಳಿಯಬೇಕು. ನಂದ ಕುಮುದಾಕ್ಷ ಮುಂತಾದವರು ಆದಿಪದಾರ್ಥರು.) **ವಿಷ್ಣುಪಾರ್ಷದಾಃ** ಶ್ರೀಹರಿಯ ದ್ವಾರಪಾಲಕರು **ನಾತಿದೂರಚರಾಃ**

ತಾರತಮ್ಯಾನುಸಾರವಾಗಿ ಸಮೀಪದಲ್ಲಿ ನಿಂತವರಾಗಿ **ಮೂರ್ಧ್ನಿ** ಶಿರಸ್ಸಿನಲ್ಲಿ **ಬದ್ಧಾಂಜಲಿಪುಟಾಃ** ಕೈ ಜೋಡಿಸಿದವರಾಗಿ **ಆಸೀನಂ** ರಾಜಾಸನದಲ್ಲಿ ಕುಳಿತಿರುವ **ತೀವ್ರತೇಜಸಂ** ಬಹಳ ವರ್ಚಸ್ವಿಯಾದ **ನರಶಾರ್ದೂಲಂ** ನರಸಿಂಹನನ್ನು **ಪೃಥಕ್ ಈಡಿರೇ** ಬೇರೆ ಬೇರೆಯಾಗಿ ಸ್ತೋತ್ರ ಮಾಡಿದರು.

ತಮ್ಮ ಅಭೀಷ್ಟಪ್ರಾಪ್ತಿಗಾಗಿ ಪ್ರತ್ಯೇಕ ಪ್ರಾರ್ಥಿಸಿದರು. ಬಹಳದೂರವಲ್ಲದೆ ಸಂಚರಿಸಿದ್ದು ತಮ್ಮ (ತಾವು ಮಾಡಿದ) ಸ್ತುತಿಯು ಕೇಳಬೇಕು ತಮಗಾರೂ ಅತಿ ಹತ್ತಿರದಲ್ಲಿದ್ದು ಆ ರೂಪದ ಆಟೋಪ ನೋಡುವ ದಕ್ಷತೆ ಇಲ್ಲದ್ದರಿಂದಲೂ ಎಂದು ತಿಳಿಯಬೇಕು. ।।೪೦।।

'ಓಂ ಇಯದಾಮನನಾತ್ ಓಂ' ಎಂಬಸೂತ್ರ ಹೇಳಿದಂತೆ ಎಲ್ಲ ದೇವತೆಗಳಲ್ಲಿ ಉತ್ತಮರಾದ್ದರಿಂದ ಬ್ರಹ್ಮದೇವರು ಮೊದಲು ಸ್ತುತಿಸಿದರೆಂದು ಹೇಳುವರು-

**ಬ್ರಹ್ಮೋವಾಚ**

**ನತೋಽಸ್ಮ್ಯನಂತಾಯ ದುರಂತಶಕ್ತಯೇ**
**ವಿಚಿತ್ರವೀರ್ಯಾಯ ಪವಿತ್ರಕರ್ಮಣೇ ।**
**ವಿಶ್ವಸ್ಯ ಸರ್ಗಸ್ಥಿತಿಸಂಯಮಾನ್ ಗುಣೈಃ**
**ಸ್ವಲೀಲಯಾ ಸಂದಧತೇಽವ್ಯಯಾತ್ಮನೇ ।।೪೧।।**

**ಅಹಂ** ನಾನು **ಅನಂತಾಯ** ದೇಶಕಾಲಗುಣಗಳಿಂದ ಅಪರಿಚ್ಛಿನ್ನನಾದ **ದುರಂತಶಕ್ತಯೇ** ನಿರವಧಿಕವಾದ ನಾಶರಹಿತವಾದ ಜ್ಞಾನ,ಬಲ ಮೊದಲಾದ ಸ್ವರೂಪ ಶಕ್ತಿಗಳುಳ್ಳ **ಪವಿತ್ರಕರ್ಮಣೇ** ಸ್ವಯಂ ಪವಿತ್ರಗಳಾದ ಇತರರನ್ನು ಪಾವನಗೊಳಿಸುವ ಕ್ರಿಯೆಗಳುಳ್ಳ **ಗುಣೈಃ** ಸತ್ವರಜಸ್ತುತಮಸ್ಸು ಎಂಬ ಪ್ರಕೃತಿಯ ಗುಣಗಳು(ಅವನ್ನು ಉಪಯೋಗಿಸಿ) **ವಿಶ್ವಸ್ಯ** ಸಮಸ್ತ ಜಗತ್ತಿನ **ಸರ್ಗ** ಸೃಷ್ಟಿ **ಸ್ಥಿತಿ** ಪಾಲನೆ **ಸಂಯಮಾನ್** ಸಂಹಾರಗಳನ್ನು **ಸ್ವಲೀಲಯಾ** ಸ್ವರೂಪಭೂತಕ್ರೀಡೆಯಿಂದ **ಸಂದಧತೇ** ಮಾಡುತ್ತಿರುವ **ಅವ್ಯಯಾತ್ಮನೇ** ನಾಶರಹಿತವಾದ ದೇಹವುಳ್ಳ **ತುಭ್ಯಂ** ನಿನಗೆ **ನತಃ ಅಸ್ಮಿ** ನಮಸ್ಕರಿಸಿದವನಾಗಿದ್ದೇನೆ. ।।೪೧।।

ವಿಶೇಷ ಃ-'ರುದ್ರಶ್ಚ ಕ್ರೋಧಸಂಭವಃ' ಎಂದಿರುವದರಿಂದ ಕೋಪ ಸ್ವಭಾವನಾದ ನನ್ನಲ್ಲಿ ಸಾಂತ್ವವಚನ ದುರ್ಲಭವಾದುದು ಅಂಥ ನಾನು ಹೇಳಿದರೆ ಕೇಳಿಯೇ ಕೇಳುವನು ಕೇಳಿದ ಮೇಲೆ ಅದರಂತೆ ಮಾಡುವನು ಎಂದಾಗಲಿ, ಮೊಮ್ಮಗನಾದ್ದರಿಂದ 'ಪೌತ್ರಕವಚೋ ಯದಪಿ ಹ್ಯಯೋಗ್ಯಂ ಸಂಭಾವಯಂತಿ ಗುಣಿನಃ' ಎಂದಿರುವದರಿಂದ ಸಫಲಮಾಡುವನು ಆರ್ಯನು ಎಂದು ಫಾಲಲೋಚನನು ಆಲೋಚಿಸಿ ಕಾಲಾನುಕೂಲವಾಗಿ ಪ್ರಾರ್ಥಿಸುವನು-

**ರುದ್ರ ಉವಾಚ**

**ಕೋಪಕಾಲೋ ಯುಗಾಂತಸ್ತೇ ಹತೋಽಯಮಸುರೋಽಲ್ಪಕಃ ।**
**ತತ್ಸುತಂ ಪಾಹ್ಯನುಸೃತಂ ಭಕ್ತಂ ತೇ ಭಕ್ತವತ್ಸಲ ॥೪೨॥**

**ಹೇ ಭಕ್ತವತ್ಸಲ** ಭಕ್ತವತ್ಸಲನೇ **ತೇ** ನಿನ್ನ **ಕೋಪಕಾಲಃ** ವಿಶಿಷ್ಟವಾದ ಕೋಪವನ್ನು ತೋರಿಸುವ ಸಮಯವು **ಯುಗಾಂತಃ** ಯುಗದ ಕೊನೆಯು **ನ ಅಯಂ** ಈ ಕಾಲವಲ್ಲ. (ಅಥವಾ ಅಯಂ ಕೋಪಕಾಲಃ ಎಂದು ಕಾಕು ಇದು. ಕೋಪಕಾಲವೇ ಅಲ್ಲ. ಯುಗಾಂತ ಯುಗಾಂತವೇ ಹೀಗೂ ಅನ್ವಯ. ಇನ್ನು ಅದಕ್ಕಾಗಿ ಕೋಪ ತೋರಿಸುವ ಅವಶ್ಯಕತೆಯು ಏನು? ಆದ್ದರಿಂದ ಉಪಸಂಹರಿಸು ಎಂದು ಹರನು ಹೇಳುವನು) **ಅಲ್ಪಕಃ** ಅತ್ಯಂತ ಅಲ್ಪನಾದ **ಅಸುರಃ** ದೈತ್ಯನು **ಹತಃ** ಸಂಹೃತನಾದನು. ಇನ್ನು ಮುಂದೆ ಅದರ ಕೆಲಸವಿಲ್ಲದ ಕಾರಣ ಉಪಸಂಹರಿಸು ಎಂದು ಭಾವ.(ಉಗುರಿನಿಂದ ಆಗುವದಕ್ಕೆ ಕೊಡಲಿಯನ್ನು ತೆಗೆದುಕೊಳ್ಳುವವನಂತೆ ಅಚಾತುರ್ಯ ಸಂಪಾದಿಸಬೇಡ ಎಂದು ಭಾವ) **ತೇ** ನಿನ್ನ **ಭಕ್ತಂ** ಭಕ್ತನಾದ **ತತ್ಸುತಂ** ಹಿರಣ್ಯಕಶಿಪುಪುತ್ರನಾದ **ಅನುಸೃತಂ** ನಿನ್ನನ್ನು ಅನುಸರಿಸುವವನ್ನು **ಪಾಹಿ** ರಕ್ಷಿಸು. ನನ್ನ ಮಾತನ್ನು ನಡೆಸಿ **ಅನುಸೃತಂ** ನಿನ್ನನ್ನು ಅನುಸರಿಸಿದವನನ್ನು ರಕ್ಷಿಸು ಕೋಪಕಾಲವು ಸಹಸ್ರಯುಗಾಂತವು. ಇದಾದರೂ ಯುಗಾಂತವಲ್ಲ ಆದ್ದರಿಂದ ಕೋಪವನ್ನು ತೊರೆದು ಅವನ ಮಗನನ್ನು ರಕ್ಷಿಸು ಎಂದು ಆವೃತ್ತಿ ಮಾಡಿ ಅನ್ವಯ ಮಾಡಬೇಕು.

ಅಥವಾ **ಅಯಂ** ಹಿರಣ್ಯಕಶಿಪುವು **ಹತಃ** ಸತ್ತನು **ಅಲ್ಪಕಃ** ವಯಸ್ಸಿನಿಂದ ಚಿಕ್ಕವನಾದ ಹಿರಣ್ಯಾಕ್ಷನು **ಹತಃ** ಸತ್ತನು ಆದ್ದರಿಂದ **ಯುಗಾಂತಃ** ಹಿರಣ್ಯಾಕ್ಷ ಹಿರಣ್ಯಕಶಿಪು ಎಂಬ ಯುಗದ **ಅಂತಃ** ನಾಶವು **ಜಾತಃ** ಆಯಿತು ಇನ್ನು ಮುಂದೆ **ತತ್ಸುತಂ ಪಾಹಿ** ಅವನ ಮಗನನ್ನು ಕಾಪಾಡು.

ಪ್ರಹ್ಲಾದನೂ ಅವರಂತೆಯೇ ಇದ್ದರೆ ರಕ್ಷಿಸುವದು ಹೇಗೆ ಎಂದರೆ ಹೇಳುವರು. ಕೋಪಕಾಲಃ ಎಂದು. ರಲಯೋರಭೇದಃ ಕೋಽಪಕಾರಃ ಇತಿ. ಈ ಪ್ರಹ್ಲಾದನ ಅಪಕಾರವೇನಿದೆ ಏನೂ ಇಲ್ಲ. ಆದ್ದರಿಂದ ರಕ್ಷಿಸು ಎಂದು ಹೇಳಿದ್ದು ಸರಿಯೇ ಎಂದು ಉತ್ಪ್ರೇಕ್ಷಿಸುವರು. ಸ್ತೋತ್ರಮಾಡುವ ಸಂದರ್ಭದಲ್ಲಿ ಅಲ್ಪಕ ಎಂಬುದರ ಅಸ್ವಾರಸ್ಯವೆ ನಮ್ಮ ಉತ್ಪ್ರೇಕ್ಷೆಗೆ ಬಲವೆಂದೂ ಹೇಳುವರು. ಪಾಲನೀಯನಲ್ಲಿರುವ ಅನುಸರಣಭಕ್ತತ್ವಗಳು ಪಾಲಕನಲ್ಲಿರುವ ಭಕ್ತವತ್ಸಲತ್ವವು ಪಾಲನೆಗೆ ನಿಮಿತ್ತಗಳು ಎಂದು ಭಾವ. ॥೪೨॥

**ಇಂದ್ರ ಉವಾಚ**

**ಪ್ರತ್ಯಾನೀತಾಃ ಪರಮ ಭವತಾ ತ್ರಾಯತಾಂ ನಃ ಸ್ವಭಾಗಾ**
**ದೈತ್ಯಾಕ್ರಾಂತಂ ಹೃದಯಕಮಲಂ ತ್ವದ್ಗೃಹಂ ಪ್ರತ್ಯಬೋಧಿ**
**ಕಾಲಗ್ರಸ್ತಂ ಕಿಯದಿದಮಹೋ ನಾಥ ಶುಶ್ರೂಷತಾಂ ತೇ**
**ಮುಕ್ತಿಸ್ತೇಷಾಂ ನ ಹಿ ಬಹುಮತಾ ನಾರಸಿಂಹಾಪರೈಃ ಕಿಮ್ ॥೪೩॥**

**ಹೇ ಪರಮ** ಸರ್ವೋತ್ತಮನೇ **ನಃ** ನಮ್ಮನ್ನು **ತ್ರಾಯತಾಂ** ರಕ್ಷಿಸುವ **ಭವತಾ** ನಿನ್ನಿಂದ **ಸ್ವಭಾಗಾಃ** ನಮ್ಮ ಹವಿರ್ಭಾಗಗಳು **ಪ್ರತ್ಯಾನೀತಾಃ** ಮತ್ತೆ ನಮಗೆ ತಂದು ಕೊಡಲ್ಪಟ್ಟವು. (ಹಿರಣ್ಯಕಶಿಪುವಿನ ಕಾಲದಲ್ಲಿ ಸಹರಕ್ಷಕನೆಂಬ ಹೆಸರಿನ ಅಗ್ನಿಯಿಂದ ಇಂದ್ರಾದಿನಾಮಕದೈತ್ಯರಿಗೆ ಸೇರುತ್ತಿದ್ದ ನಮ್ಮ ಹವಿರ್ಭಾಗಗಳು ನಮಗೆ ಮತ್ತೆ ಸೇರುವಂತಾದವು ಎಂದರ್ಥ) **ಸ್ವಭಾಗಾಃ** ಅತ್ಯಂತವಾಗಿ ನಮ್ಮ ಭಾಗವಲ್ಲವೆಂದು ಅವನಿಂದ ಮಾಡಲ್ಪಟ್ಟದ್ದು **ಪ್ರತ್ಯಾನೀತಾಃ** ಅವನಿಂದ ಪ್ರತಿಬದ್ಧವಾದುದು ಅವನು ಸಾಯುತ್ತಿರಲು ತಿರುಗಿ ತಂದು ಕೊಡಲ್ಪಟ್ಟಿತು. ನಮ್ಮ ಉಪಭೋಗ್ಯವಾಯಿತು ಎಂದು ಭಾವ. **ದೈತ್ಯಾಕ್ರಾಂತಂ** ತಪೋಬಲದಿಂದ ದೈತ್ಯನು ಆಕ್ರಮಿಸಿದ್ದ ಅಂದರೆ ಯಾವಾಗಲೂ ಅವನೇ ಸ್ಮರಣಕ್ಕೆ ಬರುತ್ತಿರುವದರಿಂದ ನಿನ್ನ ಸ್ಮರಣಕ್ಕೆ ಪ್ರತಿಬಂಧಕವಾದ್ದರಿಂದ ಹಿರಣ್ಯಕಶಿಪುವಿನಿಂದ ಆಕ್ರಮಿಸಲ್ಪಟ್ಟ ಆದ್ದರಿಂದ ಮುದುಡಿದ **ತ್ವದ್ಗೃಹಂ** ನಿನ್ನ ಆವಾಸಕ್ಕೆ ಯೋಗ್ಯವಾದ **ಹೃದಯಕಮಲಂ** ನಮ್ಮ ಹೃದಯಕಮಲವು **ಪ್ರತ್ಯಬೋಧಿ** ನಿನ್ನಿಂದ ಮತ್ತೆ ಅರಳಿಸಲ್ಪಟ್ಟಿತು ನಿನಗೆ ಆವಾಸಯೋಗ್ಯವಾಗಿ ಮಾಡಲ್ಪಟ್ಟಿತು. ಅವನ ಭಯದಿಂದ ಯಾವಾಗಲೂ ಅವನನ್ನೆ ಯೋಚಿಸುತ್ತಿದ್ದ ನಾವು ಮತ್ತೆ ನಿನ್ನನ್ನು ಧ್ಯಾನಿಸುವಂತಾದೆವು ಎಂದರ್ಥ. **ಹೃದಯಕಮಲಂ ಪ್ರತ್ಯಬೋಧಿ** ಹೃದಯಕಮಲವು ಅರಳಿತು (ಹೀಗೆ ಹೃದಯಕಮಲವೇ ವಿಕಾಸಕರ್ತೃ, 'ಕ್ರಮಾದಮುಂ ನಾರದ ಇತ್ಯಬೋಧಿ ಸಃ' ಎಂಬುವಂತೆ ಅಥವಾ ತ್ವದ್ಗೃಹಮಿತಿ ತ್ರಾಯತಾ ತ್ವಯಾ ಪ್ರತ್ಯಬೋಧಿ ಎಂದು ಕರ್ಮಣಿ. ನಿನ್ನಿಂದ ವಿಕಾಸಗೊಳಿಸಲ್ಪಟ್ಟಿತು 'ಪ್ರಾಬೋಧಿ ಶ್ರುತಿಪಂಕಜಂ ಯೇನ' ಎಂಬಂತೆ ವಿರಕ್ತಿ ಭಕ್ತಿಗಳಿಂದಲೇ ಶ್ರೀಹರಿಯು ಒಲಿಯುವನು ಬೇರೊಂದರಿಂದಲ್ಲವೆಂಬ ಅಭಿಪ್ರಾಯದಿಂದ ಹೇಳುವರು.) ಹವಿಸ್ಸು ಸ್ವರ್ಗಾದಿಗಳು ದೈತ್ಯನಿಂದ ಬಲಾತ್ಕಾರದಿಂದ ಕಬಳಿಸಲ್ಪಟ್ಟವೆಂದು ಅದು ಅನಿಷ್ಟವೆಂದು ಪ್ರಾರ್ಥನೆ ಮಾಡಲ್ಪಟ್ಟಿತು ಎಂದಾದರೆ ಪರಮೇಷ್ಟಿವಲ್ಲ ಎಂದು ಹೇಳುವರು. **ಹೇ ನಾಥ** ಸ್ವಾಮಿಯೇ **ಇದಂ** ಈ ಸ್ವರ್ಗಾದಿಗಳು **ಕಾಲಗ್ರಸ್ತಂ** ನಶ್ವರವಾದುದರಿಂದ ಸುಖಜನಕ ವಾಗಲಾರವು. **ತೇ (ತ್ವಾ)** ನಿನ್ನನ್ನು **ಶುಶ್ರೂಷತಾಂ** ಸೇವಿಸುವ **ತೇಷಾಂ** ಆ ಏಕಾಂತ ಭಕ್ತರಿಗೆ **ಹಿ** ಯಾವಕಾರಣ **ಮುಕ್ತಿಃ** ನಿಶ್ಚಿತವಾದ ಮೋಕ್ಷವೂ **ನ ಬಹುಮತಾ** ಅತ್ಯಂತ

ಇಷ್ಟವಲ್ಲವೋ, ಮುಕ್ತಿಯು ಜ್ಞಾನಫಲವೆಂದು ಆಗಮುಗಳಿಂದ ತಿಳಿದಿದ್ದರೂ ಪ್ರಾರ್ಥನೀಯವೆಂದು ಸಮ್ಮತವಲ್ಲವೋ **ತಸ್ಮಾತ್** ಆದ್ದರಿಂದ **ಹೇ ನಾರಸಿಂಹ** ನರಸಿಂಹನೇ **ತೇಷಾಂ** ನಿನ್ನ ಏಕಾಂತಭಕ್ತರಿಗೆ **ಅಪರೈಃ** ಪುರುಷಾರ್ಥಗಳಲ್ಲದ ಧರ್ಮಾದಿಗಳಿಂದ, ಸ್ವರ್ಗಾದಿಗಳಿಂದ **ಕಿಂ** ಏನು ಪ್ರಯೋಜನವು ಏನೂ ಇಲ್ಲವೆಂದರ್ಥ. ನಿನ್ನ ದಯೆಯು ನಮಗೆ ಅಪೇಕ್ಷಿತವೆಂದು ಭಾವ. 'ತೇಷಾಂ' ಎಂದು ಪರೋಕ್ಷವಾಗಿ ಹೇಳಿದ್ದು ಅಹಂಕಾರವಿಲ್ಲವೆಂದು ತಿಳಿಸಲು. **ಯಾ** ಯಾವುದು **ಅಪರೈಃ** ಏಕಾಂತಭಕ್ತರಿಂದ ಭಿನ್ನರಾದವರಿಂದ, ಅನುತ್ತಮರಿಂದ **ಬಹುಮತಾ** ಮಹಾಪುರುಷಾರ್ಥವೆಂದು ಸಮ್ಮತವೋ **ಸಾ ಮುಕ್ತಿಃ** ಆ ಮುಕ್ತಿಯು **ತೇಷಾಂ** ''ಏಕಾಂತಾನಾಂ ನ ಕಸ್ಯಚಿತ್ । ಅರ್ಥೀ ನಾರಾಯಣೋ ದೇವೋ ಸರ್ವಮನ್ಯತ್ತದರ್ಥಕಮ್''ಎಂದಿರುವದರಿಂದ **ಅಥ** ಲಿಂಗಭಂಗಾನಂತರ **ನ ಕಿಂ** ಆಗುವದಿಲ್ಲವೇನು ಪ್ರಾರ್ಥಿಸದಿದ್ದರೂ ಆಗೇ ಆಗುವದು. ಆದ್ದರಿಂದ ಪ್ರಾರ್ಥನೀಯವಲ್ಲವೆಂದು ಅನ್ವಯಾರ್ಥ ಮಾಡಬೇಕು. ।।೪೩।।

**ಋಷಯ ಊಚುಃ**

**ತ್ವಂ ನಸ್ತಪಃ ಪರಮಮಾತ್ಥಯದಾತ್ಮತೇಜೋ**
**ಯೇನೇದಮಾದಿಪುರುಷಾತ್ಮಗತಂ ಸಮಸ್ತಮ್ ।**
**ತದ್ವಿಪ್ರಲುಪ್ತಮಮುನಾದ್ಯಶರಣ್ಯಪಾಲ**
**ರಕ್ಷಾಗೃಹೀತವಪುಷಾ ಪುನರನ್ವಮಂಸ್ಥಾಃ ।।೪೪।।**

**ಹೇ ಆದಿಪುರುಷ** ಆದಿಪುರುಷನೇ **ತ್ವಂ** ನೀನು **ಯದಾತ್ಮತೇಜಃ** ಯಾವ ನಿನ್ನ ಜ್ಞಾನರೂಪವಾದ ತೇಜಸ್ಸಾದ **ಪರಮಂ** ಅಪರೋಕ್ಷಜ್ಞಾನಸಾಧನವಾದ **ತಪಃ** ಆಲೋಚನಾರೂಪವಾದ ತಪಸ್ಸನ್ನು **ಆತ್ಥ** ಹೇಳಿದಿಯೋ(ಉಪದೇಶಿಸಿದೆಯೋ) **ಯೇನ** ಯಾವ ಈ ತಪಸ್ಸಿನಿಂದ **ಇದಂ** ಇದೆಲ್ಲವು **ಆತ್ಮಗತಂ** ಮನಸ್ಸಿನಿಂದ ವ್ಯಾಪ್ತವಾಗಿ **ಸಸರ್ಜ** ಮಾಡಿತೋ ಅಂದರೆ ಯೋಗಪ್ರಭಾವದಿಂದ ಎಲ್ಲವನ್ನು ಅಪರೋಕ್ಷದಿಂದ ಕಾಣುವವರಾದೆವೋ **ತತ್** ಆ ನಿನ್ನ ಜ್ಞಾನಮಯ ತಪಸ್ಸಿಗೆ ಸದೃಶವಾದ ನಮ್ಮ ಆಲೋಚನಾರೂಪ ತಪಸ್ಸು ಆ ನಿನ್ನ ಉಪದೇಶ ಕಾಲದ ತಪಸ್ಸಿಗೆ ಸದೃಶವಾದ ತಪಸ್ಸು **ಅಮುನಾ** ಈ ದೈತ್ಯನಿಂದ **ವಿಪ್ರಲುಪ್ತಃ ಅಭೂತ್** ನಷ್ಟವಾಯಿತು **ಅದ್ಯ** ಈಗ **ರಕ್ಷಾಗೃಹೀತವಪುಷಾ** ರಕ್ಷಣೆಗಾಗಿ ವ್ಯಕ್ತವಾದ ಈ ನರಸಿಂಹರೂಪದಿಂದ **ಹೇ ಶರಣ್ಯಪಾಲ** ಶರಣಾಗತರನ್ನು ರಕ್ಷಿಸುವವನೇ **ತ್ವಂ** ನೀನು **ಪುನಃ** ಮತ್ತೆ ನಮಗೆ **ಅನ್ವಮಂಸ್ಥಾಃ** ಅನುಗ್ರಹಿಸಿರುವೆ ಮತ್ತೆ ತಪಸ್ಸು ಮಾಡಿ ನಿಮ್ಮ ಸಾಧನೆ ಮಾಡಿಕೊಳ್ಳಿರೆಂದು ಅನುಗ್ರಹಿಸಿರುವೆ ಎಂದರ್ಥ.

ಈ ಶ್ಲೋಕದಲ್ಲಿ ಹೇ ಆದಿಪುರುಷ, **ಯದಾತ್ಮತೇಜಃ** ನಿನ್ನ ಜ್ಞಾನರೂಪವಾದ ತಪಸ್ಸನ್ನು **ಆತ್ಥ** ಹೇಳಿದಿಯೋ **ತತ್** ಅದು **ಅಮುನಾ** ದೈತ್ಯನಿಂದ **ವಿಪ್ರಲುಪ್ತಃ** ನಾಶಮಾಡಲ್ಪಟ್ಟಿತು ಎಂದು ಶ್ರೀಹರಿಜ್ಞಾನಾತ್ಮಕತಪಸ್ಸಿಗೆ ಲೋಪವು ತೋರುವದು ಅದು ಆದರೂ ನಿತ್ಯನಾದುದರಿಂದ ಈಶ್ವರನಿಗೆ ಉಪಪನ್ನವಲ್ಲ ಕಾರಣ ಉಪಪನ್ನವಾದ ಅರ್ಥ ಹೇಳುವರು.

**... ತಾತ್ಪರ್ಯ ...**

**ತದ್ವಿಪ್ರಲುಪ್ತಮಿತಿ ಸಾದೃಶ್ಯಾಭೇದವಚನಮ್ । ಆಲೋಚನಮೇವ ತಪಃ । 'ಯಸ್ಯ ಜ್ಞಾನಮಯಂ ತಪಃ'॥ ಇತಿ ಶ್ರುತೇಃ ॥**

ಋಷಿಗಳ ತಪಸ್ಸಿಗೆ ಶ್ರೀಹರಿಯ ತಪಸ್ಸಿನಿಂದ ಅಭೇದವು ನಾಶವೂ ಕೂಡದಿರುವದರಿಂದ ಪರಮಾತ್ಮನ ತಪಸ್ಸಿನ ಸಾದೃಶ್ಯವಿದ್ದುದರಿಂದ 'ಸಿಂಹೋ ದೇವದತ್ತಃ' ಎಂದು ಹೇಳುವಂತೆ ಗುಣಸಾದೃಶ್ಯವನ್ನಿಟ್ಟುಕೊಂಡು ಅಭೇದ ಹೇಳಿದ್ದು. ಶ್ರೀಹರಿಗೆ ಕೃಚ್ಛ್ರಾದಿಚಾಂದ್ರಾಯಣಾಂತವ್ರತ ಮುಂತಾದ ತಪಸ್ಸಿಲ್ಲವಲ್ಲ ಎಂದರೆ, ಪರಮಾತ್ಮನಿಗೆ ಜ್ಞಾನರೂಪ ಆಲೋಚನರೂಪವಾದ ತಪಸ್ಸು ಇದೆ. ಈ ವಿಷಯದಲ್ಲಿ 'ಯಸ್ಯ ಜ್ಞಾನಮಯಂ ತಪಃ' ಎಂಬ ಶ್ರುತಿ ಪ್ರಮಾಣವಾಗಿದೆ. ಸಾದೃಶ್ಯವೆಂಬ ಯಾವ ಅಭೇದವಿದೆಯೋ ತದ್ವಿಷಯಕವಚನವೆಂದರ್ಥ. ಪೃಥಗಧಿಕರಣದಲ್ಲಿಯ 'ಸಾದೃಶ್ಯಾಭೇದಸಂಶ್ರಯಾತ್' ಎಂಬ ಅನುವ್ಯಾಖ್ಯಾನಸುಧೆಯಲ್ಲಿ ಸಾದೃಶ್ಯಮೇವ ಅಭೇದಸಾದೃಶ್ಯಾಭೇದ ಎಂದಿರುವರು. ತತ್ತಪಃ ತತ್ಸದೃಶತಪಃ ವಿಪ್ರಲುಪ್ತಂ ಎಂದು ಭಾವ. ಇಲ್ಲಿ ತಪಸ್ಸೆಂದರೆ ಕೃಚ್ಛ್ರಚಾಂದ್ರಾಯಣಾದಿರೂಪವಾದ ಶ್ರೀಪತಿಯ ಪ್ರತಿಪತ್ಯಾತ್ಮಕ (ಜ್ಞಾನರೂಪ) ತಪಸ್ಸ್ವರೂಪವಲ್ಲ. ಆದ್ದರಿಂದ ಆಲೋಚನಮೇವ ತಪಃ ಎಂದಿರುವದು. ಇಲ್ಲಿ ತಪಸ್ಸೆಂದರೆ ಸ್ವರೂಪಜ್ಞಾನವಲ್ಲ ಕಿಂತು ಭಗವಂತನ ಜ್ಞಾನಸದೃಶವಾದ ಋಷಿಗಳ ಆಲೋಚನವು. ಅದರ ಲೋಪ, ಅಂದರೆ ವೃತ್ತಿಜ್ಞಾನಕ್ಕೆ ಲೋಪ, ಸ್ವರೂಪಕ್ಕೆ ತಿರೋಭಾವ ಸಂಭಾವಿತವಾದುದು. ಜ್ಞಾನಾತ್ಮಕತಪಸ್ಸು ಲಕ್ಷ್ಮೀಗಿಂತಲೂ ಉತ್ತಮನಾದ ಶ್ರೀಹರಿಗೆ ಇದ್ದರೆ ಅದರ ಸಾದೃಶ್ಯ ಹೇಳಬಹುದು. ಅದೇ ಹೇಗೆ ಎಂದರೆ ಯಸ್ಯ ಶ್ರೀಹರಿಗೆ ಜ್ಞಾನಮಯಮೇವ ತಪಃ ಎಂದು ಶ್ರುತಿ ಇರುವದರಿಂದ ಜ್ಞಾನರೂಪತಪಸ್ಸು ಶ್ರೀನಾಥನಿಗೆ ಅಪ್ರಾಮಾಣಿಕವಲ್ಲ ಎಂದು ಕೆಲವರು ಹೇಳುವರು.

'ವಸ್ತುತಸ್ತು ಸಾದೃಶ್ಯಾಭೇದವಚನಂ' ಎಂಬ ವಚನವು ಪ್ರಥಮಸ್ಕಂಧದಲ್ಲಿಯ 'ತದ್ವೈಧನುಸ್ತ ಇಷವ ಸ ರಥೋ ಹಯಾಸ್ತೇ' ಎಂಬುದರ ವ್ಯಾಖ್ಯಾನಕಾಲದಲ್ಲಿ 'ಸ ರಥೋ ಹಯಾಸ್ತೇ ಇತಿ ತಾದೃಶಾ ಇತ್ಯರ್ಥಃ. ತೇ ಇಷವ ಇತೀವ. ಸದೃಶೇ

ವಾ ಪ್ರಧಾನೇ ವಾ ಕರಣೇ ವಾ ತದಿತ್ಯಯಂ । ಶಬ್ದಸಂಘಟತೇ ಭೇದೇ ವಿದ್ಯಮಾನೇ ಅಪಿ ತತ್ವತಃ'ಇತಿ ಬ್ರಹ್ಮತರ್ಕೇ ಎಂದು ಹೇಳಿರುವದರಿಂದ ತಚ್ಛಬ್ದಾರ್ಥವಾದ ಸಾದೃಶ್ಯವೇ ಇಲ್ಲಿ ತೆಗೆದುಕೊಳ್ಳಲು ಬರುವದು. ಯತ್ ತಪಃ ತತ್ ತಪ ಇವ ತದ್ವಿಲುಪ್ತಂ ಎಂದು ಅನ್ವಯ ಮಾಡಬಹುದು. ಅದರಿಂದಲೇ ಅಭಿಪ್ರೇತಾರ್ಥ ತಿಳಿಯಲು ಬರುವಾಗ ಮತ್ತೇಕೆ ಇಲ್ಲಿ ಹೇಳಿದ್ದು ಎಂದರೆ, ಸಿದ್ಧವೆಂದಿಟ್ಟುಕೊಂಡೆ ಸಾದೃಶ್ಯಭೇದವಚನ ಎಂದಿಷ್ಟೇ ಹೇಳಿರುವರು. ಇದು ಕೂಡ ಬಹಳ ವ್ಯವಧಾನವಿರುವದರಿಂದ ಬಹುಸಂವಿಧಾನ ಸಾವಕಾಶವಾದ್ದರಿಂದ ಮಂದಮತಿಗಳ ಮೇಲೆ ದಯೆಯಿಂದ ಎಂದು ತಿಳಿಯಬೇಕು. ಕಿಂತು ಆತ್ಮತೇಜಸಃ ಭಗವಂತನ ಜ್ಞಾನಕ್ಕೆ ಸಮಾನವಿಷಯಕತ್ವ ಸದೃಶವಾದ ತಪಃ ಆಲೋಚನವು ಏನಿದೆಯೋ ಅದರ ತಿರೋಭಾವ ಇವನಿಂದ ಮಾಡಲ್ಪಟ್ಟಿತು ಎಂದು ಪರ್ಯವಸಿತ ಅರ್ಥವೆಂದು ತಿಳಿಯಬೇಕು. 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ'ಎಂದು ಶ್ರುತಿ ಇರುವದರಿಂದ ನಿನೇನು ತಪಸ್ಸನ್ನು ಉಪದೇಶಿಸಿದೆಯೋ ಅದು ನಷ್ಟವೆನ್ನಲಾಗುವದಿಲ್ಲ ಉಪದಿಷ್ಟಜ್ಞಾನ ಉಪದೇಶಕಾಲದಲ್ಲಿಯೇ ಇರುವದು ಅದು ಈಗ ವಿಪ್ರಲುಪ್ತವೆನ್ನಲಾಗದು. ಆದ್ದರಿಂದ ಜ್ಞಾನಾಂತರಕ್ಕೆ ನಾಶ ಹೇಳಬೇಕು. ಆದ್ದರಿಂದ ತದ್ವಿಪ್ರಲುಪ್ತ ಎಂದು ಹೇಳಿದ್ದು ಹೇಗೆ ಎಂದರೆ ಉಪದೇಶಕಾಲೋತ್ಪನ್ನಲೋಪಕಾಲದಲ್ಲಿ ಇರುವದರಿಂದ ಅದಕ್ಕೆ ಹಿಂದಿನ ಸಾದೃಶ್ಯವಿರುವದರಿಂದ ಯದಾತ್ಥತದ್ವಿಪ್ರಲುಪ್ತಂ ಎಂಬ ಮಾತು ಅನುಪಪನ್ನವಲ್ಲ ಹೀಗೂ ಭಾವ. ।।೪೪।।

ಮೊದಲು ಬಿಡಲಿಕ್ಕಾಗದ, ಅವಶ್ಯವಾಗಿ ಮಾಡಲೇಬೇಕಾದ ಪಿಂಡಪ್ರಧಾನಕ್ಕೂ ತಡೆಯಾಗಿತ್ತು. ಈಗ ಅವನನ್ನು ಸಂಹರಿಸಿ ಶ್ರಾದ್ಧಾದಿಗಳು ನಮಗೆ ಉಪಯೋಗವಾಗುವಂತೆ ಮಾಡಿ ಬಹುದೊಡ್ಡ ಉಪಕಾರ ನೀನು ಮಾಡಿರುವೆ ಎಂದು ಪಿತೃಗಳು ಸ್ತುತಿಸುವರು.

**ಪಿತರ ಊಚುಃ**

**ಶ್ರಾದ್ಧಾನಿ ನೋಽಧಿಬುಭುಜೇ ಪ್ರಸಭಂ ತನೂಜೈ**
**ರ್ದತ್ತಾನಿ *ತೀರ್ಥಸಮಯೇಽಪಿ ತಿಲಾಂಬು ಚಾಪಿಬತ್ ।**
**ತಸ್ಯೋದರಾನ್ನಖವಿದೀರ್ಣವಪಾದ್ ಯ ಆರ್ಛತ್**
**ತಸ್ಮೈ ನಮೋ ಭಗವತೇಽಖಿಲಕರ್ಮಗೋಪ್ತ್ರೇ ।।೪೫।।**

**ಯಃ** ಯಾವನು **ತೀರ್ಥಸಮಯೇ** ಭಾಗೀರಥ್ಯಾದಿ ತೀರ್ಥಗಳು ದೊರೆತಕಾಲದಲ್ಲಿ **ನಃ** ನಮ್ಮ **ತನೂಜೈಃ** ಮಕ್ಕಳಿಂದ **ದತ್ತಾನಿ** ಕೊಡಲ್ಪಟ್ಟ **ಶ್ರಾದ್ಧಾನಿ** ಶ್ರದ್ಧೆಯಿಂದ ಕೊಡಲ್ಪಟ್ಟ ಪಿಂಡಾದಿಗಳನ್ನು **ಪ್ರಸಭಂ** ಬಲಾತ್ಕಾರದಿಂದ **ಅಧಿಬುಭುಜೇ**

ತಿಂದು ಹಾಕಿದನು ಮತ್ತು **ನಃ ದತ್ತಂ** ನಮಗಾಗಿ ಕೊಟ್ಟ **ತಿಲಾಂಬು** ತಿಲೋದಕವನ್ನು (ಎಳ್ಳು ನೀರನ್ನು) **ಅಪಿಬತ್** ಕುಡಿದನು. **ಯಃ** ಯಾವ ನೀನು **ನಖ** ಉಗುರುಗಳಿಂದ **ವಿದೀರ್ಣ** ಸೀಳಿದ **ವಪಾತ್** ವಪೆಯೆಂಬ ಕರಳಿನ ಭಾಗವುಳ್ಳ 'ವಪಾ ವಸಾ' ಎಂದು ಅಮರವಿರುವದರಿಂದ ಎಲುಬಿನಲ್ಲಿರುವ ಮೇದಸ್ಸು ನೆಣ(ಮಾಂಸಸ್ನೇಹ)ವುಳ್ಳ **ತಸ್ಯ ಉದರಾತ್**(ಲ್ಯಬ್‌ಲೋಪನಿಮಿತ್ತಪಂಚಮೀ)ವಿದೀರ್ಣವಪೋದರಂ ವಿಧಾಯ ಆ ದೈತ್ಯನ ಹೊಟ್ಟೆಯಿಂದ **ತಾನಿ** ಆ ಶ್ರಾದ್ಧಾದಿಗಳನ್ನು **ನಃ** ನಮಗೆ **ಆರ್ಚ್ಛತ್** (ಅಂತರ್ಣೀತಣ್ಯರ್ಥ)ತಂದುಕೊಟ್ಟೆಯೋ(ತಲುಪುವಂತೆ ಮಾಡಿದೆಯೋ) **ತಸ್ಮೈ** ಅಂಥ **ಅಖಿಲಕರ್ಮಗೋಪ್ತ್ರೇ** ಎಲ್ಲ ಕರ್ಮಗಳನ್ನು ರಕ್ಷಿಸುವ **ಭಗವತೇ** ಸಮಗ್ರ ಐಶ್ವರ್ಯಸಂಪನ್ನನಾದ **ತೇ** ನಿನಗೆ **ನಮಃ** ನಮಸ್ಕಾರವು.

ವಿಶೇಷ ೞ- ೧ 'ಪ್ರಸಭಂ' ಎಂದುದರಿಂದ ನಿಮ್ಮ ಆಜ್ಞೆಯಿಂದಲೇ ಸ್ವೀಕರಿಸಿದರೆ ಅವನದೇನು ಅಪರಾಧ ಕೋಪವನ್ನೆ ತಡೆಯಬೇಕಷ್ಟೇ ಎಂಬ ಶಂಕೆಗೆ ಅವಕಾಶವಿಲ್ಲ. 'ಅಖಿಲಕರ್ಮಗೋಪ್ತ್ರೇ'ಎಂದದ್ದರಿಂದ ನಮಗೆ ಮಾತ್ರವಲ್ಲ ಎಲ್ಲರಿಗೂ ಈ ಅವತಾರದಿಂದ ಅವರವರರ್ಥ ದೊರೆಯುವಂತಾಯಿತು ಎಂದೂ ಸೂಚಿತವು.

ವಿಶೇಷ ೞ- ೨ 'ತೀರ್ಥಸಮಯೇಷು ತಿಲಾಂಬುಮಂತಿ' ಎಂದೂ 'ತಿಲಾನ್ ಸಹಾದ್ಭಿಃ' ಎಂದೂ ಪಾಠವಿದೆ. ತಿಲಾಂಬುಮಂತಿ ಎಂಬ ಪಾಠದಲ್ಲಿ ಆಗ ಶ್ರಾದ್ಧಕ್ಕೆ ವಿಶೇಷಣ. ಎಳ್ಳು ನೀರುಗಳುಳ್ಳ ಶ್ರಾದ್ಧಗಳನ್ನು ತಿಂದನು ಕುಡಿದನು. ತಿಲಾನ್ ಸಹಾದ್ಭಿಃ ಎಂಬ ಪಾಠದಲ್ಲಿ **ಅದ್ಭಿಃ ಸಹ** ನೀರಿನೊಡನೆ **ತಿಲಾನ್** ಎಳ್ಳುಗಳನ್ನು ಸಹ ತಿಂದನೋ ಎಂದರ್ಥ. ||೪೫||

**ಸಿದ್ಧಾ ಊಚುಃ**

**ಯೋ ನೋ ಗತಿಂ ಯೋಗಸಿದ್ಧಾಮಸಾಧು-**
**ರಹಾರ್ಷೀದ್ ಯೋಗತಪೋಬಲೇನ ।**
**ನಾನಾದರ್ಪಂ ತಂ ನಖೈರ್ವಿದದಾರ**
**ತಸ್ಮೈ ತುಭ್ಯಂ ಪ್ರಣತಾಃ ಸ್ಮೋ ನೃಸಿಂಹ ||೪೬||**

**ಹೇ ನೃಸಿಂಹ** ನರಸಿಂಹನೇ **ಅಸಾಧುಃ** ದುಷ್ಟನಾದ **ಯಃ** ಯಾವ ಹಿರಣ್ಯಕಶಿಪುವು **ಯೋಗತಪೋಬಲೇನ ಯೋಗ** ಪವನಜಯಾದಿಗಳು(ಪ್ರಾಣಾಯಾಮ) **ತಪಃ** ಕಾಯಕ್ಲೇಶಕರ ಚಾಂದ್ರಾಯಣಾದಿಗಳಿಂದ **ನಃ** ನಮ್ಮ **ಯೋಗಸಿದ್ಧಾಂ** ಯೋಗಾಭ್ಯಾಸದಿಂದ ಸಂಪಾದಿಸಿದ(ಅಣಿಮಾದಿಯೋಗಲಬ್ಧವಾದ) **ಗತಿಂ**

* 'ತೀರ್ಥಸಮಯೇಷು ತಿಲಾಂಬುಮಂತಿ' ಇತಿ ಪಾಠಾಂತರಂ.

ಅಂತರ್ಧಾನ-ಅನಂತರ್ಧಾನರೂಪವಾದ ಗಮನವನ್ನು **ಆಹಾರ್ಷೀತ್** ಅಪಹರಿಸಿದನೋ **ತಂ** ಅಂತಹ **ನಾನಾದರ್ಪಂ** ಅನೇಕ ಬಗೆಯ ದರ್ಪವುಳ್ಳ **ತಂ** ಆ ದೈತ್ಯನನ್ನು **ಯಃ** ಯಾವನು **ನಖೈಃ** ಉಗುರುಗಳಿಂದ **ವಿದದಾರ** ಸೀಳಿದನೋ **ತಸ್ಮೈ ತುಭ್ಯಂ** ಅಂಥ ನಿನಗೆ **ಪ್ರಣತಾ ಸ್ಮ** ಭಕ್ತಿಯಿಂದ ನಮಸ್ಕರಿಸುವವರಾಗಿದ್ದೇವೆ.

ವಿಶೇಷ :- ದರ್ಪಕ್ಕೆ ಪ್ರಯೋಜಕಗಳು ಬಹುವಿಧಗಳಾದುದರಿಂದ ದರ್ಪಗಳು ಬಹುವಿಧವೆಂದು ತಿಳಿಯಬೇಕು. ಸೀಳಿದ್ದು ಪರೋಕ್ಷವಾದ್ದರಿಂದ ತಸ್ಮೈ ಎಂದಿರುವರು. ಈಗ ಅಪರೋಕ್ಷವಾದುದರಿಂದ ತುಭ್ಯಂ ಎನ್ನುವದು ಯುಕ್ತವೇ ಆಗಿದೆ. ।।೪೭।।

**ವಿದ್ಯಾಧರಾ ಊಚುಃ**

**ವಿದ್ಯಾಂ ಪೃಥಗ್ಧಾರಣಯಾಽನುರುದ್ಧಾಂ**
**ನ್ಯಷೇಧದಜ್ಞೋ ಬಲವೀರ್ಯದೃಪ್ತಃ ।**
**ಸ ಯೇನ ಸಂಖ್ಯೇ ಪಶುಬದ್ಧಹಸ್ತಂ**
**ಮಹಾನ್ನೃಸಿಂಹಂ ಪ್ರಣತಾ ಸ್ಮ ನಿತ್ಯಮ್ ।।೪೭।।**

**ಪೃಥಕ್** ಜಗದ್ವಿಲಕ್ಷಣನಾದ ಶ್ರೀಹರಿಯ **ಧಾರಣಯಾ** ಸಂತತ ಉಪಾಸನೆಯಿಂದ **ಅನುರುದ್ಧಾಂ** ಸಂಪಾದಿಸಿದ **ನಃ** ನಮ್ಮ **ವಿದ್ಯಾಂ** ಅಂತರ್ಧಾನ ವಿದ್ಯೆಯನ್ನು **ಯಃ** ಯಾವ **ಬಲದೃಪ್ತವೀರ್ಯಃ** ಬಲದಿಂದ ಗರ್ವಿಷ್ಠನಾದ ವೀರ್ಯವುಳ್ಳ (ಸಾಮರ್ಥ್ಯವುಳ್ಳ) **ಅಜ್ಞಃ** ಅಜ್ಞಾನಿಯಾದ ಆ ದೈತ್ಯನು **ನ್ಯಷೇಧತ್** ತಡೆದಿದ್ದನೋ ಅಂದರೆ ಅಂತರ್ಧಾನರಾಗದಂತೆ ಮಾಡಿದ್ದನೋ **ಸಃ** ಆ ದೈತ್ಯನು **ಯೇನ** ಯಾವ ನರಸಿಂಹನಿಂದ **ಸಂಖ್ಯೇ** ಯುದ್ಧದಲ್ಲಿ **ಪಶುವತ್** ಪಶುವಿನಂತೆ **ಹತಃ** ಕೊಲ್ಲಲ್ಪಟ್ಟನೋ **ತಂ** ಆ **ಮಹಾನ್ನೃಸಿಂಹಂ** ಸರ್ವೋತ್ತಮನಾದ ನರಸಿಂಹನನ್ನು **ನಿತ್ಯಂ** ಯಾವಾಗಲೂ **ಪ್ರಣತಾ ಸ್ಮಃ** ಭಕ್ತಿಯಿಂದ ನಮಸ್ಕರಿಸುವವರಾಗಿದ್ದೇವೆ. ।।೧೭।।

**ನಾಗಾ ಊಚುಃ**

**ಯೇನ ಪಾಪೇನ ರತ್ನಾನಿ ಸ್ತ್ರೀರತ್ನಾನಿ ಹೃತಾನಿ ನಃ ।**
**ತದ್ವಕ್ಷಃಪಾಟನೇನಾಸಾಂ ದತ್ತಾನಂದ ನಮೋಽಸ್ತು ತೇ ।।೪೮।।**

**ಯೇನ ಪಾಪೇನ** ಯಾವ ಪಾಪಿಯಿಂದ **ನಃ** ನಮ್ಮ **ರತ್ನಾನಿ** ತಲೆಯ ರತ್ನಗಳು **ಸ್ತ್ರೀರತ್ನಾನಿ** ಶ್ರೇಷ್ಠರಾದ ನಾಗಕನ್ಯೆಯರು **ಹೃತಾನಿ** ಅಪಹರಿಸಲ್ಪಟ್ಟವೋ **ತದ್ವಕ್ಷಃಪಾಟನೇನ** ಆ ದೈತ್ಯನ ಎದೆಯನ್ನು ಸೀಳುವದರಿಂದ **ನಃ** ನಮಗೂ **ಆಸಾಂ** ಆ ಸ್ತ್ರೀಯರಿಗೆ **ದತ್ತಾನಂದಃ** ಆನಂದವನ್ನು ಕೊಟ್ಟ **ತೇ** ನಿನಗೆ **ನಮಃ ಅಸ್ತು** ನಮಸ್ಕಾರ ವಿರಲಿ. ।।೪೮।।

ದೈತ್ಯನು ಸಾಯುತ್ತಿರಲು ಮನುಗಳು ತಮ್ಮ ಕಾರ್ಯಾಜ್ಞೆಯನ್ನು ಪ್ರಾರ್ಥಿಸುವರು-

**ಮನವ ಊಚುಃ**

**ಮನವೋ ವಯಂ ತವ ನಿದೇಶಕಾರಿಣೋ**
**ದಿತಿಜೇನ ದೇವ ಪರಿಭೂತಸೇತವಃ ।**
**ಭವತಾ ಖಲಃ ಸ ಉಪಸಂಹೃತಃ ಪ್ರಭೋ**
**ಕರವಾಮ ತೇ ಕಿಮನುಶಾಧಿ ಕಿಂಕರಾನ್ ॥೪೯॥**

**ಹೇ ದೇವ** ಸ್ವಾಮಿಯೇ **ಮನವಃ ವಯಂ** ಮನುಗಳಾದ ನಾವು **ತವ ನಿದೇಶಕಾರಿಣಃ** ನಿನ್ನ ಆಜ್ಞಾನುಸಾರ ಧರ್ಮವನ್ನು ನಡೆಸುವವರು **ದಿತಿಜೇನ** ದೈತ್ಯನಿಂದ **ಪರಿಭೂತಸೇತವಃ** ತಿರಸ್ಕೃತವಾದ ನೀನು ಮಾಡಿದ ಧರ್ಮಮರ್ಯಾದಾವುಳ್ಳವರಾದೆವು(ನೀನು ಈ ಕಾಲದಲ್ಲಿರುವ, ನೀನು ಹೀಗೆ ಎಂಬ ಮರ್ಯಾದೆ ನಾನು ಹೀಗೆ ಮಾಡುವೆನೆಂದು ಸ್ವೀಕರಿಸುವದು) **ಸಃ** ಆ **ಖಲಃ** ಕ್ರೂರನು (ಕ್ರೂರೇ ನೀಚೇ ಅಧಮೇ ಖಲಃ) **ಭವತಾ ಉಪಸಂಹೃತಃ** ನಿನ್ನಿಂದ ಸಂಹರಿಸಲ್ಪಟ್ಟನು. (ನಿನ್ನ ಆಜ್ಞೆಯನ್ನು ಅಜ್ಞಾ ಮಾಡುವವನು ಸತ್ತ ಮೇಲೆ ಪ್ರತಿಬಂಧಕವಿಲ್ಲದಿರುವದರಿಂದ) **ಪ್ರಭೋ** ಸ್ವಾಮಿಯೇ **ತೇ** ನಿನಗೆ **ಕಿಂ ಕರವಾಮ** ಏನು ಮಾಡೋಣ **ಕಿಂಕರಾನ್** ನಿನ್ನ ಭೃತ್ಯರನ್ನು **ಅನುಶಾಧಿ** ಆಜ್ಞಾಪಿಸು. ॥೪೯॥

**ಪ್ರಜಾಪತಯ ಊಚುಃ**

**ಪ್ರಜೇಶಾ ವಯಂ ತೇ ಪರೇಶಾಭಿಸೃಷ್ಟಾ**
**ನಯೇನ ಪ್ರಜಾ ವೈ ಸೃಜಾಮೋ ನಿಷಿದ್ಧಾಃ ।**
**ಸ ಏಷ ತ್ವಯಾ ಭಿನ್ನವಕ್ಷಾಸ್ತು ಶೇತೇ**
**ಜಗನ್ಮಂಗಲಂ ಸತ್ವಮೂರ್ತೇಽವತಾರಃ ॥೫೦॥**

**ಹೇ ಪರೇಶ** ಸರ್ವೇಶ್ವರನೇ **ತೇ** ನಿನ್ನಿಂದ **ಪ್ರಜೇಶಾಃ ಇತಿ ಅಭಿಸೃಷ್ಟಾಃ** ಪ್ರಜಾಸೃಷ್ಟಿ ಮಾಡಲೆಂದು ಸೃಷ್ಟಿಸಲ್ಪಟ್ಟ **ವಯಂ** ನಾವು **ಯೇನ** ಯಾವನಿಂದ **ನಿಷಿದ್ಧಾಃ** ತಡೆಯಲ್ಪಟ್ಟವರಾಗಿ **ಪ್ರಜಾಃ ನ ಸೃಜಾಮಃ** ಪ್ರಜೆಗಳನ್ನು ಸೃಷ್ಟಿಸುತ್ತಿಲ್ಲ **ವೈ** ಪ್ರಸಿದ್ಧವಿದು **ಸಃ ಏಷಃ** ಆ ದೈತ್ಯನು **ತು** ಈಗ **ತ್ವಯಾ** ನಿನ್ನಿಂದ **ಭಿನ್ನವಕ್ಷಾಃ** ಸೀಳಲ್ಪಟ್ಟ ಎದೆಯುಳ್ಳವನಾಗಿ **ಶೇತೇ** ಮಲಗಿರುವನು **ಹೇ ಸತ್ವಮೂರ್ತೇ** ಬಲಜ್ಞಾನಾತ್ಮಕ ದೇಹವುಳ್ಳವನೇ **ಅಯಂ ಅವತಾರಃ** ಈ ನರಸಿಂಹಾವತಾರವು **ಜಗನ್ಮಂಗಲಂ** ಜಗತ್ತಿನ ಮಂಗಳಕ್ಕಾಗಿ ನಿನ್ನಿಂದ ಸ್ವೀಕೃತವಾದದ್ದು ಅನ್ಯಾಯದಿಂದ ಪ್ರಜಾಸೃಷ್ಟಿಯನ್ನು

ಬಿಡಿಸಿದುದು ಅವನದೇನು ದೌರ್ಜನ್ಯ ಎಂದರೆ ಉತ್ತರಿಸುವರು **ನಯೇನ ಪ್ರಜಾಸ್ಸೃಜಾಮಃ ವೈ** ನ್ಯಾಯದಿಂದ ಪ್ರಜೆಗಳನ್ನು ಸೃಷ್ಟಿಸುವೆವು ಅಂತಹವರನ್ನು ನಿಷೇಧಿಸಿರುವನಿವನು ಎಂದರ್ಥ. 'ಸತ್ವಮೂರ್ತೇ' ಎಂದು ಹೇಳಿದ್ದರಿಂದ ಈ ಕೋಪವು ಸ್ವರೂಪಭೂತವಲ್ಲ ತಾತ್ಕಾಲಿಕವಾದುದು ಎಂದು ಸೂಚಿತವಾಗುವದು. ಜಗತ್ತಿನ ಮಂಗಲವೆಂದರೆ ಶ್ರೇಯಸ್ಸು ಅಥವಾ ಶುಭಕ್ಕಾಗಿ ಅವತಾರವೆಂದರ್ಥ. ||೫೦||

**ಗಂಧರ್ವಾ ಊಚುಃ**

**ವಯಂ ವಿಭೋ ತೇ ನಟನಾಟ್ಯಗಾಯಕಾ**
**ಯೇನಾತ್ಮಸಾದ್ ವೀರ್ಯಬಲೌಜಸಾ ಕೃತಾಃ ।**
**ಸ ಏಷ ನೀತೋ ಭವತಾ ದಶಾಮಿಮಾಂ**
**ಕಿಮುತ್ಪಥಸ್ಥಃ ಕುಶಲಾಯ ಕಲ್ಪತೇ ||೫೦||**

**ಹೇ ವಿಭೋ** ಸ್ವಾಮಿಯೇ **ವಯಂ** ಗಂಧರ್ವರಾದ ನಾವು **ತೇ** ನಿನ್ನ **ನಟ** ಕಥೆಯಿಂದ ಕೂಡಿದ ಮಾತುಗಳನ್ನಾಡಿ ತೋರಿಸುವವರು **ನಾಟ್ಯ** ನಿನ್ನ ಕಥೆಯಲ್ಲಿನ ಶೃಂಗಾರ ಮೊದಲಾದ ಭಾವಗಳನ್ನು ಅಭಿನಯದಿಂದ ವ್ಯಕ್ತಮಾಡುವವರು **ಗಾಯಕಾಃ** ವೇದಾದಿಗಳಲ್ಲಿ ಬಂದಿರುವ ನಿನ್ನ ಕಥೆಯನ್ನು ಗಾನ ಮಾಡುವವರು ಇಂತಹ ನಾವು **ಯೇನ** ಯಾವ ದೈತ್ಯನಿಂದ **ವೀರ್ಯಬಲೌಜಸಾ** ಪರಾಕ್ರಮ, ದೇಹಬಲ, ಮತ್ತು ಅವಷ್ಟಂಭನ ಶಕ್ತಿಗಳಿಂದ **ಆತ್ಮಸಾತ್** ಅವನ ಅಧೀನರಾಗಿ ಅವನ ಕಥೆಯನ್ನು ನಟನ ನಾಟ್ಯಗಾನ ಮಾಡುವವರಾಗಿ **ಕೃತಾಃ** ಮಾಡಲ್ಪಟ್ಟೆವೋ **ಸಃ ಏಷಃ** ಆ ಈ ರಾಕ್ಷಸನು **ಇಮಾಂ ದಶಾಂ** ಮರಣಾವಸ್ಥೆಯನ್ನು **ಭವತಾ** ನಿನ್ನಿಂದ **ನೀತಃ** ಹೊಂದಿಸಲ್ಪಟ್ಟನು ಸಾಮಾನ್ಯ ಅರ್ಥಾಂತರ ಹೇಳಿ ಸಮರ್ಥಿಸುತ್ತಾರೆ **ಉತ್ಪಥಸ್ಥಃ** ದಾರಿಬಿಟ್ಟು ಹೋಗುವ ಯಾವನು ತಾನೇ **ಕುಶಲಾಯ ಕಲ್ಪತೇ ಕಿಂ** ಕ್ಷೇಮವನ್ನು ಹೊಂದಲು ಸಮರ್ಥನಾಗುವನೇನು? ಯಾರು ಆಗುವದಿಲ್ಲವೆಂದರ್ಥ.

ಈ ಶ್ಲೋಕದಲ್ಲಿ ನಟ-ನಾಟ್ಯಪದಗಳಿಗೆ ಅರ್ಥವಾಗದಿರುವದರಿಂದ ಪ್ರಮಾಣದಿಂದ ಅರ್ಥಭೇದವನ್ನು ಹೇಳುವರು-

**... ತಾತ್ಪರ್ಯ ...**

**ನಟನಂ ತು ಕಥಾಬಂಧೋ ನಾಟ್ಯಕಂ ಭಾವದರ್ಶನಮ್ || ಇತಿ ಗಾಂಧರ್ವೇ ||**

ಕಥಾಪ್ರಬಂಧವನ್ನು ಬರೆಯುವವರು ನಟರೆಂದೂ, ಅಭಿನಯಮಾಡಿ ತೋರಿಸುವವರು ನಾಟ್ಯರೆಂದು ಬೇರೆಯವರು ಮಾಡಿದ ಗದ್ಯ-ಪದ್ಯಗಳನ್ನು ಗಾಯನ ಮಾಡುವವರು ಗಾಯಕರೆಂದು ಕರಿಸಿಕೊಳ್ಳುವರು ಎಂದು ಗಂಧರ್ವಶಾಸ್ತ್ರದಲ್ಲಿ ಹೇಳಿದೆ.

**ಚಾರಣಾ ಊಚುಃ**

**ಹರೇ ತವಾಂಘ್ರಿಪಂಕಜಂ ಭವಾಪವರ್ಗಮಾಶ್ರಿತಾಃ ।**
**ಯ ಏಷ ಸಾಧುಹೃಚ್ಛ್ರಯಸ್ತ್ವಯಾऽಸುರಃ ಸಮಾಪಿತಃ ॥೫೨॥**

**ಹೇ ಹರೇ** ಶ್ರೀಹರಿಯೇ **ಭವಾಪವರ್ಗಂ** ಸಂಸಾರತ್ಯಾಗಕ್ಕೆ ಕಾರಣವಾದ **ತವ** ನಿನ್ನ **ಪಾದಪಂಕಜಂ** ಪಾದಕಮಲಗಳನ್ನು **ವಯಂ** ನಾವು **ಸಾಧು** ಚೆನ್ನಾಗಿ **ಆಶ್ರಿತಾಃ ಇತಿ** ಆಶ್ರಯಿಸಿರುವದರಿಂದ **ಹೃಚ್ಛ್ರಯಃ** ನಮ್ಮ ಹೃದಯವನ್ನು ಆಶ್ರಯಿಸಿದ **ಏಷ ಅಸುರಃ** ಈ ದೈತ್ಯನು **ತ್ವಯಾ** ನಿನ್ನಿಂದ **ಸಮಾಪಿತಃ** ನಾಶಮಾಡಲ್ಪಟ್ಟನು ಅಥವಾ ಅಂಘ್ರಿಪಂಕಜಂ, ಭವ, ಆಪವರ್ಗಂ ಎಂದು ಪದವಿಭಾಗ ಆ ಸಮ್ಯಕ್ ಚೆನ್ನಾಗಿ ಅಪವರ್ಗಃ ಮೋಕ್ಷಃ ಯಸ್ಮಾತ್ ತತ್ ಆಪವರ್ಗಂ ಮೋಕ್ಷಪ್ರದವಾದ **ಅಂಘ್ರಿಪಂಕಜಂ** ಪಾದಕಮಲವನ್ನು **ಆಶ್ರಿತಾಃ** ಆಶ್ರಯಿಸಿರುವೆವು **ಅಸುರಃ ಸಮಾಪಿತಃ ಇತಿ** ಅಸುರ ನಾಶಮಾಡಲ್ಪಟ್ಟದ್ದರಿಂದ **ತ್ವಂ** ನೀನು **ಹೃಚ್ಛ್ರಯಃ** ನಮ್ಮ ಹೃದಯಾಶ್ರಿತನು **ಭವ** ಆಗು ಅಥವಾ **ಸಾಧುಹೃಚ್ಛ್ರಯಃ** ಸಜ್ಜನರ ಹೃದಯಾಶ್ರಿತನು ಎಂದಾದರೂ ಅರ್ಥ. ಅಥವಾ ಸಾಧೂನ್ ಹರಂತಿ ಸಂಹರಂತೀತಿ ಸಾಧುಹೃತಃ ದೈತ್ಯಾಃ ತೇಷಾಂ ಆಶ್ರಯಃ ಸಜ್ಜನರನ್ನು ಸಂಹರಿಸುವ ದೈತ್ಯರಿಗೆ ಆಶ್ರಯನಾದ ಹಿರಣ್ಯಕಶಿಪುವು ನಾಶಮಾಡಲ್ಪಟ್ಟನು ಎಂದರ್ಥ. ॥೫೨॥

**ಯಕ್ಷಾಃ ಊಚುಃ**

**ವಯಮನುಚರಮುಖ್ಯಾಃ ಕರ್ಮಭಿಸ್ತೇ ಮನೋಜ್ಞೈಃ**
**ತ ಇಹ ದಿತಿಸುತೇನ ಪ್ರಾಪಿತಾ ವಾಹಕತ್ವಮ್ ।**
**ಅನುಜನಪರಿತಾಪಂ ತತ್ಕೃತಂ ಜಾನತಾ ತೇ**
**ನರಹರ ಉಪನೀತಃ ಪಂಚತಾಂ ಪಂಚವಿಂಶ ॥೫೩॥**

**ಹೇ ಪಂಚವಿಂಶ** ಇಪ್ಪತ್ತೈದನೇ ತತ್ತ್ವವಾದ(ಪಂಚಭೂತಗಳು ಪಂಚಮಾತ್ರಾಗಳು, ದಶೇಂದ್ರಿಯಗಳು, ಮನಸ್ಸು, ಅಹಂಕಾರ, ಬುದ್ಧಿ, ಮಹತ್ತತ್ವ, ಅವ್ಯಕ್ತತತ್ವ, ಇವು ಇಪ್ಪತ್ನಾಲ್ಕು ತತ್ವಗಳು ಶ್ರೀಹರಿ ೨೫ನೇ ತತ್ತ್ವ ಅಥವಾ ಜೀವ ೨೫ ನೇ ತತ್ತ್ವ ಇವುಗಳಲ್ಲಿರುವದರಿಂದ ೨೫ ಎನಿಸುವ) **ನರಹರೇ** ನರಸಿಂಹನೇ **ವಯಂ** ನಾವು **ತವ ಮನೋಜ್ಞೈಃ** ನಿನಗೆ ಮನೋಹರವಾದ **ಕರ್ಮಭಿಃ** ಭಾರವಾದ ಪಲ್ಲಕ್ಕಿ ಹೊರುವದೇ ಮೊದಲಾದ ಕೆಲಸಗಳಿಂದ **ತೇ** ನಿನ್ನ **ಅನುಚರಮುಖ್ಯಾಃ** ಶ್ರೇಷ್ಠ ಸೇವಕರು (ಅನುಚರಪದದಿಂದ ತಮಗಿಂತ ಕೆಳಗಿನವರನ್ನು ತೆಗೆದುಕೊಂಡು ಅವರಿಗಿಂತ ಮುಖ್ಯರೆಂದರ್ಥ)ಅಥವಾ ಚರೇಷು ಮುಖ್ಯಾಃ ಚರಮುಖ್ಯಾಃ ತೇಭ್ಯೋ ಅನುಹೀನಾ ಇತ್ಯಚರಮುಖ್ಯಾಃ ಸೇವಕರಲ್ಲಿ ಕಡಿಮೆಯವರೆಂದರ್ಥ.

ಅಥವಾ **ಅನುಚರಾಃ** ಬ್ರಹ್ಮಾದಿಗಳೇ ಮುಖ್ಯಾಃ ಯೇಷಾಂ ತೇ ಮುಖ್ಯರಾಗಿವುಳ್ಳ ಎಂದಾದರೂ ಅರ್ಥ. ('ಅನುಹೀನೇ ಸಹಾರ್ಥೇ ಚ ಪಶ್ಚಾತ್ ಸಾದೃಶ್ಯಯೋರನು' ಎಂದು ವಿಶ್ವವಿದೆ.) **ತೇ ವಯಂ** ಅಂತಹ ನಾವು **ಇಹ** ಇಲ್ಲಿ **ದಿತಿಸುತೇನ** ಹಿರಣ್ಯಕಶಿಪುವಿನಿಂದ **ವಾಹಕತ್ವಂ ಪ್ರಾಪಿತಾಃ** ಬಿಟ್ಟಿಯಾಗಿ ತನ್ನ ಪಲ್ಲಕ್ಕಿ ಹೊರುವವನನ್ನಾಗಿ ಮಾಡಲ್ಪಟ್ಟೆವು **ತತ್ಕೃತಂ** ಅವನಿಂದ ಮಾಡಲ್ಪಟ್ಟ **ಅನುಜನಪರಿತಾಪಂ** ಈ ವಿಧವಾದ ದಾಸರ ಸಂತಾಪವನ್ನು **ಜಾನತಾ** ತಿಳಿದ **ತೇ** ನಿನ್ನಿಂದ **ಪಂಚತಾಂ ಉಪನೀತಃ** ಮರಣ ಹೊಂದಿಸಲ್ಪಟ್ಟನು.

**ಕಿಂಪುರುಷಾಃ ಊಚುಃ**

**ವಯಂ ಕಿಂಪುರುಷಾಸ್ತ್ವಂ ತು ಮಹಾಪುರುಷ ಈಶ್ವರಃ ।**
**ಅಯಂ ಕಾ(ಕು)ಪುರುಷೋ ನಷ್ಟೋ ಧಿಕ್ಕೃತಃ ಸಾಧುಭಿರ್ಯತಃ॥೫೪॥**

**ವಯಂ** ನಾವು **ಕಿಂಪುರುಷಾಃ** ಪುರುಷಾಭಾಸರು ಇವರಲ್ಲಿ ಕೆಲವರಿಗೆ ಕುದುರೆಮುಖ ಮನುಷ್ಯಶರೀರ, ಹಲವರಿಗೆ ಮನುಷ್ಯಮುಖ ಕುದುರೆ ಶರೀರ, ಹೀಗೆ ವಿಕಾರಾಕಾರ ಇರುವದರಿಂದ ಈ ಹೆಸರು **ತ್ವಂ ತು** ನೀನಾದರೂ ಸರ್ವೋತ್ತಮನಿಯಾಮಕನು ಲಕ್ಷ್ಮೀಪತಿಯಾದ **ಮಹಾಪುರುಷಃ** ಪುರುಷೋತ್ತಮನು **ಯತಃ** ಯಾವ ಕಾರಣ **ಸಾಧುಭಿಃ** ಸಜ್ಜನರಿಂದ **ಧಿಕ್ಕೃತಃ** ಧಿಕ್ಕರಿಸಲ್ಪಟ್ಟನೋ **ತತಃ** ಆದ್ದರಿಂದ **ಕಾಪುರುಷಃ (ಕುಪುರುಷಃ)** ಕುತ್ಸಿತ (ದುಷ್ಟ) ಪುರುಷನಾದ **ಅಯಂ** ಈ ದೈತ್ಯನು **ನಷ್ಟಃ** ಸಂಹೃತನಾದನು.

ವಿಶೇಷ ಃ- 'ವಿಭಾಷಾ ಪುರುಷೇ' ಎಂದು ಕಾದೇಶ ವೈಕಲ್ಪಿಕವಾದ್ದರಿಂದ ಕುಪುರಷ ಎಂಬ ಪಾಠವೂ ಸಾಧುವೇ.) ॥೫೪॥

**ವೇತಾಲಾ ಊಚುಃ**

**ಸಭಾಸು ಸತ್ರೇಷು ತವಾಮಲಂ ಯಶೋ**
**ಗೀತ್ವಾ ಸಪರ್ಯಾಂ ಮಹತೀಂ ಲಭಾಮಹೇ ।**
**ಯಸ್ತಾನ್ ವ್ಯನೈಷೀದ್ ಭೃಶಮೇಷ ದುರ್ಜನೋ**
**ದಿಷ್ಟ್ಯಾ (ದೃಷ್ಟಾ) ಹತಸ್ತೇ ಭಗವನ್ ಯಥಾऽऽಮಯಃ ॥೫೫॥**

**ಹೇ ಭಗವನ್** ಶ್ರೀಹರಿಯೇ **ವಯಂ** ನಾವು **ತವ** ನಿನ್ನ **ಅಮಲಂ** ನಿರ್ದೋಷವಾದ **ಯಶಃ** ಕೀರ್ತಿಯನ್ನು **ಸಭಾಸು** ರಾಜಸಭೆಗಳಲ್ಲಿಯೂ **ಸತ್ರೇಷು** ಬಹುಯಜಮಾನರುಳ್ಳ ಯಾಗಗಳಲ್ಲಿಯೂ **ಗೀತ್ವಾ** ಹಾಡಿ **ಮಹತೀಂ ಸಪರ್ಯಾಂ** ಹೆಚ್ಚಿನ ಪೂಜೆಯನ್ನು ಹೊಂದುತ್ತಿದ್ದೆವು(ಹೊಂದುತ್ತೇವೆ) **ಏಷು** ಈ ಸ್ಥಳಗಳಲ್ಲಿ **ತಾಂ**

ನಮಗೆ ದೊರೆಯುತ್ತಿದ್ದ ಮರ್ಯಾದೆಯನ್ನು **ಯಃ ದುರ್ಜನಃ** ಯಾವ ದುಷ್ಟನು **ಭೃಶಂ** ಸಂಪೂರ್ಣವಾಗಿ ಮತ್ತೆ ಮತ್ತೆ **ವ್ಯಸ್ನೈಷೀತ್** ತನ್ನದಾಗಿ ಮಾಡಿಕೊಂಡನೋ **ಸಃ** ಅವನು **ಯಥಾ ಆಮಯಃ** ರೋಗದಂತೆ ಪೀಡಾಕೊಡುವದನ್ನು **ತೇ** ನಿನ್ನಿಂದ **ಹತಃ** ಕೊಲ್ಲಲ್ಪಟ್ಟನು **ದಿಷ್ಟ್ಯಾ** ಮಂಗಲವು.

ವಿಶೇಷ :- 'ದೃಷ್ಟ್ಯಾ' ಎಂಬ ಪಾಠದಲ್ಲಿ ನಿನ್ನ ಅನುಗ್ರಹದಿಂದ ಎಂದರ್ಥ. 'ವ್ಯಸನೇಷು' ಎಂಬ ಪಾಠದಲ್ಲಿ ನಮ್ಮನ್ನು ದುಃಖಕ್ಕೆ ಗುರಿಮಾಡಿದನೆಂದರ್ಥ ।।೫೫।।

**ಕಿನ್ನರಾ ಊಚುಃ**

**ವಯಮೀಶ ಕಿನ್ನರಗಣಾಸ್ತವಾನುಗಾ**
**ದಿತಿಜೇನ ವಿಷ್ಟಿಮಮುನಾಽನುಕಾರಿತಾಃ ।**
**ಭವತಾ ಹರೇ ಸ ವೃಜಿನೋಽಪಸಾದಿತೋ**
**ನರಸಿಂಹ ನಾಥ ವಿಭವಾಯ ನೋ ಭವ** ।।೫೬।।

**ಹೇ ಈಶ** ಹೇ ನಿಯಾಮಕನೇ **ವಯಂ** ನಾವು **ತವಾನುಗಾಃ** ನಿನ್ನ ದಾಸರಾದ **ಕಿನ್ನರಗಣಾಃ** ಕಿನ್ನರ ಜಾತಿಯವರು (ಕಿಂಪುರುಷರಂತೆ ನಾವು) **ಅಮುನಾ ದಿತಿಜೇನ** ಈ ದೈತ್ಯನಿಂದ **ವಿಷ್ಟಿಂ** ಸಂಬಳವಿಲ್ಲದ ಬಲಾತ್ಕಾರವಾಗಿ ಕೆಲಸವನ್ನು **ಅನುಕಾರಿತಾಃ** ಮಾಡಿಸಲ್ಪಟ್ಟವು **ಹೇ ಹರೇ** ಸ್ವಾಮಿಯೇ **ಸಃ ವೃಜಿನಃ** ಆ ಪಾಪಿಯು (ಸವೃಜಿನಃ ಎಂದು ಒಂದೇ ಪದ. ಪಾಪಿ ಎಂದರ್ಥ.) **ಭವತಾ** ನಿನ್ನಿಂದ **ಅಪಸಾದಿತಃ** ಕೊಲ್ಲಲ್ಪಟ್ಟನು **ನಾಥ** ಒಡೆಯನಾದ **ನರಸಿಂಹ** ನರಸಿಂಹನೇ **ನಃ** ನಮ್ಮ **ವಿಭವಾಯ** ಸಂಸಾರದಿಂದ ಮುಕ್ತಿಗಾಗಿ **ಭವ** ಅನುಗ್ರಹ ಮಾಡುವವನಾಗು **ವಿಭವಾಯ ನಃ** ವಿಭವಕ್ಕೆ ಆಶ್ರಯನು ಎಂದಾದರೂ ಅರ್ಥ **ಅಪ** ಪಾಲಕರಹಿತನೇ **ಹರೇ ಭವತಾ ಸಾದಿತಃ** ಕೊಲ್ಲಲ್ಪಟ್ಟನು **ವಿಭವಾಯ** ಮಂಗಲಕ್ಕೆ, ಸಂಸಾರ ವಿರುದ್ಧವಾದ ಮೋಕ್ಷಕ್ಕೆ **ಭವ** ಆಗು ಮಂಗಲಾಶ್ರಯ ಮುಕ್ತ್ಯಾಶ್ರಯನಾಗು ಹೀಗೂ ಅರ್ಥ. ।।೫೬।।

ತಮ್ಮ ಗುಂಪಿನಲ್ಲಿ ಸೇರಿದವನಿಗೆ ಶರೀರವಿಯೋಗವಾದುದು ಒಳ್ಳೆಯದಕ್ಕಾಗಿಯೇ ಎಂದು ಹೇಳುವರು-

**ವಿಷ್ಣುಪಾರ್ಷದಾ ಊಚುಃ**

**ಅದ್ಯೈತದ್ಧರಿನರರೂಪಮದ್ಭುತಂ ತೇ**
**ದೃಷ್ಟಂ ನಃ ಶರಣದ ಸರ್ವಲೋಕಶರ್ಮ ।**
**ಸೋಽಯಂ ತೇ ವಿಧಿಕರ ಈಶ ವಿಪ್ರಶಾಪಾತ್**
**ತಸ್ಯೇದಂ ನಿಧನಮನುಗ್ರಹಾಯ ವಿದ್ಮಃ** ।।೫೭।।

**ನಃ** ದ್ವಾರಪಾಲಕರಾದ ನಮಗೆ **ಶರಣದ** ರಕ್ಷಣೆಯನ್ನು ಕೊಡುವ ಶ್ರೀಹರಿಯೇ **ಸರ್ವಲೋಕಶರ್ಮ** ಎಲ್ಲ ಲೋಕದಲ್ಲಿಯ ಜನರಿಗೂ ಸುಖಕರವಾದ **ತೇ** ನಿನ್ನ **ಏತತ್** ಈ **ಹರಿನರರೂಪಂ** ಸಿಂಹ ಮತ್ತು ಮನುಷ್ಯರೂಪವು (ನರಸಿಂಹ) **ಅದ್ಯ** ಈಗ **ದೃಷ್ಟಂ** ನಮ್ಮಿಂದ ನೋಡಲ್ಪಟ್ಟಿತು **ಹೇ ಈಶ** ಸ್ವಾಮಿಯೇ **ಅಯಂ** ಹಿರಣ್ಯಕಶಿಪುವಿನಿಂದ ಕೂಡಿದ ಇವನು **ಯಃ** ಯಾವನು **ವಿಪ್ರಶಾಪಾತ್** ಸನಕಾದಿಗಳ ಶಾಪದಿಂದ ದೈತ್ಯಯೋನಿಯಲ್ಲಿ ಹುಟ್ಟಿದನೋ **ಸಃ** ಅವನು **ತೇ** ನಿನ್ನ **ವಿಧಿಕರಃ** ಆಜ್ಞೆಯಂತೆ ನಡೆಯುವ ನಮ್ಮಂತೆಯೇ ಭೃತ್ಯನು ದ್ವಾರಪಾಲಕನು **ತಸ್ಯ** ದೈತ್ಯಸಹಿತನಾಗಿ ಜನಿಸಿದ್ದ ಈ ನಿನ್ನ ಭೃತ್ಯನಾದ ಜಯನಿಗೆ **ಇದಂ** ಈ ನೀನು ಮಾಡಿದ **ನಿಧನಂ** ಶರೀರ ವಿಯೋಗರೂಪ ಮರಣವು **ಅನುಗ್ರಹಾಯ** ಅಸುರ ಸಹವಾಸವನ್ನು ತೊರೆದು ನಿನ್ನ ಬಳಿಗೆ ಬಂದು ಸೇವೆಸಲ್ಲಿಸುವವರ ಅನುಗ್ರಹಕ್ಕಾಗಿಯೇ ಎಂದು **ವಿದ್ಮಃ** ತಿಳಿಯುವೆವು.

**॥ ಇತಿ ಸಪ್ತಮಸ್ಕಂಧೇ ಅಷ್ಟಮೋಽಧ್ಯಾಯಃ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★



# ಅಥ ನವಮೋऽಧ್ಯಾಯಃ

**ಸಾರಾಂಶ**

ಬ್ರಹ್ಮಾದಿದೇವತೆಗಳೆಲ್ಲ ದೂರವಿದ್ದು ನರಸಿಂಹದೇವರ ಸ್ತೋತ್ರಮಾಡಿದರೂ ಹತ್ತಿರ ಬರುವ ಸಾಹಸವನ್ನು ಯಾರೂ ಮಾಡಲಿಲ್ಲ. ಕೊನೆಗೆ ಬ್ರಹ್ಮದೇವರು ಪ್ರಹ್ಲಾದನನ್ನು ಕರೆದು ಹೇಳಿದರು. ಮಗು ಪ್ರಹ್ಲಾದ ನಿನ್ನ ತಂದೆಯ ಮೇಲೆ ಕುಪಿತನಾದ ನರಸಿಂಹನನ್ನು ಸಮಾಧಾನ ಪಡಿಸಲು ನೀನೇ ಸರಿಯಾದ ವ್ಯಕ್ತಿ. ನೀನೇ ಅವನ ಬಳಿ ಹೋಗಿ ಅವನನ್ನು ಶಾಂತಗೊಳಿಸು. ಆಗ ಪ್ರಹ್ಲಾದ ಬ್ರಹ್ಮದೇವರ ಆಜ್ಞೆಯಂತೆ ನರಸಿಂಹದೇವರ ಬಳಿಗೆ ಬಂದು ಮೊದಲು ಸಾಷ್ಟಾಂಗ ನಮಸ್ಕಾರ ಮಾಡಿ ಭಕ್ತಿಯಿಂದ ನರಸಿಂಹದೇವರನ್ನು ಸ್ತುತಿಸಿದ. ಬ್ರಹ್ಮಾದಿದೇವತೆಗಳೆಲ್ಲರೂ ನಿನ್ನನ್ನು ಸ್ತುತಿಸಿದರೂ ನಿನಗೆ ಸಮಾಧಾನವಾಗಲಿಲ್ಲ ಅಂದಮೇಲೆ ಅಸುರಜಾತಿಯಲ್ಲಿ ಹುಟ್ಟಿದ ನನ್ನ ಸ್ತುತಿಯನ್ನು ನೀನು ಹೇಗೆ ಮೆಚ್ಚುವೆ ? ಧನ, ಕುಲ, ವಿದ್ಯೆ, ತಪಸ್ಸು ಇವುಗಳಿಗಿಂತ ಭಕ್ತಿ ನಿನಗೆ ಹೆಚ್ಚುಪ್ರಿಯ. ಅನ್ನುವದಕ್ಕಾಗಿಯೇ ಗಜೇಂದ್ರ ಮೊದಲಾದವರಿಗೆ ನೀನು ಅನುಗ್ರಹಿಸಿದೆ. ಜ್ಞಾನಾದಿ ಹನ್ನೆರಡು ಗುಣಗಳಿದ್ದರೂ ಭಕ್ತಿ ಒಂದಿಲ್ಲದ ಬ್ರಾಹ್ಮಣನಿಗಿಂತ ಭಕ್ತಿಯುತನಾದ ಅಂತ್ಯಜನೇ ಶ್ರೇಷ್ಠ. ಭಕ್ತರು ಮಾಡುವ ಪೂಜೆಯನ್ನು ನಿನಗಾಗಿ ನೀನು ಸ್ವೀಕರಿಸುವುದಿಲ್ಲ ಭಕ್ತರಿಗೆ ಅನುಗ್ರಹಮಾಡುವದಕ್ಕಾಗಿ ಸ್ವೀಕರಿಸುವೆ. ಕಾರಣ ಅದರಿಂದ ಭಕ್ತರಿಗೇ ಲಾಭ. ನಿನ್ನನ್ನು ಪೂರ್ಣವಾಗಿ ಸ್ತುತಿಸಲು ಯಾರಿಗೂ ಆಗದು ಆದರೂ ಈ ಬಂಧನದಿಂದ ಬಿಡುಗಡೆಗೊಳ್ಳಲು ಸುತ್ತಿಸುವದು ಅನಿವಾರ್ಯವಾಗಿದೆ. ಹೀಗೆ ಪ್ರಹ್ಲಾದರಾಜರು ಸ್ತೋತ್ರಮಾಡಲು ಉಪಕ್ರಮಿಸಿ ಭಗವಂತನ ಕಾರುಣ್ಯವನ್ನು ನಾನಾರೀತಿಯಿಂದ ಕೊಂಡಾಡಿದರು. ಪ್ರಹ್ಲಾದನ ಈ ಸ್ತುತಿಗೆ ಮೆಚ್ಚಿ ನರಸಿಂಹದೇವರು ಸಂತುಷ್ಟರಾಗಿ ಕೋಪವನ್ನು ದೂರಮಾಡಿ ಮಗು ಪ್ರಹ್ಲಾದ ನಿನ್ನ ಪ್ರಾರ್ಥನೆಗೆ ಸುಪ್ರೀತನಾಗಿದ್ದೇನೆ. ಬೇಕಾದ ವರವನ್ನು ಕೇಳು ಎಂದರು. ನಿಷ್ಕಾಮವಾಗಿ ಕರ್ಮಗಳನ್ನು ಮಾಡುವ ಪ್ರಹ್ಲಾದರಾಜರು ಭಗವಂತ ವರಕೊಡುವೆನೆಂದರೂ ವರವನ್ನು ಬೇಡಲಿಲ್ಲ.

**"ಉಗ್ರೋಽಪ್ಯನುಗ್ರ ಏವಾಯಂ ಸ್ವಭಕ್ತಾನಾಂ ನೃಕೇಸರೀ ।**
**ಕೇಸರೀವ ಸ್ವಪೋತಾನಾಮನ್ಯೇಷಾಮುಗ್ರವಿಗ್ರಹಃ"**

ಎಂದು ಬೇರೆಯವರಿಗೆ ಕ್ರೂರವಾಗಿ ಕಾಣುವ ದೇಹವುಳ್ಳ ಸಿಂಹವು ತನ್ನ ಮರಿಗಳಿಗೆ ಹೇಗೆ ಕ್ರೂರವಲ್ಲವೋ ಅದರಂತೆ ದೈತ್ಯರಿಗೆ ಉಗ್ರನಾದರೂ ತನ್ನ ಭಕ್ತರಿಗೆ ಶ್ರೀನರಸಿಂಹನು ಉಗ್ರನಲ್ಲ ಎಂದು ಆಗಮದಿಂದ ತಿಳಿಯಲ್ಪಡುವ ಭಕ್ತವತ್ಸಲತೆಯನ್ನು ನಿರೂಪಿಸಲು ತತ್ಕಾಲದಲ್ಲಿ ತೋರಿಸಿದ ಕೋಪಶಾಂತಿಯ ಉಪಾಯವನ್ನು ಲಕ್ಷ್ಮೀ-ಬ್ರಹ್ಮ ಮೊದಲಾದವರಿಗೆ ಶ್ರೀಹರಿಯ ಆಂತರ್ಯ ತಿಳಿದುದರಿಂದ ಪ್ರಹ್ಲಾದನನ್ನು ಮುಂದು ಮಾಡಿದ ಒಂದು ಸ್ತುತಿಯನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು.

ಹಿಂದೆ ಎಲ್ಲರೂ ಗಾಬರಿಗೊಂಡರೆಂದು ಹೇಳಿದರಷ್ಟೇ ಮುಂದೇನು ಕಥೆ ನಡೆಯಿತು ಎಂಬ ಧರ್ಮರಾಜನ ಸಂಶಯವನ್ನು ಶಮನ ಮಾಡಲು ನಾರದರು ಹೇಳುವರು ಎಂದು ಹೇಳುವರು-

**ನಾರದ ಉವಾಚ**

**ಏವಂ ಸುರಾದಯಃ ಸರ್ವೇ ಬ್ರಹ್ಮರುದ್ರಪುರಸ್ಸರಾಃ ।**
**ನೋಪೇತುಮಶಕನ್ ಮನ್ಯುಸಂಗ್ರಹಂ ಸುದುರಾಸದಮ್ ॥೧॥**

**ಬ್ರಹ್ಮರುದ್ರಪುರಸ್ಸರಾಃ** ಬ್ರಹ್ಮದೇವರು, ರುದ್ರದೇವರೇ ಮುಂದಾಳುಗಳಾಗಿವುಳ್ಳ **ಸರ್ವೇ** ಎಲ್ಲ **ಸುರಾದಯಃ** ದೇವತೆಗಳು ಋಷಿಗಳು ಮೊದಲಾದವರು (**ಏವಂ ಸ್ತುವಂತೋಽಪಿ** ಮೇಲೆ ಹೇಳಿದಂತೆ ಸ್ತೋತ್ರಮಾಡಿದರೂ) **ಮನ್ಯುಸಂಗ್ರಹಂ** ಅಜ್ಞರದೃಷ್ಟಿಯಿಂದ ಕೋಪಸಾರನಾದ ಪ್ರಾಜ್ಞರ ದೃಷ್ಟಿಯಿಂದ ಜ್ಞಾನಸಾರನಾದ ಆದ್ದರಿಂದಲೇ **ಸುದುರಾಸದಂ** ಸುಖವಾಗಿ ವಿಷಯೀಕರಿಸಲಶಕ್ಯನಾದ ನರಸಿಂಹನನ್ನು **ಉಪೇತುಂ** ಸಮೀಪಿಸಲು **ನ ಅಶಕನ್** ಸಮರ್ಥರಾಗಲಿಲ್ಲ.

ವಿಶೇಷ :- ಬ್ರಹ್ಮರುದ್ರಪುರಸ್ಸರಾಃ ಎಂಬುದಕ್ಕೆ ಯೋಗ್ಯತಯಾ 'ಸುರಾದಯಃ' ಎಂಬಲ್ಲಿಯ ಏಕದೇಶ ಸುರಪದಾರ್ಥದಿಂದ ಅನ್ವಯ) ಬ್ರಹ್ಮರುದ್ರಪುರಸ್ಸರಾಃ ಸುರಾಃ ಏವ ಆದಯಃ ಯೇಷಾಂ ತೇ ತಥಾ ಎಂದು ವಿಗ್ರಹ ವಾಕ್ಯ ಮಾಡಿಕೊಳ್ಳಬೇಕು. ಹೀಗೆ ಎಲ್ಲಿಯೂ ಕಂಡಿಲ್ಲವೆಂದಿಲ್ಲ. 'ಯಥಾರ್ಥಾಃ ಯುಕ್ತಯಃ' ಎಂಬಲ್ಲಿ ಪ್ರಕೃತಿಪ್ರತ್ಯಯಮಧ್ಯದಲ್ಲಿ ಆದಿ ಪದದಿಂದ ಸಹಿತವಾಗಿ ಯುಕ್ತ್ಯಾದಯಃ ಎಂದು ಪದನಿಷ್ಪತ್ತಿ ಮಾಡಿದಂತೆ ಇಲ್ಲಿಯೂ ತಿಳಿಯಬೇಕು.

ಸುರಾದಯಃ ಎಂದು ಹೇಳಿದ್ದರಿಂದ ಭಕ್ತರಲ್ಲಿ ದೇವತೆಗಳು ಮುಖ್ಯರೆಂದು ಬ್ರಹ್ಮರುದ್ರಪುರಸ್ಸರಾಃ ಎಂಬುದರಿಂದ ದೇವತೆಗಳಲ್ಲಿಯೂ ರುದ್ರದೇವರು ಮುಖ್ಯರು ಅವರಿಗಿಂತ ಬ್ರಹ್ಮದೇವರು ಮುಖ್ಯರೆಂದೂ ತಿಳಿಸಿರುವರು. ಸುರಾದಯಃ ಎಂಬುದಕ್ಕೆ 'ಸುರಾ ಹರೇರ್ಗುಣಾ ಪ್ರೋಕ್ತಾಃ' ಎಂಬ ಏಕಾದಶ ತಾತ್ಪರ್ಯಾನುಸಾರ ಶ್ರೀಹರಿಯ ಗುಣಗಳೇ ಕಾರಣವಾಗಿವುಳ್ಳ ಎಂದೂ ಅರ್ಥ ಮಾಡಿರುವರು. ಇದರಿಂದ ಶ್ರೀಹರಿಯ ಇಚ್ಛೆಗೆ ಅನುಗುಣವಾಗಿ ಬ್ರಹ್ಮದೇವರು ಸಮೀಪಿಸಲಿಲ್ಲ. ಅವರನ್ನನುಸರಿಸಿ ಉಳಿದವರೂ ಹೋಗಲಿಲ್ಲವೆಂದೂ ಸೂಚಿತವಾಗುತ್ತದೆ. ತತ್ಕಾಲದಲ್ಲಿ ಸುರರಲ್ಲಿ ಆದ್ಯನಾಗಿದ್ದನೆಂದೂ ಸುರಾದಯಃ ಎಂಬುದಕ್ಕೆ ಅರ್ಥ ಮಾಡಿರುವರು. ಸುರೇಷು ನ ವಿದ್ಯತೇ ದಯಾ ಯಸ್ಯ ಸಃ ಸುರಾದಯಃ ಎಂದು. ಇದರಿಂದ ಈಗ ದೈತ್ಯಬಾಲಕನನ್ನು ಮುಂದೆ ಮಾಡಿಕೊಂಡು ತೋರಿಸಿದ ಕೋಪಶಾಂತ ಮಾಡುವೆನು ಬೇರೆ ರೀತಿಯಿಂದಲ್ಲ ಎಂದು ಶ್ರೀಹರಿಯ ಮಾನಸಭಾವಗರ್ಭವನ್ನರಿತ ವೇದಗರ್ಭಾದಿಗಳು ಹತ್ತಿರ ಹೋಗಲಿಲ್ಲ. 'ಕೋಪಸಂಗ್ರಹಂ'ಎಂದು ಹೇಳಿದ್ದರಿಂದ ಕೋಪವನ್ನು ಸ್ವೀಕರಿಸಿದವನೇ ಹೊರತು ಇತರರಂತೆ ಕೋಪಕ್ಕೆ ವಶನಾದವನಲ್ಲ. ಕೋಪವನ್ನು ಪ್ರಕಟಿಸಿದನೇ ಹೊರತು ಅವನಿಗೆ ಜ್ವಲನಾತ್ಮಕ ಕೋಪವಿಲ್ಲ. ಶತ್ರುವಿನ ಲೋಕಾಪಕಾರಕ್ಕೆ ತಕ್ಕಂತೆ ಲೋಕಭಯಂಕರ ಚೇಷ್ಟೆಗೆ ಕಾರಣವಾದ ವ್ಯಾಪಾರವಿಶೇಷವನ್ನು ಮಾಡಿದ್ದೇ ಕೋಪವೆಂದೂ, ಅದು ಶ್ರೀಹರಿಯ ಸ್ವರೂಪವೇ ಆದ್ದರಿಂದ ಜ್ಞಾನಾನಂದಾತ್ಮಕವೇ ಎಂದು ತಿಳಿಸಿರುವರು.(ಮನ್ಯುಂ ಸಂಗೃಣ್ಹಾತೀತಿ ಮನ್ಯುಸಂಗ್ರಹಃ ತಂ) ಶ್ರೀಹರಿಯು ಬ್ರಹ್ಮಾದಿಗಳಿಂದಲೂ ಅಜ್ಞೇಯನೆಂದು ತಿಳಿಸಲು ಸಮೀಪಿಸಲಿಲ್ಲ ಸಮರ್ಥರೆಂದು ಹೇಳಿದ್ದು 'ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ' 'ತೇಭ್ಯೋ ಹ ಪ್ರಾದುರ್ಬಭೂವ ತನ್ನ ವ್ಯಜಾನತ' ಮುಂತಾದ ಶ್ರುತಿಗಳು ಅವನು ಸಾಕಲ್ಯೇನ ಅಜ್ಞೇಯನೆಂದು ತಿಳಿಸುವವು. ಜ್ಞಾನರೂಪನೆಂದೂ ತಿಳಿಸುವವು. ಇದನ್ನೇ 'ಸುದುರಾಸದಂ' ಎಂಬ ಪದದಿಂದ ಹೇಳಿರುವರು. ॥೧॥

ಸಮೀಪಿಸಲು ಅಸಮರ್ಥರಾದ ದೇವತೆಗಳಿಂದ ಪ್ರಾರ್ಥಿತಳಾಗಿ ಲಕ್ಷ್ಮೀದೇವಿಯು ಬಂದಳೆಂದು ಹೇಳುವರು :-

**ಸಾಕ್ಷಾಚ್ಛ್ರೀಃ ಪ್ರೇಷಿತಾ ದೇವೈರ್ದೃಷ್ಟ್ವಾ ತನ್ಮಹದದ್ಭುತಮ್ ।**
**ಅದೃಷ್ಟಾಶ್ರುತಪೂರ್ವತ್ವಾತ್ ಸಾ ನೋಪೇಯಾಯ ಶಂಕಿತಾ ॥೨॥**

**ದೇವೈಃ** ಬ್ರಹ್ಮದೇವರನ್ನು ಬಿಟ್ಟು ಉಳಿದ ದೇವತೆಗಳಿಂದ **ಪ್ರೇಷಿತಾ** ಪ್ರಾರ್ಥನೆಯಿಂದ ಪ್ರೇರಿತಳಾದ **ಸಾಕ್ಷಾತ್ ಶ್ರೀಃ** ಮುಖ್ಯ ಮಹಾಲಕ್ಷ್ಮಿಯೇ

'ತಾರ್ಕ್ಷ್ಯೇಂದ್ರಧರ್ಮನಾಸತ್ಯಶ್ರಯಣಾತ್ ಶ್ರಿಯ ಈರಿತಾಃ' ಎಂದು ಶ್ರೀಶಬ್ದ ಬೇರೆಯವರಲ್ಲಿಯೂ ಇರುವದರಿಂದ ಅವರ ವ್ಯಾವೃತ್ತಿಗಾಗಿ 'ಸಾಕ್ಷಾತ್' ಎಂದು ಹೇಳಿದೆ. **ಮಹದದ್ಭುತಂ** ಅತ್ಯಂತ ಆಶ್ಚರ್ಯಕರವಾದ ಮಹನೀಯರಿಗೂ ಆಶ್ಚರ್ಯಕರವಾದ **ತತ್** ಆ ನರಸಿಂಹರೂಪವನ್ನು **ದೃಷ್ಟ್ವಾ** ನೋಡಿ **ಅದೃಷ್ಟಾಶ್ರುತಪೂರ್ವತ್ವಾತ್** ಇತರ ಸಾಧಾರಣ ಜನರಿಂದ ಹಿಂದೆ ಎಂದೂ ನೋಡದಿರುವದು, ಕೇಳದಿರುವದೂ ಆದ್ದರಿಂದ **ಶಂಕಿತಾ ಇವ** ಅಸುರ ಜನಮೋಹನಕ್ಕಾಗಿಯೂ ಶ್ರೀಹರಿಗೆ ಆ ಕಾಲದಲ್ಲಿ ಪ್ರಹ್ಲಾದನಲ್ಲಿರುವ ವಾತ್ಸಲ್ಯವನ್ನು ತಿಳಿಸುವದಕ್ಕಾಗಿಯೂ ತನಗೆ ಭಯವಿಲ್ಲದಿದ್ದರೂ ಭಯಪಟ್ಟವಳಂತೆ **ಸಾ** ಆ ಲಕ್ಷ್ಮೀದೇವಿಯು **ನೋಪೇಯಾಯ** ನರಸಿಂಹನನ್ನು ಸಮೀಪಿಸಲಿಲ್ಲ.

'ದ್ವಾವೇತಾ ನಿತ್ಯಯುಕ್ತೌ ನಿತ್ಯಮುಕ್ತಾ' ಎಂದಿರುವದರಿಂದ ಮೇಲಿನ ಶ್ಲೋಕದಲ್ಲಿ ಲಕ್ಷ್ಮೀದೇವಿಗೂ ಅದೃಷ್ಟಾಶ್ರುತಪೂರ್ವತ್ವ ಹೇಳಿದ್ದು ಹೇಗೆ? ರೂಪವನ್ನು ನೋಡಿ ಭೀತತೆ ಹೇಳಿದ್ದರಾದರೂ ಹೇಗೆ ? ಪ್ರಹ್ಲಾದನಿಗೆ ನಿರ್ಭಯದಿಂದ ಉಪಗಮನ ಹೇಳಿದ್ದು ಹೇಗೆ? ಅಲ್ಲದೆ ಚತುರ್ಮುಖ ಬ್ರಹ್ಮದೇವರು ಪ್ರತ್ಯೇಕವಾಗಿ ಕಾದಾಚಿತ್ ನಾರಸಿಂಹ ತ್ರೈವಿಕ್ರಮಾದಿವಿಕ್ರಾಂತಿ ಉಪಾಸನೆ ಮಾಡಲು ಯೋಗ್ಯರು ಅವರಿಗೆ ಹತ್ತಿರ ಹೋಗಲಾಗಲಿಲ್ಲವೆಂದು ಹೇಗೆ ಹೇಳುವರು. 'ಗುಣೈಸ್ತ್ರೈವಿಕ್ರಮಾದ್ಯಾಶ್ಚ ಸಂಹರ್ತವ್ಯಾ ನ ಸಂಶಯಃ ವಿರಿಂಚಸ್ಯೈವ ನಾನ್ಯೇಷಾಂ' ಮುಂತಾದ ಪ್ರಮಾಣಬಾಧಿತವಾದ್ದರಿಂದ ಪ್ರಮಾಣದಿಂದ ಅಭಿಮತವಾದ ಅರ್ಥವನ್ನು ಹೇಳುವರು.

**... ತಾತ್ಪರ್ಯ ...**

**ಅದೃಷ್ಟಾಶ್ರುತಪೂರ್ವತ್ವಾದನ್ಯೈಃ ಸಾಧಾರಣೈರ್ಜನೈಃ ।**
**ನೃಸಿಂಹಂ ಶಂಕಿತೇವ ಶ್ರೀರ್ಲೋಕಮೋಹಾಯ ನೋ ಯಯೌ ॥**

**ಪ್ರಹ್ಲಾದೇ ಚೈವ ವಾತ್ಸಲ್ಯದರ್ಶನಾಯ ಹರೇರಪಿ ।**
**ಜ್ಞಾತ್ವಾ ಮನಸ್ತಥಾ ಬ್ರಹ್ಮಾ ಪ್ರಹ್ಲಾದಂ ಪ್ರೇಷಯತ್ತದಾ ।**
**ಏಕತ್ರೈಕಸ್ಯ ವಾತ್ಸಲ್ಯಂ ವಿಶೇಷಾದ್ದರ್ಶಯೇದ್ಧರಿಃ ।**
**ಅವರಸ್ಯಾಪಿ ಮೋಹಾಯ ಕ್ರಮೇಣೈವಾಪಿ ವತ್ಸಲಃ ॥ ಇತಿ ಬ್ರಹ್ಮಾಂಡೇ ॥೨॥**

ರಮಾ ಬ್ರಹ್ಮಾದಿಗಳು ಇಂತಹ ರೂಪವನ್ನು ಮೊದಲು ಕಂಡಿದ್ದರೂ ಸಾಧಾರಣ ಜನರಿಂದ ನರಸಿಂಹನ ಅದ್ಭುತ ಆಕಾರವನ್ನು ಮೊದಲು ಕಂಡದ್ದೂ ಕೇಳಿದ್ದೂ ಅಲ್ಲದಿರುವದರಿಂದ ಲಕ್ಷ್ಮೀದೇವಿಯೂ ಸಹ ಶ್ರೀನರಸಿಂಹದೇವರ ಸಮೀಪಕ್ಕೆ ಹೋಗಲಿಕ್ಕೆ ಹೆದರುತ್ತಿದ್ದಾಳೆ ಎಂದು, ದುರ್ಜನರಿಗೆ ಮೋಹವನ್ನು ಹುಟ್ಟಿಸುವದಕ್ಕಾಗಿಯೂ, ಶ್ರೀಹರಿಗೂ ತನಗೂ(ಲಕ್ಷ್ಮೀಗೂ)ಪ್ರಹ್ಲಾದನಲ್ಲಿ

ಸುರಾದಯಃ ಎಂದು ಹೇಳಿದ್ದರಿಂದ ಭಕ್ತರಲ್ಲಿ ದೇವತೆಗಳು ಮುಖ್ಯರೆಂದು ಬ್ರಹ್ಮರುದ್ರಪುರಸ್ಸರಾಃ ಎಂಬುದರಿಂದ ದೇವತೆಗಳಲ್ಲಿಯೂ ರುದ್ರದೇವರು ಮುಖ್ಯರು ಅವರಿಗಿಂತ ಬ್ರಹ್ಮದೇವರು ಮುಖ್ಯರೆಂದೂ ತಿಳಿಸಿರುವರು. ಸುರಾದಯಃ ಎಂಬುದಕ್ಕೆ 'ಸುರಾ ಹರೇರ್ಗುಣಾ ಪ್ರೋಕ್ತಾಃ' ಎಂಬ ಏಕಾದಶ ತಾತ್ಪರ್ಯಾನುಸಾರ ಶ್ರೀಹರಿಯ ಗುಣಗಳೇ ಕಾರಣವಾಗಿವುಳ್ಳ ಎಂದೂ ಅರ್ಥ ಮಾಡಿರುವರು. ಇದರಿಂದ ಶ್ರೀಹರಿಯ ಇಚ್ಛೆಗೆ ಅನುಗುಣವಾಗಿ ಬ್ರಹ್ಮದೇವರು ಸಮೀಪಿಸಲಿಲ್ಲ. ಅವರನ್ನನುಸರಿಸಿ ಉಳಿದವರೂ ಹೋಗಲಿಲ್ಲವೆಂದೂ ಸೂಚಿತವಾಗುತ್ತದೆ. ತತ್ಕಾಲದಲ್ಲಿ ಸುರರಲ್ಲಿ ಆದ್ಯನಾಗಿದ್ದನೆಂದೂ ಸುರಾದಯಃ ಎಂಬುದಕ್ಕೆ ಅರ್ಥ ಮಾಡಿರುವರು. ಸುರೇಷು ನ ವಿದ್ಯತೇ ದಯಾ ಯಸ್ಯ ಸಃ ಸುರಾದಯಃ ಎಂದು. ಇದರಿಂದ ಈಗ ದೈತ್ಯಬಾಲಕನನ್ನು ಮುಂದೆ ಮಾಡಿಕೊಂಡು ತೋರಿಸಿದ ಕೋಪಶಾಂತ ಮಾಡುವೆನು ಬೇರೆ ರೀತಿಯಿಂದಲ್ಲ ಎಂದು ಶ್ರೀಹರಿಯ ಮಾನಸಭಾವಗರ್ಭವನ್ನರಿತ ವೇದಗರ್ಭಾದಿಗಳು ಹತ್ತಿರ ಹೋಗಲಿಲ್ಲ. 'ಕೋಪಸಂಗ್ರಹಂ'ಎಂದು ಹೇಳಿದ್ದರಿಂದ ಕೋಪವನ್ನು ಸ್ವೀಕರಿಸಿದವನೇ ಹೊರತು ಇತರರಂತೆ ಕೋಪಕ್ಕೆ ವಶನಾದವನಲ್ಲ. ಕೋಪವನ್ನು ಪ್ರಕಟಿಸಿದನೇ ಹೊರತು ಅವನಿಗೆ ಜ್ವಲನಾತ್ಮಕ ಕೋಪವಿಲ್ಲ. ಶತ್ರುವಿನ ಲೋಕಾಪಕಾರಕ್ಕೆ ತಕ್ಕಂತೆ ಲೋಕಭಯಂಕರ ಚೇಷ್ಟೇಗೆ ಕಾರಣವಾದ ವ್ಯಾಪಾರವಿಶೇಷವನ್ನು ಮಾಡಿದ್ದೇ ಕೋಪವೆಂದೂ, ಅದು ಶ್ರೀಹರಿಯ ಸ್ವರೂಪವೇ ಆದ್ದರಿಂದ ಜ್ಞಾನಾನಂದಾತ್ಮಕವೇ ಎಂದು ತಿಳಿಸಿರುವರು.(ಮನ್ಯುಂ ಸಂಗೃಹ್ಣಾತೀತಿ ಮನ್ಯುಸಂಗ್ರಹಃ ತಂ) ಶ್ರೀಹರಿಯು ಬ್ರಹ್ಮಾದಿಗಳಿಂದಲೂ ಅಜ್ಞೇಯನೆಂದು ತಿಳಿಸಲು ಸಮೀಪಿಸಲಿಲ್ಲ ಸಮರ್ಥರೆಂದು ಹೇಳಿದ್ದು 'ನ ತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿ' 'ತೇಭ್ಯೋ ಹ ಪ್ರಾದುರ್ಬಭೂವ ತನ್ನ ವ್ಯಜಾನತ' ಮುಂತಾದ ಶ್ರುತಿಗಳು ಅವನು ಸಾಕಲ್ಯೇನ ಅಜ್ಞೇಯನೆಂದು ತಿಳಿಸುವವು. ಜ್ಞಾನರೂಪನೆಂದೂ ತಿಳಿಸುವವು. ಇದನ್ನೇ 'ಸುದುರಾಸದಂ' ಎಂಬ ಪದದಿಂದ ಹೇಳಿರುವರು. ।।೧।।

ಸಮೀಪಿಸಲು ಅಸಮರ್ಥರಾದ ದೇವತೆಗಳಿಂದ ಪ್ರಾರ್ಥಿತಳಾಗಿ ಲಕ್ಷ್ಮೀದೇವಿಯು ಬಂದಳೆಂದು ಹೇಳುವರು ಃ-

**ಸಾಕ್ಷಾಚ್ಛ್ರೀಃ ಪ್ರೇಷಿತಾ ದೇವೈರ್ದೃಷ್ಟ್ವಾ ತನ್ಮಹದದ್ಭುತಮ್ ।**
**ಅದೃಷ್ಟಾಶ್ರುತಪೂರ್ವತ್ವಾತ್ ಸಾ ನೋಪೇಯಾಯ ಶಂಕಿತಾ ।।೨।।**

**ದೇವೈಃ** ಬ್ರಹ್ಮದೇವರನ್ನು ಬಿಟ್ಟು ಉಳಿದ ದೇವತೆಗಳಿಂದ **ಪ್ರೇಷಿತಾ** ಪ್ರಾರ್ಥನೆಯಿಂದ ಪ್ರೇರಿತಳಾದ **ಸಾಕ್ಷಾತ್ ಶ್ರೀಃ** ಮುಖ್ಯ ಮಹಾಲಕ್ಷ್ಮಿಯೇ

'ತಾರ್ಕ್ಷ್ಯೇಂದ್ರಧರ್ಮನಾಸತ್ಯಶ್ರಯಣಾತ್ ಶ್ರಿಯ ಈರೀತಾಃ' ಎಂದು ಶ್ರೀಶಬ್ದ ಬೇರೆಯವರಲ್ಲಿಯೂ ಇರುವದರಿಂದ ಅವರ ವ್ಯಾವೃತ್ತಿಗಾಗಿ 'ಸಾಕ್ಷಾತ್' ಎಂದು ಹೇಳಿದೆ. **ಮಹದದ್ಭುತಂ** ಅತ್ಯಂತ ಆಶ್ಚರ್ಯಕರವಾದ ಮಹನೀಯರಿಗೂ ಆಶ್ಚರ್ಯಕರವಾದ **ತತ್** ಆ ನರಸಿಂಹರೂಪವನ್ನು **ದೃಷ್ಟ್ವಾ** ನೋಡಿ **ಅದೃಷ್ಟಾಶ್ರುತಪೂರ್ವತ್ವಾತ್** ಇತರ ಸಾಧಾರಣ ಜನರಿಂದ ಹಿಂದೆ ಎಂದೂ ನೋಡದಿರುವದು, ಕೇಳದಿರುವದೂ ಆದ್ದರಿಂದ **ಶಂಕಿತಾ ಇವ** ಅಸುರ ಜನಮೋಹನಕ್ಕಾಗಿಯೂ ಶ್ರೀಹರಿಗೆ ಆ ಕಾಲದಲ್ಲಿ ಪ್ರಹ್ಲಾದನಲ್ಲಿರುವ ವಾತ್ಸಲ್ಯವನ್ನು ತಿಳಿಸುವದಕ್ಕಾಗಿಯೂ ತನಗೆ ಭಯವಿಲ್ಲದಿದ್ದರೂ ಭಯಪಟ್ಟವಳಂತೆ **ಸಾ** ಆ ಲಕ್ಷ್ಮೀದೇವಿಯು **ನೋಪೇಯಾಯ** ನರಸಿಂಹನನ್ನು ಸಮೀಪಿಸಲಿಲ್ಲ.

'ದ್ವಾವೇತಾ ನಿತ್ಯಯುಕ್ತೌ ನಿತ್ಯಮುಕ್ತಾ' ಎಂದಿರುವದರಿಂದ ಮೇಲಿನ ಶ್ಲೋಕದಲ್ಲಿ ಲಕ್ಷ್ಮೀದೇವಿಗೂ ಅದೃಷ್ಟಾಶ್ರುತಪೂರ್ವತ್ವ ಹೇಳಿದ್ದು ಹೇಗೆ? ರೂಪವನ್ನು ನೋಡಿ ಭೀತತೆ ಹೇಳಿದ್ದರಾದರೂ ಹೇಗೆ ? ಪ್ರಹ್ಲಾದನಿಗೆ ನಿರ್ಭಯದಿಂದ ಉಪಗಮನ ಹೇಳಿದ್ದು ಹೇಗೆ? ಅಲ್ಲದೆ ಚತುರ್ಮುಖ ಬ್ರಹ್ಮದೇವರು ಪ್ರತ್ಯೇಕವಾಗಿ ಕಾದಾಚಿತ್ ನಾರಸಿಂಹ ತ್ರೈವಿಕ್ರಮಾದಿವಿಕ್ರಾಂತಿ ಉಪಾಸನೆ ಮಾಡಲು ಯೋಗ್ಯರು ಅವರಿಗೆ ಹತ್ತಿರ ಹೋಗಲಾಗಲಿಲ್ಲವೆಂದು ಹೇಗೆ ಹೇಳುವರು. 'ಗುಣೈಸ್ತ್ರೈವಿಕ್ರಮಾದ್ಯಾಶ್ಚ ಸಂಹರ್ತವ್ಯಾ ನ ಸಂಶಯಃ ವಿರಿಂಚಸ್ಯೈವ ನಾನ್ಯೇಷಾಂ' ಮುಂತಾದ ಪ್ರಮಾಣಬಾಧಿತವಾದ್ದರಿಂದ ಪ್ರಮಾಣದಿಂದ ಅಭಿಮತವಾದ ಅರ್ಥವನ್ನು ಹೇಳುವರು.

**... ತಾತ್ಪರ್ಯ ...**

**ಅದೃಷ್ಟಾಶ್ರುತಪೂರ್ವತ್ವಾದನ್ಯೈಃ ಸಾಧಾರಣೈರ್ಜನೈಃ ।**
**ನೃಸಿಂಹಂ ಶಂಕಿತೇವ ಶ್ರೀರ್ಲೋಕಮೋಹಾಯ ನೋ ಯಯೌ ॥**

**ಪ್ರಹ್ಲಾದೇ ಚೈವ ವಾತ್ಸಲ್ಯದರ್ಶನಾಯ ಹರೇರಪಿ ।**
**ಜ್ಞಾತ್ವಾ ಮನಸ್ತಥಾ ಬ್ರಹ್ಮಾ ಪ್ರಹ್ಲಾದಂ ಪ್ರೇಷಯತ್ತದಾ ।**
**ಏಕತ್ವೈಕಸ್ಯ ವಾತ್ಸಲ್ಯಂ ವಿಶೇಷಾದ್ದರ್ಶಯೇದ್ಧರಿಃ ।**
**ಅವರಸ್ಯಾಪಿ ಮೋಹಾಯ ಕ್ರಮೇಣೈವಾಪಿ ವತ್ಸಲಃ ॥ ಇತಿ ಬ್ರಹ್ಮಾಂಡೇ ॥೨॥**

ರಮಾ ಬ್ರಹ್ಮಾದಿಗಳು ಇಂತಹ ರೂಪವನ್ನು ಮೊದಲು ಕಂಡಿದ್ದರೂ ಸಾಧಾರಣ ಜನರಿಂದ ನರಸಿಂಹನ ಅದ್ಭುತ ಆಕಾರವನ್ನು ಮೊದಲು ಕಂಡದ್ದೂ ಕೇಳಿದ್ದೂ ಅಲ್ಲದಿರುವದರಿಂದ ಲಕ್ಷ್ಮೀದೇವಿಯೂ ಸಹ ಶ್ರೀನರಸಿಂಹದೇವರ ಸಮೀಪಕ್ಕೆ ಹೋಗಲಿಕ್ಕೆ ಹೆದರುತ್ತಿದ್ದಾಳೆ ಎಂದು, ದುರ್ಜನರಿಗೆ ಮೋಹವನ್ನು ಹುಟ್ಟಿಸುವದಕ್ಕಾಗಿಯೂ, ಶ್ರೀಹರಿಗೂ ತನಗೂ(ಲಕ್ಷ್ಮೀಗೂ)ಪ್ರಹ್ಲಾದನಲ್ಲಿ

ಪ್ರೀತ್ಯತಿಶಯವಿದೆಯೆಂದು ತೋರಿಸಲಿಕ್ಕಾಗಿ, ಸಂಶಯ ಬಂದವಳಂತೆ, ತೋರಿಸಲಿಕ್ಕಾಗಿ ಸಂಶಯ ಬಂದವಳಂತೆ ತೋರಿಸಿ ಆಗ ನರಸಿಂಹನ ಸಮೀಪಕ್ಕೆ ಹೋಗಲಿಲ್ಲ. ಆಗ ಬ್ರಹ್ಮದೇವರು ಲಕ್ಷ್ಮೀನಾರಾಯಣರ ಅಭಿಪ್ರಾಯವನ್ನರಿತು ಪ್ರಹ್ಲಾದನನ್ನು ಕಳುಹಿಸಿಕೊಟ್ಟನು. ಪರಮಾತ್ಮನು ತಾರತಮ್ಯ ಕ್ರಮವನ್ನನುಸರಿಸಿ ಅನುಗ್ರಹ ಮಾಡುವ ಸ್ವಭಾವದನಾದರೂ ದುರ್ಜನರಿಗೆ ರಮಾಬ್ರಹ್ಮಾದಿಗಳಿಗಿಂತ ಪ್ರಹ್ಲಾದನು ಮುಖ್ಯ ಭಕ್ತನೆಂದು ಮೋಹವನ್ನು ಹುಟ್ಟಿಸುವದಕ್ಕಾಗಿ ಬ್ರಹ್ಮಾದಿಗಳಿಗಿಂತ ನಿಕೃಷ್ಟನಾದ ಪ್ರಹ್ಲಾದನಲ್ಲಿ ಒಂದು ಕಾಲದಲ್ಲಿ ಹೆಚ್ಚಾಗಿ ಪ್ರೀತ್ಯತಿಶಯವನ್ನು ತೋರಿಸುವನು ಎಂದು ಬ್ರಹ್ಮಾಂಡ ಪುರಾಣದಲ್ಲಿದೆ ಎಂದು ತಾತ್ಪರ್ಯದ ಸಾರಾಂಶ. ಇದರಿಂದ ಪ್ರಮಾಣಾನುಸಾರ ಮೂಲದಲ್ಲಿ 'ಅನ್ಯೈಃ ಸಾಧಾರಣಜನ್ಯೈಃ' ಎಂದು ಅಧ್ಯಾಹಾರ ಮಾಡಬೇಕೆಂದು ಸೂಚಿತವಾಗುವದು. ।।೨।।

ನರಸಿಂಹದೇವರ ಮನಸ್ಸನ್ನರಿತ ಬ್ರಹ್ಮದೇವರು ಆ ಕಾಲೋಚಿತವಾದದ್ದನ್ನು ಆಲೋಚಿಸಿ ಹೇಳಿದರೆಂದು ಹೇಳುವರು-

**ಪ್ರಹ್ಲಾದಂ ಪ್ರೇಷಯಾಮಾಸ ಬ್ರಹ್ಮಾಽವಸ್ಥಿತಮಂತಿಕೇ ।**
**ತಾತ ಪ್ರಶಮಯೋಪೇಹಿ ಸ್ವಪಿತ್ರೇ ಕುಪಿತಂ ಪ್ರಭುಮ್ ।।೩।।**

**ತಾತ** ಮಗುವೇ **ಸ್ವಪಿತ್ರೇ** ನಿನ್ನ ತಂದೆಯ ಮೇಲೆ **ಕುಪಿತಂ** ಕೋಪಗೊಂಡಿರುವ **ಪ್ರಭುಂ** ಸಮರ್ಥನಾದ(ಇದರಿಂದ ದುರ್ಬಲನ ಸಿಟ್ಟು ಹಲ್ಲು ಬೀಳಲು ಮೂಲವೆಂದತಲ್ಲವೆಂದು ತಿಳಿಸುವರು 'ಬಡವನ ಸಿಟ್ಟು ದವಡಿಗೆ ಮೂಲ' ಎಂದು ಗಾದೆ ಮಾತಿನಂತೆ) ನರಸಿಂಹನನ್ನು **ಉಪೇಹಿ** ಸಮೀಪಿಸಿತು **ಪ್ರಶಮಯ** ಶಾಂತನಾಗುವಂತೆ ಪ್ರಾರ್ಥಿಸು**(ಇತ್ಯುದೀರ್ಯ)**ಹೀಗೆ ಹೇಳಿ **ಬ್ರಹ್ಮಾ** ಬ್ರಹ್ಮದೇವರು **ಅಂತಿಕೇ** ತಮ್ಮ ಸಮೀಪದಲ್ಲಿ **ಅವಸ್ಥಿತಂ** ನಿಂತಿದ್ದ **ಪ್ರಹ್ಲಾದಂ** ಪ್ರಹ್ಲಾದನನ್ನು **ಪ್ರೇಷಯಾಮಾಸ** ನರಸಿಂಹನ ಬಳಿಗೆ ಕಳಿಸಿದರು. ಯಾರ ಮೇಲೆ ಸಿಟ್ಟಾದರೆ ನನಗೇನು ಎಂದು ಹೇಳದಿರಲೆಂದು 'ಸ್ವಪಿತ್ರೇ' ಎಂದಿರುವರು. ।।೩।।

**ತಥೇತಿ ಶನಕೈ ರಾಜನ್ ಮಹಾಭಾಗವತೋಽರ್ಭಕಃ ।**
**ಉಪೇತ್ಯ ಭುವಿ ಕಾಯೇನ ನನಾಮ ವಿಧೃತಾಂಜಲಿಃ ।।೪।।**

**ಹೇ ರಾಜನ್** ಧರ್ಮರಾಜನೇ **ಮಹಾಭಾಗವತಃ** ಮಹಾಭವದ್ಭಕ್ತನಾದ **ಅರ್ಭಕಃ** ಬಾಲಕನು ಹಾಗೆ ಆಗಲಿ ನಾನು ಹೋಗುವೆನೆಂದು ಬ್ರಹ್ಮದೇವರಿಗೆ ಹೇಳಿ **ಶನಕೈಃ** ಮೆಲ್ಲನೆ **ಉಪೇತ್ಯ** ಸಮೀಪಿಸಿ **ವಿಧೃತಾಂಜಲಿಃ** ಕೈ ಜೋಡಿಸಿ **ಕಾಯೇನ ಭುವಿ ನನಾಮ** ನರಸಿಂಹದೇವರಿಗೆ ಸಾಷ್ಟಾಂಗ ನಮಸ್ಕರಿಸಿದನು. ।।೪।।

ಮೂರ್ಖ ಹುಡುಗ ವಿಚಾರ ಮಾಡದೆ ಬಂದಿರುವನು ಎಂದು ಅಚಾತುರ್ಯವನ್ನು ಕಂಡು ಹರಿಯು ಸುಮ್ಮನೇ ಇದ್ದನೋ? ಅಥವಾ ಸಿಟ್ಟು ಮಾಡಿದನೇ? ಅಥವಾ ಯಾವನಿಗಾಗಿ ಇಷ್ಟು ಆರ್ಭಟವೋ ಅವನು ಸತ್ತನು ಈ ಕೂಸು ಏನು ಮಾಡೀತೂ ಎಂದು ಕಣ್ಣು ಕೆಂಪು ಮಾಡದೇ ಕರುಣೆ ತೋರಿದನೆ? ಎಂದರೆ ಕೊನೆಯ ಪಕ್ಷವನ್ನೇ ಇಲ್ಲಿ ಹೇಳುವರು-

**ಸ್ವಪಾದಮೂಲೇ ಪತಿತಂ ತಮರ್ಭಕಮ್**
**ವಿಲೋಕ್ಯ ದೇವಃ ಕೃಪಯಾ ಪರಿಪ್ಲುತಃ ।**
**ಉತ್ಥಾಪ್ಯ ತಚ್ಛೀರ್ಷ್ಣ್ಯದಧಾತ್ ಕರಾಂಬುಜಮ್**
**ಕಾಲಾಹಿನಿರ್ದಷ್ಟಧಿಯಾಂ ಕೃತಾಭಯಮ್ ॥೫॥**

**ಸ್ವಪಾದಮೂಲೇ** ತನ್ನ ಕಾಲು ಕೆಳಗೆ **ಪತಿತಂ** ಬಿದ್ದ ನಮಸ್ಕರಿಸಿದ **ತಂ ಅರ್ಭಕಂ ವಿಲೋಕ್ಯ** ಆ ಬಾಲಕನನ್ನು ನೋಡಿ **ದೇವಃ** ನರಹರಿಯು **ಕೃಪಯಾ ಪರಿಪ್ಲುತಃ** ದಯೆಯಿಂದ ಆರ್ದ್ರನಾಗಿ **ತಂ ಉತ್ಥಾಪ್ಯ** ಅವನನ್ನು ಎಬ್ಬಿಸಿ **ತಚ್ಛೀರ್ಷ್ಣಿ** ಅವನ ತಲೆಯ ಮೇಲೆ **ಕಾಲಾಹಿನಿರ್ದಷ್ಟಧಿಯಾಂ ಕೃತಾಭಯಮ್** ಕಾಲ ಸರ್ಪದಿಂದ ಕಚ್ಚಿದವರ ಬುದ್ಧಿಯಂತಿರುವ ಬುದ್ಧಿಯುಳ್ಳವರಿಗೆ ಭಯವನ್ನಿತ್ತ **ಕರಾಂಬುಜಂ** ಕರಕಮಲವನ್ನು **ಅದಧಾತ್** ಇರಿಸಿದನು. ॥೫॥

ವಿಶೇಷ ಃ-ಅಥವಾ ಹಿಂದಿನ ಶ್ಲೋಕದಲ್ಲಿ 'ಭುವಿ ನನಾಮ' ಎಂದಿರುವದರಿಂದ ಸ್ವಪಾದೌ ಮೂಲಂ ಯಸ್ಯ ತತ್ ತಸ್ಮಿನ್ ಎಂದು ವಿಗ್ರಹ ಮಾಡಿ 'ಪದ್ಭ್ಯಾಂ ಭೂಮಿರಜಾಯತ' ಎಂದಿರುವದರಿಂದ ತನ್ನ ಪಾದಗಳೇ ಕಾರಣವಾಗಿವುಳ್ಳ ಭೂಮಿಯಲ್ಲಿ ದಂಡವತ್ ಪ್ರಣಾಮ ಮಾಡಿದ ಎಂದರ್ಥ. ಇದರಿಂದ ಭಕ್ತಿಪಾರವಶ್ಯ ತಿಳಿಯುವದು.

**ಸ ತತ್ಕರಸ್ಪರ್ಶಧುತಾಖಿಲಾಶುಭಃ**
**ಸಪದ್ಯಭಿವ್ಯಕ್ತಪರಾತ್ಮದರ್ಶನಃ ।**
**ತತ್ಪಾದಪದ್ಮಂ ಹೃದಿ ನಿರ್ವೃತೋ ದಧೌ**
**ಹೃಷ್ಯತ್ತನುಃ ಕ್ಲಿನ್ನಹೃದಶ್ರುಲೋಚನಃ ॥೬॥**

**ತತಃ** ನರಸಿಂಹದೇವರ **ಕರಸ್ಪರ್ಶೇನ** ಹಸ್ತಸ್ಪರ್ಶದಿಂದ **ಧುತ** ನಾಶವಾದ ಜ್ಞಾನಾಂಕುರಬೆಳೆಯಲು ಪ್ರತಿಬಂಧಕವಾದ **ಅಖಿಲ** ಇತರರಿಂದ ಅಪರಿಹಾರ್ಯ-ವಾದುದರಿಂದ ದೃಢವಾದ **ಅಶುಭಃ** ಅಮಂಗಲವುಳ್ಳ **ಸ ಚ** ಪ್ರಹ್ಲಾದನು **ಸಪದಿ** ತಕ್ಷಣದಲ್ಲಿ **ಅಭಿವ್ಯಕ್ತಪರಾತ್ಮದರ್ಶನಃ** ಅಭಿವ್ಯಕ್ತವಾದ ಭಗವಂತನ ಜ್ಞಾನವುಳ್ಳವನಾಗಿ

**ಹೃದಿ** ಹೃದಯದಲ್ಲಿ **ತತ್ಪಾದಪದ್ಮಂ** ಆ ಭಗವಂತನ ಪಾದಕಮಲವನ್ನು **ದಧೌ** ಧರಿಸಿದನು **ನಿರ್ವೃತಃ** ಸುಖವುಳ್ಳವನು **ಹೃಷ್ಯತ್ತನುಃ** ರೋಮಾಂಚಿತವಾದ ಶರೀರವುಳ್ಳವನು **ಕ್ಲಿನ್ನಹೃತ್** ಆರ್ದ್ರವಾದ ಹೃದಯವುಳ್ಳವನು **ಅಶ್ರುಲೋಚನಃ** ನೀರು ತುಂಬಿದ ಕಣ್ಣುಗಳುಳ್ಳವನು ಆದನು. ಅಥವಾ ಈ ರೀತಿಯಾಗಿ ಧರಿಸಿದನು ಎಂದಾದರೂ ಅನ್ವಯ ಮಾಡಬಹುದು. ಇವೆಲ್ಲ ಭಕ್ತರ ಲಕ್ಷಣವೆಂದು ಹಿಂದೆ ಹೇಳಿದ್ದನ್ನು ಸ್ಮರಿಸಬೇಕು. ||೬||

ವಿಶೇಷ ಃ- ಅಭಿವ್ಯಕ್ತಪರಾತ್ಮದರ್ಶನಃ ಪರಶ್ಚ ಪರಮಾತ್ಮಾ, ಆತ್ಮಾ ಚ ಜೀವಶ್ಚತಯೋಃ ದರ್ಶನಂ ವಿಲಕ್ಷಣತಯಾ ಜ್ಞಾನಂ ಯಸ್ಯ ಸಃ ಅಂದರೆ ಪರಮಾತ್ಮ ಜೀವಾತ್ಮ ವೈಲಕ್ಷಣ್ಯ ಜ್ಞಾನವುಳ್ಳ ಎಂದರ್ಥ. ಅಥವಾ ಪರಃ ಇತಿ ಆತ್ಮಾ ಇತಿ ದರ್ಶನಂ ಯಸ್ಯ ಸಃ ಸರ್ವೋತ್ತಮನೆಂದು ಸ್ವಾಮಿ ಎಂದೂ ಜ್ಞಾನವುಳ್ಳ ಎಂದರ್ಥ. **ಪದಿ** ಭಗವಂತನ ಎರಡು ಪಾದವನ್ನು ನೋಡುತ್ತಿರಲು **ಸಃ ಅಭಿವ್ಯಕ್ತಪರಾತ್ಮದರ್ಶನಃ** ಜ್ಞಾನವುಳ್ಳವನಾದನು.

**ಅಸ್ತೌಷೀದ್ ಹರಿಮೇಕಾಗ್ರಮನಸಾ ಸುಸಮಾಹಿತಃ ।**
**ಪ್ರೇಮಗದ್ಗದಯಾ ವಾಚಾ ತನ್ನ್ಯಸ್ತಹೃದಯೇಕ್ಷಣಃ ||೭||**

**ಅಸುಸಮಾಹಿತಃ** ಸಮಾಧಾನಮಾಡಲ್ಪಟ್ಟ ಪ್ರಾಣಗಳುಳ್ಳವನಾಗಿ **ಏಕಾಗ್ರಮನಸಾ** ಭಗವಂತನೊಬ್ಬನೆ ಚಿಂತ್ಯನಾಗಿವುಳ್ಳ ಮನಸ್ಸಿನಿಂದ **ಸುಸಮಾಹಿತಃ** ಸು ವೈಷಯಿಕಸುಖವು ಸಮಂ ಅಹಿತೇನ ಯಸ್ಯ ಸಃ ಅಹಿತಸಮವೆಂದು ತಿಳಿದವನಾಗಿ(ಸ್ವಿತ್ಯಾನಂದಃ ಸಮುದ್ದಿಷ್ಟಃ'ಎಂಬಲ್ಲಿ ಸು ಶಬ್ದಕ್ಕೆ ಸುಖವೆಂದು ಅರ್ಥಮಾಡಿದೆ) **ತನ್ನ್ಯಸ್ತಹೃದಯೇಕ್ಷಣಃ** ಶ್ರೀಹರಿಯಲ್ಲಿ ಇರಿಸಿದ ಹೃದಯ ಮತ್ತು ಕಣ್ಣುಗಳುಳ್ಳವನಾಗಿ **ಪ್ರೇಮಗದ್ಗದಯಾ ವಾಚಾ** ಭಕ್ತಿವಿಶೇಷದಿಂದ ನಡಗುವ ಮಾತುಗಳಿಂದ **ಅಸ್ತೌಷೀತ್** ಸ್ತುತಿಸಿದನು. ||೭||

ಕೈಮುತ್ಯನ್ಯಾಯದಿಂದ ಭಗವಂತನನ್ನು ಸ್ತೋತ್ರಮಾಡಲು ತಾನು ಯೋಗ್ಯನಲ್ಲವೆಂದು ಸ್ತುತಿಸುವನು-

**ಪ್ರಹ್ಲಾದ ಉವಾಚ**

**ಬ್ರಹ್ಮಾದಯಃ ಸುರಗಣಾಃ ಮುನಯೋಽಥ ಸಿದ್ಧಾಃ**
**ಸತ್ತ್ವೈಕ ತಾನಮತಯೋ ವಚಸಾಂ ಪ್ರವಾಹೈಃ ।**
**ನಾಂತಂ ಪರಸ್ಯ ಪರತೋಽಪ್ಯಧುನಾಽಪಿ ಯಾಂತಿ**
**ಕಿಂ ತೋಷ್ಟುಮರ್ಹತಿ ಸ ಮೇ ಹರಿರುಗ್ರಜಾತೇಃ ||೮||**

**ಬ್ರಹ್ಮಾದಯಃ** ಬ್ರಹ್ಮದೇವರೇ ಮೊದಲಾಗಿವುಳ್ಳ **ಸುರಗಣಾಃ** ದೇವತೆಗಳ ಸಮೂಹಗಳು **ಮುನಯಃ** ವಿಶಿಷ್ಟವಾದ ಬುದ್ಧಿಯುಳ್ಳ **ಸಿದ್ಧಾಃ** ಭಗವಂತನ ಸ್ತೋತ್ರಮಾಡುವಲ್ಲಿಯೇ ಸಿದ್ಧರಾದುದರಿಂದ ಸಿದ್ಧರೆನಿಸಿದ (ಅಥವಾ **ಅಥಸಿದ್ಧಾಃ** ಎಂಬುದು ಒಂದೇಪದವಮಾಡಿ ಮಂಗಲದಲ್ಲಿ ಸಿದ್ಧರಾದ) **ಪರತಃ** ಅಕ್ಷರತತ್ತ್ವದಿಂದಲೂ **ಪರಸ್ಯ** ಉತ್ತಮನಾದ **ಯಸ್ಯ** ಯಾವನ **ಅಂತಂ** ಕೊನೆಯನ್ನು **ಸತ್ವೈಕತಾನಮತಯಃ** ಕೇವಲ ಸತ್ವಗುಣೋದ್ರೇಕದಿಂದ **ಏಕತಾನ** ವಿಸ್ತೃತವಾದ ಅಥವಾ ಬೇರೆಡೆಗೆ ಹೋಗದ **ಮತಯಃ** ಬುದ್ಧಿಯುಳ್ಳವರು **ವಚಸಾಂ ಪ್ರವಾಹೈಃ** ಮಾತುಗಳ ಪ್ರವಾಹದಿಂದ **ಸ್ತುವಂತಃ** ಸ್ತುತಿಸುವವರಾಗಿ **ನ ಯಾಂತಿ** ಹೊಂದಲಾರರೋ(ಸ್ತುತಿಯ ಫಲವಾದ ಅವನ ಸಂತೋಷವನ್ನು ತಮ್ಮ ಶಕ್ತಿಯಿಂದ ಹೊಂದಲಿಲ್ಲವೆಂದರ್ಥ) **ಸಃ** ಅಂಥವನು **ಉಗ್ರಜಾತೇಃ** ತಾಮಸವಾದ ಅಸುರಜಾತಿಯಲ್ಲಿ ಜನಿಸಿದ **ಮೇ** ನನ್ನ ಮೇಲೆ **ಕಿಂ ತೋಷ್ಟುಮರ್ಹತಿ** ಸಂತೋಷ ಹೊಂದಲು ಯೋಗ್ಯನಲ್ಲ. (ಸಂತುಷ್ಟನಾಗಲಾರನೆಂದರ್ಥ)

ವಿಶೇಷ :- **ಉಗ್ರಾತ್** ಉಗ್ರನಾದ ನನ್ನಿಂದ **ಜಾತಿಃ** ಜನನವುಳ್ಳ ಮತಿಯ ಉಪದೇಶದಿಂದ **ಮೇ** ನನ್ನ ಮೇಲೆ ಎಂದು ಅನ್ವಯ ಮಾಡಬಹುದು **ಕಿಂಸ್ತೋಷ್ಟು ಮರ್ಹತಿ** ಎಂಬ ಪಾಠವಿದ್ದಾಗ 'ಅಸ್ತೌಷಿದ್ಧರಿಮೇಕಾಗ್ರಮನಸಾ' ಎಂಬ ಹಿಂದಿನ ಶ್ಲೋಕದ ಅನುಕೂಲತೆ ಬರುವದೆಂದು ತಿಳಿಯಬೇಕು. ।।೮।।

ಜಾತಿ ಮುಂತಾದವುಗಳಾವವೂ ಸರ್ವೇಶ್ವರನನ್ನು ಪ್ರೀತಿಗೊಳಿಸಲು ಪ್ರಯೋಜಕಗಳಲ್ಲ. ಅದಕ್ಕೆ ಪ್ರಯೋಜಕವಾದುದು ಭಕ್ತಿ ಮಾತ್ರವೆಂದು ದೃಷ್ಟಾಂತ ಸಹಿತವಾಗಿ ಹೇಳುವನು.

**ಮನ್ಯೇ ಧನಾಭಿಜನರೂಪತಪಶ್ರುತೌಜ-**
**ಸ್ತೇಜಃ ಪ್ರಭಾವಬಲಪೌರುಷಬುದ್ಧಿಯೋಗಾಃ ।**
**ನಾರಾಧನಾಯ ಹಿ ಭವಂತಿ ಪರಸ್ಯ ಪುಂಸೋ**
**ಭಕ್ತ್ಯಾ ತುತೋಷ ಭಗವಾನ್ ನನು ಯೂಥಪಾಯ ।।೯।।**

**ಧನಂ** ಹಣವು **ಅಭಿಜನಃ** ಸತ್ಕುಲದಲ್ಲಿ ಜನಿಸುವದು **ರೂಪ** ಸೌಂದರ್ಯವು **ತಪಃ** ಕೃಚ್ಛ್ರಚಾಂದ್ರಾಯಣಾದಿಗಳನ್ನು ಮಾಡುವದು ಅಥವಾ ಆಲೋಚನವು **ಶ್ರುತಂ** ಶ್ರವಣವು **ಓಜಃ** ಅವಷ್ಟಂಭಶಕ್ತಿಯು **ತೇಜಃ** ಬಲವು **ಪ್ರಭಾವ** ಶಾಸ್ತ್ರಶಕ್ತಿ **ಬಲ** ಸದಾಚಾರ, ತೀರ್ಥಕ್ಷೇತ್ರಸಂಚರಣವು **ಪೌರುಷಂ** ಪುರುಷಪರಾಕ್ರಮವು **ಬುದ್ಧಿಃ** ಪ್ರಸ್ತುತವಾದ ಏಕಾಗ್ರಬುದ್ಧಿಯು **ಯೋಗಃ** ಉಪಾಯ ಇವುಗಳೆಲ್ಲವೂ **ಪುಂಸಃ ಪರಸ್ಯ** ಅಕ್ಷರಪುರುಷಳಾದ ಲಕ್ಷ್ಮಿಗಿಂತ ಉತ್ತಮನಾದ ಶ್ರೀಹರಿಯ ಅಥವಾ ಸರ್ವೋತ್ತಮನಾದ

ಶ್ರೀಹರಿಯ **ಆರಾಧನಾಯ** ಆರಾಧನೆಗಾಗಿ ಅಂದರೆ ಸಂತೋಷವೆಂಬ ಫಲಪರ್ಯವಸಾಯಿಯಾದ ಆರಾಧನೆಗೆ **ನ ಭವಂತಿ** ಕಾರಣವಾಗಲಾರವು ಎಂದು **ಅಹಂ** ನಾನು **ಮನ್ಯೇ** ತಿಳಿಯುವೆನು ಹಿ ಶಬ್ದದಿಂದ ''ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್'' ''ಭಕ್ತಿವಶಃ ಪುರುಷಃ'' ಎಂದು ಸ್ಮೃತಿಶ್ರುತಿಪ್ರಸಿದ್ಧಿಯನ್ನು ತಿಳಿಸುವರು. ಇದು ಪಾಮರರಿಂದಾರಂಭಿಸಿ ಅಮರರವರೆಗೂ ಇದು ಪ್ರತ್ಯಕ್ಷಸಿದ್ಧವೆಂದು ಹೇಳುವನು **ಭಗವಾನ್** ಸಮಗ್ರೈಶ್ವರ್ಯಪೂರ್ಣನಾದ ಶ್ರೀಹರಿಯು **ಯೂಥಪಾಯ** ಗಜೇಂದ್ರನಿಗೆ **ಭಕ್ತ್ಯಾ** ಅಚಲಭಕ್ತಿಯಿಂದ **ತುತೋಷ** ಸಂತುಷ್ಟನಾದವನು **ನನು** ನಿಶ್ಚಯ.

ವಿಶೇಷ :- ಉಗ್ರಜಾತಿಯವನಾದರೂ ನರಸಿಂಹದೇವರು ಈ ಪ್ರಹ್ಲಾದನು ಸ್ವಲ್ಪ ತನ್ನಲ್ಲಿ ಅಂಕುರಿಸಿದ ಭಕ್ತಿಯನ್ನು ನೋಡಿ ಜಾತಿಯನ್ನು ಲೆಕ್ಕಿಸದೆ ದಯಮಾಡಿಯೇ ಮಾಡುವನು ಎಂಬ ಅಭಿಪ್ರಾಯದಿಂದ ಗಜೇಂದ್ರ ದೃಷ್ಟಾಂತ ಕೊಟ್ಟಿರುವನು ತಿಳಿಸಿರುವನು ಎಂದು ತಿಳಿಯಬೇಕು.

'ತುತೋಷ' ಎಂದು ಇಲ್ಲಿ ಹೇಳಿದ ಸ್ವಾರಸ್ಯದಿಂದ ಹಿಂದಿನ ಶ್ಲೋಕದಲ್ಲಿ ತೊಷ್ಟುಂ ಸಂತೋಷಹೊಂದಲು ಎಂಬ ಅರ್ಥದ ಔಚಿತ್ಯವನ್ನು ಮನಸ್ಸಿನಲ್ಲಿ ತಂದುಕೊಳ್ಳಬೇಕು. ಅನೇಕ ಕೃಮಿಕೀಟಜಾತಿಗಳಿರುವಾಗ ಮದವುಳ್ಳ ಜಾತಿಯಾದುದರಿಂದ ಆನೆಯನ್ನು ಉದಾಹರಣ ಮಾಡಿದಂತೆ ನರಸಿಂಹದೇವರಿಗೆ ಸರ್ವಥಾ ವೈರವಿಲ್ಲವೆಂದು ತಿಳಿಸುವರು (ಆನೆಗೂ ಸಿಂಹಕ್ಕೂ ವೈರತಾನೇ ) **ತೇಜಃ** ಬ್ರಹ್ಮವರ್ಚಸ್ಸು **ಬಲ** ದೇಹಶಕ್ತಿ **ಪೌರುಷ** ಪರಾಕ್ರಮಬುದ್ಧಿ ಶೀಘ್ರಗ್ರಹಣ ಮಾಡುವ ಬುದ್ಧಿ **ಯೋಗ** ಧ್ಯಾನ ಹೀಗೂ ಅರ್ಥ ಮಾಡಿರುವರು. ||೯||

ಭಗವಂತನನ್ನು ಸ್ತೋತ್ರಮಾಡಲು ಭಗವದರ್ಪಣಬುದ್ಧಿ ಇಲ್ಲದ ಇತರ ಗುಣಗಳು ಮತ್ತು ಉತ್ತಮಜಾತಿಯು ಅನುಪಯುಕ್ತವು ನಿಂದಿತವಾದುದರಿಂದ ಭಗವದರ್ಪಣಬುದ್ಧಿಯುಳ್ಳವರನ್ನು ಸ್ತುತಿಸುವರು-

**ವಿಪ್ರಾದ್ ದ್ವಿಷಡ್ಗುಣಯುತಾದರವಿಂದನಾಭ-**
**ಪಾದಾರವಿಂದವಿಮುಖಾ(ತ್)ಚ್ಛ್ವಪಚಂ ವರಿಷ್ಠಮ್ ।**
**ಮನ್ಯೇ ತದರ್ಪಿತ ಮನೋ ವಚನಾತ್ಮಗೇಹ-**
**ಪ್ರಾಣಃ ಪುನಾತಿ (ಸ್ವಕುಲಂ)ಸಕಲಂ ನ ತು ಭೂರಿಮಾನಃ ||೧೦||**

**ಅರವಿಂದನಾಭಪಾದಾರವಿಂದವಿಮುಖಾತ್** ಪದ್ಮನಾಭನಾದ ಶ್ರೀವಿಷ್ಣುವಿನ ಪಾದಕಮಲಗಳಲ್ಲಿ ವಿಮುಖನಾಗಿ **ದ್ವಿಷಡ್ಗುಣಯುತಾತ್** ಜ್ಞಾನ ಪರಾಪರತತ್ತ್ವ

ವಿಷಯಕಜ್ಞಾನ, ಸತ್ಯ ಯಥಾರ್ಥಭಾಷಣವೆಂಬ, ದಮ ಇಂದ್ರಿಯ ನಿಗ್ರಹ, ಶಮ ಭಗವನ್ನಿಷ್ಟಬುದ್ಧಿ ಅಮಾತ್ಸರ್ಯ ಇವನೇಕೆ ನನ್ನ ವಶನಾಗಿಲ್ಲ ಎಂಬ ಮನಃಖೇದವಿಲ್ಲದಿರುವದು, ಹ್ರೀ ಮಾಡಬಾರದ್ದನ್ನು ಮಾಡಲು ನಾಚಿಕೆ, ತಿತಿಕ್ಷಾ ದ್ವಂದ್ವ ಸಹನೆ, ಅನಸೂಯ ಈರ್ಷಾ ಇಲ್ಲದಿರುವದು ದಾನ ಸತ್ಪಾತ್ರರಲ್ಲಿ ಧನ ಕೊಡುವದು ಯಜ್ಞ ಬ್ರಹ್ಮ ಯಜ್ಞಾದಿಗಳು ತಪಃ ಚಾಂದ್ರಾಯಣಾದಿಗಳು ಶ್ರುತ ಸಚ್ಛಾಸ್ತ್ರಶ್ರವಣ ಧೃತಿಃ ಎಂಬ ಪಾಠದಲ್ಲಿ ವಿಷಯಸಾನ್ನಿಧ್ಯವಿದ್ದರೂ ಅದನ್ನಪೇಕ್ಷಿಸದಿರುವದು. ಈ ಹನ್ನೆರಡು ಗುಣವುಳ್ಳ **ವಿಪ್ರಾತ್** ಬ್ರಾಹ್ಮಣಗಿಂತ ಪದ್ಮನಾಭ ಪಾದಾರವಿಂದಸುಮುಖನಾದ **ಶ್ವಪಚಂ** ಚಂಡಾಲನನ್ನು **ವರಿಷ್ಠಂ ಮನ್ಯೇ** ಶ್ರೇಷ್ಠನೆಂದು ತಿಳಿಯುವೆನು. **ತದರ್ಪಿತ** ಶ್ರೀಹರಿಗೆ ಸಮರ್ಪಿಸಿದ **ಮನೋವಚನಾತ್ಮ-ಗೇಹಪ್ರಾಣಃ** ಮನಸ್ಸು, ಮಾತು, ದೇಹ, ಮನೆ, ಪ್ರಾಣ, ಇಂದ್ರಿಯಗಳುಳ್ಳ ಭಕ್ತನು **ಸಕಲಂ ಪುನಾತಿ** ಮನಸ್ಸು ಮೊದಲಾದವುಗಳನ್ನು ವಿಷಯಸಂಬಂಧಕೊಳೆಯನ್ನು ಹೋಗಲಾಡಿಸಿ ಕನ್ನಡಿಯಂತೆ ಸ್ವಚ್ಛ ಮಾಡುವನು ಅಥವಾ **ಸಕಲಂ ಭುವನಂ ಪುನಾತಿ** ಎಲ್ಲ ಜಗತ್ತನ್ನು ಶುದ್ಧ ಮಾಡುವನು. **ಭೂರಿಮಾನಃ** ನಾನೇ ಕರ್ತೃ ಎಂಬ ಸ್ವಾತಂತ್ರ್ಯಾಭಿಮಾನವುಳ್ಳವನು **ನ ತು ಪುನಾತಿ** ತನ್ನನ್ನೇ ಪಾವನ ಮಾಡಿಕೊಳ್ಳಲಾರ ಅಂದ ಮೇಲೆ ಸಕಲ ಜಗತ್ತನ್ನು ಪಾವನ ಮಾಡಲಾರನೆಂದೇನು ಬೇರೆ ಹೇಳಬೇಕಿಲ್ಲ.

ವಿಶೇಷ ಃ- 'ಸ್ವಕುಲಂ ಪುನಾತಿ' ಎಂದೂ ಪಾಠವಿದೆ. ಈ ಹನ್ನೆರಡು ಗುಣಗಳುಳ್ಳವರು ಭಕ್ತರೇ ಆಗಿರುವರು. ಪ್ರಹ್ಲಾದರಾಜರು 'ಶ್ವಪಚಂ ವರಿಷ್ಠಂ' ಎಂದು ಹೇಳಿದ್ದು ಭಕ್ತಿ ಮಾಡುವಲ್ಲಿ ತಾತ್ಪರ್ಯದಿಂದ. 'ಶ್ವಪಚಾದತಿಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ' ಎಂಬಲ್ಲಿಯಂತೆ ಈ ರೀತಿ ಎಂದೂ ಆಗುವದಿಲ್ಲವೆಂಬ ಅಭಿಪ್ರಾಯದಿಂದ.

ಈ ಶ್ಲೋಕದಲ್ಲಿ ಬ್ರಾಹ್ಮಣನಿಗೆ ಹೇಳಿದ ಹನ್ನೆರಡು ಗುಣಗಳಾವವು? ಎಂದು ಶಂಕೆ ಬಂದರೆ ಸ್ವಲ್ಪ ಅನುವಾದ ಮಾಡಿ ಹಿಂದೆ ಹೇಳಿದ 'ಧನಾಭಿಜನ' ಮುಂತಾದ ಹನ್ನೆರಡೆಂಬ ವಿಪರೀತಜ್ಞಾನವನ್ನು ನಿರಾಕರಿಸಲು ಅವು ಬ್ರಾಹ್ಮಣನಿಗೆ ಮಾತ್ರ ಇರುವವಲ್ಲವೆಂದು ಮನಸ್ಸಿನಲ್ಲಿಟ್ಟುಕೊಂಡು ಉದ್ಯೋಗ ಪರ್ವದಲ್ಲಿರುವ ಸನತ್ಸುಜಾತದಲ್ಲಿರುವ ಹನ್ನೆರಡು ಲಕ್ಷಣಪ್ರತಿಪಾದಕಪದ್ಯವನ್ನು ಉದಾಹರಿಸುವರು-

**... ತಾತ್ಪರ್ಯ ...**

**''ದ್ವಿಷಡ್ಗುಣಯುತಾತ್'' ''ಜ್ಞಾನಂ ಚ ಸತ್ಯಂ ಚ ದಮಃ ಶಮಶ್ಚ (ಶ್ರುತಂ ಚ) ಹ್ಯಮಾತ್ಸರ್ಯಂ ಹ್ರೀಸ್ತಿತಿಕ್ಷಾನಸೂಯಾ । ದಾನಂ ಚ ಯಜ್ಞಶ್ಚ ಧೃತಿಃ ತಪಃ ಶ್ರುತಂ (ಶಮಶ್ಚ) ಚ ಮಹಾವ್ರತಾದ್ವಾದಶ ಬ್ರಾಹ್ಮಣಸ್ಯ'' ।।ಇತಿ ಭಾರತೇ ।।**

(ಭಾರತದಲ್ಲಿ ಸನತ್ಸುಜಾತಿಯದಲ್ಲಿಯೇ ಪಾಠ ಭೇದವಿದೆ ಎನಿಸುತ್ತದೆ. ಅದೇ ತಾತ್ಪರ್ಯದಲ್ಲಿ ಇದೆ ಎಂದು ತೋರುವದು. ಏಕೆಂದರೆ ಮುದ್ರಿತ ಸತ್ಯಧರ್ಮರ ವ್ಯಾಖ್ಯಾನದಲ್ಲಿ ಆನುಪೂರ್ವಿ ಒಂದು ರೀತಿಯಾದರೆ ಲಿಖಿತ ಪುಸ್ತಕದಲ್ಲಿ ಮತ್ತೊಂದು ರೀತಿ ಇದೆ) ದ್ವಿಷಡ್ಗುಣಯುತಾತ್ ಎಂದರೆ ಹನ್ನೆರಡು ಗುಣದಿಂದ ಕೂಡಿದ ಎಂದರ್ಥ. ಮೂಲಾರ್ಥ ಬರೆಯುವಾಗಲೇ ಇವುಗಳ ವಿವರ ಬರೆದಿದೆ. ಈ ಹನ್ನೆರಡು ಬ್ರಾಹ್ಮಣನಿಗೆ ಮಹಾವ್ರತ ಗುಣಗಳೆಂದು ಭಾರತದಲ್ಲಿ ಹೇಳಿದೆ.

ಇದರ ಮುಂದೆ ಇವುಗಳನ್ನು ಸ್ತುತಿಸುವ ಶ್ಲೋಕವಿದೆ. ಅದನ್ನೂ ಸತ್ಯಧರ್ಮತೀರ್ಥರು ಹೀಗೆ ಸಂಗ್ರಹಿಸಿದ್ದಾರೆ.

''ಯಸ್ತ್ವೇತೇಭ್ಯ ಪ್ರವಸೇತ್ ದ್ವಾದಶೇಭ್ಯಃ ಸರ್ವಾಮಿಮಾಂ ಪೃಥವೀಂ ಸ ಪ್ರಶಿಷ್ಯಾತ್ । ತ್ರಿಭಿರ್ದ್ವಾಭ್ಯಾಮೇಕತೋ ವಾ ವಿಯುಕ್ತಾಃ ಕ್ರಮಾದ್ವಿಯುಕ್ತಾ ಮೌನಭೂತಾ ಭವಂತಿ'' ಅದರ ಅರ್ಥ.

ಈ ಹನ್ನೆರಡು ಗುಣಗಳನ್ನು ಪಡೆಯಲು ಯಾವನು ಗುರುಕುಲವಾಸ ಮಾಡುವನೋ ಅವನು ಈ ಎಲ್ಲ ಪೃಥವಿಯನ್ನು ಶಿಕ್ಷಿಸುವನು. ಅಂದರೆ ತನ್ನ ವಶ ಮಾಡಿಕೊಳ್ಳುವನು. ಕೆಲವು ಅಧಿಕಾರಿವಿಶೇಷರಿಗೆ ಫಲವಿದು. ಉಳಿದವರು ಸತ್ಕ್ರಿಯರಾಗುವರು. ಗುಣಗಳ ಮಧ್ಯದಲ್ಲಿ ಕ್ರಮವಾಗಿಯಾಗಲಿ ವಿಪರೀತ ಕ್ರಮದಿಂದಾಗಲಿ ಮೂರರಿಂದ ಅಥವಾ ಎರಡರಿಂದ ಒಂದರಿಂದಾಗಲಿ ರಹಿತರಾದವರು ಕ್ರಮವಾಗಿ ಸ್ವಲ್ಪ ತಡವಾಗಿ ಭೂತಬಂಧವನ್ನು ಕಳೆದುಕೊಂಡು ಮೌನಭೂತಾ ಭವಂತಿ ಜ್ಞಾನಿಗಳಿಂದ ಪ್ರಾಪ್ಯವಾದ ವೈಕುಂಠದಲ್ಲಿ ವಾಸಮಾಡುವರು ಎಂದರ್ಥ.

ವಿಜಯಧ್ವಜೀಯ ಪ್ರಕಾರ :- 'ಏತೇಭ್ಯಃ ಪ್ರವರೋ ದ್ವಾದಶೇಭ್ಯಃ ಸರ್ವಾಮಪಿ ಪೃಥಿವೀಂ ಪ್ರಶಿಷ್ಯಾತ್ । ತ್ರಿಭಿರ್ದ್ವಾಭ್ಯಾಂ ಏಕತೋ ವಾ ವಿಶಿಷ್ಟೋ ನಾಸ್ಯ ಸಮಾನೋಽಸ್ತಿ ವೇದಿತವ್ಯಃ' ಎಂದಿದೆ.

ಈ ಹನ್ನೆರಡು ಗುಣಗಳಿಂದ ಉತ್ತಮನಾದವನು ಈ ಎಲ್ಲ ಭೂಮಿಯನ್ನು ಶಾಸನಮಾಡುವನು ಈ ಗುಣಗಳು ಮೇಲೆ ಹೇಳಿದ ಭಕ್ತನಿಗೆ ಮಾತ್ರ ಬರುವವು. ಅಭಕ್ತನಿಗೆ ಇರುವದಿಲ್ಲ. **'ಅನೇವಂವಿತ್ ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾಂತತಃ ಕ್ಷೀಯತೇ ಏವ'**ಎಂದು ಶ್ರುತಿಯು ಪರಮಾತ್ಮನ ಸ್ವಾತಂತ್ರ್ಯವನ್ನೂ ತನ್ನ ಸ್ವಾತಂತ್ರ್ಯವನ್ನೂ ತಿಳಿದವನು ಪುಣ್ಯಕರ್ಮವನ್ನು ಮಾಡಿದರೂ ಅದು ಕೊನೆಗೆ ನಾಶವಾಗುವದು ಎಂದು ಹೇಳುವದು. ಆದ್ದರಿಂದ ಭಕ್ತಿಯೇ ಪ್ರಯೋಜಕವೆಂದು.

ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ ಮನಸಾ ಸದಾ ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ ॥

ಯಾವನು ಯಾವಾಗಲೂ ಶ್ರೀಹರಿಯಲ್ಲಿ ಮನಸ್ಸಿಟ್ಟು ವಿಜ್ಞಾನವುಳ್ಳವನೋ ಅವನಿಗೆ ಒಳ್ಳೆಯ ಕುದುರೆ ಸಾರಥಿಯ ವಶದಲ್ಲಿರುವಂತೆ ಇಂದ್ರಿಯಗಳು ವಶದಲ್ಲಿರುವವು. ಅಂದರೆ ಅವನು ಶುದ್ಧನಾಗಿರವನು ಎಂದರ್ಥ. ಸ್ವಾತಂತ್ರ್ಯ ಭ್ರಾಂತಿಗೆ ದುರ್ಯೋಧನನ ಈ ಮಾತುಗಳನ್ನು ಉದಾಹರಣೆಯಾಗಿ ಕಾಣಬಹುದು.

'ಸಮರ್ಥಂ ಮನ್ಯಸೇ ಯಚ್ಚ ಕುಂತೀ ಪುತ್ರ ವೃಕೋದರಂ ।
ತನ್ಮಿಥ್ಯಾ ಹಿ ನ ಮೇ ಕೃಷ್ಣ ಪ್ರಭಾವಂ ವೇತ್ಥ ಭಾರತ ॥
ಮತ್ಸಮೋ ಹಿ ಗದಾಯುದ್ಧೇ ಪೃಥಿವ್ಯಾಂ ನಾಸ್ತಿ ಭಾರತ ।
ನಾಸಿತ್ಕ್ವಚಿದತಿಕ್ರಾಂತೋ ಭವಿತಾ ವಾ ನ ಕಶ್ಚನ ॥'

ಕುಂತೀಪುತ್ರನಾದ ಭೀಮನನ್ನು ಸಮರ್ಥನೆಂದು ತಿಳಿದಿರುವಿ. ಅದು ತಪ್ಪು. ನನ್ನ ಸಂಪೂರ್ಣ ಸಾಮರ್ಥ್ಯವನ್ನು ನೀನು ತಿಳಿದಿಲ್ಲ. ಗದಾಯುದ್ಧದಲ್ಲಿ ನನಗೆ ಸಮಾನನು ಯಾರೂ ಭೂಮಿಯ ಮೇಲೆ ಇಲ್ಲ. ಹಿಂದಿರಲಿಲ್ಲ ಮುಂದೆ ಹುಟ್ಟುವದಿಲ್ಲ. ಈ ಬಗೆಯ ಸ್ವಾತಂತ್ರ್ಯಾಭಿಮಾನಿಗಳು ಸರ್ವಥಾ ಲೋಕ ಅಪವಿತ್ರಕಾರಿಗಳು ಎಂದು ಅಭಿಪ್ರಾಯ. ಇದನ್ನೇ 'ನಾವಿರತೋ ದುಶ್ಚರಿತಾತ್ ನಾಶಾಂತೋ ನಾಸಮಾಹಿತಃ । ನಾಶಾಂತಮಾನಸೋ ವಾಪಿ ಪ್ರಜ್ಞಾನೈನಮವಾಪ್ನುಯಾತ್ ।' ಎಂಬ ಶ್ರುತಿಯು ಹೇಳುವದು. ಕೆಲವರು 'ಶಮೋದಮಸ್ತಪಃ ಶೌಚಂ ಶಾಂತ್ಯಾರ್ಜವ ವಿರಕ್ತತಾಃ । ಜ್ಞಾನವಿಜ್ಞಾನಸಂತೋಷಾಃ ಸತ್ಯೇಜ್ಯೇತಿದ್ವಿಷಡ್ಗುಣಾಃ ।' ಎಂದೂ. ಮತ್ತೆ ಕೆಲವರು 'ಸತ್ಯಂ ದಮಸ್ತಪಃ ಶೌಚಂ ಸಂತೋಷೋ ಹ್ರೀಃ ಕ್ಷಮಾರ್ಜವಂ । ಜ್ಞಾನಂ ಶಮೋ ದಯಾ ಧ್ಯಾನಂ ವಿಪ್ರಸ್ಯೈತೇ ದ್ವಿಷಡ್ಗುಣಾಃ' ಎಂದೂ ಹೇಳುವರು. ಸಂಪ್ರದಾಯವನ್ನರಿಯದ ಈ ಎರಡೂ ಮತಗಳು ಇಲ್ಲಿ ಗ್ರಾಹ್ಯವಲ್ಲವೆಂದು ತಿಳಿಯಬೇಕು. ॥೧೦॥

ವೇದಾದಿಗಳಲ್ಲಿ ತಿಳಿಸಿದ ಸೇವೆ ಮಾಡಲು ಅಧಿಕಾರವಿಲ್ಲದ ಚಂಡಾಲನಿಗೆ ಶ್ರೇಷ್ಠತೆ ಹೇಳಿದ್ದು ಹೇಗೆ ಸಂಗತವಾಗುವದು? ಮತ್ತು 'ಏಕಸ್ಮಿನ್ ಭೋಜಿತೇ ವಿಪ್ರೇ ತುಷ್ಟೋಽಹಂ ಸಹ ದೇವತೈಃ । ನಾಹಂ ತಥಾಽದ್ಮಿ ಯಜಮಾನಹವಿರ್ವಿತಾನ್ಯೈಃ ।' ಮುಂತಾದ ಸ್ಥಳದಲ್ಲಿ ಬ್ರಾಹ್ಮಣವರ್ಣವನ್ನು ವರ್ಣಿಸಿದ್ದರಿಂದ ಆಧಿಕ್ಯ ಸಿದ್ಧವಾದಾಗ ಇತರರಿಗೆ ಶ್ರೇಷ್ಠತೆ ಹೇಳಿದ್ದು ಹೇಗೆ? ಅಚ್ಯುತನಿಗೆ ಪೂಜೆ ಮಾಡುವದು ಉಚಿತವೇ? ಉಚಿತವಾದರೂ ಅಭಕ್ತನಾದ ಬ್ರಾಹ್ಮಣನಿಗಿಂತ ಭಕ್ತನಾದ ಶ್ವಪಚ ಉತ್ತಮನೆಂಬುದು ಸಂಭಾವಿತವಲ್ಲ. ವರ್ಣಹೀನನಾದ ಅವನು ಮಾಡುವ ಪೂಜೆಯನ್ನು ಶ್ರೀಹರಿಯು

ಸ್ವೀಕರಿಸುವನೆಂಬುದು ಯುಕ್ತಿಯುಕ್ತವಲ್ಲ. ಮೇಲೆ ತಿಳಿಸಿದಂತೆ ಬ್ರಾಹ್ಮಣನಿಗೆ ಅಧಿಕ್ಯವನ್ನು ಹೇಳಿದೆ ಎಂದರೆ ಉತ್ತರ ಕೊಡುತ್ತಾರೆ ಮತ್ತು ಶ್ರೀಹರಿಯ ಪೂಜೆಯನ್ನು ಸ್ವಾರ್ಥಕ್ಕಾಗಿ ಸ್ವೀಕರಿಸುವನೇ? ಪರಾರ್ಥಕ್ಕಾಗಿಯೋ? ಸ್ವಾರ್ಥಕ್ಕೆಂದರೆ ಅಪೂರ್ಣತಾ ಬರುವದು. ತನಗೆ ಅತಿಶಯ ಕೊಡದಿರುವ ಪೂಜೆಯ ಸ್ವೀಕಾರವೇ ಅಸಂಭಾವಿತವಾದ ಮೇಲೆ ಅದು ಪರಾರ್ಥ ಎಂಬುವದು ದೂರದಲ್ಲೇ ಉಳಿಯಿತು ಎಂದರೆ ಹೇಳುತ್ತಾರೆ-

**ನೈವಾತ್ಮನಃ ಪ್ರಭುರಯಂ ನಿಜಲಾಭಪೂರ್ಣೋ**
**ಮಾನಂ ಜನಾದವಿದುಷಃ ಕರುಣೋ ವೃಣೀತೇ ।**
**ಯದ್ ಯಜ್ಜನೋ ಭಗವತೇ ವಿದಧೀತ ಮಾನಂ**
**ತಚ್ಚಾತ್ಮನೇ ಪ್ರತಿಮುಖಸ್ಯ ಯಥಾ ಮುಖಶ್ರೀಃ ॥೧೧॥**

೧ **ನಿಜಲಾಭಪೂರ್ಣಃ** ಸ್ವರೂಪವಾದ ನಿತ್ಯಾನಂದದಿಂದ ಪೂರ್ಣನಾದ **ಕರುಣಃ** ಕರುಣೆ ಮಾಡುವ ಸ್ವಭಾವವುಳ್ಳ **ಪ್ರಭುಃ** ಪರಿವೃಢನಾದ ಪರಮಾತ್ಮನು **ಅವಿದುಷಃ** ಈ ಜನ್ಮದಲ್ಲಿ ಮಾಡಿದ ಜ್ಞಾನೋಪದೇಶಕ್ಕೆ ಅನಧಿಕಾರಿಯಾದ ಆದರೆ ಹಿಂದಿನ ಜನ್ಮದಲ್ಲಿ ಮಾಡಿದ ಪುಣ್ಯದಿಂದ ಶ್ರೀಹರಿಯ ತತ್ತ್ವಜ್ಞಾನವನ್ನು ಗೂಢವಾಗಿ ಪಡೆದ **ಜನಾತ್** ವರ್ಣಹೀನನಾದವನಿಂದಲೂ **ಮಾನಂ** ಅವನು ಮಾಡಿದ ಪೂಜೆಯನ್ನು **ವೃಣೀತೇ** ಸ್ವೀಕರಿಸುವದೆನಿದೆಯೋ **ತತ್** ಅದು **ಆತ್ಮನಃ ನೈವ** ತನಗೆ ಅಪ್ರಾಪ್ತಪ್ರಾಪ್ತಿಗಾಗಿ ಅಲ್ಲ (ಇದನ್ನು ಸಮರ್ಥಿಸಲೆಂದೇ ನಿಜಲಾಭಪೂರ್ಣಃ ಎಂದಿದ್ದಾರೆ.) ಹಾಗಾದರೆ ಏಕೆ ಸ್ವೀಕರಿಸುವನು ಎಂದರೆ 'ಕರುಣ' ಎಂದು ಹೇಳಿದ್ದು. 'ಕೋಽಹ್ಯೇವಾನ್ಯಾತ್ ಕಃ ಪ್ರಾಣ್ಯಾತ್' ಎಂಬ ಶ್ರುತಿಯಲ್ಲಿ 'ಯೋ ವೈ ಭೂಮಾ ತತ್ಸುಖಂ' ಎಂಬಲ್ಲಿಯೂ ಆನಂದಪೂರ್ಣನೆಂದು ಹೇಳಿದೆ. 'ದೇವಸ್ಯೈಷ ಸ್ವಭಾವೋಽಯಂ, 'ಯಮೇವೈಷ ವೃಣುತೇ ತೇನ ಲಭ್ಯಃ' ಎಂಬಲ್ಲಿ ಕರುಣೆಯನ್ನು ಹೇಳಿದೆ. ಅಂದರೆ ಕರುಣೆಯಿಂದ ಆ ಫಲವನ್ನು ಅವನಿಗೆ ಕೊಡಲು ಅವನು ಮಾಡಿದ ಪೂಜೆಯನ್ನು ಶ್ರೀಹರಿಯು ಸ್ವೀಕರಿಸುತ್ತಾನೆ. ಸ್ವಾರ್ಥಕ್ಕೇಕೆ ಆಗಬಾರದು ಎಂದರೆ ಅಲ್ಲಿಯೂ ಸ್ವಾರ್ಥವಿಲ್ಲವೆಂದು ಹೇಳುತ್ತಾರೆ. **ಜನಃ** ಜ್ಞಾನಿಯಾಗಲಿ ಅಜ್ಞಾನಿಯಾಗಲಿ ಅಂದರೆ ಜನಸಾಮಾನ್ಯರು **ಭಗವತೇ** ಶ್ರೀಹರಿಗೆ **ಯದ್ಯತ್** ಏನೇನು **ಮಾನಂ** ಪೂಜೆಯನ್ನು (ನಿರ್ದೋಷ,ಗುಣಪೂರ್ಣನೆಂಬ ಉಪಾಸನೆಯನ್ನು) **ವಿದಧೀತ** ಮಾಡುವನೋ **ತತ್ ತತ್** ಅದೆಲ್ಲವೂ **ಮುಖಶ್ರೀಃ** ಬಿಂಬದ ಮುಖದಲ್ಲಿ ಮಾಡುವ ಅಲಂಕಾರವು **ಯಥಾ** ಹೇಗೆ **ಪ್ರತಿಮುಖಸ್ಯ** ಕನ್ನಡಿಯಲ್ಲಿ ಬಿದ್ದ ಪ್ರತಿಬಿಂಬವಾದ ಮುಖಕ್ಕೆ ದೊರೆಯುವದೋ **ತಥಾ** ಹಾಗೆ **ಆತ್ಮನೇ** ಪ್ರತಿಬಿಂಬರಾದ ಜನರ

ಪ್ರಯೋಜನಕ್ಕಾಗಿಯೇ ಎಂದು ತಿಳಿಯಬೇಕು. ತಮ್ಮ ಬಿಂಬಿನಾದ ಪರಮಾತ್ಮನನ್ನು ನಿರ್ದೋಷ ಗುಣಪೂರ್ಣನೆಂದು ಉಪಾಸನೆ ಮಾಡಿದರೆ ಪ್ರತಿಬಿಂಬರಾದ ಜೀವರು ತಮ್ಮ ಯೋಗ್ಯತಾನುಸಾರ ನಿರ್ದೋಷ ಗುಣಪೂರ್ಣತೆಯನ್ನು, ಸುಖವನ್ನು ಪಡೆಯುವರು ಎಂದರ್ಥ. ಇದರಿಂದ ಬ್ರಹ್ಮಾದಿ ಎಲ್ಲ ಜೀವರೂ ಅತ್ಯಂತ ತುಚ್ಛರೆಂದು ಸೂಚಿಸಿರುವರು. ಇದನ್ನೇ 'ಶ್ವಪಚಾದಪಿ ಕಷ್ಟತ್ವಂ ಬ್ರಹ್ಮೇಶಾನಾದಯಃ ಸುರಾಃ । ತದೈವಾಚ್ಯುತಯಾಂತ್ಯೇವ ಯದೈವತ್ವಂ ಪರಾಙ್ಮುಖಃ' ಎಂಬ ಪ್ರಮಾಣ ತಿಳಿಸುವದು.

೨ ಅಥವಾ **ನಿಜಲಾಭಪೂರ್ಣಃ** ಸ್ವರೂಪಾನಂದಾನುಭವದಿಂದ ಪೂರ್ಣನಾದ **ಕರುಣಃ** ದಯಾಮಯನಾದ **ಅಯಂ ಪ್ರಭುಃ ತು** ಸಮರ್ಥನಾದ ನಾರಸಿಂಹನಾದರೋ **ಆತ್ಮನಃ ಏವ** ತನಗೆ ಮಾತ್ರವೇ **ಪ್ರಭುಃ ನ** ಸ್ವಾಮಿಯಲ್ಲ. ಎಲ್ಲರಿಗೂ ಸ್ವಾಮಿಯು. ಹೇಗೆ ಅಖಂಡ ಐಶ್ವರ್ಯವುಳ್ಳವನಾದ್ದರಿಂದ ಚಕ್ರವರ್ತಿಯು ಕಾಣಿಕೆಗಳನ್ನು ತೆಗೆದುಕೊಳ್ಳುವಂತೆ **ಅವಿದುಷಃ ಜನಾತ್** ಅಜ್ಞಾನಿಗಳಿಂದಲೂ **ಮಾನಂ** ಮರ್ಯಾದೆಯನ್ನು **ವೃಣೀತೇ** ಸ್ವೀಕರಿಸುವನು. ಇದರಿಂದ ಜ್ಞಾನಿಗಳು ಮಾಡುವ ಪೂಜೆಯನ್ನು ಸ್ವೀಕರಿಸುವದು ಸ್ವತಃಸಿದ್ಧವೆಂದು ಹೇಳಿದಂತಾಯಿತು. ದೇಶದ ಜನರಿಂದ ಹಣವನ್ನು ತೆಗೆದುಕೊಳ್ಳುವ ರಾಜನಿಗೆ ಸ್ವಾರ್ಥವೂ ಇದ್ದಂತೆ ಶ್ರೀಹರಿಗೆ ಇಲ್ಲವೆಂಬುದನ್ನು ನಿಜಲಾಭಪೂರ್ಣನೆಂಬುದರಿಂದ ತಿಳಿಸಿರುವರು. ಹಾಗಾದರೆ ಹುಚ್ಚನೇನು ಎಂದರೆ ಅಲ್ಲವೆಂಬುದನ್ನು 'ಕರುಣ' ಎಂಬುದರಿಂದ ತಿಳಿಸಿರುವರು. ಹಾಗಾದರೆ ಪೂಜೆ ಮಾಡುವದೇಕೆ ಎಂದರೆ ಹೇಳುತ್ತಾರೆ. ಜನರು ಮಾಡುವ ಪೂಜೆಯೆಲ್ಲವೂ ತಮ್ಮ ಪ್ರಯೋಜನಕ್ಕಾಗಿಯೇ. ಅದಕ್ಕೆ ಉದಾಹರಣೆ **ಮುಖಶ್ರೀಃ** ಪ್ರಧಾನನಾದ ರಾಜನಿಗೆ ಮಾಡುವ ಕಾಣಿಕೆಯ ಸಮರ್ಪಣೆರೂಪವಾದ ಗೌರವವು **ಪ್ರತಿಮುಖಸ್ಯ** ರಾಜನನ್ನೇ ಆಶ್ರಯಿಸಿಕೊಂಡಿರುವ ದೇಶದ ಶತ್ರುಬಾಧೆಯಿಲ್ಲದೆ ಧನಧಾನ್ಯಸಮೃದ್ಧಿರೂಪ **ಶ್ರೀಃ** ಸಂಪತ್ತಿಗೆ ಹೇಗೆ ಕಾರಣವೋ ಹಾಗೆಯೇ ಶ್ರೀಹರಿಯ ಪೂಜಾಸಂಪತ್ತು ಅನುರಕ್ತರಾದ ಭಕ್ತರ ಸಂಸಾರಬಂಧದಿಂದ ಮುಕ್ತಿಯೆಂಬ ಸಂಪತ್ತಿಗೆ ಕಾರಣವಾಗುವದು. 'ಬಲಮಾನಂದಓಜಶ್ಚ' ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ತಿಳಿಸುವವು.

೩. ಅಥವಾ, ಶ್ರೀಹರಿಗೆ ಉತ್ಪತ್ತಿಮೊದಲಾದವು ಇರುವದರಿಂದ ಅವನೂ ಜೀವರಂತೆ ಅತಿಶಯಮಹಿಮೆ ಇಲ್ಲದವನು ಜ್ಞಾನಿಗಳಲ್ಲದವರಿಂದಲೂ ಪರಿಗ್ರಹೀತನಾಗಿರುವದು ಯುಕ್ತವೇ ಆಗಿದೆ ಎಂದರೆ ಹೇಳುತ್ತಾರೆ. **ಅಯಂ** ಈ ನರಸಿಂಹನು **ಆತ್ಮನಃ** ದೇಹದಿಂದ **ಪ್ರಭುಃ** ಪ್ರಭೂತನಾದವನು, ಹುಟ್ಟಿದವನು **ನೈವ**

ಅಲ್ಲವೇ ಅಲ್ಲ. ಕಂಬದಿಂದ ಹುಟ್ಟಿದ್ದು ಪ್ರತ್ಯಕ್ಷ ಸಿದ್ಧವೆಂದು ಭಾವ. ದೇಹವಿಲ್ಲದವನು ಹುಟ್ಟುವಂತಿಲ್ಲ. ಹುಟ್ಟಿದವನಿಗೆನೇ ವಿಷಯಸುಖಾನುಭವ ಉಪಪನ್ನವಾಗುವದು. ಆದ್ದರಿಂದ ಶ್ರೀಹರಿಗೆ ವಿಷಯಾನುಭವ ಹೇಗೆ ಸಾಧ್ಯವೆಂದರೆ ಹೇಳುವರು. **ನಿಜಲಾಭಪೂರ್ಣಃ** ಎಂದು. ವಿಷಯಾನುಭವದಿಂದ ಸುಖಪ್ರಾಪ್ತಿಯಾಗುವದಾದರೆ ನೀವು ಶಂಕಿಸಿದ್ದು ಸರಿ. ಆದರೆ ಶ್ರೀಹರಿಯು ಸ್ವತಃಸಿದ್ಧಸುಖಾನುಭವವುಳ್ಳವನು ಮತ್ತು ಪೂರ್ಣನು ವ್ಯಾಪ್ತನು. ವ್ಯಾಪ್ತನಾದವನಿಗೆ ಚಿಕ್ಕದಾದ ಗರ್ಭವಾಸಾದಿಗಳೆಲ್ಲಿಯದು ಇಲ್ಲವೆಂದರ್ಥ. 'ಪ್ರಾದೇಶಮಾತ್ರಪುರುಷಂ' ಎಂಬಲ್ಲಿ ಹೇಳಿರುವ ಪರಿಚ್ಛಿನ್ನತೆಯು 'ತಸ್ಯಾಂತೇ ಸುಷಿರಂ ಸೂಕ್ಷ್ಮಂ' ಎಂಬ ಶ್ರುತಿಯಿರುವದರಿಂದ ಆಕಾಶದಂತೆ ಯುಕ್ತವೇ.

ಅದಕ್ಕಾಗಿ ಉಪಾಧಿಯನ್ನು ಕಲ್ಪಿಸಿದಲ್ಲಿ ಅನವಸ್ಥಾದಿದೋಷ ಬರುವದು. ಆದ್ದರಿಂದ ನರಸಿಂಹನು ತನ್ನ ಭೃತ್ಯನಾದ ಪ್ರಹ್ಲಾದನ ಮಾತನ್ನು ಸತ್ಯವನ್ನಾಗಿಸಲು ತನ್ನ ವ್ಯಾಪ್ತಿಯನ್ನು ಸರ್ವತ್ರ ತೋರಿಸಲು ಕಂಬದಿಂದ ಪ್ರಕಟನಾದನೆಂಬುವದೇ ಸರಿ. ರಾಮಕೃಷ್ಣಾದಿ ಅವತಾರಗಳಲ್ಲಿ ಹುಟ್ಟಿದಂತೆ ತೋರಿಸಿರುವದು ಅಸುರ ಜನರನ್ನು ಮೋಹಗೊಳಿಸಲು ಎಂದು ತಿಳಿಯಬೇಕು. ತನ್ನ ಭೃತ್ಯರ ಮಾತನ್ನು ಸತ್ಯಮಾಡಲೆಂದೇ ಅವತರಿಸದನೆಂಬುದು ನಿಮಗೆ ಹೇಗೆ ತಿಳಿಯಿತು ?ಎಂದರೆ ಹೇಳುವರು. **ಮಾನಂ ಜನಾದವಿದುಷಃ** ಎಂದು. ಸ್ವರೂಪವನ್ನು ತಿಳಿಯದ ಈ ಜನರಿಂದಲೂ ಪೂಜೆಯನ್ನು ಸ್ವೀಕರಿಸುವನು. ಈ ಜನರಿಂದ ಮಾತ್ರವಲ್ಲ ಯೋಗ್ಯರಾದ ಎಲ್ಲರಿಂದಲೂ ಪೂಜೆಯನ್ನು ಸ್ವೀಕರಿಸುವನು ಎಂಬುದನ್ನು **ಯದ್ಯತ್** ಎಂಬ ವಾಕ್ಯದಿಂದ ತಿಳಿಸುವರು. ಇದರರ್ಥ ಹಿಂದಿನಂತೆಯೇ.

ಶ್ವಪಚನು ಉತ್ತಮನೆಂದು ಹೇಳಿದ್ದು ಭಕ್ತನ ವಿಷಯವೇ ಹೊರತು ಅಭಕ್ತನ (ದ್ವೇಷಿಯ)ವಿಷಯವಲ್ಲ. ದ್ವೇಷಿಯು ಡಂಭಕ್ಕಾಗಿ ಮಾಡುವ ಪೂಜೆಯನ್ನು ಶ್ರೀಹರಿಯು ಸರ್ವಥಾ ಸ್ವೀಕರಿಸುವದಿಲ್ಲವೆಂಬುದನ್ನು ಇಲ್ಲಿ ಹೇಳುತ್ತಾರೆ. ನಿಜಲಾಭಪೂರ್ಣನೂ **ಕರುಣಃ** ಅಸುರರನ್ನು ಅಂಧತಮಸ್ಸಿನಲ್ಲಿ ಹಾಕುವ (ಕೃ ವಿಕ್ಷೇಪೇ ಧಾತು) **ಅಯಂ** ಈ ಶ್ರೀಹರಿಯು **ಅವಿದುಷಃ** ಸ್ವರೂಪದಿಂದ ಅಜ್ಞಾನಿಯಾದ ದೈತ್ಯಜನರಿಂದ **ಆತ್ಮನಃ ಮಾನಂ** ತನ್ನನ್ನು ಕುರಿತು ಮಾಡಿದ ಡಾಂಭಿಕ ಪೂಜೆಯನ್ನು **ನೈವ ವೃಣೀತೇ** ಸ್ವೀಕರಿಸುವದೇ ಇಲ್ಲ. ಅಷ್ಟೇ ಅಲ್ಲ ಅಂಧಂತಮಸ್ಸನ್ನು ಹೊಂದಿಸುವನು ಎಂದರ್ಥ. 'ಪರಾಪೂರ್ವೇಷಾಂ' ಎಂಬ ಶ್ರುತಿಯು ಇದನ್ನು ತಿಳಿಸುವದು. ಅಸುರಜನರು ಮಾಡುವ ಪೂಜೆ ಅನರ್ಥಜನಕವೆಂದು ಹೇಳುತ್ತಾರೆ. **ಜನಃ** ಅಸುರರು **ಯದ್ಯದ್ ವಿದಧೀತ** ಏನೇನು ಪೂಜೆ ಮಾಡುವರೋ ಅದೆಲ್ಲವೂ

**ಆತ್ಮನೇ** ತಮ್ಮ ಅನರ್ಥಕ್ಕೆ ಆಗುವದು **ಮುಖಶ್ರೀಃ** ಪ್ರಧಾನ ಭಟನ ಪರಾಕ್ರಮವು **ಪ್ರತಿಮುಖಸ್ಯ** ಅಲ್ಪಬಲವುಳ್ಳ ಶತ್ರುಭಟನ ಅನರ್ಥಕ್ಕಾಗಿ(ಮರಣ)ಹೇಗೆ ಆಗುವದೋ ಹಾಗೆ. ಬಿಂಬನೆಂದು ಹೇಳಿದ ಮಾತ್ರದಿಂದ ಶ್ರೀಹರಿಗೆ ಮಾಡುವ ಅಸುರಪೂಜೆಯು ಪ್ರತಿಬಿಂಬಾಭಾಸನಾದ (ಸಾದೃಶ್ಯವಿಲ್ಲದೆ ತದಧೀನನಾದ)ದೈತ್ಯನ ಅಂಧಂತಮಸ್ಸೆಂಬ ಅನರ್ಥಕ್ಕೆ ಕಾರಣವಾಗುವದು. ಪರಮಾತ್ಮನಲ್ಲಿರುವ ಜೀವಸ್ವಾಮಿತ್ವವನ್ನು ಅರಿಯದವನು ಮಾಡುವ ಪೂಜೆಯನ್ನು ಶ್ರೀಹರಿಯು ಸ್ವೀಕರಿಸುವದಿಲ್ಲ ಅಂದರೆ ಜ್ಞಾನಿಯು ಮಾಡುವ ಪೂಜೆಯನ್ನು ಸ್ವೀಕರಿಸುವನೆಂದಾಯಿತು. ಪೂರ್ಣನಾದ ಶ್ರೀಹರಿಯು ಕರುಣೆಯಿಂದಲೇ ಸ್ವೀಕರಿಸುವನು ಎಂದೂ ಅರ್ಥ ಮಾಡಿರುವರು. **ನಿಜಲಂ** ಜಲಭಿನ್ನವಾದ ಮರುಮರೀಚಿಕೆಯಂತೆ **ಆಭಾಸ** ಪ್ರಕಾಶವುಳ್ಳ ವಿಷಯಗಳಿಂದ **ಪೂರ್ಣಃ** ತುಂಬಿದ **ಮಾನಂ ಜನಾತ್** ಸದೋಷನಾದ **ಅವಿದುಷಃ ಚ** ಅನ್ಯಥಾಜ್ಞಾನಿಯು ಮಾಡಿದ ಮಾನವನ್ನು ಆಕ್ಷೇಪಕನಾಗಿ ಶ್ರೀಹರಿಯು ಸ್ವೀಕರಿಸುವದಿಲ್ಲ **ಅಭಗವತೇ** ದರಿದ್ರನಾದ **ಆತ್ಮನೇ ಚ** ದೈತ್ಯನಾದ ತನಗೂ **ನ ವಿದಧೀತ** ಮಾಡುವದಿಲ್ಲ **ಅಪ್ರತಿಮುಖಸ್ಯ** ಪ್ರತಿಬಿಂಬವಲ್ಲದ್ದಕ್ಕೆ **ಮುಖಶ್ರೀಃ** ಬಿಂಬದಲ್ಲಿರುವ ಅಲಂಕಾರವು ಹೇಗೆ ಆಗುವದಿಲ್ಲವೋ ಹಾಗೆ ಎಂದರ್ಥ. ಹಾಗಾದರೆ ಶ್ರೀಹರಿಯು ದೈತ್ಯರ ಬಿಂಬವಲ್ಲವೆಂದಂತಾಯಿತು ಎಂದರೆ ಅದಕ್ಕಾಗಿಯೇ **ಮುಖಶ್ರೀಃ** ಮುಖ್ಯ ಬಿಂಬವೆಂಬ ಹೆಸರು ಮಾತ್ರ ಎಂದು ಹೇಳಿರುವರು. ಸಾದೃಶ್ಯವಿಲ್ಲದಿದ್ದರೂ ನಿಯಾಮಕನು ಮಾತ್ರವೆಂದರ್ಥ.

ಇನ್ನು ಶ್ರೀಸತ್ಯಧರ್ಮತೀರ್ಥರ ಪ್ರಕಾರ ವಿಶೇಷಾರ್ಥಃ-

ವಿದ್ವಾಂಸ-ಅವಿದ್ವಾಂಸರು ಮಾಡುವ ಪೂಜೆಯಲ್ಲಿ ತಾರತಮ್ಯವಿಲ್ಲವೇ ಎಂದರೆ ಇದೆ ಎಂದು ಹೇಳುವರು **ಯಥಾ** ಹೇಗೆ **ಅನಂಜನಾತ್** ದೋಷವಿಲ್ಲದ ಭಕ್ತನಿಂದ **ಮಾನಂ ವೃಣೀತೇ** ಪೂಜೆಯನ್ನು ಸ್ವೀಕರಿಸುವನೋ **ತಥಾ** ಹಾಗೆ **ಅವಿದುಷಃ** ಅಜ್ಞಾನಿಯಿಂದ **ಮಾ ವೃಣೀತೇ** ಸ್ವೀಕರಿಸಲಾರನು. ಹಾಗಾದರೆ ಜ್ಞಾನಸಂಪಾದನೆ ಪ್ರಯತ್ನವನ್ನು ಜೀವನು ಮಾಡಬೇಕು ಎಂದರೆ ಇವನು ಶಕ್ತನಲ್ಲ ಎಂದೂ ಹೇಳುವರು. **ಅಯಂ** ಜೀವನು **ನೈವಾತ್ಮನಃ** ಜಡಕ್ಕಿಂತಲೂ **ಪ್ರಭುಃ** ಸಮರ್ಥನು **ನ ತು ಆತ್ಮನಃ ಪ್ರಭುಃ** ಚೇತನನಿಗಿಂತ ಸಮರ್ಥನಲ್ಲ. ನೈವ ಎಂಬುದು ನಿಪಾತ ಅಖಂಡವಾದುದು. ನಞ ಪರ್ಯಾಯವಾದುದು. 'ಅಥವಾ' ಎಂಬುದು ನಿಪಾತ ಸಮುದಾಯ ಎಂದು ದೀಪಿಕಾಟಿಪ್ಪಣಿಯಲ್ಲಿ ಹೇಳಿದೆ. ಅಥವಾ 'ನೈವಾತ್ಮನಃ' ಎಂಬಲ್ಲಿ ನ, ಏವ, ಆತ್ಮನಃ, ಎಂದು ವಿಭಾಗ ಮಾಡಿದ ಮೇಲೆ ನಕಾರದ ಜೊತೆಗೆ ಆತ್ಮ ಪದ ಸೇರಿಸಿದರೆ ನಾತ್ಮನಃ ಎಂದು ಪದವಾಗುತ್ತದೆ. ನ ಆತ್ಮಾ ಎಂದು ಸಮಾಸ

ಮಾಡಿದರೆ ಆತ್ಮಭಿನ್ನ ಜಡವೆಂಬರ್ಥ ಬರುವದು. ಹೀಗೆ ಎಲ್ಲೂ ಕಂಡಿಲ್ಲವೆನ್ನುವಂತಿಲ್ಲ. ವೈದಿಕ ಅವೈದಿಕ ಸಾಧಾರಣವಾಗಿ ಪ್ರಯೋಗ ಸಿಗುವದು. **ಅವು** ಹೀಗೆ ''ನರಾವಶಂ ಸ ಶುನಚ್ಛೇಪ ದಶದಿಗ್ರಥಾಯ ನ ವಯಂ ಹಿ ನೀತಂ'' ಎಂಬಲ್ಲಿರುವದರಿಂದ ಮನಸ್ಸಿನಲ್ಲಿ ಆಶ್ಚರ್ಯಪಡಬೇಕಿಲ್ಲ. ''ಪ್ರಭುರ್ಹಿ ಜೀವೋ ಜಡಮಪೇಕ್ಷ್ಯ'' ಎಂದು ಗೀತಾಭಾಷ್ಯದಲ್ಲಿದೆ.

ಪೂಜೆಯನ್ನು ಸ್ವೀಕರಿಸುವದೇ ಹರಿಯ ಸ್ವಭಾವವೆಂದಾದರೆ ತಾಮಸರಿಂದಲೂ ಸ್ವೀಕರಿಸುವನೇ? ಎಂದರೆ ಇಲ್ಲವೆಂದೂ ಹೇಳುವರು. **ಜನಾತ್** ಪಾಮರರಾದ ತಾಮಸರಿಂದ(ಜನಃ ಪಾಮರೇ ಎಂದು ವಿಶ್ವ) **ಆತ್ಮನಃ** ತನಗೆ **ಮಾನಂ** ಪೂಜೆಯನ್ನು **ನೈವ ವೃಣೀತೇ** ಸ್ವೀಕರಿಸುವದಿಲ್ಲ ಅಷ್ಟೇ ಅಲ್ಲ ಅನರ್ಥವೂ ಅವರಿಗಿದೆ ಎಂದು ಹೇಳುವರು **ಅವಿದುಷಃ** ಎಂದು **ಅವಿದಃ** ವಿದ್ವದವಿದ್ವದ್ ವಿರೋಧಿಗಳಾದ ಜನರನ್ನು ಉಷತೀತಿ ಸುಡುವನು ಅಂದರೆ ಪಾಪ ಕೊಡುವನು ಆದ್ದರಿಂದ ಅವಿದುಷಃ (ಅವಿದಂ ಉಷತೀತಿ ಅವಿದುಷಃ)ಉಷ ದಾಹೇ ಎಂದು ಧಾತು ಇದೆ. ಪೂಜೆ ಮಾಡುವವರಿಗೆ ಫಲವಿದೆಯಾದ್ದರಿಂದ ಅವಶ್ಯವಾಗಿ ಪೂಜೆ ಮಾಡಬೇಕೆಂದು ಹೇಳುವರು. 'ಯದ್ಯತ್' ಎಂಬುದು ಅವ್ಯಯ. ತತ್ ಎಂಬುದು ಅವ್ಯಯ. ಇನ್ನೊಂದು ತತ್ ಶಬ್ದ ಅಧ್ಯಾಹಾರ ಮಾಡಬೇಕು.(ವಿಸ್ತಾರವಾಗಿ ಈ ರೀತಿಯನ್ನು ಆರನೇ ಸ್ಕಂಧದ ವ್ಯಾಖ್ಯಾನದ ಕೊನೆಗೆ 'ತೇ ಪಿಬಂತಿ' ಎಂಬುದು ಋಗ್ಭಾಷ್ಯಟೀಕಾದಲ್ಲಿ ಉದಾಹರಣಕೊಟ್ಟು ಹೇಳಿದ್ದನ್ನು ಇಲ್ಲಿ ಅನುಸಂಧಾನ ಮಾಡಬೇಕು.) ಭಗವಂತನಿಗೆ ಏನೇನು ಪೂಜೆ ಮಾಡುವನೋ ಅದೆಲ್ಲವೂ **ಆತ್ಮನೇ** ತನ್ನ ಪ್ರಯೋಜನಕ್ಕಾಗಿಯೇ ಆಗುವದು. ಅದಕ್ಕೆ ದೃಷ್ಟಾಂತ **ಮುಖಶ್ರೀಃ** ಬಿಂಬಪ್ರತಿಫಲಿತವಾದ **ಪ್ರತಿಮುಖಸ್ಯ** ಪ್ರತಿಬಿಂಬಕ್ಕೆ ಹೇಗೋ ಹಾಗೆ ಎಂದರ್ಥ. ಪ್ರತ್ಯೇಕವಾಗಿ ಸೇವೆ ಮಾಡಲು ಜೀವನು ಅರ್ಹನಲ್ಲ. ಪ್ರತಿಮುಖವು ಅಲಂಕಾರ ಮಾಡಲರ್ಹವಲ್ಲ. 'ನಿತ್ಯೋಪಾಧ್ಯಾ ಸ್ವರೂಪಯಾ । ಚಿದ್ರೂಪಯಾ ಯುತೋ ಜೀವಃ ಕೇಶವಪ್ರತಿಬಿಂಬಕಃ' ಎಂದಿರುವದರಿಂದ ಪ್ರತಿಬಿಂಬನಾದ ಜೀವನಿಗೆ ಜನಜನಿತವಾದ ಜನಾರ್ದನಸಭಾಜನವು(ಪೂಜೆ)ತನ್ನ ಕೆಳಗಿನವರಿಂದ ತಾನು ಪೂಜಿತನಾಗಲು ಅವಶ್ಯಕವೆಂದು ಭಾವ.

ತರತಮಭಾವದಿಂದ ಉತ್ತಮ, ಮಧ್ಯಮ, ಅಧಮಭಕ್ತರ ಪೂಜೆಯನ್ನು ಸ್ವೀಕರಿಸುವನು. ತಮೋಯೋಗ್ಯರ ಪೂಜೆಯನ್ನು ಮಾತ್ರ ಸ್ವೀಕರಿಸುವದಿಲ್ಲ. ಜಾತಿಯು ಪ್ರಯೋಜಕವಲ್ಲವೆಂದು ಹೇಳುವರು. **ಯತ್** ಯಾವಕಾರಣ **ಯಃ** ಯಾವನು **ನಿಜಲಾಭಪೂರ್ಣಃ** ತನ್ನ (ಪರಮಾತ್ಮನ) ಪ್ರಾಪ್ತಿಯಿಂದಲೇ **ಪೂರ್ಣಃ**

ತೃಪ್ತನೋ ಅಂದರೆ ಏಕಾಂತಭಕ್ತನು 'ಅರ್ಥೀ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಂ' ಎಂದಿರುವದರಿಂದ **ಮಾನಂ ಜನಾತ್** ನ ವಿದ್ಯತೇ ಆಜನಂ ದೋಷೋ ಯಸ್ಯ ಸಃ ಅನಂಜನಃ ದೋಷವಿಲ್ಲದವನು ಮಾ ಅನಂ ಜಂ ನಃ ಅನಂಜನನಲ್ಲದವನು ಎಂದರೆ ದೋಷಿಯಾದ **ಅವಿದುಷಃ** ಅಜ್ಞಾನಿಯಿಂದ **ಮಾನಂ** ಸತ್ಕಾರವನ್ನು **ಆತ್ಮನಃ** ತನಗಾಗಿ **ನ ವೃಣೀತೇ** ಸ್ವೀಕರಿಸುವದಿಲ್ಲ **ನಃ ಜನಃ** ಅವನು **ಯತ್** ಏನನ್ನು **ಭಗವತೇ ಮಾನಂ ವಿದಧೀತ** ಮರ್ಯಾದೆ ಮಾಡುವನೋ **ಅಯಂ ಪ್ರಭುಃ ಭಗವಾನ್ ಕರುಣಃ ಸನ್ ವೃಣೀತೇ** ದಯೆಯಿಂದ ಸ್ವೀಕರಿಸುವನಷ್ಟೇ ಅಥವಾ **ಅಭಗವತೇ** ಭಗವದ್ಭಿನ್ನರಾದ ಬ್ರಹ್ಮಾದಿ ದೇವಸಂಘಕ್ಕೆ **ಯಂ ಮಾನಂ ವಿದಧೀತ** ಏನು ಪೂಜೆ ಮಾಡುವನೋ **ತಂ** ಅದನ್ನು **ಅಯಂ ಪ್ರಭುಃ** ಸ್ವಾಮಿಯಾದ ಶ್ರೀಹರಿಯು **ಆತ್ಮನಃ** ತನಗೆ ಎಂದು **ಕರುಣಃ ವೃಣೀತೇ** ದಯೆಯಿಂದ ಸ್ವೀಕರಿಸುವನು ''ಯೇಽಪ್ಯನ್ಯದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ । ತೇಽಪಿ ಮಾಮೇವ'' ಎಂದು ಗೀತೆಯಲ್ಲಿ ಗೀತವಾಗಿದೆ.(ಹೇಳಿದೆ) **ತಚ್ಚಾತ್ಮನೇ** ಏಕಾಂತ ಭಕ್ತನಿಗೆನೇ ಮುಖಶ್ರೀಯು ಪ್ರತಿಮುಖಕ್ಕೆ ಆದಂತೆ.

**ಅಹಂ** ನಾನು **ಆತ್ಮನಃ** ನನ್ನ ದೇಹದ ವಿಷಯದಲ್ಲಿ **ನ ಪ್ರಭುಃ** ಕಾರ್ಯಗಳನ್ನು ಮಾಡಲು ಸಮರ್ಥನಲ್ಲ **ಅಯಂ ನಿಜಪೂರ್ಣಃ ಹರಿರೇವ ಪ್ರಭುಃ** ಶ್ರೀಹರಿಯೇ ಸಮರ್ಥನು ಎಂದು **ಅವಿದುಷಃ** ತಿಳಿಯದ ಅವಿದ್ವಾಂಸನಾದ ತನ್ನನ್ನು **ಅವಿದುಷಃ** ದಡ್ಡನೆಂದು ತಿಳಿಯದವನಿಂದ ಹಾಗೂ ಜಗತ್ತಿನಲ್ಲಿ ಪರಮಾತ್ಮನನ್ನು ತಿಳಿಸುವ ಉತ್ತಮರಿಂದ **ಮಾನಂ ವೃಣೀತೇ** ಸ್ವೀಕರಿಸುವನು **ಅಹಂ** ನಾನು **ನಿಜಲಾಭಪೂರ್ಣಃ** ನನ್ನ ಯೋಗ್ಯತಾನುಸಾರ ಆನಂದಪೂರ್ಣನಾಗುವೆನು ಎಂದು **ಯಃ** ಯಾವನು ಮಧ್ಯಮನು ಅಧಮನು **ಭಗವತೇ ಆತ್ಮನೇ** ಪರಮಾತ್ಮನಿಗೆ **ವಿದಧೀತ** ಸನ್ಮಾನ ಮಾಡುವನೋ ಅಂಥ **ಅವಿದುಷಃ** ಈಕ್ಷತ್ ಜ್ಞಾನವುಳ್ಳ ಜನರಿಂದ **ಮಾನಂ** ಅವರು ಮಾಡಿದ ಸತ್ಕಾರವನ್ನು **ಕರುಣೋ ವೃಣೀತೇ ಸೋಽಪಿ ಮಾನಃ** ಆ ಸತ್ಕಾರವು ತನ್ನ ಕಾಮಾನುಸಾರ **ಆತ್ಮನಃ** ತನಗೇನೆ **ಮುಖಶ್ರೀಃ** ಪ್ರತಿಮುಖದಂತೆ

**ಅವಿದುಷಃ** ಅಯಥಾರ್ಥಜ್ಞಾನಿಯಾದ **ಜನಾತ್** ತಾಮಸರಿಂದ **ಆತ್ಮನಃ** ಜೀವಸಮೂಹಕ್ಕೆ **ಅಯಂ ಪ್ರಭುಃ** ಸ್ವಾಮಿಯಾದ ನಾರಾಯಣನು **ಕರುಣಃ ಸನ್ನಪಿ** ಕರುಣೆಯಿಂದಲೂ **ತಂ ಮಾನಂ** ದಂಭಪೂರ್ವಕ ಸತ್ಕಾರವನ್ನು **ನ ವೃಣೀತೇ** ಸ್ವೀಕರಿಸುವದಿಲ್ಲವೋ **ಯಃ** ಯಾರು **ಮಾನಂ** ಹೆಸರಿಗೆ ಮಾತ್ರ,ವಸ್ತುತಃ ಸತ್ಕಾರವಿಲ್ಲದ **ಆತ್ಮನಃ ವಿದಧೀತ** ತನಗೆ ಮಾಡುವನು **ಯಥಾ** ಹೇಗೆ ಕನ್ನಡಿಯಂತೆ ಚಿದ್ರೂಪ ಉಪಾಧಿ ಇಲ್ಲದ್ದರಿಂದ **ಅಪ್ರತಿಮುಖಸ್ಯ** ಪ್ರತಿಬಿಂಬವಲ್ಲದ್ದಕ್ಕೆ **ಮುಖಶ್ರೀಃ ನೈವ**

ಮುಖಕ್ಕೆ ಶ್ರೀಬರಲಾರದು. ಅಚಿದ್ರೂಪ ಉಪಾಧಿವಶದಿಂದ ಆ ಪ್ರತಿಬಿಂಬಾನುಸಾರವಾಗಿ ಕಲ್ಯಾದಿದೋಷದಿಂದಾಗಿ ಶ್ರೀಹರಿಯ ಬಿಂಬನಾಗುವನು **ಪ್ರಭುಃ ಅಯಂ** ಶ್ರೀಹರಿಯು ಸ್ವಾಮಿಯು 'ಅಹಂ ಪ್ರಭು ಇತಿ ಮತಿಃ ವಚಸಾಂ ಪ್ರವಾಹೈಃ' ಎಂದು ಪ್ರಕೃತವಾದ ಮಾತಿನ ವೇಗವುಳ್ಳ **ಮಾನಂ** ಅಹಂಕಾರವನ್ನು **ಯೋ ಜನಃ ವಿದಧೀತ** ಮಾಡುವನೋ ಅವನೆಂಥಹವನು ಎಂದರೆ ಹೇಳುವರು **ನಿಜಲಾಭಪೂರ್ಣಃ** ಎಂದು. **ನಿಜಲಂ** ಜಲಭಿನ್ನವಾದ ಜಲಸದೃಶವಾದ ಮರುಮರೀಚಿಕಾದಂತೆ **ಆಭಾ ಯಸ್ಯ ತಸ್ಯ ಪ್ರತೀತಿಃ** ಸುಂದರವಾದ ವೈಷಯಿಕಸುಖದಿಂದಲೇ **ಪೂರ್ಣಃ** ಕೃತಾರ್ಥನೆಂದು ತಿಳಿದವನು ಅಂಥ **ಮಾನಂ ಜನಾತ್** ಸದೋಷಿಯಾದ **ಅವಿದುಷಃ** ಅನ್ಯಥಾಜ್ಞಾನಿಯ **ಕರುಣಃಸನ್** ಆಕ್ಷೇಪಕನಾಗಿ(ನಿಂದಿತನಾಗಿ) **ಮಾನಂ ವೃಣೀತೇ** ಸತ್ಕಾರಸ್ವೀಕರಿಸುವನು ಹಾಗಾದರೆ ಅವನ ಸೇವೆಗೆ ಪರ್ಯಾಯವಾದುದಾವದು ಎಂದರೆ ಹೇಳುವರು **ಅಭಗವತೇ ಆತ್ಮನೇ** ದರಿದ್ರನಾದ ದೈತ್ಯಾತ್ಮನಿಗಾದರೆ **ನ ವಿದಧಿತ** ಬರುವದಿಲ್ಲ ಅಂದರೆ **ಅಪ್ರತಿಮುಖಸ್ಯ ಯಥಾ ಮುಖಶ್ರೀಃ** ಪ್ರತಿಬಿಂಬವಾಗದ್ದಕ್ಕೆ ಮುಖಕಾಂತಿ ಬರದಿರುವಂತೆ ಅದರಂತೆ ಎಂದು ಭಾವ. ಹಾಗಾದರೆ ಭಗವಂತ ಬಿಂಬನಲ್ಲವೆ ಎಂದರೆ ಉತ್ತರ **ಯಥಾಮುಖಶ್ರೀಃ** ಮುಖವೆಂದು ಹೆಸರಷ್ಟೇ. ||೧೧||

ಶ್ರೀಹರಿಯು ಭಕ್ತಿಯಿಂದಲೇ ಸಂತುಷ್ಟನಾಗುವನು. ಸಂಪೂರ್ಣವಾಗಿ ಸ್ತುತಿಸಲು ಎಲ್ಲರೂ ಅಸಮರ್ಥರೇ. ಯೋಗ್ಯತಾನುಸಾರ ಸ್ತೋತ್ರ ಮಾಡುವ ನನಗೆ ನರಹರಿಯು ಕರುಣಿಸುವನು ಮುಂದೆ ನಿಶ್ಚಯವಾಗಿ ಮುಕ್ತಿಯನ್ನೂ ಕೊಡುವನು ಎಂದು ಕೆಲವು ಶ್ಲೋಕಗಳಿಂದ ಹೇಳುವರು-

**ತಸ್ಮಾದಹಂ ವಿಗತವಿಕ್ಲವ ಈಶ್ವರಸ್ಯ**
**ಸರ್ವಾತ್ಮನಾ ನ ಹಿ ಗೃಣಾಮಿ ಯಥಾಮನೀಷಮ್ ।**
**ನೀಚೋಽಜಯಾ ಗುಣವಿಸರ್ಗಮನುಪ್ರವಿಷ್ಟಃ**
**ಪೂಯೇತ ಯೇನ ಹಿ ಪೂಮಾನನುವರ್ಣಿತೇನ ||೧೨||**

**ತಸ್ಮಾತ್** ಯಾವ ಕಾರಣ ಭಕ್ತಿಪೂರ್ವಕವಾದ ಅಲ್ಪಸ್ತೋತ್ರದಿಂದಲೂ ನಾರಾಯಣನು ಪ್ರೀತನಾಗುವನೋ ಆದ್ದರಿಂದ ಮತ್ತು **ಅಹಂ** ನಾನು **ಈಶ್ವರಸ್ಯ** ಶ್ರೀಹರಿಯ ಸ್ವರೂಪವನ್ನು ಅವನು ಅಚಿಂತ್ಯ ಮಹಿಮನಾದ್ದರಿಂದ **ಸರ್ವಾತ್ಮನಾ** ಸಂಪೂರ್ಣವಾಗಿ ಸ್ತುತಿಸಲು **ನ ಹಿ ಶಕ್ತಃ** ಸಮರ್ಥನಲ್ಲವಾದರೂ **ಯಥಾಮನೀಷಂ** ನನ್ನ ಬುದ್ಧಿಗನುಸಾರವಾಗಿ **ವಿಗತಕ್ಲವಃ** ಚಾಪಲ್ಯರಹಿತನಾಗಿ ಶ್ರೀಹರಿಯು ಒಲಿಯುತ್ತಾನೋ ಇಲ್ಲವೋ ಎಂಬ ಶಂಕೆಯಿಲ್ಲದೆ **ಗೃಣಾಮಿ** ಸ್ತೋತ್ರಮಾಡುವೆನು.

ಸರ್ವಶ್ಚಾಸೌ ಆತ್ಮಾ ಚ ತೇನ **ಸರ್ವಾತ್ಮನಾ** ಎಲ್ಲ ಜೀವಸಮೂಹದಿಂದ **ಸರ್ವಾತ್ಮನಾ** ಸಾಕಲ್ಯೇನ ಈಶ್ವರಸ್ಯ ಅನುವರ್ಣನಂ ನ ಹಿ ಶಕ್ಯಂ ಎಂದು ಶೇಷ ಮಾಡಿದರೆ ಸಂಪೂರ್ಣ ವರ್ಣಿಸಲಾಗದು ಎಂದರ್ಥವಾಗುವದು. ಸಾಮಸ್ತ್ಯೇನ ಮಾಡದಿರುವ ಆ ಸ್ತೋತ್ರದಿಂದೇನು ಫಲ ? ಸ್ತುತಿಯು ಅಲ್ಪವಾದರೂ ಸ್ತೋತ್ರಮಾಡುವವನು ಪವಿತ್ರನಾಗುವನು ಎಂದು ಹೇಳುವನು **ಅಜಯಾ** ಪ್ರಕೃತಿಯಿಂದ **ಗುಣವಿಸರ್ಗಂ** ಸತ್ವಾದಿಗುಣಗಳ ಕಾರ್ಯವಾದ ಸಂಸಾರವನ್ನು **ಅನುಪ್ರವಿಷ್ಟಃ** ಪ್ರವೇಶಿಸಲ್ಪಟ್ಟ **ಪುಮಾನ್** ಅಧಿಕಾರಿಯು **ನೀಚಃ** ಅಸ್ವತಂತ್ರನು **ಯೇನ** ಯಾವ ಯಥಾಮತಿ ಗುಣಕೀರ್ತನದಿಂದ **ಪೂಯೇತ** ಶುದ್ಧನಾಗುವನು ಸಂಸಾರದಿಂದ ಮುಕ್ತನಾಗುವನು. ಆದ್ದರಿಂದ ಯಥಾಮತಿಸ್ತುತಿಸುವನು. ಕರುಣಾಮಯಿ ಆದ್ದರಿಂದಲೇ ಮುಕ್ತಿ ನೀಡುವನು ಎಂದು ಭಾವ. ।।೧೨।।

ಸ್ತುತಿಯನ್ನು ವಿವರಿಸುವರು-

**ಸರ್ವೇ ಹ್ಯಮೀ ವಿಧಿಕರಾಸ್ತವ ಸತ್ವಧಾಮ್ನೋ**
**ಬ್ರಹ್ಮಾದಯೋ ವಯಮಿವೇಶ ನ ಚೋದ್ವಿಜಂತಃ ।**
**ಕ್ಷೇಮಾಯ ಭೂತಯ ಉತಾತ್ಮ ಸುಖಾಯ ಚಾಸ್ಯ**
**ವಿಕ್ರೀಡಿತಂ ಭಗವತೋ ರುಚಿರಾವತಾರೈಃ ।।೧೩।।**

**ಹೇ ಈಶ** ನಿಯಾಮಕನೇ **ಉದ್ವಿಜಂತಃ** ಅವತಾರದಿಂದ ಹೆದರಿದ **ವಯಂ** ನಾವೂ **ವಯಮಿವ** ನಮ್ಮಂತೆ **ನ ಉದ್ವಿಜಂತಃ** ಹೆದರದಿರುವ **ಅಮೀ ಬ್ರಹ್ಮಾದಯಃ ಚ** ಈ ಬ್ರಹ್ಮಾದಿದೇವತೆಗಳು **ಸರ್ವೇ** ಎಲ್ಲರೂ **ಸತ್ವಧಾಮ್ನಃ** ಜ್ಞಾನಾನಂದಪೂರ್ಣನಾದ **ತವ** ನಿನ್ನ **ವಿಧಿಕರಾಃ** ಆಜ್ಞಾಪಾಲಕರು **ಹಿ** ಪ್ರಮಾಣ ಸಿದ್ಧವು. ಅವತಾರ ಪ್ರಯೋಜನ ತಿಳಿಸುವರು. **ಅಸ್ಯ ಭಗವತಃ** ಈ ಭಗವಂತನ **ರುಚಿರಾವತಾರೈಃ** ಮನೋಹರಗಳಾದ ಅವತಾರಗಳಿಂದ **ವಿಕ್ರೀಡಿತಂ** ಕ್ರೀಡನವು **ಅಸ್ಯ** ಜಗತ್ತಿನ **ಕ್ಷೇಮಾಯ** ಬ್ರಹ್ಮಾದಿಗಳ ರಕ್ಷಣೆಗಾಗಿ **ಭೂತಯೇ** ಲಕ್ಷ್ಮೀದೇವಿಗೆ ಉತ್ಕರ್ಷಕ್ಕಾಗಿ ಮಿಕ್ಕವರ ಸಂಪತ್ತಿಗಾಗಿ **ಉತ** ಮತ್ತು **ಆತ್ಮಸುಖಾಯ** ಸ್ವರೂಪ ಸುಖವೆಂಬ ಮೋಕ್ಷಕ್ಕಾಗಿ ಅಥವಾ ಪರಮಾತ್ಮನ ಪೂರ್ಣಾನಂದತ್ವ ತಿಳಿಸುವದಕ್ಕಾಗಿ 'ಸೋಯಂ ವಿಹಾರ ಇಹ ಮೇ ತನುಭೃತ್ಸ್ವಭಾವಸಂಭೂತಯೇ ಭವತಿ ಭೂತಿಕೃದೇವ ಭೂತ್ಯಾಃ' ಎಂದು ಮ.ಭಾ.ತಾ.ನಿರ್ಣಯದಲ್ಲಿದೆ. **ಕ್ಷೇಮಾಯ** ಪ್ರಾಪ್ತಪರಿಪಾಲನೆಗಾಗಿ **ಭೂತಯೇ** ಐಶ್ವರ್ಯಬರುವದಕ್ಕಾಗಿ **ಆತ್ಮಸುಖಾಯ** ಸ್ವರೂಪಸುಖಕ್ಕಾಗಿ ಹೀಗೂ ಅರ್ಥ. **ಅಸ್ಯ ಭಗವತಃ ಸತ್ವಧಾಮ್ನಃ** ಈ ಸಮಗ್ರ ಐಶ್ವರ್ಯಶಾಲಿಯಾದ ಜ್ಞಾನಾನಂದಾತ್ಮಕನಾದ ಶ್ರೀಹರಿಗೆ **ವಯಂ** ಅಸುರ ಜಾತಿಯ ನಾವು **ಉದ್ವಿಜಂತಃ** ಭಯಗ್ರಸ್ತರು ಏಕೆಂದರೆ

ಯಾವಾಗಲೂ ದೈತ್ಯಸಂಹಾರಕ್ಕೆಂದೇ ನೀನು ಅವತಾರ ಮಾಡುವಿಯಾದ್ದರಿಂದ ದೇವತೆಗಳ ಭೂದೇವತೆಗಳ(ಬ್ರಾಹ್ಮಣರ)ರಕ್ಷಣಾರ್ಥವೇ ಅವತಾರವಾದ್ದರಿಂದ ಅವರು(ದೇವತೆಗಳು)ನಮ್ಮಂತೆ ಆಜ್ಞಾಧಾರಕರಾದರೂ(**ವಿಧಿಕರಾ ಅಪಿ) ಬ್ರಹ್ಮಾದಯ ನ ಚ ಉದ್ವಿಜಂತಃ** ಬ್ರಹ್ಮಾದಿಗಳು ಹೆದರುವದಿಲ್ಲವೆಂದಾದರೂ ಅನ್ವಯ ಮಾಡಬಹುದು.

**ಹೇ ಇವೇಶನಚ** ಮನಃಪೂರ್ವಕ ಪೂಜಿಸಲ್ಪಡುವವನೇ ಎಂದು ಸಂಭೋಧನ. ಈ ಎಂದರೆ ಕಾಮ ಅವನಿಂದ ಅಭಿನ್ನವಾದ ಮನಸ್ಸು ಅದರ **ವೇಶನ** ನಿವೇಶ ಅದರಿಂದ ಚಾಯ್ಯತೇ ಪೂಜ್ಯತೇ ಇತಿ ಚಃ ತತ್ಸಂಬುದ್ಧಿಃ ಇವೇಶನಚ 'ಇಷ್ಟದಾನಾತ್ ತಥೇಂದವ' ಎಂಬ ಋಗ್ಭಾಷ್ಯ ಟೀಕಾ ಉದಾಹರಣ ಮಾಡಿ 'ತಥಾ ವರ್ಚಃ' ಎಂಬ ಛಾಂದೋಗ್ಯಭಾಷ್ಯವೇದೇಶಿಯ ಉದಾಹರಣದ ಜೊತೆಗೆ ಪದದ್ವಯ ವಿವರಣ ಮಾಡಿದ್ದನ್ನು ಅನುಸಂಧಾನ ಮಾಡಬೇಕು. ಅಂದರೆ ಪ್ರಲಯಕಾಲದಲ್ಲಿ ಈ ಬ್ರಹ್ಮಾದಿಗಳು ನಾವು ಎಲ್ಲ ಭೀತರಾಗಿ ಆಜ್ಞಾಧಾರಕರಾದರೂ ಈಗ ನರಸಿಂಹಾದಿ ಮನೋಹರಾವತಾರಗಳಿಂದ ಜಗತ್ತಿನ ಕ್ಷೇಮಾದಿಗಳನ್ನು ಕೊಡುವದಕ್ಕಾಗಿ ವ್ಯಾಪಾರ ಮಾಡುವದರಿಂದ ಹೆದರುವದರಿಂದ ಹೊರಬಂದವರಾಗಿರುವೆವು ಅಂದರೆ ಹೆದರುವದಿಲ್ಲವೆಂದರ್ಥ ಮಾಡಿರುವರು. ||೧೩||

ವಿಶೇಷ :- 'ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿದರ್ಮಣಿ'ಎಂಬ ಶ್ರುತಿಯಿದೆ. ಈ ಬ್ರಹ್ಮಾದಿಗಳು ಪ್ರಧಾನಭಕ್ತರಾದ್ದರಿಂದ ಆತ್ಮರಕ್ಷಣೆಯ ಭಯವಿಲ್ಲದವರು. ತಾವು (ಪ್ರಹ್ಲಾದರು) ಸಾಮಾನ್ಯರಾದ್ದರಿಂದ ಆತ್ಮರಕ್ಷಣೆಯ ಭಯವುಳ್ಳವರು ಎಂಬ ವಿಶೇಷವನ್ನು ತಿಳಿಸಿರುವರು. ಬ್ರಹ್ಮಾದಿಗಳಿಗೆ ಶ್ರೀಹರಿಯ ಸರ್ವವ್ಯಾಪ್ತತ್ವ ಜ್ಞಾನವಿರುವದು ಆದ್ದರಿಂದಲೇ ತಮ್ಮ ರಕ್ಷಣೆ ಇಚ್ಛೆಯಿಲ್ಲ 'ತತೋ ನ ವಿಜುಗುಪ್ಸತೇ' ಎಂದು ಶ್ರುತಿಯಿದೆ. ಮತ್ತು ಇದು ಪ್ರಲಯ ಕಾಲದವಲ್ಲದ್ದರಿಂದ ಈ ಅವತಾರವು ಸರ್ವಸಂಹಾರಕವಲ್ಲದ್ದರಿಂದ ಕೇವಲ ದೈತ್ಯ ಸಂಹಾರಕವೆಂಬ ಜ್ಞಾನವಿರುವದರಿಂದ ಬ್ರಹ್ಮಾದಿಗಳಿಗೆ ಭಯವಿಲ್ಲ. ನನ್ನನ್ನು ಮುಂದೆ ಮಾಡಲು ದೂರ ನಿಂತಿರುವಷ್ಟೇ ಎಂದು ಭಾವ.

ಈ ಅವತಾರದಿಂದ ರಕ್ಷಣೆ ಮಾಡುವ ನೀನು ದಯೆಯಿಂದ ಈಗ ಇಷ್ಟು ಕಾರ್ಯ ಮಾಡಬೇಕೆಂದು ಪ್ರಾರ್ಥಿಸುವನು-

**ತದ್ ಯಚ್ಛ ಮನ್ಯುಮಸುರಶ್ಚ ಹತಸ್ತ್ವಯಾದ್ಯ**
**ಮೋದೇತ ಸಾಧುರಪಿ ವೃಶ್ಚಿಕಸರ್ಪಹತ್ಯಾ ।**

**ಲೋಕಾಶ್ಚ ನಿರ್ವೃತಿಮಿತಾಃ *ಪ್ರತಿಯಾಂತು ಸರ್ವೇ**
**ರೂಪಂ ನೃಸಿಂಹ *ವಿಭವಾಯ ಜನಾ ಸ್ಮರಂತಿ ॥೧೪॥**

**ಯತಃ** ಯಾವಕಾರಣ **ಅದ್ಯ** ಇಂದು **ತ್ವಯಾ** ನಿನ್ನಿಂದ **ಅಯಂ ಅಸುರಃ** ಈ ನನ್ನ ತಂದೆಯಾದ ಹಿರಣ್ಯಕಶಿಪುವು **ಹತಃ ಚ** ಸಂಹೃತನಾದನು ಚಕಾರದಿಂದ ಅವನ ಅನುಚರರು ಯುದ್ಧದಲ್ಲಿ **ಹತಾಃ** ಸಂಹೃತರಾದರು **ತತ್** ಆದ್ದರಿಂದ **ಮನ್ಯುಂ** ಕೋಪವನ್ನು **ಯಚ್ಛ** ನಿಯಚ್ಛ ಉಪಸಂಹರಿಸು '**ಮನ್ಯುಃ ಕೋಪೇ ಕ್ರತೌ ಯುದ್ಧೇ**' ಎಂದು ಅಭಿಧಾನವಿರುವದರಿಂದ ಪ್ರತಿಭಟನೆ ಇಲ್ಲದಿರುವದರಿಂದ ಯುದ್ಧವನ್ನು ಮುಗಿಸು ಎಂದಾದರೂ ಅರ್ಥ. ಅಥವಾ ನಿನ್ನ ಜ್ಞಾನವನ್ನು ಕೊಡು ಎಂದರ್ಥ. ನಿನ್ನ ಪೂಜಾರೂಪಯಜ್ಞವನ್ನು ಮಾಡುವಂತೆ ಅನುಗ್ರಹಿಸು ಎಂದಾದರೂ ಅರ್ಥ ಮಾಡಬಹುದು.

೨. ಇಷ್ಟೇ ಸಾಧುಗಳ ವ್ಯಾಪಾರವಾದ್ದರಿಂದ ತಂದೆಯ ಸಂಹಾರದಿಂದ ನನಗೆ ಸ್ವಲ್ಪವೂ ದುಃಖವಾಗಿಲ್ಲವೆಂದು ಪರೋಕ್ಷವಾಗಿ ಹೇಳುವನು(ಸಜ್ಜನರ ಆನಂದಾಪೇಕ್ಷೆಯು ಭಗವತ್ಪ್ರೀತಿಕರ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ) **ಸಾಧುಃ ಅಪಿ** ಸ್ವಯಂ ಅಹಿಂಸಾ ಸ್ವಭಾವದವನಾದ ಸಜ್ಜನನೂ ಸಹ ಅಥವಾ ಮತ್ತೊಬ್ಬರ ಕೊಲ್ಲುವುದನ್ನು ಕೇಳಲೂ ಸಹ ಆಸಕ್ತಿಯಿಲ್ಲದವನು ಸಹ **ವೃಶ್ಚಿಕಸರ್ಪಹತ್ಯಾ** ಅಪರಾಧವಿಲ್ಲದೆ ಇತರರಿಗೆ ತೊಂದರೆ ಕೊಡುವ ಹಿಂಸಾಸ್ವಭಾವದ ಚೇಳು ಹಾವುಗಳನ್ನು ಬೇರೆಯವರು ಕೊಂದಾಗ ಮುಂದೆ ಆಗುವ ಜನರ ಪೀಡೆ ತಪ್ಪಿತು ಎಂದು **ಮೋದೇತ** ಸಂತೋಷ ಪಡುವನು. ಇದರಿಂದ ನನ್ನ ತಂದೆಯು ಹಾವು ಚೇಳುಗಳಂತೆ ತೊಂದರೆ ಕೊಡುವ ಅಭಿಪ್ರಾಯದವನು. ಆದ್ದರಿಂದ ಅವನನ್ನು ಕೊಂದುದು ಯುಕ್ತವೆಂದು ಸಂತೋಷಪಡುವೆನು ಎಂದು ಧ್ವನಿತವಾಗುವದು. **ಲೋಕಾಃ** ಪ್ರಜೆಗಳು **ನಿರ್ವೃತಿಂ ಇತಾಃ** ಆನಂದವನ್ನು ಹೊಂದಿರುವವರು ಪ್ರಸನ್ನನಾದ ನಿನ್ನ ಅನುಜ್ಞೆಯಿಂದ ಬಂದ **ಸರ್ವೇ** ಎಲ್ಲ ದೇವತೆಗಳು **ಪ್ರತಿಯಾಂತು** ತಿರುಗಿ ಹೋಗಲಿ **ಜನಾಃ** ಜನರು **ವಿಭವಾಯ** ಪಾಪ ನಿವಾರಣೆಗಾಗಿ **ತವ ರೂಪಂ ಸ್ಮರಂತಿ** ಸ್ಮರಿಸುವರು ಸ್ಮರಿಸಲಿ. ಕೋಪಕ್ಕೆ ಸಾಕ್ಷಾತ್ ಪ್ರಯೋಜನ ಅಸುರ ಸಂಹಾರ. ಪರಂಪರಾ ಪ್ರಯೋಜನ ಸಜ್ಜನ ಸಂತೋಷ, ಜನರ ಆನಂದ, ಎಲ್ಲವೂ ಆಗಿವೆ ಕಾರಣ ಸಿಟ್ಟು ಸಾಕು.

೩'ಸಾಧುರಪಿ ವೃಶ್ಚಿಕಸರ್ಪಹತ್ಯಾ' ಎಂಬುದು ಒಂದೇ ಪದ. ರಪಃ(ಮಾತು)ಸಃ ಅಸ್ಯ ಅಸ್ತೀತಿ ರಪೀ 'ರಪ ಲಪ ವ್ಯಕ್ತಾಯಾಂ ವಾಚಿ ಎಂದು ಧಾತುವಿದೆ' ಇನಿ

* ಪ್ರತಿಯಂತಿ ಪಾಠಾಂತರ *ವಿಭಯಾಮ ಪಾಠಾಂತರ

ಪ್ರತ್ಯಯದ ಅರ್ಥ ನಿಂದಾ(ಭೂಮನಿಂದಾಪ್ರಶಂಸಾಸು ಭವಂತಿ ಮತುಬಾದಯಃ ಎಂದಿದೆ) ರಪೀ ಎಂದರೆ ಸಜ್ಜನರ ನಿಂದೆ ಮಾಡುವವನೆಂದರ್ಥ. ಈಶ್ವರನಿಲ್ಲ ಮುಂತಾಗಿ ಶಾಸನ ಮಾತುಗಳಾಡುತ್ತಿದ್ದವನು. ವೃಶ್ಚಿಕಶಬ್ದವು ಉಪಲಕ್ಷಣಯಾ ಸರ್ಪಾದಿಪರವಾಗಿದೆ. **ವೃಶ್ಚಿಕವತ್** ಚೇಳು ಹಾವುಗಳಂತೆ **ಸರ್ಪತೀತಿ** ತಾನಾಗಿಯೇ ಉಪದ್ರವ ಕೊಡಲು ಬರುವವನೆಂದರ್ಥ. ಸಾಧುರಪೀ ಚಾಸೌ ವೃಶ್ಚಿಕಸರ್ಪಃ ತಸ್ಯ ಹತಿಃ ತಯಾ ಎಂದು ಆವೃತ್ತಿ ಮಾಡಿ ಅನ್ವಯ ಮಾಡುವದು. ಸಾಧುಗಳ ನಿಂದಾವುಳ್ಳ ಚೇಳು ಹಾವುಗಳಂತೆ ತಾನೇ ಉಪದ್ರವ ಕೊಡಲು ಹೋಗುವ ಅಸುರನ ಹತ್ಯೆಯಿಂದ ಎಂದರ್ಥ. **ಅಹಮಪಿ** ಮಗನಾದ ನಾನೂ ಸಂತೋಷ ಪಡುವೆ ಎಂದರ್ಥ. **ಅತಸಾಧುಃ** ಅತಾಃ ಸತತಂ ಗಮಿತಾಃ ನಾಶಿತಾಃ ಸಾಧವಃ ಯೇನ ಸಃ ಅತಸಾಧುಃ ಅಸುರಃ ಹತಃ ಸಜ್ಜನರನ್ನು ಸತತವಾಗಿ ನಾಶಮಾಡುವ **ಅಸುರಃ ಹತಃ** ಸಜ್ಜನರನ್ನು ಸತತವಾಗಿ ನಾಶ ಮಾಡುವ ಅಸುರನು ಕೊಲ್ಲಲ್ಪಟ್ಟನೆಂದು ಸಂತೋಷಿಸುವೆನೆಂದರ್ಥ. ಹಾಗಾದರೆ ಪುನಃ ಪುನಃ ಬರುವ ದುಷ್ಟಜನರ ಹನನದಿಂದ ಸಜ್ಜನರಿಗೆ ಸಂತೋಷವಾಗುವದು ಹನನವಾದರೂ ಕೋಪವಿಲ್ಲದೇ ಆಗುವದಿಲ್ಲ. ಆದ್ದರಿಂದ ಅದಿರುವದೇ ಒಳ್ಳೆಯದು ಎಂದು ಅರ್ಥಾತ್ ಹೇಳಿದಂತಾಯಿತಲ್ಲವೇ? ಎಂದರೆ ಉತ್ತರಿಸುವನು. **ಲೋಕಾಶ್ಚ ನಿರ್ವೃತಿಂ ಇತಾಃ** ಜನರು ಪರಮಾನಂದ ಹೊಂದಿರುವರು. ಎಲ್ಲರೂ ತಮ್ಮ ಮನೆಗೆ ಹೋಗಲಿ ಎಂದರೆ ಮುಂದೆ ತೊಂದರೆ ಕೊಡುವವನಿಲ್ಲದ್ದರಿಂದ ಕೋಪ ಸಂಹರಣ ಮಾಡಿದನೆಂದರ್ಥ. ಹೋಗೇನು ಮಾಡುವರು ಎಂದರೆ ಪ್ರತಿಬಂಧಕವಿಲ್ಲದ್ದರಿಂದ ಅವರ ಅಭಿರುಚಿಯಂತೆ ಮಾಡುವರೆಂದು ಹೇಳುವರು. **ಹೇ ನೃಸಿಂಹ** ಆಕಾರ ಅನುಗುಣನಾಮದಿಂದ ಸಂಭೋಧನೆ ಮಾಡಿರುವನು **ವಿಭವಾಯ** ಮುಕ್ತಿಗಾಗಿ 'ವಿಭಯಾಯ' ಎಂಬ ಪಾಠವೂ ಅಭಯದವೇ. ಸಂಸಾರ ಭಯ ಪರಿಹಾರಕ್ಕೆಂದರ್ಥ. **ರೂಪಂ ಸ್ಮರಂತಿ ಗತಾ ಜನಾಃ** ಇಲ್ಲಿಂದ ಹೋದ ಜನರು ನಿನ್ನ ರೂಪವನ್ನು ಸ್ಮರಿಸುವರು. 'ನೃಸಿಂಹಾದಿಕಮನ್ಯಚ್ಚ ದುರಿತಾದಿನಿವೃತ್ತಯೇ' ಎಂದಿದೆ. 'ಅನ್ಯನ್ನೃಸಿಂಹಾದಿಕಮಿತಿ ಸಾಮಾನಾಧಿಕರಣ್ಯಂ' ಎಂದು ಟೀಕೆಯಲ್ಲಿ ಹೇಳಿದ್ದರಿಂದ ಪ್ರಮಾಣದಲ್ಲಿ ಅನತ್ ನೃಸಿಂಹಾದಿಕಂ ಎಂದು ಅನ್ವಯ ತಿಳಿಯಬೇಕು. ಪ್ರತಿಯಂತಿ ಎಂಬ ಪಾಠದಲ್ಲಿ ಕೋಪಶಮನ ಪ್ರತೀಕ್ಷಿಸುವರೆಂದರ್ಥ ।।೧೪।।

೧.ನಿನಗಾಗಿಯೇ ಈ ಅವತಾರ ಇದರಿಂದ ನೀನು ಹೆದರುವಿಯಾದರೆ ಈ ರೂಪವನ್ನು ಮರೆ ಮಾಡುವೆನು ಎಂದರೆ ಹೇಳುವನು.(ನಾಹಂ ಭಿಭೇಮಿ ಎಂದು)-

೨.ನೀನು ದಯಾಲುವಾದುದರಿಂದ ನಿನ್ನ ರೂಪವೂ ಭೀಕರವಲ್ಲದಿದ್ದರೂ ಅಪರಿಹಾರ್ಯವಾದ ಮತ್ತೊಂದು ಭಯವಿದೆ ಸಂಸಾರ ಭಯ. ಅದರ ಪರಿಹಾರ ಕಾರಣವನ್ನು ಪ್ರಾರ್ಥಿಸುವೆನು ಎಂದು ಹೇಳುವನು ನಾಹಂ ಎಂದು-

೩. ನಿನ್ನ ಕೋಪಾಕುಲರೂಪವನ್ನು ನೋಡಿ ಹೆದರಿದ ಜನರಿಗೆ ನಿನ್ನ ಸ್ಮರಣವನ್ನೂ ಮಾಡಲಾಗದು. ಕಾರಣ ಕೋಪ ಶಮನ ಮಾಡೆಂದು ಹೇಳಿದೆನು. ಆದರೆ ನಿನ್ನ ತತ್ತ್ವವನ್ನು ಬಲ್ಲ ನನಗೆ ಭಯಕಾರಣವಲ್ಲ ಕಿಂತು ನನಗೆ ಭಯವಿರುವದು ಸಂಸಾರಚಕ್ರದಿಂದ ಎಂದು ಹೇಳುವನು-

೪. ನೀನೇ ಹೆದರಿ ಕೋಪಶಾಂತಿಯನ್ನು ಪ್ರಾರ್ಥಿಸುವಿ ಏನು? ಎಂದರೆ ಭಯ ಜನಕ ಅವಯವಗಳಾವವು ಎಂದರೆ ಆ ರೂಪವನ್ನೂ ಮತ್ತು ವಿಶಿಷ್ಯ ಅಭಯಂಕರವಾದ ಕರವನ್ನು ನನ್ನ ತಲೆಯ ಮೇಲೆ ಇಟ್ಟಿರುವದರಿಂದ ನಾನೇನು ಹೆದರುವದಿಲ್ಲ. ಜನರು ಹೆದರುವರು ಎಂದು ಹೇಳುವನು. ಹೀಗೆ ನಾಲ್ಕು ಅವತಾರಿಕೆ ಇವೆ.

**ನಾಹಂ ಬಿಭೇಮ್ಯಜಿತ ತೇಽ*ತಿಭಯಾನಕಾಸ್ಯ**
**ಜಿಹ್ವಾಗ್ನಿನೇತ್ರಭ್ರುಕುಟೀರಭಸೋಗ್ರದಂಷ್ಟ್ರಾತ್ ।**
**ಆಂತಸ್ರಜಃಕ್ಷತಜಕೇಸರಶಂಕುಕರ್ಣಾ-**
**ನ್ನಿರ್ಹ್ರಾದಭೀತದಿಗಿಭಾದರಿಭಿನ್ನಖಾಗ್ರಾತ್ ॥೧೫॥**

**ಹೇ ಅಜಿತ** ಯಾರಿಂದಲೂ ಗೆಲ್ಲಲಾಗದ ಸರ್ವೋತ್ತಮನೇ **ಅಹಂ** ನಾನು **ತೇ** ನಿನ್ನ **ಅತಿಭಯಾನಕ** ಅತ್ಯಂತ ಭಯಾನಕವಾದ **ಆಸ್ಯ** ಮುಖ, ಬಾಯಿ (ಭಯಾನಕಸ್ಯ ಎಂಬ ಪಾಠದಲ್ಲಿ ತೇ ಎಂಬುದಕ್ಕೆ ವಿಶೇಷಣ)**ಜಿಹ್ವಾಗ್ನಿ** ವಕ್ರಳಾದ ಬೆಂಕಿಯಂತಿರುವ **ನೇತ್ರ** ಕಣ್ಣುಗಳು **ಜಿಹ್ಮ** ವಕ್ರವಾದ **ಭ್ರುಕುಟಿ** ಹುಬ್ಬುಗಳ **ರಭಸ** ಅಟ್ಟಹಾಸವುಳ್ಳ **ಉಗ್ರ** ಕ್ರೂರವಾದ **ದಂಷ್ಟ್ರಾತ್** ಕೋರೆಹಲ್ಲುಗಳುಳ್ಳ **ಆಂತಸ್ರಜಃ** ಕರಳುಗಳ ಹಾರವುಳ್ಳ **ಕ್ಷತಜ** ರಕ್ತದಿಂದ ಸಿಕ್ತವಾದ **ಕೇಶರ** ಕುತ್ತಿಗೆಯ ಕೂದಲುಗಳುಳ್ಳ **ಶಂಕುಕರ್ಣಾತ್** ಘೂಟದಂತೆ ನೇರವಾಗಿ ನಿಂತ ಕಿವಿಗಳುಳ್ಳ (ನಿಗರಿನಿಂತ) **ನಿರ್ಹ್ರಾದ** ಗರ್ಜನೆಯಿಂದ **ಭೀತ** ಹೆದರಿದ **ದಿಗಿಭಾತ್** ದಿಗ್ಗಜಗಳುಳ್ಳ **ಅರಿ** ಶತ್ರುವಾದ ನನ್ನ ತಂದೆಯನ್ನು **ಭಿತ್** ಭೇದಿಸುವ **ನಖಾಗ್ರಾಣಿ** ಉಗುರುಗಳ ಕೊನೆಗಳುಳ್ಳ (ಬಿಂದಂತೀತಿ ಭಿಂದಿ ನಖಾಗ್ರಾಣಿ ಯಸ್ಯ) **ರೂಪಾತ್** ರೂಪದಿಂದ (ಆಕಾರದಿಂದ **ನ ಬಿಭೇಮಿ** ಹೆದರುವದಿಲ್ಲ.) ॥೧೫॥

---

* ಅತಿಭಯಾನಕಸ್ಯ ಪಾಠಾಂತರ

**ತ್ರಸ್ತೋಽಸ್ಮ್ಯಹಂ ಕೃಪಣ ವತ್ಸಲ ದುಃಸಹೋಗ್ರ-**
**ಸಂಸಾರಚಕ್ರಕದನಾತ್ ಕೃಶತಾಂ ಪ್ರಣೀತಃ ।**
**ಬದ್ಧಃ ಸ್ವಕರ್ಮಭಿರುಶತ್ತಮ ತೇಽಙ್ಘ್ರಿಮೂಲಂ**
**ಭೀತಾಪವರ್ಗಮರಣಂ ಸಮಿಯಾಂ ಕದಾನು ॥೧೬॥**

**ಕಿಂತು** ಆದರೆ **ಅಹಂ** ನಾನು **ಹೇ ಕೃಪಣವತ್ಸಲ** ದೀನರಲ್ಲಿ ದಯೆಯುಳ್ಳ ಶ್ರೀಹರಿಯೇ **ದುಸ್ಸಹೋಗ್ರಸಂಸಾರಚಕ್ರಕದನಾತ್** ದುಃಖದಿಂದ ಸಹಿಸಲು ಶಕ್ಯವಾದ ಅಥವಾ ಸಹಿಸಲಾಗದ ಕ್ರೂರವಾದ ಸಂಸಾರಚಕ್ರದೊಡನೆ ಹೋರಾಡುವದರಿಂದ (ಹುಟ್ಟು ಸಾವುಗಳ ಹಿಂಸೆಯಿಂದ)**ಕೃಶತಾಂ ಪ್ರಣೀತಃ** ಕಾರ್ಶ್ಯವನ್ನು ಹೊಂದಿಸಲ್ಪಟ್ಟ ಅಂದರೆ ಕೃಶನಾಗಿ **ಸ್ವಕರ್ಮಭಿಃ** ಆಗ ನಾವು ಮಾಡಿದ ಕರ್ಮಗಳಿಂದ **ಬದ್ಧಃ** ಕಟ್ಟಲ್ಪಟ್ಟವನಾಗಿ **ತ್ರಸ್ತಃ** ಸಂಸಾರಚಕ್ರದಿಂದ ಭೀತನಾದ **ಅಸ್ಮಿ** ಆಗಿದ್ದೇನೆ **ಹೇ ಉಶತ್ತಮ** ಸತ್ಯಕಾಮನೇ **ಭೀತಾಪವರ್ಗಂ** ಭಯಗೊಂಡವರಿಗೆ ಭಯಜನಕ ಸಂಸಾರದಿಂದ ಮೋಚನ ಮಾಡುವ **ತೇ** ನಿನ್ನ **ಅಂಘ್ರಿಮೂಲಂ** ಪಾದ ಮೂಲವನ್ನು **ಅರಣಂ** ಶರಣವಾಗಿ **ಕದಾನು** ಯಾವಾಗ **ಸಮಿಯಾಂ** ಭಕ್ತಿಯಿಂದ ಹೊಂದುವೆನು ಅಥವಾ ಹೇಗೆ ಹೊಂದುವೆನೋ ಹಾಗೆ ನಿನ್ನ ದಾಸ್ಯಮಾರ್ಗವನ್ನು ತಿಳಿಸು ಎಂದಾದರೂ ಅನ್ವಯ. ಇದರಿಂದ ಮುಕ್ತಿಯೋಗ್ಯರಿಗೆ ಇರಬೇಕಾದ ಸಂಸಾರ ಭೀತಿಯೂ ಅದರ ಪರಿಹಾರಕ್ಕಾಗಿ ಶ್ರೀಹರಿಯ ಶರಣಾಗತಿ ಇಚ್ಛೆಯೂ ಇದೆ ಎಂದಾಯಿತು. ಉಶತ್ತಮ ಎಂಬಲ್ಲಿ ವಶಃ ಕಾಂತೌ ಧಾತು ಕಾಂತಿಃ ಇಚ್ಛಾ ಉಶಂತಿ ಇಚ್ಛಂತಿ ಇತಿ ಉಶಂತಃ ತೇಷು ಶ್ರೇಷ್ಠಃ ಉಶತ್ತಮಃ ತಮಬರ್ಥವಾದ ಅತಿಶಯನವು ಅವಧ್ಯತ್ವ ರೂಪವಾದುದು. ವಿಶೇಷಣವಾದ ಉಶನದಲ್ಲಿ ಅನ್ವಯಿಸುವದು. ಅಂದರೆ ಇಚ್ಛಿಸುವವರಲ್ಲಿ ಶ್ರೇಷ್ಠನೆಂದರೆ ಶ್ರೇಷ್ಠವಾದ ಇಚ್ಛೆಯುಳ್ಳ ಅಂದರೆ (ವ್ಯರ್ಥವಲ್ಲದ ಇಚ್ಛೆ ಉಳ್ಳವನೆಂದರ್ಥ) ತತ್ ಸಂಬುದ್ಧಿಃ ಉಶತ್ತಮ. ಅಥವಾ 'ವಾಚೇ ಬಭೂವ ರುಶತಿ'ಎಂಬ ಋಗ್ಭಾಷ್ಯ ಟೀಕೆಯಲ್ಲಿ ಉಶತಿಃ ಉಶಂತ್ಯಃ ಪ್ರಕಾಶಮಾನಾಃ ಎಂದು ಹೇಳಿರುವದರಿಂದ ಪ್ರಕಾಶವತ್ತಮನೇ ಎಂದಾದರೂ ಅರ್ಥ.

ಅನೇಕ ಬಗೆಯ ದುಃಖದಿಂದ ಕೂಡಿದ ಹೀನಜನ್ಮ ಬೇಡ. ಆದರೆ ಸುಖದಾಯಕವಾದ ದೇವತಾಜನ್ಮವಿರಲಿ ಹೆದರುವಿಕೆ ಏಕೆ ಎಂದರೆ ಅದೂ ಕೂಡ ತಂದೆಯ ಸಾಮರ್ಥ್ಯದಿಂದ ನಷ್ಟವಾದ ಸಂಪತ್ ಉಳ್ಳದ್ದಾಗಿದೆ ಎಂಬುದು ಶೀಘ್ರದಲ್ಲಿ ಎಲ್ಲರಿಗೂ ಅನುಭವವಿದೆ. ಆದ್ದರಿಂದ ಭಗವಂತನೇ! ಕರುಣೆಯಿಂದ ನಾನು ಬೇಡುವ ಇದೊಂದನ್ನು ಕೊಡು ಎಂದು ಹೇಳುವನು-

**ಯಸ್ಮಾತ್ ಪ್ರಿಯಾಪ್ರಿಯವಿಯೋಗ ಸುಯೋಗ ಜನ್ಮ-**
**ಶೋಕಾಗ್ನಿನಾ ಸಕಲಯೋನಿಷು ದಹ್ಯಮಾನಃ ।**
**ದುಃಖೌಷಧಂ ತದಪಿ ದುಃಖಮತದ್ಧಿಯಾಽಹಂ**
**ಭೂಮನ್ ಭ್ರಮಾಮಿ ವದ ಮೇ ತವ ದಾಸ್ಯಯೋಗಮ್ ॥೧೭॥**

**ಹೇ ಭೂಮನ್** ಸುಖಪೂರ್ಣನೇ **ಸಕಲಯೋನಿಷು** ಎಲ್ಲ ಜಾತಿಗಳಲ್ಲಿಯೂ ಅಥವಾ **ಸಕಲಾಃ (ವಿದ್ಯಾವತ್ಯಃ ತಾಸು)** ಜ್ಞಾನವುಳ್ಳ ದೇವಾದಿಯೋನಿಗಳಲ್ಲಿಯೂ **ಪ್ರಿಯಾಪ್ರಿಯವಿಯೋಗಸುಯೋಗಜನ್ಮಶೋಕಾಗ್ನಿನಾ** ಪ್ರಿಯವಾದುದರ ಅಗಲುವಿಕೆ, ಅಪ್ರಿಯವಾದುದರ ತಗಲುವಿಕೆ ಇವುಗಳಿಂದ **ಜನ್ಮ** ಉಂಟಾಗುವ ದುಃಖವೆಂಬ ಅಗ್ನಿಯಿಂದ ಅಥವಾ ಪ್ರಿಯಾಪ್ರಿಯಗಳ ವಿಯೋಗ ಸುಯೋಗವುಳ್ಳ ಜನ್ಮದಲ್ಲಿ ಆಗುವ ಶೋಕಾಗ್ನಿಯಿಂದ ಹೀಗೂ ಅರ್ಥ **ದಹ್ಯಮಾನಃ** ಬೆಂದವನಾಗಿ **ದುಃಖೌಷಧಂ** ಸಂಸಾರದುಃಖಕ್ಕೆ ಪರಿಹಾರಕವಾದ ಕರ್ಮವೆಂಬ ಔಷಧವೇನಿದೆಯೋ **ತದಪಿ** ಅದೂ ಸಹ **ದುಃಖಂ** ದುಃಖರೂಪವೆಂದು ದುಃಖದಾಯಕವೇ. ಹಾಗಾದರೆ ಅದನ್ನು ಸಂಪಾದಿಸಲು ಏಕೆ ಯತ್ನಿಸುವೆ ಎಂದರೆ ಹೇಳುವನು **ಅತದ್ಧಿಯಾ** ನಿಜವಾದ ದುಃಖಪರಿಹಾರಕ ಔಷಧದ ಜ್ಞಾನವಿಲ್ಲದ್ದರಿಂದ ಇದೇ ಸುಖವೆಂಬ ದುಷ್ಟಬುದ್ಧಿಯಿಂದ **ಭ್ರಮಾಮಿ** ಎಲ್ಲಿರುವ ಯಾವ ಔಷಧದಿಂದ ನನಗೆ ಸುಖವಾದೀತು ದುಃಖ ಪರಿಹಾರಕವಾದೀತು ಎಂದು ಚಂಚಲತೆಯನ್ನು ಹೊಂದಿರುವನು. ಒಂದು ಕಡೆಗೆ ನಿಷ್ಠೆಯಿಲ್ಲ **ತಸ್ಮಾತ್** ಆದ್ದರಿಂದ ಈ ಅನವಸ್ಥೆ ದೂರ ಮಾಡಲು ಸಮರ್ಥವಾದ **ತವ** ನಿನ್ನ **ದಾಸ್ಯಯೋಗಂ ವದ** ದಾಸ್ಯದ ಸಂಬಂಧವನ್ನು ದಾಸ್ಯವೆಂಬ ಉಪಾಯವನ್ನು ಉಪದೇಶಿಸು. ದಾಸ್ಯವನ್ನು ಕೊಟ್ಟಿಯಾದರೆ ಪರಿಭ್ರಮಶ್ರಮದ ಶಮನವು ಆಗುವದು ಕಾರಣ ಅದನ್ನೇ ಹೇಳೆಂದರ್ಥ. ॥೧೭॥

ನನ್ನ ಉಪಾಸನೆ ಮೊದಲಾದ ಉಪಾಯಗಳನ್ನು ಬಿಟ್ಟು ಕೇವಲ ದಾಸ್ಯದಿಂದೇನಾಗುವದು ಎಂದು ಶಂಕಿಸಿ ಬಹುಪ್ರಯತ್ನಸಾಧ್ಯವಾದ ಉಪಾಸನೆಯನ್ನು ಬಿಟ್ಟು ಬೇರೆ ಉಪಾಯವಿದೆ ಎಂದು ಹೇಳುವನು-

ಅಥವಾ ಎಲ್ಲವೂ ಆನೆಯ ಹೆಜ್ಜೆಯಲ್ಲಿ ಮುಳುಗಿದೆ ಎಂಬಂತೆ ಎಲ್ಲ ಉಪಾಸನಾದಿಗಳು ದಾಸ್ಯದಿಂದ ಸುಲಭವಾಗಿ ಸಂಪಾದಿಸಬಹುದು. ಕಾರಣ ದಾಸ್ಯವನ್ನಿತ್ತರೆ ಹೀಗಾಗುವದು ಎಂದು ಹೇಳುವನು. ಈ ದಾಸ್ಯಯೋಗದಿಂದ ಎಲ್ಲ ದುರ್ಗಗಳನ್ನು ದಾಟುವಿ ಏನು ಎಂದರೆ ಹೇಳುವನು-

**ಸೋಽಹಂ ಪ್ರಿಯಸ್ಯ ಸುಹೃದಃ ಪರದೇವತಾಯಾ**
**ಲೀಲಾಕಥಾಸ್ತವ ನೃಸಿಂಹ ವಿರಿಂಚಗೀತಾಃ ।**

**ಅಂಜಸ್ತರಾಮ್ಯನುಗೃಣನ್ ಗುಣವಿಪ್ರಮುಕ್ತೋ**
**ದುರ್ಗಾಣಿ ತೇ ಪದಯುಗಾಲಯ ಹಂಸಸಂಗಃ ||೧೮||**

**ಹೇ ನೃಸಿಂಹ** ಶ್ರೀಹರಿಯೇ **ಸಃ ಅಹಂ** ಸಂಸಾರದಲ್ಲಿ ದುಃಖ ಪಡುವ ನಾನು **ಪ್ರಿಯಸ್ಯ ಸುಹೃದಃ** ಎಲ್ಲ ಪ್ರಿಯವಸ್ತುಗಳಿಗಿಂತಲೂ ಅನಿಮಿತ್ತೋಪಕಾರಕನಾದ ಸುಹೃದಃ ಪ್ರಿಯಸ್ಯ ಎಂದೂ ಮಾಡಬಹುದು. **ಹೇ ಸುಹೃದಃ** ಶುದ್ಧಬುದ್ಧಿಯೇ (ಗೀತಾಭಾಷ್ಯವನ್ನು ಉದಾಹರಿಸಿ ಹಿಂದೆ ಸುಹೃಚ್ಛಬ್ಧವ್ಯಾಖ್ಯಾನ ಮಾಡಿದೆ ಅದನ್ನು ಇಲ್ಲಿ ಅನುಸಂಧಾನ ಮಾಡಿಕೊಳ್ಳಿ) **ಪರದೇವತಾಯಾಃ** ಸರ್ವೋತ್ತಮದೇವತೆಯಾದ **ತವ** ನಿನ್ನ **ವಿರಿಂಚಗೀತಾಃ** ಬ್ರಹ್ಮಾದಿಗಳಿಂದ **ಲೀಲಾಕಥಾಃ** ಕ್ರೀಡಾರೂಪವಾದ ಕಥೆಗಳನ್ನು **ಅನುಗೃಣನ್** ಯೋಗ್ಯತಾನುಗುಣವಾಗಿ ಹೇಳುತ್ತ **ಗುಣವಿಪ್ರಮುಕ್ತಃ** ಸತ್ವಾದಿಗುಣಗಳಿಂದ ಮುಕ್ತನಾಗಿ **ದುರ್ಗಾಣಿ** ಬೇರೆಯವರಿಂದ ಅಥವಾ ಬೇರೆ ಉಪಾಯದಿಂದ ದಾಟಲಾಗದ ದುಃಖಗಳನ್ನು **ತೇ** ನಿನ್ನ **ಪಾದಯುಗಾಲಯ-ಹಂಸಸಂಗಃ ಸನ್** ಪಾದದ್ವಂದ್ವಗಳೇ ಆಶ್ರಯವಾಗಿವುಳ್ಳ ಸಂಸಾರವನ್ನು ತೊರೆದ ಪರಮಹಂಸರ ಸಹವಾಸವುಳ್ಳವನಾಗಿ **ಅಂಜಸಾ ತರಾಮಿ** ಸಂಪೂರ್ಣವಾಗಿ ದಾಟುವೆನು.'ಸಃ ವಿಪ್ರಮುಕ್ತಃ' ಎಂಬಲ್ಲಿ ವಿ ಮತ್ತು ಪ್ರ ಶಬ್ದಗಳಿಂದ ಗುಣಗಳ ಸಂಬಂಧ ಆಗದು ಎಂದು ತಿಳಿಸುವರು ಎಂದರ್ಥ. ||೧೮||

ತಾಯಿ ಮೊದಲಾದವರು ಇಷ್ಟರೆಂದು ಎಲ್ಲರೂ ತಿಳಿದಿರುವರು ನಾನು ಹೇಗೆ ಪ್ರಿಯಕ್ಕಿಂತ ಸುಹೃತ್ ಎಂದರೆ ದೃಷ್ಟಾಂತಗಳ ಮೂಲಕ ಹೇಳುವನು.

**ಬಾಲಸ್ಯ *ಚೇಹ ಶರಣಂ ಪಿತರೌ ನೃಸಿಂಹ**
**ಆರ್ತಸ್ಯ ಚಾಗದಮುದನ್ವತಿ ಮಜ್ಜತೋ ನೌಃ ।**
**ತಪ್ತಸ್ಯ ತರ್ಪಣವಿಧಿರ್ಯದಿಹಾಂಜಸೇಷ್ಟ**
**ಸ್ತದ್ವತ್ ಪ್ರಭೋ ತನುಭೃತಾ *ತ್ವದುಪಾಸಕಾನಾಮ್ ||೧೯||**

**ಹೇ ಪ್ರಭೋ** ಸಮರ್ಥನಾದ ನರಸಿಂಹನೇ **ಯತ್** ಹೇಗೆ **ಇಹ** ಇಲ್ಲಿ **ಬಾಲಸ್ಯ** ಮಗುವಿಗೆ **ಪಿತರೌ** ತಂದೆತಾಯಿಗಳು **ಶರಣಂ** ರಕ್ಷಕರೋ ಅಥವಾ (ಪಾಂಥಸ್ಯ) ದಾರಿಹೋಕನಿಗೆ **ಶರಣಂ** ಮನೆಯು **ಇಷ್ಟಂ** ಇಷ್ಟವೋ ಬಾಲಕನಿಗೆ ತಂದೆತಾಯಿಗಳು **ಇಷ್ಟೌ** ಇಷ್ಟರೋ **ಆರ್ತಸ್ಯ** ರೋಗಪೀಡಿತನಿಗೆ **ಅಗದಂ** ಔಷಧವು **ಶರಣಂ** ರಕ್ಷಕವೋ(ಪರಿಹಾರಕವೋ)**ಉದನ್ವತಿ** ಸಮುದ್ರದಲ್ಲಿ **ಮಜ್ಜತಃ** ಮುಳುಗುತ್ತಿರುವವನಿಗೆ

---

* ನೇಹ ಶರಣಂ ನೃಸಿಂಹನಾರ್ತಸ್ಯ ನಾರ್ತಸ್ಯ ಚಾಗದಂ ಇತಿ ಪಾಠಾಂತರ
* ಸ್ವದುಪೇಕ್ಷಿತಾನಾಂ ಇತಿ ಪಾಠಾಂತರಂ

**ನೌಃ** ನೌಕೆಯು ರಕ್ಷಕವೋ, ಇಷ್ಟವೋ **ತಪ್ತಸ್ಯ** ಬಿಸಿಲಿನಲ್ಲಿ ಬಳಲಿದವನಿಗೆ **ತರ್ಪಣವಿಧಿಃ** ನೀರು ಮೊದಲಾದವುಗಳಿಂದ ತೃಪ್ತಿಪಡಿಸುವದು ಇಷ್ಟಸಾಧನವೋ **ತದ್ವತ್** ಹಾಗೆ **ತ್ವದುಪಾಸಕಾನಾಂ** ನಿನ್ನನ್ನು ಉಪಾಸಿಸುವ **ತನುಭೃತಾಂ** ಜೀವರಿಗೆ **ಇಹ** ಈ ಪ್ರಪಂಚದಲ್ಲಿ **ತ್ವಂ** ನೀನು **ಅಂಜಸಾ** ಮುಖ್ಯವಾಗಿ **ಇಷ್ಟಃ** ಇಷ್ಟನಾದವನು ಇಷ್ಟಸಾಧನನಾದವನು ಆಗಿರುವೆ. ನೃಸಿಂಹ ಆರ್ತಸ್ಯ ಎಂಬಲ್ಲಿ ಸಂಧಿ ಮಾಡದಿರುವದರಿಂದ ದೃಷ್ಟಾಂತ ದಾರ್ಷ್ಟಾಂತಿಕಗಳಿಗೆ ಬಹಳ ವೈಲಕ್ಷಣ್ಯವಿದೆ ಎಂದು ತಿಳಿಯುವದು. ಚಶಬ್ದ ಅನುಕ್ತಪಾಂಥ ಸಮುಚ್ಚಾಯಕ. **ಯತ್** ಯದ್ವತ್ ಎಂದರ್ಥ. ಇಷ್ಟಶಬ್ದ ಲಿಂಗ ವಿಪರಿಣಾಮ ವಿಭಕ್ತಿ ಪರಿಣಾಮ ಮಾಡಿ ತ್ವಂ ಎಂದು ಶೇಷ ಮಾಡಿ ಅನ್ವಯಾರ್ಥವನ್ನು ಮಂದನಂದಿನಿ ವಿಜಯಧ್ವಜಿಯ ಪ್ರಕಾರ ಹೇಳಲಾಗಿದೆ.

ಸತ್ಯಧರ್ಮತೀರ್ಥರ ವ್ಯಾಖ್ಯಾನ :- ಶ್ರೀ ಸತ್ಯಧರ್ಮತೀರ್ಥರು ಎಲ್ಲ ಕಡೆಗೆ ಕಾಕು ಸ್ವರದಿಂದ ಅನ್ವಯ ಮಾಡಿರುವರು.(ನೇಹ ಶರಣಂ ನೃಸಿಂಹನಾರ್ತಸ್ಯ ಚಾಗದಂ ಎಂದೂ ಪಾಠವಿದೆ ಆಗ ಕಾಕು ಇಲ್ಲದೇ ವಿವಕ್ಷಿತ ಅರ್ಥವಾಗುವದು) ಪಿತರೌ ಬಾಲಸ್ಯ ಶರಣಂ ಕಿಂ ? ತಂದೆತಾಯಿಗಳು ಮಗುವಿಗೆ ನಿಯಮೇನ ರಕ್ಷಕರೇನು ? ಅಲ್ಲ ರುಕ್ಮಾಂಗದ ಮೊದಲಾದವರು ತನ್ನ ಮಗ ಧರ್ಮಾಂಗದನ ಕೊಲ್ಲುವ ಪ್ರಯತ್ನ ಕಂಡಿದೆ. ಅಲ್ಲದೆ ಅವರಿಂದ ರಕ್ಷಿಸುವ ಮಕ್ಕಳಿಗೆ ಅವರವರಿಗೆ ತಕ್ಕಂತೆ ವ್ಯಥೆಯೂ ಕಂಡಿದೆ **ಆರ್ತಸ್ಯ ಅಗದಂ ಶರಣಂ ಕಿಂ** ರೋಗಿಗಳಿಗೆ ಔಷಧವು ಆತ್ಯಂತಿಕ ಉಪಶಾಮಕವಲ್ಲ ಯಾರಿಗೆ ಎಂದರೆ **ತ್ವದುಪಾಸಕಾನಾಂ** ಅನ್ಯೋಪಾಸಕರಿಗೆ 'ತತ್ವಾವನ್ಯಪರ್ಯಾಯೌ' ಎಂದಿದೆ. ಔಷಧ ಸೇವಿಸಿದರೂ ಸಾವು ಕಂಡಿದೆ ಎಂದು ಭಾವ. **ಉದನ್ವತಿ** ಸಮುದ್ರದಲ್ಲಿ **ಮಜ್ಜತಃ** ಮುಳುಗುವವವರಿಗೆ **ನೌಃ** ನೌಕೆಯು **ಶರಣಂ ಕಿಂ** ರಕ್ಷಕವೇನು ಅಲ್ಲ. ಮುಳುಗುವ ಜನರೊಡನೆ ನೌಕೆಯು ಮುಳುಗುವದು ಕಂಡಿದೆ. **ತಪ್ತಸ್ಯ ತರ್ಪಣವಿಧಿಃ ಶರಣಂ ಕಿಂ** ಬೇಸಿಗೆಯಿಂದ ಬಳಲಿದವನಿಗೆ ನೀರು ಮುಂತಾದವನ್ನಿತ್ತು ತೃಪ್ತಿ ಪಡಿಸುವದು ರಕ್ಷಕವೇ ಅಲ್ಲ. ನೀರು ಕುಡಿಯುವಾಗಲೇ ಕೆಲವಡೆ ಕೆಲವರು ಸಾಯುವದು ಕಂಡಿದೆ. ಅಗದ್‌ಮುತ್, ಅನು ಎಂದು ಪದಚ್ಛೇದ **ಅನು** ಔಷಧಿ ಸ್ವೀಕರಿಸಿದ ಮೇಲೆ **ಮುತ್ ಕಿಂ** ಸಂತೋಷವಿದೆ ಏನು ಇಲ್ಲ. ಈಗ ಲಿಂಗಭಂಗವಿಲ್ಲವೆಂದರ್ಥ. **ತ್ವದುಪಾಸಕಾನಾಂ ತನುಭೃತಾಂ** ನಿನ್ನನ್ನು ಉಪಾಸಿಸುವ ಜನರಿಗೆ **ತ್ವಂ** ನೀನು **ಅಂಜಸಾ ಇಷ್ಟಃ** ಮುಖ್ಯವಾಗಿ ಇಷ್ಟನು. ಕೆಲವು ಕಡೆ 'ತ್ವದುಪೇಕ್ಷಿತಾನಾಂ' ಎಂದು ಪಾಠವಿದೆ. ಆಗ ನಿನ್ನಿಂದ ಉಪೇಕ್ಷಿತರಾದ ಬಾಲಾದಿಗಳಿಗೆ ಪಿತ್ರಾದಿಗಳು ರಕ್ಷಕರೇ ? ಎಂದು ಯೋಜನೆ ಮಾಡಬೇಕು. ಯಾವ ಕಾರಣ ಬಾಲಾದಿಗಳಿಗೆ ಹಿರಿಯರಾದ ಪಿತ್ರಾದಿಗಳು ಇಷ್ಟರೋ, ಯಾವ ಕಾರಣ ನೀನು ಹಿರಿಯನೋ ಆದ್ದರಿಂದ ನಿನ್ನ ಗುಣಗಳನ್ನು ಗಾನ ಮಾಡುತ್ತ ದುರ್ಗಗಳನ್ನು

ದಾಟುವೆನು ಎಂದಾದರೂ ಅನ್ವಯ. ತದ್ವತ್‌ಪ್ರಭೋ ಎಂಬುದು ಒಂದೇ ಪದ. **ಪಿತ** ಎಂದಾರಂಭಿಸಿ ತರ್ಪಣವಿಧಿ ಎಂಬಲ್ಲಿವರೆಗೆ ಬಂದವರು ಎಲ್ಲರೂ **ತೇ ಸಂತಿ ಅಸ್ಮಿನ್ ಇತಿ ತದ್ವಾನ್ ತದ್ವಾನ್ ಚಾಸೌ ಪ್ರಭುಶ್ಚ ತತ್ಸಂಬುದ್ಧಿಃ** ಅಂದರೆ ತಂದೆ ತಾಯಿ ಮನೆ, ಔಷಧ, ನೌಕೆ, ತರ್ಪಣ, ವಿಧಿ ಎಲ್ಲವೂ ನೀನೇ ಸರ್ವರೂಪನೆಂದರ್ಥ. ನರಸಿಂಹ ಆರ್ತ ಎಂಬಲ್ಲಿ ಸಂಧಿ ಮಾಡದಿರುವದು ಇವುಗಳಿಗೆ ಆತ್ಯಂತಿಕ ಇಷ್ಟ ಸಾಧನ ನಿದಾನತೆ ಇಲ್ಲವೆಂದು ತಿಳಿಸಲು ಎಂದು ತಿಳಿಯಬೇಕು. ।।೧೯।।

ನೀನು ಹೇಳಿದಂತೆ ನಾನು ಇಷ್ಟನಾದರೂ ಸ್ವಾತಂತ್ರ್ಯವಿಲ್ಲ ಕಾರಣ ಫಲವನ್ನು ಹೇಗೆ ಕೊಡಲಿ ಎಂದರೆ ಸ್ವಾತಂತ್ರ್ಯವನ್ನು ವರ್ಣಿಸುವರು-

ಕರ್ತೃತ್ವಾದಿಗಳು ಬೇರೆ ಕಡೆಗೂ ಕಾಣಿಸುವದು ನಾನೇ ಇಷ್ಟನೆಂದು ಹೇಗೆ ನಿಶ್ಚಯಿಸಿದೆ ಎಂದರೆ ಅವೆಲ್ಲವೂ ನಿನ್ನ ಅಧೀನ ನೀನೇ ಇಷ್ಟನು. ಆದ್ದರಿಂದ ನನ್ನ ಮಾತು ನಿಜವೇ ಎಂದು ವಿಜ್ಞಾಪಿಸುವನು-

**ಯಸ್ಮಿನ್ ಯತೋ ಯೇನ ಚ ಯರ್ಹಿ ಯಸ್ಯ**
**ಯಸ್ಮೈ ಯಥಾ ಯಮುತ ಯಸ್ತ್ವಪರಃ ಪರೋ ವಾ ।**
**ಭಾವಂ ಕರೋತಿ ವಿಕರೋತಿ ಪೃಥಕ್ ಸ್ವಭಾವಃ**
**ಸಂಚೋದಿತಸ್ತದಖಿಲಂ ಭವತಃ ಸ್ವರೂಪಮ್ ।।೨೦।।**

**ಪೃಥಕ್ ಸ್ವಭಾವಃ** ತಾನು ಮಾಡುವ ಕಾರ್ಯಕ್ಕಿಂತ ವಿಲಕ್ಷಣವಾದ ಸ್ವಭಾವವುಳ್ಳ **ಯಃ** ಯಾವ **ಅಪರಃ** ಅಧಮರ್ಕಾರ್ಯಗಳಾದ(ಕರ್ತೃಗಳಾದ)ಅಕ್ಕಸಾಲಿಗ, ಕುಂಬಾರ ಮೊದಲಾದವರು **ವಾ** ಅಥವಾ **ಪರಃ** ಉತ್ತಮ ಕರ್ತೃಗಳಾದ ಬ್ರಹ್ಮಾದಿಗಳು **ಸಂಚೋದಿತಃ ತು** ನಿನ್ನಿಂದ ಪ್ರೇರಿತರಾಗಿಯೇ **ಯಸ್ಮಿನ್** ಯಾವ ಅಧಿಷ್ಠಾನದಲ್ಲಿ ಇದ್ದುಕೊಂಡು **ಯತಃ** ಮಣ್ಣು ಮುಂತಾದ ಉಪಾದಾನಕಾರಣಗಳಿಂದ **ಚ** ಮತ್ತು **ಯರ್ಹಿ** ಯಾವ ಕಾಲದಲ್ಲಿ **ಯೇನ** ಚಕ್ರ ನೀರು ಮೊದಲಾದ ಸಾಧನಗಳಿಂದ **ಯಸ್ಯ** ಯಾವ ಅದೃಷ್ಟ ಮೊದಲಾದವುಗಳ ಸಹಾಯದಿಂದ ಯಾವನ **ಯಸ್ಮೈ** ಯಾವ ನೀರು ತರುವದೇ ಮೊದಲಾದ ಪ್ರಯೋಜನಕ್ಕಾಗಿ **ಯಥಾ** ಯಾವ ರೀತಿಯಿಂದ **ಭಾವಂ** ಈ ಘಟ ಪಟ ಮುಂತಾದ ಪ್ರಪಂಚವನ್ನು **ಕರೋತಿ** ಮಾಡುವವರೋ **ಉತ** ಮತ್ತು **ವಿಕರೋತಿ** ವಿವಿಧ ರೀತಿಯಲ್ಲಿ ಮಾಡುವವರೋ ವಿಶಿಷ್ಟವಾಗಿ ಮಾಡುವರೋ ವಿಕಾರಹೊಂದಿಸುವರೋ ಎಂದರ್ಥ. **ತತ್ ಅಖಿಲಂ** ಆ ಕಾರ್ಯಕಾರಣಾತ್ಮಕ ಎಲ್ಲ ಪ್ರಪಂಚವೂ **ಭವತಃ** ನಿನ್ನ **ಸ್ವರೂಪಂ** ಅಧೀನವಾದ ಸ್ವರೂಪ ಪ್ರವೃತ್ತಿ ಪ್ರಮಿತಿಗಳುಳ್ಳದ್ದು ಇದರಿಂದ ಅಸಮರ್ಥನೆಂಬ ಶಂಕೆಯನ್ನು ಸ್ವತಂತ್ರನೆಂದು ಹೇಳುವದರಿಂದ ಪರಿಹರಿಸಿರುವರು.

ಈ ಶ್ಲೋಕದಲ್ಲಿ ಕಾರ್ಯಕರಗಳೆಲ್ಲ ಭಗವಂತನ ಸ್ವರೂಪವೆಂದು ಅರ್ಥ ತೋರುವದು. ಅದು ಅನೇಕ ಪ್ರಮಾಣ ವಿರುದ್ಧವಾದ್ದರಿಂದ ಪ್ರಮಾಣದಿಂದಲೇ ಪರಿಹರಿಸುವರು-

**... ತಾತ್ಪರ್ಯ ...**

**ಕರ್ತೃಕರ್ಮಕ್ರಿಯಾದೀನಾಂ ಸತ್ತಾವೃತ್ತಿಸ್ತಥೈವ ಚ ।**
**ವಿಷ್ಣ್ವಧೀನಂ ಯತಃ ಸರ್ವಂ ಸರ್ವರೂಪಸ್ತದುಚ್ಯತೇ ॥ ಇತಿ ಬ್ರಹ್ಮತರ್ಕೇ॥**

ಕರ್ತೃ, ಕರಣ, ಕರ್ಮ, ಕ್ರಿಯಾ, ಅಧಿಕರಣ, ಉಪಾದಾನಾಪಾದಾನಗಳ ಸ್ವರೂಪ, ಪ್ರವೃತ್ತಿ, ವಿಷ್ಣುವಿನ ಅಧೀನವಾದುದರಿಂದ ವಿಷ್ಣುವು ಸರ್ವರೂಪನೆನಿಸುವನು. 'ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ' ಎಂದು ಬೇರೆಡೆ ಹೇಳಿದೆ. ಹೊರತು ಅಭಿನ್ನವಾದುದರಿಂದಲ್ಲವೆಂದು ಭಾವ ॥೨೦॥

ಭಕ್ತಿಯಿಂದ ವ್ಯಕ್ತವಾಗುವ ನಿನ್ನ ಪ್ರಸಾದವಿಲ್ಲದೇ ಸಂಸಾರ ತರಣವು ಸಾಧ್ಯವಿಲ್ಲ ಭಕ್ತಿಯಾದರೋ ಇಂದ್ರಿಯ ನಿಗ್ರಹವಿಲ್ಲದೆ ವ್ಯಕ್ತವಾಗಲಾರದು. ಆದ್ದರಿಂದ ಇಂದ್ರಿಯ ಜಯವೇ ಮನೋಮೂಲಕವಾದ ಸಂಸಾರದ ಪರಾಜಯಕ್ಕೆ ಕಾರಣವೆಂದು ಸಂಸಾರದ ಸ್ವರೂಪವನ್ನು ನಿರೂಪಿಸುವರು.

**ಮಾಯಾ ಮನಃ ಸೃಜತಿ ಕರ್ಮಮಯಂ ಬಲೀಯಃ**
**ಕಾಲೇನ ಚೋದಿತಗುಣಾನುಮತೇನ ಪುಂಸಃ ।**
**ಛಂದೋಮಯಂ ಯದಜಯಾರ್ಪಿತಷೋಡಶಾರಂ**
**ಸಂಸಾರಚಕ್ರಮಜಕೋಽತಿಪರೇತ್ತ್ವದನ್ಯಃ ॥೨೧॥**

**ಮಾಯಾ** ಚಿತ್ಪ್ರಕೃತಿಯಿಂದ ಅಭಿಮನ್ಯಮಾನವಾದ ಅಚಿತ್ಪ್ರಕೃತಿಯು **ಉದಿತಗುಣಾನುಮತೇನ** ವ್ಯಕ್ತವಾದ, ಭಗವತ್ಪ್ರೇರಿತವಾದ, ಕಾರ್ಯೋನ್ಮುಖವಾದ ಸತ್ವಾದಿಗುಣಗಳ ಅನುಸಾರವಾಗಿ **ಕಾಲೇನ** ಕಾಲದಿಂದ ಅಥವಾ **ಉದಿತಗುಣಾ ಸತೀ** ವ್ಯಕ್ತವಾದ ಸತ್ವಾದಿಗುಣವುಳ್ಳವಳಾಗಿ **ಅನುಮತೇನ** ಗುಣಾನುಸಾರಿ ಕಾಲದಿಂದಲೂ ಅನುಮತೇನ ಎಂಬುದನ್ನು ಆವೃತ್ತಿ ಮಾಡಿಕೊಂಡು ಅನುಮತಂ ಅನುಮತಿಃ ತೇನ ದೇವತೆಗಳ ಸಮ್ಮತಿಯಿಂದ ಅಥವಾ ಸಮ್ಮತರಾದ ದೇವಾದಿಗಳಿಂದ ಅಂದರೆ ದೈವಾದಿಸಹಕಾರಿಯಿಂದ **ಪುಂಸಃ** ಜೀವನ **ಕರ್ಮಮಯಂ** ನಾನಾಕಾರ್ಯವಿಕಾರಕ್ಕೆ ಆಸ್ಪದವಾದ(ಪುಣ್ಯಪಾಪಾದಿಗಳಿಗೆ ಕಾರಣವಾದ)**ಬಲೀಯಃ** ಮಾರ್ಗಾಂತರದಿಂದ ಅಪರಿಹಾರ್ಯವಾದ್ದರಿಂದ ಬಲಿಷ್ಠವಾದ **ಛಂದೋಮಯಂ** ಸಂಕಲ್ಪವಿಕಲ್ಪಾತ್ಮಕವಾದ **ಯತ್ ಮನಃ ಸೃಜತಿ** ಮನಃಕಾರ್ಯವ್ಯಾವೃತ್ತಿಯನ್ನು ಹುಟ್ಟಿಸುವದೋ **ಹೇ ಅಜ**

ನಿತ್ಯನಾದ ಶ್ರೀಹರಿಯೇ **ತತ್** ಆ ಮನಸ್ಸೇ **ಮೂಲಂ** ಪ್ರಧಾನವಾಗಿರುವ **ಅಜಯಾ** ಪ್ರಕೃತಿಯಿಂದ **ಅರ್ಪಿತ** ಹೊಂದಿಸಲ್ಪಟ್ಟ **ಷೋಡಶಾರಂ** ಹತ್ತು ಇಂದ್ರಿಯಗಳು ಐದು ಪ್ರಾಣಗಳು ಮತ್ತು ಮನಸ್ಸೆಂಬ ಹದಿನಾರು **ಅರ** ಹಲ್ಲುಗಳುಳ್ಳ **ಸಂಸಾರಚಕ್ರಂ** ಹುಟ್ಟು ಸಾವುಗಳೆಂಬ ಸಂಸಾರಚಕ್ರವನ್ನು **ತ್ವದನ್ಯಃ** ನಿನ್ನಿಂದ ಭಿನ್ನರಾದ ನಿನ್ನಿಂದ ವಿಮುಖರಾದ ನಿನ್ನ ಅನುಗ್ರಹವಿಲ್ಲದೆ **ಕಃ** ಯಾವನು **ಅತಿತರೇತ್** ದಾಟಿಯಾನು ಯಾವನೂ ದಾಟುವದಿಲ್ಲ.

ಅಥವಾ **ಅತಿತರೇತ್**(ಅಂತರ್ಣಿತ ಣಿಚ್) ಯಾರು ದಾಟಿಸಿಯಾರು ? ಯಾರೂ ಇಲ್ಲ ನೀನೇ ದಾಟಿಸುವವನು ಎಂದರ್ಥ. ಅಜ ಎಂಬುದಕ್ಕೆ ಸಂಸಾರಕ್ಷೇಪಕನೆಂದರ್ಥ. (ಅಜ ಗತಿ ಕ್ಷೇಪಣಯೋಃ ಎಂದು ಧಾತುವಿದೆ) ಪ್ರಕೃತ್ಯಾ ಎನ್ನದೆ ಅಜಯಾ ಎಂದದ್ದರಿಂದ ನಿನ್ನ ಅನುಗ್ರಹದಿಂದ ಕಿತ್ತೆಸೆಯಲು ಸಾಧ್ಯವಾದುದರಿಂದ(ಕ್ಷೇಪ್ಯಾ)ಆ ಪ್ರಯತ್ನ ನಿಷ್ಫಲವಲ್ಲವೆಂದು ಧ್ವನಿತವಾಗುವದು. ಯಾರೂ ದಾಟಿಲ್ಲವೆಂದಾದರೆ ಅದನ್ನು ಬೇಡುವದು ಏಕೆ ಎಂದರೆ ಹೇಳುವರು ಅಜಕಃ ಎಂದು. ಅಜ ಏವ ಅಜಕಃ ಬ್ರಹ್ಮದೇವರು **ತ್ವದನ್ಯಃ** ನಿನ್ನಿಂದ ಭಿನ್ನರು **ಪುಂಸಃ** ಪರಮಪುರುಷನಾದ ನಿನ್ನ **ಅನುಮತೇನ** ಸಮ್ಮತಿಯುಳ್ಳ ನಿನ್ನ ಜ್ಞಾನದಿಂದ **ಅತಿತರೇತ್** ದಾಟುವನು **ಅಜಕಃ** ನಿನ್ನಲ್ಲಿ ಭಕ್ತಿಯುಕ್ತನಾಗಿ ಬಂದವನು ನಿನ್ನಿಂದ ಭಿನ್ನನಾದವನು ದಾಟುವನು. ಕಾರಣ ಪ್ರಾರ್ಥಿಸುವದು ಅರ್ಥವಾತ್ತಾಗಿದೆ ಎಂದು ಭಾವ.

ವಿಶೇಷ ಃ- ಹದಿನಾರರಲ್ಲಿ ಮನಸ್ಸು ಸೇರಿದ್ದರೂ ಅದೇ ಪ್ರಧಾನವಾದ್ದರಿಂದ ಅದನ್ನೇ ಸಂಸಾರಚಕ್ರವೆಂದಿದ್ದಾರೆ. ಶ್ರೀಹರಿಯು ಜಡಪ್ರಕೃತಿಯನ್ನು ಉಪಾದಾನವಾಗಿಟ್ಟುಕೊಂಡು ನಿಗ್ರಹಿಸಲಾಗದ ಮನಸ್ಸನ್ನು ಸೃಷ್ಟಿಸಿ, ಅದೇ ಪ್ರಧಾನವಾಗಿರುವ ಸಂಸಾರಚಕ್ರದಲ್ಲಿ ಜೀವನನ್ನು ಹಾಕಿರುವನು. ಕಾರಣ ನೀನೇ ಮನೋನಿಗ್ರಹ ಮಾಡಿಸಿ ಉತ್ತಮ ಪ್ರಸಾದವನ್ನು ನೀಡಿ ಸಂಸಾರಚಕ್ರವನ್ನು ದಾಟಿಸೆಂದು ಪ್ರಾರ್ಥಿಸುವದು ಎಂದು ಭಾವ.

ಈ ಶ್ಲೋಕದಲ್ಲಿ ಷೋಡಸಾರಗಳು ಯಾವೆಂದು ತಿಳಿಯುವದಿಲ್ಲ ಕಾರಣ ಅವುಗಳನ್ನು ಸ್ವಯಂ ನಿರೂಪಿಸುವವರಾಗಿ ಪೂರ್ವಾರ್ಧಕ್ಕೆ ಉತ್ತರಾರ್ಧದಿಂದ ಅನ್ವಯ ತೋರಿಸುವರು-

**... ತಾತ್ಪರ್ಯ ...**

**''ದಶೇಂದ್ರಿಯಪ್ರಾಣಮನೋಽರಮ್ । ಮೂಲಂ ಮನ ಏವ ಸಂಸಾರಚಕ್ರಸ್ಯ ॥**

೧೦ ಇಂದ್ರಿಯಗಳು, ೫ ಪ್ರಾಣಗಳು, ೧ ಮನಸ್ಸು ಇವು ೧೬ ಮೂಲವಾಗಿವುಳ್ಳದ್ದು ಸಂಸಾರಚಕ್ರವು. ಇವುಗಳಲ್ಲಿ ಮನಸ್ಸು ಪ್ರಧಾನವಾಗಿರುವದರಿಂದ ಮನಸ್ಸೆಂದು ಅನ್ನಿಸಿಕೊಳ್ಳುವ ಸಂಸಾರಚಕ್ರವನ್ನು ಎಂದದ್ದು ಎಂದು ತಿಳಿಯಬೇಕು. ।।೨೧।।

ಯಾವುದಕ್ಕಾಗಿ ಭಗವಂತನನ್ನು ಸ್ತುತಿಸಿದನೋ ಪ್ರಸ್ತುತವಾದ ಅದನ್ನು ವಿಜ್ಞಾಪಿಸುವನು-

**ಸ ತ್ವಂ ಹಿ ನಿತ್ಯವಿಜಿತಾತ್ಮಗುಣಃ ಸ್ವಧಾಮ್ನಾ**
**ಕಾಲೋ ವಶೀಕೃತವಿಸೃಜ್ಯ ವಿಸರ್ಗಶಕ್ತಿಃ ।**
**ಚಕ್ರೇ ವಿಸೃಷ್ಟಮಜಯೇಶ್ವರ ಷೋಡಶಾರೇ**
**ನಿಷ್ಪೀಡ್ಯಮಾನಮುಪಕರ್ಷ ವಿಭೋ ಪ್ರಪನ್ನಮ್ ।।೨೨।।**

**ಹೇ ಈಶ್ವರ** ಈಶ್ವರರಾದ ರಮಾಬ್ರಹ್ಮಾದಿಗಳಿಗಿಂತ ಶ್ರೇಷ್ಠನೇ **ವಿಭೋ** ಸಂಸಾರದಿಂದ ಉದ್ಧರಿಸಲು ಸಮರ್ಥನಾದ ನರಸಿಂಹನೇ **ಯಃ ತ್ವಂ** ಯಾವ ನೀನು **ಹಿ** ಯಾವಕಾರಣ **ಸ್ವಧಾಮ್ನಾ** ನಿನ್ನ ಸಾಮರ್ಥ್ಯದಿಂದಲೇ **ನಿತ್ಯವಿವರ್ಜಿತಾತ್ಮಗುಣಃ** ಯಾವಾಗಲೂ ಜಯಿಸಿದ ದೇಹಧರ್ಮಗಳಾದ ಉತ್ಪತ್ತಿ-ವಿನಾಶಗಳುಳ್ಳವನೋ (ಅಥವಾ ಜೀವನ ಗುಣಗಳಾದ ದುಃಖಾದಿಗಳು ಮತ್ತು ದೇಹ ಯೋಗವಿಯೋಗ ಗಳುಳ್ಳ (ನಿನ್ನ ಶಕ್ತಿಯಿಂದ ಉತ್ಪತ್ತಿನಾಶ ದುಃಖಾದಿಗಳಿಲ್ಲದವನೆಂದರ್ಥ) **ಕಾಲಃ** ಸರ್ವಗುಣನು, ಸರ್ವಜ್ಞನು ('ವಿಷ್ಣುಃ ಸರ್ವಗುಣತ್ವೇನ ಕಾಲ ಇತ್ಯಭಿಧೀಯತೇ' ಎಂದು ದಶಮ ತಾತ್ಪರ್ಯದಲ್ಲಿದೆ.) 'ಕಲಯತಿ ಸರ್ವಂ ಇತಿ ಸರ್ವಜ್ಞಂ' ವಶೀಕೃತ ವಿಸೃಜ್ಯ ವಿಸರ್ಗಃ ಚ್ವಿಪ್ರತ್ಯಯದ ಮುಖ್ಯಾರ್ಥ ಅಂದರೆ ಮೊದಲು ವಶವಾಗದೇ ಈಗ ವಶ ಮಾಡಿಕೊಂಡ ಎಂಬುದು ಇಲ್ಲ. ಕಿಂತು ಇತರರ ವಶವಾಗದ ತನ್ನ ವಶವಾಗಿ ಮಾಡಿಕೊಳ್ಳಲ್ಪಟ್ಟ ಎಂದರ್ಥ)**ವಿಸೃಜ್ಯ** ಸೃಷ್ಟಿ ಮಾಡಲು ಯೋಗ್ಯರಾದವರು **ವಿಸರ್ಗ** ಸೃಷ್ಟಿಗೆ ಕಾರಣವಾದ ಶಕ್ತಿಗಳು ಅವರಲ್ಲಿವೆ ಎಂದು ತೋರುವವೋ ಅವುಗಳುಳ್ಳ ಅಥವಾ ನಿನ್ನ ಶಕ್ತಿಯಿಂದಲೇ ವಶಮಾಡಿಕೊಂಡು ಸೃಷ್ಟಿಮಾಡಲು ಯೋಗ್ಯರಾದ ಜೀವರನ್ನು ಸೃಷ್ಟಿಮಾಡುವ ವಿರಿಂಚಾದಿಗಳಲ್ಲಿರುವ ವಿವಿಧ ಸುರ ನರತಿರ್ಯಗಾದಿ ಅನೇಕ ಪ್ರಕಾರದ ಸೃಷ್ಟಿಶಕ್ತಿಯುಳ್ಳವನೋ ಆ ಕಾರಣದಿಂದ **ಸಃ ತ್ವಂ** ಆ ನೀನು **ಷೋಡಶಾರೇ** ಹದಿನಾರು ಹಲ್ಲಿನ ಸಂಸಾರಚಕ್ರದಲ್ಲಿ **ಅಜಯಾ** ನಿನ್ನಿಂದ ಪ್ರೇರಿತಪ್ರಕೃತಿಯಿಂದ **ನಿಷ್ಪೀಡ್ಯಮಾನಂ ವಿಸೃಷ್ಟಂ** ಪೀಡಿಸಲ್ಪಡುವ **ತ್ವಾಂ ಪ್ರಪನ್ನಂ** ನಿನ್ನನ್ನು ಶರಣಾದ **ಮಾಂ** ನನ್ನನ್ನು **ಉಪಕರ್ಷ** ನಿನ್ನ ಸಮೀಪಕ್ಕೆ ಎಳೆದುಕೋ ಉದ್ಧರಿಸೆಂದರ್ಥ. **ನಿತ್ಯಂ ವಿಜಿತ** ಅಪರಾಜಿತನೇ **ಆತ್ಮಗುಣಃ** ಸ್ವರೂಪ ಭೂತಗುಣವುಳ್ಳವನೇ ಹೀಗೂ ಅರ್ಥ. ಗುಣಗಳು ಅಭಿನ್ನವಾದರೂ 'ಸ್ವೇ ಮಹಿಮ್ನಿ

ಸ್ಥಿತಃ' ಎಂದಿರುವದರಿಂದ ವಿಶೇಷ ಬಲದಿಂದ ಸ್ವಧಾಮ್ನಾ ಎಂದು ಸ್ವಧಾಮತ್ವೇನ ಎಂದು ಹೇತು ಹೇಳಿದ್ದು. ನೀನೇ ಇಂದ್ರಿಯಾದಿ ಷೋಡಶಗಳ ಘಟಕ ಹೇಗೋ ಹಾಗೆಯೇ ನಿನ್ನ ಪ್ರಸಾದ ಸಂಪಾದಿಸಿದವರಿಗೆ ವಿಘಟಕನೂ ಆಗಿರುವಿ ಎಂದು ಹೇಳುವರು. **ಷೋಡಶಸ್ಯ ಅರೇ** ಪ್ರಾಕೃತಶರೀರ ಸಂಬಂಧಿಯಾದ ಈ ಹದಿನಾರರ ವೈರಿಯೇ ಎಂದರ್ಥ. ॥೨೨॥

೧. ದೇವತೆಗಳ ಐಶ್ವರ್ಯ ಅಪಹಾರ ಮಾಡಿದವನು ನಿನ್ನಿಂದ ಹತನಾದನೆಂದು ಸ್ತುತಿಸುವನು.

೨. ಸ್ವರ್ಗಾದಿ ಐಶ್ವರ್ಯಗಳನ್ನೇಕೆ ಬಯಸುತ್ತಿಲ್ಲ ಅಂದರೆ ಅವು ನಶ್ವರಗಳಾದ್ದರಿಂದ ಎಂಬ ಅಭಿಪ್ರಾಯದಿಂದ ಹೇಳುವನು.

೩. ಸುರತ್ವದಲ್ಲಿಯೂ ನನ್ನ ಮತಿ ಸುರತವಾಗಿಲ್ಲ ಎಂದು ಸಂಕ್ಷೇಪ ಹೇಳಿದ್ದನ್ನು ವಿಸ್ತಾರವಾಗಿ ಹೇಳುವನು-

**ದೃಷ್ಟಾ ಮಯಾ ದಿವಿ ವಿಭೋಽಖಿಲದಿಷ್ಣ್ಯಪಾನಾ-**
**ಮಾಯುಃ ಶ್ರಿಯೋ ವಿಭವ ಇಚ್ಛತಿ ಯಾನ್ ಜನೋಽಯಮ್ ।**
**ಯೇಽಸ್ಮತ್ಪಿತುಃ ಕುಪಿತಹಾಸವಿಜೃಂಭಿತಭ್ರೂ-**
**ವಿಸ್ಫೂರ್ಜಿತೇನ ಲುಲಿತಾಃ ಸ ತು ತೇ ನಿರಸ್ತಃ ॥೨೩॥**

**ಹೇ ವಿಭೋ** ಸರ್ವಸಮರ್ಥನಾದ ನರಸಿಂಹನೇ **ಅಖಿಲಧಿಷ್ಣ್ಯಪಾನಾಂ** ಇಂದ್ರಾದಿ ಎಲ್ಲ ಲೋಕಪಾಲಕರ **ಆಯುಃ** ಮನ್ವಂತರ ಪರ್ಯಂತವಾದ ಆಯುಷ್ಯ ಅಧಿಕಾರಾವಧಿಯು **ಶ್ರಿಯಃ** ತ್ರೈಲೋಕ್ಯಸಂಪತ್ತು **ವಿಭವ** ಹಿರಣ್ಯರೂಪವಾದ ಧನವು **ಏತೇ** ಈ ಮೊದಲಾದವು **ದಿವಿ** ಸ್ವರ್ಗದಲ್ಲಿ **ಮಯಾ** ನನ್ನಿಂದ **ದೃಷ್ಟಾಃ** ಯೋಗ ದೃಷ್ಟಿಯಿಂದ ಕಂಡವೋ **ಯಾನ್ ಚ** ಯಾವ ಇವುಗಳನ್ನು **ಅಯಂ ಜನಃ** ಈ ನಮ್ಮಂತಹ ಜನರು **ಇಚ್ಛಂತಿ** ತಮಗೆ ಬೇಕೆಂದು ಅಪೇಕ್ಷಿಸುವರೋ **ತೇ** ಅವು **ಅಸ್ಮತ್ಪಿತುಃ** ನನ್ನ ತಂದೆಯಾದ ಹಿರಣ್ಯಕಶಿಪುವಿನ **ಕುಪಿತಹಾಸ** ದುಷ್ಟ ನಗುವಿನಿಂದ (ಕೋಪ ವಿಕಾಸದಿಂದ) **ವಿಜೃಂಭಿತ** ಸ್ಫುರಿತಳಾದ **ಭ್ರೂ** ಹುಬ್ಬುಗಳ **ವಿಸ್ಫೂರ್ಜಿತೇನ** ಹಾರಿಸುವಿಕೆಯಿಂದ **ಲುಲಿತಾಃ** ವಿನಾಶವಾದವು **ಸಃ ತು** ಲೋಕಪಾಲಕರ ಆಯುರಾದಿಗಳನ್ನು ಸೂರೆಗೊಂಡ ನಮ್ಮ ತಂದೆಯು ಕೂಡ **ತೇ** ನಿನ್ನಿಂದ **ನಿರಸ್ತಃ** ಸಂಹೃತನಾದನು **ದೃಷ್ಟಾ ಮಯಾ** ದೃಷ್ಟಃ ಆಮಯಃ ಧ್ವಂಸರೂಪರೋಗಃ ಯೇಷು ತೇ ಧ್ವಂಸವೆಂಬ ರೋಗವುಳ್ಳವುಗಳಾಗಿ ಕಂಡ.

ವಿಶೇಷ ೩:- ಉಪದ್ರವ ಸಹಿತವೆಂದರ್ಥ. ಉಪದ್ರವ ಕೊಡುವವರನ್ನು ಹೇಳು ಅವರನ್ನು ಕೊಂದು ನಿನ್ನನ್ನು ನಿಶ್ಚಿಂತನನ್ನಾಗಿ ಮಾಡುವೆ ಅಥವಾ ನಿನ್ನ ತಂದೆಯ ಸಿಂಹಾಸನದಲ್ಲಿ ಕೂಡು ಅದು ನಶ್ವರವೆಂದು ಹೇಳುವನು. ಯಾವ ಸ್ವರ್ಗೈಶ್ವರ್ಯ ನಮ್ಮ ತಂದೆಯಿಂದ ನಾಶವಾಯಿತೋ ಅವನೂ ನಿನ್ನಿಂದ ನಾಶಿತನಾದ. ನಿನ್ನ ದಯವಾಗದಿದ್ದರೆ ಎಲ್ಲವೂ ನಾಶವಾಗುವದು ಕಾರಣ ನಿನ್ನಿಂದ ರಕ್ಷಿತವಾಗದ ತಂದೆಯ ಆಸನವೂ ಬೇಡವೆಂದು ಭಾವ. ।।೨೩।।

ನನ್ನ ತಂದೆಯ ಭ್ರೂವಿಲಾಸದಿಂದ ಸ್ವರ್ಗಾದಿಗಳು ನಾಶವಾದವೆಂದು ಸ್ಥೂಲದೃಷ್ಟಿಯಿಂದ ಹೇಳಿದ್ದು ಮುಖ್ಯ ರಹಸ್ಯವೆಂದರೆ ಅದನ್ನೂ ನೀನೇ ಮಾಡಿಸಿದ್ದು ಎಂದು ಹೇಳುವನು.

ಸಂಸಾರ ತರಣವನ್ನೇ ಏಕೆ ಪ್ರಾರ್ಥಿಸುವೆ ಸ್ವರ್ಗಾದ್ಯೈಶ್ವರ್ಯವನ್ನು ಪ್ರಾರ್ಥಿಸು ಎಂದರೆ ಹೇಳುವನು.

**ತಸ್ಮಾದಮೂಸ್ತನುಭೃತಮಹಮಾಶಿಷೋ ಜ್ಞಃ**
**ಆಯುಃ ಶ್ರಿಯಂ ವಿಭವಮೈಂದ್ರಿಯಮಾವಿರಿಂಚಾತ್ ।**
**ನೇಚ್ಛಾಮಿ ತೇ ವಿಲುಲಿತಾ ಗುರುವಿಕ್ರಮೇಣ**
**ಕಾಲಾತ್ಮನೋಪನಯ ಮಾಂ ನಿಜಭೃತ್ಯಪಾರ್ಶ್ವಮ್ ।।೨೪।।**

**ಹೇ ನೃಸಿಂಹ** ನರಸಿಂಹನೇ **ತನುಭೃತಾಂ** ದೇಹಿಗಳ **ಆವಿರಿಂಚಾತ್** ಬ್ರಹ್ಮ ಪರ್ಯಂತವಾದ ಅಂದರೆ ಬ್ರಹ್ಮಲೋಕ (ಸತ್ಯರೂಪ) ಪರ್ಯಂತವಾದ **ಆಯುಃ** ಮನ್ವಂತರ ದಿನಕಲ್ಪ ಬ್ರಹ್ಮಕಲ್ಪ ರೂಪವಾದ ಆಯಸ್ಸು **ಶ್ರಿಯಂ** ತ್ರೈಲೋಕ್ಯಾದಿ ಸಂಪತ್ತು **ವಿಭವಂ** ಧನ **ಐಂದ್ರಿಯಂ** ಇಂದ್ರಿಯಗಳಿಂದ ಭೋಗ್ಯವಾದ ವಿಷಯಗಳು ಭೋಗ ಶಕ್ತಿ ಮುಂತಾದ **ಅಮೂಃ** ಈ **ಆಶಿಷಃ** ಅಪೇಕ್ಷಿತ ವಸ್ತುಗಳನ್ನು **ತಸ್ಮಾತ್** ಅವು ಅನಿತ್ಯಗಳಾದ್ದರಿಂದ **ಜ್ಞಃ** ಅವುಗಳ ನಶ್ವರವನ್ನು ಬಲ್ಲ **ಅಹಂ** ನಾನು **ನ ಇಚ್ಛಾಮಿ** ಅಪೇಕ್ಷಿಸುವದಿಲ್ಲ ಅವುಗಳಿಗೆ ಅಸ್ಥಿರ ಪಡಿಸುವನು **ಉರುಕ್ರಮೇಣ** ಯಾರಿಂದಲೂ ಹೋಗಲಾಡಿಸಲಾಗದ(ಅಪ್ರತಿಹತವಾದ)ಮಹಾಸಾಮರ್ಥ್ಯವುಳ್ಳ **ಕಾಲಾತ್ಮನಾ** ಕಾಲನಾಮಕನಾದ **ತೇ** ನಿನ್ನಿಂದ **ಏತೇ** ಈ ಸ್ವರ್ಗಾದಿ ಅಪೇಕ್ಷಣೀಯ ವಸ್ತುಗಳು **ವಿಲುಲಿತಾ ಭವಂತಿ** ನಾಶವಾಗುವವು. ಆದ್ದರಿಂದ **ನಿಜಭೃತ್ಯಪಾರ್ಶ್ವಂ** ನಿನ್ನ ಭಕ್ತರಾದ ಮುಕ್ತರ ಸಮೀಪಕ್ಕೆ **ಮಾಂ** ನನ್ನನ್ನು **ಉಪನಯ** ಕರೆದುಕೊಂಡು ಹೋಗು ಮುಕ್ತನನ್ನು ಮಾಡೆಂದರ್ಥ. ಸ್ವಾಭಾವಿಕ ಸೇವಕರ ಸನ್ನಿಧಿಗೆ ಕರೆದೊಯ್ಯು ಅಂದರೆ ಅವರಲ್ಲಿ ನನ್ನನ್ನು ಸೇರಿಸೆಂದರ್ಥ. ಇನ್ನು ಯಾರು ಅಂಥವರಲ್ಲವೋ ಅವರ ಹತ್ತಿರ

ಕರೆದೊಯ್ಯಬೇಡವೆಂದೂ ಇದರಿಂದ ಹೇಳುವನು. ನಿಜಾನಾಂ ಭೃತಿಃ ಯೇಷಾಂ ತೇ ತನ್ನವರ ಪೋಷಣೆ ಮಾಡುವವರು ಉದರಂಭರರು **ನಿಜಭೃತಯಃ ತೇಷಾಂ** ಅಂಥವರ **ಅಪಾರ್ಶ್ವಂ** ಅಸಮೀಪಕ್ಕೆ **ಉಪನಯ** ಕರೆದೊಯ್ಯಿ ಅವರನ್ನು ದೂರ ಮಾಡೆಂದರ್ಥ. ಸುಖ-ದುಃಖ-ಸಂಪತ್ತು-ವಿಪತ್ತು ಇವುಗಳಲ್ಲಿ ಯಾವುದು ಅಲ್ಲದ ನಿಜಭೃತ್ಯ ಪಾರ್ಶ್ವೋಪನಯನವನ್ನು ಏನೆಂದು ತಿಳಿದು ಅಜ್ಞನಂತೆ ವಿಜ್ಞಾಪಿಸುವಿ ನೀನು ಎಂದರೆ ಮುಂದೆ ವಿವರಿಸುತ್ತ ಸಂಕುಚಿತವಾಗಿ ಹೇಳುವನು **ಹೇ ಉಪ** ಸರ್ವೋತ್ತಮನೇ **ಯಸ್ಮಾದಾಪ್ತಾತ್ ನಿಜಭೃತ್ಯಪಾರ್ಶ್ವಾತ್** ನಿಜಭಕ್ತರ ಸಾಮೀಪ್ಯವನ್ನು ಹೊಂದಿದ್ದರಿಂದ **ಯಾ** ಯಾವುದು **ಗುರುವಿಕ್ರಮೇಣ** ಅಪ್ರತಿಹತವಾದ ಸಾಮರ್ಥ್ಯವುಳ್ಳ **ಕಾಲಾತ್ಮನಾ** ಕಾಲಪ್ರಯತ್ನದಿಂದ **ಅವಿಲುಲಿತಾ** ನಾಶವಿಲ್ಲದಿರುವ **ತಾಂ** ಅಂಥ **ಶ್ರಿಯಂ** ಸಂಪತ್ತನ್ನು **ನಯಮಾಂ** ಯಮನ ಉಪದ್ರವಿಲ್ಲದರಿಂದ ಯಮ ರಹಿತವಾದುದು ಎಂದು **ಜ್ಞಃ** ಜ್ಞಾನಿಗಳು **ಆಹ**(ಶೇಷ) ಹೇಳಿರುವರು **ತಾದೃಶ ತನುಭೃತಾಂ ಆಯುಃ** ನಿತ್ಯವಾದ ಆಯುಷ್ಯ ಅಂದರೆ ಮುಕ್ತಿಯನ್ನು ಎಂದರ್ಥ **ತಸ್ಮಾತ್** ಆದ್ದರಿಂದ **ತಂ** ಅದನ್ನು **ನಾ** ಪುಮಾನ್ **ಅಹಂ** ನಾನು **ಇಚ್ಛಾಮಿ** ಇಚ್ಛಿಸುವೆನು ಎಂದು ಆವೃತ್ತಿ ಮಾಡಿ ಅನ್ವಯ ಹೇಳಬೇಕು. ।।೨೪।।

**ಕುತ್ರಾಶಿಷಃ ಶ್ರುತಿಸುಖಾ ಮೃಗತೃಷ್ಣರೂಪಾಃ**
**ಕ್ವೇದಂ ಕಲೇವರಮಶೇಷ ರುಜಾಂ ವಿರೋಹಮ್ ।**
**ನಿರ್ವಿದ್ಯತೇ ನ ತು ಜನೋ ಯದಪೀಹ ವಿದ್ವಾನ್**
**ಕಾಮಾನಲಂ ಮಧುಲವೈಃ ಶಮಯನ್ ದುರಾಪೈಃ ।।೨೫।।**

**ಶ್ರುತಿಸುಖಾಃ** ಕಿವಿಗೆ ಇಂಪಾದ ಅಂದರೆ ಕೆಲಸಕ್ಕೆ ಬಾರದ **ಆಶಿಷಃ** ಅಪೇಕ್ಷಣೀಯ ಐಶ್ವರ್ಯಾದಿಗಳು **ಕುತ್ರ** ಎಲ್ಲಿ ? **ಅಶೇಷರುಜಾಂ** ಎಲ್ಲ ರೋಗಗಳಿಗೆ **ವಿರೋಹಂ** ವಿಶೇಷವಾಗಿ ಉತ್ಪತ್ತಿ ಸ್ಥಾನವಾದ **ಇದಂ ಕಲೇವರಂ** ಈ ಮನುಷ್ಯ ದೇಹವು **ಕ್ವ** ಎಲ್ಲಿ ಅಂದರೆ ಅಪೇಕ್ಷಿತ ಪದಾರ್ಥಗಳೂ ನಿತ್ಯಸುಖ ಜನಕಗಳಲ್ಲ ರೋಗಾಸ್ಪದವಾದ ಈ ದೇಹವೂ ಇವುಗಳನ್ನು ಇದ್ದಷ್ಟು ಕಾಲ ಅನುಭವಿಸುವ ಶಕ್ತಿಯನ್ನು ಹೊಂದಿಲ್ಲವೆಂದು ಭಾವ. **ಯದಪಿ** ಹೀಗಿದ್ದರೂ **ವಿದ್ವಾನ್** ಅರ್ಥಾತ್ ದೇಹವೂ ವಿಷಯಸುಖವೂ ನಶ್ವರವೆಂದು ತಿಳಿದ **ಜನಃ** ಮನುಷ್ಯನು **ದುರಾಪೈಃ** ದುಃಖದಿಂದ ಸಂಪಾದಿಸಲಾಗುವ **ಮಧುಲವೈಃ** ನೀರಿನ ಹನಿಗಳಂತಿರುವ ಅಲ್ಪಸುಖಗಳಿಂದ **ಕಾಮಾನಲಂ** ಅಪೇಕ್ಷೆ ಎಂಬ ಬೆಂಕಿಯನ್ನು **ಶಮಯನ್** ತೃಪ್ತಿ ಪಡಿಸಲು ಇಚ್ಛಿಸುವವರಾಗಿ (ತೃಪ್ತಿಪಡಿಸುತ್ತವೆ ಎಂಬ ಭ್ರಾಂತಿಯುಕ್ತರಾಗಿ) **ಇಹ** ಇವೆರಡರಲ್ಲಿಯೂ **ನಿರ್ವಿದ್ಯತೇ** ವೈರಾಗ್ಯವನ್ನು ಹೊಂದುತ್ತಿಲ್ಲ, ದೇಹವು ನಿತ್ಯ, ಸಮರ್ಥ. ವಿಷಯಸುಖವೂ ಶಾಶ್ವತವೆಂಬ

ಭ್ರಾಂತಿಯೇ ವೈರಾಗ್ಯ ಹುಟ್ಟದಿರುವದಕ್ಕೆ ಕಾರಣವೆಂದರ್ಥ. ಇಂಥ ಭ್ರಾಂತರಿಗೆ ಕಾಮವೂ ಬೆಂಕಿಯಂತೆ ದುಷ್ಪೂರವೆಂದು ವಿಷಯದುಃಸಂಪಾದ್ಯವೆಂದು ಸುಖವು ಅಲ್ಪಕಾಲಿಕವೆಂದೂ ತಿಳಿಯಲಾರದು ಎಂದು ಭಾವ. **ಆಶಿಷಃ** ಅಭಿಲಾಷೆಗಳು **ಶ್ರುತಿಸಖಾಃ** ಶ್ರವಣೇಂದ್ರಿಯಕ್ಕೆ ಸುಖ ಕೊಡುವವು. ಅಥವಾ ಕೇಳುವ ಮಾತ್ರದಿಂದ ಸುಖಜನಕಗಳು ಅಥವಾ ವಿಷಯಗಳ ವಾರ್ತೆಯಿಂದಲೇ ಸುಖಜನಕ. 'ಶ್ರುತಿಃ ಶ್ರೋತ್ರೇ ತಥಾಮ್ನಾಯೇ ವಾರ್ತಾಯಾಂ ಶ್ರೋತ್ರುಕರ್ಮಣಿ' ಎಂದು ಶ್ರುತಿಯಿದೆ.(ಎಲ್ಲರಿಂದಲೂ ಕೇಳಲ್ಪಟ್ಟವುಗಳಾದ್ದರಿಂದ ವೇದಗಳು ಶ್ರುತಿ ಎನಿಸುತ್ತವೆ.) **ಮೃಗತೃಷ್ಣರೂಪಾಂ** 'ಮೃಗತೃಷ್ಣಾ ಮರೀಚಿಕಾ' ಎಂದು ಅಮರ. ಹ್ರಸ್ವ ಛಾಂದಸ ಅಥವಾ ಮೃಗಾಣಾಂ ತೃಷ್ಣಾ ಅಸ್ತಿ ಅಸ್ಯಾಃ ಇತಿ ಅರ್ಶಆದ್ಯಚ್ ಎಂದು ಭಾನುದೀಕ್ಷಿತರು ವ್ಯಾಖ್ಯಾನಿಸಿದ್ದರಿಂದ ಮೃಗಾಣಾಂ ತೃಷ್ಣಾ ಸಾ ಅಸ್ತಿ ಇತಿ ಎಂದು ಸ್ಥಳವನ್ನು ಸ್ವೀಕರಿಸಿದ್ದರಿಂದ ಪುನ್ನಪುಂಸಕಲಿಂಗವು ಉಚಿತವಾದ್ದರಿಂದ ಹ್ರಸ್ವತೆ ಎಂದು ತಿಳಿಯಬೇಕು. ತಸ್ಯ ರೂಪಮಿವ ರೂಪಂ ಯೇಷಾಂ ಎಂದೂ ಮಾಡಬಹುದು. ಅಪೇಕ್ಷಿತ ವಿಷಯಗಳಿಗೂ ಎಲ್ಲ ರೋಗವುಳ್ಳ ದೇಹಕ್ಕೂ ಸಂಬಂಧವಿದ್ದರೂ ಮಧ್ಯೆ ಬರುವ ಮೃತ್ಯುವು ದುಷ್ಪರಿಹರವೆಂದು **ಯದಪಿ ವಿದ್ವಾನ್** ಯದ್ಯಪಿ ತಿಳಿದಿರುವನು ಆದರೂ **ಜನಃ ಕಾಮಾನಲಂ** ಅಲಂಬುದ್ಧಿಯಿಲ್ಲದ ಅಭಿಲಾಷೆಯನ್ನು ಎಂದರ್ಥ. ನ ವಿದ್ಯತೇ ಅಲಂ ಪರ್ಯಾಪ್ತಂ ಇತಿ ಮತಿರ್ಯಸ್ಯ ಸಃ ಅನಲಃ ತಂ ಇದನ್ನೇ 'ದುಷ್ಪೂರೇಣಾನಲೇನ ಚ' ಎಂಬುದರ ವ್ಯಾಖ್ಯಾನ ಗೀತಾಭಾಷ್ಯದಲ್ಲಿ ಯದ್ಯಪಿ 'ಇಂದ್ರಾದಿಪದಂ ಪ್ರಾಪ್ತಂ ಪುನಃ ಬ್ರಹ್ಮಪದಮಿಚ್ಛತಿ ಇತಿ ಅಲಂಬುದ್ಧಿರ್ನಾಸ್ತೀತಿ ಅನಲಃ' ಎಂದು ಹೇಳಿರುವರು. 'ಮಧು ಕ್ಷೌದ್ರೇ ಜಲೇ ಕ್ಷೀರೇ'ಎಂದು ವಿಶ್ವಕೋಶ ವಿರುವದರಿಂದ ನೀರಿನ, ಹಾಲಿನ, ಜೇನಿನ ಹನಿಯಿಂದ ಬೆಂಕಿಯನ್ನು, ವಿಷಯ ಸುಖಲೇಶದಿಂದ ಕಾಮವನ್ನು ಶಮನಗೊಳಿಸುವವರಾಗಿ **ನ ತು ನಿರ್ವಿದ್ಯತೇ** ವೈರಾಗ್ಯ ಹೊಂದುವದಿಲ್ಲ ವಿಶೇಷಾಸಕ್ತನಾಗುವನು. ।।೨೫।।

ಹೋಗಲಿ ರಾಜನ ರಾಜ್ಯಾದಿಗಳನ್ನು ಕೊಟ್ಟರೆ ಒಪ್ಪುವಿಯಾ ಎಂದರೆ ಅವೂ ನನಗೆ ಸಮ್ಮತವಲ್ಲ ಎಂದು ಹೇಳುವನು.

**ಕ್ವಾಹಂ ರಜಃ ಪ್ರಭವ ಈಶತಮೋಽಧಿಕೇಽಸ್ಮಿನ್**
**ಜಾತಃ ಸುರೇತರಕುಲೇ ಕ್ವ ತವಾನುಕಂಪಾ ।**
**ನ ಬ್ರಹ್ಮಣೋ ನ ತು ಭವಸ್ಯ ನ ವೈ ರಮಾಯಾ**
**ಯನ್ಮೇಽರ್ಪಿತಃ ಶಿರಸಿ ಪದ್ಮಕರಪ್ರಸಾದಃ** ।।೨೬।।

**ಹೇ ಈಶ** ಲಕ್ಷ್ಮೀಕಾಂತನೇ, ಸಮರ್ಥನೇ, ನಿಯಾಮಕನಾದ ನರಸಿಂಹನೇ **ರಜಃ ಪ್ರಭವೇ** ರಜೋಗುಣದಿಂದ ಹುಟ್ಟುವ ಅಥವಾ **ತಮೋಧಿಕೇ** ತಮೋಗುಣವೇ ಬಹಳವಾಗಿವುಳ್ಳ **ಅಸ್ಮಿನ್ ಸುರೇತರಕುಲೇ** ಈ ಅಸುರವಂಶದಲ್ಲಿ **ಜಾತಃ** ಹುಟ್ಟಿದ **ಅಹಂ** ನಾನು **ಕ್ವ** ಎಲ್ಲಿ **ತವ** ಸುರೋತ್ತಮನಾದ ನಿನ್ನ **ಅನುಕಂಪಾ** ಭಕ್ತಾನುಗ್ರಹವೆಂಬ ದಯೆಯು **ಕ್ವ** ಎಲ್ಲಿ? ಪರಸ್ಪರ ವಿರುದ್ಧ ಸ್ವಭಾವವಾದ್ದರಿಂದ ಸುರೋತ್ತಮನು ಅಸುರನಲ್ಲಿ ಅನುಗ್ರಹ ಮಾಡುವದು ಐಶ್ವರ್ಯವೆಂದು ಭಾವ. ಆಶ್ಚರ್ಯವನ್ನೇ ಹೇಳುತ್ತಾರೆ. ನಿರಂತರ ಸಾಧನ ವಿಶಿಷ್ಟರಾದ್ದರಿಂದ ಬೇರೆಯವರಿಗಿಂತ ಅಧಿಕ ಅಭ್ಯುದಯವುಳ್ಳವರಾದರೂ **ಬ್ರಹ್ಮಣಃ** ಬ್ರಹ್ಮದೇವರ **ಶಿರಸಿ** ತಲೆಯಲ್ಲಿ **ನ ಅರ್ಪಿತಃ** ಇಡಲಿಲ್ಲ. **ಭವಸ್ಯ** ರುದ್ರದೇವರ **ಶಿರಸಿ ನ ಅರ್ಪಿತಃ** ತಲೆಯಲ್ಲಿ ಇಡಲಿಲ್ಲ **ರಮಾಯಾಃ** ಲಕ್ಷ್ಮೀದೇವಿಯ ಶಿರಸ್ಸಿನ **ನ ಅರ್ಪಿತಃ** ಇಡದಿರುವ **ಪದ್ಮಕರಪ್ರಸಾದಃ** ಕಮಲದಂತೆ ಕಾಂತಿಯುಳ್ಳ ನಿನ್ನ ಹಸ್ತವನ್ನು ಇಡುವದೆಂಬ ಅನುಗ್ರಹವು **(ಇದಾನೀಂ)** ಈಗ **ಮೇ** ನನ್ನ **ಶಿರಸಿ** ತಲೆಯಲ್ಲಿ **ಅರ್ಪಿತಃ ಇತಿ ಯತ್** ಇಡಲ್ಪಟ್ಟಿದೆಯಾದ್ದರಿಂದ ನಿನ್ನ ಚರಿತ್ರೆ ಆಶ್ಚರ್ಯವೆಂದರ್ಥ. **ಯತ್** ಯಾವ ಕಾರಣ **ಮೇ** ನನ್ನಲ್ಲಿ **ವೈರಮಾಯಾಃ** ವೈರ ವೈಚಿತ್ರ್ಯವು ಅದರ ಪ್ರಯುಕ್ತ ಕಾಪಟ್ಯವು ನ ಇಲ್ಲ. ಆದ್ದರಿಂದ ನನ್ನ ತಲೆಯಲ್ಲಿ ಈ ಕರಪ್ರಸಾದ ಇಟ್ಟಿರುವೆ ಎಂದು ಭಾವ. ಉತ್ತಮ ಕ್ರಮವೂ ಅಲ್ಲ ಅಧಮ ಕ್ರಮವೂ ಅಲ್ಲ. ಆದ್ದರಿಂದ ಈ ಕ್ರಮವು ಮೇಲೆ ಕಾಣುವ ಅರ್ಥ ಅಪಾರ್ಥವೆಂದು ಸೂಚಿಸುವದು ಎಂದು ತಿಳಿಯಬೇಕು.

ವಿಶೇಷ :- ಇದಾನೀಂ ಎಂಬುದರಿಂದ ನನ್ನ ತಲೆಯ ಮೇಲೆ ಈಗ ಇಟ್ಟಿರುವಿ ಅವರಿಗೆ ಸದಾ ಇಟ್ಟಿರುವಿ ಇದರಿಂದ ನನ್ನ ಕನಿಷ್ಠತೆಯನ್ನೇ ಪ್ರಕಟಗೊಳಿಸಿರುವರು.

ಇಲ್ಲಿ ರಮಾದಿಗಳ ಶಿರಸ್ಸಿನಲ್ಲಿಡದ ಹಸ್ತವನ್ನು ನನ್ನ ತಲೆಯಲ್ಲಿರಿಸಿದಿ ಎಂದು ತನಗೆ ಅವರಿಗಿಂತ ಆಧಿಕ್ಯವನ್ನು ಪ್ರಹ್ಲಾದನು ಹೇಳಿದಂತೆ ತೋರುವದು. ಕಾರಣ ಸ್ವಲ್ಪ ಅಧ್ಯಾಹಾರ ಮಾಡಿ ಪ್ರಮಾಣ ಅಬಾಧಿತವಾದ ಯೋಜನೆಯನ್ನು ಆಚಾರ್ಯರು ಸ್ವಯಂ ತಿಳಿಸುವರು.

**... ತಾತ್ಪರ್ಯ ...**

**''ರಮಾದೀನಾಂ ಇದಾನೀಂ ನಾರ್ಪಿತಃ''॥೨೬॥**

ನನ್ನ ತಲೆಯ ಮೇಲೆ ಹೇಗೆ ಈಗಲೇ ಕೈ ಇಟ್ಟಿರುವಿಯೋ ಹಾಗೆ ರಮಾದಿಗಳ ತಲೆಯ ಮೇಲೆ ಇಗಲೇ ಇಟ್ಟಿಲ್ಲ ಸರ್ವದಾ ಇಟ್ಟಿರುವಿ ಎಂದು ಭಾವ. ॥೨೬॥

ಸೇವಾ ವೈಭವವೇ ಅತಿಶಯ ಸಂಪಾದಕವು ಹೊರತು ಐಹಿಕ ಶ್ರೇಷ್ಠತೆ ನೀಚತೆಗಳಲ್ಲವೆಂದು ನಿದರ್ಶನವಿತ್ತು ಪ್ರದರ್ಶಿಸುವರು. ಅಧಿಕಸಾಧನವೇ ಅಧಿಕಫಲಕ್ಕೆ ಕಾರಣ ಹೊರತು ಸತ್ಕುಲ ಪ್ರಸೂತತೆ ಮುಂತಾದದವಲ್ಲವೆಂದು ಹೇಳುವರು-

**ನೈಷಾ ಪರಾವರ(ಸುಹೃದೋ)ಮತಿರ್ಭವತೋ ನನು ಸ್ಯಾತ್**
**ಜಂತೋರ್ಯಥಾಽಽತ್ಮಸುಹೃದೋ ಜಗತಸ್ತಥಾಽಪಿ ।**
**ಸಂಸೇವಯಾ ಸುರತರೋರಿವ ತೇ ಪ್ರಸಾದಃ**
**ಸೇವಾನುರೂಪ ಉದಯೋ ನ ಪರಾವರತ್ವಮ್ ॥೨೭॥**

**ಯಥಾ** ಹೇಗೆ ಜನರಿಗೆ **ಯಾ** ಯಾವ **ಪರಾವರಮತಿಃ** ಉತ್ತಮ ಜಾತಿಯವನು ಅಧಮ ಜಾತಿಯವನು ಎಂಬ ಬುದ್ಧಿಯು ಪ್ರಸಾದಕ್ಕೆ ಕಾರಣವೋ **ತಥಾ** ಹಾಗೆ **ಏಷಾ** ಈ ಉತ್ತಮಾಧಮಜಾತಿಜ್ಞಾನವು **ಆತ್ಮಸುಹೃದಃ** ಜೀವರ ನಿರ್ನಿಮಿತ್ತಬಂಧುವಾದ **ಭವತಃ** ನಿನಗೆ **ನ ಸ್ಯಾತ್ ನನು** ಪ್ರಸಾದಕ್ಕೆ ನಿಶ್ಚಯವಾಗಿ ಕಾರಣವಲ್ಲ **ತಥಾಪಿ** ನಿನ್ನ ಅನುಗ್ರಹಕ್ಕೆ ಅಭಿಜಾತ್ಯವು ಕಾರಣವಾಗದಿದ್ದರೂ ಲೋಕವಿಲಕ್ಷಣನಾದ **ತೇ** ನಿನ್ನ **ಪ್ರಸಾದಃ** ಅನುಗ್ರಹವು **ಸುರತರೋಃ ಇವ** ಕಲ್ಪವೃಕ್ಷದಂತೆ (ಅನುಗ್ರಹದಂತೆ) **ಜಗತಃ** ಜನರ **ಸಂಸೇವಯಾ** ಭಕ್ತಿಯುಕ್ತ ಸೇವೆಯಿಂದ **ಭವತಿ** ಆಗುವದು **ಉದಯಃ** ಅಧಿಕಫಲಪ್ರಾಪ್ತಿಯು **ಸೇವಾನುರೂಪಃ** ಸೇವೆ ಭಕ್ತಿಗಳಿಗೆ ಅನುಗುಣವಾದುದು **ಪರಾವರತ್ವಂ** ಉತ್ತಮಾಧಮಜಾತಿಯು **ನ** ಪ್ರಸಾದ ಕಾರಣವಲ್ಲ. ''ತದೇತತ್ ಪ್ರೇಯಃ'' ಎಂಬ ಶ್ರುತಿಯಂತೆ ಶ್ರೀಹರಿಯು ಆತ್ಮಸುಹೃತ್ ''ಯಾವತ್ ಸೇವಾ ಪರೇ ತತ್ವೇ ತಾವತ್ಸುಖವಿಶೇಷತಾ'' ಎಂಬ ಪ್ರಮಾಣದಂತೆ ಫಲಾಧಿಕ್ಯವು ಸಾಧನಾಧಿಕ್ಯದಿಂದ ದೊರೆಯುವದು ''ಶುಚೀನಾಂ ಶ್ರೀಮತಾಂ ಗೇಹೆ ಯೋಗಭ್ರಷ್ಟೋಽಭಿಜಾಯತೇ' ಎಂದಿರುವದರಿಂದ ಸತ್ಕುಲಪ್ರಸೂತತೆಯು (ಆಭಿಜಾತ್ಯವು) ಸಾಧನೆಗೆ ನಿಮಿತ್ತವಷ್ಟೇ. ಇದು ವಿಜಯಧ್ವಜೀಯ.

**ಶ್ರೀಸತ್ಯಧರ್ಮರ ವಿಶೇಷಾರ್ಥ** :- ಜನರಂತೆ ಇವನು ಶ್ರೇಷ್ಠ ಇವನು ಕನಿಷ್ಠ ಎಂಬ ಬುದ್ಧಿ ನನಗೆ ನಿಶ್ಚಯವಾಗಿ ಇಲ್ಲ ಎಂದು ಹೇಳಿದಷ್ಟೇ ಅದಕ್ಕೇನು ಕಾರಣವೆಂದರೆ ಜಗತ್ತಿಗೆ **ಆತ್ಮಸುಹೃದಃ** ಅನಿಮಿತ್ತೋಪಕಾರಕವೆಂದು ಒಂದು ಕಾರಣ ಅಲ್ಲದೆ ಆತ್ಮನಃ ಏವ ಸುಹೃತ್ ತಸ್ಯ ಅಂದರೆ ಸ್ವರಮಣನಾದ ನಿನಗೆ ಎಂದರ್ಥ. ಸುರತರೋಃ ಸುರತಸ್ಯ ರುಃ ಶಬ್ದಃ ಯಸ್ಯ ಸಃ ತಸ್ಯ ಸುರತ ತತ್‌ಸಂಬುದ್ಧಿ ಮಾತನಾಡುವ ಕಾಮುಕ ಜಂತುವಿಗೆ ಉಂಟಾದ ಮತಿಯು ನಿನಗಿಲ್ಲವೆಂದು ಭಾವ. ಆತ್ಮಾ ಸ್ವಾಮೀ ಚಾಸೌ ಸುಹೃಚ್ಚ ಆತ್ಮಸುಹೃತ್ ತಸ್ಯ ಸುಹೃದಃ ಸ್ವಾಮಿಯಾದ ಸುಹೃತ್ತಾದ ನಿನಗೆ ಎಂದರ್ಥ. **ತಥಾಪಿ** ಬೇರೆಡೆಗೆ ಫಲಕೊಡುವದಕ್ಕೆ

ಪ್ರಯೋಜಕವಾಗಿ ಕಂಡ ಪರಾವರಮತಿ ಇಲ್ಲದಿದ್ದರೂ **ಸುರತರೋರಿವ** ಕಲ್ಪವೃಕ್ಷದಂತೆ **ತೇ ಸಂಸೇವಯಾ** ನಿನ್ನ ಸೇವೆಯಿಂದ ಪ್ರಸಾದವು ಸೇವಾನುಗಣ ಉದಯವು ಜಗತಃ ಎಂಬುದು ಸುಹೃತ್ ಶಬ್ದದೊಡನೆ ಉದಯ ಶಬ್ದದೊಡನೆ ಅನ್ವಯಿಸುವದು (ಜಗತಃ ಸುಹೃತ್) (ಜಗತಃ ಸಂಸೇವಯಾ) ನ ಪರಾವರತ್ವಂ ತತ್ರ ಕಾರಣಂ ಪ್ರಸಾದಕ್ಕೆ ಕಾರಣವಲ್ಲ. **ಹೇ ಪರ** ಎಲೋ ಸರ್ವೋತ್ತಮನೇ **ಸೇವಾನುರೂಪಫಲುದಯಃ ಇತಿ** ಸೇವಾನುಗುಣಫಲ ಕೊಡುವದರಿಂದ **ಭವತಃ** ನಿನಗೆ **ಅವರತ್ವಂ** ವೈಷಮ್ಯ ನೈರ್ಘೃಣ್ಯ ಪ್ರಯುಕ್ತ ನಿಕೃಷ್ಟತೆಯು **ನ** ಇಲ್ಲ. ಅಥವಾ **ಭವತಃ** ನಿನಗೆ **ಪರಾವರತ್ವಂ ಪರೇ** ಉತ್ತಮರೆಂದು ಪ್ರಸಿದ್ಧರಾದವರೂ ಸಹ ಸಣ್ಣವರೋ ಯಾವನಿಗಿಂತ ಅವನು ಪರಾವರನು ಎಂದು ಭಾವ. (ಪರೇ ಅವರೇ ಯಸ್ಮಾತ್ ಸಃ ತಸ್ಯ ಭಾವಃ ಪರಾವರತ್ವಂ) **ಪ್ರಸಾದಃ** ಅವಸಾದನವು (ನಾಶವು) ನ ಇಲ್ಲ ಹೀಗೂ ಅರ್ಥ. ಈ ಪಕ್ಷದಲ್ಲಿ ಭಯ ಎಂಬುದು ಉಭಯಾನ್ವಯ. **ಹೇ ಅನಪರ** ಉತ್ತಮ ರಹಿತನೇ **ಅವರತ್ವಂ** ನೀಚತೆಯು **ಭವತಃ ನ** ಹೇಗೆ ಸುರಭೂರಹವು ಸೇವಾತಿಶಯದಿಂದ ಫಲಾತಿಶಯದಾಯಕವೋ ಹಾಗೆ ನೀನೂ ಸಹ ಆದ್ದರಿಂದ ಆಭಿಜಾತ್ಯ ಪ್ರಯೋಜಕವಲ್ಲ.

ಈ ಶ್ಲೋಕದಲ್ಲಿ ಜಗದೊಡೆಯನಾದ ನಿನಗೆ ಉತ್ತಮ ಅಧಮರೆಂಬ ಜ್ಞಾನವಿಲ್ಲ. ನೀಚನಾದರೂ ಉತ್ತಮ ಸೇವೆ ಮಾಡಿದರೆ ಉತ್ತಮಪ್ರಸಾದ ಹೊಂದುವನು. ಉತ್ತಮನಾದರೂ ಉತ್ತಮಸೇವೆ ಮಾಡದಿದ್ದರೆ ಉತ್ತಮಪ್ರಸಾದವನ್ನು ಹೊಂದುವದಿಲ್ಲ ಎಂದು ತೋರುವದು. ಆದ್ದರಿಂದ ಸ್ವರೂಪಕೃತತಾರತಮ್ಯವಿಲ್ಲವೆಂದು ತಿಳಿಯುವದು. ಅಂದ ಮೇಲೆ ವಿಷಮತೆ ಬರುವದು ಎಂದರೆ ತಾವು ವ್ಯಾಖ್ಯಾನ ಮಾಡಿ ಅದರ ಸ್ಥಿರತೆಗಾಗಿ ಪ್ರಮಾಣ ಉದಾಹರಣೆ ಮಾಡುವರು-

**... ತಾತ್ಪರ್ಯ ...**

**ರಮಾದೀನಾಮಧಿಕೋದಯೋಽಪಿ ಸೇವಾಧಿಕತ್ವಾದೇವ ।**

**ಶ್ರೀ ಬ್ರಹ್ಮಬ್ರಾಹ್ಮೀವೀಂದ್ರಾದಿ ತ್ರಿಕಸ್ತ್ರೀಪುರುಷ್ಕು ತಾಃ ।**
**ತದನ್ಯೇ ಚ ಕ್ರಮಾದೇವ ಸದಾ ಮುಕ್ತೌ ಸೃತಾವಪಿ ।**
**ಹರಿಭಕ್ತೌ ಚ ತಜ್ಞಾನೇ ಸುಖೇ ಚ ನಿಯಮೇನ ತು ।**
**ಪರತಃ ಸ್ವತಃ ಕರ್ಮತೋ ವಾ ನ ಕಥಂಚಿತ್ತದನ್ಯಥಾ ॥ ಇತಿ ಬ್ರಹ್ಮತರ್ಕೇ**

ಉತ್ತಮರಾದ ರಮಾದಿಗಳಿಗೆ ಶ್ರೀಹರಿಯ ಮಹಾಪ್ರಸಾದವು ವ್ಯಕ್ತವಾಗುವದು. ಹೆಚ್ಚಿನ ಸೇವೆ ಮಾಡಿದ್ದರಿಂದಲೇ ಲಕ್ಷ್ಮೀದೇವಿ ಬ್ರಹ್ಮವಾಯುಗಳು

ಸರಸ್ವತೀ ಭಾರತಿಯರು, ಗರುಡ ಶೇಷ ರುದ್ರರು, ಸೌಪರ್ಣಿ ವಾರುಣಿ ಪಾರ್ವತಿಯರು ದೇವೇಂದ್ರನೂ ಅವರಿಂದ ಭಿನ್ನರಾದ ನಿಯತಪದವಿಯುಳ್ಳ ದೇವತೆಗಳೂ ತಮ್ಮ ತಮ್ಮ ಯೋಗ್ಯತಾಕ್ರಮದಿಂದಲೇ ಯಾವಾಗಲೂ ಅಂದರೆ ಸಂಸಾರದಲ್ಲಿಯೂ ಮೋಕ್ಷದಲ್ಲಿಯೂ ಇವುಗಳ ಫಲವಾದ ಸುಖದಲ್ಲಿಯೂ ನಿಯಮದಿಂದ ತಾರತಮ್ಯದಿಂದ ಅಧಿಕರೇ ಆಗಿರುತ್ತಾರೆ. ಇತರರ ವರ-ಶಾಪ ಮೊದಲಾದ ಕರ್ಮಗಳಿಂದಾಗಲಿ, ತಾನು ಮಾಡಿದ ಯಜ್ಞ ಯಾಗಾದಿ ಕರ್ಮಗಳಿಂದಾಗಲಿ ಯಾವಕಾರಣದಿಂದಲೂ ಆನಂದತಾರತಮ್ಯಕ್ರಮವು ವ್ಯತ್ಯಾಸವಾಗಲಾರದು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ.

ಮುಕ್ತಿಯಲ್ಲಾದರೂ ಬ್ರಹ್ಮಾ-ಸರಸ್ವತೀ, ಸುಪರ್ಣ-ಸೌಪರ್ಣಿ, ಶೇಷ-ವಾರುಣಿ ಹೀಗೆ ಇಬ್ಬಿಬ್ಬರನ್ನು ಸಂಸಾರದಲ್ಲಿಯೂ ಸ್ವೀಕರಿಸಬೇಕು ಎಂದು ಹೇಳಿದ್ದರಿಂದ ವಾಯು-ಭಾರತಿ, ರುದ್ರ-ಪಾರ್ವತಿಯರನ್ನು ತೆಗೆದುಕೊಳ್ಳಬಹುದು ಎಂದು ತಿಳಿಯಬೇಕು. ಸ್ವತಃ ಎಂದರೆ ಸ್ವತಂತ್ರನಾದ ಶ್ರೀಹರಿಯಿಂದಲೂ ಈ ನಿಯಮದ ಬದಲಾವಣೆ ಇಲ್ಲವೆಂದು ಅರ್ಥಮಾಡಿರುವರು. 'ಪರಸ್ವೋ ಹರಿರುದ್ದಿಷ್ಟಃ' 'ಸ್ವಾತ್ಮನಾ ಚೋತ್ತರಯೋಃ' 'ಸ್ವಾತಂತ್ರ್ಯಾತ್ ಸ್ವ ಇತಿ ಪ್ರೋಕ್ತಃ' ಮುಂತಾಗಿ ಪ್ರಮಾಣಗಳಿವೆ ಕಥಂಚಿತ್ ಯಾವದೋ ಒಂದು ಉಪಾಧಿಯಿಂದ ಎಂದರ್ಥ. **ತತ್** ನಿಯಮನವು ಅನ್ಯಥಾ ಆಗಲಾರದು ತತ್ ಎಂಬುದು ಅವ್ಯಯ. ತತ್ ಸಃ ನಿಯಮಃ ಅನ್ಯಥಾ ನ. ತತ್ ಆದಿಕ್ಯಂ ಅನ್ಯಥಾ ನ ಭವೇತ್ ಎಂದರ್ಥ. ।।೨೭।।

**ಏವಂ ಜನಂ ನಿಪತಿತಂ ಪ್ರಭವಾ ಹಿ ಕೂಪೇ**
**ಕಾಮಾಭಿಕಾಮಮನು ಯಃ ಪ್ರಪತನ್ ಪ್ರಸಂಗಾತ್ ।**
**ಕೃತ್ವಾಽಽತ್ಮಸಾತ್ ಸುರರ್ಷಿಣಾ ಭಗವನ್ ಗೃಹೀತಃ**
**ಸೋಽಹಂ ಕಥಂ ನು ವಿಸೃಜೇ ತವ ಭೃತ್ಯಸೇವಾಮ್ ।।೨೮।।**

**ಹೇ ಭಗವನ್** ಶ್ರೀಹರಿಯೇ **ಏವಂ** ಫಲೋದಯವು ಸೇವಾನುರೂಪವೆಂದು ಶಾಸ್ತ್ರಸಿದ್ಧವಾಗಿರುವದರಿಂದ ಅಥವಾ ಕಾಮಾನಲಂ ಮುಂತಾಗಿ ಹೇಳಿದಂತೆ **ಯಃ ಅಹಂ** ಯಾವ ನಾನು **ಕಾಮಾಭಿಕಾಮಂ** ವಿಷಯಗಳನ್ನೇ ಅಪೇಕ್ಷಿಸುವ ಆದ್ದರಿಂದಲೇ **ಪ್ರಭವಾ ಹಿ ಕೂಪೇ** ಜನ್ಮವೆಂಬ ಸರ್ಪದ ವಿಷದಿಂದ ತುಂಬಿದ ಸಂಸಾರವೆಂಬ ಭಾವಿಯಲ್ಲಿ (ಅಥವಾ ಸತ್ಯಧರ್ಮತೀರ್ಥರು ಹೇಳುವಂತೆ **ಪ್ರ** ನೀನು ಮತ್ತು ನಿನ್ನ ದಾಸರ ಸೇವೆ ಇಲ್ಲದೇ ಪರಿಹರಿಸಲಾಗದ್ದರಿಂದ ಪ್ರಕೃಷ್ಟವಾದ **ಭವ** ಸಂಸಾರವೆಂಬ **ಅಹಿಕೂಪೇ** ವಿಷಯಗಳೆಂಬ ವಿಷದಿಂದ ವಿಷಮವಾದುದರಿಂದ ಹಾವುಳ್ಳ ಬಾವಿಯಲ್ಲಿ) **ನಿಪತಿತಂ** ಸಿಕ್ಕಿಬಿದ್ದಿರುವ **ಜನಂ ಅನು** ಜನರನ್ನು ಅನುಸರಿಸಿ **ಪ್ರಸಂಗಾತ್**

ಜನ್ಮಾಪಾದಕದುಷ್ಕರ್ಮಸಂಬಂಧದಿಂದ ಆ ಜನರ ಅತಿಶಯ ಸಂಬಂಧದಿಂದ ಅಥವಾ 'ಲ್ಯಪ್‌ಲೋಪನಿಮಿತ್ತಾ ಪಂಚಮೀ' **ಸಂಗಂ ಪ್ರಾಪ್ಯ** ಸಹವಾಸವನ್ನು ಹೊಂದಿ **ಪ್ರಪತನ್** ಪತನೋನ್ಮುಖನಾದ ಸಂಸಾರದಲ್ಲಿ ಬೀಳುತ್ತಿರುವ ನಾನು **ಸುರರ್ಷಿಣಾ** ದೇವಋಷಿಗಳಾದ ನಾರದರಿಂದ **ಆತ್ಮಸಾತ್ ಕೃತ್ವಾ** ತನ್ನವರಲ್ಲಿ ಒಬ್ಬನೆಂದು ಭಾವಿಸಿ **ಗೃಹೀತಃ** ಅನುಗ್ರಹೀತನಾದೆನೋ (ಉಪಸರ್ಗಗಳು ಧಾತುಲೀನ ಅರ್ಥದ್ಯೋತಕ-ಗಳು) **ಸಃ ಅಹಂ** ಅಂಥ ನಾನು **ತವ ಭೃತ್ಯಸೇವಾಂ ಕಥಂ ವಿಸೃಜೇ** ನಿನ್ನ ಭೃತ್ಯರ ಸೇವೆಯನ್ನು ಹೇಗೆ ಬಿಟ್ಟೇನು. ಬಿಡಲಾರೆನೆಂದರ್ಥ ಇದರಿಂದ 'ಉಪನಯ ಮಾಂ ನಿಜಭೃತ್ಯಪಾರ್ಶ್ವಂ' ಎಂದು ಹೇಳಿದ್ದು ನಾಲಿಗೆ ತುದಿಯ ಮಾತಲ್ಲ. ಮನಃಪೂರ್ವಕವಾದುದು ಎಂದು ಧ್ವನಿತವಾಗುವದು. ।।೨೮।।

ಭಕ್ತರನ್ನು ರಕ್ಷಿಸಲು ದುಷ್ಟರನ್ನು ಶಿಕ್ಷಿಸಲು ಭಕ್ತವಾಕ್ಯ ಪರಿಪಾಲನೆಗಾಗಿಯೂ ನಿನ್ನ ಅವತಾರವೆಂದು ಸ್ತುತಿಸುವರು-

**ಮತ್ಪ್ರಾಣರಕ್ಷಣಮನಂತ ಪಿತುರ್ವಧಂ ಚ**
**ಮನ್ಯೇ ಸ್ವಭೃತ್ಯಋಷಿವಾಕ್ಯಮೃತಂ ವಿಧಾತುಮ್ ।**
**ಖಡ್ಗಂ ಪ್ರಗೃಹ್ಯ ಯದವೋಚದಸದ್ ವಿಧಿತ್ಸು-**
**ಸ್ತ್ವಾಮೀಶ್ವರೋ ಮದಪರೋಽವತು ಕಂ ಹರಾಮಿ ।।೨೯।।**

**ಹೇ ಅನಂತ** ದೇಶ-ಕಾಲ-ಗುಣಗಳಿಂದ ಪರಿಪೂರ್ಣನೇ **ಮತ್ಪ್ರಾಣರಕ್ಷಣಂ** ನನ್ನ ಪ್ರಾಣರಕ್ಷಣೆಯನ್ನು **ಪಿತುಃ** ನನ್ನ ತಂದೆಯ **ವಧಂ ಚ** ಸಂಹಾರವನ್ನು **ಸ್ವಭೃತ್ಯಋಷಿವಾಕ್ಯಂ** ನಿನ್ನ ಭಕ್ತರಾದ ಸೇವಕರಾದ ನಾರದರ 'ನೀನು ಭಕ್ತರಕ್ಷಕ, ದುಷ್ಟಶಿಕ್ಷಕ, ಸರ್ವತ್ರ ವ್ಯಾಪ್ತ' ಮುಂತಾದ ಮಾತುಗಳನ್ನು **ಅಸತ್ ವಿಧಿತ್ಸುಃ** ಸುಳ್ಳು ಮಾಡಲಿಚ್ಛಿಸಿ**(ಮತ್ಪಿತಾ)** ನನ್ನ ತಂದೆಯು **ಖಡ್ಗಂ ಪ್ರಗೃಹ್ಯ** ಕತ್ತಿಯನ್ನು ಎತ್ತಿ ಹಿಡಿದು **ಮದಪರಃ** ನನಗಿಂತ ಭಿನ್ನನಾದ **ಈಶ್ವರಃ** ಜಗನ್ನಿಯಾಮಕನು **(ಯದ್ಯಸ್ತಿ)** ಇರುವದಾದರೆ **(ಸಃ)** ಅವನು **ತ್ವಾಂ** ನಿನ್ನನ್ನು **ಅವತು** ರಕ್ಷಿಸಲಿ **ಕಂ ಹರಾಮಿ** ನಿನ್ನ ತಲೆಯನ್ನು ಕತ್ತರಿಸುವೆನು **ಇತಿ** ಎಂದು **ಯದವೋಚತ್** ಏನು ಹೇಳಿದನೋ **ತತ್ ಚ** ಅದನ್ನು **ಋತಂ ವಿಧಾತುಂ** ನಿಜವಾಗಿ ಮಾಡಲು **ಅಯಂ ಅವತಾರಃ** ಈ ನರಸಿಂಹಾವತಾರವು **ಮನ್ಯೇ** ಎಂದು ನಾನು ತಿಳಿಯುವೆನು.

ವಿಶೇಷ :- ನರಸಿಂಹಾವತಾರಕ್ಕೆ ಪ್ರಹ್ಲಾದನ ರಕ್ಷಣೆ, ಹಿರಣ್ಯಕಶಿಪು ಸಂಹಾರ, ಬ್ರಹ್ಮಾದಿಭಕ್ತರ ವಾಕ್ಯಗಳನ್ನು ಸತ್ಯವಾಗಿಸುವದು ಪ್ರಯೋಜನವೆಂದು ತಿಳಿಸದಂತಾಯಿತು. 'ಸ್ವಭೃತ್ಯಂ ಮಾಂ ಪ್ರತಿ ಋಷಿವಾಕ್ಯಂ' ಅಂದರೆ ತನ್ನ ಭೃತ್ಯನಾದ ನನಗೆ ನಾರದರು ಹೇಳಿದ 'ಹರಿ ಸರ್ವೋತ್ತಮ' 'ಭೂತೇಷು ಭಗವಾನಾಸ್ತ

ಈಶ್ವರಃ' । 'ಯತ್ಸರ್ವತ್ರ ತದೀಕ್ಷಣಃ' ಮುಂತಾದ ವಾಕ್ಯವನ್ನು ಹೀಗೂ ಅರ್ಥ. ಮದಪರಃ ಎಂಬುದು ಸಮಸ್ತ ಮತ್ತು ವ್ಯಸ್ತವೂ ಆಗಿದೆ. ವ್ಯಸ್ತವಾದಾಗ ನನ್ನಿಂದ ಬೇರೆ ಈಶ್ವರನು ಇದ್ದರೆ ನಿನ್ನ ರಕ್ಷಿಸಲಿ ಎಂದರ್ಥ. ಮದಪರಃ ಎಂದು ಆವತ್ತಿಮಾಡಿ ಅಹಂಕಾರದಿಂದ ಏನು ಹೇಳಿದನೋ ಅದನ್ನು ಎಂದರ್ಥ, ಅಪರಿಚ್ಛಿನ್ನನೇ ಅಬದ್ಧನೇ **ಅನಂತ** ಯಾರಿಂದಲೂ ನಾಶವಿಲ್ಲದ **ಪಿತುಃ** ನನ್ನ ತಂದೆಯು ಹೀಗೂ ಅರ್ಥ. ಈಶ್ವರಃ ಅಸ್ತೀತ್ಯುಕ್ತಃ ಇದ್ದಾನೆ ಎಂದು ಹೇಳಿದ ಈಶ್ವರನು ಮದಪರಃ ಮದವಿಷಯಃ ನನ್ನ ಕಣ್ಣಿಗೇ ಬಿದ್ದಿಲ್ಲ ಆದ್ದರಿಂದ **ಕಂ ಹರಾಮಿ** ಯಾರನ್ನು ಕೊಲ್ಲಲಿ (ನಾನು ಎಂಬ ಮುಖ್ಯವಿಷಯ ಸಿಗದಿರುವದರಿಂದ) **ತವ ಕಂ ಹರಾಮಿ** ನಿನ್ನ ತಲೆಕತ್ತರಿಸುವನು ಎಂದು ಅವೃತ್ತಿಮಾಡಿ ಅರ್ಥವಿಶೇಷಲಾಭದ ಲೋಭದಿಂದ ಅನ್ವಯ ಮಾಡಬಹುದು ಎನ್ನುತ್ತಾರೆ ಶ್ರೀಸತ್ಯಧರ್ಮತೀರ್ಥಶ್ರೀಪಾದಂಗಳವರು. ।।೨೯।।

ಕೇವಲ ಹುಬ್ಬುಹಾರಿಸುವದರಿಂದ ಜಗತ್ತಿನ ಸೃಷ್ಟಿ ಮುಂತಾದವನ್ನು ಮಾಡುವ ನಿನಗೆ ನನ್ನ ತಂದೆಯನ್ನು ಸಂಹರಿಸುವದು ಹೇಗೆ ಆಶ್ಚರ್ಯವಲ್ಲವೋ ಹಾಗೆ ವ್ಯಾಪ್ತನಾದವನಿಗೆ ಸ್ತಂಬದಿಂದ ಹೊರಬರುವದೂ ಆಶ್ಚರ್ಯಜನಕವೇನಲ್ಲ ಎಂದು ವಿಜ್ಞಾಪಿಸುವನು-

**ಏಕಸ್ತ್ವಮೇವ ಜಗದೇತದಮುಷ್ಯ ಯತ್ ತ್ವ-**
**ಮಾದ್ಯಂತಯೋಃ ಪೃಥಗವಸ್ಯಸಿ ಮಧ್ಯತಶ್ಚ ।**
**ಸೃಷ್ಟ್ವಾ ಗುಣವ್ಯತಿಕರಂ ನಿಜಮಾಯಯೇದಂ**
**ನಾನೇವ ತೈರವಸಿತಸ್ತದನುಪ್ರವಿಷ್ಟಃ ।।೩೦।।**

**ಏತತ್ ಜಗತ್** ಈ ಪ್ರಪಂಚವು **ತ್ವಮೇವ** ನಿನ್ನ ಅಧೀನವಾದ್ದರಿಂದ ನೀನೇ ಎಂದು ಹೇಳಲ್ಪಟ್ಟಿದೆ. ಏಕೆಂದರೆ **ತ್ವಮೇವ ಏಕಃ** ನೀನೇ ಪ್ರಧಾನನು ಮುಖ್ಯನು ಮತ್ತು ಅಭಿನ್ನನು. ಈ ಜಗತ್ತು ಅಮುಖ್ಯ ಮತ್ತು ಭಿನ್ನವಾದುದು **ಯತ್** ಯಾವ ಕಾರಣ **ತ್ವಂ** ನೀನು **ಅಸ್ಯ** ಈ ಜಗತ್ತಿನ **ಆದ್ಯಂತಯೋಃ** ಹುಟ್ಟುವ ಮೊದಲು ನಿಧನಾನಂತರ **ಚ** ಮತ್ತು **ಮಧ್ಯತಃ** ಸ್ಥಿತಿಕಾಲದಲ್ಲಿ **ಪೃಥಕ್** ಜಗತ್ತಿನಿಂದ ಭಿನ್ನನಾಗಿ ಇರುವಿ ಎಂದು **ಅವಸ್ಯಸಿ** ಶಾಸ್ತ್ರದಿಂದ ನಿಶ್ಚಯಿಸಲ್ಪಟ್ಟಿರುವಿ(ಇದರಿಂದ ಜಗತ್ತು ನಿನ್ನ ವಿಕಾರವೆಂದಾಗಲಿ ನಿನ್ನ ವಿವರ್ತ ಭ್ರಾಂತಿಕಲ್ಪಿತ ಆರೋಪಿತವೆಂದಾಗಲಿ ಶಾಸ್ತ್ರನಿರ್ಣಯವಲ್ಲವೆಂದು ತಿಳಿಸಿರುವರು) ಮತ್ತು ಪುನಃ ಸೃಷ್ಟಿಕಾಲದಲ್ಲಿ **ನಿಜಮಾಯಯಾ** ನಿನ್ನ ಸಾಮರ್ಥ್ಯದಿಂದಲೇ ನಿನ್ನ ಅಧೀನವಾದ ಚಿತ್‌ಪ್ರಕೃತಿಗಳಿಂದ **ಇದಂ** ಈ ಕಣ್ಣಿಗೆ ಕಾಣುವ **ಗುಣವ್ಯತಿಕರಂ** ಸತ್ವರಜಸ್ತಮೋಗುಣ ವೈಷಮ್ಯರೂಪವಾದ ಜಗತ್ತನ್ನು **ಸೃಷ್ಟ್ವಾ** ನಿರ್ಮಿಸಿ **ತದನುಪ್ರವಿಷ್ಟಃ** ಅಸ್ವತಂತ್ರಗಳಾದ ಅವುಗಳನ್ನು ಪ್ರವೇಶಿಸಿ ಪ್ರೇರಿಸುವ ನೀನು

ಜನ್ಮಾಪಾದಕದುಷ್ಕರ್ಮಸಂಬಂಧದಿಂದ ಆ ಜನರ ಅತಿಶಯ ಸಂಬಂಧದಿಂದ ಅಥವಾ 'ಲ್ಯಪ್‌ಲೋಪನಿಮಿತ್ತಾ ಪಂಚಮೀ' **ಸಂಗಂ ಪ್ರಾಪ್ಯ** ಸಹವಾಸವನ್ನು ಹೊಂದಿ **ಪ್ರಪತನ್** ಪತನೋನ್ಮುಖನಾದ ಸಂಸಾರದಲ್ಲಿ ಬೀಳುತ್ತಿರುವ ನಾನು **ಸುರರ್ಷಿಣಾ** ದೇವಋಷಿಗಳಾದ ನಾರದರಿಂದ **ಆತ್ಮಸಾತ್ ಕೃತ್ವಾ** ತನ್ನವರಲ್ಲಿ ಒಬ್ಬನೆಂದು ಭಾವಿಸಿ **ಗೃಹೀತಃ** ಅನುಗೃಹೀತನಾದೆನೋ (ಉಪಸರ್ಗಗಳು ಧಾತುಲೀನ ಅರ್ಥದ್ಯೋತಕ-ಗಳು) **ಸಃ ಅಹಂ** ಅಂಥ ನಾನು **ತವ ಭೃತ್ಯಸೇವಾಂ ಕಥಂ ವಿಸೃಜೇ** ನಿನ್ನ ಭೃತ್ಯರ ಸೇವೆಯನ್ನು ಹೇಗೆ ಬಿಟ್ಟೇನು. ಬಿಡಲಾರೆನೆಂದರ್ಥ ಇದರಿಂದ 'ಉಪನಯ ಮಾಂ ನಿಜಭೃತ್ಯಪಾರ್ಶ್ವಂ' ಎಂದು ಹೇಳಿದ್ದು ನಾಲಿಗೆ ತುದಿಯ ಮಾತಲ್ಲ. ಮನಃಪೂರ್ವಕವಾದುದು ಎಂದು ಧ್ವನಿತವಾಗುವದು. ।।೨೮।।

ಭಕ್ತರನ್ನು ರಕ್ಷಿಸಲು ದುಷ್ಟರನ್ನು ಶಿಕ್ಷಿಸಲು ಭಕ್ತವಾಕ್ಯ ಪರಿಪಾಲನೆಗಾಗಿಯೂ ನಿನ್ನ ಅವತಾರವೆಂದು ಸ್ತುತಿಸುವರು-

**ಮತ್ಪ್ರಾಣರಕ್ಷಣಮನಂತ ಪಿತುರ್ವಧಂ ಚ**
**ಮನ್ಯೇ ಸ್ವಭೃತ್ಯಋಷಿವಾಕ್ಯಮೃತಂ ವಿಧಾತುಮ್ ।**
**ಖಡ್ಗಂ ಪ್ರಗೃಹ್ಯ ಯದವೋಚದಸದ್ ವಿಧಿತ್ಸು-**
**ಸ್ತ್ವಾಮೀಶ್ವರೋ ಮದಪರೋಽವತು ಕಂ ಹರಾಮಿ ।।೨೯।।**

**ಹೇ ಅನಂತ** ದೇಶ-ಕಾಲ-ಗುಣಗಳಿಂದ ಪರಿಪೂರ್ಣನೇ **ಮತ್ಪ್ರಾಣರಕ್ಷಣಂ** ನನ್ನ ಪ್ರಾಣರಕ್ಷಣೆಯನ್ನು **ಪಿತುಃ** ನನ್ನ ತಂದೆಯ **ವಧಂ ಚ** ಸಂಹಾರವನ್ನು **ಸ್ವಭೃತ್ಯಋಷಿವಾಕ್ಯಂ** ನಿನ್ನ ಭಕ್ತರಾದ ಸೇವಕರಾದ ನಾರದರ 'ನೀನು ಭಕ್ತರಕ್ಷಕ, ದುಷ್ಟಶಿಕ್ಷಕ, ಸರ್ವತ್ರ ವ್ಯಾಪ್ತ' ಮುಂತಾದ ಮಾತುಗಳನ್ನು **ಅಸತ್ ವಿಧಿತ್ಸುಃ** ಸುಳ್ಳು ಮಾಡಲಿಚ್ಛಿಸಿ(**ಮತ್ಪಿತಾ**) ನನ್ನ ತಂದೆಯು **ಖಡ್ಗಂ ಪ್ರಗೃಹ್ಯ** ಕತ್ತಿಯನ್ನು ಎತ್ತಿ ಹಿಡಿದು **ಮದಪರಃ** ನನಗಿಂತ ಭಿನ್ನನಾದ **ಈಶ್ವರಃ** ಜಗನ್ನಿಯಾಮಕನು (**ಯದ್ಯಸ್ತಿ**) ಇರುವದಾದರೆ (**ಸಃ**) ಅವನು **ತ್ವಾಂ** ನಿನ್ನನ್ನು **ಅವತು** ರಕ್ಷಿಸಲಿ **ಕಂ ಹರಾಮಿ** ನಿನ್ನ ತಲೆಯನ್ನು ಕತ್ತರಿಸುವೆನು **ಇತಿ** ಎಂದು **ಯದವೋಚತ್** ಏನು ಹೇಳಿದನೋ **ತತ್ ಚ** ಅದನ್ನು **ಋತಂ ವಿಧಾತುಂ** ನಿಜವಾಗಿ ಮಾಡಲು **ಅಯಂ ಅವತಾರಃ** ಈ ನರಸಿಂಹಾವತಾರವು **ಮನ್ಯೇ** ಎಂದು ನಾನು ತಿಳಿಯುವೆನು.

ವಿಶೇಷ :- ನರಸಿಂಹಾವತಾರಕ್ಕೆ ಪ್ರಹ್ಲಾದನ ರಕ್ಷಣೆ, ಹಿರಣ್ಯಕಶಿಪು ಸಂಹಾರ, ಬ್ರಹ್ಮಾದಿಭಕ್ತರ ವಾಕ್ಯಗಳನ್ನು ಸತ್ಯವಾಗಿಸುವದು ಪ್ರಯೋಜನವೆಂದು ತಿಳಿಸಿದಂತಾಯಿತು. 'ಸ್ವಭೃತ್ಯಂ ಮಾಂ ಪ್ರತಿ ಋಷಿವಾಕ್ಯಂ' ಅಂದರೆ ತನ್ನ ಭೃತ್ಯನಾದ ನನಗೆ ನಾರದರು ಹೇಳಿದ 'ಹರಿ ಸರ್ವೋತ್ತಮ' 'ಭೂತೇಷು ಭಗವಾನಾಸ್ತ

ಈಶ್ವರಃ' । 'ಯತ್ಸರ್ವತ್ರ ತದೀಕ್ಷಣಃ' ಮುಂತಾದ ವಾಕ್ಯವನ್ನು ಹೀಗೂ ಅರ್ಥ. ಮದಪರಃ ಎಂಬುದು ಸಮಸ್ತ ಮತ್ತು ವ್ಯಸ್ತವೂ ಆಗಿದೆ. ವ್ಯಸ್ತವಾದಾಗ ನನ್ನಿಂದ ಬೇರೆ ಈಶ್ವರನು ಇದ್ದರೆ ನಿನ್ನ ರಕ್ಷಿಸಲಿ ಎಂದರ್ಥ. ಮದಪರಃ ಎಂದು ಆವತ್ತಿಮಾಡಿ ಅಹಂಕಾರದಿಂದ ಏನು ಹೇಳಿದನೋ ಅದನ್ನು ಎಂದರ್ಥ, ಅಪರಿಚ್ಛಿನ್ನನೇ ಅಬದ್ಧನೇ **ಅನಂತ** ಯಾರಿಂದಲೂ ನಾಶವಿಲ್ಲದ **ಪಿತುಃ** ನನ್ನ ತಂದೆಯು ಹೀಗೂ ಅರ್ಥ. ಈಶ್ವರಃ ಅಸ್ತೀತ್ಯುಕ್ತಃ ಇದ್ದಾನೆ ಎಂದು ಹೇಳಿದ ಈಶ್ವರನು ಮದಪರಃ ಮದವಿಷಯಃ ನನ್ನ ಕಣ್ಣಿಗೇ ಬಿದ್ದಿಲ್ಲ ಆದ್ದರಿಂದ **ಕಂ ಹರಾಮಿ** ಯಾರನ್ನು ಕೊಲ್ಲಲಿ (ನಾನು ಎಂಬ ಮುಖ್ಯವಿಷಯ ಸಿಗದಿರುವದರಿಂದ) **ತವ ಕಂ ಹರಾಮಿ** ನಿನ್ನ ತಲೆಕತ್ತರಿಸುವನು ಎಂದು ಅವೃತ್ತಿಮಾಡಿ ಅರ್ಥವಿಶೇಷಲಾಭದ ಲೋಭದಿಂದ ಅನ್ವಯ ಮಾಡಬಹುದು ಎನ್ನುತ್ತಾರೆ ಶ್ರೀಸತ್ಯಧರ್ಮತೀರ್ಥಶ್ರೀಪಾದಂಗಳವರು. ॥೨೯॥

ಕೇವಲ ಹುಬ್ಬುಹಾರಿಸುವದರಿಂದ ಜಗತ್ತಿನ ಸೃಷ್ಟಿ ಮುಂತಾದವನ್ನು ಮಾಡುವ ನಿನಗೆ ನನ್ನ ತಂದೆಯನ್ನು ಸಂಹರಿಸುವದು ಹೇಗೆ ಆಶ್ಚರ್ಯವಲ್ಲವೋ ಹಾಗೆ ವ್ಯಾಪ್ತನಾದವನಿಗೆ ಸ್ತಂಬದಿಂದ ಹೊರಬರುವದೂ ಆಶ್ಚರ್ಯಜನಕವೇನಲ್ಲ ಎಂದು ವಿಜ್ಞಾಪಿಸುವನು-

**ಏಕಸ್ತ್ವಮೇವ ಜಗದೇತದಮುಷ್ಯ ಯತ್ ತ್ವ-**
**ಮಾದ್ಯಂತಯೋಃ ಪೃಥಗವಸ್ಯಸಿ ಮಧ್ಯತಶ್ಚ ।**
**ಸೃಷ್ಟ್ವಾ ಗುಣವ್ಯತಿಕರಂ ನಿಜಮಾಯಯೇದಂ**
**ನಾನೇವ ತೈರವಸಿತಸ್ತದನುಪ್ರವಿಷ್ಟಃ ॥೩೦॥**

**ಏತತ್ ಜಗತ್** ಈ ಪ್ರಪಂಚವು **ತ್ವಮೇವ** ನಿನ್ನ ಅಧೀನವಾದ್ದರಿಂದ ನೀನೇ ಎಂದು ಹೇಳಲ್ಪಟ್ಟಿದೆ. ಏಕೆಂದರೆ **ತ್ವಮೇವ ಏಕಃ** ನೀನೇ ಪ್ರಧಾನನು ಮುಖ್ಯನು ಮತ್ತು ಅಭಿನ್ನನು. ಈ ಜಗತ್ತು ಅಮುಖ್ಯ ಮತ್ತು ಭಿನ್ನವಾದುದು **ಯತ್** ಯಾವ ಕಾರಣ **ತ್ವಂ** ನೀನು **ಅಸ್ಯ** ಈ ಜಗತ್ತಿನ **ಆದ್ಯಂತಯೋಃ** ಹುಟ್ಟುವ ಮೊದಲು ನಿಧನಾನಂತರ **ಚ** ಮತ್ತು **ಮಧ್ಯತಃ** ಸ್ಥಿತಿಕಾಲದಲ್ಲಿ **ಪೃಥಕ್** ಜಗತ್ತಿನಿಂದ ಭಿನ್ನನಾಗಿ ಇರುವಿ ಎಂದು **ಅವಸ್ಯಸಿ** ಶಾಸ್ತ್ರದಿಂದ ನಿಶ್ಚಯಿಸಲ್ಪಟ್ಟಿರುವಿ(ಇದರಿಂದ ಜಗತ್ತು ನಿನ್ನ ವಿಕಾರವೆಂದಾಗಲಿ ನಿನ್ನ ವಿವರ್ತ ಭ್ರಾಂತಿಕಲ್ಪಿತ ಆರೋಪಿತವೆಂದಾಗಲಿ ಶಾಸ್ತ್ರನಿರ್ಣಯವಲ್ಲವೆಂದು ತಿಳಿಸಿರುವರು) ಮತ್ತು ಪುನಃ ಸೃಷ್ಟಿಕಾಲದಲ್ಲಿ **ನಿಜಮಾಯಯಾ** ನಿನ್ನ ಸಾಮರ್ಥ್ಯದಿಂದಲೇ ನಿನ್ನ ಅಧೀನವಾದ **ಚಿತ್‌ಪ್ರಕೃತಿಗಳಿಂದ** **ಇದಂ** ಈ ಕಣ್ಣಿಗೆ ಕಾಣುವ **ಗುಣವ್ಯತಿಕರಂ** ಸತ್ವರಜಸ್ತಮೋಗುಣ ವೈಷಮ್ಯರೂಪವಾದ ಜಗತ್ತನ್ನು **ಸೃಷ್ಟ್ವಾ** ನಿರ್ಮಿಸಿ **ತದನುಪ್ರವಿಷ್ಟಃ** ಅಸ್ವತಂತ್ರಗಳಾದ ಅವುಗಳನ್ನು ಪ್ರವೇಶಿಸಿ ಪ್ರೇರಿಸುವ ನೀನು

**ತೈಃ** ಭಿನ್ನವಾದ ನಿರ್ಮಿತಗಳಾದ ಆ ಪದಾರ್ಥಗಳಿಂದ **ನಾನಾ ಇವ** ಭಿನ್ನನೆಂಬಂತೆ **ಅವಸಿತಃ ಅಸಿ** ತಿಳಿಯುತ್ತಿ. ವಸ್ತುತಃ ಅವುಗಳಲ್ಲಿರುವ ನೀನು ಒಬ್ಬನೇ ಎಂದರ್ಥ. ಈ ಎರಡು ಕಾರಣಗಳಿಂದ ನೀನೇ ಮುಖ್ಯನು ಜಗತ್ತು ಅಮುಖ್ಯವೆಂದರ್ಥ. 'ಪ್ರತಿದೃಶಮಿವ ನೈಕಧಾರ್ಕಮೇಕೆ' ಎಂಬ ತಮ್ಮ ಮಾತು 'ಇಂದ್ರೋ ಮಾಯಾಭಿಃ ಪುರುರೂಪ ಈಯತೇ' ಎಂಬ ಶ್ರುತಿ ಶ್ರೀಹರಿಯು ಅನೇಕರೂಪನೆಂದು ತಿಳಿಸುವವು ''ನೇಹ ನಾನಾಸ್ತಿ ಕಿಂಚನ'' ಶ್ರುತಿಯು ಶ್ರೀಹರಿಯರೂಪಗಳಲ್ಲಿ ಭೇದವನ್ನು ನಿಷೇಧಿಸುತ್ತದೆ. 'ತಾನೇವಾನುವಿಧಾವತಿ' ಎಂಬ ಶ್ರುತಿಯು ಪರಮಾತ್ಮನ ರೂಪಾದಿಗಳಿಗೆ ಭೇದವನ್ನು ತಿಳಯುಯುವದು ಅನರ್ಥಕರವೆಂದು ತಿಳಿಸುತ್ತದೆ. ಅದರಂತೆ 'ಭೇದದರ್ಶ್ಯಧರಂ ತಮಃ' ಎಂದು ಹೇಳಿದೆ. ನೀನು ಸ್ವಾಂತರ್ಭೇದಹೀನನೆಂದು **ಜಗದೇ** ವ್ಯಕ್ತವಾಗಿ ಹೇಳಿಲ್ಪಟ್ಟಿರುವಿ ಎಂದು ಅರ್ಥಮಾಡಿರುವರು. ॥೩೦॥

ಶ್ರೀಹರಿಯು ಜಗತ್ತಿನಿಂದ ಭಿನ್ನನೆಂದು ಸ್ಪಷ್ಟವಾಗಿ ತೋರದಿರುವದರಿಂದ ಹಿಂದಿನ ಪದ್ಯದಲ್ಲಿ ಹೇಳಿದ್ದನ್ನು ಸ್ಪಷ್ಟಪಡಿಸುವರು. ಅಥವಾ ಹಿಂದಿನ ಶ್ಲೋಕದಲ್ಲಿ ಪರಮಾತ್ಮನಿಗೆ ಜಗತ್ತಿನಿಂದ ಭೇದ ಹೇಳಲ್ಪಟ್ಟಿತು ಹಾಗಾದರೆ 'ಸರ್ವಂ ಖಲ್ವಿದಂ ಬ್ರಹ್ಮ' 'ಭೂತಾನಿ ವಿಷ್ಣುರ್ಭುವನಾನಿ ವಿಷ್ಣುಃ' ಎಂಬಲ್ಲಿ ಅಭೇದ ಹೇಳಿದುದು ಹೇಗೆ ಎಂದರೆ ಅದಕ್ಕೆ ಗತಿ ಹೇಳುವರು-

**ತ್ವಂ ವಾ ಇದಂ ಸದಸದೀಶ ಭವಾಸ್ತತೋಽನ್ಯೋ**
**ಮಾಯಾ ಯದಾತ್ಮಪರಬುದ್ಧಿರಿಯಂ ಹ್ಯಪಾರ್ಥಾ ।**
**ಯದ್ ಯಸ್ಯ ಜನ್ಮನಿ ಧನಂ ಸ್ಥಿತಿರೀಕ್ಷಣಂ ಚ**
**ತದ್ ವೈ ತದೇವ ಖಲು ಕಾಲವದುಷ್ಟಿತರ್ವೋಃ ॥೩೧॥**

**ಹೇ ಈಶ** ಸರ್ವನಿಯಾಮಕನೇ **ಸದಸತ್** ಚರಾಚರಾತ್ಮಕವಾದ ಚೇತನಾಚೇತನಾತ್ಮಕವಾದ ಮೂರ್ತಾಮೂರ್ತಾತ್ಮಕವಾದ(ಪರಿಚ್ಛಿನ್ನವಾದ) ಕಾರ್ಯಕಾರಣಾತ್ಮಕವಾದ **ಇದಂ** ಈ ಜಗತ್ತು **ತ್ವಂ ವೈ** ನಿನ್ನ ಅಧೀನವಾದುದರಿಂದ ನೀನೆ ಎಂದು ಹೇಳಿಲ್ಪಟ್ಟಿದೆ ಸ್ವರೂಪವಾದ್ದರಿಂದಲ್ಲ ಏಕೆಂದರೆ **ಭವಾನ್** ನೀನು **ತತಃ** ಆ ಜಗತ್ತಿನಿಂದ **ಅನ್ಯಃ** ಭಿನ್ನನಾಗಿದ್ದಿ ಇಲ್ಲಿ ತತಃ ಎಂದದ್ದರಿಂದ ವ್ಯಾಪ್ತನಾದ್ದರಿಂದ ಎಂದು ಅನ್ಯತ್ವಕ್ಕೆ ಹೇತುವನ್ನು ಸೂಚಿಸಿರುವರು. 'ತ್ವತ್ಭಾವನ್ಯಪರ್ಯಾಯೌ' ಎಂದು ಹೇಳಿರುವದರಿಂದ ಭವಾನ್ ಎಂದು ಹೇಳದೆ ತ್ವಂ ಎಂದು ಹೇಳಿದ್ದರಿಂದ **ಸದಸತ್ ಇದಂ** ಮೂರ್ತಾಮೂರ್ತ ಪ್ರಪಂಚವು **ಭಿನ್ನಂ** ಎಂದು ಸೂಚಿಸಿರುವರು ಎಂದು ತಿಳಿಯಬೇಕು. ನಾನು ಹೇಗೆ ಸ್ವತಂತ್ರನೋ ಹಾಗೆ ಜಗತ್ತೂ ಏಕೇ ಸ್ವತಂತ್ರವಾಗಬಾರದು? ಹಾಗಾದಲ್ಲಿ ಭೇದವೂ ಮತ್ತಷ್ಟು ದೃಢವಾಗುವದು ಇಲ್ಲವೆ

ಎಂದರೆ ಹೇಳುತ್ತಾರೆ. **ಆತ್ಮಪರಬುದ್ಧಿಃ** ಆತ್ಮಾನಾತ್ಮಪ್ರಪಂಚವು ಸ್ವತಂತ್ರವೆಂಬ ಜ್ಞಾನವು. ಅಥವಾ **ಆತ್ಮನಿ** ಪರಮಾತ್ಮನಲ್ಲಿ ಪರಃ ಇತಿ ಪ್ರಪಂಚವೆಂಬ ಬುದ್ಧಿಯೂ ಪರಮಾತ್ಮನೇ ಪ್ರಪಂಚವೆಂಬ ಬುದ್ಧಿ, **ಆತ್ಮಾ** ತಾನು **ಪರಃ** ಪರಮಾತ್ಮಾ ಎಂಬ ಬುದ್ಧಿ **ಯತ್** ಏನಿದೆಯೋ ಅದು **ಮಾಯಾ** ನಿನ್ನ ಇಚ್ಛಾಧೀನವಾದ **ಅಪಾರ್ಥಾ** ನಿರರ್ಥಕವು ಭ್ರಾಂತಿ ಎಂದರ್ಥ. ಭ್ರಾಂತಿಯಾದ್ದರಿಂದ ಅನರ್ಥಕರವು **ಹಿ** ಪ್ರಮಾಣಸಿದ್ಧವು. ಶ್ರೀನಾರಾಯಣನು ಸ್ವತಂತ್ರನೆಂಬ ಜ್ಞಾನವು ಹೇಗೆ ಪುರುಷಾರ್ಥಸಾಧನವೋ ಹಾಗೆ ಜಗತ್ ಸ್ವಾತಂತ್ರ್ಯಜ್ಞಾನವು ಅನರ್ಥಸಾಧನವೆಂದು ಶಾಸ್ತ್ರಸಿದ್ಧ. ಅಥವಾ ಜೀವರು ಸ್ವತಂತ್ರರು ಆದ್ದರಿಂದ ತದಾತ್ಮಕ ಜಗತ್ತು ಸ್ವತಂತ್ರವೆನ್ನುತ್ತೇವೆ ಎಂದರೆ ಹೇಳುತ್ತಾರೆ **ಆತ್ಮಪರಬುದ್ಧಿಃ ಇಯಂ ಮಾಯಾ** ಜೀವರು ಸ್ವತಂತ್ರರೆಂಬ ಬುದ್ಧಿಯು ಭ್ರಾಂತಿಯು ಆದ್ದರಿಂದ ಅನರ್ಥಕರವು. ಜೀವರು ಪರಮಾತ್ಮನು ಒಂದಾದಲ್ಲಿ ಪರಮಾತ್ಮನು ಮಾಡುವ ಜಗತ್ಸೃಷ್ಟ್ಯಾದಿಗಳನ್ನು ಜೀವನೂ ಮಾಡಬೇಕು. ಇದು ಅನುಭವ ವಿರುದ್ಧ ಆದ್ದರಿಂದ 'ಸರ್ವಂ ಖಲು ಇದಂ ಬ್ರಹ್ಮ' ಎಂಬ ವಾಕ್ಯವು ಹೇಳುವ ಅಭೇದವ್ಯವಹಾರವು ಯಾವುದು? ಯಾವುದರ ಅಧೀನವಾದ ಜನ್ಮಾದಿಗಳುಳ್ಳದ್ದೋ ಅದು. ಅದೇ ಎಂದು ಪ್ರಾಧಾನ್ಯವಿವಕ್ಷೆಯಿಂದ ಹೇಳಲು ಬರುವದು ಎಂದು ಮತ್ತೊಂದು ಪ್ರಕಾರದಿಂದ ಉಪಪತ್ತಿಯನ್ನು ಹೇಳುವರು. **ಉಷ್ಟಿತವರ್ೋಃ** ವೃಕ್ಷದಾಹ ಮತ್ತು ವೃಕ್ಷಗಳು **ಕಾಲವತ್** ಕಾಲದೈವಗಳ ಅಧೀನವಾದುದರಿಂದ ಕಾಲದೈವ ಎಂದು ಕರಿಸಿಕೊಳ್ಳುವಂತೆ **ಯಸ್ಯ** ಯಾವುದರ **ಜನ್ಮ** ಹುಟ್ಟು **ನಿಧನ** ನಾಶ **ಸ್ಥಿತಿ** ರಕ್ಷಣೆ **ಈಕ್ಷಣಂ ಚ** ಜ್ಞಾನವೂ **ಯತ್** ಯಾವುದರ ಅಧೀನವೋ **ತತ್ ವೈ** ಅದು **ತದೇವ** ಅದೇ ಎಂದು **ಉಚ್ಯತೇ** ಹೇಳಲ್ಪಡುವದು **ಖಲು** ಅಷ್ಟೇ ಹೊರತು ಸ್ವರೂಪೈಕ್ಯವು ಪ್ರತಿಷಿದ್ಧವು. ಜಗತ್ತಿನ ಜನ್ಮಾದಿಗಳು ಶ್ರೀಹರಿಯ ಅಧೀನವಾದ್ದರಿಂದ ಜಗತ್ತು ಶ್ರೀಹರಿಯೇ ಎಂದು ಹೇಳಿದೆ ಎಂದರ್ಥ. 'ಯ ಏಷು ಆದಿತ್ಯೇ ಪುರುಷೋ ದೃಶ್ಯತೇ ಸೋಽಹಮಸ್ಮಿ ಸ ಏವಾಹಮಸ್ಮಿ। ಯ ಏಷ ಚಂದ್ರಮಸಿ ಪುರುಷೋ ದೃಶ್ಯತೇ ಸೋಽಹಮಸ್ಮಿ' ಮೊದಲಾದ ಶ್ರುತಿಗಳಲ್ಲಿ ತಾನು ಇತರನೂ ಪರಬ್ರಹ್ಮನೆಂದು ಉಪದೇಶ ತೋರುವದು ಅಂದ ಮೇಲೆ ಭೇದವನ್ನು ಹೇಗೆ ಹೇಳುತ್ತೀರಿ ಎಂದರೆ **ಆತ್ಮಪರಬುದ್ಧಿಃ** ನಾನು ಇತರನು ಪರನು ಪರಬ್ರಹ್ಮನೆಂಬ ಬುದ್ಧಿಯು **ಅಪಾರ್ಥಾ** ವಸ್ತುವಿಲ್ಲದ **ಮಾಯಾ** ಭ್ರಾಂತಿಯು ಆದ್ದರಿಂದ ತದಧೀನವಾಗಿರುವದರಿಂದ ಆಯಾ ಪದಾರ್ಥಗಳ ಅಂತರ್ಯಾಮಿಯಾಗಿ ಇರುವದರಿಂದ 'ಸೋಽಹಮಸ್ಮಿ' ಎಂದು ಹೇಳಿದೆ. ಅದು ಅದರ ಸ್ವರೂಪವಾದ್ದರಿಂದಲ್ಲ.

'ತ್ವಂ ವಾ' ಎಂಬ ಶ್ಲೋಕದಲ್ಲಿ ಜಗತ್ತಿನ ಅಭೇದ ಹೇಳುತ್ತಿರುವದರಿಂದ ಹಿಂದಿನ ಶ್ಲೋಕದಲ್ಲಿರುವ 'ಏಕ ಏವ'ಎಂಬ ಪದಕ್ಕೆ ಪ್ರಧಾನ ಎಂದು ವ್ಯಾಖ್ಯಾನ

ಮಾಡಿದ್ದು ಸರಿಯಲ್ಲ ಎಂದರೆ ಸರಿಯಾದ ಅದರ ಅಭಿಪ್ರಾಯ ಹೇಳುವವರಾಗಿ ಅಸ್ಪಷ್ಟಾರ್ಥಕವಾದ ಕಾಲವದುಷ್ಟಿತರ್ವೋಃ ಎಂಬುದನ್ನು ವ್ಯಾಖ್ಯಾನಿಸುವರು.

**... ತಾತ್ಪರ್ಯ ...**

**ಯಥಾ ವೃಕ್ಷಶ್ಚ ವೃಕ್ಷದಾಹಶ್ಚ ದೈವಕಾಲಾಧೀನತ್ವಾತ್ ದೈವಂ ಕಾಲಶ್ಚೇತ್ಯುಚ್ಯತೇ ಏವಂ ತ್ವದಧೀನತ್ವಾತ್ ಸರ್ವಸ್ಯ ಸರ್ವಂ ತ್ವಂ ಇತ್ಯುಚ್ಯತೇ । ಸ್ವತಃ ತ್ವದ್ಭಿನ್ನೋಽಪಿ । ಅಹಂ ಚ ಅನ್ಯಶ್ಚ ಪರಮೇಶ್ವರಃ ಇತ್ಯಪಾರ್ಥಾ ಭ್ರಾಂತಿಃ । ತದಧೀನತ್ವಾದೇವ ಸ ಇತ್ಯುಚ್ಯತೇ ನ ಸ್ವರೂಪತ್ವಾದಿತ್ಯರ್ಥಃ ॥**

ಹೇಗೆ ವೃಕ್ಷ ವೃಕ್ಷದಾಹಗಳು ದೈವಕಾಲಗಳ ಅಧೀನಗಳಾಗಿರುವದರಿಂದ ದೈವಕಾಲಗಳೆಂದು ಅಭೇದವ್ಯವಹಾರಕ್ಕೆ ವಿಷಯವಾಗುತ್ತವೋ ಹಾಗೆಯೇ ಸರ್ವಜಗತ್ತು ನಿನ್ನ ಅಧೀನವಾಗಿರುವದರಿಂದ ಸ್ವಾಭಾವಿಕವಾಗಿ ಜಗತ್ತಿನಿಂದ ನೀನು ಭಿನ್ನನಾಗಿದ್ದರೂ ಸರ್ವಜಗತ್ತು ನೀನು ಎಂದು ಅಭೇದವ್ಯವಹಾರಕ್ಕೆ ವಿಷಯನಾಗುತ್ತಿ. ನಾನು ಎಲ್ಲರೂ ಪರಬ್ರಹ್ಮನಿಂದ ಅಭಿನ್ನರು ಎಂಬುದು ನಿರರ್ಥಕ ಭ್ರಾಂತಿಯು. ಸರ್ವವಸ್ತುವೂ ಶ್ರೀಹರಿಯ ಅಧೀನವಾಗಿರುವದರಿಂದಲೇ ಸಃ ಎಂದು ಅಭೇದವ್ಯವಹಾರಕ್ಕೆ ವಿಷಯವಾಗುತ್ತಾನೆ. ಜಗತ್ಸ್ವರೂಪನಾದ್ದರಿಂದಲ್ಲವೆಂದು ಭಾವ.

ಉಷ್ಟಿ ಎಂದರೆ ವೃಕ್ಷದಾಹವು(ಉಷ ದಾಹೇ ಎಂದು ಧಾತುವಿದೆ)ಕಾಲಾಧೀನ ವಾದುದರಿಂದ ಕಾಲಶಬ್ದವು ಹೇಗೆ ಪ್ರಲಯಾಗ್ನಿಯಲ್ಲಿ ಕಾಲಾಗ್ನಿ ಎಂದು ವ್ಯವಹಾರವಿದೆಯೋ ಹಾಗೆ ತರೌ=ಕಲ್ಪವೃಕ್ಷದಲ್ಲಿ ದೈವಾಧೀನವಾದುದರಿಂದ ದೈವತರು ಸುರತರು ಮುಂತಾಗಿ ಕರೆಸಿಕೊಳ್ಳುವದು ಅದರಂತೆ ಎಂದರ್ಥ. ವಾಸ್ತವ ಐಕ್ಯವೇಕೆ ಹೇಳಬಾರದು ಎಂದರೆ 'ಖಲು' ಎಂದಿರುವರು. ಅಭೇದವು ನಿಷಿದ್ಧವೆಂದರ್ಥ. 'ಖಲು ನಿಷೇಧನೆ' ಎಂದು ವಿಶ್ವವಿದೆ. 'ಅಲಂ ಖಲ್ವೋಪ್ರತಿಷೇಧಯೋಃ ಪ್ರಾಚಾಂ ಕ್ತ್ವೇತಿ ಸ್ಮರಣಾತ್'.

ಇದನ್ನೇ ಬ್ರಹ್ಮಾಂಡಪುರಾಣದಲ್ಲಿ ಸತ್ಯಕ್ಷೇತ್ರ ಮಹಾತ್ಮ್ಯದ ಪ್ರಥಮಾಧ್ಯಾದಲ್ಲಿ ಹೀಗೆ ಹೇಳಿದೆ-

ಸತ್ಯಾಬ್ಜಿನೀತೀರೇ ತಸ್ಯಾಸ್ತ್ವೇಕೋ ಮಹಾನ್ ವೃಕ್ಷಃ ಸ ಕಾಲತ್ರಯವಿತ್ತಮಃ ।
ಶಾಖಾಭಿರ್ಜಗತಾವೃತ್ತಿಸರ್ವಾಂ ಯತ್ಸೂಚಯತ್ಯಸೌ ॥

ಕೃತೇ ಭದ್ರವಟೋ ನಾಮಪ್ರೇತಾಯಾಮೇವ ವೃಕ್ಷರಾಟ್ ।
ದ್ವಾಪರೇ ಪುತ್ರದೀಪಶ್ಚ ಪನಸಃ ಸ್ಯಾತ್ ಕಲೌ ಯುಗೇ ॥

**ಧನಧಾನ್ಯಪ್ರಜಾವೃದ್ಧಿರ್ಯತಃ ಸ್ಯಾದ್ರಾಜರಾಷ್ಟ್ರಯೋಃ ।**
**ಶಾಖೋಪಶಾಖಾವೃದ್ಧ್ಯಾವಾ ಫಲವೃದ್ಧಿಃ ತಥಾ ಭವೇತ್ ॥**

**ಯದಾ ಶಾಖಾವಿಧೀರಾಣಾಂ ಸ್ಯಾತ್ ತದಾ ರಾಜಾ ವಿನಶ್ಯತಿ ।**
**ಉಪಶಾಖಾವಿದೀರ್ಣಾಶ್ಚೇನ್ಮಹಾಮತ್ರ್ಯೋರ್ಮರಿಷ್ಯತೀತಿ ॥**

ಇಲ್ಲಿ ಕಾಲವಿತ್ತಮ ಎಂದು ತನ್ನ ಅಭಿಮಾನಿದೇವತ್ವವನ್ನೇ ವೃಕ್ಷಕ್ಕೆ ಹೇಳಿದ್ದಾರೆ ಅದರಂತೆ ನಿನ್ನ ಅಧೀನಸತ್ತಾಕಜಗತ್ತು ನೀನೆ ಎಂದು ಹೇಳಲ್ಪಡುವಿ.

ಪುರಾಣದ ಸಾರಾಂಶ :- ಸತ್ಯಾಬ್ಜಿನಿ ನದೀ ತೀರದಲ್ಲಿ ಒಂದು ದೊಡ್ಡಗಿಡವಿದೆ ಅದು ಮೂರುಕಾಲಗಳನ್ನು ಹೊಂದಿದೆ. ಯಾವ ಕಾರಣ ಇದು ತನ್ನ ಟೊಂಗೆಗಳಿಂದ ಜಗತ್ತಿನ ಎಲ್ಲ ಸ್ಥಿತಿಯನ್ನು ಸೂಚಿಸುವದು. ಕೃತಯುಗದಲ್ಲಿ ಭದ್ರವಟವೆಂದು ಹೆಸರು. ತ್ರೇತಾಯುಗದಲ್ಲಿ ವೃಕ್ಷರಾಜವೆಂದು ಹೆಸರು. ದ್ವಾಪರದಲ್ಲಿ ಪುತ್ರದೀಪವೆಂದು ಹೆಸರು. ಕಲಿಯುಗದಲ್ಲಿ ಪನಸ ಎಂದು ಹೆಸರು(ಪನಸವೆಂದರೆ ಹಲಸು)ಇದರಿಂದ ಧನಧಾನ್ಯವು ಪ್ರಜಾವೃದ್ಧಿಯು ರಾಜನಿಗೂ ರಾಷ್ಟ್ರಕ್ಕೂ ಆಗುವದು. ಇದರ ಶಾಖೋಪಶಾಖೆಗಳು ಬೆಳೆದಾಗ ಹಣ್ಣುಗಳು ಬಹಳವಾದಾಗ ಯಾವಾಗ ಶಾಖಾ ಕತ್ತರಿಸಿಬೀಳುವದೋ ಆಗ ರಾಜನು ನಾಶಹೊಂದುವನು. ಉಪಶಾಖೆ ಸೀಳಿದರೆ ಮುಖ್ಯಮಂತ್ರಿ ಸಾಯುವನು. ಯಾವಾಗ ಹಣ್ಣುಗಳಿಲ್ಲವಾಗುವದೋ ಆಗ ಅನಾವೃಷ್ಟಿಯಾಗುವದು. ಎಲೆಯು ಹಸಿರಾಗಿ ಯಾವಾಗ ಬೀಳುವದು ಆಗ ಪ್ರಾಣಿನಾಶವಾಗುವದು ಎಂದು ಹೇಳಿದೆ. ।।೩೦।।

೩೦ನೇ ಶ್ಲೋಕದಲ್ಲಿ 'ಆದ್ಯಂತಯೋಃ' ಎಂದು ಕೊನೆಗೆ ಶ್ರೀಕಾಂತನು ಉಳಿಯುವನು ಎಂದು ಹೇಳಿದೆ ಅದನ್ನೆ ವಿಶದಪಡಿಸುವರು-

**ನ್ಯಸ್ಯೇದಮಾತ್ಮನಿ ಜಗದ್ ವಿಲಯಾಂಬುಮಧ್ಯೇ**
**ಶೇಷಾಸನೋ ನಿಜಸುಖಾನುಭವೋ ನಿರೀಹಃ ।**
**ಯೋಗೇನ ಮೀಲೀತದೃಗಾತ್ಮನಿ ವೀತನಿದ್ರ-**
**ಸ್ತುರ್ಯಸ್ಥಿತೋ ನನು ತಮೋಽನುಗುಣಾಂಶ್ಚ ಯುಂಕ್ಷೇ ।।೩೨।।**

**ಹೇ ಭಗವನ್ ತ್ವಂ** ಸ್ವಾಮಿಯೇ ನೀನು **ವಿಲಯಾಂಬುಮಧ್ಯೇ** ಪ್ರಲಯ ಜಲದ ಮಧ್ಯದಲ್ಲಿ **ಶೇಷಾಸನಃ** ವಟಪತ್ರಶಾಯಿಯಾಗಿ (ಶಿಷ್ಯತೇ ಇತಿ ಶೇಷಂ ಪ್ರಲಯಕಾಲೇ ವಿದ್ಯಮಾನಂ ವಟಪತ್ರಂ ಆಸನಂ ಯಸ್ಯ ಸಃ) ಅಥವಾ ಕಾಲವಿಶೇಷ ವಿವಕ್ಷೆ ಮಾಡದೆ ಶೇಷಶಾಯಿಯಾಗಿ ಎಂದಾದರೂ ಅರ್ಥ **ಇದಂ ಜಗತ್** ಈ ಜಗತ್ತನ್ನು **ಆತ್ಮನಃ** ನಿನ್ನ ಉದರದಲ್ಲಿ **ನ್ಯಸ್ಯ** ಇಟ್ಟುಕೊಂಡು **ನಿಜಸುಖಾನುಭವಃ** ನಿನ್ನ ಸ್ವರೂಪಾನಂದವನ್ನು

ಅನುಭವಿಸುತ್ತ **ನಿರೀಹಃ** ವ್ಯಕ್ತವಾದ ಸೃಷ್ಟೀಚ್ಛಾ ಇಲ್ಲದವನಾಗಿ **ಯೋಗೇನ** ನಿನ್ನ ಸಾಮರ್ಥ್ಯದಿಂದಲೇ **ವೀತನಿದ್ರಃ** ಅಜ್ಞಾನಾದಿಗಳಿಲ್ಲದವನಾಗಿ ಸ್ವಪ್ನಾದಿಗಳಿಲ್ಲದವನಾಗಿ **ಮೀಲಿತದೃಕ್** ಕಣ್ಣುಮುಚ್ಚಿ **ತುರ್ಯಃ ಸ್ಥಿತಃ** ಜಾಗ್ರದಾದಿ ಅವಸ್ಥಾತ್ರಯ ಪ್ರೇರಕವಲ್ಲದ ತುರ್ಯರೂಪದಲ್ಲಿರುವೆ. **ಅನು** ಪ್ರಳಯ ನಂತರ ಸೃಷ್ಟಿಕಾಲದಲ್ಲಿ **ತಮಃ** ಪ್ರಕೃತಿಯನ್ನು **ಗುಣಾನ್** ಸತ್ವಾದಿಗುಣಗಳನ್ನು **ಯುಂಕ್ಷೇ ನನು** ಪ್ರವೃತ್ತಿಗೊಳಿಸಲು ಸೇರುವಿಯಷ್ಟೇ ಅಥವಾ **ಆತ್ಮನಿ** ನಿನ್ನಲ್ಲಿ ಪ್ರಕೃತಿಯನ್ನು ಗುಣಗಳನ್ನು ಸೇರಿಸಿಕೊಳ್ಳುವಿಯಲ್ಲವೆ.

ಈ ಶ್ಲೋಕದಲ್ಲಿ ತುರ್ಯಸ್ಥಿತಃ ಎಂಬಲ್ಲಿ ಹೇ ತುರ್ಯ ಎಂದಾಗಲಿ ತುರ್ಯೇ ಎಂದಾಗಲಿ ಸ್ಥಿತಃ ಎಂದು ಎರಡು ಪದಗಳು ತುರ್ಯನಲ್ಲಿದ್ದವನು ಮತ್ತಾರೋ ತೋರುವರು ಎಂಬ ಭ್ರಮವನ್ನು 'ತುರ್ಯಃ ಸ್ಥಿತಃ' ಎಂದು ಪದಚ್ಛೇದ ಮಾಡಿ ಅನುವಾದ ಮಾಡುವ ನೆಪದಿಂದ ಪರಿಹರಿಸುವರು.

**... ತಾತ್ಪರ್ಯ ...**

**ತುರ್ಯಃ ಸ್ಥಿತಃ ।**

ಭಾವಪ್ರಧಾನನಿರ್ದೇಶ **ತುರ್ಯತ್ವೇನ** ಸ್ವಪ್ನಾದ್ಯವಸ್ಥಾ ಅಪ್ರವರ್ತಕನಾಗಿದ್ದವನು ಎಂದರ್ಥ.

ಇಲ್ಲಿ ಶಂಕೆಯನ್ನು ಹೀಗೆ ಮಾಡಲಾಗುತ್ತಿದೆ. 'ಅಶಿತೇಽಪಿ ಲುಶನೇ ನ ಶಾಂತೋ ವ್ಯಾಧಿಃ' ಎಂಬ ಗಾದಿಮಾತಿನಂತೆ (ಬೆಳ್ಳುಳ್ಳಿತಿಂದರೂ ರೋಗ ಹೋಗಲಿಲ್ಲ) ತಾತ್ಪರ್ಯದಿಂದಲೂ ಸಂಬುದ್ಧ್ಯಾದಿಶಂಕಾ ನಿಶ್ಚಿತವಾಗಿ ಪರಿಹೃತವಾಗಲಿಲ್ಲ 'ವಾ ಶರಿ' ಎಂಬುದರಿಂದ ಲೋಪವಾದರೆ ಮತ್ತೆ ಆ ಶಂಕೆ ಬಂದೇ ಬರುವದು ಎಂದು ಶಂಕಿಸುವದು ಸರಿಯಲ್ಲ.

'ನಿವೃತ್ತೇಃ ಸರ್ವಭಾವಾನಾಮೀಶಾನಃ ಪ್ರಭುರವ್ಯಯಃ ।
ಅದ್ವೈತಃ ಸರ್ವಭಾವಾನಾಂ ದೇವಸ್ತೂರ್ಯೋ ವಿಭುಃ ಸ್ಮೃತಃ ॥'

ತುರ್ಯಂ ತತ್ಸರ್ವದೃಕ್ ಸದಾ । ಸಾ ಚ ತುರ್ಯೇನ ವಿದ್ಯತೇ ನ ನಿದ್ರಾಂ ನೈವ ಚ ಸ್ವಪ್ನಂ ತುರ್ಯೇ ಪಶ್ಯಂತಿ ನಿಶ್ಚಿತಾಃ । ತುರೀಯಂ ಪದಮಶ್ನುತೇ ।

ಎಂದು ಮಾಂಡೂಕೋಪನಿಷತ್ ಭಾಷ್ಯದಲ್ಲಿದೆ.

ವಿಷ್ಣುಸ್ತುರಿಯರೂಪೇಣ ದ್ವಾದಶಾಂತೇ ವ್ಯವಸ್ಥಿತಃ ।
ಮುಕ್ತಾನಾಂ ಪ್ರಾಪ್ಯರೂಪೋಽಸೌ ವ್ಯವಹಾರೇನ ದೃಶ್ಯತೇ ॥

ಸಮ್ಯಕ್ ಸಮಾಹಿತಾನಾಂ ತು ಪ್ರಾಪ್ತಾನಾಂ ಷೋಡಶೀಂ ಕಲಾಂ ।
ಅಪರೋಕ್ಷದೃಶಾ ಕ್ವಾಪಿ ತುರೀಯಂ ದೃಶ್ಯತೇ ಪದಮ್ ॥

ಏತತ್ಸರ್ವಂ ತುರೀಯೇಣ ರೂಪೇಣ ನ ಕರೋತ್ಯಜಃ ।
ಸರ್ವಜ್ಞಾನಪ್ರದಶ್ಚಾಪಿ ಮುಕ್ತಸ್ಯೈವ ತುರೀಯಕಃ ॥ ಇತಿ ಬ್ರಹ್ಮಾಂಡೇ ॥

ಅಮುಕ್ತಸ್ಯ ತ್ವದೃಶ್ಯತ್ವಾತ್ ಷೋಡಶೀಂ ವಾ ಕಲಾಮೃತೇ ।
ತುರೀಯೋ ಅದೃಷ್ಟ ಇತ್ಯುಕ್ತೋ ಗ್ರಹಣಾದೇರಗೋಚರಃ ॥

ವಿನಾ ಮುಕ್ತಿಂ ಯತಸ್ತೇನಾವ್ಯವಹಾರ್ಯ ಇತೀರಿತಃ ।
ಜಾಗ್ರದಾದಿಪ್ರವೃತ್ತಿಸ್ತು ಲಕ್ಷಣಂ ಹ್ಯನುಮಾಪಕಮ್ ॥

ಅಲಕ್ಷಣಸ್ತದ್ರಾಹಿತ್ಯಾದಚಿಂತ್ಯಸ್ತತ ಏವ ಚ ।
ತತ ಏವ ಹ್ಯನಿರ್ದೇಶ್ಯಶ್ಚಿದಾನಂದೈಕಲಕ್ಷಣಃ ॥

ಎಂದು ವಿಸ್ತಾರವಾಗಿ ವ್ಯಾಖ್ಯಾನಮಾಡಿರುವದರಿಂದ ಅವನನ್ನು (ತುರೀಯನನ್ನು) ಸಂಭೋದಿಸಿ ಹೇಳಬೇಕಾದ ಅರ್ಥವು ಅಸಂಭಾವಿತವು ಅದರಂತೆ ಅವನಲ್ಲಿ ಇನ್ನೊಬ್ಬನ ಸ್ಥಿತಿಯೂ ಬಾಧಿತವಾದುದು. ಆದ್ದರಿಂದ ಸಮಸ್ತಪದದಿಂದಲೂ ತುರ್ಯಃಸ್ಥಿತಃ ಎಂಬ ಅರ್ಥನಿಶ್ಚಯಮಾಡಬಹುದು. ಯಾವ ಕಾರಣ ಅನುವಾದಮಾಡಿರುವರೋ ಅದರಿಂದ ಸಂಬೋಧನಾದಿಶಂಕಾ ಬರದಂತೆ ಅರ್ಥ ತಿಳಿಯಬೇಕು ಎಂದು ಆಚಾರ್ಯರು ತಿಳಿಸಿರುವರು. ಇಲ್ಲವಾದರೆ ಅದು ವ್ಯರ್ಥವಾಗುವದು.

ತಾತ್ಪರ್ಯಪ್ರಕಾಶದಲ್ಲಿ 'ತುರ್ಯಸ್ಥಿತಃ ಇತ್ಯತ್ರ ತುರ್ಯೇ ಭಗವತಿ ಸ್ಥಿತೋ ಅನ್ಯತ್ ಪ್ರತೀಯತೇ ಅಪಃ ಪದ್ವಮಿತ್ಯಾಹ ತುರೀಯ ಇತಿ । ಏತತ್ ತುರ್ಯಪದವ್ಯಾಖ್ಯಾನಂ । ತುರೀಯಶ್ಚೈವ ಮುಕ್ತಿದಃ ಇತಿ ವಚನಾತ್ ತುರೀಯಃ ಮುಕ್ತಿದಾತಾ ಸನ್ ಸ್ಥಿತಃ ಇತ್ಯರ್ಥಃ । ತುರ್ಯಸ್ಥಿತ ಇತಿ ತಾತ್ಪರ್ಯಪಾಠೇ ಅಪಿ ಉಕ್ತರೀತ್ಯಾ ಪದಚ್ಛೇದ ಏವ ಅಭಿಪ್ರೇತಃ ಇತಿ ।'

ದೀಪಿಕಾಪ್ರಕಾರ ತುರ್ಯಸ್ಥಿತಃ ಎಂದು ಸಮಸ್ತಪದ. ತಾತ್ಪರ್ಯಪ್ರಕಾಶಪ್ರಕಾರ ತುರೀಯಃ ಸ್ಥಿತಃ ಎಂದು. ಸತ್ಯಧರ್ಮರ ಪ್ರಕಾರ ಸಮಸ್ತಪದವಾದರೂ **ತುರ್ಯಃ ಸ್ಥಿತಃ** ಮುಕ್ತಿಪ್ರದಾತನಾಗಿ ಇರುವ ಎಂದರ್ಥ ಮಾಡಿರುವರು. ।।೩೨।।

ಹಿಂದೆ 'ಆದ್ಯಂತೋಽಯಃ' ಎಂದು ಹೇಳಿದ್ದರಲ್ಲಿ ಅಂತಃಸ್ಥಿತಿಯು ಅತ್ಯಂತ ದುಃಸಹವಾದುದರಿಂದ ಅದನ್ನು ಮೊದಲಿಗೆ ಹೇಳಿ ಆದೌ ಎಂಬುದನ್ನು ವಿಸ್ತಾರವಾಗಿ

ಹೇಳುವರು(ಮಹಾಪ್ರಲಯದಲ್ಲಿರುವ ಭಗವಂತನಿಂದ ಪದ್ಮನಾಭನಿಗೆ ನಿರ್ವಿಶೇಷಾಭೇದವನ್ನು ಹೇಳಿ ಸ್ತುತಿಸುವರು.)-

**ತಸ್ಯೈವ ತೇ ವಪುರಿದಂ ನಿಜಕಾಲಶಕ್ತ್ಯಾ**
**ಸಂಚೋದಿತಂ ಪ್ರಕೃತಿಧರ್ಮಿಣ ಆತ್ಮಗೂಢಮ್ ।**
**ಅಂಭಸ್ಯನಂತಶಯನಾದ್ವಿರಮತ್ಸಮಾಧೇಃ**
**ನಾಭೇರಭೂತ್ ಸ್ವಕಣಿಕಾದ್ವಟವನ್ಮಹಾಬ್ಜಮ್ ॥೩೩॥**

**ನಿಜಕಾಲಶಕ್ತ್ಯಾ** ನಿನ್ನ ಸ್ವರೂಪವಾದ ಸೃಷ್ಟಿಕಾಲ ಶಕ್ತಿಯಿಂದ ಅಥವಾ ಸ್ವಾಭಾವಿಕವಾದ ಕಾಲವಿಷಯಕಶಕ್ತಿಯಿಂದ ಅಥವಾ ನಿಜ ನಿನ್ನಿಂದ ಪ್ರೇರಿತವಾದ ನಿನ್ನ ಅಧೀನವಾದ ಯಾವ ಕಾಲವುಂಟೋ ಅದರ ಶಕ್ತಿಯಿಂದ **ಸಂಚೋದಿತಂ** ಸೃಷ್ಟಿಗೆ ಅಭಿಮುಖವಾಗಿ ತನ್ನ ಅಭಿಮಾನಿದೇವತಾದ್ವಾರಾ ಪ್ರೇರಿತವಾದ **ಪ್ರಕೃತಿಧರ್ಮಿಣಃ** ಪ್ರಕೃತಿಯನ್ನು ಪ್ರೇರಿಸುವ ಧರ್ಮವುಳ್ಳ ನಿನ್ನ ಅಥವಾ ಪ್ರಕೃಷ್ಟಾ ಕೃತಿ ಪ್ರಕೃತಿಃ ಸ ಚಾಸೌ ಧರ್ಮಶ್ಚ, ಸಃ ಅಸ್ಯ ಅಸ್ತೀತಿ ಸ ತಥಾ, ಅಂದರೆ ಪ್ರಕೃಷ್ಟವಾದ ಕೃತಿ ಎಂಬ ಧರ್ಮವುಳ್ಳವನೆಂದರ್ಥ. 'ಧರ್ಮಾದನಿಚ್ ಕೇವಲಾತ್' ಎಂಬುದರಿಂದ ಅನಿಚ್. ಕೆಲವೇ ಸೃಷ್ಟಿಯಲ್ಲಿ ಉದ್ಯುಕ್ತನಾದ್ದರಿಂದ ಹೀಗೆ ಹೇಳಿದೆ. ಪ್ರಕೃತಿಧರ್ಮಣಃ ಎಂಬ ಪಾಠವಿದೆ ಆಗ ಪ್ರಕೃತಿಃ ಧರ್ಮೋ ಯಸ್ಯ ಸಃ ಎಂದು ವಿಗ್ರಹ. ಆತ್ಮನಿಗೂ ಉದರದಲ್ಲಿ ಅಡಗಿರುವ **ಮಹಾಬ್ಜಂ** ಈ ಜಗತ್ತೆಂಬ ದೊಡ್ಡಪದ್ಮವು **ಸ್ವಕಣಿಕಾತ್** ಕಣಿಕೆ ಎಂಬ ತನ್ನ ಸೂಕ್ಷ್ಮಬೀಜದಿಂದ **ವಟವತ್** ಅಂಕುರಿಸುವ ಆಲದ ಮರದಂತೆ **ಅಂಭಸಿ** ಪ್ರಲಯೋದಕದಲ್ಲಿ **ಅನಂತಶಯನಾತ್** ಶೇಷನೆಂಬ ವಟಪತ್ರವೆಂಬ ಹಾಸಿಗೆಯಿಂದ **ವಿರಮತ್ ಸಮಾಧೇಃ** ಅವಸಾನವನ್ನು ಹೊಂದಿದ ಯೋಗನಿದ್ರೆಯುಳ್ಳ (ಯೋಗನಿದ್ರೆ ಮುಗಿಸಿ ಜಗತ್ ಸೃಷ್ಟಿಯಲ್ಲಿ ಪ್ರವೃತ್ತನಾದ)**ನಾಭೇಃ** ನಿನ್ನ ಹೊಕ್ಕಳಿನಿಂದ **ಅಭೂತ್** ಹೊರಗೆ ವ್ಯಕ್ತವಾಯಿತು **ಇದಂ** ಈ ಪದ್ಮವು **ತಸ್ಯೈವ** ಜಗತ್ಪ್ರವೃತ್ತಿ ಇಲ್ಲದ್ದು ತುರೀಯರೂಪದೊಂದಿಗೆ ಗುಣಕ್ರಿಯಾದಿಗಳಿಂದ ಯಾವ ವಿಶೇಷವಿಲ್ಲದ ಅಭೇದವುಳ್ಳ **ತೇ** ಜಗತ್ಕಾರಣರೂಪವಾದ ನಿನ್ನ (ಮೂಲರೂಪಿಯ) **ವಪುಃ** ಸನ್ನಿಧಾನವಿಶೇಷವುಳ್ಳದ್ದರಿಂದ ದೇಹವೆನಿಸುವದು.

ಈ ಶ್ಲೋಕದಲ್ಲಿ ವಟಬೀಜದಿಂದ ವಟಾಂಕುರದಂತೆ ಶ್ರೀಹರಿಯ ನಾಭಿಯಿಂದ ಜಗತ್‌ಪದ್ಮ ಹುಟ್ಟಿತು ಎಂಬ ಉದಾಹರಣೆಯು ಸರಿಯಲ್ಲ. ವಟಬೀಜದ ವಿಕಾರವೇ ವಟಾಂಕುರವಾದುದರಿಂದ ಅದು ಉಪಾದಾನ ಕಾರಣ ಆದರೆ 'ನಿರ್ವಿಕಾರೋಽಕ್ಷರಃ ಶುದ್ಧಃ' ಎಂಬ ಶ್ರುತಿಯಂತೆ ವಿಕಾರರಹಿತನಾದ ಶ್ರೀಹರಿಯು (ನಾಭಿಯು) ಜಗತ್ತಿಗೆ ಉಪಾದಾನ ಕಾರಣವಲ್ಲ. ಮತ್ತು 'ತೇ ವಪುಃ' ಎಂದು ಸಾಕ್ಷಾತ್ ಭಗವಂತನ

ಶರೀರವೆಂದೂ ತೋರುವದು. ಅದನ್ನು ಪರಿಹರಿಸಲು ಮತ್ತು ಪದ್ಮದ ಸ್ವರೂಪ ತಿಳಿಸಲು ಆಚಾರ್ಯರು ಪ್ರಮಾಣದ ಮುಖಾಂತರ ವ್ಯಾಖ್ಯಾನಿಸುವರು-

**... ತಾತ್ಪರ್ಯ ...**

**ಜಗದಾತ್ಮಕಂ ಅಬ್ಜಂ ಅಪಿ ಭಗವದ್ವಶತ್ವಾತ್ ತದ್ವಪುಃ ।**
**ಸ್ಥಾವರಾಣಾಂ ತು ಸರ್ವೇಷಾಂ ದೇವತಾ ಯಾऽಭಿಮಾನಿನೀ ॥**

**ವಿಶೇಷಾದ್ವಟಬೀಜೇ ಚ ಸಾಶ್ವತ್ಥೇ ಚ ವ್ಯವಸ್ಥಿತಾ ।**
**ಅದೃಶ್ಯಾಕಣಿಕಾ ನಾಮ ಸಾವೃಕ್ಷಾನ್ ವ್ಯಂಜಯತ್ಯಪಿ ॥**

**ಅತೋ ಬೀಜಮಿತಿ ಪ್ರೋಕ್ತಾ ಸಾ ಜಾತೇऽಪ್ಯಂಕುರೇ ಸ್ಥಿತಾ ।**
**ಏವಂ ಹರಿಃ ಕಾರಣೇಷು ಸ್ಥಿತಃ ಕಾರ್ಯಜನೇರನು ।**
**ಕಾರ್ಯಾಣ್ಯನುಪ್ರವಿಷ್ಟಃ ಸನ್ ಪ್ರಥಮಂ ನಾತ್ರ ದೃಶ್ಯತೇ ॥ ಇತಿ ಚ ॥**

'ಜಗಾದಾತ್ಮಕಂ' ಎಂದು ಪದ್ಮದ ಸ್ವರೂಪನಿರೂಪಿಸಿದರು ಅದೂ ಸಹ ಭಗವಂತನ ಅಧೀನವಾದುದರಿಂದ ಭಗವಂತನ ಶರೀರವೆನಿಸುತ್ತದೆ.

ಕಣಿಕಾ ಎಂದು ನಮ್ಮ ಕಣ್ಣಿಗೆ ಕಾಣದಿರುವ ಎಲ್ಲ ವೃಕ್ಷಗಳ ಸೂಕ್ಷ್ಮಬೀಜಕ್ಕೆ ಅಭಿಮಾನಿದೇವತೆ. ವಟ ಮತ್ತು ಅಶ್ವತ್ಥಗಳಲ್ಲಿ ವಿಶೇಷವಾಗಿ ಸನ್ನಿಹಿತಳು ಆದ್ದರಿಂದ ಆ ಆ ಬೀಜಗಳಿಂದ ಆ ಆ ವೃಕ್ಷಾಂಕುರದೊಂದಿಗೆ ಹುಟ್ಟಿದಳೆಂದು ಕರೆಯಲ್ಪಡುವಳು. ಇದರಂತೆ ಶ್ರೀಹರಿಯು ಪ್ರಕೃತಿ ಮೊದಲಾದವುಗಳಿಗೆ ಸ್ವಾಮಿಯಾದ್ದರಿಂದ ಅವುಗಳಲ್ಲಿ ಸನ್ನಿಹತನಾಗಿ ಅವುಗಳ ಕಾರ್ಯಗಳಲ್ಲಿ ಸೇರಿಕೊಂಡಿರುವದರಿಂದ ಒಡಹುಟ್ಟಿದನೆಂದು ಕರೆಯಲ್ಪಡುವನು. 'ಆತ್ಮನಃ ಆಕಾಶಃ ಸಂಭೂತಃ' ಎಂದು ಶ್ರುತಿ ಇದೆ. ವಟಬೀಜದಿಂದ ಅದರ ವಿಕಾರವಾದ ವಟಾಂಕುರದ ಸ್ವರೂಪತಃ ಉತ್ಪತ್ತಿ ವಟವೃಕ್ಷಶರೀರಿಯಾದ (ಅಭಿಮಾನಿ) ಚೇತನಕ್ಕೆ ವಟವೃಕ್ಷದ ಮೇಲೆ ಅಭಿಮಾನೋತ್ಪತ್ತಿಯೇ ಉತ್ಪತ್ತಿ. ಈ ಎರಡಕ್ಕೂ(ಬೀಜ, ಅಂಕುರ,)ಅಭಿಮಾನಿಯಾದ ದೇವತೆಗೆ ಅಂಕುರವನ್ನು ಅಭಿವ್ಯಕ್ತಿಗೊಳಿಸುವದರಿಂದ ಅಭಿವ್ಯಕ್ತಿ ಮಾತ್ರ. ಇದರಂತೆ ಯಥಾಯೋಗ್ಯವಾಗಿ ಸತ್ವತಮೋಗುಣಮಿಶ್ರವಾದ ರಜೋಗುಣದಿಂದ ಅದರ ವಿಕಾರವಾದ ಜಗದಾತ್ಮಕ ಪದ್ಮದ ಸ್ವರೂಪೋತ್ಪತ್ತಿ. ಅದರಲ್ಲಿರುವ ಚತುರ್ಮುಖನಿಗೆ ಅದರಲ್ಲಿ ಅಭಿಮಾನ ಹುಟ್ಟುವದೇ ಉತ್ಪತ್ತಿ. ಇದಕ್ಕೆ ಕಾರಣನಾದ ಶ್ರೀಹರಿಗೆ ಮತ್ತೊಂದು ಪುರಷರೂಪದಿಂದ ಆವಿರ್ಭಾವವೇ ಉತ್ಪತ್ತಿ ಹೀಗೆ ಉದಾಹರಣೆಯು ಸಮಂಜಸವೆಂದು ತಿಳಿಯಬೇಕು.

ಈ ವಿಶೇಷವನ್ನು ಮೂಲದಲ್ಲಿ 'ಸ್ವಕಣಿಕಾಯಾಃ' ಎಂದು ಸ್ತ್ರೀಲಿಂಗದಿಂದ ಹೇಳದೇ 'ಸ್ವಕಣಿಕಾತ್' ಎಂದು ಪುಲ್ಲಿಂಗದಲ್ಲಿ ಹೇಳಿರುವದರಿಂದ ವೇದವ್ಯಾಸರು

ಸೂಚಿಸಿರುವರು. ೩೪ನೇ ಶ್ಲೋಕದಲ್ಲಿ 'ಜಾತೇಽಂಕುರೇ ಕಥಮಿಹೋಪಲಭೇತ ಬೀಜಂ' ಎಂಬಲ್ಲಿ ಬೀಜಶಬ್ದದಿಂದ ಏನು ಹೇಳುವ ಎಂಬ ಶಂಕೆಗೂ ಆ ಕಣಿಕಾ ಎಂಬ ದೇವತೆಯೇ ಬೀಜಶಬ್ದದಿಂದ ಹೇಳಲ್ಪಡುವಳು ಎನ್ನುತ್ತಾರೆ. ಆ ಕಣಿಕಾ ಎಂಬ ದೇವತೆ ವೃಕ್ಷಗಳನ್ನು ಅಭಿವ್ಯಕ್ತಗೊಳಿಸುವದರಿಂದಲೇ ಬೀಜವೆನಿಸುತ್ತದೆ. ಕಣಿಕಾನಾಮಕ ದೇವತೆಯು ಅಂಕುರವು. ಹುಟ್ಟಿದರೂ(ಅಂಕುರದಲ್ಲಿ ಇದೆ ಉಪಾದಾನಕಾರಣ ಬೀಜದಂತೆ ನಾಶಹೊಂದಿಲ್ಲ) 'ಸಾ ಜಾತೇಽಂಕುರೇ ಸ್ಥಿತಾ' ಎಂಬುದರಿಂದ ೩೪ನೇ ಶ್ಲೋಕದ 'ಜಾತೇಽಂಕುರೇ ಕಥಮಿಹೋಪಲಭೇತ ಬೀಜಂ' ಎಂಬುದರ ವ್ಯಾಖ್ಯಾನ ಮಾಡಿದಂತಾಯಿತು. ಹೀಗೆ ಶ್ರೀಹರಿಯು ಕಾರಣಗಳಲ್ಲಿ ಅದೃಶ್ಯನಾಗಿಯೇ ಇದ್ದು ಕಾರ್ಯವು ಹುಟ್ಟಿದ ಮೇಲೆ ಕಾರ್ಯಗಳನ್ನು ಪ್ರವೇಶಮಾಡಿ ಮುಖ್ಯವಾಗಿ ಪ್ರವೃತ್ತ್ಯಾದಿಗಳನ್ನು ಮಾಡಿದರೂ ಕಾಣುವದಿಲ್ಲ. ಬಹಳ ಬೆರೆಯುವದರಿಂದ ವಟ ಅಶ್ವತ್ಥಗಳನ್ನು ಮುಖತಃ ಹೇಳಿದೆ. ಸಪ್ತಮಪಂಚಕದ ಇಪ್ಪತ್ತನೆ ಖಂಡ ಬ್ರಾಹ್ಮಣದಲ್ಲಿ 'ತೇ ಚನ್ಯಂತಚೋ ರೋಹಂಸ್ತಸ್ಮಾನ್ಯಗ್ರೋಹತಿ ನ್ಯಗ್ರೋಹೋ ವೈ ನಾಮ' ಮತ್ತು 'ಅಶ್ವತ್ಥಃ ಸರ್ವವೃಕ್ಷಾಣಾಂ' ಎಂದು ವನಸ್ಪತಿ ಶ್ರೇಷ್ಠವಾದ್ದರಿಂದ ಅದನ್ನು ಸ್ವೀಕರಿಸಿದೆ. ಪ್ರಲಯಜಲಶಾಯಿತ್ವೇನ ಭಗವಂತನ ಪ್ರಸಕ್ತಿ ಇರುವದರಿಂದ ಅವನ ಹಾಸಿಗೆ ಎಂದು ಅನೇಕಪ್ರಮಾಣಪ್ರಮಿತವಾದುದರಿಂದ ಅವಾಂತರ ಪ್ರಲಯದಲ್ಲಿಯೂ ಮಾರ್ಕಾಂಡೆಯರಿಗೆ ವಟಪತ್ರದಲ್ಲಿಯೇ ಪ್ರತ್ಯಕ್ಷವಾದುದರಿಂದ ವಟಬೀಜ ಹೇಳಿದ್ದಕ್ಕೆ ಕಾರಣವನ್ನು ತಿಳಿಯಬೇಕು.

ವಟಬೀಜ ಎಂದಿರುವದರಿಂದ 'ಅಶ್ವತ್ಥ' ಎಂಬಲ್ಲಿಯೂ ಬೀಜದಲ್ಲಿ ಎಂದೇ ಸ್ವೀಕರಿಸಬೇಕು. ವ್ಯವಸ್ಥಾ ಎಂದರೆ ಪ್ರಮಾಣದಿಂದ ತಿಳಿಯಲ್ಪಟ್ಟ ಎಂದರ್ಥ. 'ಕಣಿಕಾ ಕತ್ಥ್ಯತೇತ್ಯಂತಸೂಕ್ಷ್ಮವಸ್ತ್ವಗ್ನಿಮಂಥಯೋಃ' ಎಂದು ವಿಶ್ವವಿದೆ. ವೃಕ್ಷಾನ್ ಎಂದದ್ದರಿಂದ ವಟಾಶ್ವತ್ಥಬೀಜ ಎಂದು ಹೇಳಿದ್ದು ಇಲ್ಲಿ ಬೀಜ ಉಪಲಕ್ಷಕವೆಂದು ತಿಳಿಯಬೇಕು. ಅಂಕುರಹುಟ್ಟಿದಾಗ ಮೊದಲು ವೃಕ್ಷವೃದ್ಧ್ಯಾದಿಜನಕವಾಗಿರುವ ಮುಖ್ಯವಾಗಿ ವೃಕ್ಷಾದಿಗಳಲ್ಲಿ ಅನುಮಾನದಿಂದ ತಿಳಿಯುವದು. ಜ್ಞಾನಿಗಳಿಂದ ಅಪರೋಕ್ಷವಾಗಿಯೂ ಕಾಣುವದು. ಅದರಂತೆ ಹರಿಯು ಕಾರಣಗಳಲ್ಲಿ ಅವಾಂತರ ಕಾರಣಗಳಲ್ಲಿ ಇದ್ದು ಕಾರ್ಯ ಹುಟ್ಟಿದ ಮೇಲೆ ಅವುಗಳಲ್ಲಿ ಪ್ರವೇಶಮಾಡಿ ಕಾರ್ಯಗಳ ಪ್ರೇರಕನಾಗಿ ಕಾಣುವನು ಎಂದು ಬ್ರಹ್ಮತರ್ಕದಲ್ಲಿದೆ. ಇದರ ರೀತಿಯನ್ನು 'ನ್ಯಗ್ರೋಧಫಲಮತ ಆಹರ' ಮುಂತಾಗಿ ನವಕೃತ್ವೋಪದೇಶದಲ್ಲಿ ವಿಸ್ತಾರವಾಗಿ ತಿಳಿಯಬೇಕು. ಈ ಕಾರಣದಿಂದಲೂ ವಟವನ್ನು ಪ್ರಮಾಣದಲ್ಲಿ ಮೊದಲು ಹೇಳಿದೆ ಎಂದು ತಿಳಿಯಬೇಕು.

ನಿನ್ನ ನಾಭಿಯು ಪದ್ಮಕ್ಕೆ ಉಪಾದಾನವಲ್ಲ ಎಂಬುದನ್ನು ತಿಳಿಸಲು 'ಆತ್ಮಗೂಢಂ' ಎಂದಿರುವದರು. ನಿನ್ನಲ್ಲಿ ಅಡಗಿದ ಎಂದರ್ಥ. ಇದಕ್ಕೆ ದೃಷ್ಟಾಂತ 'ಸ್ವಕಣಿಕಾದ್ವಟವತ್' ಎಂಬುದು. ಸ್ವಕಣಿಕಾ ಎಂದರೆ ಕಣ್ಣಿಗೆ ಕಾಣುವ ಬೀಜದಲ್ಲಿ ಇರುವ ಅದೃಶ್ಯವಾದ ದೇವತಾ. ತಸ್ಯಾಃ ಅದರಿಂದ ಅಸ್ಯತೇ ಸ್ವತಂತ್ರವಾಗಿ ಬರುವದರಿಂದ ಸ್ವಕಣಿಕಾತ್ ಸ ಚಾಸೌ ವಟಶ್ಚ ಸ್ವಕಣಿಕಾದ್ವಟ ತದ್ವತ್ ನ್ಯಗ್ರೋಧದಂತೆ 'ವಟಕಪರ್ದನ್ಯಗ್ರೋಧೇ' ಎಂದು ವಿಶ್ವವಿದೆ. ಒಳಗಡಗಿದ ದೇವತೆಗೂ ವಟಕ್ಕೂ ಆಲದಮರಕ್ಕೂ ಉಪಾದಾನ ಉಪಾದೇಯಭಾವ ಹೇಗಿಲ್ಲವೋ ಹಾಗೆ ನಾಭಿಗೂ ಜಗದಾತ್ಮಕಪದ್ಮಕ್ಕೂ ಉಪಾದಾನಉಪಾದೇಯ ಭಾವವಿಲ್ಲ. ಹೀಗೆ ಒಂದೇ ಪದ ಮಾಡಿದ್ದರಿಂದ ತಾತ್ಪರ್ಯವ್ಯಾಖ್ಯಾನ ಮಾಡುವಾಗ ಉದಾಹರಿಸಿದ 'ಕಣಿಕಾ ಕಥ್ಯತೇ ಅತ್ಯಂತಸೂಕ್ಷ್ಮವಸ್ತ್ವಗ್ನಿಮಂಥಯೋಃ' ಎಂಬ ವಿಶ್ವಕೋಶದಲ್ಲಿ ಹೇಳಿದ ಸ್ತ್ರೀಲಿಂಗ ಬಾಧೆಯೂ ಇಲ್ಲ. ಅಥವಾ ಸ್ವಕಣಿಕಾತ್, ವಟವತ್ ಎಂಬ ಎರಡುಪದ ಸಾಮಾನಾಧಿಕರಣ್ಯೇನ ಅನ್ವಯವನ್ನು ಪಡೆದುಕೊಳ್ಳುತ್ತವೆ. ಸ್ವಕಣಿಕಾ ದೇವತಾ ಯಸ್ಮಿನ್ ತತ್ ಸ್ವಕಣಿಕಂ ಪರಿದೃಶ್ಯಮಾನಬೀಜಂ ತಸ್ಮಾತ್ ವಟವತ್ ಅಂದರೆ ದೇವತೆಯುಳ್ಳ ಪರಿದೃಶ್ಯಮಾನ ಬೀಜದಿಂದ ಆಲದಮರ ಹುಟ್ಟಿದಂತೆ ಎಂದರ್ಥ. 'ಪ್ರಕೃತಿಧರ್ಮಿಣಃ' ಎಂದು ಹೇಳಿದ ಪ್ರಕೃತಿಯು ಬೀಜದಂತೆ ಉಪಾದಾನವು ಧರ್ಮಿಯಾದ ಭಗವಂತನು ದೇವತಾ ಇದ್ದಂತೆ ವಟವಿದ್ದಂತೆ ಜಗಜ್ಜಲಜವು ಹೀಗೆ ಉಪಾದಾನ-ನಿಮಿತ್ತ ಎರಡನ್ನೂ ಹೇಳಿದಂತಾಯಿತು. ||೩೩||

ಯಾವುದಕ್ಕಾಗಿ ಕಮಲದ ಉತ್ಪತ್ತಿ ಬ್ರಹ್ಮದೇವರ ಉತ್ಪತ್ತಿ ಹೇಳಿತೋ ಮತ್ತು ಆರನೇ ಸ್ಕಂಧದಲ್ಲಿ 'ಕಂಜಮುಲೋಕತಂತ್ರಂ' ಎಂದು ಸಂಕ್ಷೇಪವಾಗಿ ಹೇಳಿತ್ತೋ ಮತ್ತು ದೇವತೆಯಂತೆ ಭಗವಂತನಿಗೆ ಅದೃಶ್ಯತ್ವವನ್ನು ಏನು ಹೇಳಿತೋ ಅದನ್ನು ಪ್ರಕಟಗೊಳಿಸುತ್ತ ಚತುರಾನನ ವಿಚಾರವನ್ನು ಹೇಳುವರು-

ಹಿಂದಿನ ಶ್ಲೋಕದಲ್ಲಿ ಪದ್ಮದ ನಾಲ್ಮೊಗಬ್ರಹ್ಮನ ಉತ್ಪತ್ತಿಯನ್ನು ಹೇಳಿ ಈಗ ಪದ್ಮದಿಂದ ಬ್ರಹ್ಮದೇವರ ಉತ್ಪತ್ತಿಯನ್ನು ಮತ್ತು ಪದ್ಮಕ್ಕೆ ಉಪಾದಾನವಾದುದರಲ್ಲಿರುವ ರೂಪವು ಪದ್ಮ ಬಿಟ್ಟು ಬೇರೆಡೆಗೆ ಕಾಣದಿರುವದನ್ನು ಹೇಳುತ್ತಾರೆ.

ಬ್ರಹ್ಮದೇವರಿಗೆ ಲೋಕಪದ್ಮರೂಪದೇಹದಲ್ಲಿ ಅಭಿಮಾನೋತ್ಪತ್ತಿಯನ್ನು ಹೇಳುತ್ತ ಶ್ರೀಹರಿಯ ಅದೃಶ್ಯತ್ವವನ್ನು ಪ್ರಕಟಮಾಡುತ್ತ ಬ್ರಹ್ಮದೇವರು ಮಾಡಿದ ಹರಿಯ ವಿಚಾರವನ್ನು ಹೇಳುವರು-

**ತತ್ಸಂಭವಃ ಕವಿರತೋಽನ್ಯದಪಶ್ಯಮಾನ-**
**ಸ್ತ್ವಾಂ ಬೀಜಮಾತ್ಮನಿ ತತಂ ಸ ಬಹಿರ್ವಿಚಿನ್ತ್ಯ ।**

**ನಾವಿಂದದಬ್ದಶತಮಪ್ಸು ನಿಮಜ್ಜಮಾನೋ**
**ಜಾತೇಽಂಕುರೇ ಕಥಮಿಹೋಪಲಭೇತ ಬೀಜಮ್ ॥೩೪॥**

**ತತ್ಸಂಭವಃ** ಪ್ರಕೃತ್ಯಾತ್ಮಕಪದ್ಮದಿಂದ ಹುಟ್ಟಿದ(ಲೋಕಾತ್ಮವಾದ ತಮ್ಮ ದೇಹದಂತಿರುವ ಕಮಲದಲ್ಲಿ ಅಭಿಮಾನೋತ್ಪತ್ತಿರೂಪ ಉತ್ಪತ್ತಿಯುಳ್ಳ) ಅಥವಾ ತಸ್ಮಾತ್ ಸಂಭವತೀತಿ ತತ್ಸಂಭವಃ ಪದ್ಮನಾಭನಿಂದ ಜನಿಸಿದ **ಕವಿಃ ಸಃ** ಸರ್ವಜ್ಞರಾದ ಪ್ರಸಿದ್ಧರಾದ ಆ ಬ್ರಹ್ಮದೇವರು **ಅತಃ** ತಾವು ಹುಟ್ಟಿದ ಪ್ರಕೃತ್ಯಾತ್ಮಕ ಕಮಲದಿಂದ **ಅನ್ಯತ್** ಬೇರೆ ಯಾವವಸ್ತುವನ್ನು **ಅಪಶ್ಯಮಾನಃ** ಕಾಣದೇ(ಇನ್ನೂ ಯಾವದೂ ಹುಟ್ಟದಿರುವದರಿಂದ)**ಆತ್ಮನಿ** ತಮ್ಮಲ್ಲಿಯೇ ಮತ್ತು ತಮ್ಮ ಕಮಲದಲ್ಲಿ **ತತಂ** ವ್ಯಾಪ್ತನಾದ **ಬೀಜಂ** ವ್ಯಂಜಕನಾದ್ದರಿಂದ ಬೀಜನೆನಿಸುವ ನಿಮಿತ್ತಕಾರಣನಾದ **ತ್ವಾಂ** ನಿನ್ನನ್ನು **ಬಹಿಃ** ಕಮಲದ ಹೊರಗೆ ಒಳಗೂ **ವಿಚಿನ್ವನ್** ಹುಡುಕುತ್ತ **ಅಪ್ಸು** ಪ್ರಲಯಜಲದಲ್ಲಿ **ನಿಮಜ್ಜಮಾನಃ** ಮುಳುಗಿ **ಅಬ್ದಶತಂ** ನೂರುವರ್ಷಗಳು ಕಳೆದರೂ **ಕವಿಃ ಸನ್ ಅಪಿ** ಜ್ಞಾನಿಗಳಾಗಿದ್ದರೂ **ನ ಅವಿಂದತ್** ಕಾಣಲಿಲ್ಲ. (ಕಮಲದಲ್ಲೇ ಕಂಡರೆಂದರ್ಥ)ಲೋಕದಲ್ಲಿ **ಅಂಕುರೇ ಜಾತೇ** ಬೀಜದಿಂದ ಅಂಕುರಹುಟ್ಟಿದ ಮೇಲೆ ಬೀಜವು ನಷ್ಟವಾಗಿ ಅಂಕುರದಲ್ಲಿ ಸೇರಿಕೊಂಡಿರುವ ಅಭಿವ್ಯಂಜಕ ದೇವತೆಯನ್ನು **ಇಹ** ಈ ಭೂಮಿಯಲ್ಲಿ(ಅಂಕುರದ ಹೊರಗೆ) **ಪುರುಷಃ** ಜನರು **ಕಥಂ ಉಪಲಭೇತ** ಹೇಗೆ ಕಾಣುವರು ಆದ್ದರಿಂದ ಶ್ರೀಹರಿಯನ್ನು ಬ್ರಹ್ಮದೇವರು ಕಮಲದ ಹೊರಗೆ ಕಾಣಲಿಲ್ಲ ಕಮಲದಲ್ಲೇ ಕಂಡರು ಎಂದರ್ಥ. ಇದು ಕವಿ ಎಂಬ ವಿಶೇಷಣದಿಂದ ಸ್ಪಷ್ಟವಾಗುವದು. ಆದ್ದರಿಂದ ಈ ಹುಡುಕುವದು ಲೋಕವಿಡಂಬನ ಹಾಗೂ ಶ್ರೀಹರಿಯ ಪ್ರೀತ್ಯರ್ಥ. ಉಪಾದಾನಾನಂತರ್ಗತ ಪದ್ಮನಾಭನ ದರ್ಶನ ತಪಸ್ಸಿನಿಂದ ಆಗಿದೆ ಎಂದು ತೃತೀಯಸ್ಕಂಧದಲ್ಲಿ ಹೇಳಿದೆ. 'ಜಾತೇ ಅಂಕುರೇ ಕಥಮುಪಲಭೇತ' ಎಂಬಲ್ಲಿ ಹೇಳಬೇಕಾದುದನ್ನು ಹಿಂದಿನ ಶ್ಲೋಕದ ತಾತ್ಪರ್ಯದಲ್ಲಿ 'ಸಾ ಜಾತೇ ತ್ವಂ ಕುತಃ ಸ್ಥಿತಾ' ಮುಂತಾಗಿ ಹೇಳಿದೆ. ಅದನ್ನೂ ಇಲ್ಲಿ ತಿಳಿಯಬೇಕು. ಇಲ್ಲಿ ಹೇಳಬೇಕಾದುದೆಲ್ಲವನ್ನು ಆರನೇ ಸ್ಕಂಧದಲ್ಲಿ 'ಅಜ್ಞಾನಂ ಚ ಚತುರ್ವಾರಂ ದ್ವಿವಾರಂ ಭಯಮೇವ ಚ' ಮುಂತಾಗಿ ಉದಾಹರಿಸಿ ಆಚಾರ್ಯರೆ ವಿಚಾರಿಸಿದ್ದಾರೆ. ಕಾರಣ ಇಲ್ಲಿ ಹೇಳಿಲ್ಲ ಅದನ್ನೇ ಅನುಸಂಧಾನ ಮಾಡಬೇಕು. ॥೩೪॥

ಹೊರಗೆ ಕಾಣಲಿಲ್ಲ ಎಂದು ಹೇಳಿದ್ದರಿಂದ ಸೂಚಿತವಾದ ಒಳಗೆ ಕಂಡರೆಂಬ ವಿಷಯವನ್ನು ಸ್ಪಷ್ಟಪಡಿಸುತ್ತಾರೆ-

ಬ್ರಹ್ಮದೇವರು ಈ ರೀತಿ ವಿಚಾರ ಮಾಡಿ ಶ್ರೀಹರಿಯನ್ನು ತಿಳಿದರೋ ಇಲ್ಲವೋ ಎಂದು ತಿಳಿಯಲಿಚ್ಛಿಸಿದಾಗ ಹೇಳುವರು-

**ಸ ತ್ವಾತ್ಮಯೋನಿರತಿವಿಸ್ಮಿತ ಆಶ್ರಿತೋಽಬ್ಜಂ**
**ಕಾಲೇನ ತೀವ್ರತಪಸಾ ಪರಿಶುದ್ಧಭಾವಃ ।**
**ತ್ವಾಮಾತ್ಮನೀಶ ಭುವಿ ಗಂಧಮಿವಾತಿಸೂಕ್ಷ್ಮಂ**
**ಭೂತೇಂದ್ರಿಯಾಶಯಮಯೇ ವಿತತಂ ದದರ್ಶ ॥೩೪॥**

**ಹೇ ಈಶ** ಎಲೋ ಸ್ವಾಮಿಯೇ **ಆತ್ಮಯೋನಿಃ** ಪರಮಾತ್ಮನೇ ಕಾರಣನಾಗಿವುಳ್ಳ **ಸ ತು** ಬ್ರಹ್ಮದೇವರಾದರೂ(ತು ಶಬ್ದದಿಂದ ಬೇರೆ ದೇವತೆಗಳಿಗಿಂತ ವೈಶಿಷ್ಟ್ಯ ತಿಳಿಸಿರುವರು) 'ಸತ್ವಾತ್ಮಯೋನಿಃ' ಎಂಬುದು ಒಂದೇ ಪದ. ಶುದ್ಧಸತ್ವ ತನಗೆ(ತನ್ನ ದೇಹಕ್ಕೆ)ಕಾರಣವಾಗಿವುಳ್ಳೆಂದರ್ಥ. 'ಸತ್ವಸತ್ವಮಹಾಸತ್ವ ಸೂಕ್ಷ್ಮಸತ್ವಃ ಚತುರ್ಮುಖಃ' ಎಂದು ಪ್ರಮಾಣವಿದೆ. **ಅತಿವಿಸ್ಮಿತಃ** ಕಾರಣವಿಲ್ಲದೇ ಕಾರ್ಯಹುಟ್ಟುವದಿಲ್ಲ ಕಾರ್ಯವಾದರೂ ಹುಟ್ಟಿದೆ ಕಾರಣವಾದರೂ ಒಳಗೂ ಹೊರಗೂ ಕಾಣುವದಿಲ್ಲವಲ್ಲ ಎಂದು ಕುತೂಹಲವುಳ್ಳವರಾಗಿ ಈ ಕಮಲಕ್ಕೆ ಪೃಥವೀ ಮೊದಲಾದ ವಿವಿಧ ಆಧಾರಗಳು ಯಾವುವೂ ಇನ್ನೂ ಹುಟ್ಟಿಲ್ಲ ಆದರೂ ಇದಕ್ಕೊಂದು ಆಧಾರವಿರಲೇಬೇಕು. ಲೋಕದಲ್ಲಿ ಉಪಾದಾನಕಾರಣವಾದ ಬೀಜನಾಶವಾದಂತೆ ಇದರ ನಿಮಿತ್ತ ಕಾರಣವು ನಾಶವಾಗಲು ಸಾಧ್ಯವಿಲ್ಲ. ಆದ್ದರಿಂದ ಇದ್ದರೂ ಕಾಣುತ್ತಿಲ್ಲ ಇದು ಆಶ್ಚರ್ಯವೆಂದು ಅಚ್ಚರಿಗೊಂಡು **ಅಬ್ಜಂ** ತಾನು ಹುಟ್ಟಿದ ಕಮಲವನ್ನು **ಆಶ್ರಿತಃ** ಮತ್ತೆ ಏರಿದನು (ಕುಳಿತನು)**ಕಾಲೇನ** ನೂರುವರ್ಷಾತ್ಮಕ ಕಾಲದಿಂದ **ತೀವ್ರೇಣ ತಪಸಾ** ತಪ, ತಪ ಎಂಬ ಅಶರೀರವಾಣಿಯನ್ನು ಕೇಳಿದ ನಂತರ ತಪಸ್ಸನ್ನು ಮಾಡಿ ನನ್ನನ್ನು ಕಾಣು ಎಂದು ಇದರರ್ಥವೆಂದು ತಿಳಿದು ಮಾಡಿದ ಶೀಘ್ರದಲ್ಲಿ ತಮ್ಮ ಅಭೀಷ್ಟವನ್ನು ಕೊಡುವ ಕಠಿಣವಾದ ತಪಸ್ಸಿನಿಂದ **ಪರಿಶುದ್ಧಭಾವಃ** ಭಗವಂತನನ್ನು ಕಾಣಲು ಯೋಗ್ಯವಾದ ಭಗವಂತನ ದಯೋದಯಕ್ಕೆ ಯೋಗ್ಯವಾದ ಮನಸ್ಸುಳ್ಳವನಾಗಿ **ಆತ್ಮನಿ** ತನ್ನಲ್ಲಿ **ತತಂ** ವ್ಯಾಪ್ತನಾದ **ಭೂತೇಂದ್ರಿಯಾಶಯಮಯೇ** ಪಂಚಮಹಾಭೂತಗಳು ಇಂದ್ರಿಯಗಳು(ಮನಸ್ಸು ಬಿಟ್ಟು) **ಆಶಯ** ಮನಸ್ಸು ಏತದಾತ್ಮಕಜಗತ್ತಿನಲ್ಲಿ ವ್ಯಾಪ್ತವಾದ ಅಥವಾ ಮನಸ್ತತ್ವ ಮತ್ತು ಭೂತೇಂದ್ರಿಯಗಳ ವಿಕಾರವಾದ **ಆತ್ಮನಿ** ದೇಹಸ್ಥಾನೀಯವಾದ ಪದ್ಮದಲ್ಲಿ **ಭುವಿ** ಭೂಮಿಯಲ್ಲಿ **ಅತಿಸೂಕ್ಷ್ಮಂ ಗಂಧಂ ಇವ** ಪೃಥಿವೀ ಅಭಿಮಾನಿದೇವತೆಯಂತೆ ಅತ್ಯಂತಸೂಕ್ಷ್ಮವಾಗಿರುವ ಆದರೆ **ವಿತತಂ** ವ್ಯಾಪ್ತನಾದ **ತ್ವಾಂ** ನಿನ್ನನ್ನು **ದದರ್ಶ** ನೋಡಿದನು.

ವಿಶೇಷ ಃ- ಗಂಧವು ಘ್ರಾಣೇಂದ್ರಿಯದಿಂದ ಗ್ರಾಹ್ಯವಾಗಿದೆ ಕಾರಣ ಅದಕ್ಕೆ ಅತಿಸೂಕ್ಷ್ಮತ್ವ ಹೇಳಿದ್ದನ್ನು ಸೂಕ್ಷ್ಮದೃಷ್ಟಿಯಿಂದ ತಿಳಿದಾಗ ಗಂಧಶಬ್ದಕ್ಕೆ ಅತಿಸೂಕ್ಷ್ಮತೆ

ಅರ್ಥಾತ್ ಅದೃಶ್ಯತೆಯುಳ್ಳ ಅಭಿಮಾನಿದೇವತೆಯೇ ಅರ್ಥವೆಂದು ತಿಳಿಯುವದು. ಹೀಗೆ ಯೋಗಿಯು ಪೃಥಿವೀ ಅಭಿಮಾನಿದೇವತೆಯನ್ನು ನೋಡುವನೋ ಹಾಗೆ ನಿನ್ನನ್ನು ನೋಡಿದನೆಂದರ್ಥ ।।೩೫।।

ಕೇವಲ ಪದ್ಮಾಂತರ್ಗತ ಸೂಕ್ಷ್ಮರೂಪವನ್ನಷ್ಟೇ ಅಲ್ಲ ಹೊರಗೆ ಪದ್ಮನಾಭರೂಪವನ್ನು ಮಾತ್ರವಲ್ಲ ಕಿಂತು 'ಪಾತಾಲಮೇತಸ್ಯ' ಮುಂತಾಗಿ ಹೇಳಿದ ವಿರಾಡ್ರೂಪವನ್ನೂ ಸಹ ನೋಡಿ ಸಂತೋಷಪಟ್ಟರೆಂದು ಹೇಳುವರು-

ಮೊದಲು ಯಾವ ಅತಿಸೂಕ್ಷ್ಮರೂಪವನ್ನು ನೋಡಿದರೆಂದು ಹೇಳಿತೋ ಅದೇ ಇದು. ಎಳ್ಳಷ್ಟೂ ವ್ಯತ್ಯಾಸವಿಲ್ಲ ಎಂದು ವೇದವ್ಯಾಸರು ತಿಳಿಸುವರು-

**ಏವಂ ಸಹಸ್ರವದನಾಂಘ್ರಿಶಿರಃ ಕರೋರು-**
**ನಾಸಾಸ್ಯಕರ್ಣನಯನಾಭರಣಾಯುಧಾಢ್ಯಮ್ ।**
**ಮಾಯಾಮಯಂ ಸದುಪಲಕ್ಷಣಸನ್ನಿವೇಶಂ**
**ದೃಷ್ಟ್ವಾ ಮಹಾಪುರುಷಮಾಪ ಮುದಂ ವಿರಿಂಚಃ ।।೩೬।।**

**ವಿರಿಂಚಃ** ಬ್ರಹ್ಮದೇವರು **ಏವಂ** ಸೂಕ್ಷ್ಮರೂಪವನ್ನು ನೋಡಿದಂತೆಯೇ **ಮಾಯಾಮಯಂ** ಜ್ಞಾನಸ್ವರೂಪವಾದ **ಸದುಪಲಕ್ಷಣಸನ್ನಿವೇಶಂ** ಆನಂದ ಜ್ಞಾನ ಮೊದಲಾದ ಗುಣಗಳ ಸಮುದಾಯರೂಪವಾದ **ಸಹಸ್ರವದನ** ಅನಂತಮುಖಗಳು **ಅಂಘ್ರಿ** ಅನಂತಪಾದ **ಶಿರಃ** ಅನಂತ ತಲೆಗಳು **ಕರ** ಅನಂತ ಹಸ್ತಗಳು **ಊರು** ಅನಂತತೊಡೆಗಳು ಎದೆಗಳು **ನಾಸಾ** ಅನಂತ ಮೂಗುಗಳು **ಆಸ್ಯ** ಅನಂತಮುಖ ಮಧ್ಯಭಾಗವುಳ್ಳ (ಆಸ್ಯಂ ವಕ್ತ್ರೇ ವಕ್ತ್ರಮಧ್ಯೇ ಎಂದು ವಿಶ್ವವಿದೆ) ಅರ್ಥಾತ್ ಬಾಯಿಗಳುಳ್ಳ **ಕರ್ಣ** ಅನಂತ ಕಿವಿಗಳು **ನಯನ** ಅನಂತ ಕಣ್ಣು **ಆಭರಣ** ಅನಂತ ಅಲಂಕಾರಗಳು **ಆಯುಧಾಢ್ಯಂ** ಅನಂತಚಕ್ರಾದಿಆಯುಧಗಳಿಂದ ಕೂಡಿದ **ಮಹಾಪುರುಷಂ** ವಿರಾಡ್ರೂಪಿಯಾದ ಶ್ರೀಹರಿಯನ್ನು **ದೃಷ್ಟ್ವಾ** ನೋಡಿ **ಮುದಂ** ಸಂತೋಷವನ್ನು **ಆಪ** ಹೊಂದಿದರು.

ವಿಶೇಷ ಃ- ಸ್ವರೂಪಭೂತವದನಾದಿಗಳೊಡನೆ ಹೇಳಿದುದರಿಂದ ಆಭರಣ ಆಯುಧಗಳನ್ನು ಸ್ವರೂಪಭೂತವಾದವುಗಳನ್ನು ಸ್ವೀಕರಿಸುವದು ಉಚಿತವೆನಿಸುತ್ತದೆ. ಜೊತೆಗೆ ಹೇಳಿದ್ದರೂ ಭಿನ್ನವಾದವುಗಳನ್ನು ಸ್ವೀಕರಿಸಬಹುದು 'ತನ್ಮುಖ್ಯಂ ಜ್ಞಾನಶಬ್ದಯೋಃ' ಎಂಬಲ್ಲಿಯಂತೆ. ಇದರಂತೆ ಹಿಂದೆ 'ಶೇಷಾಸನಃ' ಎಂದು ಹೇಳಿದ 'ಸಹಸ್ರವದನಃ ಶೇಷಘ್ಯಾರ್ ಆಸನತ್ವೇನ ಯಸ್ಯ ಸಃ ಸಹಸ್ರವದನಃ ಸ ಚಾಸೌ ಅಂಘ್ರಧಾರ್ಯಃ ಶೇಷಶಾಯಿಯಾದ ಅನಂತಪಾದಾದಿಗಳುಳ್ಳ ಎಂದರ್ಥ. ಈ

ಪಕ್ಷದಲ್ಲಿ ಅಂಘ್ರಿ ಮುಂತಾದ ಪದಗಳೇ ಬಹುವಚನಾಂತವಾಗಿ ವಿಗ್ರಹ-ಮಾಡಲ್ಪಟ್ಟವುಗಳಾಗಿ ಬಾಧವಿಲ್ಲದ್ದರಿಂದ ಬಹುತ್ವಸಮರ್ಪಕಗಳಾಗಿವೆ ಎಂದು ತಿಳಿಯಬೇಕು.

ಈ ಶ್ಲೋಕದ 'ಮಾಯಾಮಯಂ ಸದುಪಲಕ್ಷಣಸನ್ನಿವೇಶಂ' ಎಂಬ ಪದ್ಯದ ಅರ್ಥದಲ್ಲಿ ಬ್ರಹ್ಮನು ಕಂಡ ರೂಪಕ್ಕೆ ಮಾಯಾಮಯ ಪ್ರಕೃತ್ಯಾತ್ಮಕತ್ವ ಅಥವಾ ಆವಿದ್ಯಕತ್ವವನ್ನು ಅದರಂತೆ ಸದುಪಲಕ್ಷಣಸನ್ನಿವೇಶಂ ಎಂಬುದಕ್ಕೆ **ಸತ್** ಬ್ರಹ್ಮನೇ **ಉಪಲಕ್ಷಣಸ್ಯ** ಮಾಯಿಕರೂಪಕ್ಕೆ **ಸನ್ನಿವೇಶಂ** ಅಂತರ್ಧಾನಸ್ಥಾನವು ಎಂದರ್ಥವಾಗುವದು. ಸರಿಯಾದ ಅರ್ಥ ಆಗುವದಿಲ್ಲ ಕಾರಣ ಈ ಭ್ರಮವನ್ನು ಪರಿಹರಿಸಲು ಅವುಗಳನ್ನು ಅನುವಾದ ಮಾಡಿ ವ್ಯಾಖ್ಯಾನಿಸುವರು-

**... ತಾತ್ಪರ್ಯ ...**

**ಮಾಯಾಮಯಂ ಜ್ಞಾನಸ್ವರೂಪಂ । ಸದುಪಲಕ್ಷಣಸನ್ನಿವೇಶಂ ಆನಂದಾದಿಲಕ್ಷಣ-ಸಮುದಾಯರೂಪಮ್ ॥**

**ಮಾಯಾ ವಯುನಂ ಜ್ಞಾನಂ** ಎಂದು ಜ್ಞಾನದ ಹೆಸರುಗಳಲ್ಲಿ ಮಾಯಾ ಶಬ್ದವಿರುವದರಿಂದ ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯವೆಂದೂ ಅರ್ಥವಿರುವದರಿಂದ ಮಾಯಾಮಯವೆಂದರೆ ಜ್ಞಾನರೂಪನೆಂದರ್ಥ ಹೇಳಿರುವರು. 'ಸದ್ಭಾವೇ ಸಾದುಭಾವೇ ಚ ಸದಿತ್ಯೇತತ್ ಪ್ರಯುಜ್ಯತೇ' 'ಸದ್ಭಾವವಾಚಿನಃ ಶಬ್ದಾ ಸರ್ವೇ ತೇ ಸುಖವಾಚಕಾಃ' ಎಂಬ ಗೀತಾತಾತ್ಪರ್ಯೋದಾಹೃತ ಶಬ್ದನಿರ್ಣಯಾದಿ ಪ್ರಮಾಣಾನುಸಾರ ಸತ್ ಶಬ್ದವು ಆನಂದಾದಿ ಉತ್ತಮಧರ್ಮಗಳನ್ನು ಹೇಳುವದು. 'ಲಕ್ಷಣಂ ಪರಮಾನಂದೋ ವಿಷ್ಣೋರೇವ ನ ಸಂಶಯಃ' ಎಂದು ವಚನವಿದೆ. 'ಉಪೋ ಅಧಿಕೇ ಚ' ಎಂಬ ಸೂತ್ರದಿಂದ ಉಪಪದವು ಅಧಿಕವಾಚಕವಾಗಿದೆ. ಆದ್ದರಿಂದ **ಸಂತಿ** ಆನಂದಾದಿಗಳು **ಉಪ** ಇತರ ವಿಲಕ್ಷಣವಾಗಿ ಅಧಿಕವಾಗಿ **ಲಕ್ಷಣಾನಿ** ಲಕ್ಷಣಗಳು ಅವುಗಳ ಸನ್ನಿವೇಶ. ಅಂಥ ಸಮುದಾಯ, ತದ್ರೂಪನೆಂಬ ಅಭಿಪ್ರಾಯದಿಂದ ಆನಂದಾದಿಲಕ್ಷಣ ಸಮುದಾಯರೂಪವೆಂದು ವ್ಯಾಖ್ಯಾನಿಸಿದ್ದಾರೆ. 'ಸನ್ನಿವೇಶಶ್ಚ ಯಃ ಸ್ತೋಮಃ ಸಮುದಾಯೋ ಗುಣಸ್ಮೃತಃ' ಎಂದು ಅಭಿಧಾನವಿದೆ. ಅದರಂತೆ 'ಅಥ ಕಸ್ಮಾದುಚ್ಯತೇ ಸದಿತಿ. ಸಂತೋ ಹಿ ಅಸ್ಮಿನ್ ಆನಂದ ಓಜೋ ಬಲಂ' ಎಂದು ಸ್ಪಷ್ಟಶ್ರುತಿಯೂ ಇದೆ.

'ಮಾಯೇತ್ಯುಕ್ತಾ ಪ್ರಕೃಷ್ಟತ್ವಾತ್ ಪ್ರಕೃಷ್ಟಂ ಹಿ ಮಯಾಭಿಧಂ । ವಿಷ್ಣೋಃ ಪ್ರಜ್ಞಾಪಿರೇವೈಕಾ' ಎಂದು ಶ್ರುತಿಯಿಂದ ಮಾಯಾಶಬ್ದಜ್ಞಾನವಾಚಕ ಎಂದು ಹೇಳಿರುವರು.

ಇನ್ನು ೩೫ನೇ ಶ್ಲೋಕ 'ಸತ್ತ್ವಾತ್ಮಯೋನಿ' ಎಂಬಲ್ಲಿ 'ತ್ವಾಮಾತ್ಮನೀಶ' ಎಂಬ ಅರ್ಥದಲ್ಲಿ 'ಭುವಿಗಂಧಮಿವ ಆತ್ಮನಿ ವಿತತಂ ತ್ವಾಂ ದದರ್ಶ' ಎಂದು ಭೂಮಿಯ ಗಂಧಕ್ಕೆ ದೃಷ್ಟಾಂತತೆಯನ್ನು ಮತ್ತು ಶ್ರೀಹರಿಗೆ ಚತುರ್ಮುಖಮಾತ್ರ ವ್ಯಾಪ್ತತೆಯನ್ನು ಹೇಳಿದಂತೆ ತೋರುವದು. ಮತ್ತು 'ಭೂತೇಂದ್ರಿಯಾಶಯಮಿಯೇ' ಎಂದು ಭೂತಾದ್ಯಭೇದಹೇಳಿರುವದರಿಂದ ಮಾಯಾಮಯ ಎಂದರೆ ಪ್ರಕೃತ್ಯಾತ್ಮಕ ಎಂದರ್ಥ ಏಕಾಗಬಾರದು ಎಂಬ ಶಂಕೆ ಪರಿಹರಿಸಲು ಮತ್ತು ಇಲ್ಲಿಯೂ ನೋಡಿದ್ದು (ದರ್ಶನಕರ್ಮ) ಅದುವೇ ಬೇರೆಯಲ್ಲ ಎಂದು ನಿಶ್ಚಯಿಸಲು ದೃಷ್ಟ್ವಾ ಎಂಬ ಅನುವಾದದ ಆನುಕೂಲ್ಯಕ್ಕಾಗಿ 'ಭೂವಿಗಂಧಮಿವ ದೃಷ್ಟ್ವಾ' ಎಂದೂ ಯೋಜಿಸಬೇಕು ಎಂದು ಗ್ರಂಥಕಾರರ ಅಭಿಪ್ರಾಯವನ್ನು ತಿಳಿಸಲು ಇದು ಎರಡೂ ಶ್ಲೋಕಗಳ ಉಪಸಂಹಾರರೂಪವೆಂದು ಸೂಚಿಸಲು ಈ ಗಂಧವು ಜಡವೆಂಬ ಭ್ರಮವನ್ನು ನಿವಾರಿಸಲು ಬ್ರಹ್ಮತರ್ಕವಚನವನ್ನು ಪ್ರಮಾಣವಾಗಿ ಹೇಳುವರು-

**... ತಾತ್ಪರ್ಯ ...**

**ಗಂಧಾಖ್ಯಾದೇವತಾ ಯದ್ವತ್ ಪೃಥಿವೀಂ ವ್ಯಾಪ್ಯ ತಿಷ್ಠತಿ ।**
**ಏವಂ ವ್ಯಾಪ್ತಂ ಜಗದ್ವಿಷ್ಣುಂ ಬ್ರಹ್ಮಾಽಽತ್ಮಸ್ಥಂ ದದರ್ಶ ಹ ॥ ಇತಿ ಚ ॥**

ಗಂಧವೆಂಬ ಹೆಸರಿನ ದೇವತೆ ಪೃಥವೀಯನ್ನು ವ್ಯಾಪಿಸಿಕೊಂಡು ಹೇಗೆ ಇರುವನೋ ಹಾಗೆ ತನ್ನಲ್ಲಿರುವ ದೇಹಸ್ಥಾನಿಯ ಪದ್ಮದಲ್ಲಿರುವ ವಿಷ್ಣುವನ್ನೂ ಜಗದ್ವ್ಯಾಪ್ತನೆಂದು ಚತುರ್ಮುಖಬ್ರಹ್ಮನು ಕಂಡನು ಎಂದರ್ಥ. ಇದರ ಅರ್ಥವನ್ನು ಷಷ್ಠಸ್ಕಂಧದಲ್ಲಿ ಸಪ್ರಮಾಣವಾಗಿ ಹೇಳಿದೆ ತಿಳಿಯಬೇಕು. ದೀಪಿಕಾದಲ್ಲಿ 'ತಸ್ಥಂ ತಸ್ಮಿನ್ ಜಗತಿ ಸ್ಥಿತಂ' ಎಂದು ವ್ಯಾಖ್ಯಾನಿಸಿ ಇದರಿಂದ ಗಂಧಪದವು ಪೃಥಿವೀವ್ಯಾಪ್ತದೇವತಾಪರವಾದುದರಿಂದ ಪೃಥವೀಯಲ್ಲಿರುವ ಗಂಧವೆಂಬ ಗುಣ ತೆಗೆದುಕೊಂಡು ಅಭೇದ ಹೇಳಲು ಅವಕಾಶವಿಲ್ಲವೆಂದಿರುವರು. ॥೩೬॥

**ತಸ್ಮೈ ಭವಾನ್ ಹಯಶಿರಸ್ತನುವಂ ಚ ಬಿಭ್ರದ್**
**ವೇದದ್ರುಹಾವತಿ ಬಲೌ ಮಧುಕೈಟಭಾಖ್ಯೌ ।**
**ಹತ್ವಾಽನಯತ್ ಶ್ರುತಿಗಣಾಂಶ್ಚ ರಜಸ್ತಮಶ್ಚ**
**ಸತ್ತ್ವಂ ತವ ಪ್ರಿಯತಮಾಂ ತನುಮಾಮನಂತಿ ॥೩೭॥**

**ಚ** ಮತ್ತು **ಭವಾನ್** ನೀನು **ಹಯಶಿರಸ್ತನುವಂ** ಹಯಗ್ರೀವರೂಪವನ್ನು **ಬಿಭ್ರತ್** ಧರಿಸಿ(ತನುವಂ ಎಂಬಲ್ಲಿ ಇಯಜಾದಿಪ್ರಕರಣದಲ್ಲಿ 'ತನ್ವಾದೀನಾಂ ಛಂದಸಿ ಉಪಸಂಖ್ಯಾನಂ' ಎಂದಿರುವದರಿಂದ ಉವಜ್) **ರಜಃ ತಮಶ್ಚ** ಸ್ವಲ್ಪ ರಜೋಗುಣ ಮಿಶ್ರವಾದ ಬಹುಭಾಗ ತಮೋಗುಣವುಳ್ಳ ಅವುಗಳ ಸ್ವರೂಪರಾದ **ಅತಿಬಲೌ**

ಅತ್ಯಂತ ಬಲಿಷ್ಠರಾದ(ಅತಿ ಬಹುಸನ್ನಿಹಿತೋ ಬಲತೀ ಸದಾ ಇತಿ ಬಲಃ ವಾಯುಃ ತಯೋಃ ತೌ)ಅಂದರೆ ಬಲಸೇವಾರೂಪರಾದ ವಾಯುದೇವರ ಸನ್ನಿಧಾನ ಪಾತ್ರರಾದ ಆದ್ದರಿಂದಲೇ ಇತರರಿಂದ ಬಾಧಿಸಲಾಗದ **ವೇದದ್ರುಹೌ** ವೇದಗಳನ್ನು ಕದ್ದ ಅಂದರೆ ವೇದದಲ್ಲಿ ಹೇಳಿದಂತೆ ಅನುಷ್ಠಾನ ಮಾಡಲು ಪ್ರತಿಬಂಧ ಮಾಡುವ. **ಮಧುಕೈಟಭಾಖ್ಯೌ** ಮಧು, ಕೈಟಭರೆಂಬ ಹೆಸರಿನ ದೈತ್ಯರನ್ನು **ಹತ್ವಾ** ವರಬೇಡುವಂತೆ ಮಾಡಿ ಚಕ್ರದಿಂದ ಸಂಹರಿಸಿ **ಶ್ರುತಿಗಣಾನ್** ವೇದಸಮೂಹವನ್ನು **ಅನಯತ್** ತಂದು **ತಸ್ಮೈ** ಯಾರು ಸಂತೋಷಪಟ್ಟರೋ ಆ ಬ್ರಹ್ಮದೇವರಿಗೆ ಮತ್ತೆ ಉಪದೇಶಿಸಿ ತಲುಪಿಸಿದಿ ಅದರ ಅಭಿಮಾನಿಗಳನ್ನು ಅವರ ವಶಮಾಡಿದಿ. ಶುದ್ಧಸಾತ್ವಿಕರಾದುದರಿಂದ ಬ್ರಹ್ಮದೇವರಿಗೆ ಹಿತಮಾಡುವದು ಉಚಿತವೆಂದು ಹೇಳುತ್ತಾರೆ. ಆದ್ದರಿಂದ **ಸತ್ವಂ** ಸತ್ವಗುಣವನ್ನು **ತವ** ನಿನ್ನ **ಪ್ರಿಯತಮಾಂ** ಅತ್ಯಂತಪ್ರಿಯವಾದ **ತನುಂ** ಪ್ರತಿಯೊಂದು **ಆಮನಂತಿ** ಜ್ಞಾನಿಗಳು ಹೇಳುವರು ಅಥವಾ ದೇವತೆಗಳಲ್ಲಿಯೂ ಪ್ರಜೇಶ್ವರರಲ್ಲಿಯೂ ರಾಕ್ಷಸರಲ್ಲಿಯೂ ಇದ್ದುಕೊಂಡು ಲೀಲೆಯನ್ನು ಮಾಡುವದರಿಂದ ನಿನಗೆ ರಜಸ್ಸು ತಮಸ್ಸು ಮತ್ತು ಸತ್ವಗುಣಗಳು ನಿನ್ನ ಪ್ರತಿಮೆಗಳೆಂದು ತಿಳಿಯುವರು ಎಂದಾದರೂ ಅರ್ಥ. ಮ್ನಾ ಅಭ್ಯಾಸೇ ಎಂಬುದಕ್ಕೆ ಮನ ಆದೇಶವಾಗಿ ಆಮನಂತಿ ಎಂದು ರೂಪವಾಗಿದೆ. ಆಗಮುಗಳು ಆಗಮಜ್ಞರು ಎಂದ ಶೇಷಮಾಡಿ ಅನ್ವಯ. ಮಧುಕೈಟಭರ ಉತ್ಪತ್ಯಾದಿಗಳನ್ನು 'ತ್ವಯಾ ಪುರಾಕರ್ಣಪುಟಾದ್ವಿನಿರ್ಮಿತೌ ಮಹಾಸುರೌ ತೌ ಮಧುಕೈಟಭಾಖ್ಯೌ । ಪ್ರಭಂಜನಾವೇಶವಶಾತ್ತವಾಜ್ಞಯಾ ಬಲೋದ್ಧತಾವಾಶು ಜಲೇಭ್ಯವರ್ಧತಾಮ್ । ತ್ವದಾಜ್ಞಯಾ' ಎಂದಾರಂಭಿಸಿ 'ಮೇದಿನೀ' ಎಂಬಲ್ಲಿ ವರೆಗೆ ಶ್ರೀಮನ್ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಹೇಳಿದ್ದನ್ನು ತಿಳಿಯಬೇಕು. ಮಹಾಭಾರತದ ವನಪರ್ವದಲ್ಲಿ ಧುಂಧುಮಾರೋ-ಪಾಖ್ಯಾನದಲ್ಲಿ 'ಏಕಾರ್ಣವೇತದಾಲೋಕೇ ಎಂದಾರಂಭಿಸಿ ವಿತ್ರಾಸಯೇತಾಂ' ಮುಂತಾಗಿ ಹೇಳಿ 'ಚಕ್ರೇಣ ಶಿತಧಾರೇಣ ನ್ಯಕೃಂತತ ಮಹಾಯಶಾಃ' ಎಂಬಲ್ಲಿವರೆಗೆ ಅವರಿಬ್ಬರಿಂದ ಶ್ರೀಹರಿಗೆ ವರದಾನ ಹರಿಯ ಚಕ್ರದಿಂದ ಅವರ ವಧಾದಿಗಳನ್ನು ವಿಸ್ತಾರವಾಗಿ ತಿಳಿಯಬೇಕು. ಕಿವಿಗಳು ತಮ್ಮ ಉತ್ಪತ್ತಿಸ್ಥಾನವಾದುದರಿಂದ ಬಹಳ ಕೇಳಿ ಕೇಳಿ ಶ್ರಮವಾಗುವದು ಬೇಡವೆಂದು ಶ್ರುತಿಗಳ ಕಳ್ಳತನ ಯುಕ್ತಿಯುಕ್ತವೇ ಎಂದು ತಿಳಿಯಬೇಕು. ।।೩೩।।

ಭಗವಂತನ ಅವತಾರಗಳಿಗೆ ಲೋಕಕ್ಕೆ ಐಶ್ವರ್ಯಕೊಡುವದು. ಧರ್ಮಪಾಲನೆ, ದುಷ್ಟವಧೆಗಳಿಂದ ಪ್ರಯೋಜನವೆಂದು ಸ್ತೋತ್ರಮಾಡುತ್ತಾರೆ-

**ಇತ್ಥಂ ನೃತಿರ್ಯಗೃಷಿದೇವಝುಷಾವತಾರೈ-**
**ರ್ಲೋಕಾನ್ ವಿಭಾವಯಸಿ ಹಂಸಿ ಜಗತ್ಪ್ರತೀಪಾನ್ ।**
**ಧರ್ಮಂ ಮಹಾಪುರುಷ ಪಾಸಿ ಯುಗಾನುವೃತ್ತಂ**
**ಛನ್ನಃ ಕಲೌ ಯದಭವಸ್ತ್ರಿಯುಗೋಽಥ ಸ ತ್ವಮ್ ॥೩೮॥**

**ಹೇ ಮಹಾಪುರುಷ** ಪುರುಷೋತ್ತಮನಾದ ನರಸಿಂಹನೇ **ಇತ್ಥಂ** ಮೇಲೆ ಹೇಳಿದಂತೆ **ನೃ** ರಾಮಕೃಷ್ಣಾದಿಗಳು ಋಷಭಾದಿಗಳು ಮನುಷ್ಯಾವತಾರಗಳಿಂದಲೂ **ತಿರ್ಯಕ್** ವರಾಹ ಮೊದಲಾದ ಅವತಾರಗಳಿಂದಲೂ **ನೃತಿರ್ಯಕ್** ನರಸಿಂಹಾವತಾರದಿಂದಲೂ **ಋಷಿ** ವೇದವ್ಯಾಸ,ದತ್ತಾತ್ರೇಯ, ಕಲಪಿಲಾದಿ ಅವತಾರಗಳಿಂದಲೂ **ದೇವ** ಉಪೇಂದ್ರ ಯಜ್ಞ ಮುಂತಾದ ಅವತಾರಗಳಿಂದಲೂ **ಲೋಕಾನ್ ವಿಭಾವಯಸಿ** ಲೋಕಗಳನ್ನು ಸೃಷ್ಟಿಸುವ ಐಶ್ವರ್ಯಯುಕ್ತಗಳನ್ನಾಗಿ ಮಾಡುವಿ. **ಜಗತ್ಪ್ರತೀಪಾನ್** ಲೋಕವಿರುದ್ಧರಾದ ದೈತ್ಯರನ್ನು **ಹಂಸಿ** ಕೊಲ್ಲುವಿ **ಯುಗಾನುವೃತ್ತಂ** ಕೃತ,ತ್ರೇತ,ದ್ವಾಪರಯುಗಾದಿಗಳಿಂದ ನಡೆದು ಬಂದ ಧರ್ಮವನ್ನು **ಪಾಸಿ** ರಕ್ಷಿಸುವಿ **ಯತ್** ಯಾವಕಾರಣ **ಸಃ ತ್ವಂ** ಅಂತಹ ನೀನು **ಕಲೌ** ಕಲಿಯುಗದಲ್ಲಿ **ಛನ್ನಃ ಅಭವಃ** ಈ ಪ್ರಯೋಜನಕ್ಕಾಗಿ ಅವತರಿಸಿರುವಿಯೋ ಅಥವಾ ಸತ್ಕಾರ್ಯಗಳಿಗೆ ಅನುಜ್ರಂಭಕನೋ **ಅಥ** ಆ ಕಾರಣದಿಂದ **ತ್ರಿಯುಗಃ** ತ್ರಿಯುಗನೆಂಬ ಹೆಸರು ಪಡೆದ.

ಅಸುರಜನಮೋಹನಕ್ಕಾಗಿ ಮಾಡಿದ ಬುದ್ಧಾವತಾರಕ್ಕೆ ಈ ಪ್ರಯೋಜನಗಳಿಲ್ಲ ವಾದ್ದರರಿಂದ ವಿರೋಧವಿಲ್ಲ. ಇಲ್ಲಿ ಕೆಲವು ಸಂದೇಹಗಳಿಗೆ ಶ್ರೀಸತ್ಯಧರ್ಮರು ನೀಡುವ ಉತ್ತರ ಕೆಳಗಿನಂತೆ.

ಋಷಿಗಳೆಂದು ಹೇಳಿದ ವೇದವ್ಯಾಸ ದತ್ತಾತ್ರೇಯ ಕಪಿಲರೂಪ(ಮೂವರು) ಮನುಷ್ಯರೇ ಅಂದ ಮೇಲೆ ಪ್ರತ್ಯೇಕ ಹೇಳಿದ್ದೇಕೆ ಎಂದರೆ 'ದೇವಋಷಿಪಿತೃಪನರಾ ಇತಿ ಮುಕ್ತಾಸ್ತು ಪಂಚಧಾ' ಎಂದಿರುವದರಿಂದ ಋಷಿತ್ವವು ಧರ್ಮವಿಶೇಷ-ವಾದ್ದರಿಂದ ಅದನ್ನು ತಿಳಿಸಲು ಪ್ರತ್ಯೇಕ ಹೇಳಿರುವರು. ಯದ್ಯಪಿ ಇಲ್ಲಿ ತಿರ್ಯಕ್ ಪದದಿಂದಲೇ ವರಾಹಾದಿಗಳಂತೆ ಮತ್ಸ್ಯವನ್ನು ಸ್ವೀಕರಿಸಲು ಬರುವದು ಕಾರಣ ಪ್ರತ್ಯೇಕ ರೂಪವೆಂದು ಹೇಳಬೇಕಿಲ್ಲ ಆದರೂ ಯಾವ ರೂಪದ ಉಪಾಸನೆಯನ್ನು ತಾನು (ಪ್ರಹ್ಲಾದ)ಮಾಡುವನೋ ಅದನ್ನು ಹೇಳದಿರುವದು ಸರಿಯಲ್ಲ. ಕಾರಣ ನಾ ಚ ತಿರ್ಯಕ್ ಚ ಸಿಂಹಶ್ಚ ಎಂದು ವಿಗ್ರಹಮಾಡಿ ನೃತಿರ್ಯಕ್ ಪದದಿಂದ ನರಸಿಂಹನನ್ನು ತಗೆದುಕೊಂಡಾಗ ರೂಪವನ್ನು ಪ್ರತ್ಯೇಕ ಹೇಳುವದು ಆವಶ್ಯಕವೇ ಅದು ಕೂರ್ಮಾದಿಗಳಿಗೆ ಉಪಲಕ್ಷಕವೆಂದು ತಿಳಿಸಲು ಪ್ರತ್ಯೇಕ ಹೇಳಿದ್ದು. ಅಥವಾ 'ಬ್ರಹ್ಮಸತ್ಯವ್ರತಾಯ' ಎಂದಿರುವದರಿಂದ ಸತ್ಯವ್ರತಚಕ್ರವರ್ತಿಗೆ, ವೇದೋಪದೇಶ

ಮಾಡಿದನೆಂಬ ಕಾರ್ಯವಿಶೇಷವನ್ನು ತಿಳಿಸಿ ಮುಂದಿನ ಸ್ಕಂಧದಲ್ಲಿ ಬರೆಯಬೇಕಾದ ಕಥೆಯಾದುದರಿಂದ ಬುದ್ಧಿಸನ್ನಿಹಿತವಾದುದರಿಂದಲೂ ಮೊದಲನೆಯದಾದುರಿಂದ ಅದನ್ನು ತೆಗೆದುಕೊಂಡರೆ ಕೂರ್ಮಾದಿಗಳನ್ನು ತೆಗೆದುಕೊಳ್ಳುವದು ಸುಲಭವಾದ್ದರಿಂದ ತಿರ್ಯಕ್ ರೂಪಗಳನ್ನು ಪ್ರತ್ಯೇಕ ಹೇಳಿದ್ದು ಎಂದು ತಿಳಿಯಬೇಕು. 'ಇತ್ಥಂ ನೃತಿರ್ಯಕ್' ಎಂದರೆ ಪ್ರಾತ್ಯಕ್ಷಿಕವಾದ ನರಸಿಂಹರೂಪದಿಂದ ಎಂದರ್ಥ. ॥೩೮॥

ನೀನಾದರೂ ವ್ಯಕ್ತವಾಗಿ ಭಕ್ತವತ್ಸಲನು ನಾನಾದರೂ ಭಕ್ತನಾದರೂ ಶಕ್ತನಲ್ಲ ಏನು ಮಾಡಲಿ ಎಂಬ ಬುದ್ಧಿಯುಳ್ಳವರಲ್ಲಿ ಶ್ರೇಷ್ಠನಾದರೂ ತನ್ನನ್ನು ಅವಿವೇಕಿಯಂತೆ ತೋರಿಸುತ್ತ ವಿಜ್ಞಾಪಿಸುವನು-

ಇಂದ್ರಿಯಗಳಲ್ಲಿ ಮನಸ್ಸು ಪ್ರಧಾನವಾದುದರಿಂದ ಅದರ ನೈರ್ಮಲ್ಯವನ್ನು ಇಚ್ಛಿಸುವವನಾಗಿ ಅದರ ದೋಷವನ್ನು ಹೇಳುವನು-

**ನೈತನ್ಮನಸ್ತವ ಕಥಾಸು ವಿಕುಂಠನಾಥ**
**ಸಂಪ್ರೀಯತೇ ದುರಿತದುಷ್ಟಮಸಾಧು ತೀವ್ರಮ್ ।**
**ಕಾಮಾತುರಂ ಹರ್ಷಶೋಕಭಯೇಷಣಾರ್ತಂ**
**ತಸ್ಮಿನ್ ಕಥಂ ತವ ಗತಿಂ ವಿಮೃಶಾಮಿ ದೀನಃ ॥೩೯॥**

**ಹೇ ವಿಕುಂಠನಾಥ** ವೈಕುಂಠಾಧಿಪತಿಯಾದ ಅಥವಾ ಮತ್ತೆ ತಿರುಗಿ ಬರುವದೇ ಮುಂತಾದ ಅಡತಡೆಗಳಿಲ್ಲದ ಮುಕ್ತರಿಗೆ ಒಡೆಯನಾದ ನರಸಿಂಹನೇ **ದುರಿತದುಷ್ಟಂ** ನಾನು ಮಾಡಿದ ಪಾಪಗಳಿಂದ ದುಷ್ಟನಿಗ್ರಹ ಮಾಡಲಾಗದ, ಇದ್ದದ್ದೋ ಇಲ್ಲದ್ದೋ ದುಷ್ಟವಿಷಯದಲ್ಲಿ ಸಂಚರಿಸದಿದ್ದರೆ ಅದು ಒಂದು ಒಳ್ಳೆಯದೇ ಇದು ಹಾಗಲ್ಲವೆಂದು ಹೇಳುವರು **ಅಸಾಧುತೀವ್ರಂ** ದುಷ್ಟವಾದ ವಿಷಯದಲ್ಲಿ ಏಕಾಂತವಾದುದು ಅಥವಾ **ಅಸಾಧು** ಮೋಕ್ಷಸಾಧಕವಲ್ಲದ **ತೀವ್ರಂ** ಬಹುವೇಗದಿಂದ ವಿಷಯಗಳ ಕಡೆಗೆ ಚಲಿಸುವ **ಕಾಮಾತುರಂ** ದುರಾಶೆಗಳಿಂದ ರೋಗಗ್ರಸ್ತವಾದ **ಹರ್ಷ** ಸಂತೋಷ **ಶೋಕ** ದುಃಖ ಇವುಗಳು ಬರುವದು ಬಾರದಿರುವದರಿಂದ ಭಯ ಮತ್ತು **ಇಷಣಾರ್ತಂ** ಹೆಂಡತಿ ಮಕ್ಕಳು ಧನದ ಆಶೆಗಳಿಂದ ದುಃಖಿತವಾದ (ಪರದಾರವಿತ್ತೇಷಣಂ ಚ ತೈಃ ಆರ್ತಂ ಪರಸ್ತ್ರೀ ಪರವಿತ್ತದಾಶೆಯಿಂದ ದುಃಖಿತವಾದ) **ಏತನ್ಮನಃ** ಈ ನನ್ನ ಮನಸ್ಸು **ತವ ಕಥಾಸು** ನಿನ್ನ ಕಥೆಗಳನ್ನು ವಿಚಾರಮಾಡುವದರಲ್ಲಿ **ನ ಸಂಪ್ರೀಯತೇ** ಸಂತೋಷಿಸುವದಿಲ್ಲ ಆದ್ದರಿಂದ **ದೀನಃ** ಅದನ್ನು ಸಂತೋಷಗೊಳಿಸುವಂತೆ ಮಾಡುವ ಸಾಮರ್ಥ್ಯವಿಲ್ಲದ **ಅಹಂ** ನಾನು **ತಸ್ಮಿನ್** (ಅಂಥ ಮನಸ್ಸಿರುವಾಗ) ಆ ಮನಸ್ಸಿನಲ್ಲಿ **ತವ ಗತಿಂ** ನಿನ್ನ ಪ್ರಾಪ್ತಿರೂಪ ಮೋಕ್ಷವನ್ನು ಹೇಗೆ ಹೊಂದೆನು(ಬರುವುದೆಂದು

ಇಚ್ಛಿಸುವೆನು)ನಿನ್ನ ಜ್ಞಾನವನ್ನು ಪಡೆದೇನು ಅಥವಾ **ತಸ್ಮಿನ್** ಅಂಥ ಮನಸ್ಸಿನಲ್ಲಿ **ತವ ಗತಿಂ** ನಿನ್ನ ಪ್ರವೇಶವನ್ನು **ಕಥಂ ವಿಮೃಶಾಮಿ** ಹೇಗೆ ಆದೀತೆಂದು ತಿಳಿದೇನು ? ಉಪಾಯವಿಲ್ಲದ್ದರಿಂದ ಆಗಲಾರದೆಂದು ಭಾವ. **ತವ ಗತಿಂ ಕಥಂ ವಿವೃಶಾಮಿ** ನಿನ್ನ ಗತಿಯನ್ನು ಹೊಂದೆನು ಎಂದು **ತ್ವಂ** ನೀನು **ವಿಮೃಶ** ವಿಚಾರಮಾಡು ಹೀಗೂ ಅರ್ಥ. ತವ ಎಂಬ ಒಂದೇ ಪದವನ್ನು ಕಥಾ ಮತ್ತು ಗತಿಪದಗಳಿಂದ ಅನ್ವಯ ಹೇಳಲು ಬರುವಾಗ ಒಂದು ತವ ಶಬ್ದ ಹೆಚ್ಚಾಗುವದು ಎಂಬ ಶಂಕೆಯನ್ನು ಪರಿಹರಿಸಲು ಶ್ರೀಸತ್ಯಧರ್ಮರು ಸ್ತವಕಥಾ ಎಂದು ಪದಚ್ಛೇದ ಮಾಡಿರುವರು. ಆಗ ಸ್ತವ ಎಂದರೆ ನಾನು ಮಾಡುವ ನಿನ್ನ ಸ್ತೋತ್ರ ಹಾಗೂ ಕಥಾ ನೀನು ಅವತಾರಗಳಲ್ಲಿ ಮಾಡಿದ ಕಾರ್ಯಗಳ ನಿಬಂಧನೆಗಳು ಅವುಗಳಲ್ಲಿ (ಎಂದರ್ಥ) ಒಂದೊಂದು ಕಥಾವೂ ವಿಚಿತ್ರವಾದುದರಿಂದ ಕೇಳುವದರಿಂದ ಸಮೃದ್ಧಿಯುಂಟಾಗಲು ಕಾರಣವಾದುದು. ಹೀಗಿರುವಾಗ ಅನಂತವಾದ ಅದರಲ್ಲಿ ನನ್ನ ಮನಸ್ಸು ಹೋಗದು ಎಂದರೆ ನನ್ನ ಮನಸ್ಸು ಎಷ್ಟು ಕಠಿಣವೆಂದು ಸೂಚಿತವಾಗುವದು ಎಂದು ಭಾವ. ।।೩೯।।

ಬಂಧಮೋಚನೆಗೆ ಕಾರಣವಾದ ಮನಸ್ಸೇ ಈ ರೀತಿಯಾದಾಗ ಉಳಿದ ಇಂದ್ರಿಯಗಳು ನನ್ನನ್ನು ಈ ಅವಸ್ಥೆಗೆ ಗುರಿಮಾಡುವವು ಎಂದು ಹೇಳುವರು-

**ಜಿಹ್ವೈಕತೋಽಚ್ಯುತ ವಿಕರ್ಷತಿ ಮಾ ವಿತೃಪ್ತಾ**
**ಶಿಶ್ನೋಽನ್ಯತಸ್ತ್ವಗುದರಂ ಶ್ರವಣಂ ಕುತಶ್ಚಿತ್ ।**
**ಘ್ರಾಣೋಽನ್ಯತಶ್ಚಪಲದೃಕ್ ಕ್ವ ಚ ಕರ್ಮ ಶಕ್ತಿ-**
**ರ್ಬಹ್ವ್ಯಃ ಸಪತ್ನ್ಯ ಇವ ಗೇಹಪತಿಂ ಲುನಂತಿ ।।೪೦।।**

**ಬಹ್ವ್ಯಃ** ಅನೇಕ **ಸಪತ್ನ್ಯಃ** ಸವತಿಯರು **ಗೇಹಪತಿಂ** ಮನೆಯ ಯಜಮಾನನನ್ನು (ಗಂಡನನ್ನು) **ಲುನಂತಿ ಇವ** ತಮ್ಮ ತಮ್ಮ ಕಡೆಗೆ ಸೆಳೆದು ವ್ಯಗ್ರಗೊಳಿಸುವರೋ ಹಾಗೆ **ಅವಿತೃಪ್ತಾ** ರಸಾಸ್ವಾದನೆಯಿಂದ ತೃಪ್ತವಾಗದಿರುವ **ಜಿಹ್ವಾ** ನಾಲಿಗೆಯು **ಏಕತಃ** ತನ್ನ ವಿಷಯವಾದ ರಸದಲ್ಲಿ ಅಥವಾ ನಿನ್ನ ಕಥೆಗಳನ್ನು ಬಿಟ್ಟು ಮಿಕ್ಕ ಹರಟೆಗಳಲ್ಲಿ **ಗೇಹಪತಿಂ** ದೇಹಾಭಿಮಾನಿಯಾದ **ಮಾ** ನನ್ನನ್ನು **ವಿಕರ್ಷತಿ** ಆಸಕ್ತಿವುಳ್ಳವನನ್ನಾಗಿ ಮಾಡುವದು. ವಿತೃಪ್ತಾ ಎಂದೂ ಪದಮಾಡಿ ತೃಪ್ತಿ ವಿರುದ್ಧವಾದ ತಪ್ತಂ ತೃಪ್ತಿಃ ವಿಗತಂ ತತ್ ಯಸ್ಯಾ ಸಾ ವಿತೃಪ್ತಾ ಅಲಂಬುದ್ಧಿಯನ್ನು ಹೊಂದದ ಈ ಪದವು, ವಿಕರ್ಷತ ಎಂಬ ಪದದಂತೆ ಎಲ್ಲ ಕಡೆ ಅನ್ವಯಿಸುವದು **ಶಿಶ್ನಃ** ಜನನೇಂದ್ರಿಯವು **ಅವಿತೃಪ್ತಃ ಸನ್** ಸಂಭೋಗದಿಂದ ತೃಪ್ತವಾಗದೇ **ಅನ್ಯತಃ** ತನ್ನ ವಿಷಯಕವಾದ ಲೈಂಗಿಕ ವ್ಯಾಪಾರದಲ್ಲಿ **ಮಾ ವಿಕರ್ಷತಿ** ನನ್ನನ್ನು ತೊಡಗಿಸುವದು. **ತ್ವಕ್** ಸ್ಪರ್ಶೇಂದ್ರಿಯವು **ಅವಿತೃಪ್ತಾ** ತೃಪ್ತವಾಗದೆ **ಮಾ** ನನ್ನನ್ನು **ವಿಕರ್ಷತಿ**

ಅಂಗನಾಲಿಂಗನದಲ್ಲಿ ಸೆಳೆಯುವದು. **ಉದರಂ** ಹಸಿವಿಗೆ ಆಶ್ರಯವಾದ ತೃಪ್ತವಾಗದ ಹೊಟ್ಟೆಯು **ಅನ್ಯತಃ** ನಿನಗೆ ನಿವೇದಿಸದ ಆಹಾರದಲ್ಲಿ **ವಿರಕ್ಷತಿ** ಆಸಕ್ತಗೊಳಿಸುವದು **ಶ್ರವಣಂ** ಕಿವಿಯು **ವಿತೃಪ್ತಾ** ಶಬ್ದಾನುಭವದಿಂದ ತೃಪ್ತವಾಗದೆ **ಕುತಶ್ಚಿತ್** ಹಾಳುಹರಟೆ ಕೇಳಲು **ವಿಕರ್ಷತಿ** ಸೆಳೆಯುವದು **ಘ್ರಾಣಃ** ಮೂಗು **ವಿತೃಪ್ತಂ** ತೃಪ್ತವಾಗದೆ **ಅನ್ಯತಃ** ನನಗೆ ಅರ್ಪಿಸದ ಹೂ ಮುಂತಾದವುಗಳನ್ನು ಆಘ್ರಾಣಿಸಲು (ವಾಸನೆ ನೋಡಲು) **ವಿಕರ್ಷತಿ** ಸೆಳೆಯುವದು **ಚಪಲದೃಕ್** ಚಂಚಲವಾದ ಕಣ್ಣು **ವಿತೃಪ್ತಾ** ತೃಪ್ತವಾಗದೆ **ಅನ್ಯತಃ** ದುಷ್ಟರೂಪಗಳನ್ನು ನೋಡುವದಕ್ಕೆ **ವಿಕರ್ಷತಿ** ಸಳೆಯುವದು **ಕರ್ಮಶಕ್ತಿಃ** ಕರ್ಮೇಂದ್ರಿಯಗಣವು ತೃಪ್ತವಾಗದೇ **ಕ್ವಚ** ಆ ಆ ವಿಷಯಗಳ ಕಡೆಗೆ ಸೆಳೆಯುವದು ಆದ್ದರಿಂದ ಪುರುಷಾರ್ಥಕ್ಕೆ ಸಹಾಯಕಳಾಗಿಲ್ಲವೆಂದರ್ಥ. ಉದರವು ಇಂದ್ರಿಯವಾಗದಿದ್ದರೂ ಹಸಿವೆಯನ್ನು ಹುಟ್ಟಿಸುವದರಿಂದ ಅವಿತೃಪ್ತತೆಯಿಂದ ಸಾಮ್ಯವಿರುವದರಿಂದ ಹೇಳಿದೆ. ।।೪೦।।

ಈ ರೀತಿ ತಾನು ಸಂಸಾರದಲ್ಲಿ ಬಿದ್ದಿರುವದನ್ನು ಹೇಳಿ ಲಕ್ಷ್ಮೀಪತಿಯೇ ನನ್ನಂತೆ ಸಂಸಾರದಲ್ಲಿ ತೊಳಲಾಡುವ ಸಜ್ಜನರನ್ನು ಸಂಸಾರವೆಂಬ ವೈತರಣಿಯ ಆಚೆದಡವನ್ನು ಸೇರಿಸು ದಾಟಿಸು ಎಂದು ಪ್ರಾರ್ಥಿಸುವರು.

**ಏವಂ ಸ್ವಕರ್ಮಪತಿತಂ ಭವವೈತರಣ್ಯಾ-**
**ಮನ್ಯೋನ್ಯಜನ್ಮಮರಣಾಶನಿಭೀತಭೀತಮ್ ।**
**ಪಶ್ಯನ್ ಜನಂ ಸ್ವಪರವಿಗ್ರಹವೈರಮೈತ್ರಂ**
**ಹಂತೇತಿ *ಪಾರಮತಿಪೀಪೃಹಿ ಮೂಢಸತ್ವಮ್** ।।೪೧।।

**ಏವಂ** ಈ ರೀತಿಯಾಗಿ (ಮೇಲೆ ಹೇಳಿದಂತೆ) **ಭವವೈತರಣ್ಯಾಂ** ಸಂಸಾರವೆಂಬ ವೈತರಣೀ ನದಿಯಲ್ಲಿ (ಯಮದೇವರ ರಾಜಧಾನಿಯಾದ ಸಂಯಮನೀಪುರದ ಸುತ್ತಲು ಇರುವ ಪರಿಖಾ ಕಂದಕ. ಕೀವು ರಕ್ತಗಳ ನದಿಗೆ ವೈತರಣೀ ಎಂದು ಹೆಸರು) **ಸ್ವಕರ್ಮಪತಿತಂ** ತನ್ನ ಕರ್ಮಾನುಸಾರ ಬಿದ್ದಿರುವ (ಇದು ತನಗೂ ಜನರಿಗೂ ವಿಶೇಷಣ) **ಅನ್ಯೋನ್ಯ** ಪರಸ್ಪರ **ಜನ್ಮಮರಣ** ಹುಟ್ಟು ಸಾವುಗಳೆಂಬ **ಅಶನಿ** ವಜ್ರಾಯುಧದಿಂದ ಸಿಡಿಲಿನಿಂದಾಗಲಿ ಹೊಡೆತದಿಂದ **ಭೀತಭೀತಂ** ಅತ್ಯಂತ ಭಯಗೊಂಡಿರುವ **ಸ್ವಪರವಿಗ್ರಹವೈರಮೈತ್ರಂ** ತನ್ನವರು ಮತ್ತು ಇತರರೊಂದಿಗೆ ಕಲಹವೆಂಬ ವಿರುದ್ಧಾಚರಣ ಸ್ನೇಹವುಳ್ಳ ಅಂದರೆ ತನ್ನವರೊಂದಿಗೆ **ವೈರ** ಇತರರೊಂದಿಗೆ ಸ್ನೇಹಮಾಡುವ **ವಿಗ್ರಹ** ವಿಸ್ತಾರವಾಗಿ ಫಲಪರ್ಯವಸಾನವಾಗುವ ವೈರಮೈತ್ರವುಳ್ಳ ಎಂದು ಸತ್ಯಧರ್ಮರು **ಮೂಢಸತ್ವಂ** ಅಸುರಜಾತಿಯಲ್ಲಿ

* ಪಾರಚರಪೀಪೃಹಿ ಮೂಢಮದ್ಯಮ್ ಇತಿ ಪಾಠಾಂತರ

ಜನಿಸಿದ್ದರಿಂದ ಜ್ಞಾನವಿಲ್ಲದ ಪ್ರಾಣಿಯಾದ, ದಾಟುವ ಉಪಾಯವನ್ನು ತಿಳಿಯದ **ಜನಂ** ಜನನಾದ **ಮಾಂ** ನನ್ನನ್ನು ಮತ್ತು ಸಜ್ಜನರನ್ನು **ಪಶ್ಯನ್** ನೋಡುತ್ತ **ಹಂತೇತಿ** ಕಷ್ಟವೆಂದು ಕನಿಕರದಿಂದ **ಪಾರಂ** ಆ ವೈತರಣಿಯ ಆಚೆ ದಡವನ್ನು **ಅತಿಪೀಪೃಹಿ** ಮತ್ತೆ ತಿರುಗಿ ಬರದಿರುವ ರೀತಿಯಲ್ಲಿ ಹೊಂದಿಸುವ ಸಂಸಾರದಿಂದ ದಾಟಿಸಿ **ಮೋಕ್ಷವನ್ನು ಕೊಡು.** ಅಥವಾ **ಯಥಾ ಮೂಢಸತ್ವಂ** ತಿರ್ಯಕ್ ಪ್ರಾಣಿಯಾದ ಗಜೇಂದ್ರನನ್ನು ತಾಮಸನಂತೆ ಇದ್ದವನನ್ನು ಹೇಗೆ ದಡಸೇರಿಸಿ ರಕ್ಷಿಸಿದಿಯೋ ಹಾಗೆ ದಡವನ್ನು ಸೇರಿಸು ಕಾಪಾಡು ಎಂದರ್ಥ. ಅಥವಾ ಈ ವಿಶೇಷಣಗಳಿಂದ ಕೂಡಿದ ಜನರನ್ನು **ಪಶ್ಯಂತಂ** ನೋಡುತ್ತಿರುವ ಈ ವಿಶೇಷಣಗಳಿಂದ ಕೂಡಿದ ನನ್ನನ್ನು ನೋಡುತ್ತ ಎಂದೂ ಅರ್ಥಮಾಡಿರುವರು. ಈ ಬಗೆಯ ಯೋಗ್ಯಜನರನ್ನು ಕಾಣುತ್ತ ಎಂದು ಅರ್ಥಮಾಡಿದಾಗ ನನ್ನಂತೆ ಎಷ್ಟೋ ಯೋಗ್ಯಜನರು ಈ ರೀತಿಯಲ್ಲಿದ್ದಾರೆ. ಅವರನ್ನು ಮುಕ್ತರನ್ನಾಗಿ ಮಾಡು ಎಂದು ಪ್ರಾರ್ಥಿಸಿರುವೆಂದು ತಿಳಿಯಬೇಕು. 'ಪಾರಂ ಪಶ್ಯನ್' ಎಂದು ಅನ್ವಯ ಮಾಡಿದಲ್ಲಿ ಪಾರವನ್ನು ತಿಳಿದ ಎಂದರ್ಥ. ಇದರಿಂದ ನನಗೆ ಆ ದಡ ಗೊತ್ತಿಲ್ಲ ಎನ್ನುವಂತಿಲ್ಲ. 'ಪಾರಚರಪೀಪೃಹಿ ಮೂಢಮದ್ಯಂ' ಎಂಬ ಪಾಠದಲ್ಲಿ ಈ ರೀತಿಯಾದ ಮೂಢಜನರನ್ನು ನಿತ್ಯಮುಕ್ತನೇ. ಹಂತ ಕಷ್ಟವೆಂದ **ಪೀಪೃಹಿ** ಪಾಲಿಸು, ಪಾಲನವು ದಾಟಿಸದೇ ಸಾಧ್ಯವಿಲ್ಲವಾದ್ದರಿಂದ ಈ ರೀತಿ ಹೇಳಿದ್ದೆಂದು ಭಾವ. **ಅಶನಯಃ** ಸಿಡಿಲುಗಳು **ಶನೈಃ** ಸಾವಕಾಶವಾಗಿ **ಚ್ಯಾವಯಿತುಂ ಶಕ್ಯಾಃ** ಪರಿಹರಿಸಲು ಸಾಧ್ಯವಾದವುಗಳು. ಇವನ ಬಾಧೆಯಾದರೂ ಅಗಾಧವಾದುದು ಎಂದೂ ಹೇಳುವರು. ಆಶನಿ ಎಂದು ಆಸಮಂತಾತ್ ಅಂದರೆ ದ್ವಾದಶಸ್ಥಾನ ಅಷ್ಟಮಸ್ಥಾನಗಳಲ್ಲಿರುವ ಶನಿಯಿಂದ **ಭೀತಿಭೀತ** ಅತ್ಯಂತ ಭಯಗೊಂಡ ಎಂದರ್ಥ. ('ಶನೈಶ್ಚರಸ್ತು ಪ್ರಾಯೇಣಾಯಮಶುಭಗ್ರಹಃ' ಎಂದು ಪಂಚಮಸ್ಕಂಧದಲ್ಲಿ ಹೇಳಿದೆ. ಈ ವಿಷಯ ಅಮುದ್ರಿತ ಪುಸ್ತಕದಲ್ಲಿದೆ.) **ಪೀಪೃಹಿ** ಪಿಪೃ ಧಾತುವಿಗೆ ಧಾತುನಾಂ ಅನೇಕಾರ್ಥತ್ವ ಇರುವದರಿಂದ ಗಮನವೆಂದರ್ಥ ವಾಗುವದು ಅದಕ್ಕಾಗಿ ಅತಿಶಯೇನ ಪಾರಂ ತೀರಂ ಗಮಯ ಎಂದು ಹೇಳಿದೆ. ॥೪೧॥

ನಾರಾಯಣನೇ ನನ್ನನ್ನು ಸಂಸಾರದಿಂದ ದಾಟಿಸುವದು ನಿನಗೆ ಯಾವ ದೊಡ್ಡ ಕೆಲಸ ಎಂದು ಹೇಳುವರು-

**ಕೋಽನ್ವತ್ರ ತೇಽಖಿಲಗುರೋ ಭಗವನ್ ಪ್ರಯಾಸ**
**ಉತ್ತಾರಣೇಽಸ್ಯ ಭವಸಂಭವಲೋಪಹೇತೋಃ ।**
**ಮೂಢೇಷು ವೈ ಮಹದನುಗ್ರಹ ಆರ್ತಬಂಧೋ**
**ಕಿಂ ತೇನ ತೇ ಪ್ರಿಯಜನಾನನುಸೇವಮಾನಃ** ॥೪೨॥

**ಹೇ ಅತ್ರ** ರಕ್ಷಕರಹಿತನೇ **ಹೇ ಅಖಿಲಗುರೋ** ಎಲ್ಲರಿಗೂ ಜ್ಞಾನದಾನ ಮಾಡುವವನೇ ಸಮುದ್ರತರಣವು-ನಾವಿಕನಿಂದ ಸಾಧ್ಯ. ಸಂಸಾರತರಣವಾದರೂ ಸಾಮಾನ್ಯಗುರೂಪದೇಶ ಸಾಧ್ಯ. ಒಳ್ಳೆಯ ಅಭಿಪ್ರಾಯ ಅಂತಃಕರಣವುಳ್ಳ ಗುರುವಿನ ಉಪದೇಶದಿಂದ ಸಾಧ್ಯವಾದುದು. ನೀನಾದರೂ ಸಮಸ್ತ ಲೋಕಗುರುವಾದುದ-ರಿಂದ ನಿನಗೇನು ಅಸಾಧ್ಯವಲ್ಲ ಎಂದು ತಿಳಿಸಲು ಹೀಗೆ ಸಂಬೋಧಿಸಿರುವರು. ಗೃಣಾತಿ ತತ್ವಂ ಇತಿ ಗುರುಃ ಅಖಿಲಸ್ಯ ಗುರುಃ ಅಖಿಲಗುರುಃ ತತ್ಸಂಬುದ್ಧಿ । ಅಖಿಲಃ ಬಲವಾನ್ ಸ ಚಾಸೌ ಗುರುಶ್ಚ ತತ್ಸಂಬುದ್ಧಿ. ಬಲಿಷ್ಠನಾದ ಗುರುವೆ ಎಂದರ್ಥ. **ಭಗವನ್** ಶ್ರೀಹರಿಯೇ **ಅಸ್ಯ** ಪ್ರತ್ಯಕ್ಷಾದಿಪ್ರಮಾಣಸಿದ್ಧವಾದ ಈ ಜಗತ್ತಿನ **ಭವ** ಉತ್ಪತ್ತಿ **ಸಂಭವ** ಸ್ಥಿತಿ **ಲೋಪ** ನಾಶ ಇವುಗಳಿಗೆ **ಹೇತೋಃ** ನಿಮಿತ್ತಕಾರಣನಾದ **ತೇ** ನಿನಗೆ **ಅತ್ರ** ಈ ಜೀವರಾಶಿಗಳ ವಿಷಯದಲ್ಲಿ **ಉತ್ತಾರಣೆ** ಸಂಸಾರದಿಂದ ದಾಟಿಸಲು **ಕಃ ನು ಪ್ರಯಾಸಃ** ಪ್ರಯಾಸವೇನು? ಏನೂ ಪ್ರಯಾಸವಿಲ್ಲ. ಉತ್ಪತ್ತ್ಯಾದಿಗಳಿಗೆ ನೀನೇ ಕಾರಣನಾದ್ದರಿಂದ ಅದನ್ನು ತಪ್ಪಿಸುವದು ನಿನಗೆ ಸುಲಭವೆಂದು ಭಾವ. (ಮತ್ತೊಬ್ಬರು ಕಾರಣರಾಗಿದ್ದರೆ ಕಷ್ಟವಾಗುತ್ತಿತ್ತು ಎಂದು ವಿಶೇಷಣದ ಅಭಿಪ್ರಾಯ) ಜಗತ್ತಿನ ಎಲ್ಲ ಯೋಗ್ಯಜನರನ್ನು ದಾಟಿಸಬಲ್ಲೆ ಎಂದಮೇಲೆ ನನ್ನನ್ನು ದಾಟಿಸುವಲ್ಲಿ ನಿನಗೇನು ಆಯಾಸವೆಂದಾದರೂ ಅರ್ಥ. **ಅಸ್ಯ** ಸಂಸಾರದ ಉತ್ಪತ್ತಿ,ಸ್ಥಿತಿ,ನಾಶಗಳಿಗೆ ಕಾರಣನಾದ್ದರಿಂದ ಅದನ್ನು ಕಳೆಯಲು ನಿನಗೆ ಆಯಾಸವಿಲ್ಲವೆಂದಾದರೂ ಅನ್ವಯ. ಇದರಿಂದ ದಾಟಿಸುವ ಸಾಮರ್ಥ್ಯವಿಲ್ಲವೆಂಬ ಶಂಕೆ ನಿವಾರಿಸಿರುವರು. ಸಾಮರ್ಥ್ಯವಿದ್ದರೂ ದಾಟಿಸದಿರುವದಕ್ಕೇನು ಕಾರಣ? ಪ್ರಯೋಜನವಿಲ್ಲವೆಂದು ಹೇಳುವದಾದರೆ ಜೀವರಿಗೆ ಪ್ರಯೋಜನವಿಲ್ಲವೆಂದೇ? ನಿನಗೆ ಪ್ರಯೋಜನ-ವಿಲ್ಲವೆಂದೇ? ಜೀವರಿಗೆ ಪ್ರಯೋಜನವಿದೆ ಎಂದು ಹೇಳುತ್ತಾರೆ. **ಹೇ ಆರ್ತಬಂಧೋ** ದುಃಖಿತರಿಗೆ ಬಂಧುವಾದವನೇ ಅಥವಾ ದುಃಖಿತರೇ ಬಂಧುಗಳಾಗಿವುಳ್ಳವನೇ **ಮೂಢೇಷು** ಸಂಸಾರವನ್ನು ದಾಟುವ ಉಪಾಯ ತಿಳಿಯದ ಯೋಗ್ಯರಾದ ಜನರಲ್ಲಿ (ನಾನೇ ಮೊದಲಾದವರಲ್ಲಿ) **ಮಹದನುಗ್ರಹಃ** ಮೋಕ್ಷಕಾರಣ ಉತ್ತಮ ಪ್ರಸಾದವು **ವೈ** ಗಜೇಂದ್ರಾದಿಗಳಲ್ಲಿ ಪ್ರಸಿದ್ಧವಾಗಿದೆ. ಇದರಿಂದ ಆತ್ಯಂತಿಕದುಃಖನಿವೃತ್ತಿ-ಸ್ವರೂಪಾನಂದ ಅಭಿವ್ಯಕ್ತಿರೂಪಪರ ಪ್ರಯೋಜನವಿದೆ. **ತೇನ ತೇ ಕಿಂ** ಈ ಅನುಗ್ರಹ ಮಾಡುವದರಿಂದ ನಿನಗೇನು ಪ್ರಯೋಜನ ಏನೂ ಇಲ್ಲವೆಂದು ಭಾವ. ಹಾಗಾದರೆ ಏಕೆ ಮಾಡಬೇಕು ಎಂದರೆ ಬಂಧು ಎಂದಿರುವರು. ವಾತ್ಸಲ್ಯವೇ ಪ್ರಯೋಜನವೆಂದು ಭಾವ. ಅದು ಅವನ ಸ್ವಭಾವವೆಂದು ಹೇಳುತ್ತಾರೆ **ಪ್ರಿಯಜನಾನ್ ಅನುಸೇವಮಾನಃ** ನಿನ್ನ ಭಕ್ತರನ್ನು **ಅನು** ಅವರವರ ಯೋಗ್ಯ ಭಕ್ತಿಗೆ ತಕ್ಕಂತೆ ಮೋಕ್ಷಾದಿಗಳನ್ನು ಕೊಟ್ಟು ಹೋಗುವವನಾಗಿರುವಿ. ಇದು ನಿನ್ನ ಸ್ವಭಾವ. ಸ್ವಭಾವಾರ್ಥದಲ್ಲಿ ಶಾನಚ್

ಪ್ರತ್ಯಯ. 'ಭಜಂತಂ ಭಜಮಾನಸ್ಯ' ಎಂದಿದೆ. ಯಾವ ಕಾರಣ ನಾನು ನಿನ್ನ ಪ್ರಿಯರಾದ ನಾರದಾದಿಗಳನ್ನು ಸೇವಿಸಿದವನು. ಆದ್ದರಿಂದ ನನ್ನನ್ನು ಹುಟ್ಟಿಸಲು ನಿನಗೇನು ಪ್ರಯಾಸವಿಲ್ಲ ಹೀಗೂ ಅನ್ವಯಾರ್ಥ ಮಾಡಬಹುದು.

ವಿಶೇಷ ಃ- ಮಹತ್ಸು ಕ್ರಿಯಮಾಣ ಅನುಗ್ರಹಃ ಮಹದನುಗ್ರಹಃ ಯಃ ತೇನ ತೇ ಕಿಂ ಮಹತ್ ಎಂದರೆ ಮಹತ್ವಂ ಭಾವಪ್ರದಾನೋ ನಿರ್ದೇಶಃ । ನ ಕಿಮಪಿ. ದೊಡ್ಡವರ ಮೇಲೆ ಅನುಗ್ರಹ ಮಾಡುವದರಿಂದ ನಿನಗೇನು ಮಹತ್ವ ಬರಲಾರದು. ಹೀಗೂ ಅರ್ಥ ಮಾಡಿರುವರು

ನಿನ್ನ ಮಮತೆಗೆ ವಿಷಯನಾದ ದಾಸನಾದ ನನಗೆ ಮುಕ್ತಿ ಸಿದ್ಧವಾಗಿದೆಯಾದ್ದರಿಂದ ನನ್ನ ವಿಷಯದಲ್ಲಿ ವಿಚಾರಮಾಡುವದಿಲ್ಲ. ಆದರೆ ಯಾರು ಪಾಪವನ್ನು ಮಾಡುವರೋ ಅವರು ಸಂಸಾರಸಮುದ್ರವನ್ನು ಹೇಗೆ ದಾಟುವರು ಎಂದು ದುಃಖಪಡುವೆನು ಎಂದು ಹೇಳುವರು.

ನನ್ನ ಮಹಾತ್ಮ್ಯವನ್ನರಿತು ಸ್ತೋತ್ರಮಾಡುವ ನಿನಗೆ ಸಂಸಾರದಿಂದ ಉತ್ತಾರಣ ನಿಶ್ಚಿತವಿರುವಾಗ ಏಕೆ ಹೆದರುವೆ ಎಂದರೆ ನನಗಾಗಿ ಅಲ್ಲ ಕಿಂತು ಸಂಸಾರಲೋಲುಪರಾದ ಯೋಗ್ಯಜನರಿಗಾಗಿ ಪ್ರಾರ್ಥಿಸುವೆ ಎಂದು ಹೇಳುವರು-

**ನೈವೋದ್ವಿಜೇ ಭವದುರತ್ಯಯವೈತರಣ್ಯಾ-**
**ಸ್ತ್ವತ್ತೀರ್ಥಗಾಯನಮಹಾಮೃತಪಾನಮತ್ತಃ*** ।
**ಶೋಚೇ ನು ತೇ ವಿಮುಖಚೇತಸ ಇಂದ್ರಿಯಾರ್ಥ-**
**ಮಾಯಾಸುಖಾಯ ಭರಮುದ್ವಹತೋ ವಿಮೂಢಾನ್** ॥೪೩॥

**ತ್ವತ್ತೀರ್ಥಗಾಯನಮಹಾಮೃತಪಾನಚಿತ್ತಃ** ನಿನ್ನ ಸರ್ವೋತ್ತಮತ್ವ-ಪ್ರತಿಪಾದಕಗಳಾದ ವೇದವೇದಾಂತ ಮುಂತಾದ ಸಚ್ಛಾಸ್ತ್ರಗಳ ಶ್ರವಣ,ಮನನ ವ್ಯಾಖ್ಯಾನ, ಉಪದೇಶ(ಗಾಯನ)ವೆಂಬ ಶ್ರೇಷ್ಠವಾದ ಅಮೃತದ ಪಾನದಿಂದ ಸಂತುಷ್ಟವಾದ ಮನಸ್ಸುಳ್ಳ ವಿವಶವಾದ ಮನಸ್ಸುಳ್ಳ ೨) ತ್ವತ್ತೀರ್ಥಂ ಗಚ್ಛಂತಿ ಅವಗಚ್ಛಂತಿ ಇತಿ ತ್ವತ್ತೀರ್ಥಗಃ ತೇ ಏವ ಅಯನಂ ಆಶ್ರಯಃ ಯಸ್ಯ ತನ್ಮಹಾಮೃತಂ ಮೋಕ್ಷಃ ತನ್ಮತ್ತಚಿತ್ತಃ ನಿನ್ನ ಶಾಸ್ತ್ರವನ್ನು ತಿಳಿದವರನ್ನೇ ಆಶ್ರಯಸಿರುವ ಮೋಕ್ಷದಿಂದ ಸಂತುಷ್ಟಮನಸ್ಸುಳ್ಳ೩) ತ್ವತ್ತೀರ್ಥಗಾನಾಂ ಅಯನಂ ಮೋಕ್ಷಃ ಯೇನ ಸಃ ಸ ಚಾಸೌ ಮಹಾಮೃತೋ ಮುಖ್ಯಾಮೃತಾತ್ಮಕ(ಅಮರಾತ್ಮಕ) ನಿನ್ನ ಶಾಸ್ತ್ರಜ್ಞರಿಗೆ ಮೋಕ್ಷಕೊಡುವ ಮುಖ್ಯ ಅಮೃತಾತ್ಮಕನಾದ(ಅಮರನಾದ)ನಿನ್ನಲ್ಲಿಯೇ ನಿಮಗ್ನವಾದ

* ಮಹಾಮೃತಮತ್ತಚಿತ್ತಃ ಇತಿ ಪಾಠಾಂತರ

ಬೇರೆಡೆಗೆ ಹೋಗದ ಮನಸ್ಸುಳ್ಳ ೪) ತ್ವತ್ತೀರ್ಥಗಾಯನಂ ಚ ಮಹಾಮೃತಂ ಚ ತ್ವದಧ್ವರವಿಶೇಷಶ್ಚ ತಾಭ್ಯಾಂ ಮತ್ತಂ ಚಿತ್ತಂ=ನಿನ್ನ ಶಾಸ್ತ್ರಗಾನ ನಿನ್ನ ಯಜ್ಞಶೇಷ ಇವುಗಳಿಂದ ಹೃಷ್ಟಮನಸ್ಕನಾದ ೫) ತ್ವತ್ತೀರ್ಥಗಂ=ನಿನ್ನ ಶಾಸ್ತ್ರಾಭ್ಯಾಸಸಾಧ್ಯವಾದ ಅಯನ=ಮೋಕ್ಷವು ಮತ್ತು ಮಹಾಮೃತ=ಸರ್ವಥಾ ಅಯಾಚಿತವಾದುದು ತಾನಾಗಿಯೇ ಶ್ರೀಹರಿಯ ಇಚ್ಛೆಯಿಂದ ಬಂದುದರಿಂದ ಸಂತುಷ್ಟವಾದ ಚಿತ್ತವುಳ್ಳ (ಅಮೃತಂ ಯಜ್ಞಶೇಷೇ ಸ್ಯಾದಯಾಚಿತೇ ಚ ಇತಿ ವಿಶ್ವಃ) ೬)ತ್ವತ್ತೀರ್ಥಗಾಯನಾಶ್ಚ ತೇ ಮಹಾಮೃತಮತ್ತಚಿತ್ತಾ ಅಪುನರಾವೃತ್ತಿರೂಪಮೋಕ್ಷನಿಶ್ಚಯದಿಂದ ಮತ್ತು ಸಂತಸಗೊಂಡ ಮನಸ್ಸುಳ್ಳ. ಮಹಾಮೃತಮತ್ತಚಿತ್ತಃ ಎಂಬ ಪಾಠದಲ್ಲಿ ಮಾಡಿದ್ದು (ಮಹಾಮೃತೇನ ಮತ್ತಚಿತ್ತಂ ಯಸ್ಯ ಎಂದು ಮುದ್ರಿತಪುಸ್ತಕದಲ್ಲಿದೆ) **ಅಹಂ** ನಾನು **ಭವದುರತ್ಯಯವೈತರಣ್ಯಾಃ** ಸಂಸಾರವೆಂಬ ದಾಟಲಸಾಧ್ಯವಾದ ವೈತರಣೀ ನದಿಯಿಂದ **ನ ಏವ ಉದ್ವಿಜೇ** ಭಯಪಡುವದೇ ಇಲ್ಲ. **ತೇ** ನಿನ್ನಿಂದ **ವಿಮುಖಚೇತಸಃ** ಪರಾಙ್ಮುಖವಾದ ಮನಸ್ಸುಳ್ಳ ನಿನ್ನಲ್ಲಿ ತೊಡಗಿಸಿದ ಮನಸ್ಸುಳ್ಳ **ಇಂದ್ರಿಯಾರ್ಥ-ಮಾಯಾಸುಖಾಯ** ಇಂದ್ರಿಯವಿಷಯಗಳ ಸಂಬಂಧದಿಂದ ಉಂಟಾಗುವ ಸುಖವೆಂದು ತೋರುವ (ಸ್ವರೂಪಭಿನ್ನವಾದ ಪ್ರಾಕೃತ ಸುಖಕ್ಕಾಗಿ) ಅವಸ್ತು ಆತ್ಯಂತಿಕವಲ್ಲದ ಸುಖಕ್ಕಾಗಿ **ಭರಂ** ಸಂಸಾರದ ಭಾರವನ್ನು **ಉದ್ವಹತಃ** ಹೊತ್ತಿರುವ **ವಿಮೂಢಾನ್** ದಾಟುವ ಉಪಾಯವನ್ನರಿಯದ(ತದಪಿ ದುಃಖಂ ಎಂದು ಹೇಳಿದಂತೆ) **ಶೋಚೇ** ಅವರಿಗೆ ಸಂಸಾರ ತರಣ ಹೇಗಾದೀತು ಎಂದು ಆಲೋಚಿಸುವೆ. ತನಗೆ ಹೇಗೆ ದುಃಖ ಅಸಹ್ಯವೋ ಹಾಗೆ ಬೇರೆಯವರಿಗೂ ಅಸಹ್ಯ ತಾನೇ. ಈ ಭಾವ ಇರಬೇಕು. 'ಸ್ಥಾವರೇಷು ದಯಾ ಕಾರ್ಯಾ' ಎಂದಿರುವದರಿಂದ ಕರುಣಾಪರವಶನಾಗಿ ಹೀಗೆ ಪ್ರಾರ್ಥಿಸಿರುವನು ಎಂದು ಭಾವ. ಶೋಚೇ ಎಂಬ ಆತ್ಮನೇ ಪದದಿಂದ ಅವರ ದುಃಖ ತನ್ನದೆಂದು ತಿಳಿದಿರುವನೆಂದು ತಿಳಿಸುವನು. ||೪೩||

ತಾತ್ವಿಕದೇವತೆಗಳು ತಮ್ಮನ್ನು ಆಶ್ರಯಿಸಿದವರಲ್ಲಿ ದಯೆ ತೋರುತ್ತಾರೆ. ಆದ್ದರಿಂದ ನಾನೂ ನನ್ನನ್ನು ಆಶ್ರಯಿಸಿದ ಅನುಹ್ಲಾದಾದಿಗಳಲ್ಲಿ ದಯೆ ತೋರಲೇಬೇಕು ಎಂಬ ಅಭಿಪ್ರಾಯದಿಂದ ಹೇಳುತ್ತಾರೆ-

**ಪ್ರಾಯೇಣ ದೇವಮುನಯಃ ಸ್ವವಿಮುಕ್ತಿಕಾಮಾ**
**ಮೌನಂ ಚರಂತಿ ವಿಜನೇ ನ ಪರಾರ್ಥನಿಷ್ಠಾಃ ।**
**ನೈತಾನ್ ವಿಹಾಯ ಕೃಪಣಾನ್ ವಿಮುಮುಕ್ಷ ಏಕೋ**
**ನಾನ್ಯಂ ತ್ವದಸ್ಯ ಶರಣಂ ಭ್ರಮತೋಽನುಪಶ್ಯೇ ||೪೪||**

**ಪರಾರ್ಥನಿಷ್ಠಾಃ** ಬೇರೆಯವರಿಗೆ ಪ್ರಯೋಜನವನ್ನು ಉಂಟು ಮಾಡುವದರಲ್ಲೇ ಅಭಿಪ್ರಾಯವುಳ್ಳ ಆದ್ದರಿಂದಲೇ **ಸ್ವಮುಕ್ತಿಕಾಮಾಃ** ತಮ್ಮವರ ಮೋಕ್ಷದಲ್ಲಿ ಇಚ್ಛೆಯುಳ್ಳ **ದೇವಮುನಯಃ** ದೇವತೆಗಳೂ ಋಷಿಗಳೂ **ಪ್ರಾಯೇಣ** ದೇವತೆಗಳೆಲ್ಲರೂ ಋಷಿಗಳಲ್ಲಿ, ಕೆಲವರು ಕೆಲವರಲ್ಲಿ, ಕೆಲವರು ಎಲ್ಲರಲ್ಲಿಯೂ ದಯೆಯುಳ್ಳವರಾಗಿ **ವಿಜನೇನ** ಏಕಾಂತಸ್ಥಳದಲ್ಲಿ ಸಾಧನೆ ಮಾಡಿಕೊಳ್ಳುವವರಾಗಿ **ಮೌನಂ ಚರಂತಿ** ಕಾಷ್ಠಮೌನವ್ರತ ಮುಂತಾದವನ್ನು ಮಾಡುವರು **ಅತಃ** ದೇವತೆಗಳು ಆಶ್ರಿತರಲ್ಲಿ ದಾಯಾವಂತರಾದುದರಿಂದ **ಕೃಪಣಾನ್** ನನ್ನ ದಯೆಗೆ ಪಾತ್ರರಾದ **ಏತಾನ್** ನನ್ನನ್ನು ಆಶ್ರಯಿಸಿದ ಅನುಹ್ಲಾದ ಮೊದಲಾದವರನ್ನು **ವಿಹಾಯ** ಬಿಟ್ಟು **ಏಕಃ** ನಾನೊಬ್ಬನೇ **ನ ವಿಮುಮುಕ್ಷೇ** ಮುಕ್ತನಾಗಲು ಇಚ್ಛಿಸುವದಿಲ್ಲ. ಸರಿ ಹಾಗಾದರೆ ನಿನೊಬ್ಬ ನನ್ನ ಅನುಗ್ರಹದಿಂದ ಮುಕ್ತನಾಗು ಇತರರು ಬೇರೆಯವರ ಅನುಗ್ರಹದಿಂದ ಮುಕ್ತರಾಗಲಿ (ಬೇರೆ ಮಾರ್ಗದಿಂದಾಗಲಿ)ಎಂದರೆ ಹೇಳುತ್ತಾರೆ **ಭ್ರಮತಃ** ತಮ್ಮ ತಮ್ಮ ಕರ್ಮಾನುಗುಣವಾಗಿ ನಾನಾ ಬಗೆಯ ಯೋನಿಗಳಲ್ಲಿ ಹುಟ್ಟುತ್ತಿರುವ **ಅಸ್ಯ** ನನ್ನ ಆಶ್ರಿತರಾದ ಮುಕ್ತಿಯೋಗ್ಯಜೀವರಿಗೆ **ತ್ವತ್ ಅನ್ಯಂ** ನಿನಗಿಂತ ಭಿನ್ನವಾದ **ಶರಣಂ** ರಕ್ಷಕನನ್ನು **ನ ಅನುಪಶ್ಯೇ** ಕಾಣುತ್ತಿಲ್ಲ. ಎಲ್ಲರಿಗೂ ನಿನ್ನ ಅನುಗ್ರಹದಿಂದಲೇ ಮೋಕ್ಷವೆಂದು ಅಭಿಪ್ರಾಯ.

ನಾರದಾದಿ ಕೆಲವು ಮುನಿಗಳನ್ನು ಹೊರತು ಪಡಿಸಿದರೆ ಬೇರೆ ಎಲ್ಲ ಮುನಿಗಳೂ ಕೇವಲ ತಮ್ಮ ಮೋಕ್ಷಕ್ಕಾಗಿ ಏಕಾಂತದಲ್ಲಿ ಮೌನವ್ರತ ಮಾಡುತ್ತಾರೆ. ನಾನು ಹಾಗಲ್ಲ. ಅಸುರಬಾಲಕರನ್ನು ನಾನು ಒಬ್ಬನೇ ಮೋಕ್ಷಹೊಂದಲು ಬಯಸಲಾರೆ ಎಂಬ ಪ್ರಹ್ಲಾದನ ಅಪೇಕ್ಷೆಯಿಂದ ತನಗೆ ದೇವಮುನಿಗಳಿಗಿಂತ ಉತ್ತಮತ್ವವು ತಿಳಿಸಿದಂತೆ ತೋರುತ್ತದೆ. ಇವರೆಡೂ ಪ್ರಮಾಣಬಾಧಿತಗಳೇ ಎಂದು ತಿಳಿಸಲು ಶ್ರೀಮದಾಚಾರ್ಯರು ಸ್ವಲ್ಪ ಅನುವಾದ ಮಾಡಿ ಪ್ರಮಾಣ ಉದಾಹರಿಸುವರು-

**... ತಾತ್ಪರ್ಯ ...**

**ಪ್ರಾಯೇಣ ದೇವಮುನಯಃ ।**

**ಆಶ್ರಿತೇಷು ಕೃಪಾ ಕಾರ್ಯಾ ವಿಶೇಷಾತ್ತಾತ್ವಿಕೈಃ ಸುರೈಃ ।**
**ಮುನಿಭಿಶ್ಚ ತಥಾ ಕೈಶ್ಚಿತ್ ಕೈಶ್ಚಿತ್ ಕಾರ್ಯಾಽಖಿಲೇಷ್ವಪಿ ॥**

**ತಥಾಽಪಿ ತಾತ್ವಿಕಸುರಕೃಪಾವಿಷಯತಾಂ ಗತಾಃ ।**
**ಏತ ಏವ ವಿಮುಚ್ಯಂತೇ ತದನ್ಯೇ ನ ಕಥಂಚನ ॥ ಇತಿ ಚ ॥**

ತಾತ್ವಿಕದೇವತೆಗಳಿಂದ ತಮ್ಮನ್ನು ಆಶ್ರಯಮಾಡಿದವರಲ್ಲಿ ವಿಶೇಷವಾಗಿ ದಯಾ ಮಾಡಲ್ಪಡಬೇಕು. ಹಾಗೂ ಪ್ರಸ್ತುತರಾದ ನಾರದಾದಿ ಕೆಲವು ಋಷಿಗಳಿಂದ

ವಿಶೇಷಾತ್ ಉಪದೇಶಾದಿಗಳಿಂದ ದಯಾಮಾಡಲ್ಪಡಬೇಕು. ಇನ್ನು ಕೆಲವು ತಾತ್ತ್ವಿಕರಾಗದ ದೇವತೆಗಳಿಂದಲೂ ಮುನಿಗಳಿಂದಲೂ ಎಲ್ಲ ಜನರಲ್ಲಿ ಕೃಪೆ ಮಾಡಲ್ಪಡಬೇಕು. ಹಾಗಾದರೆ ಆ ಆ ತಾತ್ತ್ವಿಕದೇವತೆಗಳ ದಯೆಯಿಂದ ಮುಕ್ತಿಯಾಗುವದೇನು ಎಂದರೆ ಆಗಲಾರದು ಎಂದು ಹೇಳುವರು.(ತಥಾಪಿ ಮುಂತಾಗಿ)ಆದರೂ ಯಾರು ತಾತ್ತ್ವಿಕ ದೇವತೆಗಳ ದಯಾ ವಿಷಯರಾಗುವರೋ (ಅವರು)ಇವರು ಮಾತ್ರ ಸಂಸಾರದಿಂದ ಮುಕ್ತರಾಗುವರು **ತದನ್ಯೇ** ತಾತ್ತ್ವಿಕ-ದೇವತೆಗಳ ದಯಾವಿಷಯರಾಗದ ಇತರ ದೇವತೆಗಳ ಕೃಪಾವಿಷಯರಾದವರು ಯಾವ ರೀತಿಯಿಂದಲೂ ಮುಕ್ತರಾಗಲಾರರು. ಮುಖ್ಯವಾಗಿ ತಾತ್ತ್ವಿಕದೇವತೆಗಳ ಉಪಾಸನೆ ಆವಶ್ಯಕವಾದುದು. ಆದ್ದರಿಂದ ಅವರ ದಯೆಯಿಂದ ಕೃಪಣರನ್ನು ಬಿಟ್ಟು ಮುಕ್ತನಾಗುವದಿಲ್ಲವೆಂದು ಹೇಳಿದನೆಂದು ಅವನ ಮಾತಿನ ಅರ್ಥ ತಿಳಿಯಬೇಕು.

ಕೆಲವರು ಪ್ರಾಯೇಣ ಎಂಬ ಶ್ಲೋಕಕ್ಕೆ 'ದೇವತೆಗಳು ತಮ್ಮ ಪ್ರಯೋಜನ-ಪರರು, ತಾನು ಪರರ ಪ್ರಯೋಜನಕ್ಕೆ ಪ್ರಯತ್ನಿಸುವವನು ಎಂದು ತನಗೆ ಅತಿಶಯ ಕೃಪಾಲುತೆ ಪ್ರಹ್ಲಾದನಿಂದ ಹೇಳಲ್ಪಡುತ್ತದೆ ಎಂದು ವ್ಯಾಖ್ಯಾನಿಸುತ್ತಾರೆ. ಅದು ಸರಿಯಲ್ಲ. ದೇವತೆಗಳೇ ಅತಿಶಯದಯಾಲುಗಳು ಎಂದು ಹೇಳುವರು. ಪ್ರಾಯೇಣ ಎಂದು ಶ್ಲೋಕದ ಸಮಗ್ರವ್ಯಾಖ್ಯಾನ(ತಾತ್ಪರ್ಯ)ವೆಂದು ತಿಳಿಸಲು ಎರಡು ಪದಗಳನ್ನು ಪ್ರತೀಕವಾಗಿ ಹಿಡದಿರುವರು. ಹೇಗೆ ಶ್ರೀಹರಿಯು ಸರ್ವಪ್ರೇರಕ-ನಾದರೂ ಜ್ಞಾನಿಗಳನ್ನು ವಿಶೇಷವಾಗಿ ಪ್ರಿಯರನ್ನಾಗಿ ಮಾಡುವನು. ಅವರಿಗೆ ತಾನು ವಿಶೇಷ ಪ್ರಿಯನಾಗುವನು. 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ' ಎಂದಿದೆ. ಅದೇ ರೀತಿ ತತ್ವದೇವತೆಗಳೂ ಸಹ ದಯೆಯಿಂದ ಎಲ್ಲರ ಪ್ರೇರಕರು. ತಮ್ಮ ಉಪಾಸಕರಲ್ಲಿ ಅತಿಶಯವಾಗಿ ಪ್ರೀತಿಮಾಡುವರು. ಅದರಂತೆ ಎಲ್ಲರಲ್ಲಿ ಮಾಡುವದಿಲ್ಲ ಎಂದು ಹೇಳುವರು. ತತ್ತ್ವಾಭಿಮಾನಿದೇವತೆಗಳು, ಕೆಲವು ವಶಿಷ್ಠಾದಿ ಮುನಿಗಳು ತಮ್ಮ ಉಪಾಸಕರಲ್ಲಿ ಅತಿಶಯದಯೆ ತೋರಬೇಕು. ವಿಶೇಷಾಧಿಕಾರವಿಲ್ಲದ ದೇವತೆಗಳು ಮುನಿಗಳು ಎಲ್ಲರಲ್ಲಿ ದಯೆ ಮಾಡಬೇಕು. ಯದ್ಯಪಿ ಎಲ್ಲರ ಕೃಪೆ ಆವಶ್ಯಕವಾದರೂ ಯಾರು ತಾತ್ತ್ವಿಕದೇವತೆಗಳ ಕೃಪಾವಿಷಯರೋ ಅವರೇ ಮುಕ್ತರಾಗುವರು ಇಲ್ಲದವರು ಆಗುವದಿಲ್ಲ. ಪ್ರಹ್ಲಾದನೂ ಕೂಡ ತತ್ತ್ವದೇವತೆಗಳ ಅನುಗ್ರಹ ಸಹಿತವಾದ ತನ್ನ ಅನುಗ್ರಹಕ್ಕೆ ಮುಕ್ತಿ ಕಾರಣತ್ವ ಹೇಳಿರುವನು ಎಂದು ಭಾವ. ಪ್ರಾಯಪದವಾದರೂ ವಿಶೇಷಾನುಗ್ರಹವು ಸಾರ್ವತ್ರಿಕವಲ್ಲದ್ದರಿಂದ ಉಪಪನ್ನವಾಗುವದು ಎಂದು ವ್ಯಾಖ್ಯಾನಿಸುತ್ತಾರೆ.

ತಾತ್ವಿಕರು ಎಂದರೆ ತತ್ತ್ವೇಶರು.

ಶಬ್ದಾದ್ಯಾನಭವ ಆದ್ಯಾಶ್ಚ ಮನೋಯುಕ್ತೇಂದ್ರಿಯಾಣಿ ಚ । ಅಂಹಕಾರೋ ಮಹಾಂಶ್ಚೈವ ತ್ರ್ಯೋಯವಿಂಶತಿಕೋ ಗಣಃ । ಪ್ರಕೃತಿಶ್ಚ ಚತುರ್ವಿಂಶತಿಃ' ಎಂದು ತೃತೀಯತಾತ್ಪರ್ಯದಲ್ಲಿ 'ತತ್ರಾವ್ಯಕ್ತಮುಖಾಭಿಮಾನಿನೀ ಮಹಾಲಕ್ಷ್ಮೀಃ । ಸರಸ್ವತೀಭಾರತ್ಯೌ ಚ ದೇವ್ಯೌ ಪ್ರಕೃತಿಮಾನಿನೀ' ಎಂದು ಅನುವ್ಯಾಖ್ಯಾನದಲ್ಲಿ ಹೇಳಿದೆ. ಪುರುಷಾವ್ಯಕ್ತಕಾಲಾನಾಂ ರಮೈವೈಕಾಭಿಮಾನಿನೀ ಎಂಬ ಮುಂದಿನ ಗ್ರಂಥದ ವಿರೋಧ ಬರುತ್ತದೆಯಲ್ಲ ಎಂದರೆ ಗ್ರಂಥವಿರೋಧವಿಲ್ಲ ಎಂದು ಹೇಳುತ್ತಾರೆ. ಪುರುಷಾದೀನಾಂ ರಮಾ ಅಭಿಮಾನಿನೀ ಸಾ ಚ ಅವಳಾದರು ಏಕಾ ದೇಹದೇಹ್ಯಾದಿಭೇದರಹಿತಾ ಎಂದು ಸುಧೆಯಲ್ಲಿ ಒಬ್ಬಳೇ ಎಂದರ್ಥದಲ್ಲಿ ಬೇರೆ ಅರ್ಥಮಾಡಿರುವರು.

ಮಹತೋ ಬ್ರಹ್ಮವಾಯೂ ಚ ತದ್ಭಾರ್ಯೇ ಚಾಪಿ ಮಾನಿನಃ ।
ಅಹಮಃ ಶೇಷವೀಂದ್ರೌ ಚ ಶಿವಸ್ತದ್ದೇವತಾಸ್ತಥಾ ।

ಅಹಮಃ ಶೇಷವೀಂದ್ರೌ ಚ ರುದ್ರೇಂದ್ರೌ ಚ ಕಾಮತಸ್ತ್ರಿಯಃ ।
ಅಹಂಕಾರಾಭಿಮಾನಿನಃ ಕಾಮಪುತ್ರಾನಿರುದ್ಧಸ್ಯೇತಿ ॥

ವೈಕಾರಿಕಸ್ತೈಜಸಶ್ಚ ತಾಮಶ್ಚೇತ್ಯಹಂ ತ್ರಿಧಾ ।
ವೈಕಾರಿಕೋ ಬ್ರಹ್ಮಜಸ್ತು ತೈಜಸೋ ವಾಯುಜಃ ಸ್ಮೃತಃ ॥

ತಾಮಸೋ ಅನಂತಜಶ್ಚೈವ ಸ ಏಕೋ ಗುಣಭೇದತಃ ।
ಶೇಷಃ ಸುಪರ್ಣ ಇಂದ್ರಶ್ಚ ಮನಾಂಸ್ಯೇವ ಪೃಥಕ್ ಪೃಥಕ್ ।
ಅಹಂ ಭಾವ ಮನೋ ರುದ್ರಃ ಶೇಷೋಽಸೌ ಪಾಂಚರಾತ್ರಿಕಮ್ ॥

ವೈದಿಕಂ ಗರುಡೋ ಥೇಂದ್ರೋ ಯಜ್ಞಾದಿವಿಷಯಂ ಮನಃ ।
ಅನಿರುದ್ಧೋ ದೇವಗುರುರ್ಮನೋದೇವಾ ಸಚಂದ್ರಕಾಃ ॥

ಯಜ್ಞಾದಿಸಾಧನೇ ಯತ್ತನ್ಮನಶ್ಚಂದ್ರಃ ಪ್ರಕೀರ್ತಿತಃ ।
ವರುಣಶ್ಚ ಮನೋಭೂತಪರ್ಜನ್ಯಃ ಸರ್ವತೋ ವರಃ ॥

ಮನೋಭಿಮಾನೀ ಸ ಪ್ರೋಕ್ತಃ ಉಮಾ ಬುಧ್ಯಭಿಮಾನಿನೀ ।
ಚಿತ್ತಾಭಿಮಾನೀ ಬ್ರಹ್ಮಾ ತ್ವಗ್ನಿಶ್ಚಿತ್ತಸ್ಯ ದೇವತಾ' ॥

ಎಂದು ಆರಂಭಿಸಿ 'ತದನ್ಯೇಷಾಂ ಗುಣಾನಾಂ ತು ತದನ್ಯೇ ವಿಬುಧಾಃ ಸ್ಮೃತಾಃ' ಇಲ್ಲಿಹೇಳಿದವು, ಪ್ರಾಯಃ ಗೀತಾತಾತ್ಪರ್ಯ, ಛಾಂದ್ಯೋಗ್ಯ, ಋಗ್ಭಾಷ್ಯ,

ಭಾಗವತ ತಾತ್ಪರ್ಯಾದಿಗಳಲ್ಲಿ ಹೇಳಿದವುಗಳು. ಗೌರವ ಭಯದಿಂದ ಆ ಗ್ರಂಥಗಳ ಹೆಸರು ಹೇಳಿಲ್ಲ. ಇಲ್ಲಿ ಇದನ್ನೇ ಸತತ್ತ್ವರತ್ನಮಾಲಾದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಅದನ್ನು ಅನುಸಂಧಾನ ಮಾಡಬೇಕು.

**ಮೂಲಶ್ಲೋಕವ್ಯಾಖ್ಯಾನದಲ್ಲಿ ಕೆಲವು ವಿಶೇಷ ವಿಷಯಗಳು**

ದ್ವಂದ್ವೇ ಘಿ ದ್ವಂದ್ವ ಸಮಾಸದಲ್ಲಿ ಸಂಜ್ಞೆಯುಳ್ಳದ್ದಕ್ಕೆ ಪೂರ್ವನಿಪಾತ ಬರುವುದು. ಪ್ರಕೃತ ಇಕಾರಾಂತ ಮುನಿಶಬ್ದಕ್ಕೆ ಎಂದು ಈ ಮೇಲಿನ ಸೂತ್ರ ಹೇಳುತ್ತದೆ. 'ತನ್ಮುಖ್ಯಂ ಜ್ಞಾನಶಬ್ದಯೋಃ' ಎಂಬಲ್ಲಿಯಂತೆ ಮುನಿಗಳಿಗಿಂತ ದೇವತೆಗಳಿಗೆ ವಿಶೇಷವಿದೆ ಎಂದು ತಿಳಿಯಬೇಕು. ದೇವತೆಗಳು ಮಹಾನುಭಾವರು ಅವರ ಚರ್ಯೆಯು ಸುಲಭವಾಗಿ ತಿಳಿಯುವದಲ್ಲ ಎಂದು ಹೇಳುವರು 'ವಿಜನೇ' ಎಂದು. ಜನರಹಿತವಾದ ಅರಣ್ಯದಲ್ಲಿ ಅಂದರೆ ಏಕಾಂತದಲ್ಲಿ ಎಂದರ್ಥ. ಅಥವಾ **ವಿಜನೇ** ಏಕಾಂತದಲ್ಲಿ **ಸ್ವವಿಮುಕ್ತಿಕಾಮಾಃ** ಸ್ವಕೀಯರಿಗೆ ಮೋಕ್ಷವನ್ನು ಇಚ್ಛಿಸುವವರು **ಪರಾರ್ಥನಿಷ್ಠಾಃ ನ** ನಿನ್ನಿಂದ ಭಿನ್ನರಾದವರಿಗೆ ಏನು ಪ್ರಯೋಜನವಿದೆಯೋ ಅದನ್ನು ಅಪೇಕ್ಷಿಸುವವರಲ್ಲ ಅವರು ತಾತ್ವಿಕದೇವತೆಗಳು ಮುನಿಗಳು ಅದರಲ್ಲಿಯೂ ತರತಮ ಭಾವವಿದೆ ಎಂಬ ಅಭಿಪ್ರಾಯವನ್ನು ಗ್ರಂಥಕಾರರು ಪ್ರಾಯೇಣ ಎಂಬುದರಿಂದ ಸೂಚಿಸಿರುವರು ಗ್ರಂಥಕಾರರು. **ಪರೇ** ಸ್ವೋಪಾಸಕಭಿನ್ನರು ಅವರು ಅರ್ಥನಿಷ್ಠರಲ್ಲ ಪ್ರಯೋಜನ ನಿಷ್ಠರಲ್ಲ. **ಚರಂತಿ** ತಮ್ಮ ಉಪಾಸಕರಿಂದ ಮಾಡಿಸುವರು ಅಥವಾ ಪರಾರ್ಥ ಎಂದರೆ ಮಹಾರ್ಥನಾದ ಭಗವಂತ ಅವನಲ್ಲಿ ನಿಷ್ಠೆವುಳ್ಳವರು ಎಂದರ್ಥ. ವಿಜನೇನ ಸಹಿತಾಃ ಇತಿ ವಾ ಅರಣಾದಿಸ್ಥಾನಸಹಿತರಾದ ಎಂದರ್ಥ **ಏಕಃ** ಒಬ್ಬನೇ ನಾನು **ಏತಾನ್** ತತ್ತ್ವೇಶರನ್ನು **ವಿಹಾಯ** ಬಿಟ್ಟು ಆಗಲಿ ಅವರ ದಯೆಯಾದ ಮೇಲೂ **ಕೃಪಣಾನ್** ದೀನರನ್ನು ಉದ್ದೇಶಿಸಿ **ನ ಮುಮುಕ್ಷೇ** ಅವರ ಮುಕ್ತಿಯನ್ನು ಇಚ್ಛಿಸುವದಿಲ್ಲ ಹಾಗಾದರೆ **ತೈಃ** ದೀನರಿಂದ ತತ್ತ್ವದೇವತೆಗಳಿಂದ ಮುನಿಗಳಿಂದಲೂ ಸೇರಿ ನನ್ನಿಂದ ಭಿನ್ನರಾದವರನ್ನು ಇವರ ಮುಕ್ತಿಗಾಗಿ ಭಜಿಸುವ ಎಂದರೆ ನಿನ್ನ ಹೊರತು ಬೇರೆ ಯಾರೂ ಜಗದ್ರಕ್ಷಕರಿಲ್ಲವೆಂದು ಹೇಳುವನು **ತ್ವತ್ತಃ ಅನ್ಯಂ** ನಿನ್ನಿಂದ ಬೇರೆಯವರನ್ನು **ಭ್ರಮತಃ** ಸಂಸಾರದಲ್ಲಿ ತಿರುಗುವ **ಅಸ್ಯ** ಜಗತ್ತಿಗೆ **ಶರಣಂ** ರಕ್ಷಕನನ್ನು **ನ ಪಶ್ಯೇ** ನೋಡುವದಿಲ್ಲ **ನು** ನಿಶ್ಚಯ. **ಭ್ರಮತಃ** ಭ್ರಾಂತಿತೋಽಪಿ ತತ್ ಅನ್ಯಂ ನ ಪಶ್ಯೇ ವಿಷಯೀಕುರ್ಯಾಂ ಅಂದರೆ ಬೇರೆ ರಕ್ಷಕರಿದ್ದಾರೆ ಎಂಬ ಭ್ರಮವೂ ಬರುವದಿಲ್ಲ. ಪ್ರಮಾ ಅಂತೂ ದೂರ ಉಳಿಯಿತು ಎಂದು ಭಾವ.

ಅಥವಾ ಅಸ್ಯ ಭ್ರಮತಃ ತ್ವದನ್ಯಶರಣಂ **ವಿಮುಮುಕ್ಷೇ** ನಿನ್ನ ಹೊರತು ಬೇರೆ ಶರಣನನ್ನು ಬಿಡಲಿಚ್ಛಿಸುವೆನು ಎಂದೂ ಅರ್ಥ. ಪಶ್ಯತೀತಿ ಪಶ್ಯಃ=ಜೀವಃ ತಸ್ಮಿನ್

ಪಶ್ಯೇ ಜೀವಸಂಘದಲ್ಲಿ (ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಎಂಬುದರ ಅರ್ಥ ಹೇಳುವಾಗ ಟೀಕೆಯಲ್ಲಿ ಹೀಗೆ ಅರ್ಥಮಾಡಿದೆ) ತ್ವದನ್ಯ (ಅನ್ಯ) ಎಂದರೆ ಅನನೀಯ ಚೇಷ್ಟ್ಯ ಎಂದರ್ಥ. ನ ಸಃ ಇತಿ ನಾನ್ಯಃ ಅಂದರೆ ನಿರ್ಣಿಯಮ್ಯ-ನಾದವನನ್ನು, ಬೇರೆಯವರನ್ನು ದೇವಮುನಯಃ ದೇವತೆಗಳು ಮುನಿಗಳು **ನ ಚರಂತಿ** ತಿಳಿಯಲಾರರು **ಕಿಂತು ನು** ಹೀನನೆಂದು **ಚರಂತಿ** ತಿಳಿಯುವರು ಆದ್ದರಿಂದ **ತಂ** ಅವನನ್ನು ನಿನ್ನಿಂದ ಭಿನ್ನನು **ಮುಮುಕ್ಷೀ** ಬಿಡಲಿಚ್ಛಿಸುವೆ. ದೇವಮುನಯಃ ದೇವೇಷು ಮುನಯಃ ನಿರ್ವ್ಯಾಪಾರಾಃ ದೇವತೆಗಳಲ್ಲಿ ಏನೂ ವ್ಯಾಪಾರ ಮಾಡದಿರುವವರು ಕಾರಣ ಅಧಿಕಾರವಿಲ್ಲದವರು ಆದ್ದರಿಂದ **ಅನಧಿಕಾಃ** ಚಿಕ್ಕವರು **ಪರಾರ್ಥನಿಷ್ಠಾಃ** ಅವಿಶೇಷವಾಗಿ ಎಲ್ಲರಲ್ಲೂ ದಯಾಲುಗಳು ಆದ್ದರಿಂದ ಅವರೂ ಕೂಡ **ಯೇ ಸ್ವವಿಮುಕ್ತಿಕಾಮಾಃ** ದೇವತೆಗಳು ಮತ್ತು ಮುನಿಗಳು ಆದ್ದರಿಂದ **ಏತಾನ್ ವಿಹಾಯ** ತತ್ತ್ವಾಭಿಮಾನಿಗಳನ್ನು ಬಿಟ್ಟು ಇವರನ್ನು ಬಿಟ್ಟು ಕೃಪಣಾನ್ ಉದ್ದಿಶ್ಯ ವಿಜನೇ ಜನಃ ಪುನರ್ಜನನಂ ಸಃ ವಿಗತಃ ಯಸ್ಮಾತ್ ಲೋಕಾತ್ ಸಃ ವಿಜನಃ ಮೋಕ್ಷಃ ಅದರ ವಿಷಯದಲ್ಲಿ **ನ ಸಮರ್ಥಾಃ** ಸಮರ್ಥರಲ್ಲ. ಹಾಗಾದರೆ ಅವರು ಎಂಥವರು ಎಂದರೆ ಅತತ್ವಪಾಃ ತತ್ವಪವಿಷಯೇ ಎಂದರೆ ತತ್ವಾಭಿಮಾನಿದೇವತೆಗಳ ವಿಷಯದಲ್ಲಿ ತತ್ವಾಭಿಮಾನಿಗಳಲ್ಲ ಎಂದರೆ ಹೇಳುವರು ಚರಂತಿ ಅನುಚರಿಂತೀತಿ ಚರಾಃ ಭಟಾಃ **ತದ್ವದಾಚರಂತಿ** ಭಟರಂತಿರುವವರು ಎಂದು. ದೇವಮುನಯಃ ತತ್ವಪಾಶ್ಚ ಪರಾರ್ಥನಿಷ್ಠಾ ವಿಜನೇನ ಮೌನಂ ಚರಂತಿ ತತ್ವಾಭಿಮಾನಿದೇವತೆಗಳು ಮುನಿಗಳು ಪರಪ್ರಯೋಜನಾಸಕ್ತರಾಗಿ ಮೌನಾದಿಗಳನ್ನು ಮಾಡಿಸುವರು. ಏಕೆಂದರೆ **ಸ್ವವಿಮುಕ್ತಿಕಾಮಾಃ** ಸ್ವಕೀಯರಿಗೆ ತಮ್ಮ ಉಪಾಸನೆಯಿಂದ ಸಾಂಗವಾದ ಮನಸ್ಸುಳ್ಳವರಿಗೆ ವಿಮುಕ್ತೌ ಭವಂ ಕಂ ಮುಕ್ತಿಯಲ್ಲಿರುವ ಸುಖಕ್ಕಾಗಿ ಅಮಃ ಗತಿಃ ಏತನ್ನಿಯಾಮಕತಯಾ ಯೇಷಾಂ ಇತಿ ತೇ ತಥಾ । **ಕಂ** ಮೊದಲು ವ್ಯಕ್ತವಾಗದಿರುವ ಯಾವ ಸುಖವಿಶೇಷ ಉಂಟೋ ತಂ ಅಯಮಯಂತಿ ಅನುಭಾವಯಂತೀತಿ ತೇ ತಥಾ ವಾ । ಅನುಭವಕ್ಕೆ ತಂದುಕೊಡುವವರು ಎಂದರ್ಥ. ಇದನ್ನೇ ಬೃಹದ್ಭಾಷ್ಯದಲ್ಲಿ ಗಾರ್ಗಿಬ್ರಾಹ್ಮಣದಲ್ಲಿ 'ರೋಚಮಾನಾನಿ ಕಾನಿ ಲೋಕಾಃ ಲೀನಂ ಸುಖಂ ಕ ಇತ್ಯುಕ್ತ' ಎಂದು ಹೇಳಿದೆ. ತಮ್ಮ ಉಪಾಸನೆ ಮಾಡಿದವರಿಗೆ ಮೊದಲು ಅನುಭವಕ್ಕೆ ಬಾರದ ಸುಖವಿಶೇಷ ಅನುಭವಕ್ಕೆ ಬರುವಂತೆ ಮಾಡುವರು ಎಂದು ಭಾವ. ಹೀಗೆ ಸತ್ಯಧರ್ಮರು ತಾತ್ಪರ್ಯದಲ್ಲಿ ಹೇಳಿದ ವಿಷಯವೂ ಬರುವಂತೆ ಮೂಲವನ್ನು ವಿವಿಧವಾಗಿ ವ್ಯಾಖ್ಯಾನಿಸಿರುವರು.

ಮಂದನಂದನೀಕಾರರು ಇಲ್ಲಿ ದೇವಮುನಯಸ್ವವಿಮುಕ್ತಿಕಾಮಾಃ ವಿಜನೇ ತಪ ಆದಿಕಂ ಚರಂತಿ ನ ಪರಾರ್ಥನಿಷ್ಠಾಃ ಎಂದು ಅನ್ವಯಿಸಿ ದೇತೆಗಳಿಗೆ ಮುನಿಗಳಿಗೆ

ಸ್ವಾಶ್ರಿತರಲ್ಲಿ ಪ್ರಸಾದವಿಲ್ಲವೆಂದು ತಿಳಿಯಬಾರದು. ದೇವತೆಗಳ ಪ್ರಾಸದವಿಲ್ಲದಿದ್ದರೆ ಇಂದ್ರಿಯಪ್ರೇರಣೆ ಇಲ್ಲವಾದರೆ ಸಾಧನಾನುಷ್ಠಾನ ಮಾಡಲಾಗುವದಿಲ್ಲ. ಮುನಿಗಳ ಪ್ರಸಾದವಿಲ್ಲದಿದ್ದರೆ ಅವರಿಂದ ದೃಷ್ಟವಾದ ವೇದಗಳಿಗೆ ಅವರು ಮಾಡಿದ ಕಲ್ಪಸೂತ್ರಗಳ ಪ್ರಚಾರವಿಲ್ಲದೆ ಹೋಗಿ ವೈದಿಕಕರ್ಮಾನುಷ್ಠಾನ ಮಾಡಲಾಗದು. ಕಿಂತು ತತ್ತ್ವಾದಿಗಳಿಗೆ ನಿಯಾಮಕರಾಗದ ಸಾಧಾರಣ ದೇವತೆಗಳಿಗೆ ವೇದದ್ರಷ್ಟೃಗಳಲ್ಲದ ಮುನಿಗಳಿಗೆ ವಿಶೇಷವಾಗಿ ಬೇರೆ ಜನರ ಮೋಕ್ಷದಲ್ಲಿ ನೈರ್ಭರ್ಯವಿಲ್ಲ ಎಂಬ ಅಭಿಪ್ರಾಯವನ್ನೇ ತಾತ್ಪರ್ಯದಲ್ಲಿ ಹೇಳಿದೆ. ಅಂದಮೇಲೆ ಇಂದ್ರಿಯಪ್ರೇರಣೆಗಾಗಿ ತಮ್ಮನ್ನು ಉಪಜೀವಿಸಿದವರಿಗೆ ಅವಶ್ಯವಾಗಿ ತಾತ್ತ್ವಿಕರು ವಿಶೇಷವಾಗಿಯೇ ಅನುಗ್ರಹ ಮಾಡಬೇಕೆಂದು ಶ್ರೀಹರಿಯ ಆಜ್ಞೆ. ಅದರಂತೆ ಕೆಲವು ಪ್ರಬಲಮುನಿಗಳು ತಮ್ಮಿಂದ ದೃಷ್ಟವೇದಾದಿಗಳಿಂದ ತಮ್ಮನ್ನು ಉಪಜೀವಿಸಿದವರಿಗೆ ವಿಶೇಷದಯೆಮಾಡಬೇಕೆಂದು ಭಗವಂತನ ಶಾಸನವಿದೆ. ಉಳಿದವರು ಎಲ್ಲರಿಗೂ ಸಾಧಾರಣವಾಗಿ 'ಗೋಬ್ರಾಹ್ಮಣೇಭ್ಯಃ ಶುಭಂ ಭವತು' 'ಬ್ರಾಹ್ಮಣಾಃ ಸಂತು ನಿರ್ಭಯಾಃ' ಮುಂತಾಗಿ ಸಾಧಾರಣ ದಯಾಮಾಡಿದರೆ ಸಾಕು. ಹಾಗಾದರೆ ದೇವತೆಗಳಿಗೂ ಮುನಿಗಳಿಗೂ ಸಾಧಾರಣದಯೇ ಇದ್ದೇ ಇದೇ ಅಷ್ಟೇ ಸಾಕೇ ಎಂದರೆ ಯದ್ಯಪಿ ಇದೆ ಆದರೂ ವಿಶೇಷವಾಗಿಯೂ ಬೇಕು. ತಾತ್ತ್ವಿಕರ ವೇದದೃಷ್ಟ್ರಗಳ ವಿಶೇಷಕೃಪಾದಿಂದಲೇ ಮುಕ್ತಿ ಇಲ್ಲವಾದರೆ ಇಲ್ಲ ಕಾರಣ ವಿಶೇಷ ದಯೆಬೇಕು. ಪ್ರಕೃತ ದೈತ್ಯಬಾಲಕರು ತನ್ನನ್ನು ಆಶ್ರಯಿಸಿರುವರು. ಆದ್ದರಿಂದ ಅವರಲ್ಲಿ ತನಗೆ ವಿಶೇಷದಯಾ ಇದೆ ಕಾರಣ ಅವರ ಉತ್ತಾರಣಪ್ರಾರ್ಥನೆ-ಯುಕ್ತವೆಂದು ತಾತ್ಪರ್ಯದ ಭಾವ ತಿಳಿಸಿರುವರು. ।।೪೪।।

ಸುಖಕ್ಕಾಗಿ ತಾನೇ ಮೋಕ್ಷವನ್ನು ಅಪೇಕ್ಷಿಸುವದು. ಆ ಸುಖವು ಸಂಸಾರದಲ್ಲಿಯೂ ಸಾರಸಾಕ್ಷಿಯರೇ ಮೊದಲಾದವರ ಸಂಗದಿಂದ ಮಂಗಲವು (ಸುಖ)ಅನುಭವಾರೂಢವಾಗಿದೆ. ಅಂದಮೇಲೆ ಪ್ರಹ್ಲಾದನೇ ಅನುಭವಾರೂಢವಾಗದ ಸಂದಿಗ್ಧವಾದ ಸುಖವುಳ್ಳ, ಪ್ರಕೃಷ್ಟವಾದ ಆಹ್ಲಾದವಿಲ್ಲದ ಮುಕ್ತಿಯನ್ನು ಏಕೆ ಸ್ತುತಿಸುವಿ ಎಂದರೆ ಹೇಳುವನು-

**ಯನ್ಮೈಥುನಾದಿ ಗೃಹಮೇಧಿಸುಖಂ ಹಿ ತುಚ್ಛಂ**
**ಕಂಡೂಯನೇನ ಕರಯೋರಿವ ದುಃಖದುಃಖಮ್ ।**
**ತೃಪ್ಯಂತಿ ದೇಹಕೃಪಣಾ ಬಹುದುಃಖಭಾಜಃ**
**ಕಂಡೂತಿವನ್ಮನಸಿಜಂ ವಿಷಹೇತ ಧೀರಃ ।।೪೫।।**

**ಯತ್** ಯಾವ ಕಾರಣ ಮೈಥುನಾದಿಸಂಭೋಗ ಮೊದಲಾದ **ಗೃಹಮೇದಿಸುಖಂ** ಗೃಹಸ್ಥಾಶ್ರಮಿಗಳಿಗೆ ಆಗುವ ವಿಷಯಜನ್ಯಸುಖವು **ತುಚ್ಛಂ** ಉತ್ತಮವಾದುದಲ್ಲವೆಂದು **ಹಿ** ಅನುಭವಸಿದ್ಧವು ಮತ್ತು **ಕರಯೋಃ ಕಂಡೂಯನೇ** ಕಜ್ಜಿ ಮೊದಲಾದ ಚರ್ಮವ್ಯಾಧಿಯಿಂದ ತುರಿಸುವದರಿಂದ **ದುಃಖದುಃಖಂ** ಮೊದಲು ಅಲ್ಪಸುಖವಾದರೂ ಅನಂತರ ಬಹುದುಃಖವಾಗುವದೋ **ಇವ** ಅದರಂತೆ ಬಹುದುಃಖಜನಕವೋ **ತತ್** ಆ ಕಾರಣದಿಂದ **ದೇಹಕೃಪಣಾಃ** ಶರೀರಪೋಷಣೆಯಲ್ಲೇ ನಿರತರಾದ ಅಜ್ಞಾನಿಗಳು **ತೃಪ್ಯಂತಿ** ಪ್ರಾಕೃತ ವೈಷಯಿಕ ಸುಖದಿಂದ ಸಂತೃಪ್ತರಾಗುವರು ಕೊನೆಗೆ **ಬಹುದುಃಖಭಾಜಃ** ಬಹಳ ದುಃಖಭಾಗಿಗಳಾಗುವರು ಆದ್ದರಿಂದ **ಧೀರಃ** ಜ್ಞಾನಿಯು **ಮನಸಿಜಂ** ಯಾವ ಮನ್ಮಥನಿಂದ ತುಚ್ಛವಾದ ಮೈಥುನ ಸುಖವನ್ನು ಇಚ್ಛಿಸುವರೋ ಅಂಥ ಕಾಮನನ್ನು **ಕಂಡೂತಿವತ್** ತಿನಸನ್ನು ತಡೆದುಕೊಳ್ಳುವಂತೆ **ವಿಷಹೇತ** ತಡೆದುಕೊಳ್ಳಬೇಕು. ಮೋಕ್ಷಸುಖವು ಇದರಂತೆ ದುಃಖಸಾಧನವಲ್ಲವಾದ್ದರಿಂದ ಅದನ್ನು ಅಪೇಕ್ಷಿಸಿ ಅದಕ್ಕಾಗಿ ಮಹಾಪ್ರಯತ್ನ ಮಾಡುವದು ಯುಕ್ತವೆಂದು ಭಾವ. ಸ್ವಾನ್ ತೃಪ್ತಾನ್ ಮನ್ವತೇ ತನ್ವೇತ ತತ್ಕರ್ಮ । **ತೃಪ್ಯಂತಿ** ವೈಷಯಿಕಸುಖದಿಂದ ತಮ್ಮನ್ನು ತೃಪ್ತರಂತೆ ಭಾವಿಸುವರು. ವೈಥುನಾದಿಕಾರ್ಯಗಳನ್ನು ಮಾಡುವರು **ತೇ ದೇಹಕೃಪಣಾಃ** ಅವರು ದೇಹಪೋಷಣರತರು ಎಂದು ಯೋಜಿಸಿರುವರು. 'ದುಃಖದುಃಖಂ' ಎಂಬ ವೀಪ್ಸಾದಿಂದ ದುಃಖಾತ್ ದುಃಖಂ ಎಂಬ ವಿಗ್ರಹಲಭ್ಯವಾದ ಅರ್ಥವನ್ನೇ ಬಹುದುಃಖಭಾಜಃ ಎಂದು ತಿಳಿಸುವರು. ಬುದ್ಧಿರಮಣವು(ಧೀರಶಬ್ದಾರ್ಥ) ಕಂದರ್ಪದರ್ಪನಾಶಕಂ ಕಾಮನ ಗರ್ವಪರಿಹಾರಕವೆಂದರ್ಥ. 'ಮನಸಿಜಃ ಕುಸುಮೇಷು' ಎಂದು ಅಮರವಿದೆ. ॥೪೫॥

ಮುಕ್ತಿಯನ್ನಿಚ್ಛಿಸುವವನು ಇಂದ್ರಿಯ ಜಯವನ್ನು ಸಂಪಾದಿಸಬೇಕು ಇಲ್ಲವಾದರೆ ಮೋಕ್ಷಸಾಧನವೆಂದು ಸಂಪ್ರತಿಪನ್ನವಾದ ಮೌನಾದಿಗಳು ಪ್ರಾಣರಕ್ಷಣೆಗೆ ಮಾತ್ರ ಕಾರಣವಾಗುವವು. ಮಾಡಲಾಗದೆಯೂ ಇರಬಹುದು ಎಂದು ಹೇಳುವರು.

**ಮೌನವ್ರತಶ್ರುತತಪೋಽಧ್ಯಯನಸ್ವಧರ್ಮ-**
**ವ್ಯಾಖ್ಯಾರಹೋಜಪಸಮಾಧಯ ಆಪವರ್ಗ್ಯಾಃ ।**
**ಪ್ರಾಯಃ ಪರಂ ಪುರುಷ ತೇ ತ್ವಜಿತೇಂದ್ರಿಯಾಣಾಂ**
**ವಾರ್ತಾ ಭವಂತ್ಯುತ ನ ವಾಽತ್ರ ತು ದಾಂಭಿಕಾನಾಮ್** ॥೪೬॥

**ಹೇ ಪುರುಷ** ಪೂರ್ಣಷಡ್ಗುಣನಾದ ಶ್ರೀಹರಿಯೇ **ಮೌನ** ಮಾತನಾಡದಿರುವದು **ವ್ರತ** ಕೃಚ್ಛ್ರಚಾಂದ್ರಾಯಣಾದಿಗಳು **ಶ್ರುತ** ಶಾಸ್ತ್ರಶ್ರವಣ **ತಪ**

ಪಂಚಾಗ್ನಿಮಧ್ಯದಲ್ಲಿ ದೇಹವನ್ನು ಕಾಯಿಸುವದು ಮುಂತಾದ **ಅಧ್ಯಯನ** ವೇದಾದಿಗಳನ್ನು ಓದುವದು **ಸ್ವಧರ್ಮ** ತಮ್ಮ ತಮ್ಮ ವರ್ಣ ಆಶ್ರಮಗಳಿಗೆ ವಿಹಿತವಾದ ಧರ್ಮಗಳನ್ನು ಅನುಷ್ಠಾನ ಮಾಡುವದು **ವ್ಯಾಖ್ಯಾ** ಪ್ರವಚನ ಅಥವಾ ಸಚ್ಛಾಸ್ತ್ರಗಳ ವಿವರಣೆ **ರಹಃ** ಏಕಾಂತ ವಾಸವು **ಜಪ** ಮಂತ್ರಗಳನ್ನು ಜಪಿಸುವದು **ಸಮಾಧಯಃ** ಧ್ಯಾನ ಇವುಗಳು ಹತ್ತು (ಸಮಾಧಿರ್ನಿಯಮೇ ಧ್ಯಾನೇ ಎಂದು ವಿಶ್ವವಿದೆ) **ಪ್ರಾಯಃ** ಬಹುಶಃ **ಅಪವರ್ಗ್ಯಾಃ** ಇಂದ್ರಿಯಜಯ ಭಕ್ತಿಸಹಿತವಾಗಿದ್ದರು ಮೋಕ್ಷಸಾಧಕಗಳೇ ಆದರೂ **ಪರಂ** ಅತ್ಯಂತವಾಗಿ **ಅಜಿತೇಂದ್ರಿಯಾಣಾಂ** ಇಂದ್ರಿಯ ಜಯವಿಲ್ಲದ **ದಾಂಭಿಕಾನಾಂ** ಮೋಸ ಮಾಡುವವರಿಗೆ **ವಾರ್ತಾ ಭವಂತಿ** ಜೀವನೋಪಾಯವಾಗುವುದು. **ಅತ್ರ** ಭೂಮಿಯಲ್ಲಿ ('ಜ್ಞಾತ್ವಾ ಅಪಿ ಸ್ವಾತ್ಮನೋ ಅಲ್ಪತ್ವಂ ದಂಭೋ ಮಹಾತ್ಮ್ಯಸೂಚನಂ' ಎಂದು ಗೀತಾಭಾಷ್ಯದಲ್ಲಿ ಹೇಳಿದೆ. ತಾನು ಚಿಕ್ಕವನೆಂದೂ ತಿಳಿದೂ ತನಗೆ ಮಹತ್ವತೋರಿಸಿಕೊಳ್ಳುವದು ದಂಭ) **ಉತ** ಈ ರೀತಿ ತರ್ಕವಷ್ಟೇ. ವಸ್ತುತಃ ಆಗಲಾರವು. 'ವಾ' ಕಾರವು ಎರಡು 'ತು' ಗಳು ಯಥಾಯಥಂ ವ್ರತಾದಿಗಳಿಗೆ ಅನ್ವಯಿಸುವವು. ಅಜಿತೇಂದ್ರಿಯಾಣಾಂ ದಾಂಭಿಕಾನಾಂ ಎಂಬವುಗಳಿಗೆ ಸಾಮಾನಾಧಿಕರಣ್ಯೇನ ಅನ್ವಯ ಮಾಡಿದೆ. ವೈಯ್ಯಧಿಕರಣ್ಯೇನ ಅನ್ವಯವನ್ನು ಮಾಡಬಹುದು ಮಾಡಿರುವರು. ಇಂದ್ರಿಯಜಯವಿಲ್ಲದ ಮೇಲೆ ಮೌನಾದಿ ತೋರಿಸುವವರಿಗೆ ಬಾಹ್ಯವ್ಯಾಪಾರದಿಂದ ಮನೋನಿಗ್ರಹ ಇವನಿಗೆ ಇದೆ ಎಂಬ ಭ್ರಾಂತಿಯಿರುವಾಗ ಪೂಜಿಸುವರು ದುಡ್ಡುಕೊಡುವರು ಕಾರಣ ಜೀವನೋಪಾಯವಾಗುವದು. ಮನೋನಿಗ್ರಹ ಇವನಿಗೆ ಇಲ್ಲವೆಂದು ತಿಳಿದಾಗ ಏನೂ ಕೊಡಲಾರರು ಅಷ್ಟೇ ಅಲ್ಲದೆ ಅಪಹಾಸ ಮಾಡುವರು ಎಂದು ಭಾವ. ||೪೬||

ಇಂದ್ರಿಯನಿಗ್ರಹವಿಲ್ಲದೇ ಮೌನಾದಿಗಳು ಅಪ್ರಯೋಜಕವೆಂದು ಹೇಳಿ ಇಂದ್ರಿಯ ನಿಗ್ರಹಕ್ಕೆ ಆವಶ್ಯಕತ್ವ ಹೇಳಿದರು. ಅದರಿಂದ ಸಾಧ್ಯವಾದ ಉಪಾಸನೆ ಎಲ್ಲಿ ಮಾಡಬೇಕೆಂದು ಹೇಳುವರು-

ಇಂದ್ರಿಯ ಜಯವಿಲ್ಲದವರಿಗೆ ಮೌನಾದಿಗಳು ಇದ್ದರೂ ಇಲ್ಲದಂತೆಯೇ. ಮೌನಾದಿಸಾಧನಗಳನ್ನು ಮಾಡುವದೂ ಸುಲಭವಲ್ಲ. ಕಾರಣ ಸರ್ವಸಾಧಾರಣ ಉಪಾಸನೆಯನ್ನು ಹೇಳುವರು-

ಮನಸ್ಸು ಮೂರ್ತವಾದುದರಿಂದ ಮೌನಾದಿಗಳು ಎಂದರೆ ಮೂರ್ತಾಮೂರ್ತಗಳೆಂದರ್ಥ. ಅವುಗಳಲ್ಲಿ ಪರಮಾತ್ಮನನ್ನು ಉಪಾಸನೆ ಮಾಡಿ ಪ್ರತ್ಯಕ್ಷವಾಗಿ ಕಾಣುವರು ಎಂದು ಇಲ್ಲಿ ಹೇಳುವರು ಎಂದು ಭಾವ-

**ರೂಪೇ ಇಮೇ ಸದಸತೀ ತವ ವೇದದೃಷ್ಟೇ**
**ಬೀಜಾಂಕುರಾವಿವ ನ ಚಾನ್ಯದರೂಪಕಸ್ಯ ।**
**ಯುಕ್ತಾಃ ಸಮಕ್ಷಮುಭಯತ್ರ ವಿಚಿನ್ವತೇ ತ್ವಾಂ**
**ಯೋಗೇನ ವಹ್ನಿಮಿವ ದಾರುಷು ನಾನ್ಯತಃ ಸ್ಯಾತ್ ।।೪೭।।**

**ಹೇ ಭೂಮನ್** ಪರಿಪೂರ್ಣನಾದ ಸ್ವಾಮಿಯೇ **ಅರೂಪಕಸ್ಯ** ಪ್ರಾಕೃತರೂಪವಿಲ್ಲದ **ತವ** ಸಚ್ಚಿದಾನಂದಸ್ವರೂಪನಾದ ನಿನಗೆ ಬೀಜಾಂಕುರಗಳಂತೆ ಪರಿಣಾಮ ಕಾರಣಕಾರ್ಯಗಳೂ, ವ್ಯಕ್ತಿಗೆ ಕಾರಣವಾದ ಬೀಜಾಭಿಮಾನಿ ದೇವತೆಯಂತೆ ನಿಮಿತ್ತನೈಮಿತ್ತಿಕ ಕಾರ್ಯಕಾರಣಗಳೂ ಆಗಿರುವ **ಇಮೇ** ಪ್ರಮಾಣಪ್ರಮಿತಗಳಾಗ **ಸದಸತೀಂ** ಕಾರ್ಯಕಾರಣಗಳಾದ ಮೂರ್ತಾಮೂರ್ತ ಪದಾರ್ಥಗಳು **ವೇದದೃಷ್ಟೇ** 'ದ್ವೇ ವಾವ ಬ್ರಹ್ಮಣೋ ರೂಪೇ, ಮೂರ್ತಂ ಚಾಮೂರ್ತಂ ಚ' ಎಂಬ ಶ್ರುತಿಪ್ರತಿಪಾದಿತವಾದ **ರೂಪೇ** ನಿನ್ನ ಅಧೀನವಾದ್ದರಿಂದ ನಿನ್ನ ಸನ್ನಿಧಾನಪಾತ್ರವಾದ್ದರಿಂದ ನಿನ್ನ ಪ್ರತಿಮೆಗಳು **ಅನ್ಯತ್** ಸಚ್ಚಿದಾನಂದ ಸ್ವರೂಪಗಳು **ನ ಚ** ಅಲ್ಲ. ಇದರಿಂದ ವೇದದಲ್ಲಿ ಹೇಳಿದೆ ಎಂದಮೇಲೆ ಸ್ವರೂಪಗಳೇ ಆಗಿರಬೇಕು ಎಂಬ ಶಂಕೆ ಪರಿಹರಿಸಿದಂತಾಯಿತು. ಇದಕ್ಕೆ ಕಾರಣ ಅದರೂಪಕಸ್ಯ ಎಂಬ ವಿಶೇಷಣದಿಂದ ಪ್ರಾಕೃತರೂಪರಾಹಿತ್ಯವೆಂದು ತಿಳಿಸಿರುವರು. ಅಪ್ರಾಕೃತನಾದವನಿಗೆ ಪ್ರಾಕೃತಗಳಾದ ಇವು ಸ್ವರೂಪಗಳಾಗಲಾರವು ಕಿಂತು ಭಿನ್ನರೂಪಗಳೆಂದು ಭಾವ. 'ವಿಜ್ಞಾನಮಾನಂದಂ ಬ್ರಹ್ಮ' ಎಂದಿರುವದರಿಂದ ಆನಂದಾದಿಗಳು ಅವನ ಸ್ವರೂಪ. ಈ ವಿಷಯದಲ್ಲಿ ಮಹಾಂತರಾದ ಬ್ರಹ್ಮಾದಿಗಳ ಪ್ರತ್ಯಕ್ಷವೂ ಪ್ರಮಾಣವೆಂದು ಹೇಳುತ್ತಾರೆ. **ಯುಕ್ತಾ** ಭಕ್ತಿಯೋಗದಿಂದ ಕೂಡಿದ ಯೋಗಿಗಳು **ಯೋಗೇನ** ಉಪಾಸನಾರೂಪವಾದ ಉಪಾಯದಿಂದ(ಧ್ಯಾನ) **ಉಭಯತ್ರ** ಈ ಕಾರ್ಯಕಾರಣಗಳಲ್ಲಿ ಸನ್ನಿಹಿತನಾದ **ತ್ವಾಂ** ನಿನ್ನನ್ನು **ಯೋಗೇನ** ಮಥನರೂಪ ಉಪಾಯದಿಂದ **ದಾರುಷು** ಅಶ್ವತ್ಥದ ಕೊರಡುಗಳಲ್ಲಿ (ಅರಣಿ) **ವಹ್ನಿಂ ಇವ** ಅಗ್ನಿಯನ್ನು ಕಾಣಲು ಹುಡುಕುವಂತೆ **ಸಮಕ್ಷಂ** ಪ್ರತ್ಯಕ್ಷದಿಂದ ಕಾಣಲು **ವಿಚಿನ್ವತೇ** ಹುಡುಕುವರು ಹುಡಿಕಿ ಕಾಣುವರೆಂದರ್ಥ **ಅನ್ಯತಃ** ಭಕ್ತಿಯೋಗ ಬಿಟ್ಟು ಬೇರೆ ಕರ್ಮಾದಿ ಉಪಾಯಗಳಿಂದ **ನ ಸ್ಯಾತ್** ಕಾಣುವದಿಲ್ಲ **ಅನ್ಯತ್** ಸಾಕ್ಷಾತ್ ಸ್ವರೂಪರೂಪಗಳಲ್ಲ ಹೀಗೂ ಅರ್ಥ.

ಈ ಶ್ಲೋಕದಲ್ಲಿ 'ಇಮೇ ಸದಸತೀ ತವ ರೂಪೇ' ಅಂದರೆ ನಿನ್ನಿಂದ ಅಭಿನ್ನವಾದವು ಅನ್ಯತ್ ಅವುಗಳಿಂದ ಭಿನ್ನವಾದ ರೂಪ ನಾಮಗಳು ತವ ನ ನಿನಗೆ ಇಲ್ಲವೆಂದು ಶ್ರೀಹರಿಗೆ ಸದಸದಾತ್ಮಕತ್ವ ತೋರುತ್ತದೆ. ಅದಾದರೂ ಪ್ರಮಾಣಬಾಧಿ

ತವಾದುದು. ಕಾರಣ 'ಯತ್ರಾನವಸರೋ ಪದಂ ತತ್ರ ಪ್ರತಿಷ್ಠಿತಂ । ವಾಕ್ಯಂ ವೇತಿ ಸತಾಂ ನೀತಿಃ ಸಾವಕಾಶಾ ನ ತದ್ಭವೇತ್''ಸೋಪಸ್ಕರಾಣಿ ವಾಕ್ಯಾನಿ ಭವಂತಿ' ಮುಂತಾಗಿರುವದರಿಂದ ಸದಸಚ್ಛಬ್ದಾರ್ಥವನ್ನು ಉದ್ಬೋಧನ ಮಾಡುತ್ತ ಅಪೇಕ್ಷಿತವಾದುದನ್ನು ಅಧ್ಯಾಹಾರ ಮಾಡಿ ಆ ವಾಕ್ಯಯೋಜನೆಯನ್ನು ಹೇಳುವರು. (ಯಾವ ವಾಕ್ಯದಲ್ಲಿ ಯಾವ ಪದವಿಲ್ಲದಿದ್ದರೆ ವಾಕ್ಯಾರ್ಥವಾಗುದಿಲ್ಲವೋ ಆ ವಾಕ್ಯದಲ್ಲಿ ಆ ಪದ ಅಧ್ಯಾಹಾರ ಮಾಡಬೇಕು. ಯಾವ ಮಹಾವಾಕ್ಯದಲ್ಲಿ ಯಾವ ಅವಾಂತರ ವಾಕ್ಯವಿಲ್ಲದೇ ಮಹಾವಾಕ್ಯಾರ್ಥ ಸರಿಯಾಗಿ ಆಗುವದಿಲ್ಲವೋ ಆ ಮಹಾವಾಕ್ಯದಲ್ಲಿ ಆ ಅವಾಂತರವಾಕ್ಯ ಅಧ್ಯಾಹಾರ ಮಾಡಬೇಕು ಪದ, ವಾಕ್ಯಗಳಿಲ್ಲದೆ ಅರ್ಥವಾಗುತ್ತಿದ್ದರೆ ಅಧ್ಯಾಹಾರ ಮಾಡಬಾರದು ಎಂದು 'ಯತ್ರಾನವಸರೋ' ಎಂಬ ವಾಕ್ಯದ ಅರ್ಥ).

**... ತಾತ್ಪರ್ಯ ...**

**ಕಾರ್ಯಕಾರಣರೂಪೇ ತದ್ವಶತ್ವಾಪೇಕ್ಷಯಾ ಸಾಕ್ಷಾತ್ಸ್ವರೂಪಾಪೇಕ್ಷಯಾ ಸ್ವರೂಪಾದನ್ಯದ್ರೂಪಂ ನ ॥**

**ಸದಸತೀ** ಮೂರ್ತಾಮೂರ್ತಗಳು **ಕಾರ್ಯಕಾರಣರೂಪೇ** ಕಾರ್ಯಕಾರಣಾತ್ಮಕ ಪ್ರಪಂಚವು **ತದ್ವಶತ್ವಾಪೇಕ್ಷಯಾ** ಶ್ರೀಹರಿಯ ಅಧೀನವಾದುದರಿಂದ ಅವನ ರೂಪಗಳೆಂದು ಹೇಳಲ್ಪಡುವವು **ನ ತು ಸಾಕ್ಷಾತ್ ಸ್ವರೂಪಾಪೇಕ್ಷಯಾ** ಸಾಕ್ಷಾತ್ ಎಂಬುದನ್ನು ಸ್ವರೂಪಾತ್ ಎಂಬಲ್ಲಿಯೂ ಅನ್ವಯಿಸಬೇಕು. ಸಾಕ್ಷಾತ್ ಸ್ವರೂಪವೆಂದಲ್ಲ. ಸಾಕ್ಷಾತ್ ಸ್ವರೂಪವೆಂದರೆ ಮೂಲರೂಪ **ತದಪೇಕ್ಷಯಾ** ಮೂಲರೂಪದಿಂದ 'ಪೂರ್ಣಮದಃ ಪೂರ್ಣಮಿದಂ' ಎಂದಿರುವದರಿಂದ **ಸಾಕ್ಷಾತ್ ಸ್ವರೂಪಾತ್** ಮೂಲರೂಪದಿಂದ ಅಭಿನ್ನವಾದ ಮತ್ಸ್ಯಾದಿಗಳಿಂದ **ಅನ್ಯತ್** ಭಿನ್ನವಾದ ಸದಸದಾತ್ಮಕವಾದುದು ನ ಸ್ವರೂಪವಲ್ಲ. ಸಾಕ್ಷಾತ್ ಸ್ವರೂಪಾಪೇಕ್ಷಯಾ ಎಂಬಲ್ಲಿ ಸ್ವರೂಪಪದವು ಭಾವಪ್ರಧಾನವು **ಯತಃ** ಯಾವ ಕಾರಣ ಸಾಕ್ಷಾತ್ ಸ್ವರೂಪತ್ವ ಇರುವ **ಸ್ವರೂಪಾತ್ ಮತ್ಸ್ಯಾದೇಃ ಅನ್ಯತ್** ಮತ್ಸ್ಯಾದಿಗಳಿಂದ ಭಿನ್ನವಾದ ಸ್ವರೂಪವು ಶ್ರೀಹರಿಗೆ ನ ಇಲ್ಲ ಕಾರಣ ಕಾರ್ಯಕಾರಣಗಳು ಅವನ ವಶವಾದುದರಿಂದ ಅವನ ರೂಪಗಳು.

ಅವನ ಅಧೀನವಾದುದರಿಂದಲೇ ಏಕೆ ಅವನ ರೂಪವೆನ್ನಬೇಕು ಅವನಿಂದ ಅಭಿನ್ನವಾದುದರಿಂದೇಕಲ್ಲ ಎಂದರೆ ಹೇಳುವರು **ಸಾಕ್ಷಾತ್** ಎಂದು. ಅವನ ರೂಪಾಪೇಕ್ಷಯಾ **ಅನ್ಯತ್** ಭಿನ್ನವಾದ **ರೂಪಂ** ಪ್ರಾಕೃತರೂಪವು ಜೀವರಿಗೆ ದೇಹವಿದ್ದಂತೆ ನ ಇರುವದಿಲ್ಲ ಹಾಗಾದರೆ ಈ ಜಗತ್ತೇ ಅವನಿಗೆ ದೇಹವಿದ್ದಂತೆ ಆಗಲಿ

ಎಂದರೆ ಅಸ್ವರೂಪಾತ್ ಎಂದಿರುವರು. ಜಗತ್ತು ಅವನ ಸ್ವರೂಪವಲ್ಲದ್ದರಿಂದ ಅವನ ವಶವಾದುದರಿಂದಲೇ ಅವನ ರೂಪವೆನಿಸುವದು. ಮತ್ಸ್ಯಾದಿಗಳಂತಲ್ಲ ಪ್ರತಿಮೆಗಳಂತೆ ಎಂದು ಭಾವ.

**ಮೂಲದಲ್ಲಿಯ ಸತ್ಯಧರ್ಮರ ವಿಶೇಷಾರ್ಥಗಳು.**

'ಬೀಜಾಂಕುರಾವಿವ' ಎಂಬಲ್ಲಿ ಪ್ರಸಿದ್ಧ ಬೀಜಾಂಕುರಗಳಂತಲ್ಲ. ಕಿಂತು ವ್ಯಂಜಕಗಳಾದ್ದರಿಂದ ಬೀಜ ಎಂದರೆ ನೀರು ಮೊದಲಾದವು ಮತ್ತು ಅಂಕುರ ಇವುಗಳಂತೆ ನಿಮಿತ್ತನಾಗಿ ನೀನು ಕಾರ್ಯವಾಗಿ ಜಗತ್ತು ಎಂದು ನಿದರ್ಶನದ ವಿವೇಕ ಪ್ರದರ್ಶನವನ್ನು ಚಕಾರದಿಂದ ವ್ಯಾಸರು ಸೂಚಿಸಿರುವರು. (ಅಂದರೆ ಉಪಾದಾನ ಉಪಾದೇಯ ಭಾವದಲ್ಲಿ ನಿಮಿತ್ತಕಾರಣಕಾರ್ಯಭಾವವನ್ನು ಹೇಳಿದೆ ಎಂದು ಭಾವ) ಆದ್ದರಿಂದ ಅನ್ಯತ್ ಅನ್ಯೇ ಎಂದು ತ್ವದ್ವಶತ್ವಾತ್ ಎಂಬ ತಾತ್ಪರ್ಯಕ್ಕೆ ಪೀಠಿಕೆ ಇದು ಎಂದು ತಿಳಿಯಬೇಕು. ಅವು ಏಕೆ ಭಿನ್ನವಾದವೂ ಎಂದರೆ ಇವನು ಭಿನ್ನರೂಪ ರಹಿತನಾದ್ದರಿಂದ ಎಂದು ಅರೂಪಕಸ್ಯ ಎಂದಿರುವರು. ಈ ಭೇದವನ್ನು ಸ್ಪಷ್ಟವಾಗಿ ತಿಳಿಸುವ ಗ್ರಂಥಕಾರರ ಮಾತಿನಂತೆ ಪ್ರೇಕ್ಷಾವಂತರ ಪ್ರೇಕ್ಷಣವೂ(ಪ್ರತ್ಯಕ್ಷ) ಪ್ರಮಾಣವೆಂದು ಹೇಳುವರು ಯುಕ್ತ ಮುಂತಾಗಿ. **ಉಭಯತ್ರ** ಕಾರ್ಯಕಾರಣ ಪ್ರಪಂಚದಲ್ಲಿ **ತ್ವಾಂ** ನಿನ್ನನ್ನು **ವಿಚಿನ್ವತೇ** ಹುಡುಕುವರು ಕಾಣುವರು ಎಂಬ ಮಾತಿನಿಂದ ಆಧಾರಾಧೇಯಭಾವ ಹೇಳುವದರಿಂದ ಭೇದವು ಬೋಧಿತವಾಗುವದು. ಇಲ್ಲವಾದರೆ 'ಉಭಯಂ ರೂಪಂ ವಿಚಿನ್ವತೇ' ಎನ್ನುತ್ತಿದ್ದರು. 'ಸಮಕ್ಷಂ' ಎಂಬುದರಿಂದ ಪ್ರತ್ಯಕ್ಷವನ್ನು ಸ್ವೀಕರಿಸಬೇಕು. ಅವರ ಪ್ರತ್ಯಕ್ಷ ಅವಿಶ್ವಸನೀಯ ಎಂದರೆ ಹೇಳುವರು. 'ಯುಕ್ತಾ' ಎಂದು. ನೋಡುವವರು ಮನೋಯೋಗಿಗಳು, ಉಪಾಯಜ್ಞರು, ಶೋಭನರು ಎಂದರ್ಥ. ಕರ್ಮನಿರ್ಣಯಟೀಕಾಟಿಪ್ಪಣಿಗಳಲ್ಲಿ 'ಯುಕ್ತಂ ಶೋಭನಂ ಯತಾಹುಃ ಭಿಕ್ಷುಃ ಬಾಲಕ್ರೀಡಾವಾಸುದೇವಸ್ಯ ಯುಕ್ತಾ ಇತಿ' ಎಂದು ಹೇಳಿರುವರು. ಭೇದಾನುಮೋದಕ ದೃಷ್ಟಾಂತ ಹೇಳುವರು. 'ಯೋಗೇನ ವಹ್ನಿಮಿವ ದಾರುಷು' ಎಂದು. ಹೇಗೆ ಕಟ್ಟಿಗೆಯಲ್ಲಿ ಮಥನದಿಂದ ಅಗ್ನಿಯು ತೋರುವುದೋ, ಹೇಗೆ **ಅನ್ಯತಃ** ಕಡಿಯದೇ ವಹ್ನಿಯು ತೋರುವದಿಲ್ಲ. ಆದ್ದರಿಂದ ವಹ್ನಿ-ಕಾಷ್ಠಗಳು ಬೇರೆ. ಅದರಂತೆ ಮೂರ್ತಾಮೂರ್ತಗಳಲ್ಲಿ ವಿಮರ್ಶಮಾಡಿದಾಗ ಕಾಣುವ ಹರಿಯೂ ಅವುಗಳಿಂದ ಬೇರೆಯೇ ಎಂದು ವಿಶೇಷ ತಿಳಿಸಿರುವರು. ।।೪೭।।

ನಿನ್ನ ಅಧೀನವಾದುದರಿಂದ ಸದಸತ್‌ಗಳು ನಿನ್ನ ರೂಪಗಳೆಂದು ಸಮ್ಮುಗ್ಧವಾಗಿ ಹೇಳಿದ್ದನ್ನು ಈಗ ವಿಶದವಾಗಿ ಹೇಳುವರು-

ಕಾರ್ಯಕಾರಣಗಳಾವವು ಎಂದರೆ ಹೇಳುತ್ತಾರೆ. ಅವುಗಳಿಗೆ ಸತ್ತಾಪ್ರದನಾದ್ದರಿಂದ ಅವುಗಳು ಇವನ ವಶಗಳಾದ್ದರಿಂದಲೂ ಇವನ ಪ್ರತಿಮೆಗಳೆಂದು ಅಭಿಪ್ರಾಯದಿಂದ ಹೇಳುವರು-

**ತ್ವಂ ವಾಯುರಗ್ನಿರವನಿರ್ವಿಯದಂಬುಮಾತ್ರಾಃ**
**ಪ್ರಾಣೇಂದ್ರಿಯಾಣಿ ಹೃದಯಂ ಚಿದನುಗ್ರಹಶ್ಚ ।**
**ಸರ್ವಂ ತ್ವಮೇವ ಸಗುಣೋ ವಿಗುಣಶ್ಚ ಭೂಮನ್**
**ನಾನ್ಯತ್ತ್ವದಸ್ತ್ಯಪಿ ಮನೋವಚಸಾ ನಿರುಕ್ತಮ್ ॥೪೮॥**

**ಹೇ ಭೂಮನ್** ಪೂರ್ಣನೇ **ವಾಯುಃ** ಗಾಳಿಯು **ತ್ವಂ** ನಿನ್ನ ಅಧೀನವು **ಅಗ್ನಿಃ** ಬೆಂಕಿಯು **ತ್ವಂ** ನಿನ್ನ ಅಧೀನವು **ಅಂಬು** ನೀರು **ತ್ವಂ** ನಿನ್ನ ಅಧೀನವು **ಅವನಿಃ** ಭೂಮಿಯು **ತ್ವಂ** ನಿನ್ನ ಅಧೀನವು **ವಿಯತ್** ಆಕಾಶವು **ತ್ವಂ** ನಿನ್ನ ಅಧೀನವು. **ಮಾತ್ರಾಃ** ಶಬ್ದ, ಸ್ಪರ್ಶ, ರೂಪ, ರಸ ಗಂಧಗಳೆಂಬ ಮಾತ್ರಾಗಳು (ಭೂತೋಪಾಚಯಕಗಳು) **ತ್ವಂ** ನಿನ್ನ ಅಧೀನಗಳು **ಪ್ರಾಣ** ಪಂಚಪ್ರಾಣಗಳು **ಇಂದ್ರಿಯಾಣಿ** ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ **ತ್ವಂ** ನಿನ್ನ ಅಧೀನಗಳು **ಹೃದಯಂ** ಮನಸ್ಸು **ತ್ವಂ** ನಿನ್ನ ಅಧೀನ **ಚ** ಮತ್ತು **ತದನುಗ್ರಹಃ** ಅನುಗ್ರಹ ಯೋಗ್ಯನಾದ ಉತ್ತಮಜೀವ (ಎಲ್ಲ ಜೀವರೂ) **ತ್ವಂ** ನಿನ್ನ ಅಧೀನರು **ಸಗುಣಃ** ಪ್ರಕೃತಿಬದ್ಧನಾದ ಸಂಸಾರಿಯು ಶುಕ್ಲಾದಿಗುಣವುಳ್ಳದೇಹವು **ವಿಗುಣಃ ಚ** ಮುಕ್ತನೂ ಉತ್ಪನ್ನವಾದ ನಂತರ ಕ್ಷಣವುಳ್ಳ ಪದಾರ್ಥಗಳು **ಸರ್ವಂ** ಪ್ರಕೃತಿಯೇ ಮೊದಲಾದ ಎಲ್ಲವೂ **ತ್ವಂ** ನಿನ್ನ ಅಧೀನಗಳೇ 'ಯದಧೀನಾ ಯಸ್ಯ ಸತ್ತಾ ತತ್ ತದಿತ್ಯೇವ ಭಣ್ಯತೇ' ಎಂಬ ನ್ಯಾಯದಿಂದ ಪರಮಾತ್ಮನ ಅಧೀನವಾದ್ದರಿಂದ ಪರಮಾತ್ಮನೇ ಎಂದಿರುವರು. **ತ್ವಂ** ನೀನು **ಸಗುಣಃ** ಅನಂತಜ್ಞಾನಾನಂದಾದಿ ಕಲ್ಯಾಣಗುಣವಿಶಿಷ್ಟನು **ವಿಗುಣಃ** ಸತ್ವಾದಿ ಗುಣರಹಿತನು ಎಂದೂ ಅರ್ಥ. 'ಯಸ್ಯ ಪೃಥಿವೀ ಶರೀರಂ' ಎಂಬ ಅಂತರ್ಯಾಮಿ ಬ್ರಾಹ್ಮಣದಂತೆ ಪೃಥಿವ್ಯಾದಿಗಳು ಅವನ ಶರೀರ (ಪ್ರತಿಮೆ) ಎಂದರ್ಥ. **ಮನೋವಚಸಾ ನಿರುಕ್ತಂ** ಮನಸ್ಸು ಮಾತುಗಳಿಂದ ತಿಳಿಯಲ್ಪಡುವ **ಅಪಿ** ಎಲ್ಲವೂ **ತ್ವದನ್ಯತ್** ನಿನ್ನ ಅಧೀನವಾಗದಿರುವದು **ನ ಅಸಿ** ಜಗತ್ತು ಇಲ್ಲ ಪರತಂತ್ರವೆಂದು ಭಾವ. ಅನುಗೃಹ್ಯತೇ ಇತಿ ಅನುಗ್ರಹಃ ಚಿತ್ ಚಾಸೌ ಅನುಗ್ರಹಶ್ಚ ಚಿದನುಗ್ರಹಃ ಎಂದು ವಿಗ್ರಹ.

ವಿಶೇಷ :- 'ಆತ್ಮನ ಆಕಾಶಸ್ಸಂಭೂತಃ' ಎಂಬ ಶ್ರುತಿಯಲ್ಲಿ ತಿಳಿಸಿದ ಕ್ರಮದಿಂದ ಹೇಳದೆ ಅವ್ಯವಸ್ಥೆಯಿಂದ ಹೇಳಿದುದರಿಂದ ಅವುಗಳಲ್ಲಿರುವ ಪರಸ್ಪರ ಕಾರ್ಯಕಾರಣಭಾವ ಭಗವಂತನ ಅಧೀನವೆಂದು ಸೂಚಿಸಿರುವರು ವ್ಯಾಸರು.

ಪಂಚಭೂತಗಳು ಜೀವನು (ಚಿದನುಗ್ರಹಃ) **ಸಗುಣಃ** ಸತ್ವಾದಿಗುಣಸಹಿತನಾದ ಸಂಸಾರಿ **ವಿಗುಣ** ಮುಕ್ತ ಈ ಎಲ್ಲವೂ **ವಸ್ತುತಃ ತ್ವಂ** ನಿನ್ನಿಂದ ಭಿನ್ನವೇ ಅದಕ್ಕೆ ಕಾರಣ **ಮನೋವಚಸಾ ನಿರುಕ್ತಂ** ಮನಸ್ಸು ಮಾತುಗಳಿಂದ ತಿಳಿಯಲ್ಪಡುವವು ನೀನಾದರೂ ಅನಿರುಕ್ತನು. ತ್ವತ್ ತ್ವತ್ತಃ ಅನ್ಯನ್ನಾಸ್ತೀ ಇತ್ಯುಚ್ಯತೇ ನಿನ್ನ ಅಧೀನವಾಗದೇ ಇಲ್ಲವೆಂದರ್ಥ. 'ತ್ವಂ ತ್ವಂ' ಎಂದು ಎರಡು ಸಲ ಹೇಳುವ ವ್ಯಾಸರಿಗೆ ಯುಷ್ಮಚ್ಛಬ್ದ ಪ್ರಕೃತಿಕವಾದುದು ಒಂದು. ಇನ್ನೊಂದು 'ತ್ವತ್ವಾವನಪರ್ಯಾಯೌ' ಎಂದು ಹೇಳಿದ ಅನ್ಯವಾಚಿ ತ್ವ ಶಬ್ದ ಎಂದು ಅಭಿಪ್ರಾಯವೆಂದು ತಿಳಿಯಬೇಕು. ಇಲ್ಲವಾದರೆ ಒಂದೇ ಸಾಕಾಗಿರುವಾಗ ಏನೋ ವ್ಯಸನದಿಂದ ವ್ಯಾಸರು ನಿಬಂಧನೆ ಮಾಡಿರುವರು ಎಂದು ಹೇಳಬೇಕಾಗುವದು. ಹಾಗಲ್ಲ ಸರ್ವತ್ರ ಅನ್ವಯ ತಿಳಿಸಲು ಎರಡು ಸಲ ಹೇಳಿರುವರು ಎನ್ನಲಾಗುವದಿಲ್ಲ. ತ್ವದನ್ಯನ್ನಾಸ್ತಿ ಎಂಬ ಮುಂದಿನ ಮಾತಿನಿಂದಲೇ ಎರಡು ಸಲ ಹೇಳದೇ ಹೋದರೂ ಎಲ್ಲ ಕಡೆಗೆ ಅನ್ವಯ ತಿಳಿಯುವದು. 'ತ್ವಂ ವಾಯುಃ' ಮುಂತಾದವುಗಳ ಅರ್ಥ ಈ ಆನುಪೂರ್ವಿಮಾತ್ರ ಇಲ್ಲದೇ 'ಯಃ ಪೃಥಿವ್ಯಾಂ ತಿಷ್ಠನ್' ಮುಂತಾದುದರಿಂದ ಇಲ್ಲಿ ಹೇಳದಿರುವ ಅರ್ಥಗಳೊಡನೆ 'ಅರುಣರೂಪರರಾಮ' ಎಂಬಲ್ಲಿವರೆಗಿನ ಬೃಹದಾರಣ್ಯಕ ಅಂತರ್ಯಾಮಿಬ್ರಾಹ್ಮಣ ಅದರ ಭಾಷ್ಯದಲ್ಲಿ ಸ್ಪಷ್ಟವಾಗಿ ಹೇಳಿರುವದರಿಂದ ಮತ್ತು ಹಿಂದಿನ ಶ್ಲೋಕದಲ್ಲಿ ಒಂದೇ ವಿಭಕ್ತಿಗಳಿಗೆ ತದ್ವಶತ್ವಾತ್ ಎಂದು ಗತಿಯನ್ನು ಹೇಳಿದ್ದರಿಂದಲೂ ಇಲ್ಲಿ ಮತ್ತೆ ಆಚಾರ್ಯರು ಹೇಳಲಿಲ್ಲ. ಅರ್ಥ ಸ್ಪಷ್ಟವಾಗಿಯೇ ಹೇಳಿದ್ದರಿಂದ ಎಂದು ತಿಳಿಯಬೇಕು. ।।೪೮।।

ಆ ಆ ವಸ್ತುಗಳಲ್ಲಿರುವ ಭಗವಂತನನ್ನು ಆ ಆ ವಸ್ತುಗಳಲ್ಲಿರುವ ಹೊರಗಿರುವ ಇಂದ್ರಾದಿಗಳು ಸಂಪೂರ್ಣವಾಗಿ ತಿಳಿಯಲಾರರು. ಆದ್ದರಿಂದ ನಿನ್ನ ಉಪಾಸನೆ ಒಂದೇ ಗತಿಯಾಗಿದೆ ಆದ್ದರಿಂದ ಅದನ್ನೇ ಬಹುಜನರು ದೊಡ್ಡದೆಂದು ತಿಳಿದು ಮಾಡುವರು ಎಂದು ಹೇಳುವರು.

**ನೈತೇ ಗುಣಾನುಗುಣಿನೋ ಮಹದಾದಯೋ ಯೇ**
**ಸರ್ವೇ ಮನಃಪ್ರಭೃತಯಃ ಸಹದೇವಮರ್ತ್ಯಾಃ ।**
**ಆದ್ಯಂತವಂತ ಉರುಗಾಯ ವಿದಂತಿ ಹಿ ತ್ವಾ-**
**ಮೇವಂ ವಿಮೃಶ್ಯ ಸುಧಿಯೋ ವಿರಮಂತಿ ಶಬ್ದಾತ್ ।।೪೯।।**

**ಹೇ ಉರುಗಾಯ** ಉತ್ತಮರಾದ ಬ್ರಹ್ಮಾದಿಗಳಿಂದ ಸ್ತುತ್ಯನಾದ ಅಥವಾ **ಉರು** ಉತ್ತಮನೆಂದೆ ಹೇಳಲ್ಪಡುವ ಶ್ರೀಹರಿಯೇ **ಏತೇ** ಈ **ಗುಣಾಃ** ಸತ್ವಾದಿಗುಣಗಳ ಅಭಿಮಾನಿಗಳು **ಗುಣಿನಃ** ಗುಣವಿಕಾರಗಳಾದ **ಮಹದಾದಯಃ** ಮಹತತ್ವ

ಮೊದಲಾದವುಗಳಿಗೆ ಅಭಿಮಾನಿಗಳಾದ ಬ್ರಹ್ಮಾದಿಗಳು **ಮನಃ ಪ್ರಭೃತಯಃ** ಮನಸ್ಸಿಗೆ ಅಭಿಮಾನಿಗಳಾದ ರುದ್ರಚಂದ್ರಾದಿಗಳು **ಸಹದೇವಮರ್ತ್ಯಾಃ** ಮೂಲರೂಪದಿಂದ ಇರುವ ತತ್ವಾಭಿಮಾನಿಗಳಿಂದ ಭಿನ್ನರಾದ ದೇಹಸಹಿತರಾದ ಇಂದ್ರಾದಿಗಳು ಮನುಷ್ಯರೂ ಇವರಿಂದ ಸಹಿತರಾದ **ಸರ್ವೇ** ಎಲ್ಲರೂ **ತ್ವಾಂ** ನಿನ್ನನ್ನು **ನ ವಿಂದಂತಿ** ಸಾಕಲ್ಯೇನ ತಿಳಿಯುವದಿಲ್ಲ ಮತ್ತು **ಆದ್ಯಂತವಂತಃ** ಉತ್ಪತ್ತಿನಾಶವುಳ್ಳವರು **ಹಿ** ಇದು ಶಾಸ್ತ್ರಸಿದ್ಧ **ಸುಧಿಯಃ** ಶಾಸ್ತ್ರಾರ್ಥನಿಶ್ಚಯವುಳ್ಳ ಜ್ಞಾನಿಗಳು **ಶಬ್ದಾತ್** ವೇದಾದಿಸಚ್ಛಾಸ್ತ್ರಗಳಿಂದ **ಏವಂ** ಮೇಲೆ ಹೇಳಿದಂತೆ ಲಕ್ಷ್ಮೀಬ್ರಹ್ಮಾದಿಗಳಿಂದ **ಸಾಕಲ್ಯೇನ** ತಿಳಿಯಲಾಗದ ಮಹಿಮೆಯುಳ್ಳವನೆಂದು ನಿನ್ನನ್ನು **ವಿಮೃಶ್ಯ** ವಿಚಾರಮಾಡಿ ಉಪಾಸಿಸಿ ನಿನ್ನ ಅನುಗ್ರಹದಿಂದ ನಿನ್ನನ್ನು ಅಪರೋಕ್ಷೀಕರಿಸಿಕೊಂಡು **ವಿರಮಂತಿ** ಸಂಸಾರದಿಂದ ಮುಕ್ತರಾಗುವರು. ಸುಧಿಯಃ ಗುಣಾಃ ಎಂದೂ ಅನ್ವಯ ಮಾಡಬಹುದು. ಯೇ ಗುಣಾದಯಃ ಆದ್ಯಂತವಂತಃ ತೇಷಾಂ **ಸುಧಿಯಃ** **ಶಾಸ್ತ್ರ** ನಿಶ್ಚಿತಾರ್ಥ ವಿಷಯಕ **ಸುಬುದ್ಧಯಃ** ಬುದ್ಧಿಯುಳ್ಳವರು **ಶಬ್ದಾದ್ ವಿರಮಂತಿ** ವೇದಂ ವಿಚಾರ್ಯ **ವಿರಮಂತಿ** ಸಂಪೂರ್ಣ ತಿಳಿಯುವರು. ಅಶಕ್ಯವಾದುದರಿಂದ ವಿಶೇಷ ವಿವಿತ್ಸಾದಿಂದ ವಿರಮಿಸುವರು. ವಿಮೃಶ್ಯಸುಧಿಯಃ ಎಂಬುದು ಒಂದೇಪದ. ವಿಮೃಶ್ಯಾಃ ಉಪದೇಶತಯಾ ವಿಚಾರ್ಯಾಃ ಸುಧಿಯಃ ಯೇಷಾಂ ತೇ ತಥಾ ಉಪದೇಶಕನೆಂದು ಆ ಉಪದೇಶಕ ನೀನೆ ಎಂದು ಹಿ ಶಬ್ದದಿಂದ ಹೇಳುವರು. **ನು** ನಿಶ್ಚಯ. ॥೪೯॥

ನಿನ್ನ ದಾಸ್ಯಯೋಗವನ್ನು ಕೊಡೆಂದು ಪ್ರಾರ್ಥಿಸಿದ್ದನ್ನೇ ಕೊನೆಗೆ ಮತ್ತೆ ಪ್ರಾರ್ಥಿಸಿ ಉಪಸಂಹಾರ ಮಾಡುವರು-

**ತತ್ತ್ವೇ ಮನೋ ದರ್ಶನೇ ದೃಗಪಿ ಸ್ತುತೌ ಚ**
**ವಾಕ್ ಕರ್ಮಣಿ ಹ್ಯಪಿ ಕರೌ ಶ್ರವಣಂ ಕಥಾಯಾಮ್ ।**
**ಸಂಸೇವಯಾ ತ್ವಯಿ ವಿನೇತಿ ಷಡಂಗಯಾ ಕಿಂ**
**ಭಕ್ತಿಂ ಜನಃ ಪರಮಹಂಸಗತೌ ಲಭೇತ ॥೫೦॥**

**ತತ್ತ್ವೇ** ಇತರರಿಗೆ ರಹಸ್ಯನಾದ ಧ್ಯಾನಮಾಡಬೇಕಾದ ಗುಣವಿಶಿಷ್ಟವಾದ ನಿನ್ನಲ್ಲಿ (ರೂಪದಲ್ಲಿ) **ಮನಃ** ಮನಸ್ಸು ಅಂದರೆ ಮನಸ್ಸಿನಿಂದ **ದರ್ಶನೇ** ನಿನ್ನ ಪ್ರತಿಮೆಯನ್ನು ನೋಡುವದರಲ್ಲಿ **ದೃಗಪಿ** ಕಣ್ಣುಗಳೂ **ಸ್ತುತೌ** ಸ್ತೋತ್ರ ಮಾಡುವಲ್ಲಿ **ವಾಕ್** ವಾಗೀಂದ್ರಿಯವು **ಕರ್ಮಣಿ** ನಿನ್ನ ಪೂಜೆ ಮಾಡುವಲ್ಲಿ **ಕರೌ** ಕೈಗಳು **ಕಥಾಯಾಂ** ನಿನ್ನ ಕಥೆ ಕೇಳುವಲ್ಲಿ **ಶ್ರವಣಂ** ಕಿವಿಯು **ಅಪಿ** ನಿನ್ನ ಮಂದಿರಗಳಿಗೆ ಹೋಗುವದರಲ್ಲಿ **ಚರಣೌ** ಕಾಲಗಳು **ಏವಂ** ಈ ರೀತಿ **ಷಡಂಗಯಾ ಸೇವಯಾ ವಿನಾ** ಆರು ಅಂಗಗಳಿಂದ

ಸೇವಿಸದ ಹೊರತು **ಜನಃ** ಅಧಿಕಾರಿಯು **ಪರಮಹಂಸಗತೌ** ಸಂನ್ಯಾಸಿಗಳಿಗೆ ಆಶ್ರಯನಾದ ಪ್ರಾಪ್ಯನಾದ ಪರಮಹಂಸಾನಾಂ ಗತಿಃ ಯೇನ ತಸ್ಮಿನ್ ಸನ್ಯಾಸಿಗಳಿಗೆ ಮೋಕ್ಷಪ್ರದನಾದ **ತ್ವಯಿ** ನಿನ್ನಲ್ಲಿ **ಭಕ್ತಿಂ ಲಭೇತ ಕಿಂ** ಭಕ್ತಿಯನ್ನು ಹೊಂದುವನೇನು ಹೊಂದಲಾರನೆಂದರ್ಥ. ಆದ್ದರಿಂದ ಶ್ರೀಸತ್ಯಸಂತುಷ್ಠತೀರ್ಥಾಂರ್ಗತ ಶ್ರೀರಾಮಚಂದ್ರಃ ಪ್ರೀಯತಾಂ ಎಂಬ ಉಪಾಸನೆಯು ಎಲ್ಲ ಅಭೀಷ್ಟಸಾಧಕವು ಆದ್ದರಿಂದ ಅದು ಅಧಿಕವಾದುದು ಆದರೂ ನಿನ್ನ ದಾಸರ ಸಹವಾಸಾದಿಗಳಿಲ್ಲದೇ ಸಾಧ್ಯವಿಲ್ಲ. ಅದೇ ಸಾಧನವು ಕಾರಣ ನಿನ್ನ ದಾಸರ ದಾಸ್ಯ ಇರುವವರಿಗೆ ಆಗುವದಾದ್ದರಿಂದ ದಾಸ್ಯವನ್ನು ಕೊಡೆಂದು ಪ್ರಕರಣವನ್ನು ಉಪಸಂಹಾರ ಮಾಡಿದರು ಎಂದ ತಿಳಿಯಬೇಕು. **ಹೇ ಪರವು** ಸರ್ವೋತ್ತಮನೇ ಹಂಸಕಹಂಸಗಯೋಃ ತಂ ಅಗತಿಃ ಯಯೋಸ್ತೌ ಹಂಸಗತೌ ಪಾದೌ ಅಂದರೆ ಹಂಸದಂತೆ ಶಬ್ದ ಮಾಡುವ ಪಾದಾಭರಣವುಳ್ಳ ಪಾದಗಳು **ಕರ್ಮಣಿ** ಸಂಚಾರರೂಪವಾದ ಕ್ಷೇತ್ರಯಾತ್ರೆಯಲ್ಲಿ ಎಂದರ್ಥ ಮಾಡಿದಾಗ ಉಪಲಕ್ಷಣಮಾಡದೇ ಚರಣಸಂಚಾರವೆಂದರ್ಥವಾಗುವದು ಎಂದು ಅನುಸಂಧಾನ ಮಾಡಬೇಕು. 'ತಕಾರಶ್ಚಾಗತೇ ಚೋರೇ' ಎಂದು ಏಕಾಕ್ಷರರತ್ನಮಾಲಾ ಇದೆ. ಹಂಸ ಇವ ಗತಂ ಯಯೋಃ ತೌ ಹಂಸಗತೌ ಎಂದರೆ ಪಾದಗಳೂ ಎಂದಾದರೂ ಮಾಡಬಹುದು **ಹೇ ಪರಮ** ಹರಿಯೇ **ತ್ವಯಿ** ನಿನ್ನಲ್ಲಿ **ಇತಿ** ಈ ರೀತಿ **ಷಡಂಗಯಾ** ಆರು ಅಂಗಗಳಿಂದ **ಸಂಸೇವಯಾ ವಿನಾ** ಸೇವೆ ಇಲ್ಲದೆ **ಭಕ್ತಿಂ ವಿನಾ** ಭಕ್ತಿಯಿಲ್ಲದೇ ಹಾಗೂ **ಹಂಸಗತೌ** ಬ್ರಹ್ಮದೇವರಲ್ಲಿ(ಹಂಸವೇ ವಾಹನವಾಗಿವುಳ್ಳವರು)**ಭಕ್ತಿಂ ವಿನಾ** ಭಕ್ತಿಯಿಲ್ಲದೇ ಪರಮಹಂಸಗತೌ ಲಭೇತ ಕಿಂ ಎಂದು ಆವೃತ್ತಿ ಮಾಡಿ ಅನ್ವಯಿಸಬೇಕು. ಷಡಂಗಯಾ ಸಂಸೇವಯಾ ಚ ವಿನಾ ಭಕ್ತಿಂ ಚ ವಿನಾ ಸಃ ಜನಃ ಗತೌ ಪರಮಹಂ ಲಭೇತ ಕಿಂ ಅಂದರೆ ಸೇವೆ ಭಕ್ತಿಯಿಲ್ಲದೇ ಮೋಕ್ಷದಲ್ಲಿ ಮಹೋತ್ಸವವನ್ನು ಹೊಂದುವರೇನು ಎಂದರ್ಥ **ಜನಃ ಪರಂ** ಜನೋಲೋಕದ ಮೇಲಿರುವ **ಗತೌ** ಗಮ್ಯವಾದ ಸ್ಥಳದಲ್ಲಿ **ಮಹಂ** ಉತ್ಸವವನ್ನು ಹೊಂದುವನೇನು ಎಂದು **ಅಹಂ** ನಾನು **ಮನ್ಯೇ** ತಿಳಿಯುವೆ **ಸಗತೌ** ಸಾಧಕಲೋಕಗತಿಯಲ್ಲಿ ಎಂದೂ ಅರ್ಥ. 'ಸಃ ಸಾಧಕಃ ಇತಿ ವಿಶ್ವಃ' 'ಮಹ ಉದ್ಧವ ಉತ್ಸವಃ ಮಹಯಮಹಸಾ ಸಾರ್ಥಂ ಜನೋ ಲೋಕಾಂತರೇ'ಎಂದು ಅಮರದ್ವಿರೂಪ ಕೋಶಗಳಿವೆ ॥೫೦॥

ಮಗುವೇ ಯಾವ ವಿಷಯಗಳನ್ನೂ ಅಪೇಕ್ಷಿಸದೇ ಅವುಗಳಿಂದ ಏನು ಅಪಕಾರವನ್ನು ಕಂಡಿರುವಿ ಎಂದರೆ ಹೇಳುವರು-

'ದೇವಾಸುರೋ ವಾ' ಮುಂತಾಗಿ ಮೊದಲಿಗೆ ಪ್ರಹ್ಲಾದನು ಭಗವಂತನನ್ನು ಪ್ರೀತಿಗೊಳಿಸಲು ಜಾತಿ ಪ್ರಯೋಜಕವಲ್ಲ. ಭಕ್ತಿಯೇ ಪ್ರಯೋಜಕವೆಂದೇನು

ಹೇಳಿದ್ದನೋ ಅದನ್ನು ನರಸಿಂಹನು ಲಾಲಿಸಿದನೋ ಅಥವಾ ದಿತಿಯ ಮಗನ ಸಾಕ್ಷಾತ್ ಮಗನೆಂದು ಮತ್ತೆ ಕೋಪವನ್ನೇ ಮಾಡಿದನೇ ಎಂಬ ಧರ್ಮರಾಜನ ಸಂಶಯವನ್ನು ನಾರದರು ದೂರೀಕರಿಸುವರು.

**ನಾರದ ಉವಾಚ**

**ಏತಾವದ್ವರ್ಣಿತಗುಣೋ ಭಕ್ತ್ಯಾ ಭಕ್ತೇನ ನಿರ್ಗುಣಃ ।**
**ಪ್ರಹ್ಲಾದಂ ಪ್ರಣತಂ ಪ್ರೀತೋ ಗತಮನ್ಯುರಭಾಷತ ॥೫೧॥**

ಆ ಜೀವನ ಯೋಗ್ಯತಾನುಸಾರ ಭಕ್ತಿಯಿಂದ **ಭಕ್ತೇನ** ಸ್ವರೂಪತಃ ಭಕ್ತರಾದ ಪ್ರಹ್ಲಾದರಿಂದ **ಏತಾವತ್** ಅವರ ಯೋಗ್ಯತೆಗೆ ತಕ್ಕಂತೆ ಹಿಂದೆ ಹೇಳಿದಷ್ಟು **ವರ್ಣಿತಗುಣಃ** ಸ್ತುತಿಸಲ್ಪಟ್ಟ ಆನಂದಾದಿಗುಣಗಳುಳ್ಳ **ನಿರ್ಗುಣಃ** ಸತ್ವಾದಿಗುಣಹೀನನಾದ (ಕೋಪಪರಿಹಾರಕ್ಕೆ ಕಾರಣವಿದು) ಶ್ರೀಹರಿಯು **ಪ್ರೀತಃ ಸನ್** ಪ್ರೀತನಾಗಿ **ಗತಮನ್ಯುಃ** ಕೋಪವನ್ನು ಉಪಸಂಹಾರ ಮಾಡಿಕೊಂಡವನಾಗಿ **ಪ್ರಣತಂ** ಭಕ್ತಿಯಿಂದ ನಮಸ್ಕರಿಸಿದ **ಪ್ರಹ್ಲಾದಂ** ಪ್ರಹ್ಲಾದನನ್ನು ಕುರಿತು **ಅಭಾಷತ** ಮಾತನಾಡಿದನು. ತನ್ನ ಸ್ವಾಮಿಯು ಹೇಳಿದ್ದರಿಂದ ಸಿಟ್ಟು ಮಾಡುವದಾದರೆ ಅವನ ಆಜ್ಞೆಯಿಂದಲೇ ಸಮಾಧಾನ ವಾಗುವದು ಲೋಕದಲ್ಲಿ ಕಂಡಿದೆ. ಅವನಿಗೊಬ್ಬ ನಿಯಾಮಕನಿದ್ದರೆ ಆಗ ಅವನ ಆಜ್ಞೆಯಿಂದ ಸಿಟ್ಟು ಶಾಂತವಾಗಬಹುದಿತ್ತು ಎಂದರೆ ಹೇಳುವರು ನಿರ್ಗುಣಃ ಎಂದು. ಗುಣೇಭ್ಯೋ ನಿರ್ಗತಃ ನಿರ್ಗುಣಃ ಅಪ್ರಧಾನರಿಂದ ಹೊರಗಿದ್ದವನು ಅಂದರೆ ತಾನೇ ಮುಖ್ಯನೆಂದರ್ಥ. ಆದ್ದರಿಂದ ಬೇರೆಯವರಿಂದ ಶಾಂತನಾಗುವವನಲ್ಲ ತಾನೇ ಶಾಂತನಾಗಬೇಕಷ್ಟೇ ಎಂದು ಭಾವ. ಮೊದಲು ಪ್ರೀತನೆಂದು ಹೇಳಿ 'ಗತಮನ್ಯುಃ' ಎಂದು ಅನಂತರ ಹೇಳಿ ಕಾರ್ಯಾನುಸಾರ ಕೋಪ ಸ್ವೀಕರಿಸುವದೆ ಹೊರತು ಸ್ವಾಭಾವಿಕವಾಗಿ ಅಲ್ಲ ಎಂದು ತಿಳಿಸಿರುವರು. ಹಿಂದೆಯೇ 'ಯನ್ಮೇರ್ಪಿತ ಶಿರಸಿ ಪದ್ಮಕರಪ್ರಸಾದಃ' ಎಂಬುದರಿಂದ ಕೋಪರಾಹಿತ್ಯ ಹೇಳಿದಂತಾಗಿದೆ. ಯದ್ಯಪಿ ಆದರೂ ಅದು ಅವನಿಗೆ ಮಾತ್ರ ಅನುಭವದಿಂದ ತಿಳಿಯುವಂತಹುದು. ಹೇಳುವದರಿಂದ ಎಲ್ಲರಿಗೂ ತಿಳಿಯುವದು ಎಂದು 'ಗತಮನ್ಯುಃ' ಎಂದಿರುವರೆಂದು ತಿಳಿಯಬೇಕು. ॥೫೧॥

ಪ್ರೀತಿಯು ಆಂತರಂಗಿಕವಾದುದು ಅದು ಕಾರ್ಯದಿಂದ ಅನುಮೇಯವು ಕೋಪ ಹೋದುದು ಅದರ ಕಾರ್ಯದಿಂದಲೇ ತಿಳಿಯುವಂತಹದು. ಆ ಕಾರ್ಯವೇನೆಂದು ಹೇಳುವರು-

**ಶ್ರೀ ಭಗವಾನುವಾಚ**

**ಪ್ರಹ್ಲಾದ ಭದ್ರ ಭದ್ರಂ ತೇ ಪ್ರೀತೋಽಹಂ ತೇಽಸುರೋತ್ತಮ ।**
**ವರಂ ವೃಣೀಷ್ವಾಭಿಮತಂ ಕಾಮಪೂರೋಽಸ್ಮ್ಯಹಂ ನೃಣಾಮ್ ॥೫೨॥**

**ಹೇ ಭದ್ರ** ಸಾಧುವಾದ **ಪ್ರಹ್ಲಾದ** ಪ್ರಹ್ಲಾದನೇ **ತೇ** ನಿನಗೆ **ಮಂಗಲಂ ಭವತು** ಕಲ್ಯಾಣವಾಗಲಿ 'ಭದ್ರಂ ಸ್ಯಾನ್ಮಂಗಲೇ' ಎಂದು ವಿಶ್ವವಿದೆ. **ತೇ** ನಿನ್ನ ಮೇಲೆ **ಅಹಂ ಪ್ರೀತಃ** ನಾನು ಪ್ರೀತನಾಗಿರುವೆ. ಒಳ್ಳೆಯ ಜಾತಿಯಲ್ಲಿ ಜನಿಸಿದ ನಿನ್ನಲ್ಲಿ ದಯೆ ಮಾಡುವದೇನು ಅಚ್ಚರಿ ಎಂದರೆ ಹೇಳುವನು **ಅಸುರಸತ್ತಮ** ಅಸುರ ಶ್ರೇಷ್ಠನೇ ಇದರಿಂದ ಭಕ್ತಿಯೇ ಮುಖ್ಯ ಜಾತಿಯಲ್ಲವೆಂದು ನಿರ್ಣಯಿಸಿದನು. **ತೇ** ನಿನಗೆ **ಅಭಿಮತಂ** ಇಷ್ಟನಾದ **ವರಂ**(ಬೇಡಬೇಕಾದುದನ್ನು ಆ ವರವು ಅವರವಾಗಿರಬಾರದು ಎಂದೂ ಹೇಳುವರು. ವರ ಎಂದು ಆವೃತಿ ಮಾಡಿ ಉತ್ತಮನಾದ ಎಂದರ್ಥ. ಅಂದರೆ ಉತ್ತಮವಾದ) ವರವನ್ನು **ವೃಣೀಷ್ವ** ಕೇಳು ಎಂದು ಭಾವ. ಇದನ್ನೇ 'ವರೈರ್ಲೋಕಪ್ರಲೋಭನೈಃ' ಎಂದು ಮುಂದೆ ಹೇಳುವರು. ಇದರಿಂದ ವರಂ ಎಂಬ ಏಕವಚನ ಜಾತೌ ಎಂದು ಸೂಚಿತವಾಗುವದು **ಅಹಂ** ನಾನು **ನೃಣಾಂ** ಪ್ರಧಾನ ಪುರುಷನಾದ ದೇವಾದಿಗಳಿಗೆ **ಕಾಮಪೂರಃ** ಅಭೀಷ್ಟಗಳನ್ನು ಪೂರ್ಣಗೊಳಿಸುವವನು. ॥೫೨॥

ನನ್ನ ಪ್ರಸಾದ ನನ್ನ ದರ್ಶನದಿಂದ ತಾಪ ಕಳೆಯುವದು ಎಂದು ಹೇಳುವನು-

**ಮಾಮಪ್ರೀಣತ ಆಯುಷ್ಮನ್ ದರ್ಶನಂ ದುರ್ಲಭಂ ಹಿ ಮೇ ।**
**ದೃಷ್ಟ್ವಾ ಮಾಂ ನ ಪುನರ್ಜಂತುರಾತ್ಮಾನಂ ತಪ್ತುಮರ್ಹತಿ ॥೫೩॥**

**ಹೇ ಆಯುಷ್ಮನ್** ಚಿರಂಜೀವಿಯೇ **ಮಾಂ** ನನ್ನನ್ನು **ಅಪ್ರೀಣಯತಃ** ಸಂತೋಷ ಪಡಿಸದವನಿಗೆ **ಮೇ** ನನ್ನ **ದರ್ಶನಂ** ಸಾಕ್ಷಾತ್ಕಾರವು **ದುರ್ಲಭಂ** ದೊರೆಯಲಾರದು ನಿನ್ನ ದರ್ಶನಕ್ಕೆ ಇಷ್ಟೇ ಮಹತ್ವ ಎಂದರೆ ಹೇಳುವನು **ಮಾಂ ದೃಷ್ಟ್ವಾ** ನನ್ನನ್ನು ನೋಡಿ **ಪುನಃ** ಅನಂತರ **ಆತ್ಮಾನಂ** ತನ್ನನ್ನು **ತಪ್ತುಂ** ತಾಪಗೊಳಿಸಲು **ನ ಅರ್ಹತಿ** ಯೋಗ್ಯನಾಗಲಾರ ಎಂದರ್ಥ. 'ಆಯುಷ್ಮನ್' ಎಂದುದರಿಂದ ನಿನ್ನ ಆಯುಷ್ಯ ಉಳಿಸುವುದಕ್ಕಾಗಿಯೇ ಈ ಅವತಾರ ಎಂಬ ಪ್ರಯೋಜನವನ್ನು ಕಟಾಕ್ಷೀಕರಿಸುವನು **ಮಾಂ ಅಪ್ರೀಣತಃ** ನನ್ನನ್ನು ಸಂತೋಷ ಗೊಳಿಸದ ಹಿರಣ್ಯಕಶಿಪುವಿನ ದೆಶೆಯಿಂದ **ಆಯುಷ್ಮನ್** ಉಳಿದ ಆಯುಷ್ಯವುಳ್ಳವನೇ ಎಂದರ್ಥ. ॥೫೩॥

ನಿನ್ನ ಪ್ರೀಣನ ಆವಶ್ಯಕವೆಂದು ಹೇಳಿದಾಗ ಲೋಕದಲ್ಲಿ ಅಂಥ ಸಜ್ಜನರು ಇರುವರೇ ಅಥವಾ ಇಲ್ಲವೇ ಎಂದರೆ ಮೊದಲನೇ ಪಕ್ಷ ನಿರ್ದುಷ್ಟವಾದುದು ಎಂದು ಹೇಳುವರು-

**ಪ್ರೀಣಂತಿ ಹ್ಯಥ ಮಾಂ ಧೀರಾಃ ಸರ್ವಭಾವೇನ ಮಾಧವಮ್ ।**
**ಶ್ರೇಯಸ್ಕಾಮಾ ಮಹಾಭಾಗಾಃ ಸರ್ವೇಷಾಮಾಶಿಷಾಂ ಪತಿಮ್ ।।೫೪।।**

**ಅಥ** ತಾಪ ನಿವೃತ್ತಿಗೆ ಕಾರಣವಾದುದರಿಂದ **ಶ್ರೇಯಸ್ಕಾಮಾಃ** ಮೋಕ್ಷಾಪೇಕ್ಷಿಗಳಾದ **ಮಹಾಭಾಗಾಃ** ಮಹಾಪುಣ್ಯಶಾಲಿಗಳಾದ **ಧೀರಾಃ** ಜ್ಞಾನಿಗಳು **ಸರ್ವೇಷಾಂ** ಎಲ್ಲ **ಆಶಿಷಾಂ** ಅಭೀಷ್ಟಗಳಿಗೆ **ಪತಿಂ** ಪಾಲಕನಾದ ಕೊಡುವ ಎಂದರ್ಥ **ಮಾಧವಂ** ಲಕ್ಷ್ಮೀಪತಿಯಾದ **ಮಾಂ** ನನ್ನನ್ನು **ಪ್ರೀಣಂತಿ** ಸಂತೋಷಪಡಿಸುವರು **ಹಿ** ಅನುಭವಸಿದ್ಧವು ನೀನೂ ನನ್ನನ್ನು ಸ್ತೋತ್ರದಿಂದ ಸಂತೋಷ ಪಡಿಸಿರುವಿ ಕಾರಣ ವರ ಬೇಡಿಕೋ **ಸರ್ವಭಾವೇನ** ಪೂರ್ಣ ಭಕ್ತಿಯಿಂದ ಎಂದರ್ಥ.

ವಿಶೇಷ ಃ- 'ಸರ್ವಂ ಪೂರ್ಣಮಿಹೋಚ್ಯತೇ' ಎಂದು ವಚನವಿದೆ. ಬೇರೆಡೆಗೆ ಈ ರೀತಿಯಾಗಿ ಇಲ್ಲದಿರುವ ಭಕ್ತಿಯಿಂದ ಹೀಗೂ ಅರ್ಥ. ನನಗೊಬ್ಬ ಪತಿಯಿದ್ದರೆ ಅವನೇ ಸಂತೋಷಣಿಯ ನಾಗುವನು ಅವನಿಲ್ಲ ಆದ್ದರಿಂದ ನಾನೇ ಪ್ರೀಣನೀಯ ಎಂದೂ ಹೇಳುವನು ಮಾಧವಂ ಎಂದು. ಮಾ ನ ವಿದ್ಯತೇ ಧವಃ ಪತಿಃ ಯಸ್ಯ ಸಃ ತಂ ಪತಿರಹಿತನಾದ ಎಂದರ್ಥ. ಸರ್ವಭಾವೇನ ಸಾಧವಃ ಎಂದು ಪಾಠವೆಂದು ಕೆಲವರು ಸಜ್ಜನರು ಹೇಳುವರು. ಆಗ ಧೀರರಿಗೆ ವಿಶೇಷಣ. ಮಹಾಭಾಗಾಃ ಎಂದರೆ ಫಲಕೊಡಲು ಉನ್ಮುಖರಾದ ದೈವವುಳ್ಳವರು. 'ಭಾಗೋ ಭಾಗಧೇಯೈಕ-ದೇಶಯೋಃ' ಎಂದು ವಿಶ್ವವಿದೆ. ಹಿ ಯತಃ ಆಶಿಷಂತು ಅತೋ ಧೀರಾ ಮಾಂ ಪ್ರೀಣಯಂತಿ ಎಂದೂ ಅನ್ವಯ **ಹಿ** ಯತಃ ತ್ವಮಪಿ ಮಾಂ ಪ್ರೀಣಯಃ ತಸ್ಮಾದಹಂ ಕಾಮಪೂರಃ ಇತಿ ಚ ವರಂ ವರಯ ಎಂದು ಏಕಾನ್ವಯವಾದರೂ ಮಾಡಬಹುದು. ಅರ್ಥ ಹಿಂದೆಯೇ ಬರೆದಿದೆ. ।।೫೪।।

**ನಾರದ ಉವಾಚ**

**ಏವಂ ಪ್ರಲೋಭ್ಯಮಾನೋಽಪಿ ವರೈರ್ಲೋಕಪ್ರಲೋಭನೈಃ ।**
**ಏಕಾಂತಿತ್ವಾದ್ ಭಗವತಿ ನೈಚ್ಛತ್ ತಾನಸುರೋತ್ತಮಃ ।।೫೫।।**

**ಏವಂ** ಈ ರೀತಿಯಾಗಿ **ಲೋಕಪ್ರಲೋಭನೈಃ** ಸಾಧಾರಣ ಜನರಿಗೆ ವಂಚಕವಾದ **ವರೈಃ** ವರಗಳಿಂದ **ಪ್ರಲೋಭ್ಯಮಾನಃ** ಆಶೆ ತೋರಿಸಿದರೂ **ಅಸುರೋತ್ತಮಃ** ಪ್ರಹ್ಲಾದನು **ಏಕಾಂತಿತ್ವಾತ್** ನಿರುಪಾಧಿಕ ಭಕ್ತನಾದ್ದರಿಂದ **ತಾನ್** ವರಗಳನ್ನು **ನೈಚ್ಛತ್** ಇಚ್ಛಿಸಲಿಲ್ಲ.

ವಿಶೇಷ ಃ- ಇಲ್ಲಿ ಒಂದು ಸಂದೇಹ ಶ್ರೀಹರಿಯು ಸರ್ವಜ್ಞನೋ? ಅಲ್ಲವೋ? ಸರ್ವಜ್ಞನೆನ್ನಲಾಗುವದಿಲ್ಲ. ಸರ್ವಜ್ಞನಾಗಿದ್ದರೆ ಪ್ರಹ್ಲಾದನ ಸ್ವಭಾವ ಗೊತ್ತಿದ್ದವನಿಗೆ

'ವರಂ ವರಯ' ಎಂದು ಹೇಳಿದಾಗಲೂ ಅವನು ವರ ಕೇಳದಿರುವಾಗ ತನ್ನ ಮಾತಿಗೆ ಭಂಗ ತಂದುಕೊಳ್ಳುವದು ಅನುಚಿತ ಅಲ್ಲವೆಂದರೆ ಇಷ್ಟೂ ತಿಳಿಯದವನಿಗೆ ಅಭೀಷ್ಟಪೂರಕತ್ವ ಕೂಡಲಾರದು ಎಂದರೆ ಹಾಗೆನಲ್ಲ ಸರ್ವಜ್ಞನೆಂಬ ಮೊದಲನೆ ಕಲ್ಪವೇ ಸರಿಯಾದದ್ದು. ಹಾಗಾದರೆ ಮೇಲೆ ಹೇಳಿದ ಅನೌಚಿತ್ಯ ಬರುವದಿಲ್ಲ ಎಂದು ಮನಸ್ಸಿನಲ್ಲಿ ತರಬೇಕಿಲ್ಲ. ಪ್ರಹ್ಲಾದನ ಮನಸನ್ನು ಅರೆತಿದ್ದರೂ ಅವನ ಏಕಾಂತಕತೆಯನ್ನು ಲೋಕೇಶನು ಲೋಕದಲ್ಲಿ ತಿಳಿಸಲು ಈ ವಿಧವಾದ ಒಂದು ಲೀಲೆಯನ್ನು ಮಾಡಿದನಷ್ಟೇ. ಆದ್ದರಿಂದ ಅನೌಚಿತ್ಯ ಏನೂ ಇಲ್ಲ ಎಂಬ ಅಭಿಪ್ರಾಯದಿಂದ ತ್ರಿಲೋಕಸಂಚಾರಿಯಾದ ನಾರದರು 'ಏವಂ' ಎಂಬುದರಿಂದ ತಿಳಿಸುತ್ತ ಹೇಳಿದರೆಂದು ಭಾವ. ।।೫೫।।

।। ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ನವಮೋಽಧ್ಯಾಯಃ ।।

।। ಶ್ರೀಕೃಷ್ಣಾರ್ಪಣಮಸ್ತು ।।

★★★

# ಅಥ ದಶಮೋऽಧ್ಯಾಯಃ

**ಸಾರಾಂಶ**

ಪ್ರಹ್ಲಾದ ಹೇಳಿದ. ಭಗವಂತ ನೀನು ನನ್ನನ್ನು ಪರೀಕ್ಷಿಸುತ್ತಿರುವೆ. ಭಕ್ತ ಭಕ್ತಿಗೆ ಪ್ರತಿಫಲವಾಗಿ ಏನನ್ನೂ ಬೇಡುವದಿಲ್ಲ. ಬಯಸಿದರೆ ಅವನು ವ್ಯಾಪಾರಿ ಎನಿಸಿಕೊಳ್ಳುತ್ತಾನೆ. ಪ್ರಹ್ಲಾದ ನಿನ್ನಂಥ ಭಕ್ತರು ಲೌಕಿಕವಿಷಯಗಳನ್ನು ಎಂದೂ ನನ್ನಲ್ಲಿ ಬೇಡುವದಿಲ್ಲ. ಆದರೂ ಈ ಮನ್ವಂತರದಲ್ಲಿ ದೈತ್ಯಚಕ್ರವರ್ತಿಯಾಗಿ ಸುಖದಿಂದಿರು. ನಿರಂತರ ಶ್ರವಣಮನನಾದಿಗಳನ್ನು ಮಾಡಿ ಮೋಕ್ಷವನ್ನು ಹೊಂದು ಎಂದು ನರಸಿಂಹದೇವರು ಅನುಗ್ರಹಿಸಿದರು. ಕೊನೆಗೆ ಪ್ರಹ್ಲಾದ ಒಂದು ಮಾತನ್ನು ಕೇಳಿದ. ನನ್ನ ತಂದೆ ನಿನ್ನನ್ನು ನಿಂದಿಸಿದ್ದಾನೆ. ತನ್ನ ತಮ್ಮನನ್ನು ಕೊಂದವ ನೀನು ಎಂದು ತಪ್ಪಾಗಿ ತಿಳಿದಿದ್ದಾನೆ. ಆ ಪಾಪದಿಂದ ಅವನನ್ನು ಮುಕ್ತಗೊಳಿಸು. ನರಸಿಂಹದೇವರು ಪ್ರಹ್ಲಾದನಿಗೆ ಹೇಳುತ್ತಾರೆ. ನಿನ್ನ ತಂದೆ ಒಬ್ಬನೇ ಅಲ್ಲ ನಿನ್ನ ಇಪ್ಪತ್ತೊಂದು ಮಂದಿ ಪಿತೃಗಳು ಪಾಪಮುಕ್ತರಾಗಿದ್ದಾರೆ. ನಿನ್ನ ತಂದೆಯ ಉತ್ತರಕ್ರಿಯೆಯನ್ನು ಮಾಡಿ ಸುಖವಾಗಿ ರಾಜ್ಯವನ್ನು ಆಳು ಎಂದು. ಬಳಿಕ ಪ್ರಹ್ಲಾದ ದೈತ್ಯರ ಚಕ್ರವರ್ತಿಯಾಗಿ ಅಭಿಷಿಕ್ತನಾಗಿ ನೂರಾರು ವರ್ಷ ರಾಜ್ಯಭಾರವನ್ನು ಮಾಡಿದ.

ನಾರದರು ಧರ್ಮರಾಜನಿಗೆ ಪ್ರಹ್ಲಾದನ ಚರಿತ್ರೆಯನ್ನು ಹೇಳಿ ಮುಂದೆ ರುದ್ರದೇವರು ತ್ರಿಪುರವನ್ನು ದಹಿಸಿದ ಕಥೆಯನ್ನು ಹೇಳುತ್ತಾರೆ. ಮಯಾಸುರ ಆಕಾಶದಲ್ಲಿ ಸಂಚರಿಸುವ ಬಂಗಾರ, ಬೆಳ್ಳಿ, ಕಬ್ಬಿಣದ ಮೂರು ಪಟ್ಟಣಗಳನ್ನು ನಿರ್ಮಿಸಿದ. ಅವುಗಳ ಸೌಂದರ್ಯಕ್ಕೆ ಮಾರು ಹೋಗಿ ಲೋಕಕಂಟಕರಾದ ಅಸುರರು ಆ ಪಟ್ಟಣಗಳನ್ನು ಪ್ರವೇಶಿಸಿದರು. ಅವುಗಳಲ್ಲಿ ನಾನಾವಿಧವಾದ ಅಪಾರ ಶಸ್ತ್ರಾಸ್ತ್ರಗಳಿದ್ದವು. ಅವುಗಳನ್ನು ತೆಗೆದುಕೊಂಡು ಲೋಕಗಳನ್ನು ನಾಶಮಾಡ ತೊಡಗಿದರು. ಲೋಕಪಾಲಕರೆಲ್ಲ ಸೇರಿ ರುದ್ರದೇವರನ್ನು ಮೊರೆಹೊಕ್ಕರು. ರುದ್ರದೇವರ ಅವರಿಗೆ ಅಭಯವನ್ನು ನೀಡಿ ಆ ಪಟ್ಟಣಗಳ ಮೇಲೆ ಬಾಣಪ್ರಯೋಗ

ಮಾಡಿ ಅಸುರರನ್ನು ಸಂಹರಿಸಿದರು. ಆದರೆ ಮಯಾಸುರ ಸತ್ತ ಅಸುರರನ್ನು ಸಿದ್ಧರಸದ ಬಾವಿಯಲ್ಲಿ ಹಾಕಿದ. ಅಮೃತದಂತಿರುವ ಅದರ ಸ್ಪರ್ಶದಿಂದ ಅಸುರರು ಪುನಃ ಸದೃಢಕಾಯರಾದರು. ವಿಷ್ಣು ಉಪಾಯದಿಂದ ಗೋರೂಪವನ್ನು ಧರಿಸಿ ಸಿದ್ಧರಸವನ್ನೆಲ್ಲ ಕುಡಿದು ಬರಿದು ಮಾಡಿಬಿಟ್ಟ. ಅಸುರರು ಇದನ್ನು ನೋಡುತ್ತಿದ್ದರೂ ಭಗವಂತನ ಮಾಯೆಯಿಂದ ಮೋಹಿತರಾಗಿ ಸುಮ್ಮನಿದ್ದರು. ಮುಂದೆ ರುದ್ರದೇವರು ಭಗವಂತನ ತೇಜಸ್ಸಿನಿಂದ ರಕ್ಷಿತವಾದ ಬಾಣದಿಂದ ಮೂರು ಪಟ್ಟಣಗಳನ್ನು ಸುಟ್ಟುಬಿಟ್ಟರು. ಅಂದಿನಿಂದ ರುದ್ರದೇವರಿಗೆ ತ್ರಿಪುರಾರಿ ಎಂಬ ಹೆಸರು ಪ್ರಸಿದ್ಧಿಯಲ್ಲಿ ಬಂತು.

★★★

ಭಕ್ತಿಯಿಂದ ಶ್ರೀಹರಿಯು ಪ್ರೀತನಾಗುವನು. ಭಕ್ತಿಯಿಲ್ಲದೇ ಬೇರೆ ಯಾವುದರಿಂದಲೂ ಆಗುವದಿಲ್ಲ. ದ್ವೇಷದಿಂದ ಮುಕ್ತಿ ಎಂದು ಹೇಳುವದು ಅಸುರರ ಬುದ್ಧಿ ಭ್ರಂಶ ಮಾಡಲು ಎಂದು ತಿಳಿಸುತ್ತಾ , ನಾರದರು ಪ್ರಹ್ಲಾದನು ಈ ರೀತಿ ಸಂತೋಷದಿಂದ ವರವನ್ನು ಕೇಳು ಎಂದು ಹೇಳುವ ದೇವರನ್ನು ಕುರಿತು ಈಗ ಏನು ಹೇಳಿದನು ಎಂಬ ಧರ್ಮರಾಜನ ಮಾನಸಿಕ ಶಂಕೆಯನ್ನು ನಿವಾರಿಸುವರೆಂದು ಹೇಳುವರು-

**ನಾರದ ಉವಾಚ**

**ಭಕ್ತಿಯೋಗಸ್ಯ ತತ್ ಸರ್ವಮಂತರಾಯತಯಾಽರ್ಭಕಃ ।**
**ಮನ್ಯಮಾನೋ ಹೃಷೀಕೇಶಂ ಸ್ಮಯಮಾನ ಉವಾಚ ಹ ॥೧॥**

**ಅರ್ಭಕಃ** ವಯಸ್ಸಿನಿಂದ ಚಿಕ್ಕವರಾದ ಪ್ರಹ್ಲಾದರಾಜರು **ತತ್ಸರ್ವಂ** ವರವನ್ನು ಬೇಡುವದೇ ಮುಂತಾದುದು ಅಥವಾ ವರದಿಂದ ಸಿಗುವದೆಲ್ಲವೂ **ಭಕ್ತಿಯೋಗಸ್ಯ** ಭಕ್ತಿ ಎಂಬ ಮೋಕ್ಷೋಪಾಯಕ್ಕೆ ಅಥವಾ ಭಕ್ತಿಯ ಸಂಬಂಧಕ್ಕೆ **ಅಂತರಾಯತಯಾ** ವಿಘ್ನಗಳೆಂದು **ಮನ್ಯಮಾನಃ** ತಿಳಿದವರಾಗಿ **ಸ್ಮಯಮಾನಃ** ಮುಗುಳು ನಗುತ್ತ **ಹೃಷೀಕೇಶಂ** ಎಲ್ಲ ಇಂದ್ರಿಯ ನಿಯಾಮಕನಾದ ಶ್ರೀನರಸಿಂಹನನ್ನು ಕುರಿತು **ಉವಾಚ** ಹೇಳಿದನು.

ವಿಶೇಷ ಃ- 'ವಿಘ್ನೋಽಂತರಾಯಃ ಪ್ರತ್ಯೂಹಃ' ಎಂದು ಅಮರ. ಇವುಗಳೆಲ್ಲ ವಿಘ್ನಗಳೆಂದು ತಿಳಿದೂ ನನ್ನನ್ನು ವಂಚಿಸಬೇಡವೆಂದು ನಗುತ್ತ ಎಂದರ್ಥ. 'ಹೃಷಿಕಾಣೀಂದ್ರಿಯಾಣ್ಯಾಹುಃ' ಎಂದಿದೆ. ಇಂದ್ರಿಯ ಪ್ರೇರಕನಾಗಿಯೂ ತಿಳಿಯದವನಂತೆ ಹೀಗೆ ಹೇಳುವೆ ಎಂದು ಹಾಸ. 'ಅರ್ಭಕ' ಎಂದು ಹೇಳಿದ್ದರಿಂದ

ಆಜನೀನಭಕ್ತರಾದ ಅಸುರರೂ ಸಾಧುಗಳಿರುವರು ಎಂಬ ವ್ಯವಹಾರ ವಿಷಯದಲ್ಲಿ ಮುಖ್ಯ ಸೇವಕನಿವನು ಎಂದು ಸೂಚಿಸುವರು. 'ನೃಸಿಂಹಂ ಹೃಷಿಕೇಶಂ ಮನ್ಯಮಾನಃ' ಎಂದೂ ಯೋಜಿಸುವರು. ಉವಾಚ ಹ ಎಂಬ ಪಾಠವೇ ಸರಿಯಾದುದು. ನಗೆಯು ಹೊರಗೆ ಒಳಗೆ **ಹ** ದುಃಖಿಸುತ್ತ ಎಂದರ್ಥ. ||೧||

ನೀನು ಹೃಷಿಕೇಶನಾದುದರಿಂದ ನಾನು ನಿನ್ನಲ್ಲಿ ಆಸಕ್ತನಾದ ಇಂದ್ರಿಯ-ಗಳುಳ್ಳವನಾದ್ದರಿಂದ ವರಗಳಿಂದ ಮನಸ್ಸನ್ನು ಪರೀಕ್ಷಿಸಬೇಡವೆಂದು ವಿಜ್ಞಾಪಿಸುವನು

**ಪ್ರಹ್ಲಾದ ಉವಾಚ**

**ಮಾ ಮಾ ಪ್ರಲೋಭಯೋತ್ಪತ್ತ್ಯಾಽಸಕ್ತಂ ಕಾಮೇಷು ತೈರ್ವರೈಃ ।**
**ತತ್ಸಂಗಭೀತೋ ನಿರ್ವಿಣ್ಣೋ ಮುಮುಕ್ಷುಸ್ತ್ವಾಮುಪಾಶ್ರಿತಃ ||೨||**

**ಉತ್ಪತ್ತ್ಯಾ** ಹುಟ್ಟಿನಿಂದಲೇ(ಸ್ವಾಭಾವಿಕವಾಗಿಯೇ)**ಕಾಮೇಷು** ವಿಷಯಾ-ಭಿಲಾಷೆಯಲ್ಲಿ **ಆಸಕ್ತಂ** ಹೆಚ್ಚು ಸ್ನೇಹವುಳ್ಳ **ಮಾಂ** ನನ್ನನ್ನು **ತೈಃ ವರೈಃ** ವಿಷಯಾಸಕ್ತಿಜನಕ ವರಗಳಿಂದ **ಮಾ ಪ್ರಲೋಭಯ** ಆಸೆ ಪಡಿಸಬೇಡ(ವಂಚಿಸಬೇಡ,ಮರಳು ಮಾಡಬೇಡ) ಅಪೇಕ್ಷಿತವಾದ ವಿಷಯಗಳನ್ನು ಕೊಡುವ ನನಗೆ ಮೂರ್ಖನಂತೆ ಬೇಡವೆಂದೇಕೆ ಹೇಳುವೆ ಎಂದರೆ ಹೇಳುವನು **ತತ್ಸಂಗಭೀತಃ ನಿರ್ವಿಣ್ಣಃ** ವಿಷಯ ಸಂಗದಿಂದ ಹೆದರಿ ವಿರಕ್ತನಾದ ನಾನು **ಮುಮುಕ್ಷುಃ** ಆಶ್ರಯಿಸಿರುವೆನು 'ಆಸಕ್ತಂ' ಮುಂತಾಗಿ ಹೇಳಿದ್ದು ಎಲ್ಲವೂ ಬೇರೆಯವರದನ್ನು ತಮ್ಮದಾಗಿಸಿಕೊಂಡು ಹೇಳಿದ್ದೆಂದು ತಿಳಿಯಬೇಕು. ಬಾಲ್ಯದಲ್ಲಿಯೇ 'ನ ಕೇವಲಂ ಮೇ ಭವತಶ್ಚ ರಾಜನ್' ಎಂದು ಹೇಳಿರುವರಷ್ಟೇ. 'ತತ್ಸಂಗಭೀತಃ'ಎಂದು ಅನುವಾದ ಮಾಡಿದ್ದರಿಂದ ಸಕ್ತಂ ಎಂದೇ ಪದಚ್ಛೇದ ಮಾಡಬೇಕು. 'ಉತ್ಪತ್ತ್ಯಾ ಕಾಮೇಷು ಸಕ್ತಂ ಅನ್ಯಂ ಇವ ಮಾ ಮಾ ತೈಃ ವರೈಃ ಪ್ರಲೋಭಯ ಅಹಂ ತು ಪೂರ್ವಂ ತತ್ಸಂಗಭೀತಃ ನಿರ್ವಿಣ್ಣಃ ಏತರ್ಹಿ ಮುಮುಕ್ಷುಸ್ತ್ವಾಂ ಉಪಾಶ್ರಿತಃ' ಎಂದಾದರೂ ಯೋಜನೆ. ಅಂದರೆ ಹುಟ್ಟುತ್ತಲೇ ವಿಷಯಾಸಕ್ತರಾದ ಬೇರೆ ಜನರಂತೆ ನನ್ನನ್ನು ವರಗಳಿಂದ ಮರಳು ಮಾಡಬೇಡ ನಾನಾದರೂ ಹಿಂದೆ ವಿಷಯಸಂಗದಿಂದ ಭೀತನಾಗಿ ವಿರಕ್ತನಾಗಿರುವೆ. ಈಗ ಮೋಕ್ಷೇಚ್ಛೆಯಿಂದ ನಿನ್ನನ್ನು ಆಶ್ರಯಿಸಿರುವೆನೆಂದರ್ಥ. ||೨||

'ವರಂ ವರಯ' ಎಂದು ಹೇಳಿದ ಭಗವಂತನ ಮಾತಿನ ಅಭಿಪ್ರಾಯವಿದು ಎಂದು ಭಗವಂತನಿಗೆ ವಂಚಕತೆ ಬರದಿರುವಂತೆ ಪರಿಷ್ಕಾರ ಮಾಡಿ ಹೇಳುವರು :-

**ಭೃತ್ಯಲಕ್ಷಣಜಿಜ್ಞಾಸುರ್ಭಕ್ತಂ ಕಾಮೇಷು ಚೋದಯಾತ್ ।**
**ಭವಾನ್ ಸಂಸಾರಬೀಜೇಷು ಹೃದಯಗ್ರಂಥಿಷು ಪ್ರಭೋ ||೩||**

**ಪ್ರಭೋ** ಸರ್ವಸಮರ್ಥನಾದ ಶ್ರೀಹರಿಯೇ **ಭೃತ್ಯಲಕ್ಷಣಜಿಜ್ಞಾಸುಃ** ಭೃತ್ಯರ ಲಕ್ಷಣವಾದ ವಿಷಯವಿರಕ್ತಿ ಇವನಿಗೆ ಇದೇಯೇ ಇಲ್ಲವೇ ಎಂದು ತಿಳಿಯ ಬಯಸಿದ ಅಂದರೆ ತಿಳಿಸಬಯಸಿದ **ಭವಾನ್** ನೀನು **ಭೃತ್ಯಂ** ಭಕ್ತನಾದ ನನ್ನನ್ನು **ಸಂಸಾರಬೀಜೇಷು** ಮತ್ತೆ ಮತ್ತೆ ಜನ್ಮ ಕಾರಣಗಳಾದ **ಹೃದಯಗ್ರಂಥಿಷು** ನಿನ್ನ ಕಥಾಗಳಲ್ಲಿ ಪ್ರವರ್ತಿಸುವ ಮನಸ್ಸಿಗೆ ಪ್ರತಿಬಂಧಕಗಳಾದ **ಕಾಮೇಷು** ಅಸದ್ವಿಷಯಗಳಲ್ಲಿ **ಚೋದಯಾತ್** ಪ್ರೇರಿಸುತ್ತಿರುವೆ 'ಧಿಯೋ ಯೋ ನಃ ಪ್ರಚೋದಯಾತ್' ಎಂಬ ವೈದಿಕ ಪ್ರಯೋಗದಂತೆ 'ಚೋದಯಾತ್' ಎಂದು ಶ್ರುತಿಯ ಅನುವಾದ ಮಾಡಿರುವರು. ಇವನ ವಿಷಯ ವಿರಕ್ತಿ ದೃಢವಾದುದು ಎಂದು ಜನರಿಗೆ ತಿಳಿಸಲು ಹೀಗೆ ಪ್ರೇರಿಸುತ್ತಿರುವೆ ಎಂದರ್ಥ. ।।೩।।

ವಂಚನೆಗಾಗಿಯೇ ಈ ಪ್ರಲೋಭನವೆಂದೇಕೆ ಹೇಳಬಾರದು ಎಂದರೆ ಹೇಳುತ್ತಾರೆ-

**ನಾನ್ಯಥಾ ತೇಽಖಿಲಗುರೋರ್ಘಟತೇ ಕರುಣಾತ್ಮನಃ ।**
**ನಷ್ಟದೃಷ್ಟೇಸ್ತಮಸ್ಯಂಧೇ ತ್ವಂ ಪಾರಃ ಪಾರದರ್ಶಿನಃ ।।೪।।**

**ಅಖಿಲಗುರೋಃ** ಮುಮುಕ್ಷುಗಳಿಗೆಲ್ಲ ಗುರುವಾದ **ಕರುಣಾತ್ಮನಃ** ದಯಾಮಯನಾದ (ಹರಿಯುವ ಕರುಣರಸವುಳ್ಳ) **ತೇ** ನಿನಗೆ **ಅನ್ಯಥಾ** ವಂಚನೆಯು **ನ ಘಟತೇ** ಹೊಂದುವದಿಲ್ಲ. ಅದ್ದರಿಂದ ಪರಿಕ್ಷೆಗಾಗಿಯೇ ಈ ಪ್ರಲೋಭನವೆಂದು ಅಭಿಪ್ರಾಯ **ಅಂಧೇ ತಮಸಿ** ಕಗ್ಗತ್ತಲೆಯಂತಿರುವ ಸಂಸಾರದಲ್ಲಿ **ನಷ್ಟದೃಷ್ಟೇಃ** ಜ್ಞಾನವನ್ನು ಕಳೆದುಕೊಂಡ ಆದರೆ **ಪಾರದರ್ಶಿನಃ** ಆಚೆ ದಡವನ್ನು ಕಾಣಲಿಚ್ಛಿಸುವ **ಮೇ** ನನಗೆ **ತ್ವಂ** ನೀನು **ಪಾರಃ** ದಡ ಸೇರಿಸುವವನು.

ವಿಶೇಷ :- ವಂಚನೆ ಕೂಡದಿರಲು ಎರಡು ಕಾರಣಗಳು. ಅಖಿಲಗುರುತ್ವ ಮತ್ತು ಕರುಣತ್ವ, ಸಾಮಾನ್ಯವಾಗಿ ಗುರುವು ಹಿತೋಪದೇಶ ಮಾಡಿ ಉದ್ಧರಿಸುವನು. ನೀನಂತು ಅಖಿಲಗುರು ಮತ್ತು ಸ್ವಾಭಾವಿಕ ಕರುಣಾರಸವುಳ್ಳವನು. ಹಿಂದೆ 'ಆಶ್ರಿತಃ' ಎಂದು ಇಲ್ಲಿ 'ಅಖಿಲ' ಎಂದೂ ಹೇಳಿದ್ದರಿಂದ ತಾನು ಶಿಷ್ಯನೆಂದು ನರಸಿಂಹನು ಗುರು ಎಂದು ತಿಳಿಸಿದಂತಾಯಿತು. ಆದ್ದರಿಂದ ವಂಚನೆ ಅಲ್ಲ ಹಾಗಾದಲ್ಲಿ ಇಷ್ಟ ಜನಘಾತಕನಾಗುವಿ. ನಿರ್ದೋಷನಾದ ನಿನಗೆ ಅದು ಯುಕ್ತವಲ್ಲವೆಂದು ಭಾವ. ।।೪।।

ನೀನು ಮಹಾನುಭಾವ ನಿಷ್ಕಾಮುಕ ಆಗು. ಕಾಮುಕರಿಗೆ ಈ ರೀತಿ ಹೇಳದಿದ್ದರೆ ಅವಿಶ್ವಸನೀಯ ಮಾತುಗಳ್ಳವನಾಗುವದಿಲ್ಲವೆ ಎಂದರೆ ಹೇಳುವರು-

**ಯಸ್ತ ಆಶಿಷ ಆಶಾಸ್ತೇ ನ ಸ ಭೃತ್ಯ ಸ ವೈ ವಣಿಕ್ ।**
**ಸ ವೈ ಸ್ವಾಮೀ ಸ ವೈ ಭೃತ್ಯೋ ಗುಣಲುಬ್ಧೌ ನ ಕಾಮುಕೌ ॥೫॥**

**ಯಃ** ಯಾವನು **ತೇ** ನಿನ್ನಿಂದ **ಆಶಿಷಃ** ಲೌಕಿಕ ಸಂಪತ್ತನ್ನು **ಆಶಾಸ್ತೇ** ಅಪೇಕ್ಷಿಸುವನೋ **ಸಃ** ಅವನು **ನ ಭೃತ್ಯಃ** ಸೇವಕನಲ್ಲ **ಸಃ** ಪ್ರತಿಫಲಾಪೇಕ್ಷಿಯು **ವಣಿಕ್** ವ್ಯಾಪಾರಿಯು **ವೈ** ಪ್ರಸಿದ್ಧ. ಹಣ ತೆಗೆದುಕೊಂಡು ಪದಾರ್ಥ ಕೊಟ್ಟಂತೆ. ಸೇವೆ ಎಂಬ ಹಣಕೊಟ್ಟು ಪುಣ್ಯವನ್ನು ಸಂಪತ್ತನ್ನೂ ತೆಗೆದುಕೊಳ್ಳುವನು. ಇದರಿಂದ ಫಲ ಕೊಡುವವನು ಸ್ವಾಮಿಯೂ ಅಲ್ಲವೆಂದು ತಿಳಿಸುವರು. **ಯಃ ಭೃತ್ಯಃ** ಯಾವನು ಭೃತ್ಯನೋ **ತೇನ** ಅವನಿಂದ **ಯಃ** (ಆವೃತ್ತಿ) ಸ್ವಾಮಿಯು **ಆಶಿಷಃ** ಮೇಲೆ ಹೇಳಿದ ಅಭೀಷ್ಟಗಳನ್ನು **ಆಶಿಷಃ** ಕರ ಮುಂತಾದವನ್ನು ಆಶಾಸ್ತೇ ಸಃ 'ನ ಸಭೃತ್ಯಃ' ಅಂದರೆ ಭೃತ್ಯ ಸಹಿತನು ಸ್ವಾಮಿಯು ನ ಅಲ್ಲ ಕಿಂತು **ವಣಿಕ್** ಅವನೂ ವ್ಯಾಪಾರಿಯೇ (**ವೃಧ್ಯಾದ್ಯುಪಜೀವಿ** ಎಂದರೆ ಬಡ್ಡಿಯಿಂದ ಉಪಜೀವಿಸುವವ ವ್ಯಾಪಾರಿ) ಮುಂದೆ ಕೆಳಗೆ ಹೇಳುವ ಅರ್ಥ ಸ್ವಾರಸ್ಯಕ್ಕಾಗಿ ಹೀಗೆ ಅನ್ವಯಾರ್ಥ ಮಾಡಬೇಕು. ಹಾಗಾದರೆ ಯಾರು ಸ್ವಾಮಿ ಯಾರು ಭೃತ್ಯಎಂದರೆ ಹೇಳುವರು. **ಯೌ** ಯಾರು **ಗುಣಲುಬ್ಧೌ** ಪರಸ್ಪರ ಗುಣವನ್ನು **ನ ಕಾಮುಕೌ** ಕಾಮಿಸುವದಿಲ್ಲವೋ ಅಂದರೆ ಯಜಮಾನನಿಂದ ಸೇವಾನುಸಾರಿ ಫಲ ಇಚ್ಛಿಸುವವನು ಅದರಂತೆ ಭೃತ್ಯನಿಂದಲೂ ಕರವನ್ನಿಚ್ಛಿಸುವವನು ಆಗದವರು **ಸಃ ಭೃತ್ಯಃ** ಅವನು ದಾಸನು **ಸಃ ಸ್ವಾಮೀ** ಅವನು ಒಡೆಯ **ವೈ** ಪ್ರಸಿದ್ಧವೆಂದರ್ಥ. 'ವಣಿಗ್ವಾಣಿಜಜೀವಿನಿ' ಎಂದು ವಿಶ್ವ. 'ವಣಿಜೋ ವಣಿಕ್' ಎಂದು ಅಮರವಿದೆ. ವಣತೇ ವ್ಯವಹರತಿ ಯಃ ಸಃ ವಣಿಕ್, ॥೫॥

ಸ್ವಾಮಿ ಸೇವಕರಿಬ್ಬರಿಗೂ ಕಾಮನೆ ಇದ್ದರೆ ಸ್ವಾಮಿಸೇವಕಭಾವ ಇರಲಾರದು ಎಂಬ ತತ್ತ್ವವನ್ನು ಹೇಳುವರು :-

**ಆಶಾಸಾನೋ ನ ವೈ ಭೃತ್ಯಃ ಸ್ವಾಮಿನ್ಯಾಶಿಷ ಆತ್ಮನಃ ।**
**ನ ಸ್ವಾಮೀ ಭೃತ್ಯತಃ ಸ್ವಾಮ್ಯಮಿಚ್ಛನ್ ಯೋ ರಾತಿ ಚಾಶಿಷಃ ॥೬॥**

**ಸ್ವಾಮಿನಿ** ಯಜಮಾನನಲ್ಲಿರುವ **ಆಶಿಷಃ** ಸಂಪತ್ತನ್ನು **ಆತ್ಮನಃ ಚ** ತನಗೆ ಬರಲೆಂದೇ **ಆಶಾಸಾನಃ** ಇಚ್ಛಿಸುವವನು **ಭೃತ್ಯಃ ನ ವೈ** ಸೇವಕನಲ್ಲವೇ ಅಲ್ಲ ಮತ್ತೇನೆಂದರೆ ಪ್ರತಿಭಟನು **ಯಃ** ಯಾವನು **ಭೃತ್ಯತಃ** ಸೇವಕನಿಂದ **ಸ್ವಾಮ್ಯಂ ಇಚ್ಛನ್** ತನಗೆ ಸ್ವಾಮಿತ್ವವನ್ನು ಇಚ್ಛಿಸಿ **ಆಶಿಷಃ ರಾತಿ** ಸೇವಕನಿಗೆ ಧನ ಮೊದಲಾದವನ್ನು ಕೊಡುವನೋ **ಸಃ** ಅವನು **ಸ್ವಾಮಿ ನ ಚ** ಯಜಮಾನನಲ್ಲ.(ಸೇವಕರ ಮುಖದಿಂದ ಕರಾದಿ ವಿತರಣವನ್ನು ಇಚ್ಛಿಸಿ ಹೀಗೂ ಅರ್ಥ) ಅವನು ಕಲ್ಪಿತ ಸ್ವಾಮಿತ್ವವುಳ್ಳವನು

ಆದ್ದರಿಂದ ಸ್ವಾಮಿಶಬ್ದ ಮುಖ್ಯಾರ್ಥವಲ್ಲ. ಸ್ವಾಮಿಯಿಂದ ಸಂಬಳ ಮೊದಲಾದವನ್ನು ಕೇಳುವವರು ನಿಜವಾದ ಭೃತ್ಯರಲ್ಲ. ಭೃತ್ಯನು ತನಗೆ ಸತ್ಕಾರಮಾಡಲೆಂದು ಅವನಿಗೆ ಸಂಬಳ ಕೊಡುವವನು ಸ್ವಾಮಿಯೂ ಅಲ್ಲವೆಂದು ಭಾವ. ।।೬।।

ಲೌಕಿಕರಾದ ಸ್ವಾಮಿ ಭೃತ್ಯರಿಗೆ ಈ ರೀತಿ ಅವಸ್ಥೆ ಇರುವದು ನನಗೂ ನಿನಗೂ ಈ ರೀತಿ ಇಲ್ಲವೆಂದು ಹೇಳುವನು-

**ಅಹಂ ತ್ವಕಾಮಸ್ತ್ವದ್ಭಕ್ತಸ್ತ್ವಂ ಚ ಸ್ವಾಮ್ಯನಪಾಶ್ರಯಃ ।**
**ನಾನ್ಯಥೇಹಾವಯೋರರ್ಥೋ ರಾಜಸೇವಕಯೋರೀವ ।।೭।।**

**ಅಹಂ ತು** ನಾನಾದರೂ **ಅಕಾಮಃ** ವಿಷಯಾಭಿಲಾಷೆ ಇಲ್ಲದಿರುವ **ತ್ವದ್ಭಕ್ತಃ** ನಿನ್ನ ಭಕ್ತನು **ತ್ವಂ ಚ** ನೀನೂ ಸಹ **ಅನಾಪಾಶ್ರಯಃ** ಸೇವಕರಿಂದ ಬರುವ ಫಲವನ್ನು ಆಶ್ರಯಿಸದ ಅಂದರೆ ಅದನ್ನು ಇಚ್ಛಿಸದ **ಸ್ವಾಮೀ** ಯಜಮಾನನು **ಅನ್ಯಥಾ** ಸ್ವಾಮಿತ್ವವನ್ನು ಬಿಟ್ಟು ಅಕಾಮತ್ವವಿಲ್ಲದ **ಇಹ** ಲೋಕದಲ್ಲಿ **ಆವಯೋಃ** ನಮ್ಮಿಬ್ಬರಿಗೆ **ಅರ್ಥಃ** ಪ್ರಯೋಜನವು **ಇಹ** ಲೋಕದಲ್ಲಿ **ರಾಜಸೇವಕಯೋರಿವ** ರಾಜನಿಗೂ ಸೇವಕನಿಗೂ ಇರುವಂತೆ ಪರಸ್ಪರ ಆಕಾಂಕ್ಷೆಯು **ನ** ಇರುವದಿಲ್ಲ **ಅನ್ಯಥಾ** ಗುಣಲುಬ್ಧತೆ ಬಿಟ್ಟು ಬೇರೆ ಪ್ರಯೋಜನವಿಲ್ಲ ಹೀಗೂ ಅರ್ಥ. ।।೭।।

ಸ್ವತಃ ಲಕ್ಷ್ಮೀನೃಸಿಂಹನು ಕೃಪಾ ದೃಷ್ಟಿ ಬೀರುವಾಗ ಯಾವ ವರ ಕೇಳದೆ ತಿರಸ್ಕಾರ ಮಾಡುವದು ಜ್ಞಾನಿಗಳಿಗೆ ಸಂಮ್ಮತವಲ್ಲ ಆದ್ದರಿಂದ ತನಗೂ ತನ್ನ ಸ್ವಾಮಿಗೂ ಅಭಿಪ್ರೇತಕಾರ್ಯ ಸಿದ್ಧಿಯಾಗುವಂತೆ ಆಲೋಚಿಸಿ ವಿಜ್ಞಾಪಿಸುವನು-

**ಯದಿ ರಾಸೀಶ ಮೇ ಕಾಮಾನ್ ವರಾನ್ ತ್ವಂ ವರದರ್ಷಭ ।**
**ಕಾಮಾನಾಂ ಹೃದ್ಯಸಂರೋಹಂ ಭವತಸ್ತು ವೃಣೇ ವರಮ್ ।।೮।।**

**ವರದರ್ಷಭ** ವರ ಕೊಡುವವರಲ್ಲಿ ಶ್ರೇಷ್ಠನೇ **ಹೇ ಕಾಮಾನ್** ನಿನ್ನ ಇಚ್ಛಾನುಸಾರ ನಡೆಯುವವನೇ **ಕಾಮಾನ್** ಇಷ್ಟವಾದ **ವರಾನ್** ವರಗಳನ್ನು **ತ್ವಂ** ನೀನು **ರಾಸಿ ಚೇತ್** ಕೊಡುವದಾದರೆ **ಈಶ** ಸ್ವಾಮಿಯೇ **ಕಾಮಾನಾಂ** ಇಚ್ಛೆಗಳ **ಹೃದಿ ಅಸಂರೋಹಂ** ಮನಸ್ಸಿನಲ್ಲಿ ಹುಟ್ಟದಿರುವಿಕೆಯನ್ನು **ವರಂ** ವರವಾಗಿ **ಭವತಃ** ನಿನ್ನಿಂದ(**ಹೃದ್ಯೇನ** ಮನೋಹರನಾದ ನಿನ್ನಿಂದ **ಸಂರೋಹಂ ಭವತಃ** ಸಂಸಾರದಿಂದ ಊರ್ಧ್ವಗಮನ ರೂಪವಾದ) **ವರಂ ವೃಣೇ** ವರವನ್ನು ಕೇಳುವೆ ಹೀಗೂ ಅನ್ವಯ. ವರದರ್ಷಭ ಎಂಬುದರಿಂದ 'ಅಹಂ ಭೋಗಪ್ರದೋ ವತ್ಸ ಮೋಕ್ಷದಸ್ತು ಜನಾರ್ದನಃ' ಎಂದು ರುದ್ರಾದಿಗಳಿಗೆ ಮೋಕ್ಷ ಕೊಡುವ ಸಾಮರ್ಥ್ಯವಿಲ್ಲದಿದ್ದರೂ ಎಲ್ಲ ವರ ಕೊಡುವ ಸಾಮರ್ಥ್ಯನಿನಗಿದೆ ಎಂದು ತಿಳಿಸಿರುವರು. ಮೋಕ್ಷವು ಬೇರೆಯವರಿಗೆ

ಬೇಕಿಲ್ಲದಿದ್ದರೂ ನನಗೆ ಇಷ್ಟವಾದುದರಿಂದ ಮತ್ತಾಮತ್ವವಿದೆ ಎಂದು 'ಮೇ ಕಾಮಾನ್' ಎಂದಿರುವರು. ಅಂತು ಚತುರ್ಥ್ಯಂತವಾದ ಮೇ ಎಂಬುದಕ್ಕೆ ರಾಸಿ ಎಂಬುದರಿಂದ ಷಷ್ಠ್ಯಂತವಾದ ಮೇ ಎಂಬುದಕ್ಕೆ ಕಾಮಾನ್ ಎಂಬುದರಿಂದ ಅನ್ವಯ ಸೂಚಿತವಾಗಿದೆ. ॥೮॥

**ಇಂದ್ರಿಯಾಣಿ ಮನಃ ಪ್ರಾಣಾ ಆತ್ಮಾ ಧರ್ಮೋ ಧೃತಿರ್ಮತಿಃ ।**
**ಹ್ರೀಃ ಶ್ರೀಸ್ತೇಜಃ ಸ್ಮೃತಿಃ ಸತ್ಯಂ ಯೇಷಾಂ ನಶ್ಯಂತಿ ಜನ್ಮನಾ ॥೯॥**

**ಯೇಷಾಂ** ಯಾವ ಕಾಮುಗಳ **ಜನ್ಮನಾ** ಹುಟ್ಟುವದರಿಂದ **ಇಂದ್ರಿಯಾಣಿ** ಇಂದ್ರಿಯಗಳು **ಮನಃ** ಮನಸ್ಸು **ಪ್ರಾಣಾಃ** ಪ್ರಾಣಗಳು **ಆತ್ಮಾ** ದೇಹವು **ಧರ್ಮಃ** ಸದಾಚಾರವು **ಧೃತಿಃ** ಧೈರ್ಯವು **ಮತಿಃ** ಬುದ್ಧಿಯು **ಹ್ರೀಃ** ಅಕಾರ್ಯಮಾಡುವಲ್ಲಿ ಲಜ್ಜೆ **ಶ್ರೀಃ** ಸಂಪತ್ತು **ತೇಜಃ** ಪ್ರಭಾವವು ಬ್ರಹ್ಮವರ್ಚಸ್ಸು, ಸಾಮಾನ್ಯವರ್ಚಸ್ಸು **ಸ್ಮೃತಿಃ** ಸ್ಮರಣವು **ಸತ್ಯಂ** ಭೂತಹಿತವಾದ ಮಾತು ಇವೆಲ್ಲವು **ನಶ್ಯಂತಿ** ನಾಶವಾಗುವವು ಆದ್ದರಿಂದ ಕಾಮಗಳ ಹುಟ್ಟದಿರುವಿಕೆಯ ವರವನ್ನು ಬೇಡುವೆನೆಂದರ್ಥ. ಮನಸ್ಸು ಇಂದ್ರಿಯವೇ ಆಗಿದ್ದರೂ ಮನಸ್ಸನ್ನು ಚೆನ್ನಾಗಿ ಸ್ತಂಭನಮಾಡಿದರೆ ಉಳಿದ ಇಂದ್ರಿಯಗಳು ವಶವಾಗುವವು ಎಂಬ ಅಭಿಪ್ರಾಯದಿಂದ ಮುಖ್ಯವಾದುದರಿಂದ ಪ್ರತ್ಯೇಕ ಹೇಳಿರುವರು. 'ಸರ್ವೇಂದ್ರಿಯಾಣಾಂ ಜರಯಂತಿ ತೇಜಃ' ಎಂದು ಶ್ರುತಿಯಿದೆ. 'ಕಾಮಾತ್ ಕ್ರೋಧೋऽಭಿಜಾಯತೇ' ಮುಂತಾಗಿ ಹೇಳಿದಂತೆ ನಾಶವಾಗುವವನು ಎಂದು ಭಾವ. ॥೯॥

ನೀನು ಬೇಡಿಕೊಂಡ ಕಾಮಾಸಂರೋಹದಿಂದ(ಹುಟ್ಟದಿರುವದರಿಂದ)ಏನು ಲಾಭ ಎಂದರೆ ಸಂಕ್ಷೇಪವಾಗಿ ಸೂಚಿಸಿದ್ದನ್ನು ಬಿಡಿಸಿ ಹೇಳುವನು.

**ವಿಮುಂಚತಿ ಯದಾ ಕಾಮಾನ್ ಮಾನವೋ ಮನಸಿ ಶ್ರಿತಾನ್ ।**
**ತರ್ಹ್ಯೇವ ಪುಂಡರೀಕಾಕ್ಷ ನ ಭವಾಯಾವಕಲ್ಪತೇ ॥**
**ನಾರದೇನೋಪದಿಷ್ಟಂ ಮೇ ತವ ಮಂತ್ರಮಿಮಂ ಸ್ಮರೇ ॥೧೦॥**

**ಯಃ ಮಾನವಃ** ಯಾವ ಅಧಿಕಾರಿಯು **ಯದಾ** ಯಾವಾಗ **ಮನಸಿ** ಸಂಕಲ್ಪವಿಕಲ್ಪಾತ್ಮಕವಾದ ಚಿತ್ತದಲ್ಲಿ **ಆಶ್ರಿತಾನ್** ಆಶ್ರಿತವಾದ **ಕಾಮಾನ್** ಕಾಮನೆಗಳನ್ನು **ವಿಮುಂಚತಿ** ಬಿಡುವನೋ **ತರ್ಹಿ** ಆಗಲೇ **ಹೇ ಪುಂಡರೀಕಾಕ್ಷ** ಕಮಲನಯನನೇ **ಸಃ** ಆ ಅಧಿಕಾರಿಯು **ಭವಾಯ** ಮತ್ತೆ ಸಂಸಾರಕ್ಕೆ **ನ ಅವಕಲ್ಪತೇ** ಬರಲರ್ಹನಾಗುವದಿಲ್ಲ ಇದೇ ಮಹಾಫಲವಲ್ಲವೆಂದರೆ ಹೇಳುವರು **ನ ಭವಾಯ** ಮೋಕ್ಷಕ್ಕೆ **ಅವಕಲ್ಪತೇ** ಸಮರ್ಥನಾಗುವನು 'ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇऽಸ್ಯ ಹೃದಿ

ಸ್ಥಿತಾಃ' ಮುಂತಾದ ಶ್ರುತಿಯಿದೆ. 'ಅಥ ಮರ್ತ್ಯೋ ಅಮೃತೋ ಭವತಿ' ಶ್ರುತಿಶೇಷ **ತವ** ನಿನ್ನ ಭಕ್ತರಾದ **ನಾರದೇನ** ನಾರದರಿಂದ **ಮೇ** ನನಗೆ **ಉಪದಿಷ್ಟಂ** ಉಪದೇಶಿಸಲ್ಪಟ್ಟ **ಇಮಂ** ಮುಂದೆ ಹೇಳುವ **ತವ ಮಂತ್ರಂ** ನಿನ್ನ ಮೂವತ್ತೆರಡು ಅಕ್ಷರದ ನರಸಿಂಹ ಮಂತ್ರವನ್ನು **ಸ್ಮರೇ** ಸ್ಮರಿಸುತ್ತೇನೆ.

**ಶ್ರೀಸತ್ಯಧರ್ಮರ ಪ್ರಕಾರ :** 'ನಪುನರ್ಭವಾಯ ಕಲ್ಪತೇ' ಎಂದು ಪಾಠ ತಿಳಿದು ಬರುತ್ತದೆ. ಸಂಸಾರಬರದಿರುವದೇ ಮಹಾಫಲವಲ್ಲವೆಂದರೆ ಹೇಳುವರು ನ ಪುನರ್ಭವಃ ಅಭವಃ=ಅಪವರ್ಗಃ ತಸ್ಮೈ=ಮೋಕ್ಷಕ್ಕೆ ಕಲ್ಪತೇ=ಸಮರ್ಥನಾಗುವವನು ಪುಂಡರೀಕೇ=ಆ ಹೆಸರಿನ ಭಕ್ತನಲ್ಲಿ ಅಕ್ಷಿಃ=ಕೃಪಾದೃಷ್ಟಿಯುಳ್ಳವನೇ ಯಸ್ಯ ಸಃ, ಪುಂಡರೀಕಾಣಿ ಕಮಲಾನಿ ಇವ ಅಕ್ಷೀಣಿ ಯಸ್ಯ ಸಃ ಎಂದಾದರೂ ವಿಗ್ರಹ. ವಿಕಸ್ವರತೇ=ಅರಳುವಿಕೆ ಹಾಗೂ ಔಪಾಧಿಕವಾದ(ದೈತ್ಯಸಂಹಾರಕ್ಕಾಗಿ ತೋರಿದ) ಕೆಂಪು ಹೋಗಿ ಕಾರುಣ್ಯದ ಶುಭ್ರತೆಯೂ ಧ್ವನಿತವಾಗುವವು 'ಪುಂಡರೀಕಂ ಸಿತಾಂಭೋಜಂ' ಎಂದಿರುವದರಿಂದ ಬಿಳಿಕಮಲದಂತೆ ಬೆಳ್ಳಗೆ ಕಣ್ಣರಳಿಸಿದ್ದನೆಂದು ಭಾವ. ಕಾರುಣ್ಯಶುಭ್ರತೆ ಎಂಬ ಎರಡನೇ ಅರ್ಥದಲ್ಲಿ ಭಕ್ತರಲ್ಲಿ ದಯೆ ಇದೆ ಎಂದು ಧ್ವನಿತವಾಗುವದು. 'ಪುಂಡರೀಕಾಕ್ಷ' ಎಂಬ ಸಂಬೋಧನದಿಂದ(ನ ಭಾವಾವೇಹ) ಎಂದು ಪಾಠ. **ಇಹ** ಈ ಜನ್ಮದಲ್ಲಿ ಅಥವಾ ಈ ಭೂಮಿಯಲ್ಲಿ ನನ್ನ ಇಚ್ಛೆ ಇಲ್ಲದಿದ್ದರೂ ಕಾಮನೆ ಮಾಡದೇ ಇರುವದರಿಂದಲೇ ಈ ದೇಹವನ್ನು ಬಿಟ್ಟು ಮುಕ್ತಿಯನ್ನು ಹೊಂದುವಿಯೇನೋ ಎಂದರೆ ಹಾಗೇನಿಲ್ಲ. ಸ್ವಾಮಿ ಎಂದು ಹರಿಯೇ ಅಂತರಂಗದಿಂದ ಸಂಬೋಧಿಸಲ್ಪಟ್ಟಿರುವಿ ನನ್ನಿಂದ ಎಂದೂ ಹೇಳುವನು.(ನ ಭವಾಯೇಹ)ಎಂದು **ಭವಸ್ಯ** ಮತ್ತೆ ಮತ್ತೆ ಸಂಸಾರದ **ಆಯಃ** ನಾನೇ ಮೊದಲಾದವರಿಗೆ ಬರುವದು **ತಸ್ಯ** ಅದರ ವಿಷಯಕವಾದ **ಈಹಾ** ಚೇಷ್ಟೆಯಾಗಲಿ ಇಚ್ಛೆಯಾಗಲಿ ನ ವಿದ್ಯತೇ ಯಸ್ಯ ಸಃ ಇಲ್ಲದಿರುವವನು ನ ಭವಾಯೇಹ ನು ತತ್ಸಂಬುದ್ಧಿ ನಭವಾಯೇಹ. ಅಥವಾ ನಭವಾಯೇಹಕಲ್ಪ ಎಂಬುದು ಒಂದೇಪದ ನಭವಾಯೇಹ ಎಂದರೆ ಮುಖ್ಯಪ್ರಾಣದೇವರು ಸಂಕಲ್ಪಃ ಯಸ್ಮಾತ್ ಎಂದಾಗಲಿ ತಸ್ಮಾದಪಿ ಕಲ್ಪಃ ಎಂದಾಗಲಿ ಮಾಡಿ ತತ್ಸಂಬುದ್ಧಿ ನಭವಾಯೇಕಲ್ಪ ಎಂಬುದು ನಿನ್ನಿಂದ ಮೋಕ್ಷ ಕೊಡಲು ಸಮರ್ಥರಾದ ವಾಯುದೇವರುಳ್ಳವನೇ, ಅಂಥ ವಾಯುದೇವರಿಗಿಂತ ಸಮರ್ಥನೇ **ತೇ** ನಿನ್ನಿಂದ ನಿನ್ನ ಪ್ರಸಾದದಿಂದ **ಯದಾ** ಯಾವಾಗ **ಕಾಮಾನ್ ವಿಮುಂಚತಿ** ಕಾಮನೆಗಳನ್ನು ಬಿಡುವನೋ **ತರ್ಹಿ** ಆಗ **ತೇ** ನನ್ನ **ಮನಸಿ ಶ್ರಿತಾನ್ ಕಾಮಾನ್** ಮನಸ್ಸಿನಲ್ಲಿರುವ ಕಾಮಕ್ಕೆ ಅನುಕೂಲವಾದ ಕಾಮನೆಗಳನ್ನು **ಮಾನವಃ** ವಾಯುದೇವರು **ದದಾತಿ** ಕೊಡುವರು.

'ಸ ಕಾಮೇನ ಮೇ ಕಾಮ ಆಗಾತ್' ಎಂದು ಇರುವದರಿಂದ ಕಾಮಾನುಕೂಲ ಕಾಮತ್ವ ಇರುವದರಿಂದ ಮುಕ್ತರ ಅಪಹತಕಾಮತ್ವವನ್ನು ತಿಳಿಯಬೇಕು. ಬಾಲಕನಾದ ನಿನಗೆ ಇಷ್ಟೊಂದು ಜ್ಞಾನ ಹೇಗೆ ಎಂದರೆ ನಾರದರ ಮಹಾತ್ಮ್ಯದಿಂದ ಎಂದು ಹೇಳುವನು.

**ನಾರದೇನ ಇಮಂ** ಮುಂದೆ ಹೇಳುವ **ಉಪದಿಷ್ಟಂ ತವ ಮಂತ್ರಂ** ಉಪದೇಶಿಸಿದ ನಿನ್ನ ಮಂತ್ರವೆಂದು ಒಂದರ್ಥ. **ತವ ನಾರದೇನ** ನಿನ್ನವನಾದ ನಾರದನಿಂದ ('ಚಿತ್ರಕೇತು ನಾ ಅಪರೋಕ್ಷಿತಮನಂತಂತ ಪ್ರತಿ ತಾವಕೇನ ಮುನಿನಾ' ಎಂದು ನಾರದರಿಗೆ ತಾವಕತ್ವ ಹೇಳಿದೆ.) ಮಂತ್ರವನ್ನು ಸ್ಮರಿಸುವ. ಮಂತ್ರದಿಂದ ಬರುವ ಫಲಕ್ಕೆ ದೈವವು ಅನುಕೂಲವೇ ಆಗಿದೆ ಎಂದೂ ಹೇಳುವನು ಉಪದಿಷ್ಟಂ ಎಂದು. **ಉಪ** ಉದ್ಯೋಗ ವಿಶಿಷ್ಟವಾದ ದೈವಂ ಯಸ್ಯ ಸಃ ತಂ ಸಮೀಪವರ್ತಿ ಸಹಕಾರಿ ಎಂದರ್ಥ. ||೧೦||

'ವಿಷ್ಣುರ್ಹಿ ದಾತಾ ಮೋಕ್ಷಸ್ಯ ವಾಯುಶ್ಚ ತದನುಜ್ಞಯಾ'ಎಂದಿದೆ ಆ ಮಂತ್ರವನ್ನೇ ಸ್ಪಷ್ಟವಾಗಿ ಹೇಳುವರು-

**ಓಂ ನಮೋ ಭಗವತೇ ತುಭ್ಯಂ ಪುರುಷಾಯ ಮಹಾತ್ಮನೇ ।**
**ಹರಯೇಽದ್ಭುತಸಿಂಹಾಯ ಬ್ರಹ್ಮಣೇ ಪರಮಾತ್ಮನೇ ||೧೧||**

**ಮಹಾತ್ಮನೇ** ಉತ್ಸವರೂಪನಾದ **ಬ್ರಹ್ಮಣೇ** ಗುಣಪೂರ್ಣನಾದ **ಪರಮಾತ್ಮನೇ** ಅಧಿಕಾರಿಗಳಲ್ಲಿ ಅಧಿಕರಾದ ಪರಮರಿಗೆ ಸ್ವಾಮಿಯಾದ **ಭಗವತೇ** ಐಶ್ವರ್ಯಾದಿ ವೈರಾಗ್ಯಾಂತ ಷಡ್ಗುಣಯುಕ್ತನಾದ **ಹರಯೇ** ಶ್ರೀಹರಿಯಿಂದ ಅಭಿನ್ನನಾದ **ಪುರುಷಾಯ ಸಿಂಹಾಯ** ನರಸಿಂಹನಾದ **ಹೇ ಅದ್ಭುತ** ಆಶ್ಚರ್ಯಚರ್ಯನೇ **ತೇ ನಮಃ** ನಿನಗೆ ನಮಸ್ಕಾರ.'ಅದಿಭೂಭ್ಯಾಂ ಡುತಜಿತಿ ಡುತಚ್' ಪ್ರತ್ಯಯ ಮಾಡಿದಾಗ ಅದ್ಭುತವೆಂದಾಗುವದು. ||೧೧||

ನಾನು ಅಕಾಮನೆಂದು ನಿಜವನ್ನೇ ಹೇಳಿರುವಿ. ಮನಸ್ಸಿನಲ್ಲಿ ಕಾಮನೆಗಳು ಹುಟ್ಟಿದಂತೆ ನನ್ನನ್ನು ಬಹುವಾಗಿ ಪ್ರಾರ್ಥಿಸಿರುವಿ ಆದರೂ ನನ್ನ ಆಜ್ಞೆಯು(ತಿರಸ್ಕಾರ) ಅವಜ್ಞೆಗೆ ಅರ್ಹವಲ್ಲ ನನ್ನ ಆಜ್ಞೆಯಿಂದ ವಿಷಯಗಳನ್ನು ಅನುಭವಿಸುವದರಿಂದ ನಿನಗೆ ಸಂಸಾರದ ಭಯ ಬರಲಾರದು. ಸ್ವಾಭಾವಿಕ ಅಕಾಮತ್ವಕ್ಕೆ ಹಾನಿಯೂ ಇರುವದಿಲ್ಲ. ಭೋಕ್ತವ್ಯವಾದುದನ್ನು ಬಿಡಲಾಗುವದಿಲ್ಲ ಕಾರಣ ಹೀಗೆ ನಡೆದುಕೋ ಎಂದು ಹೇಳುವನು-

**ಶ್ರೀನರಸಿಂಹ ಉವಾಚ**

**ನೈಕಾಂತಿನೋ ಮೇ ಮಯಿ ಜಾತ್ವಿಹಾಶಿಷಃ**
**ಆಶಾಸತೇಽಮುತ್ರ ತಥಾ ಭವಾದೃಶಾಃ ।**
**ತಥಾಽಪಿ ಮನ್ವಂತರಮೇತದತ್ರ**
**ದೈತ್ಯೇಶ್ವರಾಣಾಮನುಭುಂಕ್ಷ್ವ ಭೋಗಾನ್ ॥೧೨॥**

**ಯದ್ಯಪಿ ಭವಾದೃಶಾಃ** ನಿನ್ನಂತವರು **ಮಯಿ** ನನ್ನಲ್ಲಿ **ಏಕಾಂತಿನಃ** ಸಹಜಭಕ್ತರು **ಮೇ** ನನ್ನಿಂದ **ಇಹ** ಈ ಲೋಕದಲ್ಲಿ **ತಥಾ** ಹಾಗೂ **ಅಮುತ್ರ** ಪರಲೋಕದಲ್ಲಿ **ಜಾತು** ಎಂದೂ **ಆಶಿಷಃ** ಅಪೇಕ್ಷೆಗಳನ್ನು **ನ ಆಶಾಸತೇ** ಬಯಸುವದಿಲ್ಲ **ತಥಾ ಅಪಿ** ಆದರೂ **ಏತನ್ಮನ್ವಂತರಂ** ಈ ವೈವಸ್ವತಮನ್ವಂತರ ಮುಗಿಯುವ ವರೆಗೂ **ಅತ್ರ** ಈ ಭೂಲೋಕದಲ್ಲಿ **ದೈತ್ಯೇಶ್ವರಾಣಾಂ** ದೈತ್ಯರಾಜರು ಅನುಭವಿಸುವ **ಭೋಗಾನ್** ವಿಷಯಸುಖಗಳನ್ನು **ಅನುಭುಂಕ್ಷ್ವ** ಅನುಭವಿಸು. ಇದರಿಂದ ಕಾಲ ಸ್ಥಳಗಳನ್ನು ತಿಳಿಸಿದಂತಾಯಿತು. ಇದನ್ನು ಪ್ರಹ್ಲಾದರಾಜರು ಕೇಳದಿದ್ದರೂ ಅವರಿಗೆ ಯೋಗ್ಯವಾದ ಇದನ್ನು ನರಸಿಂಹದೇವರೇ ಅನುಗ್ರಹಿಸಿದರೆಂದು ಭಾವ. 'ಇಹ ಅಮುತ್ರ ಚ ಯಥಾ ಮಯಿ ಏಕಾಂತಿನಃ ಮಯ್ಯೇವ ನಿರತಾಃ ಮೇ ಸಕಾಶಾತ್ ಜಾತು ಕದಾಚಿದಪಿ ಆಶಿಷಃ ನ ಆಶಾಸತೇ ತಥಾ ಭವಾದೃಶಾಃ' ಹೀಗೆ ಯೋಜಿಸುವರು. ಹಾಗೆ ಮಾಡಿದರೆ ಪ್ರಹ್ಲಾದಾದಿಗಳಿಗೆ ಅನೈಕಾಂತಿಕತೆ ಇದ್ದರೂ ಇಚ್ಛಿಸುವದಿಲ್ಲ ಎಂದು ತೋರುವದು. ಅದು 'ಏಕಾಂತಿತ್ವಾತ್ ಭಗವತಿ' ಎಂಬ ಹಿಂದಿನ 'ತಥಾ ಅಪಿ' ಎಂಬ ಮುಂದಿನ ಗ್ರಂಥವಿರುದ್ಧವಾದುದು. ವಾಸ್ತವಿಕವಾಗಿ ಹೀಗೆ ಯೋಜನೆ. ತಥಾ ಎಂದರೆ ನಿಶ್ಚಯ ಎಂದರ್ಥ. ಅಥವಾ **ತಥಾ** ನೀನು ಕೇಳಿದ್ದಕ್ಕೆ ಉತ್ತರ ಇದು ಎಂದರ್ಥ. 'ತಥಾ ಸ್ಯಾತ್ ನಿಶ್ಚಯೇ ಪೃಷ್ಟಪ್ರತಿವಾಕ್ಯೇ ಸಮುಚ್ಚಯೇ' ಎಂದು ವಿಶ್ವವಿದೆ. ಇದರ ಭಾವ ಏಕಾಂತಿಗಳು ನನ್ನಿಂದ ಏನನ್ನೂ ಯಾವಾಗಲು ಕೇಳುವದಿಲ್ಲವೆಂಬುದು ನಿಶ್ಚಿತ. ತಥಾ ಅಪಿ ನೀನು ಏಕಾಂತಭಕ್ತನಾದರೂ ದೈತ್ಯೇಶ್ವರರ ಭೋಗಗಳನ್ನು ನನ್ನ ಆಜ್ಞೆಯಂತೆ ಒಂದು ಮನ್ವಂತರ ಅನುಭವಿಸು ಎಂದು ನೀನು ಕೇಳಿದ್ದಕ್ಕೆ ಉತ್ತರ. 'ಯಥಾ ಇಹ ತಥಾ ಪರತ್ರ ನ ಆಶಾಸತೇ' ಹೀಗೆ ಯೋಜಿಸಬಹುದು. ಇಲ್ಲಿ ಹೇಗೆ ಕೇಳುವದಿಲ್ಲವೋ ಹಾಗೆ ಪರಲೋಕದಲ್ಲಿಯೂ ಕೇಳುವದಿಲ್ಲವೆಂದರ್ಥ.(ಯಥಾ ಏಕಾಂತಿನಃ ತಥಾ ಭವಾದೃಶಃ ಹೀಗೆ ಯೋಜನೆ ಬೇಡವೆಂದು ಸತ್ಯಧರ್ಮರ ಅಭಿಪ್ರಾಯ. ಭವಾದೃಶಾಃ ಏಕಾಂತಿನಃ ಹೀಗೆ ಯೋಜಿಸಿದರೂ ತಪ್ಪಿಲ್ಲ) ಉಳಿದವರಿಗೆ ಬಂಧಕವಾದರೂ ಸಂಸಾರ ಹೀಗೆ ಮಾಡಿದ ನಿನಗೆ ಬಂಧಕವಾಗಲಾರದು ಆದ್ದರಿಂದ ಇದನ್ನು ಅವಶ್ಯ ಮಾಡು ಎಂದು ವಿಸ್ತರಿಸುವನು. ॥೧೨॥

ದೈತ್ಯೇಶ್ವರ ಪದವನ್ನು ಅನುಭವಿಸುವಾಗಲೂ ಮುಕ್ತಿಯಲ್ಲಿ ಆನಂದಾತಿಶಯಕ್ಕೆ ಕಾರಣವಾದ ಸ್ಥಾನವನ್ನು ಮಾಡೆಂದು ಹೇಳುವನು.

**ಕಥಾ ಮದೀಯಾ ಜುಷಮಾಣಃ ಪ್ರಿಯಾಸ್ತ್ವ-**
**ಮಾವೇಶ್ಯ ಮಾಮಾತ್ಮನಿ ಸಂತಮೇಕಮ್ ।**
**ಸರ್ವೇಷು ಭೂತೇಷ್ವಧಿಯಜ್ಞಮೀಶಂ**
**ಯಜಸ್ವ ಯೋಗೇನ ಚ ಕರ್ಮ ಹಿನ್ವನ್ ॥೧೩॥**

**ತ್ವಂ** ನೀನು **ಪ್ರಿಯಾಃ** ನಿನಗೂ ನನಗೂ ಪ್ರಿಯವಾದ **ಮದೀಯಾಃ** ನನ್ನ **ಕಥಾಃ** ಈ ಅವತಾರದ ಇತರ ಅವತಾರಗಳ ಚರಿತ್ರೆಗಳನ್ನು **ಜುಷಮಾಣಃ** ಸೇವಿಸುತ್ತ (ಶ್ರವಣಮನನ ಮಾಡುತ್ತ) **ಸರ್ವೇಷು ಭೂತೇಷು** ಎಲ್ಲ ಜೀವರಲ್ಲಿ ಮತ್ತು ಚರುಪುರೋಡಾಶ ಮೊದಲಾದ ಎಲ್ಲ ಪದಾರ್ಥಗಳಲ್ಲಿಯೂ **ಸಂತಂ** ಇರುವ **ಏಕಂ** ಒಬ್ಬನೇ ಆದ **ಮಾಂ** ನನ್ನನ್ನು **ಆತ್ಮನಿ** ಮನಸ್ಸಿನಲ್ಲಿ **ಆವೇಶ್ಯ** ಇಟ್ಟು ಧ್ಯಾನಮಾಡುತ್ತ **ಅಧಿಯಜ್ಞಂ** ಎಲ್ಲ ಯಜ್ಞನಿಯಾಮಕನಾದ ಭೋಕ್ತೃವಾದ **ಈಶಂ** ಸ್ವಾಮಿಯಾದ **ಮಾಂ** ನನ್ನನ್ನು **ಯೋಗೇನ** ಭಕ್ತಿಯಿಂದ(ಎಲ್ಲ ವಸ್ತುಗಳಲ್ಲಿಯೂ ನಿಯಾಮಕನಾಗಿದ್ದು ಪೂಜ್ಯಪೂಜಾಗತನೆಂದು ಧ್ಯಾನ ಮಾಡುವದೆಂಬ ಉಪಾಯದಿಂದ **ಕರ್ಮ** ಪ್ರತಿಬಂಧಕಕರ್ಮಗಳನ್ನು **ಹಿನ್ವನ್** ನಾಶಪಡಿಸುತ್ತ,ಹೋಗಲಾಡಿಸುತ್ತ) **ಯಜಸ್ವ** ಯಜ್ಞಾದಿಗಳಿಂದ ಪೂಜಿಸು. ನಿವೃತ್ತಿಕರ್ಮಾನುಷ್ಠಾನದಿಂದ ಮೋಕ್ಷದಲ್ಲಿ ಆನಂದಾತಿಶಯವಾಗುವದೆಂದು ಭಾವ. **ಭೂತೇಷು** ಪ್ರಾಣಿಗಳಲ್ಲಿ ಎಂದರ್ಥ **ಸರ್ವೇಷು** ಪ್ರಾಣಿಗಳಿಂದ ಭಿನ್ನವಾದ ಎಲ್ಲ ಪದಾರ್ಥಗಳಲ್ಲಿ ಎಂದರ್ಥ. ವ್ಯಧಿಕರಣ ಸಪ್ತಮಿಗಳಿವು(ವ್ಯಸ್ಯ) ವಿಭಾಗ ಮಾಡಿ ಹೇಳಿದ ವ್ಯಾಸರಿಗೆ ಇದೇ ಅರ್ಥ ಅಭಿಪ್ರೇತವಾಗಿದೆ. ಇಲ್ಲವಾದರೆ ಸರ್ವಭೂತೇಷು ಎಂದು ಹೇಳುತ್ತಿದ್ದರು. ಸರ್ವೇಷು ಎಂದಿಷ್ಟೇ ಹೇಳಿದರೂ ಎಲ್ಲದರ ಜ್ಞಾನವಾಗುತ್ತದೆ. ಆದರೂ ಬುದ್ಧಿವಂತರು ಸರ್ವಶಬ್ದ ಸಂಕೋಚ ಮಾಡುವರು. ಕಾರಣ ಭೂತೇಷು ಎಂದಿರುವರು. ಭೂತೇಷು ಎಂದಿಷ್ಟೇ ಹೇಳಿದರೆ ಪ್ರಾಣಿಗಳಲ್ಲಿ ಮಾತ್ರ ವ್ಯಾಪ್ತನೆಂದು ತಿಳಿಯುವದು. ಕಾರಣ ಸರ್ವೇಷು ಎಂದಿರುವರು. ಹೀಗೆ ಪರಸ್ಪರ ಉಪಕಾರ್ಯೋಪಕಾರಕತೆ ಇದೆ ಎಂದು ತಿಳಿಯಬೇಕು. ಸರ್ವೇಷು ಎಂದಾಗ ಸಂಕೋಚ ಮಾಡಿ ಕೇವಲ ಅಚೇತನಗಳಲ್ಲಿ ಎಂಬರ್ಥ ತೋರುವದಿಲ್ಲ ಎನ್ನಬೇಡ. ಶಿಷ್ಯನೇ ಅತ್ತೃತ್ವಾಧಿಕರಣಸುಧೆಯನ್ನು ಜ್ಞಾಪಿಸಿಕೋ ಎನ್ನುತ್ತಾರೆ ಶ್ರೀಗಳವರು. ಅಲ್ಲಿ ಹೀಗೆ ಹೇಳಿದೆ. ಈ ಅಧಿಕರಣದ ವಿಷಯವಾಕ್ಯನಿರ್ಧಾರಣ ಮಾಡುವಾಗ 'ಚರಾಚರಗ್ರಹಣಾತ್' ಎಂದು ಹೇಳುವ 'ಸರ್ವಂ ವಾ ಅತ್ತಿ' ಎಂದು ಕಂಠತಃ ಹೇಳಿದೆ. ನಮ್ಮ ಆಚಾರ್ಯರು ಹೇಳಿದ

ವಾಕ್ಯದಲ್ಲಿ ಎಂದು ಹೇಳಿ ಹಾಗಾದರೆ ಶ್ರುತಿಯು ಅನುಗುಣವಾದ 'ಸರ್ವಗ್ರಹಣಾತ್' ಎಂದೇ ಸೂತ್ರದಲ್ಲಿ ಹೇಳಬಹುದಿತ್ತಲ್ಲ ಎಂದು ಶಂಕಿಸಿ ಸರ್ವಗ್ರಹಣಾತ್ ಎಂದು ಹೇಳಿದ್ದರೆ ಪೂರ್ವಪಕ್ಷಿಯು ಅದಿತಿಯೂ ತನಗೆ ಯೋಗ್ಯವಾದ ಅನ್ನಪಾನಾದಿಗಳನ್ನೆಲ್ಲ ಅನುಭವಿಸುವಳು ಎಂದು ಹೇಳಲು ಸಾಧ್ಯವಿದೆ. ಕಾರಣ ಚರಾಚರಗ್ರಹಣಾತ್ ಎಂದು ಹೇಳುವದಕ್ಕೆ ಸರ್ವಶಬ್ದ ಸಂಕುಚಿತವಲ್ಲವೆಂದು ತಿಳಿಸುವದೇ ಪ್ರಯೋಜನವೆಂದು ಹೇಳಿದ್ದಾರೆ. ।।೧೩।।

ದಾನವನೇ ಈಗಲೇ ನಿನಗೆ ಮುಕ್ತಿಯಾಗುವದಿಲ್ಲ. ಕೆಲವು ಕಾಲ ವಿಲಂಬವಿದೆ. ಆದ್ದರಿಂದ ಇಷ್ಟು ಕಾರ್ಯಗಳಾಗಬೇಕು ಅದೇನೆಂದು ಹೇಳುವರು-

**ಭೋಗೇನ ಪುಣ್ಯಂ ಕುಶಲೇನ ಪಾಪಂ**
**ಕಲೇವರಂ ಕಾಲಜವೇನ ಹಿತ್ವಾ ।**
**ಕೀರ್ತಿಂ ವಿಶುದ್ಧಾಂ ಸುರಲೋಕಗೀತಾಂ**
**ವಿತಾಯ ಮಾಮೇಷ್ಯಸಿ ಮುಕ್ತಬಂಧಃ** ।।೧೪।।

**ಪುಣ್ಯಂ** ಪ್ರಾರಬ್ಧವಾದ ಅನಿಷ್ಟವಾದ ಮಕ್ಕಳು ಮುಂತಾದವರಿಗೂ ಕೊಡಲಾಗದ ಪುಣ್ಯವನ್ನು **ಭೋಗೇನ** ಭೋಗಮಾಡಿಯೇ **ಹಿತ್ವಾ** ಕಳೆದುಕೊಂಡು ಇದರಂತೆ ನ **ಪುಣ್ಯಂ** ಪ್ರಾರಬ್ಧವಾದ ಪಾಪವನ್ನು **ಭೋಗೇ ಸತ್ಯೇವ** ಭೋಗಮಾಡಿದಾಗಲೇ **ಹಿತ್ವಾ** ಕಳೆದುಕೊಂಡು **ಕುಶಲೇನ** ಪ್ರಾಯಶ್ಚಿತ್ತಾದಿಗಳಿಂದ **ಪಾಪಂ** ಅಪ್ರಾರಬ್ಧಪಾಪವನ್ನು **ಹಿತ್ವಾ** ಕಳೆದುಕೊಂಡು ಮತ್ತು **ನ ಪಾಪಂ** ಅಪ್ರಾರಬ್ಧಪುಣ್ಯವನ್ನು **ಕುಶಲೇ** ಪುತ್ರಾದಿಕ್ಷೇಮವಿಷಯದಲ್ಲಿ 'ಸುಹೃದಸಾಧುಕೃತ್ಯಾಂ' ಮುಂತಾಗಿ ಹೇಳಿದ್ದನ್ನು **ಹಿತ್ವಾ** ಬಿಟ್ಟು ಅಂದರೆ ಮಕ್ಕಳು ಮುಂತಾದವರಿಗೆ ತಲುಪಿಸಿ ಅಂದರೆ ಆ ಪುಣ್ಯಫಲ ಭಾಗಿಗಳನ್ನಾಗಿ ಮಾಡಿ ಎಂದರ್ಥ. ('ಕುಶಲಃ ಶಿಕ್ಷಿತೇ ಕ್ಷೇಮಪರ್ಯಾಪ್ತಸುಕೃತೇಷು ಅಪಿ' ಎಂದು ವಿಶ್ವವಿದೆ. 'ಭೋಗೇನ ತ್ವಿತರೇ ಕ್ಷಪಯಿತ್ವಾ ಅಥ ಸಂಪತ್ಸ್ಯತೇ' 'ತದಧಿಗಮ ಉತ್ತಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್' ಎಂಬ ಸೂತ್ರಭಾಷ್ಯ ಟೀಕಾಗಳಿಂದ ಇಲ್ಲಿ ವಿಶೇಷ ತಿಳಿಯಬೇಕು.

ಸತ್ಯಧರ್ಮರ ವಾಕ್ಯಾನುವಾದ.

(ಶಾಸ್ತ್ರವು ಒಬ್ಬರಿಗಾಗಿಯೇ ಇದ್ದುದಲ್ಲ. ಆದ್ದರಿಂದ ಅವನಿಗಾಗಿ ಹೊಸ ಶಾಸ್ತ್ರ ಬಂದಿಲ್ಲ. ಇವನೇನು ಅವಿದ್ವಾಂಸನೆನ್ನಲಾಗುವದಿಲ್ಲ. ಆದ್ದರಿಂದ ವಿಶೇಷವಿಷಯ ಪರ್ಯವಸಾನ ಕೆಲವರು ಮಾಡಿದ್ದು ಯುಕ್ತವೇ ಆಗಿದೆ ಎಂದು ತಿಳಿಯಬೇಕು.) **ಕಾಲಜವೇನ** ನಿಗದಿತವಾದ ಕಾಲದಿಂದ **ಕಲೇವರಂ** ಶರೀರವನ್ನು **ಹಿತ್ವಾ** ತೊರೆದು

**ಮಾಂ** ನನ್ನನ್ನು **ಏಷ್ಯಸಿ** ಹೊಂದುವಿ **ಮುಕ್ತಬಂಧಃ** ಸಂಸಾರಬಂಧದಿಂದ ಮುಕ್ತನಾಗಿ ಎಂದು ಸಾಮಾನ್ಯ ಅರ್ಥ ಮೊದಲು **ಸುರಲೋಕಗೀತಾಂ** ದೇವತೆಗಳ ಲೋಕದಲ್ಲಿಯೂ ಗಾನಮಾಡಲು ಯೋಗ್ಯವಾದ **ವಿಶುದ್ಧಾಂ** ನಿರ್ಮಲವಾದ **ಕೀರ್ತಿಂ** ಕೀರ್ತಿಯನ್ನು **ವಿತಾಯ** ವಿಸ್ತಾರಗೊಳಿಸಿ ಮುಕ್ತೈಃ ಬಂಧಃ ಯಸ್ಯ ಸಃ ಮುಕ್ತರೊಡನೆ ಸ್ನೇಹವುಳ್ಳವನಾಗಿ ನನ್ನನ್ನೂ ಹೊಂದುವಿ. 'ಅನುಬಂಧವಸ್ತು ಭಕ್ತಿಃ ಸ್ಯಾತ್ ಸ್ನೇಹೋ ಬಂಧ ಇತೀರಿತಃ'ಎಂದು ಬೇರೆಡೆ ತಾತ್ಪರ್ಯದಲ್ಲಿ ಹೇಳಿದೆ. ಪ್ರಹ್ಲಾದನನ್ನು ಮೊದಲು ಮಾಡಿ ಎಲ್ಲ ಸಜ್ಜನರಿಗೂ ಮಾಡಿದ ಉಪದೇಶವಿದು. ಆದ್ದರಿಂದ ಅಧಿ ಕಾರಿಗಳು ಅನಂತವಾದುದರಿಂದ ಉಪದೇಶ ಸಮಯವೇ ಸಾಲದೆಂದು ಅನ್ನಬೇಕಿಲ್ಲ. ಭೋಗ ಮಾಡುವದೂ ಸಹ ಪ್ರಾರಬ್ಧಪುಣ್ಯನಾಶಕ್ಕೆ ಕಾರಣವಾಗಿ ನನ್ನನ್ನು ಹೊಂದಲು ಉಪಯುಕ್ತವಾಗಿದೆ. ಪ್ರಾಯಶ್ಚಿತ್ತದಿಂದ ಪಾಪದ ಉಪಮರ್ದವನ್ನು ಬದುಕುವದರಿಂದ ಪ್ರಾರಬ್ಧ ಅಸುರದೇಹನಾಶವನ್ನು ಕೀರ್ತ್ಯಾದಿಗಳನ್ನು ಕೊನೆಗೆ ಭಗವತ್ಪ್ರಾಪ್ತಿಯನ್ನು ತಂದುಕೊಡುವದರಿಂದ ನರಸಿಂಹದೇವರು ಮಾಡಿದ ಮಹಾ ಅನುಗ್ರಹವೆಂದು ತಿಳಿಯಬೇಕು. ॥೧೪॥

ಯಾವ ಯೋಗವನ್ನು ನಿನಗೆ ನಾನು ಉಪದೇಶಿಸಿದೆನೋ ಅದನ್ನು ಮಾಡಲು ಯಾರು ಶಕ್ತರಲ್ಲವೋ ಅವರಿಗೆ ಈ ಉಪಾಯವು ಸುಲಭಸಾಧ್ಯವಾದುದು ಎಂದು ಅದನ್ನು ಹೇಳುತ್ತ ಉಪಸಂಹಾರ ಮಾಡುವನು ನರಹರಿಯು-

**ಯ ಏತತ್ ಕೀರ್ತಯೇನ್ಮಹ್ಯಂ ತ್ವಯಾ ಗೀತಮಿದಂ ನರಃ ।**
**ತ್ವಾಂ ಚ ಮಾಂ ಚ ಸ್ಮರನ್ ಕಾಲೇ ಕರ್ಮಬಂಧಾತ್ ವಿಮುಚ್ಯತೇ ॥೧೫॥**

**ಮಹ್ಯಂ** ನನ್ನ ಉದ್ದೇಶದಿಂದ **ತ್ವಯಾ** ನಿನ್ನಿಂದ **ಗೀತಂ** ಹೇಳಲ್ಪಟ್ಟ **ಏತತ್** ಪದ್ಯಗಳ ಸಮೂಹವು **ಇದಂ** ಅಭೀಷ್ಟಪ್ರದವು ಆದುದನ್ನು **ಯಃ** ಯಾವನು **ಕಾಲೇ** ಯೋಗ್ಯವಾದ ಪರ್ವಕಾಲ ಪ್ರಾತಃಕಾಲಗಳಲ್ಲಿ **ತ್ವಾಂ** ನಿನ್ನನ್ನು **ಚ** ಮತ್ತು **ಮಾಂ** ನನ್ನನ್ನು **ಸ್ಮರನ್** ಸ್ಮರಣಮಾಡುತ್ತ **ಕೀರ್ತಯೇತ್** ಹೇಳುವನೋ **ಸಃ** ಅವನು **ಕರ್ಮಬಂಧಾತ್** ಸಂಸಾರದಿಂದ **ವಿಮುಚ್ಯತೇ** ಮುಕ್ತನಾಗುವನು. ॥೧೫॥

ಮನಸ್ಸಿನಲ್ಲಿ ಕಾಮನೆಗಳು ಹುಟ್ಟದಂತೆ ಮಾಡುವದು ವರ ಕೇಳಿದ ಮೇಲೆ ಭಗವಂತನು ರಾಜಭೋಗವನ್ನು ಅನುಭವಿಸು ಎಂದು ಹೇಳಿ 'ಮದೀಯಾ ಜುಷಮಾಣಃ' ಎಂಬ ಶ್ಲೋಕದಿಂದ ಎಂದಾರಂಭಿಸಿ 'ಮುಕ್ತಬಂಧಃ' ಎಂಬ ಶ್ಲೋಕದ ವರೆಗೆ ಸಂಸಾರದಲ್ಲಿ ವಾಸಮಾಡಿದರೂ ಬಂಧವಾಗಲಾರದು ಎಂದು ಹೇಳಿದನಷ್ಟೇ ಅಲ್ಲ ನಿನಗೇನು ಬೇಕೋ ಅದನ್ನೇ ಕೇಳು ಎಂದೂ ಹೇಳಿದನಾದ್ದರಿಂದ ಆ ಈಶ್ವರನ

ಆಜ್ಞೆಯು ಜ್ಞಾನಿಯಿಂದ ಅವಜ್ಞೇಯವಲ್ಲವಾದ್ದರಿಂದ ತನ್ನ ಮೇಲೆ ತಂದೆಗೆ ಸೌಮನಸ್ಯವನ್ನು ಮತ್ತು ತಂದೆಯ ಪಾವಿತ್ರ್ಯವನ್ನು ಬೇಡಿದನೆಂದು ಹೇಳುವರು-

**ಪ್ರಹ್ಲಾದ ಉವಾಚ**

**ವರಂ ವರಯ ಏತತ್ ತೇ ವರದೇಶಾನ್ಮಹೇಶ್ವರ ।**
**ಯದನಿಂದತ್ ಪಿತಾ ಮೇ ತ್ವಾಮವಿದ್ವಾಂಸ್ತೇಜ ಐಶ್ವರಮ್ ॥೧೬॥**

**ಬದ್ಧಾಮರ್ಷಾಶಯಃ ಸಾಕ್ಷಾತ್ ಸರ್ವಲೋಕಗುರುಂ ಪ್ರಭುಮ್ ।**
**ಭ್ರಾತೃಹೇತಿ ಮೃಷಾದೃಷ್ಟಿಸ್ತ್ವದ್ಭಕ್ತೇ ಮಯಿ ಚಾಘವಾನ್ ॥೧೭॥**

**ತಸ್ಮಾತ್ ಪಿತಾ ಮೇ ಪೂಯೇತ ದುರಂತಾದ್ ದುಸ್ತರಾದಘಾತ್ ।**
**ಪೂತಸ್ತೇಽಪಾಂಗಸಂದೃಷ್ಟಸ್ತದಾ ಕೃಪಣವತ್ಸಲ ॥೧೮॥**

**ಹೇ ವರದೇಶ** ವರಕೊಡುವ ಬ್ರಹ್ಮಾದಿಗಳ ನಿಯಾಮಕನೇ **ಹೇ ಮಹೇಶ್ವರ** ಅತ್ಯುತ್ತಮ ಐಶ್ವರ್ಯವಂತನೇ **ತೇ** ನಿನ್ನಿಂದ **ಏತತ್ ವರಂ** ಈ ಹೇಳುವವರವನ್ನು **ವರಯೇ** ಪ್ರಾರ್ಥಿಸುವೆನು. **ಐಶ್ವರಂ** ಸರ್ವೋಚ್ಚನಾದ ನಿನ್ನ **ತೇಜಃ** ಸಾಮರ್ಥ್ಯವನ್ನು **ಅವಿದ್ವಾನ್** ಅಸುರಾವೇಶದಿಂದ ತಿಳಿಯದಿದ್ದ **ಭ್ರಾತೃಹಾ ಇತಿ** ನಿರಪರಾಧಿಯಾದ ಹಿರಣ್ಯಕನೆಂಬ ಸಹೋದರನನ್ನು ಕೊಂದವನೆಂದು **ಮೃಷಾದೃಷ್ಟಿಃ** ಮಿಥ್ಯಾಜ್ಞಾನವುಳ್ಳ (ಭ್ರಮವುಳ್ಳ) ಕಾರಣ **ಬದ್ಧಾಮರ್ಷಾಶಯಃ** ಅಸಹನೆಯಿಂದ ಕೂಡಿದ ಮನಸ್ಸುಳ್ಳ ಆದ್ದರಿಂದಲೇ **ತ್ವದ್ಭಕ್ತೇ** ನಿನ್ನ ಭಕ್ತನಾದ **ಮಯಿ ಚ** ನಿರಪರಾಧಿಯಾದ ನನ್ನಲ್ಲಿಯೂ **ಅಘವಾನ್** ಪಾಪಮಾಡಿದ(ಕೊಲ್ಲಲು ಪ್ರಯತ್ನಿಸಿದ) **ಮೇ ಪಿತಾ** ಭಕ್ತನಾದ ನನ್ನ ತಂದೆಯಾದ ಜಯನು **ಸಾಕ್ಷಾತ್** ಸ್ವತಂತ್ರವಾಗಿ **ಸರ್ವಲೋಕಗುರುಂ** ಎಲ್ಲ ಪ್ರಪಂಚಕ್ಕೂ ಗುರುವಾದ **ಪ್ರಭುಂ** ಸರ್ವಸಮರ್ಥನಾದ **ತ್ವಾಂ** ನಿನ್ನನ್ನು **ಯದನಿಂದತ್** ಏನು ದೂಷಿಸಿದನೋ **ತಸ್ಮಾತ್** ಆ ದೂಷಣೆ ಎಂಬ **ದುರಂತಾತ್** ಅಂಧಂತಮಸ್ಸಿಗೆ ಕಾರಣವಾದ, ದುಃಖದಾಯಕವಾದ **ದುಸ್ತರಾತ್** ನಿನ್ನ ಅನುಗ್ರಹವಿಲ್ಲದೆ ಪಾರಾಗಲಾರದ **ಅಘಾತ್** ಅಪರಾಧದಿಂದ **ಮೇ ಪಿತಾ** ಸಹವಾಸ ದೋಷದಿಂದ ದುಷ್ಟನಾದ ನನ್ನ ತಂದೆಯು **ಪೂಯೇತ** ಶುದ್ಧನಾಗಲಿ ಪರಿಶುದ್ಧತೆಗೆ ಬೇರೇನು ಸಾಧನ ಮಾಡಬೇಕಿಲ್ಲ ಎನ್ನುತ್ತಾರೆ **ಹೇ ಕೃಪಣವತ್ಸಲ** ದೀನಬಂಧುವೆ **ಯದಾ** ಯಾವಾಗ **ತೇ** ನಿನ್ನ **ಅಪಾಂಗಸಂದೃಷ್ಟಃ** ಕುಡಿಗಣ್ಣಿನಿಂದ ನೋಡಲ್ಪಟ್ಟನೋ **ತದಾ** ಆಗಲೇ **ಪೂತಃ** ಪವಿತ್ರನಾಗಿರುವನು ನನ್ನ ಕರ್ತವ್ಯವೆಂದು ವರಬೇಡುವದಷ್ಟೇ ಎಂದು ಅಭಿಪ್ರಾಯ.

'ಭ್ರಾತೃಹಾ' ಎಂಬಲ್ಲಿ ಚೇತನನನ್ನು ಕೊಂದು ಹಾಕಿದನೆಂದು ತಿಳಿದು ಭ್ರಮ. ಚೇತನನಿಗೆ ನಾಶವಿಲ್ಲತಾನೇ ಅಥವಾ ವ್ಯರ್ಥಜ್ಞಾನವುಳ್ಳವನು. 'ಭ್ರಾತೃಹೇತಿ

ಮೃಷಾದೃಷ್ಟಿಃ' ಎಂಬುದು ಒಂದೇ ಪದ. ಸಹೋದರನನ್ನು ಆಯುಧದಿಂದ ಕೊಂದನೆಂದು 'ದ್ವಿತೀಯಂ ಕರ್ಣತಾಡನಾತ್' ಎಂಬ ಪ್ರಮಾಣದಂತೆ ಆಯುಧವನ್ನು ಶ್ರೀಹರಿಯು ಉಪಯೋಗಿಸಿಲ್ಲ. 'ಏತತ್ತೇ' ಎಂಬುದು ಒಂದೇ ಪದ. ಏಷ ಚಾಸೌ ತ್ವಂ ಚ ಏತತ್ವಂ ತಸ್ಯ **ಏತತ್ತೇ** ನಿನ್ನ ಸಂಬಂಧಿಯಾದ ನಿನ್ನ ಅಧೀನವಾದ ವರಂ ವರಯ ಎಂದನ್ವಯ **ವರಃ** ಶ್ರೇಷ್ಠವಾದ **ದೇಶಃ** ಆದೇಶವು ವರಂ ವೃಣೀಷ್ವ ಎಂಬ ಆಜ್ಞೆಯು (ಉಪಸರ್ಗಗಳು ಧಾತುಲೀನ ಅರ್ಥದ್ಯೋತಗಳೆಂದು ವೈಯ್ಯಾಕರಣಿಗಳು ಅಂಗೀಕರಿಸಿರುವರು. ಸುಧೆಯಲ್ಲಿಯೂ ಗಮ್ಯತೇ ಎಂಬುದಕ್ಕೆ ಅವಗಮ್ಯತೇ ಎಂಬರ್ಥ ಮಾಡಿರುವದರಿಂದ ಈ ರೀತಿ ಅರ್ಥ ಅಪೂರ್ವವಲ್ಲ) **ವರೇ** ನಿನ್ನ ವಿಷಯದಲ್ಲಿ ಯಃ ಆದೇಶಃ ತಸ್ಮಾತ್ ಎಂದೂ ಮಾಡಬಹುದು **ವರೋದೇಶಃ** ಉತ್ತಮ ಉಪದೇಶ ತಸ್ಮಾತ್ ವರದೇಶಾತ್. (ಇಲ್ಲಿ ಗುರುಗಳು ಲ್ಯಬ್‌ಲೋಪನಿಮಿತ್ತ ಪಂಚಮಿ ಎಂದು ಹೇಳಿ ಮುಕ್ತಬಂಧಃ ಮಾಂ ಏಷ್ಯಸಿ ಎಂಬ ಉತ್ತಮ ಉಪದೇಶವನ್ನು ಹೊಂದಿ ವರವನ್ನು ಕೇಳುವೆನು).

'ಭ್ರಾತೃಹೇತಿ ಮೃಷಾ ದೃಷ್ಟಿಃ' ಎಂದು ಒಂದೇ ಪದಮಾಡಿ ಭ್ರಾತಿರ ಹೇತಿ ಆಯುಧಂ ಯಸ್ಯ ಸಃ ಎಂದು ಮೃಷಾದೃಷ್ಟಿ ಎಂದರ್ಥ ಮಾಡಿದೆ. 'ಹೇತಿಸ್ಯಾದಾಯುಧೇ' ಎಂದು ವಿಶ್ವವಿದೆ. ಆಯುಧವಿಲ್ಲದೆ ಮೂರನೇ ಸ್ಕಂಧದಲ್ಲಿ 'ಕರೇಣ ಕರ್ಣಮೂಲೇನ ಅಹನ್' ಎಂದು ಅದರ ತಾತ್ಪರ್ಯದಲ್ಲಿ 'ಬ್ರಹ್ಮಜಸ್ತು ಹಿರಣ್ಯಾಕ್ಷಃ ಪ್ರಥಮಂ ದಂಷ್ಟ್ರಯಾ ಹತಃ । ಸ ಏಷ ಪಾರ್ಷದಾವಿಷ್ಟೋ ದ್ವಿತೀಯಂ ಕರ್ಣತಾಡನಾತ್ । ಪೂರ್ವಂ ಲಯೋದಧೌ ಮಗ್ನಾಂ ದ್ವಿತೀಯಂ ತೇನ ಮಜ್ಜಿತಾಮ್ । ಭುವಮುದ್ಧರತ್ಯೆವಾಸೌ ಹರಿಣಾಕ್ರೋಡಮೂರ್ತಿನಾ ।' ಎಂದು ಆಯುಧವಿಲ್ಲದೆ ಕೊಂದುದಾಗಿ ಹೇಳಿದೆ. ಕಾರಣ ಆಯುಧದಿಂದ ಎಂದು ತಿಳಿದುದು ಭ್ರಮ.

ಇನ್ನು ದ್ವಿತೀಯಸ್ಕಂಧದಲ್ಲಿಯೇ 'ಸುನಾಭಸಂದೀಪಿತತೀವ್ರಮನ್ಯು' ಎಂದು. ಹೇಳಿದ್ದು ಹೇಗೆ? ಎಂದರೆ ಈಗ ನಾವು ಉದಾಹರಿಸಿದ ವಚನಗಳಿಗೆ ಅನುಗುಣವಾಗಿ ಕೇವಲ ಅವನ ಸ್ವರೂಪ ನಿರೂಪಿಸಲು ಮಾತ್ರ ಹೇಳಿದ್ದು ಎಂದು ಕಲ್ಪಿಸಬಹುದು. ಆದ್ದರಿಂದ ಕಥಂತಾ ಏನು ಅಲ್ಲಿಯೂ ಸ್ಪಷ್ಟವಾಗಿ ಹಾಗೆ ಹೇಳಿಲ್ಲ ತಲತಾಲಡನದಿಂದ ಕರ್ಣಮೂಲದಲ್ಲಿ ಎಂದು ಹಾಗು ದಂಷ್ಟ್ರಯಾ ಎಂದು ಕೇಳಿಬರುವದರಿಂದ **ಹೇತಿ ಹನನ** ಆಯುಧದಿಂದ ಕೊಲ್ಲುವರು ಮೃಷಾದೃಷ್ಟಿಯಾಗುವದು. ದೇವತೆಗಳ ದೃಷ್ಟಿಯಲ್ಲಿ ಅವನು ಪವಿತ್ರನೇ ಆದರೂ ಪಾಮರ ಸಮಾಧಾನಕ್ಕಾಗಿ ಈ ಪ್ರಾರ್ಥನೆ. ನನ್ನದು ಕೇಳಬೇಕೆಂದು ಹೇಳುವನು. ನೀನು ಕುಡಿಗಣ್ಣಿನಿಂದ ನೋಡಿದಾಗಲೇ ಪವಿತ್ರನಾಗಿರುವನು. ಆದರೂ ದೀನವತ್ಸಲನೇ ಪಾಮರರ ದೃಷ್ಟಿಯಿಂದ

ಅದನ್ನಿಟ್ಟುಕೊಂಡು ಪೂಯೇತ್ ಪವಿತ್ರನಾಗಲಿ ಹೀಗೆ ಅನ್ವಯ ಮಾಡದಿದ್ದರೆ ಈ ಅರ್ಥವು ಅನನ್ವಿತವೇ ಆಗುವದು. ।।೧೬,೧೭,೧೮।।

ಕೇವಲ ಈ ಜನ್ಮದ ತಂದೆಯನ್ನಷ್ಟೇ ಅಲ್ಲ ನಿನ್ನ ಜನ್ಮಾಂತರದ ಪಿತೃಗಳನ್ನು ಪವಿತ್ರಗೊಳಿಸಿರುವನು ಎಂದು ಹೇಳುತ್ತಾರೆ-

**ಶ್ರೀಭಗವಾನುವಾಚ**

**ತ್ರಿಃ ಸಪ್ತಭಿಃ ಪಿತಾ ಪೂತಃ ಪಿತೃಭಿಃ ಸಹ ತೇಽನಘ ।**
**ಯತ್ ಸಾಧೋಽಸ್ಯ ಕುಲೇ ಜಾತೋ ಭವಾನ್ ವೈ ಕುಲಪಾವನಃ ।।೧೯।।**

**ಅನಘ** ಪಾಪರಹಿತನೇ **ಸಾಧೋ** ಮುಕ್ತಿಯನ್ನು ಸಾಧಿಸುವವನೇ, ಪುಣ್ಯವರ್ಧಕನೇ **ಯತ್** ಯಾವ ಕಾರಣ **ಕುಲಪಾವನಃ** ವಂಶವನ್ನೇ ಪವಿತ್ರಗೊಳಿಸುವ **ಭವಾನ್** ನನ್ನ ಕೃಪಾಪಾತ್ರನಾದ ನೀನು **ಅಸ್ಯ** ಈ ಹಿರಣ್ಯಕಶಿಪುವಿನ **ಕುಲೇ** ವಂಶದಲ್ಲಿ ಆ ಕುಲವು ಸ್ವಾಭಾವಿಕ ಒಳ್ಳೆಯ ಸ್ವಭಾವದ್ದಲ್ಲ **ಚ ತಸ್ಮಿನ್** ನಿಂದಿತವಾದ ಗೋತ್ರದಲ್ಲಿ ಕುಲದಲ್ಲಿ ದೇಹದಲ್ಲಿ 'ಕುಲಂ ಸಜಾತೀಯಗಣೇ ಗೋತ್ರದೇಹೇಽಪಿ ಕಲಿತಂ ಕುಲಂ' ಎಂದು ವಿಶ್ವವಿದೆ **ಜಾತಃ** ಹುಟ್ಟಿರುವಿಯೋ **ತತ್** ಆ ಕಾರಣದಿಂದ **ತೇ** ನಿನ್ನ **ಪಿತಾ** ತಂದೆಯು (ತಂದೆಗಳ) **ತ್ರಿಃ ಸಪ್ತಭಿಃ** ಮೂರರಿಂದ ಗುಣಿಸಲ್ಪಟ್ಟ ಏಳರಿಂದ ಅಂದರೆ ಇಪ್ಪತ್ತೊಂದು **ಪಿತೃಭಿಃ ಸಹ** ಪಿತಾಮಹಾದಿಗಳಿಂದ ಸಹಿತನಾಗಿ **ಪೂತಃ** ಪವಿತ್ರನಾಗಿರುವನು.

'**ತ್ರಿಃ ಸಪ್ತಭಿಃ**' ಎಂಬ ಈ ಶ್ಲೋಕದಲ್ಲಿ ಲೋಕೇಶನು ಹೇಳಿದ ಮಾತು ಅಸಂಭಾವಿತವೆಂದು ತೋರುವದು. ಪಿತೃಶಬ್ದಕ್ಕೆ ಸಾಕ್ಷಾತ್ ಜನಕವಾಚಕತ್ವ ಎಂದರೆ ಒಂದು ಜನ್ಮದಲ್ಲಿ ಒಬ್ಬನಿಗೆ ಒಬ್ಬನೇ ತಂದೆ ಅಂದ ಮೇಲೆ ಈಗ ಇವನಿಗೆ ಹಿರಣ್ಯಕಶಿಪುವು ಒಬ್ಬನೇ ಅಂದಮೇಲೆ ೨೧ ಎಂಬುದು ಅನುಪಪನ್ನವೆ. ಇನ್ನು 'ಪಿತಾಮಹಾದ್ಯಾಶ್ಚ ಪಿತರೋ ನಾಮಕೀರ್ತಿತಾಃ' ಎಂದು ಐತರೇಯಭಾಷ್ಯದಲ್ಲಿ ಹೇಳಿರುವದರಿಂದ ಪಿತಾಮಹಾದಿಗಳನ್ನೆಲ್ಲ ಪಿತೃಶಬ್ದದಿಂದ ತೆಗೆದುಕೊಂಡರೂ ಪರಮಾತ್ಮನ ವರೆಗೆ ಕಶ್ಯಪ,ಮರೀಚಿ,ಚತುರಾನನ(ಬ್ರಹ್ಮಾ) ನರಸಿಂಹದೇವ ಹಿರಣ್ಯಕ ಹೀಗೆ ಐದೇ ಮಂದಿ ಆಗುವರು. ಅಥವಾ ಅಲಿಖಿತಪಾಠಪ್ರಕಾರ ಕಶ್ಯಪ, ಮರೀಚಿ, ಬ್ರಹ್ಮ ಹೀಗೆ ಮೂರೇ ಜನ ದೊರೆಯುವರು ಹೇಗೆ ಮಾಡಿದರೂ ಇಪ್ಪತ್ತೊಂದು ಸಂಖ್ಯಾ ಹೇಳುವದು ಅಶಕ್ಯವೇ. ಕಾರಣ ಆಚಾರ್ಯರು ಸ್ವಲ್ಪ ಅಧ್ಯಾಹಾರಮಾಡಿ ವಾಕ್ಯವನ್ನು ವ್ಯಾಖ್ಯಾನಿಸುವರು.

... ತಾತ್ಪರ್ಯ ...

**'ಜನ್ಮಾಂತರೇ ಪಿತೃಭಿಃ ತ್ರಿಸಪ್ತಭಿಃ'**

ಹಿಂದೆ ಮೂರು ಜನ್ಮಗಳು ಒಂದೊಂದರಲ್ಲಿಯೂ ಏಳು ಪಿತೃಗಳು ಹಿಂದಿನವರು ಮೂರು, ಮುಂದಿನವರು ಮೂರು, ತಾನೊಬ್ಬ ಹೀಗೆ ಏಳು ಜನರು ಸೇರಿ ಇಪ್ಪತ್ತೊಂದು ಆಗುವದು. 'ಜನ್ಮಾಂತರಪಿತೃಭಿಸ್ತ್ರೀಭಿಃ' ಎಂದೂ ತಾತ್ಪರ್ಯ ಪಾಠವಿದೆ. ಸಮುಸ್ತವಾದುದು ಅದು ಇತಿ ಸುಂದರವಾದುದು. ಏಕವಚನ ಬಹುವಚನಾರ್ಥತಾ ಸಂಪಾದನಾಯಾಸಾನಾಸಾದಕತ್ವಾತ್ ಎನ್ನುತ್ತಾರೆ ಶ್ರೀಗಳು. ಜನ್ಮಾಂತರದಲ್ಲಿ **ಪಿತೃಭಿಃ** ಹಿರಣ್ಯಕಶಿಪು ಕಶ್ಯಪ, ಮರೀಚಿ, ಎಂಬ ಪಿತಾ-ಪಿತಾಮಹ-ಪ್ರಪಿತಾಮಹರುಗಳಿಂದ ಎಂದರ್ಥ. ಇದರಿಂದ ಪಿತೃಶಬ್ದವು ಸಾಕ್ಷಾತ್ ಜನಕವಾಚಕವು ಅಂದಮೇಲೆ ಇಪ್ಪತ್ತೊಂದು ಎಂದು ಹೇಳಿದ್ದು ಜನ್ಮಾಂತರಾಭಿಪ್ರಾಯದಿಂದಲೇ ಹೊರತು ಈ ಜನ್ಮಾಭಿಪ್ರಾದಿಂದಲ್ಲ ಎಂದು ಹೇಳಿದಂತಾಯಿತು ಎಂದು ಕೆಲವರು ಮಾಡುವ ನಿರ್ಬಂಧವು ನಿಷ್ಕಾರಣಕವಾದುದು. ಆಚಾರ್ಯರೇ ಐತರೇಯ ಭಾಷ್ಯದಲ್ಲಿ ಪಿತೃಶಬ್ದಕ್ಕೆ ಪಿತಾಮಹಾದಿಪರತೆಯನ್ನು ಸಪ್ರಮಾಣವಾಗಿ ವ್ಯಾಖ್ಯಾನಿಸಿರುವದರಿಂದ ಇಲ್ಲಿ ಕಂಠತಃ ಅನುಕ್ತಿಯ ಉತ್ಕಂಠತೆಯನ್ನು ಕುಂಠನ ಮಾಡಬಹುದು ಮತ್ತು ಪಿತೃಶಬ್ದದಿಂದ ಒಬ್ಬನನ್ನೇ ತೆಗೆದುಕೊಂಡರೆ ಕಾಲವಿಲಂಬ ಪ್ರಸಕ್ತಿ ಇರುವಂತೆ (ಇಪ್ಪತ್ತೊಂದು ಜನ್ಮದ ಕಾಲ) ಪಿತಾಮಹ ಪ್ರಪಿತಾಮಹರಿಗೆ ಪಾವಿತ್ರ್ಯ ಹೇಳಿದಂತಾಗುವದಿಲ್ಲ. ಮಹಾಮಾಹಾತ್ಮ್ಯ ಅವಶ್ಯ ಹೇಳಬೇಕಾದದ್ದು ಸಿದ್ಧವಾಗುವದಿಲ್ಲ. ಕಾರಣ ಪಿತೃಶಬ್ದದಿಂದ ಪಿತಾಮಹಾದಿಗಳನ್ನು ಸ್ವೀಕರಿಸಬೇಕು. ಜನ್ಮಾಂತರದ ಇಪ್ಪತ್ತೊಂದು ಪಿತೃಗಳಿಂದ ಸಹಿತನಾಗಿ ಪವಿತ್ರನಾದನು ಎಂದರ್ಥ. ಈ ವಿಷಯ ಶ್ರುತಿಸ್ಮೃತಿಗಳಲ್ಲಿ ಇದೆ. 'ಸ್ವಾದುಷಂ ಸದಃ ಪಿತರೋ ವಯೋಧಾಃ'ಎಂದು ಶ್ರುತಿ.'ಯೇ ಅಬಾಂಧವಾ ಯೇ ಬಾಂಧವಾ ಅನ್ಯಜನ್ಮನಿ ಬಾಂಧವಾ । ಜನ್ಮನಿ ಜನ್ಮನಿ ಬಾಂಧವಾ । ತೇ ತೃಪ್ತಿಮಖಿಲಾ ಯಾಂತು ಮಯಾ ದತ್ತೇನ ವಾರಿಣಾ । ಜನ್ಮಾಂತರೇ ಯೇ ಮಮ ಸಂಗತಾಶ್ಚ ತೇಭ್ಯ ಸ್ವಧಾ ಪಿಂಡಮಹಂ ದದಾಮಿ'ಎಂದು ಸ್ಮೃತಿ. ತಂದೆ ಕಡೆಗೆ ಏಳು, ತಾಯಿ ಕಡೆಗೆ ಏಳು, ಹೆಂಡತಿ ಕಡೆಗೆ ಏಳು ಹೀಗೆ ಇಪ್ಪತ್ತೊಂದು ಎಂದೂ ಹೇಳಬಹುದು ಎಂದು ಕೆಲವರು. ವಸ್ತುತಸ್ತು 'ಮಾನುಷಾ ಏವ ದೇವಾದಯೋ ಭವಂತಿ' ಎಂದಿರುವದರಿಂದ ಜಯವಿಜಯರಿಗೆ ಯಾವಾಗ ಯಾವಾಗ ಎಲ್ಲಿ ಎಲ್ಲಿ ಹುಟ್ಟಿರುವರೋ ಆ ಆ ಪಿತೃಗಳಿಂದ ಸಪ್ತಕವನ್ನು ತೆಗೆದುಕೊಳ್ಳಬೇಕು. ಇಪ್ಪತ್ತೊಂದು ಜನ್ಮದ ನಂತರ ಸಾಪಿಂಡ್ಯ ಹೋಗುವದು. 'ತ್ರಯಃ ಪ್ರಾಂಚಃ ತ್ರಯಃ ಪ್ರತ್ಯಂಚ ಆತ್ಮಾ ಸಪ್ತಮಃ ಏತಾವತಂ ಏವ ಏನಂ ಅಮುಷ್ಮಿನ್ ಲ್ಲೋಕೇ ಉಪಜೀವಂತಿ' ಎಂದು ಶ್ರುತಿ ಇದೆ.

ಪ್ರಹ್ಲಾದಾದಿಗಳಿಗೆ ಪೂರ್ವಜನ್ಮವು 'ಪ್ರತಿಮನ್ವಂತರೇ ಚೈವ ಪ್ರಹ್ಲಾದಾದ್ಯಾ ಬಭೂವಿರೇ' ಎಂಬ ಪ್ರಮಾಣಸಿದ್ಧವಾಗಿದೆ. ॥೧೯॥

ಮಗನಾದ ನಿನ್ನಿಂದ ತಂದೆ ಪವಿತ್ರನಾದನೆಂಬುದು ಆಶ್ಚರ್ಯವೇನಲ್ಲ ಬೇರೆ ಯಾರಿಂದಲೋ ಯಾರಿಗೋ ಪಾವಿತ್ರ್ಯ ಬರುವದು ಸಾಧುಸ್ವಭಾವವೇ ಇಂತಹದು ಎಂದು ಪ್ರಶಂಸಿಸುವರು-

**ಯತ್ರ ಯತ್ರ ಚ ಮದ್ಭಕ್ತಾಃ ಪ್ರಶಾಂತಾಃ ಸಮದರ್ಶಿನಃ ।**
**ಸಾಧವಃ ಸಮುದಾಚಾರಾಸ್ತೇ ಪೂಯಂತೇಽಪಿ ಕೀಕಟಾನ್*** ॥೨೦॥

**ಪ್ರಶಾಂತಾಃ** ನನ್ನಲ್ಲಿಯೇ ಭಕ್ತಿಯಿಂದ ಮನಸ್ಸಿಟ್ಟಿರುವ **ಸಮದರ್ಶಿನಃ** ಎಲ್ಲ ಸ್ಥಳದಲ್ಲಿಯೂ ಶ್ರೀಹರಿಯು ನಿರ್ದೋಷನೆಂದು ತಿಳಿದಿರುವ, ಜೀವರನ್ನು ಅವರವರ ಯೋಗ್ಯತಾನುಗುಣವಾಗಿ ತಿಳಿದಿರುವ **ಸಾಧವಃ** ಒಳ್ಳೆಯ ಸ್ವಭಾವದ **ಸಮುದಾಚಾರಾಃ** ಉತ್ತಮ ಆಚಾರಶೀಲರಾದ **ಮದ್ಭಕ್ತಾಃ** ನನ್ನ ಭಕ್ತರು **ಯತ್ರ ಯತ್ರ ಚ** ಎಲ್ಲೆಲ್ಲಿ ಇರುವರೋ ಆ ಆ ದೇಶಗಳನ್ನು **ಕೀಕಟಾನಪಿ** ಪಾಪಿಷ್ಠ ದೇಶಗಳನ್ನು ಕೂಡ **ತೇ** ಅವರು **ಪೂಯಂತಿ** ಪವಿತ್ರಮಾಡುವರು ಅಂದಮೇಲೆ ತಮ್ಮ ವಂಶ ಪವಿತ್ರಗೊಳಿಸುವರೆಂದೇನು ಹೇಳುವದು? ಕೀಕಟವೆಂದರೆ ದೇಶವಿಶೇಷ ಅದನ್ನು ಪವಿತ್ರಗೊಳಿಸುವದು. ಇಲ್ಲಿರುವವರನ್ನು ಪವಿತ್ರಗೊಳಿಸುವ ದ್ವಾರಾ ಎಂದು ತಿಳಿಯಬೇಕು. 'ಕೀಟಕಾನ್' ಎಂಬ ಪಾಠದಲ್ಲಿ 'ಕೀಟಕಃ ಕೃಮಿಜಾತೌ ಸ್ಯಾನ್ನಿಷ್ಠುರೇ' ಎಂದು ವಿಶ್ವವಿರುವದರಿಂದ ಅಸ್ಪೃಶ್ಯರನ್ನು ಕೃಮಿವಿಶೇಷವನ್ನು ಪವಿತ್ರಗೊಳಿಸುವರು ಎಂದರ್ಥ. 'ಕೀಕಟಾಃ' ಎಂಬ ಪ್ರಥಮಾಂತ ಪಾಠದಲ್ಲಿ ನನ್ನ ಭಕ್ತರಾದ ಹೀನಜಾತಿಯ ಪಾಪಿಷ್ಠರಾದ ಅವರೂ ಆ ದೇಶವನ್ನು, ಜನರನ್ನು ಪವಿತ್ರಗೊಳಿಸುವರು ಎಂದರ್ಥ. ॥೨೦॥

ಮಾಧವನೇ ಅವರು ಸಾಧುಗಳೇಕೆ ನೀನು ಹೇಳು ಎಂದರೆ ಈ ಕಾರಣದಿಂದ ಎಂದು ಹೇಳುವನು-

**ಸರ್ವಾತ್ಮನಾ ನ ಹಿಂಸಂತಿ ಭೂತಗ್ರಾಮೇಷು ಕಿಂಚನ ।**
**ಉಚ್ಚಾವಚೇಷು ದೈತ್ಯೇಂದ್ರ ಮದ್ಭಾವೇನ ಗತಸ್ಪೃಹಾಃ** ॥೨೧॥

**ಹೇ ದೈತ್ಯೇಂದ್ರ** ಪ್ರಹ್ಲಾದನೇ **ಉಚ್ಚಾವಚೇಷು** ಉತ್ತಮಾಧಮವೆಂಬ ತಾರತಮ್ಯದಿಂದಿರುವ ಅಥವಾ ಅನೇಕ ಪದಾರ್ಥಗಳಲ್ಲಿ 'ಉಚ್ಚಾವಚನ್ನೈಕಭೇದೇ'

---

* 'ಕೀಟಕಾನ್' ಇತಿ ಪಾಠಾಂತರಂ.

ಎಂದು ಅಮರವಿದೆ. **ಭೂತಗ್ರಾಮೇಷು** ಪ್ರಾಣಿಸಮೂಹಗಳಲ್ಲಿ **ಮದ್ಭಾವೇನ** ನಾನು ವ್ಯಾಪ್ತನಾಗಿರುವೆನು ಎಂಬ ಭಾವನೆಯಿಂದ ಸ್ಪರ್ಧೆಯಿಲ್ಲದ ಕೋಪವಿಲ್ಲದ ವಿಷಯಾಭಿಲಾಷೆಯಿಲ್ಲದ ನನ್ನ ಭಕ್ತರು **ಕಿಂಚನ** ಆ ಪ್ರಾಣಿಗಳಲ್ಲಿ ಯಾವದೊಂದನ್ನು ಓತೀಕಾಟವನ್ನು ಸಹ **ಸರ್ವಾತ್ಮನಾ** ಮನಸ್ಸು,ಮಾತು,ದೇಹಗಳಿಂದಲೂ **ನ ಹಿಂಸಂತಿ** ಹಿಂಸಿಸುವದಿಲ್ಲ. (ತಸ್ಮಾತ್ ಪ್ರಾಣಭೂತಃ ಯಾವ ಪ್ರಾಣಿಯನ್ನು ಹಿಂಸಿಸಬಾರದು ಎನ್ನುತ್ತದೆ) 'ಈಶ್ವರೋ ಜೀವಕಲಯಾ ಪ್ರವಿಷ್ಟಃ' ಎಂಬ ಶ್ರುತಿಯು 'ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಸ್ಥಿತಃ' ಎಂಬ ಶ್ರುತಿಯು ಹೇಳುವಂತೆ ಸರ್ವತ್ರ ಶ್ರೀಹರಿ ಪ್ರವಿಷ್ಟನು. ಮದ್ಭಾವೇನ ಎಂದರೆ ನನ್ನಲ್ಲಿ ಭಕ್ತಿಯಿಂದಾದರೂ ಅರ್ಥ. ಸ್ಪರ್ಧಾರೂಪವಾದ ಹಿಂಸೆಯೇ ನಿಮಿತ್ತವಿಲ್ಲದ್ದರಿಂದ ನೈಮಿತ್ತಿಕವಾದ ಹಿಂಸೆಯೂ ಇಲ್ಲವೆಂದು ಭಾವ.

**ಭವಂತಿ ಪುರುಷಾ ಲೋಕೇ ಮದ್ಭಕ್ತಾಸ್ತ್ವಾಮನುವ್ರತಾಃ ।**
**ಭವಾನ್ ಮೇ ಖಲು ಭಕ್ತಾನಾಂ ಸರ್ವೇಷಾಂ ಪ್ರತಿರೂಪಧೃಕ್ ॥೨೨॥**

**ಲೋಕೇ** ಲೋಕದಲ್ಲಿ **ಯೇ ಮದ್ಭಕ್ತಾಃ ಪುರುಷಾಃ** ಯಾವ ನನ್ನ ಭಕ್ತರಾದ ಮುಕ್ತಿಯೋಗ್ಯಜೀವರು **ಭವಂತಿ** ಇರುವರೋ ಅವರು **ತ್ವಾಂ** ನಿನ್ನನ್ನು **ಅನುವ್ರತಾಃ ಸಂತಃ** ಅನುಸರಿಸುವವರಾಗಿ ನ ಹಿಂಸಂತಿ ಎಂದು ಹಿಂದೆ ಅನ್ವಯ. ಅಥವಾ **ತೇಷಾಂ ಸರ್ವೇಷಾಂ** ಆ ಎಲ್ಲ ಭಕ್ತರಿಗೆ **ಭವಾನ್** ನೀನು **ಖಲು** ಕೆಲವರನ್ನು ಬಿಟ್ಟು **ಪ್ರತಿರೂಪಧೃಕ್** ದೃಷ್ಟಾಂತವಾಗಿರುವಿ (ಮಂದನಂದಿನಿ) **ಪ್ರತಿರೂಪಂ** ಪ್ರತಿಬಿಂಬಂ ಧರತೀತಿ ಪ್ರತಿರೂಪಧೃಕ್ ಎಂದರೆ ಬಿಂಬನೆಂದರ್ಥ. ಆದ್ದರಿಂದಲೇ ನಿನ್ನನ್ನು ಅನುಸರಿಸುವರು ಎಂಬುದು ಸಂಗತವಾಗಿದೆ. 'ರೂಪಂ ರೂಪಂ ಪ್ರತಿರೂಪೋ ಬಭೂವ' ಪ್ರತಿದೇವತಾಸು ದೇವತಾಪ್ರತಿಬಿಂಬಾಸು ಎಂದು ವ್ಯಾಖ್ಯಾನ ಮಾಡಿ ಪ್ರತಿರೂಪಶಬ್ದವತ್ ಪ್ರತಿದೇವತಾಶಬ್ದಃ ಎಂಬ ಅರ್ಥವನ್ನು ಅಣುಭಾಷ್ಯದಲ್ಲಿ ಹೇಳಿರುವದರಿಂದ ಪ್ರತಿಬಿಂಬ ಪ್ರತಿರೂಪ ಶಬ್ದದಿಂದ ತಿಳಿಯಬೇಕು. 'ಖಲು ನಿಷೇಧನೇ' ಎಂದು ವಿಶ್ವ ಎಂದಿರುವದರಿಂದ ಉತ್ತಮ ಭಕ್ತರನ್ನು ನಿಷೇಧಿಸಿ(ಬಿಟ್ಟು) ಉಳಿದವರಿಗೆ ಬಿಂಬನೆಂದರ್ಥ. ಜೀವಸಮುದಾಯವು ಶ್ರೀಹರಿಯು ರೂಪಕ್ಕೆ ಪ್ರತಿರೂಪವಾಗಿರುತ್ತದೆ. ಆ ಬಿಂಬರೂಪ ಇವನಿಗೆ ಮುಕ್ತಿಗಾಗಿ ಸಾಕ್ಷಾತ್ಕಾರ ವಿಷಯವಾಗುತ್ತದೆ ಎಂದು ತತ್ವಪ್ರಕಾಶಿಕೆಯಲ್ಲಿ ಹೇಳಿದೆ. ತತ್ವಪ್ರದೀಪದಲ್ಲಿಯೂ 'ಪ್ರತಿರೂಪಃ ಬಭೂವ ಪ್ರತಿಬಿಂಬೋ ಬಭೂವ' ಎಂದು ವ್ಯಾಖ್ಯಾನಿಸಿದ್ದಾರೆ.

ಈ ಶ್ಲೋಕದಲ್ಲಿ ಪ್ರಹ್ಲಾದನಿಗೆ ಬಿಂಬತೆ ಮಿಕ್ಕ ದೇವತೆಗಳಿಗೆಲ್ಲ ಪ್ರತಿಬಿಂಬತೆ ಹೇಳಿದಂತೆ ತೋರುವದು ಅದನ್ನು ಪ್ರಮಾಣದಿಂದ ಪರಿಹರಿಸುವರು-

**... ತಾತ್ಪರ್ಯ ...**

**ಋತೇ ತು ತಾತ್ತಿಕಾನ್ ದೇವಾನ್ ನಾರದಾದೀಂಸ್ತಥೈವ ಚ ।**
**ಪ್ರಹ್ಲಾದಾದುತ್ತಮಃ ಕೋ ನು ವಿಷ್ಣುಭಕ್ತೌ ಜಗತ್ರಯೇ ॥ ಇತಿ ಸ್ಕಾಂದೇ ॥**

ತತ್ತ್ವಾಭಿಮಾನಿದೇವತೆಗಳನ್ನು ಹಾಗೂ ನಾರದ, ಭೃಗು, ವಶಿಷ್ಠ ಮುಂತಾದ ಉತ್ತಮರನ್ನು ಬಿಟ್ಟು ಮೂರುಲೋಕದಲ್ಲಿ ಪ್ರಹ್ಲಾದನಿಗಿಂತ ಉತ್ತಮಭಕ್ತರು ಯಾರಿರುವರು ಯಾರೂ ಇಲ್ಲ. 'ಪ್ರಹ್ಲಾದೋ ನಾರದಾಧಮಃ' ಎಂಬಲ್ಲಿಯ ನಾರದ ಶಬ್ದವು 'ನಾರದಶಬ್ದಃ ಪ್ರಲ್ಹಾದೋತ್ತಮ ಉಪಲಕ್ಷಕ ಇತಿ ಏತೇನ ಸ್ಕಾಂದವಚನೇನ ಚ ಸ್ಕಂದಾಯುಕ್ತತಾವಚಃ ಇತಿ ಸುವಚತ್ವಾತ್, ಪ್ರಲ್ಹಾದೋ ನಾರದಾಧಮಃ ಎಂದಿರುವದರಿಂದ ನಾರದಾದೀನ್ ಎಂದು ಹೇಳಿದ್ದು ಹೇಗೆ ಎಂದರೆ ನಾರದಶಬ್ದವು ಪ್ರಲ್ಹಾದೋತ್ತಮರ ಉಪಲಕ್ಷಕವೆಂದು ಈ ಸ್ಕಾಂದವಚನದಿಂದ ತಿಳಿಯುವದು. ಅದರಿಂದ ಅಯುಕ್ತವೆಂಬ ಶಂಕೆಯು ಹೋಯಿತು ಎಂದು ಭಾವ. ।।೨೨।।

'ನಾವೈಷ್ಣವಾಯ ದಾತವ್ಯಂ ನೋದಬಿಂದುಂ ನ ತಂಡುಲಂ' ಎಂದಿರುವದರಿಂದ ನಿನ್ನ ಶತ್ರುವಾದರು ನನ್ನಿಂದ ಉತ್ತರಕ್ರಿಯೆ ಪಡೆಯಲು ಅರ್ಹನಲ್ಲವೆಂದು ಸಣ್ಣಬುದ್ಧಿಯನ್ನು ಮಾಡಬೇಡ ಸ್ವಾಭಾವಿಕಭಕ್ತನು ಅವನು. ಅವನು ಪವಿತ್ರನಾಗಲೆಂದು ಪ್ರಾರ್ಥಿಸಿರುವೆ. ನನ್ನ ಕೃಪಾದೃಷ್ಟಿಗೆ ವಿಷಯನಾಗಿದ್ದಾನೆ. ನನ್ನ ಅಂಗಸಂಗದಿಂದ ಅವನು ಪವಿತ್ರನಾಗಿದ್ದಾನೆ ಎಂಬ ಅಭಿಪ್ರಾಯದಿಂದ ಉತ್ತರಕ್ರಿಯೆ ಮಾಡೆಂದು ಪ್ರೇರಿಸುವನು-

**ಕುರು ತ್ವಂ ಪ್ರೇತಕಾರ್ಯಾಣಿ ಪಿತುಃ ಪೂತಸ್ಯ ಸರ್ವಶಃ ।**
**ಮದಂಗಸ್ಪರ್ಶನೇನಾಂಗ ಲೋಕಾನ್ ಯಾಸ್ಯತಿ ಸುಪ್ರಜಾಃ ।।೨೩।।**

**ಹೇ ಅಂಗ** ಪ್ರಹ್ಲಾದನೇ **ಮದಂಗಸ್ಪರ್ಶನೇನ** ನನ್ನ ದೇಹದ ಸ್ಪರ್ಶದಿಂದ **ಸರ್ವಶಃ** ಎಲ್ಲ ರೀತಿಯಿಂದಲೂ **ಪೂತಸ್ಯ** ಪವಿತ್ರನಾಗಿರುವ **ತೇ** ನಿನ್ನ **ಪಿತುಃ** ತಂದೆಯ **ಪ್ರೇತಕಾರ್ಯಾಣಿ** ಮರಣಾನಂತರ ಮಾಡಬೇಕಾದ ಕಾರ್ಯಗಳನ್ನು **ಸರ್ವಶಃ** ಎಲ್ಲ ರೀತಿಯಿಂದಲೂ **ಕುರು** ಮಾಡು **ಸುಪ್ರಜಾಃ** ನಿನ್ನಂತಹ ಒಳ್ಳೆಯ ಮಗನನ್ನು ಪಡೆದ ನಿನ್ನ ತಂದೆಯು **ಲೋಕಾನ್** ಉತ್ತಮಲೋಕಗಳನ್ನು **ಯಾಸ್ಯತಿ** ಹೊಂದುವನು.

ವಿಶೇಷ :- ಈ ಶ್ಲೋಕದಲ್ಲಿ ನನ್ನ ಅಂಗಸಂಗದಿಂದ ಪವಿತ್ರವಾಗಿರುವನು ಎಂದು ಹೇಳುವದು ಸರಿಯಾಗಲಾರದು. ಮಧುಕೈಟಭರು ಶ್ರೀಹರಿಯ ತೊಡೆಯ ಮೇಲೆ ಸತ್ತರೆಂದು ಹೇಳಿದ್ದರಿಂದ ಅಂಗಸಂಗದಿಂದಲೇ ಮರಣ ಎಂದು ತಿಳಿಯುವದು. ಆದರೆ ಅವರಿಗೆ ಉತ್ತಮಲೋಕಪ್ರಾಪ್ತಿಯಾಗಿಲ್ಲ. ಹಿರಣ್ಯಕಶಿಪುವಿಗೆ ಈ ಜನ್ಮದಲ್ಲಿ

ಅಂಗಸಂಗದ ಮಹಿಮಸಂಪಾದಕ ಭಕ್ತಿಯೂ ಕಂಡಿಲ್ಲ. ಪ್ರಥಮಸ್ಕಂಧದ ಕೊನೆಗೆ ಹಿರಣ್ಯಕಶಿಪು ಮುಂತಾದ ಪ್ರಮಾಣ ಉದಾಹರಣ ಮಾಡಿದ್ದರಿಂದ ಮತ್ತು 'ವೈರಭಾವೇನ ತೌ ಹತೌ' ಎಂದು ಇಲ್ಲಿ ಹೇಳುವರು. ಇನ್ನು ಎರಡು ಜನ್ಮ ಬರುವ ಶಾಪವೂ ಇದೆ ಎಂದರೆ ಅದರ ತಾತ್ಪರ್ಯವನ್ನು ಆಚಾರ್ಯರು ಪ್ರಮಾಣದಿಂದ ಹೇಳುವರು-

**... ತಾತ್ಪರ್ಯ ...**

**ಮಧುಕೈಟಭೌ ಭಕ್ತ್ಯಭಾವಾದೂರೌ ಭಗವತೋ ಮೃತೌ ।**
**ತಮ ಏವ ಕ್ರಮಾದಾಪ್ತೌ ಭಕ್ತ್ಯಾ ಚೈದ್ಯೌ ಹರಿಂ ಯಯೌ ॥ ಇತಿ ಚ**

ಮಧು ಕೈಟಭರಿಗೆ ಭಕ್ತಿಯಿಲ್ಲದಿರುವದರಿಂದ ಸ್ವಾಭಾವಿಕ ದಾನವರಾದ್ದರಿಂದ ಅವರು ಭಗವಂತನ ತೊಡೆಯ ಮೇಲೆ ಮೃತರಾದರು. ಕ್ರಮಾತ್ ತಮಗಿಂತಲೂ ಹೆಚ್ಚು ಪಾಪಮಾಡಿದವರಲ್ಲಿ ಪ್ರವೇಶಮಾಡುವ ಕ್ರಮದಿಂದ ಕಲಿಯ ಜೊತೆಗೆ ತಮಸ್ಸನ್ನೇ ಹೊಂದಿದರು. **ಚೈದ್ಯಃ** ಮುಂದೆ ಚೈದ್ಯ (ಶಿಶುಪಾಲ)ನಾಗುವ ಹಿರಣ್ಯಕಶಿಪುವು ಸಜ್ಜೀವನಾದ್ದರಿಂದ ಭಕ್ತಿಯಿಂದ ಹರಿಯನ್ನು ಹೊಂದಿದನು. ಅಂದರೆ ಹೊಂದುತ್ತಾನೆ. ಹೊಂದುವದು ನಿಶ್ಚಿತವಾದ್ದರಿಂದ ಹೀಗೆ ಹೇಳಿರುವರು. ಇದರಿಂದ ಪಾವಿತ್ರ್ಯತೆಗೆ ಕಾರಣವಾದುದು ಭಕ್ತಿಪೂರ್ವಕ ಅಂಗಸಂಗವು. ಅದನ್ನೇ ಇಲ್ಲಿ ನರಸಿಂಹದೇವರು ಹೇಳಿದ್ದು ಅದು ಮುಧುಕೈಟಭರಿಗೆ ಇರಲಿಲ್ಲ ಕಾರಣ ಅವರು ತಮಸ್ಸಿಗೆ ಹೋದುದು. ಸಭಕ್ತಿಸ್ಪರ್ಶದಿಂದ ಇವನು ಉತ್ತಮಲೋಕ ಹೊಂದುವದು ಸಂಭಾವಿತವೇ ಆಗಿದೆ. ಕಾರಣ ಅಸಂಭವವಿಲ್ಲ. ಕೊನೆಯವರಾಗಿದ್ದರಿಂದ (ಅನಂತಿಮತಯಾ) ಈಗಿನ್ನು ಶಾಪ ಕಳೆಯದಿರುವದರಿಂದಲೂ ರಾವಣ-ಕುಂಭಕರ್ಣರನ್ನು ಹೇಳದಿರುವದು ಸಂಭಾವಿತವಾದ್ದರಿಂದ ಮಧ್ಯವರ್ತಿಗಳ ಮಧ್ಯದಲ್ಲಿರುವ ರಾವಣ,ಕುಂಭಕರ್ಣರನ್ನು ಹೇಳದೇ ಚೈದ್ಯನನ್ನು ಹೇಳಿದ್ದು ಹೇಗೆ ಎಂಬ ಕುಚೋದ್ಯಕ್ಕೆ ಅವಕಾಶವಿಲ್ಲ.

ಚೈದ್ಯನಾಗಿರುವಾಗ 'ಶಿರಃ ಕ್ಷುರಾಂತಚಕ್ರೇಣ ಜಹಾರಾಪತತೋ ರಿಪೋಃ' ಎಂದು ದಶಮಸ್ಕಂಧದಲ್ಲಿ ಹೇಳಿರುವದರಿಂದ ಅಂಗಸ್ಪರ್ಶವೇ ಆಗಿಲ್ಲ. ಆದ್ದರಿಂದ ನನ್ನ ಅಂಗ ಸಂಗದಿಂದ ಚೈದ್ಯನಿಗೆ ಸದ್ಗತಿಯಾಯಿತು ಎಂದು ಹೇಳಿದ್ದು ಹೇಗೆ ಎಂದರೆ ಈ ಪ್ರಶ್ನೆ ಸರಿಯಲ್ಲ. ಹಿರಣ್ಯಕನೇ ಚೈದ್ಯನು ಎಂಬ ವಿಷಯದಲ್ಲಭಕ್ತಿಯಲ್ಲಿ ನೈರ್ಭರ್ಯವೇ ಹೊರತು ಅಂಗಸಂಗದಲ್ಲಿ ಅಲ್ಲ. ಎಲ್ಲಿ ಭಕ್ತಿ ಇದ್ದು ಅಂಗಸ್ಪರ್ಶವೂ ಆಗಿದೆ ಅದೂ ಒಂದು ಸುವರ್ಣಸೌಗಂಧ್ಯನ್ಯಾಯದಿಂದ ಲಾಭವೇ ಎಂಬ ಅಭಿಪ್ರಾಯದಿಂದ.

ಪ್ರಮಾಣದಲ್ಲಿ 'ಭಕ್ತ್ಯಾ ಚೈದ್ಯೋ ಹರಿಂ ಯಯೌ' ಎಂದಿರುವರು ಅಂಗಸ್ಪರ್ಶಾಸ್ಪರ್ಶಗಳು ದೋಷಾರ್ಹವಲ್ಲ. ಅಲ್ಲದೇ 'ಚೈದ್ಯದೇಹಸ್ಥಿತಂ ಜ್ಯೋತಿರ್ವಾಸುದೇವಮುಪಾವಿಶತ್' ಎಂದು ಭಕ್ತಿ ಸಹಿತವಾಗಿ ಆ ಹರಿಯ ಅಂಗಾಂತರಸ್ಪರ್ಶವನ್ನು ಭಾಗವತದಲ್ಲಿಯೇ ಹೇಳಿದೆ. ಸಭಾಪರ್ವಭಾರತದಲ್ಲಿಯೂ 'ತತಶ್ಚೇದಿಪತೇರ್ದೇಹಾತ್ತೇಜೋಗ್ರ್ಯಂ ದದೃಶುರ್ನೃಪಾಃ । ಉತ್ಪತಂತಂ ಮಹಾರಾಜ ಗಗನಾದಿವ ಭಾಸ್ಕರಮ್ ।। ತತಃ ಕಮಲಪತ್ರಾಕ್ಷಂ ಕೃಷ್ಣಂ ಲೋಕನಮಸ್ಕೃತಮ್ । ವವಂದೇ ತತ್ತದಾ ತೇಜೋ ವಿವೇಶ ಚ ನರಾಧಿಪ' ಎಂದು ಸ್ಪಷ್ಟ ಅಂಗಸ್ಪರ್ಶ ತಿಳಿದು ಬರುವದು. ಹಾಗಾದರೆ ತಾತ್ಪರ್ಯದಲ್ಲಿ ಭಕ್ತ್ಯಾ ಎಂದಿಷ್ಟೇ ಹೇಳಿದ್ದು ಮತ್ತು ಅದಕ್ಕೆ ಕೃತ್ಯ ಹೇಳಿದ್ದು ಕಿವಿಯಿಂದ ಕೇಳಲಾಗದ್ದು ಎನ್ನುವದು ಸರಿಯಲ್ಲ. ಮೂಲದಲ್ಲಿಯೇ ಮದಂಗಸ್ಪರ್ಶನೇನ ಎಂದು ಸ್ಫುಟವಿರುವದರಿಂದ ಸುಮ್ಮನಿರುವರು ಎಂದು ಈ ಪಕ್ಷದಲ್ಲಿ ಅರ್ಥಮಾಡಲು ಬರುವದು ಸುವರ್ಣಸೌಗಂಧ್ಯನ್ಯಾಯ ಹೂವುಗಳು ಸುಗಂಧವಾಗಿರಬೇಕು ಇದು ನಿಯಮ. ಅದು ಬಂಗಾರವೂ ಆಗಿ ಸುಗಂಧವುಳ್ಳವೂ ಆದರೆ ಬೇಡವೆನ್ನುವರೇ? ವಿಶೇಷ ಲಾಭವಷ್ಟೇ. ಹಾಗೆ ವಿಪರೀತವಾಗಿಯೂ ಚಿನ್ನದಲ್ಲಿ ನೈರ್ಭರ್ಯ ಜೊತೆಗೆ ಸುಗಂಧವೂ ಇದ್ದರೆ ಲಾಭವಾದಂತೆ ಎಂದು ಭಾವ.

ಉತ್ತಮಲೋಕವನ್ನು ಹೊಂದಲು ನನ್ನ ಅಂಗ ಮತ್ತು ನೀನು ಮಗನಾದದ್ದು ಎರಡೂ ಕಾರಣವೆಂದು 'ಸುಪ್ರಜಾ' ಎಂಬುದರಿಂದ ತಿಳಿಸಿರುವರು. ಇಲ್ಲಿ 'ತ್ವಂ ಪ್ರೇತಕಾರ್ಯಾಣಿ ಲಂಘಯೇತ್' ಕುರು ಎಂದು ಹೇಳದೇ ಈ ರೀತಿ ಅಂದರೆ 'ಕುರು ತ್ವಂ ಪ್ರೇತಕಾರ್ಯಾಣಿ' ಎಂದು ಹೇಳಿದ್ದರಿಂದ ಕೃಷ್ಣನ ಅಂಗಸಂಗವಿಲ್ಲದ, ಸರ್ವಥಾ ಭಕ್ತಿಲೇಶವೂ ಇಲ್ಲದಿರುವ ದುರ್ಯೋಧನಾದಿಗಳಿಗೆ 'ಶ್ರೌತಂ ಸ್ಮಾರ್ತಂ ನ ಲಂಘಯೇತ್' ಎಂಬ ವಾಕ್ಯದಂತೆ ಧರ್ಮರಾಜನು ಹೇಗೆ ಪ್ರೇತಕಾರ್ಯ ಮಾಡಿದನು ಹೇಗೆ ಮಾಡಿದನು ಎಂದು ತಿಳಿಸುವರು.

**ಕುರುತ್ವಂ** ಕುರುತ್ವಜಾತಿಯು **ಯಾಸ್ಯತಿ** ಅಪಕೀರ್ತಿಯಿಂದ ನಶಿಸುವದು ಎಂಬ ಅಭಿಪ್ರಾಯದಿಂದ **ಸರ್ವಶಃ** ಧರ್ಮರಾಜನು **ಸರ್ವೇಣ** ಕೌರವರನ್ನು (ದುರ್ಯೋಧನಾದಿಗಳನ್ನು) ಕೊಲ್ಲುವದರಿಂದ **ಶಂ** ಸುಖವು ಯಸ್ಯ ಸಃ ಸರ್ವಶಃ) **ಪ್ರೇತಕಾರ್ಯಾಣಿ** ಉತ್ತರಕ್ರಿಯೆಗಳನ್ನು **ಚಕಾರ** ಮಾಡಿದನು ಮತ್ತು **ಅಂಗಲೋಕಾನ್** ಅಂಗದೇಶದಲ್ಲಿರುವ ಜನರನ್ನು ನಿಯಮಿಸುವ ಕರ್ಣನು **ತಸ್ಯ** ಅವನಿಗೆ 'ಪಿತುಃ ಜ್ಯೇಷ್ಠಭ್ರಾತಃ ಪಿತೃಸಮಃ' ಎಂದಿರುವದರಿಂದ ಹಿರಿಯ ಅಣ್ಣನಾದುದರಿಂದ **ಪ್ರೇತಕಾರ್ಯಾಣಿ ಚಕಾರ** ಕ್ರಿಯೆ ಮಾಡಿದನು. ಆದ್ದರಿಂದ ನೀನು ಮಾಡುವದಿಲ್ಲ ಎನ್ನ ಬೇಡ ಎಂದು ಭಾವ. **ತು** ಅವರಿಗಿಂತಲೂ ವಿಶೇಷವನ್ನು ನನ್ನ ಸಂಗದಿಂದ ಪೂತವೆಂಬುದು ಎಂದು ತಿಳಿಯಬೇಕು. ।।೨೩।।

ವಿರಕ್ತನಾಗಿ ಕಾಡಿಗೆ ಹೋಗಬೇಡ. ರಾಜ್ಯಪಾಲಿಸು ಎಂದು ಹಿಂದೆ ಹೇಳಿದ್ದನ್ನೇ ಜ್ಞಾಪಿಸುತ್ತ ವಿಶದವಾಗಿ ಕೆಲವು ಮಾತುಗಳನ್ನು ಹೇಳುವನು-

**ಪಿತ್ರ್ಯಂ ಚ ಸ್ಥಾನಮಾತಿಷ್ಠ ಯಥೋಕ್ತಂ ಬ್ರಹ್ಮವಾದಿಭಿಃ ।**
**ಮಯ್ಯಾವೇಶ್ಯ ಮನಸ್ತಾತ ಕುರು ಕರ್ಮಾಣಿ (ಮ)ತತ್ಪರಃ ॥೨೪॥**

**ಬ್ರಹ್ಮವಾದಿಭಿಃ** ಬ್ರಹ್ಮಜ್ಞಾನಿಗಳಾದ ಪುರೋಹಿತರಿಂದ **ಯಥೋಕ್ತಂ** ನಿನ್ನ ಪಟ್ಟಾಭಿಷೇಕವಿಷಯದಲ್ಲಿ (ಮಾಡುವಾಗ) ಹೇಳಿದಂತೆ **ಪಿತ್ರ್ಯಂ** ತಂದೆಯ ದೈತ್ಯಾಧಿಪತ್ಯವನ್ನು **ಸ್ಥಾನಂ ಚ** ಸಿಂಹಾಸನವನ್ನು **ಆತಿಷ್ಠ** ಏರು **ಹೇ ತಾತ** ಮಗುವೇ **ಮನಃ** ಮನಸ್ಸನ್ನು **ಮಯಿ** ನನ್ನಲ್ಲಿ **ಆವೇಶ್ಯ** ಇಟ್ಟು **ಮತ್ಪರಃ** ನಾನೇ ಎಲ್ಲದರಲ್ಲಿರುವೆನೆಂಬ ಭಾವನೆಯಿಂದ **ಕರ್ಮಾಣಿ** ಯಜ್ಞಾದಿಗಳನ್ನು ಪೂಜಾದಿಗಳನ್ನು **ಕುರು** ಮಾಡು **'ತತ್ಪರಃ'** ಎಂಬ ಪಾಠದಲ್ಲಿ ಸಃ ತಂದೆಯನ್ನನುಸರಿಸಿದ ಜನರು **ಪರಃ** ಶತ್ರುವು ಯಸ್ಯ ಸಃ ಶತ್ರುವಾಗಿವುಳ್ಳವನಾಗಿ ಎಂದರ್ಥ **ಬ್ರಹ್ಮವಾದಿಭಿಃ** ಪರಬ್ರಹ್ಮನಿರುವನು ನಾವು ಅವನ ದಾಸರು ಎಂದು ಹೇಳುವವರು ಹೇಳಿದಂತೆ ಮನಸ್ಸಿಟ್ಟು ಎಂದರ್ಥ. ಬ್ರಹ್ಮವಾದಿಗಳಾದ ಬ್ರಹ್ಮಾದಿಗಳಿಗೆ ನಾನು ಹೇಳಿದಂತೆ ಹೀಗೂ ಅರ್ಥ. **ಕರ್ಮಾಣಿ** ರಾಜ್ಯರಕ್ಷಣೆ ಪೂಜಾದಿಗಳನ್ನು **ತತ್ಪರಃ** ಅದರಲ್ಲಿ ಆ ಶಕ್ತಿಯಿಂದ ಮಾಡು ಹೀಗೂ ಅರ್ಥ. ॥೨೪॥

ಶ್ರೀನರಸಿಂಹದೇವರ ಆಜ್ಞೆಯ ನಂತರ ಉತ್ತರಕ್ರಿಯೆ ಮಾಡಿದ ನಂತರ ಸನ್ಯಾಸಿಯಾದನೇ ವನವಾಸಿ ಆದನೇ ಅಥವಾ ರಾಜ್ಯವಾಳಿದನೇ ಎಂಬ ಧರ್ಮರಾಜನ ಮನಸ್ಸಿನ ಶಂಕೆಯನ್ನು ಪರಿಹರಿಸುವರು ನಾರದರು-

**ನಾರದ ಉವಾಚ**

**ಪ್ರಹ್ಲಾದೋಽಪಿ ತಥಾ ಚಕ್ರೇ ಪಿತುರ್ಯತ್ ಸಾಂಪರಾಯಿಕಮ್ ।**
**ಯಥಾಽಽಹ ಭಗವಾನ್ ರಾಜನ್ನಭಿಷಿಕ್ತೋ ದ್ವಿಜೋತ್ತಮೈಃ ॥**
**ಪ್ರಹ್ಲಾದಸ್ತು ತಥಾಽಕಾರ್ಷೀದ್ ರಾಜ್ಯಂ ನಿಹತಕಂಟಕಮ್ ॥೨೫॥**

**ರಾಜನ್** ಧರ್ಮರಾಜನೇ **ದ್ವಿಜಾತಿಭಿಃ** ಬ್ರಾಹ್ಮಣರಿಂದ **ಅಭಿಷಿಕ್ತಃ** ಪಟ್ಟಾಭಿಷೇಕ ಮಾಡಿಸಿಕೊಂಡ **ಪ್ರಹ್ಲಾದಃ ಅಪಿ** ಪ್ರಹ್ಲಾದನಾದರೂ **ಯತ್** ಯಾವ **ಪಿತುಃ** ತಂದೆಯ **ಸಾಂಪರಾಯಿಕಂ** ಪರಲೋಕಕಾರ್ಯವೋ **ತತ್** ಅದನ್ನು **ಭಗವಾನ್ ಯಥಾ ಆಹ** ನರಸಿಂಹದೇವರು ಹೇಗೆ ಹೇಳಿದರೋ **ತಥಾ** ಹಾಗೆ **ಚಕ್ರೇ** ಮಾಡಿದರು **ತಥಾ** ಮತ್ತು **ಪ್ರಹ್ಲಾದಃ** ಪ್ರಹ್ಲಾದರಾಜರು **ನಿಹತಕಂಟಕಂ** ವಿಷ್ಣುವೈಷ್ಣವದ್ವೇಷಿಗಳಿಲ್ಲದಂತೆ **ರಾಜ್ಯಂ** ರಾಜ್ಯವನ್ನು **ಚಕ್ರೇ** ಆಳಿದರು. ॥೨೫॥

ಚಿಕ್ಕವನು ಪಟ್ಟದ ಮೇಲೆ ಕುಳಿತನು ಅಲ್ಲಿ ಬಂದಿದ್ದ ದೇವತೆಗಳು ಹೇಗೆ ಬಂದಿದ್ದರೋ ಹಾಗೆಯೇ ಹೋದರೋ ಅಥವಾ ಅಭಿಮುಖವಾಗಿ ಹೋಗಿ ಸಮಕ್ಷಮ ಹೇಳಿ ಹೋದರೋ ಎಂಬ ಶಂಕೆ ಬಂದಾಗ ಎರಡನೇ ಪಕ್ಷವನ್ನು ಅಂಗೀಕರಿಸಿ ಉತ್ತರ ಹೇಳುವರು. ಬಂದಿದ್ದ ದೇವತೆಗಳಲ್ಲಿ ಒಬ್ಬರ ಜೊತೆಗಾದರೂ ಶ್ರೀಹರಿಯು ಮಾತನಾಡಿದನೇ ಇಲ್ಲವೆ ಮಾತನಾಡಿದ್ದರೆ ಯಾರೊಂದಿಗೆ ಆಡಿದನು ಇಲ್ಲವಾದರೆ ದೈತ್ಯರಿಗೂ ದೇವತೆಗಳಿಗೂ ವ್ಯತ್ಯಾಸವೇನು? ಅದು ಅಲ್ಲದೇ ಸೇವ್ಯಸೇವಕಭಾವವೇ ಇಲ್ಲದೇ ಹೋಗಿ ಬ್ರಹ್ಮವಿದ್ಯಾಧಿಕಾರವೇ ಇಲ್ಲದೇ ಹೋದೀತು ಎಂಬ ಶಂಕೆಯನ್ನು ಪರಿಹರಿಸುತ್ತಾರೆ-

**ಪ್ರಹ್ಲಾದ(ಪ್ರಸಾದ)ಸುಮುಖಂ ದೃಷ್ಟ್ವಾ ಬ್ರಹ್ಮಾ ನರಹರಿಂ ಹರಿಮ್ ।**
**ಸ್ತುತ್ವಾ ವಾಗ್ಭಿಃ ಪವಿತ್ರಾಭಿಃ ಪ್ರಾಹ ದೇವಾದಿಭಿರ್ವೃತಃ ॥೨೬॥**

**ಬ್ರಹ್ಮಾ** ಬ್ರಹ್ಮದೇವರು **ನರಹರಿಂ ಹರಿಂ** ನರಸಿಂಹರೂಪಿಯಾದ ಶ್ರೀಹರಿಯನ್ನು **ಪ್ರಹ್ಲಾದಸುಮುಖಂ** ಅವರ ಸ್ತೋತ್ರದಿಂದ ಅವನ ಮೇಲೆ ಸುಮುಖನಾದ(ತನ್ನನ್ನು ಕುರಿತು ಪ್ರಕೃಷ್ಟವಾದ ಆಹ್ಲಾದದಿಂದ ಉಳಿದವರಿಗಿಂತ ವಿಶೇಷವಾಗಿ ಸದಾ ಸುಮುಖನಾದ ಎಂದು ಅಂತರಂಗಾಭಿಪ್ರಾಯವನ್ನು ಹಿಂದಿನ ತಾತ್ಪರ್ಯ ಪರ್ಯಾಲೋಚನೆಯಿಂದ ತಿಳಿಸಬಹುದಾಗಿದೆ) ಪ್ರಸಾದಸುಮುಖ ಎಂಬ ಪಾಠದಲ್ಲಿ ಪ್ರಸನ್ನನಾಗಿ ಸುಮುಖನಾಗಿರುವದನ್ನು **ದೃಷ್ಟ್ವಾ** ನೋಡಿ **ದೇವಾದಿಭಿಃ ವೃತಃ** ದೇವತೆಗಳಿಂದ ಕೂಡಿಕೊಂಡು **ಪವಿತ್ರಾಭಿಃ** ಭಕ್ತಿಯಿಂದ ವಿಜ್ಞಾಪಿಸಿಕೊಂಡನು.

ವಿಶೇಷ :- 'ದೇವಾದಿಭಿಃ ವೃತಃ' ಎಂದದ್ದರಿಂದ ಶ್ರೀಹರಿಯು ಮಿಕ್ಕದೇವತೆ-ಗಳೊಂದಿಗೂ ಮಾತನಾಡಿದನೆಂದು ತಿಳಿಯಬೇಕು. ಅಥವಾ 'ಸ್ತುತ್ವಾ ಪವಿತ್ರಾಭಿಃ' ಎಂದೂ ಅನ್ವಯಮಾಡಬಹುದು. ಸ್ತೋತ್ರ ಮಾಡಿದ್ದರಿಂದ ಪಾವಿತ್ರ್ಯವನ್ನು ಪಡೆದ ಎಂದರ್ಥ. 'ದೇವಾದಿಭಿಃ ವೃತಃ ಸ್ತುತ್ವಾ ದೇವಾದಿಭಿಃ ವೃತಃ ಪ್ರಾಹ' ಎಂದೂ ಅನ್ವಯ. ಬ್ರಹ್ಮದೇವರು ಮುಖ್ಯವಾದ್ದರಿಂದ ಹೀಗೆ ಹೇಳಿದೆ.॥೨೬॥

**ಬ್ರಹ್ಮೋವಾಚ**

**ದೇವದೇವಾಖಿಲಾಧ್ಯಕ್ಷ ಭೂತಭಾವನ ಪೂರ್ವಜ ।**
**ದಿಷ್ಟ್ಯಾ ತೇ ನಿಹತಃ ಪಾಪೋ ಲೋಕಸಂತಾಪನೋಽಸುರಃ ॥೨೭॥**

**ಹೇ ದೇವದೇವ** ಎಲ್ಲದೇವತೆಗಳಿಗೂ ಪ್ರವರ್ತಕನೇ **ಅಖಿಲಾಧ್ಯಕ್ಷ** ಎಲ್ಲವನ್ನು ಕಣ್ಣಿನಿಂದ ಕಂಡವನೇ (ಸಾಕ್ಷಾತ್ ಬಲ್ಲವನೇ) **ಭೂತಭಾವನ** ಎಲ್ಲ ಪ್ರಾಣಿಗಳನ್ನು ಸೃಷ್ಟಿಸುವವನೇ **ಪೂರ್ವಜ** ಎಲ್ಲರಿಗೂ ಮೊದಲಿರುವವನೆ, ಅಭಿವ್ಯಕ್ತನೇ

**ಲೋಕಸಂತಾಪನಃ** ಲೋಕಗಳನ್ನೇ ಸಂತಾಪಗೊಳಿಸುತ್ತಿದ್ದ **ಅಸುರಃ** ದೈತ್ಯನಾದ ಹಿರಣ್ಯಕಶಿಪುವು **ಪಾಪಃ** ಪಾಪಿಯು **ತೇ** ನಿನ್ನಿಂದ **ನಿಹತಃ** ಸಂಹರಿಸಲ್ಪಟ್ಟವನು **ದಿಷ್ಟ್ಯಾ** ನಮ್ಮ ಅದೃಷ್ಟದಿಂದ ಸುಖವು ಆಯಿತು **ಭೂತಭಾವನ ಪೂರ್ವಜ** ಜಗದುತ್ಪಾದಕರಾದವರಿಗಿಂತ ಮೊದಲು ವ್ಯಕ್ತನಾದವನೇ ಎಂದೂ ಅರ್ಥ. ॥೨೭॥

**ಯೋಽಸೌ ಲಬ್ಧವರೋ ಮತ್ತೋ ನ ವಧ್ಯೋ ಮಮ ಸೃಷ್ಟಿಭಿಃ ।**
**ತಪೋಯೋಗಬಲೋನ್ನದ್ಧಃ ಸಮಸ್ತನಿಗಮಾನಹನ್ ॥೨೮॥**

**ಯಃ ಅಸೌ** ಯಾವ ಇವನು **ಮತ್ತಃ** ನನ್ನಿಂದ **ಲಬ್ಧವರಃ** ವರವನ್ನು ಹೊಂದಿದ್ದನೋ **ಮಮ ಸೃಷ್ಟಿಭಿಃ** ನನ್ನ ಸೃಷ್ಟಿಗೆ ವಿಷಯವಾದ ಪದಾರ್ಥಗಳಿಂದ **ನ ವಧ್ಯಃ** ವಧೆಗೆ ಅರ್ಹಲನಲ್ಲವೋ **ತಪೋಯೋಗಬಲೋನ್ನದ್ಧಃ ತಪಃ** ಚಾಂದ್ರಾಯಣಾದಿಗಳು **ಯೋಗ** ಪ್ರಾಣಾಯಾಮಾದಿಗಳು **ಬಲ** ಶರೀರ ಸಾಮರ್ಥ್ಯ ಇವುಗಳಿಂದ **ಉನ್ನದ್ಧಃ** ದೃಪ್ತನಾದ,ಗರ್ವಿಷ್ಠನಾದ('ಸಮುನ್ನದ್ಧ ಸಮುದ್ಭೂತೇ ಮಾನಿದೃಪ್ತಯೋಃ' ಎಂದು ವಿಶ್ವವಿದೆ) **ಸಮಸ್ತನಿಗಮಾನ್** ಎಲ್ಲ ವೇದಗಳನ್ನು **ಅಹನ್** ಸಂಹರಿಸಿದನು ಅಂದರೆ ಅದರಲ್ಲಿ ಹೇಳಿದ ಯಜ್ಞ ಮುಂತಾದವನ್ನು ಮಾಡದಂತೆ ಪ್ರತಿಬಂಧಿಸಿದವನೆಂದರ್ಥ.'ನಿಗಮಃ ಕಟೇ ವೇದೇ' ಎಂದು ವಿಶ್ವವಿದೆ. **ಸಮಸ್ತನಿಗಮಾನ್** ಸಮಸ್ತಲೋಕವೆಂಬ ಮೂಲನಗರದಿಂದ ಭಿನ್ನವಾದ ಅಮರಾವತಿ ಮುಂತಾದ ನಗರಗಳನ್ನು ಅಪಹರಿಸಿದನೋ, ಆ ಪಾಪಿಯು ಹತನಾದನು ಎಂದು ಹಿಂದೆ ಅನ್ವಯ.

ವಿಶೇಷ :- 'ನಿಗಮೋನ್ಯತ್ತು ಯನ್ಮೂಲನಗರಾತ್ ಪುರಂ' ಎಂದು ಅಮರವಿದೆ. ಮಮ ಸೃಷ್ಟಿಭಿಃ ಮಮ ಸೃಷ್ಟಿ ನಿರ್ಮಾಣಂ ಯೇಷಾಂ ತೇ ಮಮಸೃಷ್ಟ್ಯಃ ತೈಃ ಎಂದು ಒಂದೇ ಪದ. ಷಷ್ಠಿಗೆ ಲೋಪವಾಗದಿರುವದು ಆರ್ಷವೆಂದು ಕೆಲವರು. ನನ್ನಿಂದ ನಿರ್ಮಾಣವುಳ್ಳವರಿಂದ ಎಂದರ್ಥ. ॥೨೮॥

**ದಿಷ್ಟ್ಯಾಽಸ್ಯ ತನಯಃ ಸಾಧುರ್ಮಹಾಭಾಗವತೋಽರ್ಭಕಃ ।**
**ತ್ವಯಾ ವಿಮೋಚಿತೋ ಮೃತ್ಯೋರ್ದಿಷ್ಟ್ಯಾತ್ರಾತಸ್ತ್ವಯಾಽಧುನಾ॥೨೯॥**

**ದಿಷ್ಟ್ಯಾ** ಸಜ್ಜನರ ಸುಖಕಾರಣವಾದ ಅದೃಷ್ಟದಿಂದ, ದೈವದಿಂದ **ಅಸ್ಯ** ನಿನ್ನಿಂದ ಕೊಲ್ಲಲ್ಪಟ್ಟ ಹಿರಣ್ಯಕನ **ತನಯಃ** ಮಗನು **ಸಾಧುಃ** ಸಜ್ಜನನು **ಮಹಾಭಾಗವತಃ** ಭಗವದ್ಭಕ್ತನು ಆದ **ಅರ್ಭಕಃ** ಚಿಕ್ಕವಯಸ್ಸಿನ ಪ್ರಹ್ಲಾದನು **ತ್ವಯಾ** ನಿನ್ನಿಂದ ಮುಕ್ತನಾಗಿ ಮಾಡಲ್ಪಟ್ಟನು **ಅಧುನಾ** ಈಗ **ತ್ರಾತಃ** ರಕ್ಷಿಸಲ್ಪಟ್ಟನು **ದಿಷ್ಟ್ಯಾ** ದೈವಿಕವಾಗಿ 'ಸುಖಲಕ್ಷಣೋ ವರೋ ದತ್ತಃ' ಎಂದು ವಿಜಯಧ್ವಜರು ವ್ಯಾಖ್ಯಾನ ಮಾಡಿರುವರು

ವರವು ಕೊಡಲ್ಪಟ್ಟಿತು ಎಂದರ್ಥ. ಸತ್ಯಧರ್ಮರ ಪ್ರಕಾರ **ಯಃ** ಯಾವನು **ಅತನಯಃ** ನೀತಿ ಇಲ್ಲದವನು **ಅತಃ ಮೃತ್ಯೋಃ** ಆಮುತ್ಯುವಿನಿಂದ **ಸಾಧುಃ ಮಹಾಭಾಗವತಃ** ಸಜ್ಜನನಾದ ಮಹಾಭಗವದ್ಭಕ್ತನಾದವನು **ದಿಷ್ಟ್ಯಾ** ಸುಖವಾಗಿ **ಅಸಿ** ಅಂದರೆ ಖಡ್ಗಪರ್ವತದಿಂದ ಕೆಡವುವದೇ ಮುಂತಾದ ಮರಣಸಾಧನದಿಂದ **ತ್ವಯಾ** ನಿನ್ನಿಂದ **ವಿಮೋಚಿತಃ** ಮುಕ್ತನಾದನು. ವಿ ವಿಶಿಷ್ಟವಾದ **ಮಾ** ಜ್ಞಾನಕ್ಕೆ **ಉಚಿತಃ** ಜ್ಞಾನಸಾಧನಶಾಸ್ತ್ರೋಪದೇಶಯೋಗ್ಯನೆಂದರ್ಥ **ಹೇ ತ್ರಾತಃ** ರಕ್ಷಕನೇ ತ್ವಯಾ **ಮೋಚಿತಃ** ಹೀಗೂ ಅನ್ವಯ. ಇದರಿಂದ ಇವನಿಂದಲೇ ಪ್ರಾಣ ಮತ್ತು ರಕ್ಷಣ ಎರಡು ಹೇಳಿದಂತಾಯಿತು ಕಾರಣ ರಕ್ಷಣ ಹೇಳಲಿಲ್ಲವೆಂಬ ದೋಷವಿಲ್ಲ. ಅಥವಾ **ಅತನಯಃ** ನೀತಿಯಿಂದ ವ್ಯಾಪ್ತನು **ಅಸಿ** ಆಗಿದ್ದಿ ಎಂದೂ ಅರ್ಥ.'ಸ ಯೋ ಅತೋಽಶ್ರುತಃ' ಮುಂತಾಗಿ ಶ್ರುತಿ ಇದೆ. 'ದಿಷ್ಟ್ಯಾ ತ್ವಾಂ ಸಮಿತೋ ಅಧುನಾ'ಎಂದು ಪ್ರಾಚೀನ ಪಾಠವಿದೆ. ಆಗ **ಸಮಿತಃ** ಚೆನ್ನಾಗಿ ನಿನ್ನನ್ನು ಹೊಂದಿದವನು ಎಂದರ್ಥ. ॥೨೯॥

ಲಕ್ಷ್ಮೀಪತಿಯೇ! ಇವನನ್ನು ರಕ್ಷಿಸಲು ಸ್ವೀಕರಿಸಿದ ಈ ಅವತಾರವು ಇದರ ಅನವರತ ಸ್ಮರಣದಿಂದ ಸಜ್ಜನರ ಮನಸ್ಸಿನಲ್ಲಿ ನೀನು ವಾಸಮಾಡುವದರಿಂದ ಅವರ ಸಂಸಾರ ದಾಟುವಿಕೆಯಾಗುವದು ಎಂದು ವಿಜ್ಞಾಪಿಸುವರು. ದೈತ್ಯಸಂಹಾರವಷ್ಟೇ ಪ್ರಯೋಜನವಲ್ಲ ಬೇರೆ ಪ್ರಯೋಜನವೂ ಇದೇ ಈ ಅವತಾರಕ್ಕೆ ಎಂದು ಹೇಳುವರು.

**ಏತದ್ ವಪುಸ್ತೇ ಭಗವನ್ ಧ್ಯಾಯತಃ ಪ್ರಯತಾತ್ಮನಃ ।**
**ಸರ್ವತೋ ಗೋಪ್ತೃ ಸಂತ್ರಾಸಾನ್ಮೃತ್ಯೋರಪಿ ಜಿಘಾಂಸತಃ ॥೩೦॥**

**ಹೇ ಭಗವನ್** ಐಶ್ವರ್ಯಪೂರ್ಣನೇ **ಏತತ್** ಈ **ತೇ** ನಿನ್ನ **ವಪುಃ** ರೂಪವು **ಪ್ರಯತಾತ್ಮನಃ** ಏಕಾಗ್ರಮನಸ್ಸುಳ್ಳ ಅಥವಾ ಖಂಡವಾಗಿ ಎಲ್ಲ ರೀತಿಯಿಂದ **ಧ್ಯಾಯತಃ** ಧ್ಯಾನಮಾಡುವ ಅಧಿಕಾರಿಯನ್ನು **ಸರ್ವತಃ** ಎಲ್ಲ ರೀತಿಯ **ಸಂತ್ರಾಸಾತ್** ಭಯದಿಂದ **ಗೋಪ್ತೃ** ರಕ್ಷಕವು **ಜಿಘಾಂಸತಃ** ಸಂಹರಿಸಬೇಕೆಂದಿರುವ **ಮೃತ್ಯೋಃ ಅಪಿ** ಯಮನಿಂದಲೂ **ಗೋಪ್ತೃ** ರಕ್ಷಕವು (ನರಸಿಂಹನಿಗೆ ಮೃತ್ಯುಮೃತ್ಯು ಎಂದು ಹೆಸರಿದೆ ಅಪಿಶಬ್ದದಿಂದ ಮೃತ್ಯುವಿಗೆ ಇತರರಿಂದ ಪರಿಹಾರಾಶಕ್ಯತೆಯನ್ನು ತಿಳಿಸುವರು) **ಸಂತ್ರಾಸಾತ್** ಭಯಂ ಪ್ರಾಪಯ್ಯ ಗೋಪ್ತೃರಕ್ಷಕಂ ಅಂದರೆ (ಲ್ಯಪ್‌ಲೋಪನಿಮಿತ್ತ ಪಂಚಮೀ ಎಂದಿಟ್ಟು ಕೊಂಡು ಭಯವನ್ನು ಹೊಂದಿಸಿ ರಕ್ಷಿಸುವ ಎಂದರ್ಥ. ಇದರಿಂದ ಸಂತ್ರಾಸಾತ್ ಎಂದಾಗಲೀ ಮೃತ್ಯೋಃ ಎಂದಾಗಲೀ ಹೇಳಿದರೆ ಸಾಕು ಎಂದು) **ನ ಸಂತ್ರಾಸಃ** ತ್ರಾಸ ಪಡಬೇಕಿಲ್ಲ. (ಭಯಕೃತ್ ಭಯನಾಶನಃ) ಎಂದಿದೆಯಷ್ಟೇ. ॥೩೦॥

ಈ ರೀತಿ ಸ್ತುತಿಸಿದ ಬ್ರಹ್ಮದೇವರಿಗೆ ಶ್ರೀಶನು ಏನು ಹೇಳಿದನೆಂದು ಹೇಳುವರು-

**ಶ್ರೀಭಗವಾನುವಾಚ**

**ಮೈವಂವಿಧೋಽಸುರಾಣಾಂ ತೇ ಪ್ರದೇಯಃ ಪದ್ಮಸಂಭವ ।**
**ವರಃ ಕ್ರೂರನಿಸರ್ಗಾಣಾಮಹೀನಾಮಮೃತಂ ಯಥಾ ॥೩೧॥**

**ಹೇ ಪದ್ಮಸಂಭವ** ಬ್ರಹ್ಮನೇ **ಕ್ರೂರನಿಸರ್ಗಾಣಾಂ** ಕ್ರೂರಸ್ವಭಾವದ **ಅಹೀನಾಂ** ಸರ್ಪಗಳಿಗೆ **ಯಥಾ** ಹೇಗೆ **ಅಮೃತಂ** ಹಾಲು **ನ ಪ್ರದೇಯಂ** ಕೊಡಬಾರದೋ (ವಿಷಪೋಷಣೆಗೆ ಕಾರಣವಾದುದರಿಂದ) **ತಥಾ** ಹಾಗೆ ತಾವಾಗಿಯೇ ಕ್ರೂರಸ್ವಭಾವುಳ್ಳ **ಅಸುರಾಣಾಂ** ಹಿರಣ್ಯಕಶಿಪುವನ್ನು ಬಿಟ್ಟು ಬೇರೆ ದೈತ್ಯರಿಗೆ **ಏವಂ ವಿಧಃ** ಈ ಬಗೆಯ ಇತರಾವಧ್ಯತ್ವರೂಪದವರು **ತೇ** ನಿನ್ನಿಂದ **ಮಾ ಪ್ರದೇಯಃ** ಕೊಡತಕ್ಕದ್ದಲ್ಲ.

ಈ ಶ್ಲೋಕದಲ್ಲಿ ಹಿರಣ್ಯಕಶಿಪುವಿಗೆ ಬ್ರಹ್ಮದೇವರು ಕೊಟ್ಟದ್ದು ದಡ್ಡತನ ಆದ್ದರಿಂದ ಮುಂದೆಂದೂ ಹೀಗೆ ಮಾಡಬೇಡ ಎಂದು ಸರ್ವಥಾ ವರ ಕೊಡಬೇಡವೆಂದು ನಿಷೇಧಿಸುತ್ತಾನೆ ಎಂದು ತೋರುವದು ಮತ್ತು ಶ್ರೀಹರಿಗೆ ಅನಭಿಮತವರವಿತ್ತದ್ದನ್ನು ಮುಂದೂ ಈ ಆಜ್ಞೆ ಮೀರಿ ರಾವಣಾದಿಗಳಿಗೆ ವರವೀಯುವರು ಎಂದೆಲ್ಲ ತೋರುವದು. ಅದನ್ನು ಪರಿಹರಿಸಲು ಪ್ರಮಾಣದಿಂದ ನರಸಿಂಹದೇವರ ಅಭಿಪ್ರಾಯವನ್ನು ವ್ಯಕ್ತಮಾಡುವರು-

**... ತಾತ್ಪರ್ಯ ...**

**ಯಥಾ ಹಿರಣ್ಯಕಸ್ಯಾದಾದಂತಃಸ್ಥಿತಹರೀರಿತಃ ।**
**ತಥಾ ನಾದಾತ್ತದನ್ಯಸ್ಯ ಬ್ರಹ್ಮಾ ದೈತ್ಯಸ್ಯ ಕಸ್ಯಚಿತ್ ॥ ಇತಿ ಚ ॥**

ಹೇಗೆ ಚತುರ್ಮುಖನು ತನ್ನಲ್ಲಿ ಅಂತರ್ಯಾಮಿಯಾದ ಶ್ರೀಹರಿಯಿಂದ ಪ್ರೇರಿತನಾಗಿ ಹಿರಣ್ಯಕಶಿಪುವಿಗೆ ವರವನ್ನು ಕೊಟ್ಟಿರುವನೋ ಹಾಗೆ ಹಿರಣ್ಯಕಶಿಪುವಿನಿಂದ ಭಿನ್ನರಾದ ಯಾವ ದೈತ್ಯರಿಗೂ ಅಂತಹ ವರವನ್ನು ಕೊಡಲಿಲ್ಲ ಎಂದು ಭಾವ. ವರವನ್ನು ಎಂದು ಶೇಷಮಾಡಿ ಅರ್ಥಮಾಡಿದೆ. ಶೇಷ ಮಾಡದೇ ತಥಾ ಎಂದರೆ ಹಿರಣ್ಯಕನ ಪ್ರಶ್ನೆಗೆ ಉತ್ತರವನ್ನು ಅದಾತ್ ಕೊಟ್ಟನು ಎಂದೂ ಅರ್ಥ ಹೇಳಬಹುದು. 'ತಥಾ ಸ್ಯಾನ್ನಿಶ್ಚಯೇ ಪೃಷ್ಟಪ್ರತಿವಾಕ್ಯೇ' ಎಂದು ವಿಶ್ವವಿದೆ. 'ಅಂತಸ್ಥಿತಹರೀರಿತಃ' ಎಂದದ್ದರಿಂದ ಶ್ರೀಹರಿಗೆ ಅನಭಿಪ್ರೇತವಾದ ವರವಿತ್ತಿದ್ದರೆಂಬ ಶಂಕೆ ಪರಿಹೃತವಾಯಿತು. 'ಏವಂ ವಿಧಃ' ಎಂದುದರಿಂದ ಹಿರಣ್ಯಕನಿಗೆ ಕೊಟ್ಟವರ

ಸದೃಶವರವನ್ನು ರಾವಣಾದಿಗಳಿಗೆ ಕೊಟ್ಟಿಲ್ಲ. ಕಾರಣ ನರಸಿಂಹದೇವರ ಆಜ್ಞಾ ಉಲ್ಲಂಘನೆ ಬ್ರಹ್ಮದೇವರಿಗೆ ಇಲ್ಲ. ನರಸಿಂಹದೇವರ ಆಜ್ಞೆಯೂ ಇಂಥವರಿಗೆ ಕೊಡಬೇಡವೆಂದೆ ಹೊರತು ವರವನ್ನೇ ಕೊಡಬೇಡವೆಂದಲ್ಲ. 'ತದನ್ಯಸ್ಯ' ಎಂದರೆ ಹಿರಣ್ಯನಿಂದ ಭಿನ್ನನಾದ ಸುರನಿಂದ ಆವಿಷ್ಟನಾಗದಿರುವ ಯಾವ ದೈತ್ಯನಿಗೂ ಈ ವಿಧ ವರಬೇಡವೆಂದೂ ಅಭಿಪ್ರಾಯ. ಈ ಅಭಿಪ್ರಾಯಕ್ಕೆ 'ಕ್ರೂರನಿಶ್ರಗಾಣಾಂ' ಎಂಬ ಪದವು ಸಹಕಾರಿಯಾಗುವದು. ಇಂಥ ವರಕ್ಕೆ ಇವನೇ ಯೋಗ್ಯ.ಬೇರೆಯವರಲ್ಲ ಎಂದು ಭಾವ. ಸರ್ವಥಾ ವರ ನಿಷೇಧ ಮಾಡಿಲ್ಲ. ಬ್ರಹ್ಮದೇವರು ಹರಿಗೆ ಅನಭಿಪ್ರೇತಕಾರ್ಯಮಾಡುವದಿಲ್ಲ ಉಲ್ಲಂಘನೆಯನ್ನೂ ಮಾಡುವದಿಲ್ಲ. ಭಗವಂತನ ಇಚ್ಛಾನುಸಾರ ಪ್ರವೃತ್ತಿಯುಳ್ಳ ಅಚ್ಛಿನ್ನಭಕ್ತರಾದ ಬ್ರಹ್ಮದೇವರಿಗೆ ಲೋಕವನ್ನು ಅನುಸರಿಸುವ ಭಗವಂತ ಈ ರೀತಿ ಶಾಸನಮಾಡಿದನೆಂದು ಭಾವ.

ಹಿರಣ್ಯಕನಿಗೆ ವರಕೊಟ್ಟದ್ದು ಹರಿಸಮ್ಮತವೇ ಇನ್ನು ಮುಂದೆ ಹೀಗೆ ಕೊಡಬೇಡವೆಂದು ತಾತ್ಪರ್ಯ.

ವಿಶೇಷ ಃ-ಸತ್ಯಧರ್ಮರ ಪ್ರಕಾರ ಒಳಗಿದ್ದ ಹರಿಯು ಇದನ್ನು ಕೊಡು ಎಂದಾಗ ಓಂ ಎಂದವನು ಬ್ರಹ್ಮನು. ಅದರಂತೆ ಹರಿಯೇ ಒಳಗಿದ್ದವನು ಇನ್ನೊಬ್ಬರಿಗೆ ಆ ರೀತಿ ವರಬೇಡವೆಂದುರಿಂದ ಕೊಡಲಿಲ್ಲವೆಂದು ಭಾವ. ಸರ್ಪಕ್ಕೆ ಹಾಲು ಹಾಕಿದರೆ ವಿಷವೃದ್ಧಿಯಾಗುವಂತೆ ದೈತ್ಯರಿಗೆ ವರವಿತ್ತರೆ ಬಹಳ ಜನರಿಗೆ ತೊಂದರೆಗೆ ಕಾರಣವಾಗುವದು ಕಾರಣ ವರಬೇಡವೆಂದು ಭಾವ. 'ದೇವಾನ್ನೇ ಸಲಿಲೇ ಕ್ಷೀರೇ ತ್ವಮೃತಂ ನಾವಿಮುಕ್ತಿಗೇ' ಎಂದು ಅಭಿಧಾನವಿದೆ. ಆದ್ದರಿಂದ ಅಮೃತವೆಂದು ಹಾಲು ಎಂದರ್ಥ ಮಾಡಿದೆ. ಆದರೂ 'ಅಹೀನಾಂ ಹಿ ಪಯೋ ಯಥಾ' ಎಂದು ಹೇಳಲು ಬರುವಾಗ ಅಮೃತಂ ಎಂದು ಹೇಳಿದ್ದರಿಂದ ಅಮೃತ ಎಂದರೆ ಪೀಯೂಷ (ಸ್ವರ್ಗದಲ್ಲಿರುವ ಅಮೃತ) ಮತ್ತು ಮೋಕ್ಷವನ್ನು ಹೇಗೆ ದೈತ್ಯರಿಗೆ ಕೊಡಬಾರದೋ ಅದರಂತೆ ವರವೂ ಕೊಡಬಾರದು ಎಂಬ ಅರ್ಥವನ್ನು ಧ್ವನಿತಪಡಿಸಿರುವರು ಎಂದು ತಿಳಿಯಬೇಕು. ಈ ವರವನ್ನೂ ಸಹ ನನ್ನ ಪ್ರೇರಣೆ ಇಲ್ಲದೇ ನೀನು ಕೊಟ್ಟಿಲ್ಲ ಎಂದು ಹೇಳುವನು. 'ಪ್ರದೇಯ' ಎಂದು **ಯತಃ** ಯಾವ ಕಾರಣ ನಿನ್ನೊಳಗಿರುವ ಪ್ರಕರ್ಷೇಣಽಸ್ವಾತಂತ್ರ್ಯೇಣ ದದಾತೀತಿ ಪ್ರದಃ ತಸ್ಮಿನ್ ಮಯಿ ಸತಿ ಯಃ ವರಃ ದತ್ತಃ ನಾನು ಇರುವಾಗ ಯಾವ ವರವಿತ್ತೆಯೋ ಏವಂ ವಿಧಃ ವರಃ ಪ್ರದೇಯಃ ಎಂದು ಆವೃತ್ತಿ ಮಾಡಿ ಅನ್ವಯಿಸಬೇಕು. ಹೀಗೆ ಮಾಡಿದಾಗ ತಾತ್ಪರ್ಯಕ್ಕೆ ಮೂಲವೇ ಆಧಾರವಾಗುತ್ತದೆ ಎಂದು ವಿಮತ್ಸರರು ತಿಳಿಯಬೇಕು.

ಇನ್ನು 'ಅಹೀನಾಂ' ಎಂಬಲ್ಲಿ ಬಹುವಚನವು ಆದಿ ಎಂಬರ್ಥದಲ್ಲಿದೆ. 'ಫಣಾಂ ಚ ಸಪ್ತಾನಾಂ' ಎಂಬಲ್ಲಿಯಂತೆ. 'ವೃತ್ರಾದೀನಾಂ ಅಸುರಾಣಾಂ ಇತಿ ಸಾಮಾನಾಧಿಕರಣ್ಯಮ್ । 'ಅಹಿರ್ವೃತ್ರಾಸುರೇ ಸರ್ಪೇ' ಎಂದು ವಿಶ್ವವಿದೆ. ಅಹೀನಾಂ ಸಂಶಯ ವಿಪರೀತಜ್ಞಾನವುಳ್ಳ ಅಪ್ರಸಿದ್ಧರಾದ ಅಸುರಾಣಾಂ ಇತಿ ವಾ । ಯಥೋಕ್ತಂ ಋಗ್ಭಾಷ್ಯಟೀಕಯೋಃ 'ಅಹನ್ನಹಿಂ' ಎಂಬುದರ ವಿವರಣಮಾಡುವ ಸಂದರ್ಭದಲ್ಲಿ 'ಅಹಿಂ ದೈತ್ಯಂ ಸಂಶಯಂ ವಾ ಹೀತಿ ನಿಶ್ಚವಾಚೀ ಸ್ಯಾತ್ ಇತಿ ವಚನಾತ್ ನಿಶ್ಚಯವಿರೋಧಿನಂ ಸಂಶಯಂ' ಎಂದು ಹೇಳಿರುವರು. ಅಂತು ಅಹೀನಾಂ ಎಂದರೆ ವೃತ್ರಾಸುರಮೊದಲಾದ ದೈತ್ಯರಿಗೆ ಅಥವಾ ಸಂಶಯವಿಪರೀತಜ್ಞಾನವುಳ್ಳ ಅಸುರರಿಗೆ ಮೋಕ್ಷ ಅಮೃತಕೊಡದಿರುವಂತೆ ಎಂಬ ದೃಷ್ಟಾಂತವು ಅಭಿಪ್ರೇತವೆಂದು ತಿಳಿಯುವದು ಎಂದು ಭಾವ. ।।೩೧।।

ಭಗವಂತನೆಂದು ತಿಳಿದ ಮೇಲೆ ತಾವು ಯಾರೆಂದು ತಿಳಿದ ದೇವತೆಗಳಿಗೆ ಬಹಳ ದಿನ ಮನುಷ್ಯರಲ್ಲಿ ವಾಸಮಾಡಬಾರದೆಂದು ನಿಷೇಧವಿರುವದರಿಂದ ಬ್ರಹ್ಮನಿಗೆ ಆಜ್ಞೆಮಾಡಿದ ನಂತರ ಹೀಗೆ ಶ್ರೀಹರಿ ಮಾಡಿದನೆಂದು ಹೇಳುವರು-

**ನಾರದ ಉವಾಚ**

**ಇತ್ಯುಕ್ತ್ವಾ ಭಗವಾನ್ ರಾಜನ್ ತತಶ್ಚಾಂತರ್ದಧೇ ಹರಿಃ ।**
**ಅದೃಶ್ಯಃ ಸರ್ವಭೂತಾನಾಂ ಪೂಜಿತಃ ಪರಮೇಷ್ಠಿನಾ ।।೩೨।।**

**ಹೇ ರಾಜನ್** ಧರ್ಮರಾಜನೇ **ಸರ್ವಭೂತಾನಾಂ** ಭೂಮಿಯಲ್ಲಿರುವ ಎಲ್ಲ ಪ್ರಾಣಿಗಳಿಗೆ **ಅದೃಶ್ಯಂ** ತನ್ನ ಇಚ್ಛೆಯಿಲ್ಲದೇ ಕಾಣದಿರುವ **ಭಗವಾನ್ ಹರಿಃ** ಐಶ್ವರ್ಯಶಾಲಿಯಾದ ನರಸಿಂಹದೇವರು **ಇತ್ಯುಕ್ತ್ವಾ** ಹೀಗೆ ಬ್ರಹ್ಮದೇವರಿಗೆ ಆಜ್ಞೆ ಮಾಡಿ **ಪರಮೇಷ್ಠಿನಾ** ಬ್ರಹ್ಮದೇವರಿಂದ **ಪೂಜಿತಃ** ಪೂಜಿತನಾಗಿ **ತತಃ** ಅಲ್ಲಿಯೇ (ಹೀಗೆ ಹೇಳಿದ ನಂತರ) **ಅಂತರ್ದಧೇ** ಕಾಣದಾದನು. ।।೩೨।।

ಶ್ರೀಹರಿಯು ಅದೃಶ್ಯನಾದ ಮೇಲೆ ಪ್ರಹ್ಲಾದರಾಜರು ಬ್ರಹ್ಮಾದಿದೇವತೆಗಳನ್ನು ಸತ್ಕರಿಸಿದರೆ ಅಥವಾ ತಾವು ಭಗವದನುಗ್ರಹಪಾತ್ರರೆಂಬ ಅಹಂಕಾರದಿಂದ ಧಿಕ್ಕರಿಸಿದರೆ ಸತ್ಕರಿಸಿದ್ದರೆ ವೈಷ್ಣವಾಚಾರವನ್ನು ನಡೆಸಿದಂತಾಯಿತು. ಧಿಕ್ಕರಿಸಿದ್ದರೆ ಭಗವಂತನ ಉಪದೇಶವು ಆನೆಯ ಸ್ನಾನದಂತೆ ವ್ಯರ್ಥವಾಯಿತು ಎಂದರೆ ಪ್ರಹ್ಲಾದರಾಜರು ಏನು ಮಾಡಿದರೆಂದು ಹೇಳುತ್ತಾರೆ-

**ತತಃ ಸಂಪೂಜ್ಯ ವಿಧಿವದ್ ವವಂದೇ ಪರಮೇಷ್ಠಿನಮ್ ।**
**ಭವಂ ಪ್ರಜಾಪತೀನ್ ದೇವಾನ್ ಪ್ರಹ್ಲಾದೋ ಭಗವತ್ಕಲಾಃ ।।೩೩।।**

ಸದೃಶವರವನ್ನು ರಾವಣಾದಿಗಳಿಗೆ ಕೊಟ್ಟಿಲ್ಲ. ಕಾರಣ ನರಸಿಂಹದೇವರ ಆಜ್ಞಾ ಉಲ್ಲಂಘನೆ ಬ್ರಹ್ಮದೇವರಿಗೆ ಇಲ್ಲ. ನರಸಿಂಹದೇವರ ಆಜ್ಞೆಯೂ ಇಂಥವರಿಗೆ ಕೊಡಬೇಡವೆಂದೆ ಹೊರತು ವರವನ್ನೇ ಕೊಡಬೇಡವೆಂದಲ್ಲ. 'ತದನ್ಯಸ್ಯ' ಎಂದರೆ ಹಿರಣ್ಯನಿಂದ ಭಿನ್ನನಾದ ಸುರನಿಂದ ಆವಿಷ್ಟನಾಗದಿರುವ ಯಾವ ದೈತ್ಯನಿಗೂ ಈ ವಿಧ ವರಬೇಡವೆಂದೂ ಅಭಿಪ್ರಾಯ. ಈ ಅಭಿಪ್ರಾಯಕ್ಕೆ 'ಕ್ರೂರನಿಶ್ರಗಾಣಾಂ' ಎಂಬ ಪದವು ಸಹಕಾರಿಯಾಗುವದು. ಇಂಥ ವರಕ್ಕೆ ಇವನೇ ಯೋಗ್ಯ ಬೇರೆಯವರಲ್ಲ ಎಂದು ಭಾವ. ಸರ್ವಥಾ ವರ ನಿಷೇಧ ಮಾಡಿಲ್ಲ. ಬ್ರಹ್ಮದೇವರು ಹರಿಗೆ ಅನಭಿಪ್ರೇತಕಾರ್ಯಮಾಡುವದಿಲ್ಲ ಉಲ್ಲಂಘನೆಯನ್ನೂ ಮಾಡುವದಿಲ್ಲ. ಭಗವಂತನ ಇಚ್ಛಾನುಸಾರ ಪ್ರವೃತ್ತಿಯುಳ್ಳ ಅಚ್ಛಿನ್ನಭಕ್ತರಾದ ಬ್ರಹ್ಮದೇವರಿಗೆ ಲೋಕವನ್ನು ಅನುಸರಿಸುವ ಭಗವಂತ ಈ ರೀತಿ ಶಾಸನಮಾಡಿದನೆಂದು ಭಾವ.

ಹಿರಣ್ಯಕನಿಗೆ ವರಕೊಟ್ಟದ್ದು ಹರಿಸಮ್ಮತವೇ ಇನ್ನು ಮುಂದೆ ಹೀಗೆ ಕೊಡಬೇಡವೆಂದು ತಾತ್ಪರ್ಯ.

ವಿಶೇಷ ಃ-ಸತ್ಯಧರ್ಮರ ಪ್ರಕಾರ ಒಳಗಿದ್ದ ಹರಿಯು ಇದನ್ನು ಕೊಡು ಎಂದಾಗ ಓಂ ಎಂದವನು ಬ್ರಹ್ಮನು. ಅದರಂತೆ ಹರಿಯೇ ಒಳಗಿದ್ದವನು ಇನ್ನೊಬ್ಬರಿಗೆ ಆ ರೀತಿ ವರಬೇಡವೆಂದುರಿಂದ ಕೊಡಲಿಲ್ಲವೆಂದು ಭಾವ. ಸರ್ಪಕ್ಕೆ ಹಾಲು ಹಾಕಿದರೆ ವಿಷವೃದ್ಧಿಯಾಗುವಂತೆ ದೈತ್ಯರಿಗೆ ವರವಿತ್ತರೆ ಬಹಳ ಜನರಿಗೆ ತೊಂದರೆಗೆ ಕಾರಣವಾಗುವದು ಕಾರಣ ವರಬೇಡವೆಂದು ಭಾವ. 'ದೇವಾನ್ನೇ ಸಲಿಲೇ ಕ್ಷೀರೇ ತ್ವಮೃತಂ ನಾವಿಮುಕ್ತಿಗೇ' ಎಂದು ಅಭಿಧಾನವಿದೆ. ಆದ್ದರಿಂದ ಅಮೃತವೆಂದು ಹಾಲು ಎಂದರ್ಥ ಮಾಡಿದೆ. ಆದರೂ 'ಅಹೀನಾಂ ಹಿ ಪಯೋ ಯಥಾ' ಎಂದು ಹೇಳಲು ಬರುವಾಗ ಅಮೃತಂ ಎಂದು ಹೇಳಿದ್ದರಿಂದ ಅಮೃತ ಎಂದರೆ ಪೀಯೂಷ (ಸ್ವರ್ಗದಲ್ಲಿರುವ ಅಮೃತ) ಮತ್ತು ಮೋಕ್ಷವನ್ನು ಹೇಗೆ ದೈತ್ಯರಿಗೆ ಕೊಡಬಾರದೋ ಅದರಂತೆ ವರವೂ ಕೊಡಬಾರದು ಎಂಬ ಅರ್ಥವನ್ನು ಧ್ವನಿತಪಡಿಸಿರುವರು ಎಂದು ತಿಳಿಯಬೇಕು. ಈ ವರವನ್ನೂ ಸಹ ನನ್ನ ಪ್ರೇರಣೆ ಇಲ್ಲದೇ ನೀನು ಕೊಟ್ಟಿಲ್ಲ ಎಂದು ಹೇಳುವನು. 'ಪ್ರದೇಯ' ಎಂದು **ಯತಃ** ಯಾವ ಕಾರಣ ನಿನ್ನೊಳಗಿರುವ ಪ್ರಕರ್ಷೇಣಽಸ್ವಾತಂತ್ರ್ಯೇಣ ದದಾತೀತಿ ಪ್ರದಃ ತಸ್ಮಿನ್ ಮಯಿ ಸತಿ ಯಃ ವರಃ ದತ್ತಃ ನಾನು ಇರುವಾಗ ಯಾವ ವರವಿತ್ತೆಯೋ ಏವಂ ವಿಧಃ ವರಃ ಪ್ರದೇಯಃ ಎಂದು ಆವೃತ್ತಿ ಮಾಡಿ ಅನ್ವಯಿಸಬೇಕು. ಹೀಗೆ ಮಾಡಿದಾಗ ತಾತ್ಪರ್ಯಕ್ಕೆ ಮೂಲವೇ ಆಧಾರವಾಗುತ್ತದೆ ಎಂದು ವಿಮತ್ಸರರು ತಿಳಿಯಬೇಕು.

ಇನ್ನು 'ಅಹೀನಾಂ' ಎಂಬಲ್ಲಿ ಬಹುವಚನವು ಆದಿ ಎಂಬರ್ಥದಲ್ಲಿದೆ. 'ಫಣಾಂ ಚ ಸಪ್ತಾನಾಂ' ಎಂಬಲ್ಲಿಯಂತೆ. 'ವೃತ್ರಾದೀನಾಂ ಅಸುರಾಣಾಂ ಇತಿ ಸಾಮಾನಾಧಿಕರಣ್ಯಮ್ । 'ಅಹಿರ್ವೃತ್ರಾಸುರೇ ಸರ್ಪೇ' ಎಂದು ವಿಶ್ವವಿದೆ. ಅಹೀನಾಂ ಸಂಶಯ ವಿಪರೀತಜ್ಞಾನವುಳ್ಳ ಅಪ್ರಸಿದ್ಧರಾದ ಅಸುರಾಣಾಂ ಇತಿ ವಾ । ಯಥೋಕ್ತಂ ಋಗ್ಭಾಷ್ಯಟೀಕಯೋಃ 'ಅಹನ್ನಹಿಂ' ಎಂಬುದರ ವಿವರಣಮಾಡುವ ಸಂದರ್ಭದಲ್ಲಿ 'ಅಹಿಂ ದೈತ್ಯಂ ಸಂಶಯಂ ವಾ ಹೀತಿ ನಿಶ್ಚವಾಚೀ ಸ್ಯಾತ್ ಇತಿ ವಚನಾತ್ ನಿಶ್ಚಯವಿರೋಧಿನಂ ಸಂಶಯಂ' ಎಂದು ಹೇಳಿರುವರು. ಅಂತು ಅಹೀನಾಂ ಎಂದರೆ ವೃತ್ರಾಸುರಮೊದಲಾದ ದೈತ್ಯರಿಗೆ ಅಥವಾ ಸಂಶಯವಿಪರೀತಜ್ಞಾನವುಳ್ಳ ಅಸುರರಿಗೆ ಮೋಕ್ಷ ಅಮೃತಕೊಡದಿರುವಂತೆ ಎಂಬ ದೃಷ್ಟಾಂತವು ಅಭಿಪ್ರೇತವೆಂದು ತಿಳಿಯುವದು ಎಂದು ಭಾವ. ।।೩೧।।

ಭಗವಂತನೆಂದು ತಿಳಿದ ಮೇಲೆ ತಾವು ಯಾರೆಂದು ತಿಳಿದ ದೇವತೆಗಳಿಗೆ ಬಹಳ ದಿನ ಮನುಷ್ಯರಲ್ಲಿ ವಾಸಮಾಡಬಾರದೆಂದು ನಿಷೇಧವಿರುವದರಿಂದ ಬ್ರಹ್ಮನಿಗೆ ಆಜ್ಞೆಮಾಡಿದ ನಂತರ ಹೀಗೆ ಶ್ರೀಹರಿ ಮಾಡಿದನೆಂದು ಹೇಳುವರು-

**ನಾರದ ಉವಾಚ**

**ಇತ್ಯುಕ್ತ್ವಾ ಭಗವಾನ್ ರಾಜನ್ ತತಶ್ಚಾಂತರ್ದಧೇ ಹರಿಃ ।**
**ಅದೃಶ್ಯಃ ಸರ್ವಭೂತಾನಾಂ ಪೂಜಿತಃ ಪರಮೇಷ್ಠಿನಾ ।।೩೨।।**

**ಹೇ ರಾಜನ್** ಧರ್ಮರಾಜನೇ **ಸರ್ವಭೂತಾನಾಂ** ಭೂಮಿಯಲ್ಲಿರುವ ಎಲ್ಲ ಪ್ರಾಣಿಗಳಿಗೆ **ಅದೃಶ್ಯಂ** ತನ್ನ ಇಚ್ಛೆಯಿಲ್ಲದೇ ಕಾಣದಿರುವ **ಭಗವಾನ್ ಹರಿಃ** ಐಶ್ವರ್ಯಶಾಲಿಯಾದ ನರಸಿಂಹದೇವರು **ಇತ್ಯುಕ್ತ್ವಾ** ಹೀಗೆ ಬ್ರಹ್ಮದೇವರಿಗೆ ಆಜ್ಞೆ ಮಾಡಿ **ಪರಮೇಷ್ಠಿನಾ** ಬ್ರಹ್ಮದೇವರಿಂದ **ಪೂಜಿತಃ** ಪೂಜಿತನಾಗಿ **ತತಃ** ಅಲ್ಲಿಯೇ (ಹೀಗೆ ಹೇಳಿದ ನಂತರ) **ಅಂತರ್ದಧೇ** ಕಾಣದಾದನು. ।।೩೨।।

ಶ್ರೀಹರಿಯು ಅದೃಶ್ಯನಾದ ಮೇಲೆ ಪ್ರಹ್ಲಾದರಾಜರು ಬ್ರಹ್ಮಾದಿದೇವತೆಗಳನ್ನು ಸತ್ಕರಿಸಿದರೆ ಅಥವಾ ತಾವು ಭಗವದನುಗ್ರಹಪಾತ್ರರೆಂಬ ಅಹಂಕಾರದಿಂದ ಧಿಕ್ಕರಿಸಿದರೆ ಸತ್ಕರಿಸಿದ್ದರೆ ವೈಷ್ಣವಾಚಾರವನ್ನು ನಡೆಸಿದಂತಾಯಿತು. ಧಿಕ್ಕರಿಸಿದ್ದರೆ ಭಗವಂತನ ಉಪದೇಶವು ಆನೆಯ ಸ್ನಾನದಂತೆ ವ್ಯರ್ಥವಾಯಿತು ಎಂದರೆ ಪ್ರಹ್ಲಾದರಾಜರು ಏನು ಮಾಡಿದರೆಂದು ಹೇಳುತ್ತಾರೆ-

**ತತಃ ಸಂಪೂಜ್ಯ ವಿಧಿವದ್ ವವಂದೇ ಪರಮೇಷ್ಠಿನಮ್ ।**
**ಭವಂ ಪ್ರಜಾಪತೀನ್ ದೇವಾನ್ ಪ್ರಹ್ಲಾದೋ ಭಗವತ್ಕಲಾಃ ।।೩೩।।**

**ಪ್ರಹ್ಲಾದಃ** ಪ್ರಹ್ಲಾದರಾಜರು **ತತಃ** ಶ್ರೀಹರಿಯು ಅದೃಶ್ಯನಾದ ಮೇಲೆ **ಭಗವತ್ಕಲಾಃ** ಭಗವಂತನ ಅಂಶವುಳ್ಳ ಅಥವಾ ಭಿನ್ನಾಂಶರಾದ ಎಂದರ್ಥ. ಭಗವಂತನ ಪ್ರತಿಬಿಂಬರಾದ **ಪರಮೇಷ್ಠಿನಂ** ಬ್ರಹ್ಮದೇವರನ್ನು **ವಿಧಿವತ್** ಶಾಸ್ತ್ರೋಕ್ತ ರೀತಿಯಿಂದ **ಸಂಪೂಜ್ಯ** ಪೂಜಿಸಿ **ವಿಧಿವತ್** ಬ್ರಹ್ಮದೇವರಂತೆ **ಭವಂ** ರುದ್ರದೇವರನ್ನು **ಪ್ರಜಾಪತೀನ್** ಪ್ರಜೇಶ್ವರರನ್ನು **ದೇವಾನ್** ದೇವತೆಗಳನ್ನು **ವಿಧಿವತ್** ಶಾಸ್ತ್ರೋಕ್ತ ರೀತಿಯಲ್ಲಿ ಅಲ್ಲಿಯೇ ಹೇಳಿದ ತಾರತಮ್ಯಕ್ರಮದಿಂದಲೂ **ಸಂಪೂಜ್ಯ** ಪೂಜೆ ಮಾಡಿ **ವವಂದೇ** ನಮಸ್ಕರಿಸಿದನು.

ವಿಶೇಷ :- 'ವಿಧಿವತ್' ಎಂಬ ದೃಷ್ಟಾಂತ ಪೂಜೆ ಮಾಡಿದನು ನಮಸ್ಕರಿಸಿದನು ಎಂಬಲ್ಲಿ ಮಾತ್ರ. ಸಮನಾಗಿ ಎಂದರ್ಥದಲ್ಲಿ ಅಲ್ಲ. 'ಯಥಾ ದೇವೇ ತಥಾ ಗುರೌ' ಎಂಬಲ್ಲಿಯಂತೆ ತಿಳಿಯಬೇಕು. ಈಶಕೋಟಿಪ್ರವಿಷ್ಟಳಾದ್ದರಿಂದ ಲಕ್ಷ್ಮೀದೇವಿಗೆ ಪ್ರತ್ಯೇಕಪೂಜೆಯನ್ನು ಹೇಳಿಲ್ಲ. ಪತಿಯ ಅಂತರ್ಧಾನವಾದಾಗ ಪತ್ನಿಯೇ ಅಂತರ್ಧಾನಪ್ರತ್ಯೇಕಹೇಳಬೇಕಿಲ್ಲವೆಂದು ಲಕ್ಷ್ಮೀಗೆ ಅಂತರ್ಧಾನ ಹೇಳಿಲ್ಲ. ಅಂತರ್ಧಾನಳಾದ್ದರಿಂದ ಪ್ರತ್ಯೇಕ ಪೂಜಾದಿಗಳನ್ನೂ ಹೇಳಿಲ್ಲವೆಂದು ತಿಳಿಯಬೇಕು.

ಶ್ರೀಹರಿಯ ಮನಸ್ಸಿನಲ್ಲಿರುವದನ್ನು ಯಥಾಶಕ್ತಿ ತಿಳಿದಿದ್ದ ಬ್ರಹ್ಮದೇವರು ಇದನ್ನು ಅನುಗ್ರಹಿಸಿದರು ಎಂದು ಹೇಳುತ್ತಾರೆ-

**ತತಃ ಕಾವ್ಯಾದಿಭಿಃ ಸಾರ್ಧಂ ಮುನಿಭಿಃ ಕಮಲಾಸನಃ ।**
**ದೈತ್ಯಾನಾಂ ದಾನವಾನಾಂ ಚ ಪ್ರಹ್ಲಾದಮಕರೋತ್ಪತಿಮ್ ।।೩೪।।**

**ತತಃ** ಪ್ರಹ್ಲಾದರಾಜರು ನಮಸ್ಕರಿಸಿದ ನಂತರ **ಕಮಲಾಸನಃ** ಬ್ರಹ್ಮದೇವರು **ಕಾವ್ಯಾದಿಭಿಃ** ಶುಕ್ರಾಚಾರ್ಯರೇ ಮೊದಲಾದ **ಮುನಿಭಿಃ ಸಾರ್ಧಂ** ಋಷಿಗಳಿಂದ ಕೂಡಿಕೊಂಡು **ಪ್ರಹ್ಲಾದಂ** ಪ್ರಹ್ಲಾದನನ್ನು **ದೈತ್ಯಾನಾಂ** ದಿತಿಪುತ್ರರಿಗೂ **ದಾನವಾನಾಂ ಚ** ದನುಪುತ್ರರಿಗೂ **ಪತಿಂ** ರಾಜನನ್ನಾಗಿ **ಅಕರೋತ್** ಮಾಡಿದರು.

ವಿಶೇಷ :- ಇದರಿಂದ ಭಕ್ತರು ಭಗವದ್ಭಕ್ತರಲ್ಲಿ ಯೋಗ್ಯತೆಗೆ ತಕ್ಕಂತೆ ಪ್ರೀತಿಮಾಡಬೇಕೆಂಬ ಶಾಸ್ತ್ರೀಯವಾದ ಆಚಾರವನ್ನು ತೋರಿಸಿದಂತಾಯಿತು. 'ಯದ್ಯಪಿ ಪಿತ್ರ್ಯಂ ಸ್ಥಾನಮಾತಿಷ್ಠ ತಥಾಪಿ ಮನ್ವಂತರಮೇತದತ್ರ ದೈತ್ಯೇಶ್ವರಾಣಾ-ಮನುಭುಂಕ್ಷ್ವ' 'ಭೋಗಾನ್ ಅಭಿಷಿಕ್ತೋ' 'ದ್ವಿಜೋತ್ತಮೈಃ ಅಕಾರ್ಷೀದ್ರಾಜ್ಯಂ' 'ನಿಹತಕಂಟಕಂ' ಮುಂತಾಗಿ ಹೇಳಿರುವರಿಂದ ಬ್ರಹ್ಮದೇವರು ಮಾಡಬೇಕಾದ ಕಾರ್ಯ ಯಾವುದೂ ಇಲ್ಲವೆಂದು ತೋರುತ್ತದೆ. ಆದರೂ ಭಗವಂತನ ಎದುರಿಗೆ ತಾವು ಆಜ್ಞಾಪಿಸಬಾರದು ವಿಧಿಪೂರ್ವವಾಗಿ ಅಪೇಕ್ಷೆಯನ್ನಾಗಲಿ ಮಾಡಬಾರದೆಂದು ಬ್ರಹ್ಮದೇವರು ಸುಮ್ಮನಿದ್ದರು. ।।೩೪।।

ಬಂದ ಕಾರ್ಯವಾದ ಮೇಲೆ ಪ್ರಾಯಃ ಜನರು ಇರಬಾರದು ಎಂದು ದೇತವಗೆಳೆಲ್ಲರೂ ಕೂಡಿಕೊಂಡು ತಮ್ಮ ತಮ್ಮ ಮನೆಗೆ ತೆರಳಿದರು ಎಂದು ಹೇಳುವರು-

**ಪ್ರತಿನಂದ್ಯ ತತೋ ದೇವಾಃ ಪ್ರಯುಜ್ಯ ಪರಮಾಶಿಷಃ ।**
**ಸ್ವಧಾಮಾನಿ ಯಯೂ ರಾಜನ್ ಬ್ರಹ್ಮಾದ್ಯಾ ಪ್ರತಿಪೂಜಿತಾಃ ॥೩೫॥**

**ರಾಜನ್** ಧರ್ಮರಾಜನೇ **ತತಃ** ಅಭಿಷೇಕಾನಂತರ **ದೇವಾಃ** ದೇವತೆಗಳು **ಪ್ರತಿನಂದ್ಯ** ಸಂತೋಷಪಡಿಸಿ **ಪರಮಾಶಿಷಃ ಪ್ರಯುಜ್ಯ** ಆಶೀರ್ವಾದಗಳನ್ನು ಮಾಡಿ **ಪ್ರತಿಪೂಜಿತಾಃ** ಪ್ರಹ್ಲಾದರಾಜರಿಂದ ಸತ್ಕರಿಸಲ್ಪಟ್ಟ **ಬ್ರಹ್ಮಾದ್ಯಾಃ** ಬ್ರಹ್ಮಾದಿದೇವತೆಗಳು **ಸ್ವಧಾಮಾನಿ** ತಮ್ಮ ಮನೆಗಳಿಗೆ **ಯಯುಃ** ಹೋದರು. ॥೩೫॥

**ಏವಂ ತೌ ಪಾರ್ಷದೌ ವಿಷ್ಣೋಃ ಪುತ್ರತ್ವಪ್ರಾಪಿತೌ ದಿತೇಃ ।**
**ಹೃದಿ ಸ್ಥಿತೇನ ಹರಿಣಾ ವೈರಭಾವೇನ ತೌ ಹತೌ ॥೩೬॥**

**ಏವಂ** ಈ ರೀತಿಯಾಗಿ **ವಿಷ್ಣೋಃ** ಶ್ರೀಹರಿಯ **ಪಾರ್ಷದೌ** ದ್ವಾರಪಾಲಕರಾದ **ತೌ** ಜಯವಿಜಯರು **ಹೃದಿ ಸ್ಥಿತೇನ ಹರಿಣಾ** ಅಂತರ್ಯಾಮಿಯಾದ ಶ್ರೀಹರಿಯಿಂದ **ದಿತೇಃ ಪುತ್ರತ್ವಂ ಪ್ರಾಪಿತೌ** ಹಿಂದಿನ ಶಾಪದಿಂದ ದಿತಿಯ ಮಕ್ಕಳಾಗಿ ಜನಿಸಿದ ಹಿರಣ್ಯಾಕ್ಷ-ಹಿರಣ್ಯಕಶಿಪುಗಳು **ಹೃದಿಸ್ಥಿತೇನ** ಮನಸ್ಸಿನಲ್ಲಿರುವ **ವೈರಭಾವೇನ** ವೈರಬುದ್ಧಿನಿಮಿತ್ತದಿಂದ **ವೈರಭಾವೇನ** ದ್ವೇಷಯುತ ಭಕ್ತಿಯಿಂದ **ತೌ** ದಾನವ ಸಹವಾಸದಿಂದ ಬಂದ ವೈರವನ್ನು ಬಿಡಿಸಿ ಮುಂದೆ ಬರುವ ಆನಂದಕ್ಕಾಗಿ **ಹತೌ** ಕೊಲ್ಲಲ್ಪಟ್ಟರು. ಅಥವಾ **ವೈರಭಾವೇ** ವೈರನಿಮಿತ್ತೇ **ವಿರತ್ವೇ** ವೈರತ್ವವಿರುವಾಗ **ಅಥ** ವೈರಮನಸ್ಸಿರುವಾಗ **ಅನತೌ** ಅನಮ್ರರಾದ ದುಷ್ಟಪ್ರವೃತ್ತಿಯ ಎಂದರ್ಥ **ತೌ ಏವಂ ಹತೌ** ಅವರು ಹೀಗೆ ಹತರಾದರೂ ಹೀಗೂ ಅನ್ವಯ. ॥೩೬॥

ಮೊದಲನೆ ಹುಟ್ಟು ಸಾವುಗಳನ್ನು ಹೇಳಿ ಎರಡನೇ ಹುಟ್ಟಸಾವುಗಳನ್ನು ಹೇಳುವರು-

**ಪುನಸ್ತೌ ಪೂರ್ವಶಾಪೇನ ರಾಕ್ಷಸೌ ತೌ ಬಭೂವತುಃ ।**
**ಕುಂಭಕರ್ಣದಶಗ್ರೀವೌ ಹತೌ ತೌ ರಾಮವಿಕ್ರಮ್ಯೈಃ ॥೩೭॥**

**ಶಯಾನೌ ಯುಧಿ ನಿರ್ಭಿನ್ನಹೃದಯೌ ರಾಮಸಾಯಕೈಃ ।**
**ತಚ್ಚಿತ್ತೌ ಜಹತುರ್ದೇಹಂ ಯಥಾ ಪ್ರಾಕ್ತನಜನ್ಮನಿ ॥೩೮॥**

**ಪುನಃ** ಮತ್ತೆ **ತೌ** ಆ ಜಯವಿಜಯರು **ಪೂರ್ವಶಾಪೇನ** ಹಿಂದಿನ ಶಾಪದಿಂದ **ತೌ** ಪ್ರಸಿದ್ಧರಾದ **ಕುಂಭಕರ್ಣದಶಗ್ರೀವೌ** ಕುಂಭಕರ್ಣ, ಹತ್ತು ತಲೆಯ ರಾವಣರೆಂಬ **ರಾಕ್ಷಸೌ** ರಾಕ್ಷಸರು **ಬಭೂವತುಃ** ಆದರು **ತೌ** ಅವರು **ರಾಮವಿಕ್ರಮ್ಯೈಃ** ರಾಮದೇವರ ಪರಾಕ್ರಮದಿಂದ **ಹತೌ** ಸಂಹೃತರಾದರು ।।೩೭।।

**ಪ್ರಾಕ್ತನಜನ್ಮನಿ** ಮೂಲರೂಪದಲ್ಲಿ ಜಯವಿಜಯರು **ಯಥಾ** ಹೇಗೆ **ತಚ್ಚಿತ್ತೌ** ಹರಿಯಲ್ಲಿಯೇ ಮನಸ್ಸಿಟ್ಟವರೋ **ತಥಾ** ಹಾಗೆ ಅಥವಾ **ಪ್ರಾಕ್ತನಜನ್ಮನಿ** ಮೊದಲನೆಯ ಹಿರಣ್ಯಕಶಿಪು,ಹಿರಣ್ಯಾಕ್ಷಜನ್ಮಗಳಲ್ಲಿ **ತಚ್ಚಿತ್ತೌ** ನರಸಿಂಹದೇವರನ್ನೇ ರಾಕ್ಷಸನೆಂದು ಚಿಂತಿಸುತ್ತ **ದೇಹಂ** ದೇಹವನ್ನು **ಜಹತುಃ** ಬಿಟ್ಟರೋ **ತಥಾ** ಹಾಗೆ ರಾವಣಕುಂಭಕರ್ಣರು **ರಾಮಸಾಯಕೈಃ** ರಾಮದೇವರ ಬಾಣಗಳಿಂದ **ನಿರ್ಭಿನ್ನಹೃದಯೌ** ಎದೆ ಸೀಳಿದವರಾಗಿ **ಯುಧಿ** ಯುದ್ಧರಂಗದಲ್ಲಿ ಚಿಂತಿಸುತ್ತ **ದೇಹಂ ಜಹತುಃ** ಶರೀರವನ್ನು ಬಿಟ್ಟರು ನರಸಿಂಹನನ್ನು ರಾಕ್ಷಸನೆಂದು ಚಿಂತಿಸುತ್ತ ದೇಹಬಿಟ್ಟದ್ದರಿಂದ ಎರಡನೇ ಜನ್ಮದಲ್ಲಿ ರಾಕ್ಷಸರಾದರು. ಆ ರಾಕ್ಷಸ ಜನ್ಮದಲ್ಲಿ ರಾಮನನ್ನು ಮನುಷ್ಯನೆಂದು ಭಾವಿಸುತ್ತ ದೇಹತ್ಯಾಗ ಮಾಡಿದ್ದರಿಂದ ಈ ಮೂರನೇ ಜನ್ಮದಲ್ಲಿ ಮನುಷ್ಯರಾಗಿ ರಾಜರಾಗಿ ಹುಟ್ಟಿರುವರು ಎಂದು ಭಾವ. ವಿಜಯಧ್ವಜರಪ್ರಕಾರ ಈ ಅರ್ಥವು. ।।೩೮।।

**ಶ್ರೀಸತ್ಯಧರ್ಮರ ವಿಶೇಷಾರ್ಥಃ**- 'ದಶಗ್ರೀವಕುಂಭಕರ್ಣೌ' ಎಂದು ಹೇಳಬೇಕಾದಲ್ಲಿ 'ಕುಂಭಕರ್ಣದಶಗ್ರೀವೌ' ಎಂದು ಹೇಳಿರುವದು. 'ಹತೌ' ಎಂಬುವದು ಮೊದಲು ವ್ಯವಧಾನವಿಲ್ಲದೆ ಮುಖ್ಯೋದ್ದೇಶತ್ವ ಕುಂಭಕರ್ಣನಿಗೂ ಇದೆ ಎಂದು ತಿಳಿಸಲು. ಆದ್ದರಿಂದ ಕವಿಗಳ ಚಮತ್ಕಾರವನ್ನು ತಿಳಿಯಬೇಕು. ಸಂಹರಿಸಿದ ಕ್ರಮವಿವಕ್ಷಾದಿಂದ ಹೀಗೆ ಹೇಳಿದ್ದು ಎಂದು ಹೇಳಬಹುದು. **ಯುಧಿ ಹತೌ** ಯುದ್ಧದಲ್ಲಿ ಕೊಲ್ಲಲ್ಪಟ್ಟರು ಅದು ಹೇಗೆಂದರೆ **ರಾಮವಿಕ್ರಮ್ಯೈಃ** ರಾಮನ ಪರಾಕ್ರಮವೆಂಬ ಮುಖ್ಯಸಾಧನಗಳಿಂದ **ರಾಮಸಾಯಕೈಃ** ಅವಾಂತರಕರಣಗಳಾದ ಬಾಣಗಳಿಂದ **ವಿಭಿನ್ನಹೃದಯೌ ಸಂತೌ** ಎದೆ ಸೀಳಿದವರಾಗಿ **ಶಯಾನೌ** ಮಲಗಿ **ಪ್ರಾಕ್ ಜನ್ಮನಿ** ಜಯವಿಜಯ ಜನ್ಮದಲ್ಲಿ ಹಿರಣ್ಯಕಶಿಪು,ಹಿರಣ್ಯಾಕ್ಷರು ಆ ಜನ್ಮದಲ್ಲಿ **ತಚ್ಚಿತ್ತೌ** ಭಗವಂತನಲ್ಲಿ ಮನಸ್ಸಿಟ್ಟು ದೇಹಬಿಟ್ಟರೋ ಹಾಗೆ ಈಗಲೂ ಬಿಟ್ಟರು. ತೌ ರಾಮವಿಕ್ರಮ್ಯೈಃ ಎಂದು ಸಮಸ್ತಪದ. ರಾಮಸಾಯಕೈಃ ಎಂಬುದಕ್ಕೆ ವಿಶೇಷಣ. ಮೊದಲನೇ ಪಕ್ಷದಲ್ಲಿ ತುರಃ ಶೀಘ್ರಗಾಮಿಯಾದ ಗರುಡ. ಅವನ ಸಂಬಂಧಿ ಯಾದುದು **ತೌರಃ, ಅಮಃ** ಗಮನವು ಅದಕ್ಕಿಂತಲೂ **ವಿಕ್ರಮ್ಯೈಃ** ಶಕ್ತಿಯು ಯೇಷಾಂ ತೈಃ ಅಂದರೆ ಗರುಡನ ವೇಗಕ್ಕಿಂತ ಹೆಚ್ಚು ವೇಗವಾಗಿ ಹೋಗುವ ಸಾಮರ್ಥ್ಯವುಳ್ಳ ಬಾಣಗಳಿಂದ ಎಂದರ್ಥ. ಎರಡನೇ ಪಕ್ಷದಲ್ಲಿ ತುರೇಣ ಅಮಂತಿ ಗಚ್ಛಂತೀತಿ ತುರಾಮಾಃ ತೇಷಾಂ ಸಂಬಂಧ್ಧಿಃ ತೌರಾಮಃ ಸಃ **ವಿಕ್ರಮಃ** ಶಕ್ತಿಸಂಪತ್ ಯೇಷಾಂ

ತೇ ತೈಃ । ವೇಗವಾಗಿ ಹೋಗುವವರಲ್ಲಿರುವ ಶಕ್ತಿಸಂಪತ್ತುಳ್ಳ ಬಾಣಗಳಿಂದ ಎಂದರ್ಥ. 'ವಿಕ್ರಮಕ್ರಾಂತಿರ್ಮಾತ್ರೇ ಸ್ಯಾತ್ ವಿಕ್ರಮಶಕ್ತಿಸಂಪದಿ' ಎಂದು ವಿಶ್ವವಿದೆ. 'ತುರಾಷಾಟ್ ಪ್ರಭುಃ' ಎಂಬ ಭಕ್ತಿಪಾದಭಾಷ್ಯತತ್ವಪ್ರಕಾಶಿಕೆಯಲ್ಲಿ ತುರಾ ಎಂಬುದಕ್ಕೆ ವೈರವೇಗವೆಂದು ಅರ್ಥಮಾಡಿದೆ. ಕಾರಣ 'ತುರಂ ವೈರಿವೇಗಂ ಅಮಯತಿ ಗಮಯತೀತಿ ತುರಾಮಃ ಸ ಏವ ತೌರಾಮಃ । ಪ್ರಜ್ಞಾದ್ಯಣ್ ಸವಿಕ್ರಮಃ ಏಷಾಂ ತೈಃ । ಅಂದರೆ ವೈರಿಗಳ ವೇಗವನ್ನು ಓಡಿಸುವ ಪರಾಕ್ರಮವುಳ್ಳ ಎಂದರ್ಥ. ಅಥವಾ (ತುರಂ ಭಗಸ್ಯ) ಎಂಬಲ್ಲಿ ವಾಯುವಿನಲ್ಲಿ ತುರಶಬ್ದ ಪ್ರಯೋಗಿಸಿರುವರು. ತುರಸಂಬಂಧಿಃ ತೌರಃ ಅಮಃ ಗತಿ ತದ್ವದ್ ವಿಕ್ರಮಃ ಯೇಷಾಂ ತೈಃ ವಾಯುಗತಿಯಂತೆ ಗತಿಸುವ ಶಕ್ತಿಯುಳ್ಳ ಎಂದರ್ಥ. ಹೀಗೆ ಮಾಡಿದ್ದರಿಂದ ಒಂದೇ ರಾಮಶಬ್ದ ಸಾಕು ಎಂಬ ಶಂಕೆಗೆ ವಿರಾಮವಾಯಿತು ಎಂದು ತಿಳಿಯಬೇಕು. ಅಥವಾ ರಾಮಸಾಯಕೈಃ ಎಂದರೆ ರಾಮನಾಮಚಿನ್ಹಿತವಾದ ಬಾಣಗಳಿಂದ ಎಂದರ್ಥ. ಅಥವಾ ಸಾಯಕೈಃ ಹತೌ ರಾಮ ಇತಿ ತಚ್ಚಿತೌ ದೇಹಂ ಜಹತುಃ ಬಾಣಗಳಿಂದ ಹೊಡೆಯಲ್ಪಟ್ಟು ರಾಮರಾಮ ಎಂದು ಅವನಲ್ಲಿ ಮನಸ್ಸಿಟ್ಟು ದೇಹಬಿಟ್ಟರು ಹೀಗೂ ಅರ್ಥ. ।।೩೮।।

**ತಾವೇವಾದ್ಯ ಪುನರ್ಜಾತೌ ಶಿಶುಪಾಲಕರೂಶಜೌ ।**
**ಹರೌ ವೈರಾನುಬಂಧೇನ ಪಶ್ಯತಸ್ತೇ ಸಮೀಯತುಃ ।।೩೯।।**

**ತೌ ಏವ** ಆ ರಾವಣಕುಂಭಕರ್ಣರೇ **ಅದ್ಯ** ಈಗ ಈ ಮೂರನೇ ಜನ್ಮದಲ್ಲಿ **ಇಹ** ಇಲ್ಲಿ **ಪುನಃ** ಮತ್ತೆ **ಶಿಶುಪಾಲಕರೂಷಜೌ** ಶಿಶುಪಾಲ ಮತ್ತು ದಂತವಕ್ರರಾಗಿ **ಜಾತೌ** ಹುಟ್ಟಿರುವರು. **ಹರೌ** ಶ್ರೀಹರಿಯಲ್ಲಿ **ವೈರಾನುಬಂಧೇನ** ದ್ವೇಷಾಪ್ರಧಾನಕ ಭಕ್ತಿಯಿಂದ **ತೇ ಪಶ್ಯತಃ** ನೀನು ನೋಡುತ್ತಿರುವಂತೆಯೇ **ತೇ** ಅವರಿಬ್ಬರ ಜ್ಯೋತಿಗಳು **ಸಮೀಯತುಃ** ಶ್ರೀಹರಿಯನ್ನು ಪ್ರವೇಶಿಸಿದವು. ಸಮೀಯತುಃ ಎಂಬಲ್ಲಿ **ಸಂ** ಸಾರ(ಶ್ರೇಷ್ಠ)ನಾದ್ದರಿಂದ **ಸ** ಎನಿಸಿಕೊಳ್ಳುವ ಭಗವಂತನನ್ನು ಈಯುಃ ಎಂದಾಗಲಿ 'ನಿತ್ಯಹೀನೋ ಅಖಿಲೈರ್ದೋಷೈಃ ಸಾರರೂಪೋ ಯತೋ ಹರಿಃ । ಹಂಸ ಇತ್ಯುಚ್ಯತೇ' ಎಂದು ಕಾಠಕಭಾಷ್ಯದಲ್ಲಿ ಹೇಳಿರುವದರಿಂದಲೂ ಸಂ ಎಂದರೆ ಹರಿ ಅವನನ್ನು ಎಂದರ್ಥ. **ಅಸಂ** ಅಸಾರವಾದ **ತಮಃ** ತಮಸ್ಸನ್ನು (ಆವಿಷ್ಟರಾದ ಅಸುರರೂ) **ಈಯತುಃ** ಹೊಂದಿದರು ಎಂದೂ ಅರ್ಥ ಮಾಡಬಹುದು. ಹೀಗೆ ಮಾಡಿದ್ದರಿಂದ ಹರಿಂ ಎಂದಾಗಲಿ ತಂ, ಎಂದಾಗಲಿ, ತಮಃ ಎಂದಾಗಲಿ ಶೇಷಮಾಡುವ ಕ್ಲೇಶ ಉಳಿಯು(ಶೇಷಶೇಷಕ್ಲೇಶಃ)ತ್ತದೆ. ವೈರಕ್ಕೂ ಅನುಬಂಧಕ್ಕೂ ಶಾಶ್ವತ ವಿರೋಧವಿರುವದರಿಂದ ಏಕವದ್ಭಾವ. ವೈರೇಣ ಅಸಂ ತಮಃ ವೈರದಿಂದ

ತಮಸ್ಸನ್ನು ಅನುಬಂಧೇನ ಭಕ್ತಿಯಿಂದ **ಸಂ** ಸಾರನಾದ ಹರಿಯನ್ನು **ಈಯತುಃ** ಹೊಂದಿದರು ಹೀಗೆ ಕ್ರಮವಾಗಿ ಅನ್ವಯಮಾಡಬಹುದು. ಅನುಬಂಧ ಎಂದರೆ ಭಕ್ತಿಯು ಎಂದಿದೆ. ।।೩೯।।

ವಿಶೇಷ ಃ- ರಾಜಸೂಯಯಾಗದಲ್ಲಿ ಶ್ರೀಕೃಷ್ಣನನ್ನು ಧಿಕ್ಕರಿಸಿದಾಗ ಶ್ರೀಕೃಷ್ಣನು ಶಿಶುಪಾಲನನ್ನು ಸಂಹರಿಸಿದನು. ಆಗಲೂ ಧರ್ಮರಾಜನಿದ್ದನು. ಅದರಂತೆ ದಂತವಕ್ತ್ರನನ್ನು ಕೊಲ್ಲುವಾಗಲೂ ಧರ್ಮರಾಜನಿದ್ದನು. ಆದ್ದರಿಂದ ತೇ ಪಶ್ಯತಃ ಎಂದಿದ್ದಾರೆ. ಈ ವಿಷಯ ದಶಮಸ್ಕಂಧದಲ್ಲಿ ಉಕ್ತವಾಗಿದೆ. 'ಪಾಂಡವಾಶ್ಚ ಮಹೀಪಾಲಾ ಯಜ್ಞದರ್ಶನಮಿಚ್ಛವಃ । ಆಹೂತಾ ವಾಸುದೇವೇನ ದ್ವಾರಕಾಮಾಯಯುರ್ನೃಪ ।। ಉದ್ವಾಪನಸ್ನಾ ಹೇತೋರ್ಯಮುನಾತೀರ-ಮಾಗಮತಮ್ । ಶ್ರುತ್ವಾ ತೂರ್ಣಂ ಕಲಿಂಗೇಶೋ ದಂತವಕ್ತ್ರಃ ಸಹಾನುಜಃ' ಎಂದಾರಂಭಿಸಿ 'ತತಃ ಸೂಕ್ಷ್ಮತರಂ ಜ್ಯೋತಿಃ ಕೃಷ್ಣಮಾವಿಶದದ್ಭುತಮ್ । ಪಶ್ಯತಾಂ ಸರ್ವಭೂತಾನಾಂ ಯಥಾ ಚೈದ್ಯಸ್ಯ ಸಂಗರೇ' ಎಂಬಲ್ಲಿಯ ವರೆಗೆ ಹೇಳಿದೆ. ಯಥಾ ಕಥಂಚಿತ್ ಭ್ರಾತೃತ್ವಂ ಅಂದರೆ ಕಲಿಂಗದೇಶದ ಒಂದು ಭಾಗವಾದ ಕರೂಶದೇಶಾಧಿಪತಿವೃದ್ಧಶರ್ಮನಿಂದ ವಸುದೇವನ ಸೋದರಿಯಾದ ಶ್ರುತದೇವಿಯಲ್ಲಿ ಜನಿಸಿದವನು (ಶಿಶುಪಾಲ ಚೇದಿದೇಶದ ರಾಜ ದಮಘೋಷನಿಂದ ವಸುದೇವನ ತಂಗಿ ಶ್ರುಶ್ರವಾ ಎಂಬುವಳಲ್ಲಿ ಜನಿಸಿದವನು) ಅರ್ಥಾತ್ ದೊಡ್ಡಮ್ಮ, ಚಿಕ್ಕಮನ ಮಕ್ಕಳು. ಆದ್ದರಿಂದ ಅಣ್ಣತಮ್ಮಂದಿರು ಹೊರತು ಸಹೋದರರಲ್ಲ. ವಿದೂರ ದಂತವಕ್ರನ ಸಹೋದರ ಎಂದು ತಿಳಿಯಬೇಕು ಇರಲಿ. ಈ ವಿಷಯ ದಶಮಸ್ಕಂಧದಲ್ಲಿದೆ. 'ರುಕ್ಮೀ ಚ ಶಿಶುಪಾಲಶ್ಚ ಭ್ರಾತರೋ ಮೇ ಹತೌ ಪುರಾ । ನಿಹತಭ್ರಾತರಂ ದೃಷ್ಟ್ವಾ ದಂತವಕ್ತ್ರಂ ವಿದೂರಥಃ' ಎಂದಿದೆ. ಇವರ ಶಾಪವೂ ಸಹ ರಾಕ್ಷಸಾವೇಶದಿಂದ ಹುಟ್ಟಬೇಕೆಂದಷ್ಟೇ ಹೊರತು ಸಹೋದರರಾಗಿಯೇ ಎಂದೇನಲ್ಲ. ಮತ್ತು 'ಮಯ್ಯೆವ ವಧ್ಯೌ ಭವತಂ ತ್ರಿಜನ್ಮಸು' ಎಂಬ ಆಜ್ಞೆಯೂ ದಾನವಾವೇಶದಿಂದ ಹುಟ್ಟಿದ ಮೂರು ಜನ್ಮದಲ್ಲಿಯೂ ನನ್ನಿಂದಲೇ ಸಾಯಿರಿ ಎಂದಿಷ್ಟೇ ಹೊರತು ಸಹವೈರತ್ವದಲ್ಲಿ ಅಲ್ಲ.

ಈ ರೀತಿ ವೈರಯುತ ಭಕ್ತಿಯಿಂದ ಜೀವದ್ವಯಾವೇಶವುಳ್ಳವರು ಇನ್ನು ಅನೇಕರು ಇದ್ದಾರೆ. ತೌ ಎಂದುದು ಉಪಲಕ್ಷಣ ಅಭಿಪ್ರಾಯದಿಂದ. ವೈರಿಗಳಾದ ಬಹುರಾಜರು ಕೃಷ್ಣನಿಂದ ಹತರಾಗಿ ಕೃಷ್ಣನನ್ನು ಹೊಂದಿರುವರು ಎಂದು ಹೇಳುವರು-

**ಏನಃ ಪೂರ್ವಕೃತಂ ಯತ್ ತದ್ ರಾಜಾನಃ ಕೃಷ್ಣವೈರಿಣಃ ।**
**ಜಹುಸ್ತೇಽಂತೇ ತದಾತ್ಮಾನಃ ಕೀಟಾಃ ಪೇಶಸ್ಕೃತೋ ಯಥಾ ।।೪೦।।**

ಹಿಂದಿನ ಶ್ಲೋಕದಲ್ಲಿಯ ವೈರಾನುಬಂಧೇನ ಎಂಬುದನ್ನು ಇಲ್ಲಿಯೂ ಇಟ್ಟುಕೊಳ್ಳಬೇಕು. **ಯೇ ರಾಜಾನಃ** ಯಾವ ಪೌಂಡ್ರಕ, ಸಾಲ್ವ, ಕಂಸ, ನರಕ,ರುಗ್ಮಿ, ಎಂಬ ರಾಜರು **ಕೃಷ್ಣವೈರಿಣಃ** ಶ್ರೀಹರಿಯ ದ್ವೇಷಿಗಳೋ **ತದಾತ್ಮಾನಃ** ಆ ಪೌಂಡ್ರಕಾದಿಗಳಲ್ಲಿ ಇರುವ (ತತ್ರ ಆತ್ಮಾ ದೇಹೋ ವ್ಯಾಪ್ತಿರ್ವಾ ಯೇಷಾಂ ತೇ) **ತದಾತ್ಮಾನಃ** ಆ ಭಗವಂತನಲ್ಲಿ ಮನಸ್ಸುಳ್ಳವರಾಗಿ (ಅವರು ಮಾಡಿದ ಪುಣ್ಯಫಲವನ್ನು ಸ್ವೀಕರಿಸಲು ಅವರಲ್ಲಿ ಆವಿಷ್ಟರಾದ ಶ್ರೀಹರಿಭಕ್ತರಾದ ಸಜ್ಜೀವರು.) **ತೇ** ಅವರು **ವೈರಾನುಬಂಧೇನ** ದ್ವೇಷಯುತಭಕ್ತಿಯಿಂದ **ಯತ್** ಯಾವ **ಪೂರ್ವಕೃತಂ** ಹಿಂದೆ ಮಾಡಿದ ದೈತ್ಯರ ಸಂಬಂಧದಿಂದ ಬಂದ **ಏನಃ** ಪಾಪವೋ **ತತ್** ಅದನ್ನು **ಜಹುಃ** ಕಳೆದುಕೊಂಡರು. ಪಾಪವನ್ನು ಕಳೆದುಕೊಂಡು ಶ್ರೀಹರಿಯ ಆಜ್ಞೆಯ ನಡೆಸಿದ್ದರಿಂದ ಬಂದ ಪುಣ್ಯದ ವೃದ್ಧಿಯಿಂದ **ತಂ** ಶ್ರೀಕೃಷ್ಣನನ್ನು **ಅಂತೇ** ಭಕ್ತ್ಯಾದಿಸಾಧನ ಸಾಮಗ್ರಿಯು ಸಿದ್ಧವಾದ ಮೇಲೆ ಸಮೀಯುಃ ಹೊಂದಿದರು ಅದೇ ದೇಹದಲ್ಲಿದ್ದ **ಕೃಷ್ಣವೈರಿಣಃ** ತಮೋ ಯೋಗ್ಯರಾದ ಸ್ವರೂಪತಃ ಭಗವದ್ವೇಷಿಗಳು **ರಾಜಾನಃ** ರಾಜರು (ತಾಮಸರಾಜಸರ ಸ್ವಭಾವದ ದೈತ್ಯರು) **ತದಾತ್ಮಾನಃ** ಭಗವದ್ವೇಷವೇ ಸ್ವರೂಪವಾಗಿವುಳ್ಳವರು **ತೇ** ಆ ತಮೋಯೋಗ್ಯರು **ಪೂರ್ವಕೃತಂ** ಮೊದಲಿನಿಂದಲೂ ಮಾಡಿದ **ಯತ್ ಏನಃ** ಏನು ಪಾಪವಿದೆಯೋ **ತತ್** ಅದರಿಂದ ಮತ್ತು **ವೈರಾನುಬಂಧೇನ** ನಿರಂತರ ದ್ವೇಷ ಚಿಂತನೆಯಿಂದ **ಪೂರ್ವಕೃತಂ** ಬ್ರಹ್ಮದೇವರಿಂದ ಮೊದಲೇ ಕ್ಲೃಪ್ತವಾದ ಅಂಧಂತಮಸ್ಸನ್ನು **ಅಂತೇ** ದ್ವೇಷವು ಪಕ್ವವಾದ ನಂತರ **ಜಹುಃ** ಸೇರಿದರು 'ತಸ್ಯ ತಾವದೇವ ಚಿರಂ' 'ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾಸ್ಯ ತತ್ ಕ್ಷೀಯತೇ' ಇತ್ಯಾದಿ ಶ್ರುತಿಗಳು ಈ ವಿಷಯವನ್ನು ತಿಳಿಸುತ್ತವೆ. ಭಯಭರಿತ ಭಕ್ತಿಯಿಂದ ತದಾಕಾರವು ಬರುವದೆಂಬುದಕ್ಕೆ ಉದಾಹರಣೆ ಕೊಡುವರು. **ಕೀಟಾಃ** ಒಂದೇ ಬಗೆಯ ಹುಳಗಲು (ಬಾಲುಹುಳ) **ಯಥಾ** ಹೇಗೆ **ಪೇಶಸ್ಕೃತಃ** ಕುರಡಿಕುಠಾರವು ತಾನೇ ಹಿಡಿದುಕೊಂಡು ತಂದು ಕೂಡಿ ಹಾಕಿದ ಹುಳಕ್ಕೆ ಹೊಸರೂಪವನ್ನು **ಜಹಂತಿ** ಕಣಜದ ಹುಳದ ರೂಪವನ್ನು ತಂದು ಕೊಡುವದೋ ಹಾಗೆ ಸಾರೂಪ್ಯಹೊಂದುವರು ಎಂದನ್ವಯ. ಕೃಷ್ಣ ವೈರಿಗಳಾದ ವೇನಾದಿಗಳಿಗೆ ದೈತ್ಯರಿಗೆ ಎಂದೂ ಕೃಷ್ಣಪ್ರಾಪ್ತಿ ಇಲ್ಲ. ಅವರಲ್ಲಿ ದ್ವೇಷವಿದೆಯೇ ಹೊರತು ಭಕ್ತಿಯಿಲ್ಲ.

ಈ ಶ್ಲೋಕದಲ್ಲಿ ಹರಿವೈರಿಗಳು ಪಾಪವನ್ನು ಕಳೆದುಕೊಂಡರೆಂದು ತೋರುವದು ಅದು ಸಾಧ್ಯವಿಲ್ಲ. ಹಾಗಿದ್ದಲ್ಲಿ ಶಿಶುಪಾಲಾದಿಗಳಂತೆ ಜ್ಯೋತೀರೂಪದಿಂದ ಪ್ರವೇಶವಾಗಲಿ ಅನಂತರ ಮುಕ್ತಿಯಾಗಲಿ ಆಗಬೇಕೆ ಹೊರತು ತಮಃಪ್ರಾಪ್ತಿಯಲ್ಲ ಕಾರಣ ಪ್ರಮಾಣದಿಂದ ಸಮ್ಮತವಾದ ಅರ್ಥ ಹೇಳುವರು-

**... ತಾತ್ಪರ್ಯ ...**

**ಪೌಂಡ್ರಕೇ ನರಕೇ ಚೈವ ಸಾಲ್ವೇ ಕಂಸೇ ಚ ರುಗ್ಮಿಣೇ ।**
**ಆವಿಷ್ಟಾಸ್ತು ಹರೇರ್ಭಕ್ತಾಸ್ತದ್ಭಕ್ತ್ಯಾ ಹರಿಮೀಯಿರೇ ॥**
**ಅಸುರಾಸ್ತು ಸ್ವಯಂ ತೇ ತು ಮಹಾತಮಸಿ ಪಾತಿತಾಃ ॥ ಇತಿ ಚ**

**ತದಾತ್ಮಾನಃ ತತ್ರಾವಿಷ್ಟಾಸ್ತದ್ಭಕ್ತಾಃ । ವೈರೋಪಸರ್ಜನಾನುಬಂಧೇನೇತ್ಯನ್ವಯಃ ॥**

ಪೌಂಡ್ರಕವಾಸುದೇವ, ನರಕಾಸುರ, ಸಾಲ್ವ, ಕಂಸ, ರುಗ್ಮಿ ಇವರಲ್ಲಿ ಆವಿಷ್ಟರಾದ ವಿಷ್ಣುಭಕ್ತರೇ ಶ್ರೀಹರಿಯಲ್ಲಿ ಭಕ್ತಿಯಿಂದ ಶ್ರೀಹರಿಯನ್ನು ಹೊಂದಿದರು. ಅದೇ ಹೆಸರಿನ ಅಸುರರು ಎಳ್ಳಷ್ಟು ಸುಖವಿಲ್ಲದ, ಮತ್ತೆ ಹಿಂದೆ ಹೇಳಿದ ತಮಸ್ಸನ್ನು ಹೊಂದಿದರು. (ಇವರೆಲ್ಲರಲ್ಲಿ ಜೀವದ್ವಯ) ತದಾತ್ಮಾನಃ ಎಂದರೆ ಪೌಂಡ್ರಕಾದಿಗಳಲ್ಲಿ ಆವಿಷ್ಟರು ಎಂದೂ, ಶ್ರೀಹರಿಯಲ್ಲಿಯೇ ಮನಸ್ಸಿಟ್ಟ ಭಕ್ತರಾದ ಸಜ್ಜೀವರೆಂದೂ ಅರ್ಥ. ಪೂರ್ವಶ್ಲೋಕದಲ್ಲಿದ್ದ ವೈರಾನುಬಂಧೇನ ಎಂಬುದಕ್ಕೆ ತನ್ನ ಮಹಾಫಲ ಉಣಿಸದಿರುವದರಿಂದ ಅಪ್ರಧಾನವಾದ ವೈರವುಳ್ಳ ಪ್ರಧಾನಭಕ್ತಿಯಿಂದ ಎಂದರ್ಥವು. ॥೪೦॥

ಅದರಲ್ಲಿ ತಾರತಮ್ಯವಿದೆ ಎಂದು ಹೇಳುತ್ತಾರೆ-

**ಯಥಾ ಯಥಾ ಭಗವತೋ ಭಕ್ತ್ಯಾ ಪರಮಯಾಭಿದಾಮ್ ।**
**ನೃಪಾಶ್ಚೈದ್ಯಾದಯಃ ಸಾಮ್ಯಂ ಹರೇಸ್ತಚ್ಚಿಂತಯಾ ಯಯುಃ ॥೪೧॥**

**ಚೈದ್ಯಾದಯಃ** ಶಿಶುಪಾಲನೇ ಮೊದಲಾದ **ನೃಪಾಃ** ರಾಜರು **ಯಥಾ ಯಥಾ ತಥಾ ತಥಾ** ತಮ್ಮ ತಮ್ಮ ಯೋಗ್ಯತೆಗೆ ಅನಗುಣವಾಗಿ **ಪರಮಯಾ** ಸರ್ವೋತ್ತಮವಾದ **ಭಗವತಃ** ಶ್ರೀಹರಿಯ **ಭಕ್ತ್ಯಾ** ಭಕ್ತಿಯಿಂದ **ಭಿದಾಂ** ವಿಶೇಷವನ್ನು (ಸುಖದಲ್ಲಿ) ಅಥವಾ **ಅಭಿದಾಂ** ಅಸಂಪ್ರಜ್ಞಾತಸಮಾಧ್ಯವಸ್ಥೆಯನ್ನು **ಯಯುಃ** ಹೊಂದಿದರು **ತಚ್ಚಿಂತಯಾ** ಶ್ರೀಹರಿಯ ಧ್ಯಾನದಿಂದ **ಹರೇಃ ಸಾಮ್ಯಂ** ನಿರ್ದೋಷತ್ವ, ಚತುರ್ಭುಜತ್ವ ಮೊದಲಾದ ಸಮಾನತೆಯನ್ನು **ಯಯುಃ** ಹೊಂದಿದರು.

ವಿಶೇಷ ಃ- ಅಭೇದ ಹೊಂದಿದರೆಂದು ಎಂದರ್ಥ ಮಾಡಬಾರದು. ಹಾಗೆ ಮಾಡಿದಲ್ಲಿ ಕೀಟದೃಷ್ಟಾಂತ ಅಸಂಗತವಾಗುವದು. ಏಕೆಂದರೆ ಕೆಲವು ಬೇರೆ ಕೀಟಗಳೇ ತಮ್ಮನ್ನು ಹಿಡಿದು ಹಾಕಿದ ಕೀಟದ ಆಕಾರ ಹೊಂದುವವೇ ಹೊರತು ಆ ಕೀಟವೇ ಇವು ಆಗುವದಿಲ್ಲ. ಅವು ಇದು ಬೇರೆ ಬೇರೆ ಕಾಣುವವು. 'ಭೇದೋ ದ್ವೈಧೇ ವಿಶೇಷೇ ಸ್ಯಾತ್' ಎಂದು ವಿಶ್ವವಿದೆ.

ಶ್ರೀಸತ್ಯಧರ್ಮರು ಇಲ್ಲಿ 'ಚೈದ್ಯಾದಯಃ ನೃಪಾಃ' ಎಂದರೆ ಅವರಲ್ಲಿ ಆವಿಷ್ಟರಾದ ಜಯ,ವಿಜಯ,ಭೃಗು ಮುಂತಾದವರು ತಚ್ಚಿಂತಯಾ ಆ ಧ್ಯಾನದಿಂದ ಹರಿಸಾಮ್ಯವೆಂದರೆ ಚಕ್ರ,ಶಂಖ ನಾಲ್ಕು ಬಾಹು ಇರುವದು ಎಂಬ ಸಾಮ್ಯ ಹೊಂದಿದರು ಎಂದು ವ್ಯಾಖ್ಯಾನಿಸುವರು. ಭಗವತಃ ಹರೇಃ ಪರಮಯಾ ಭಕ್ತ್ಯಾ ಯಥಾ ಯಥಾ ಅಭಿದಾಂ ವಿಶೇಷಂ ಯಯುಃ ಐಶ್ವರ್ಯಶಾಲಿಯಾದ ಶ್ರೀಹರಿಯಲ್ಲಿ ಅತಿಶಯಭಕ್ತಿಯಿಂದ ವಿಶೇಷವನ್ನು ಹೊಂದಿದರೋ **ತಚ್ಚಿಂತಯಾ** ಭಗವಂತನು ಮಾಡಿದ ತನ್ನ ಕರ್ಮದ ಸ್ಮರಣೆಯಿಂದ **ಸಾಮ್ಯಂ** ಭಗವಂತನಲ್ಲಿ ಸ್ಥಿತಿಯನ್ನು ಶಾಶ್ವತವಾಗಿ ಹೊಂದಿದರೆಂದು ಅರ್ಥ. 'ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ' ಎಂದಿದೆ. ಮತ್ತು 'ಯೇ ನೃಪಾಃ ಚೈದ್ಯಾದ್ಯಾಃ' ಆ ದೇಹದಲ್ಲಿರುವ ದುಷ್ಟರು **ಯಥಾ ಯಥಾ ಪರಮಯಾ ಅಭಕ್ತ್ಯಾ** ತಮ್ಮ ತಮ್ಮ ಯೋಗ್ಯತೆಯಂತೆ ದ್ವೇಷದಿಂದ **ಹರೇಃ ಸಕಾಶಾತ್** ಶ್ರೀಹರಿಯಿಂದ **ಭಿದಾಂ** ಸೀಳುವದನ್ನು **ಯತ್ ಸಾಮ್ಯಂ** ಅಂದರೆ **ಸಮತೇ** ಏನಿದಯೋ **ತಚ್ಚಿಂತಯಾ** ಅದರ ಚಿಂತನದಿಂದ **ತೇ** ಅವರ **ಅಭವತಃ** ಸೂರ್ಯಸಂಚಾರವಿಲ್ಲದ ಅಂಧತಮಸ್ಸಿನ ಭಾಗವನ್ನು **ಯಯುಃ** ಹೊಂದಿದರು ಎಂದು ಅಸುರರ ಪಕ್ಷದಲ್ಲಿ ಅಭಿಪ್ರಾಯವನ್ನು ತಿಳಿಯಬೇಕು. ।।೪೧।।

'ದಮಘೋಷಸುತಃ ಪಾಪಃ' ಎಂದು ಆರಂಭಿಸಿ 'ಕಲಭಾಷಣಾತ್' ಮುಂತಾಗಿ ಶಂಕಿಸಿದ್ದಕ್ಕೆ ಉತ್ತರವನ್ನು ಹೇಳಿ ಉಪಸಂಹರಿಸುತ್ತಾರೆ-

**ಆಖ್ಯಾತಂ ಸರ್ವಮೇತತ್ ತೇ ಯನ್ಮಾಂ ತ್ವಂ ಪರಿಪೃಷ್ಟವಾನ್ ।**
**ದಮಘೋಷಸುತಾದೀನಾಂ ಹರೇಃ ಸಾಮ್ಯಮಪಿ ದ್ವಿಷಾಮ್ ।।೪೨।।**

**ತ್ವಂ** (ರಾಜನೇ) ನೀನು **ಯತ್ ಪರಿಪೃಷ್ಟವಾನ್** ಏನು ಪ್ರಶ್ನಿಸಿದೆಯೋ ಅದರ ವಿವರಣೆಯನ್ನು **ದ್ವಿಷಾಂ ಅಪಿ** ದ್ವೇಷ ಮಾಡಿದವರಿಗೂ **ಸಾಮ್ಯಂ** ಸಾಮ್ಯವು ಹೇಗೆ ಎಂದು ಅಸಂಭಾವನಾ ಶಂಕೆ ಮಾಡಿದೆಯೋ **ಏತತ್ ಸರ್ವಂ** ಅದೆಲ್ಲವನ್ನು ಅಂದರೆ ಇವರು ಅನಾದಿಭಕ್ತರಾದ್ದರಿಂದ ಸಹವಾಸದಿಂದ ಮಾಡಿದ ದ್ವೇಷವನ್ನು ಲೆಕ್ಕಿಸದೆ ಅನಾದಿ ಭಕ್ತಿಯನ್ನು ಕಡೆಗಣಿಸಿ ಸಾಮ್ಯವಿತ್ತನೆಂದು **ಆಖ್ಯಾತಂ** ಉತ್ತರ ಹೇಳಲ್ಪಟ್ಟಿತು. ಅಪಿ ಶಬ್ದದಿಂದ ಸಾಮ್ಯವನ್ನು ನಿಂದಿಸಿರುವರು. ।।೪೨।।

ಶ್ರದ್ಧೆಯನ್ನು ಹುಟ್ಟಿಸಲು ಕಥೆಯನ್ನು ಪ್ರಶಂಸಿಸುವರು. ಪರವಶನಾಗಿ ಸ್ತುತಿಸುವನು-

**ಏಷಾ ಬ್ರಹ್ಮಣ್ಯದೇವಸ್ಯ ಕೃಷ್ಣಸ್ಯ ಚ ಮಹಾತ್ಮನಃ ।**
**ಅವತಾರಕಥಾ ಪುಣ್ಯಾ ವಧೋ ಯತ್ರಾದಿದೈತ್ಯಯೋಃ ।।೪೩।।**

**ಏಷಾ** ಹೇಳಲ್ಪಟ್ಟ **ಬ್ರಹ್ಮಣ್ಯದೇವಸ್ಯ** ಬ್ರಾಹ್ಮಪ್ರಿಯನಾದ ದೇವನಾದ **ಕೃಷ್ಣಸ್ಯ ಮಹಾತ್ಮನಃ** ಶ್ರೀಕೃಷ್ಣಪರಮಾತ್ಮನ **ಅವತಾರಕಥಾ** ಅವತಾರಚರಿತ್ರೆಯು **ಪುಣ್ಯಾ** ಪುಣ್ಯಜನಕವಾದುದು **ಯತ್ರ** ಎಲ್ಲಿ **ಆದಿದೈತ್ಯಯೋಃ ವಧಾ** ಆದಿಭ್ಯಾಂ ರಾಕ್ಷಸಾಭ್ಯಾಂ ಸಹಿತೌ ಚ ತೌ ದೈತ್ಯೌ ಶಿಶುಪಾಲದಂತವಕ್ತ್ರೌ ತಯೋಃ ಅಂದರೆ ರಾವಣ ಕುಂಭಕರ್ಣ ಮತ್ತು ಶಿಶುಪಾದಂತವಕ್ತ್ರ ಮತ್ತು ಪ್ರಸ್ತುತರಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳು **ಆದಿದೈತ್ಯೌ** ಮೊದಲಿಗೆ ಹುಟ್ಟಿದ ದೈತ್ಯರು ಹೀಗೆ ಮೂರು ಜನ್ಮದ **ವಧಃ** ಸಂಹಾರವು ಹೇಳಲ್ಪಟ್ಟಿದೆಯೋ ಎಂದರ್ಥ.

ವಿಶೇಷ ಃ- ಸನಕಾದಿಗಳ ಮಾತನ್ನು ಉಳಿಸುವದಕ್ಕಾಗಿ ಭಗವಂತ ಅವತಾರಮಾಡಿದ್ದರಿಂದ ಬ್ರಾಹ್ಮಣಪ್ರಿಯತೆ ಸ್ಪಷ್ಟವಾಗುವದು. ವರಾಹ, ನೃಸಿಂಹ ರಾಮ,ಕೃಷ್ಣ ಇವರಿಂದ ಅಭಿನ್ನನಾದ ಕೃಷ್ಣನು ಕೊನೆಯವನಾದುದರಿಂದ ಕೃಷ್ಣನ ಕಥಾ ಎಂದಿರುವರು. 'ಆದಿನೋ ರಾಕ್ಷಸಾಃ ಪ್ರೋಕ್ತಾಃ' ಎಂದು ತಾತ್ಪರ್ಯದಲ್ಲಿ ಹೇಳಿರುವದರಿಂದ ಆದಿಪದಕ್ಕೆ ರಾಕ್ಷಸರೆಂದು ಅರ್ಥ ಮಾಡಿದೆ. ಆ ರಾಕ್ಷಸರನ್ನು **ಅವತಾ** ರಕ್ಷಿಸುವ ಭಗವಂತನಿಂದ **ಆರ** ಪ್ರಾಪ್ನೋತ್ ಹೊಂದಲ್ಪಟ್ಟಿತು । **ಮಹಾತ್ಮನೋ ಜನಾನ್** ಮಹಾತ್ಮರಾದ ಜನರನ್ನು **ಪುಣ್ಯಾ ಕಥಾ ಅವತಾ** ಉಪದೇಶ ಮಾಡಿ ರಕ್ಷಿಸುವ ಗುರುವಿನಿಂದ **ಆರ** ಹೊಂದಲ್ಪಟ್ಟಿತು.

ಇಲ್ಲಿಗೆ ಉಪಸಂಹಾರವಾಗಿಲ್ಲ ಕಿಂತು 'ಧರ್ಮೋ ಭಾಗವತಾನಾಂ ಚ ಭಗವಾನ್ ಯೇನ ಗಮ್ಯತೇ' ಎಂಬಲ್ಲಿಯ ವರೆಗೆ ಹೇಳಿದೆ ಎಂದು ವಿವರಿಸಲು ಆ ಶ್ಲೋಕದಲ್ಲಿರುವ 'ಭಗವಾನ್ ಯೇನ ಗಮ್ಯತೇ' ಎಂಬ ವಾಕ್ಯವನ್ನು ಅನುವಾದಿಸಿ ವಿವರಿಸುವರು-

**... ತಾತ್ಪರ್ಯ ...**

**ಭಗವಾನ್ಯೇನ ಗಮ್ಯತೇ ಇತ್ಯನೇನ ಭಾಗವತಧರ್ಮೇಣೈವ ಭಗವಾನ್ ಗಮ್ಯತೇ ।**
**ನ ದ್ವೇಷಾದಿನಾ ಇತ್ಯುಪಸಂಹ್ರಿಯತೇ । ವೃತ್ತಾನುಕಥನಂ ಚ ತದರ್ಥತ್ವೇನೈವ ॥**

'ಭಗವಾನ್ ಯೇನ ಗಮ್ಯತೇ' ಎನ್ನುವದರಿಂದ ಭಗವದ್ಭಕ್ತರು ಮಾಡಬೇಕಾದ ಕರ್ಮದಿಂದಲೇ ಶ್ರೀಹರಿಯು ಹೊಂದಲ್ಪಡುವನು ದ್ವೇಷಾದಿಗಳಿಂದಲ್ಲ ಎಂದು ಉಪಸಂಹಾರ ಮಾಡಲ್ಪಡುತ್ತದೆ. ಹಾಗಾದರೆ 'ಆಖ್ಯಾತಂ' ಎಂದು ಹೇಳಿದ್ದು ಹೇಗೆ ಹೇಳಬೇಕು ಎಂಬ ಅಂಶ ಇನ್ನೂ ಕಾಣುವದು ಎಂದರೆ ಉಪಸಂಹಾರ ಮಾಡುವದಕ್ಕಾಗಿಯೇ ಎಂದು ತಿಳಿಸುವರು. ಪೂರ್ವವೃತ್ತವನ್ನು ಹೇಳಿದ 'ಏಷಾ ಬ್ರಹ್ಮಣ್ಯದೇವಸ್ಯ' ಇತ್ಯಾದಿಗಳ ಭಗವದ್ಧರ್ಮಗಳಿಂದಲೇ ಭಗವಂತನ ಪ್ರಾಪ್ತಿಯಾಗುತ್ತದೆಂಬುದನ್ನು ದೃಢಪಡಿಸಲು ಎಂದು ತಿಳಿಯಬೇಕು. ॥೪೩॥

**ಪ್ರಹ್ಲಾದಸ್ಯಾನುಚರಿತಂ ಮಹಾಭಾಗವತಸ್ಯ ಚ ।**
**ಭಕ್ತಿರ್ಜ್ಞಾನಂ ವಿರಕ್ತಿಶ್ಚ ಯಾಥಾತ್ಮ್ಯಂ ಚಾಸ್ಯ ವೈ ಹರೇಃ ॥೪೪॥**

**ಅಸ್ಮಿನ್** ಈ ಆಖ್ಯಾನದಲ್ಲಿ **ಭಕ್ತಿಃ** ಭಕ್ತಿಯು **ಜ್ಞಾನಂ** ಜ್ಞಾನವು **ವಿರಕ್ತಿಃ** ವೈರಾಗ್ಯವು **ಅಸ್ಯ ಹರೇಃ** ಈ ಪರಮಾತ್ಮನ **ಯಾಥಾತ್ಮ್ಯಂ** ಯಥಾರ್ಥವಾದ ಸ್ವರೂಪಜ್ಞಾನ, **ಪ್ರಹ್ಲಾದಸ್ಯ ಮಹಾಭಾಗವತಸ್ಯ** ಭಗವದ್ಭಕ್ತರಾದ ಪ್ರಹ್ಲಾದರಾಜರ **ಅನುಚರಿತಂ** ಚರಿತ್ರೆಯು ಹೇಳಲ್ಪಟ್ಟಿದೆ.

ಈ ಶ್ಲೋಕದಲ್ಲಿ ಯಾಥಾತ್ಮ್ಯವನ್ನೂ ಭಕ್ತಿ, ಜ್ಞಾನ, ವೈರಾಗ್ಯದ ಜೊತೆಗೆ ಹೇಳಿದ್ದರಿಂದ ಯಾಥಾತ್ಮ್ಯವೂ ಒಂದು ಪ್ರತ್ಯೇಕ ಸಾಧನವೆಂಬ ಭ್ರಮಬರುವದು ಅದನ್ನು ಹೀಗೆ ಪರಿಹರಿಸುವರು-

**... ತಾತ್ಪರ್ಯ ...**

**ಜ್ಞಾನಸ್ಯ ವಿಶೇಷಾಃ ಯಾಥಾತ್ಮ್ಯಾದಯಃ ।**
**ಭಕ್ತಿರ್ಜ್ಞಾನಂ ವಿರಕ್ತಿಶ್ಚ ನವಕಃ ಶ್ರವಣಾದಿಕಃ ॥**
**ಧರ್ಮೋಃ ಭಾಗವತಃ ಪ್ರೋಕ್ತಸ್ತದ್ಭಕ್ತೇಷು ತಥಾ ನವ ॥ ಇತಿ ತಂತ್ರಸಾರೇ ॥**

ಯಾಥಾತ್ಮ್ಯಾದಿಗಳು ಜ್ಞಾನದ ವಿಶೇಷಗಳು ಅಂದರೆ ವಿಶಿಷ್ಯತೇ ವ್ಯಾವರ್ತ್ಯತೇ ಜ್ಞಾನಂ ಯೈಃ ವಿಷಯೈಃ ತೇ ವಿಶೇಷಾಃ ಅಂದರೆ ಯಾಥ್ಯಾತ್ಮ್ಯಾದಿ ಪ್ರಕಾರಗಳು. ಯಾಥಾರ್ಥ್ಯ ಮತ್ತು ಆದಿಪದದಿಂದ ಮುಂದಿನ ಶ್ಲೋಕದಲ್ಲಿ ಹೇಳುವ ಸ್ರಷ್ಟೃತ್ವಾದಿಪ್ರಕಾರಗಳನ್ನು ಸ್ವೀಕರಿಸಬೇಕು. ತದ್ವಿಷಯಕಜ್ಞಾನವೆಂದರ್ಥ. (ಸಾಮಾನ್ಯವಾಗಿ ಶ್ರೀಹರಿಯ ಜ್ಞಾನವನ್ನು ಹೇಳಿ ಸೃಷ್ಟಿಕರ್ತೃತ್ವ ಮೊದಲಾದ ಧರ್ಮವಿಶೇಷನಿರೂಪಣವು ವಿಶೇಷಜ್ಞಾನಕ್ಕಾಗಿ ಆದ ಕಾರಣ ಪೌನರುಕ್ತ್ಯವಿಲ್ಲ).

ಭಕ್ತಿಜ್ಞಾನವಿರಕ್ತಿಗಳು ಭಾಗವತ ಧರ್ಮವೆನ್ನಲು ಪ್ರಮಾಣ ಹೇಳಿ ಅದರಿಂದಲೇ ಭಕ್ತಿಪದಕ್ಕೆ ಅರ್ಥವನ್ನು ಹೇಳುವರು. **ಭಕ್ತಿಃ** ಸ್ನೇಹವು **ಜ್ಞಾನಂ** ಮಹಾತ್ಮ್ಯಜ್ಞಾನ **ವಿರಕ್ತಿಃ** ವೈರಾಗ್ಯಶ್ರವಣಾದಿನವಕಗಳು ಭಾಗವತಧರ್ಮಗಳು ಎಂದು ಹೇಳಲ್ಪಟ್ಟಿದೆ 'ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ । ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥ ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ' ಎಂದು ಹೇಳಿದೆ. ॥೪೪॥

**ಸರ್ಗಸ್ಥಿತ್ಯಪ್ಯಯೇಶಸ್ಯ ಗುಣಕರ್ಮಾನುವರ್ಣನಮ್ ।**
**ಪರಾವರೇಷಾಂ ಸ್ಥಾನಾನಾಂ ಕಾಲೇನಾವ್ಯತ್ಯಯೋ ಮಹಾನ್ ॥೪೫॥**

ಸೃಷ್ಟಿ, ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳಿಗೆ ಒಡೆಯನಾದ ಶ್ರೀಹರಿಯ **ಗುಣಕರ್ಮಾನುವರ್ಣನಂ** ಜ್ಞಾನಾನಂದಾದಿಗುಣಗಳ ದೈತ್ಯಸಂಹಾರಾದಿಕರ್ಮ(ಕ್ರಿಯೇ)ಗಳ ಅವರರಾದ ತೃಣಜೀವರಿಗೆ ಹಾಗೂ **ಸ್ಥಾನಾನಾಂ** ಸತ್ಯಲೋಕಾದಿಗಳು ಸ್ವರ್ಗಾದಿ ಎಲ್ಲ ಸ್ಥಾನಗಳ **ಕಾಲೇನ** ಪ್ರಲಯಕಾಲದಿಂದ **ಅತ್ಯಯಃ** ನಾಶವೆಂಬ ಜ್ಞಾನವು **ಮಹಾನ್** ಗುಣದಿಂದ, ದೇಶದಿಂದ, ಕಾಲದಿಂದ ಶ್ರೀಹರಿಯು **ಮಹಾನ್** ಅಪರಿಚ್ಛಿನ್ನನು ಎಂಬ ಜ್ಞಾನವು

ವಿಶೇಷ :-(**ಮಹಾನ್ ವ್ಯತ್ಯಯಃ** ಬ್ರಹ್ಮಾದಿಗಳಿಗೆ ಸ್ಥಾನಗಳಿಗೆ ಮಹಾವ್ಯತ್ಯಾಸ-ವಾಗುವದು ಎಂದರ್ಥ.) **ಕಾಲೇನಾವ್ಯತ್ಯ** ಎಂಬ ಪಾಠದಲ್ಲಿಯೂ **ಆ** ಸಮ್ಯಕ್ ವ್ಯತ್ಯಯಃ ಎಂದೇ ಅರ್ಥಮಾಡಬೇಕು. ಆಗ ಮಹಾನ್ ಎಂಬುದು ಇದಕ್ಕೆ ವಿಶೇಷಣವಲ್ಲ. ಆದ್ದರಿಂದಲೇ ಇದರಿಂದ ಬರುವ ಅರ್ಥ ಬಂದಿದೆ. ದುರ್ಘಟಾರ್ಥಪ್ರಬೋಧಿನಿಯಲ್ಲಿ 'ವ್ಯತ್ಯಸ್ಯ ಜಗನ್ನಿಷ್ಠತ್ವಾತ್' ಎಂದಿದ್ದಾರೆ. ಪ್ರಬೋಧಿನಿಯಲ್ಲಿ ಮಹಾವ್ಯತ್ಯಾಸಃ ಎಂದಿದೆ. ಮಹಾವ್ಯತ್ಯಯಪ್ರಕಾರಕಂ ಜ್ಞಾನಂ ಎಂದಿದೆ. ನಿರ್ಣಯಪ್ರಕಾಶಿಕಾದಲ್ಲಿ ವ್ಯತ್ಯಯಃ ನಾಶಃ ಎಂದಿದೆ. ಪರಕೀಯರ ವ್ಯಾಖ್ಯಾನದಲ್ಲಿ ವ್ಯತ್ಯಃ ವ್ಯತ್ಯಾಸಃ ಎಂದಿದೆ. ಕಾರಣ ಕಾಲೇನ ವ್ಯತ್ಯಯಃ ಎಂಬ ಪಾಠವೇ ಸರಿ. ಎರಡೂ ಪಾಠದಲ್ಲಿ ವಿರಿಂಚಿಯಿಂದ ಆರಂಭಿಸಿ ಅವ್ಯತ್ಯಃ ಅಂದರೆ ಇದ್ದಂತೆ ಇರುವದು ಎಂಬ ಅರ್ಥ ಅನುಗುಣವಾಗಲಾರದು. ಏಕೆಂದರೆ 'ನೈಚ್ಛಾಮಿ ತೇ ವಿಲುಲಿತಾ ಗುರುವಿಕ್ರಮೇಣ ಕಾಲಾತ್ಮನೋಪನಯ' ಎಂಬಲ್ಲಿಯಂತೆ ಇಲ್ಲಿಯೂ ವೈಲುಲಿತ್ಯ ಹೇಳಿದೆ ಎನ್ನುತ್ತಾರೆ ಸತ್ಯಧರ್ಮರು. ।।೪೫।।

**ಧರ್ಮೋ ಭಾಗವತಾನಾಂ ಚ ಭಗವಾನ್ ಯೇನ ಗಮ್ಯತೇ ।**
**ಆಖ್ಯಾನೇऽಸ್ಮಿನ್ ಸಮಾಖ್ಯಾತಮಾಧ್ಯಾತ್ಮಿಕಮಶೇಷತಃ ।।೪೬।।**

**ಯೇನ ಏವ** ಯಾವ ಧರ್ಮದಿಂದಲೇ (ಅಂದರೆ ಭಕ್ತ್ಯಾದಿಗಳಿಂದಲೇ ಹೊರತು ದ್ವೇಷಾದಿಗಳಿಂದಲ್ಲವೋ) **ಭಗವಾನ್** ಶ್ರೀಹರಿಯು **ಗಮ್ಯತೇ** ತಿಳಿಯಲ್ಪಡುವನೋ ಹೊಂದಲ್ಪಡುವನೋ **ಭಾಗವತಾನಾಂ ಚ** ಅಂತಹ ಭಗವದ್ಭಕ್ತ **ಧರ್ಮಃ ಚ** ಶ್ರವಣಾದಿಧರ್ಮಗಳು ಮತ್ತು **ಆಧ್ಯಾತ್ಮಿಕಂ** ಶರೀರದಲ್ಲಿರುವ ಇಂದ್ರಿಯಾದಿಗಳು **ಅಶೇಷತಃ** ಸಂಪೂರ್ಣವಾಗಿ **ಅಸ್ಮಿನ್ ಆಖ್ಯಾನೇ** ಈ ಕಥೆಯಲ್ಲಿ **ಸಮಾಖ್ಯಾನಂ** ವಿವರಿಸಲ್ಪಟ್ಟಿತು. ।।೪೬।।

ಭಗವತ್ಕಥೆಯಲ್ಲಿ ಪ್ರವೃತ್ತಿಯನ್ನು ಹುಟ್ಟಿಸಲು ಹೇಳುವವರಿಗೆ ಕೇಳುವವರಿಗೆ ಆಗುವ ಫಲವನ್ನು ಹೇಳುವರು-

**ಯ ಏತತ್ ಪುಣ್ಯಮಾಖ್ಯಾನಂ ವಿಷ್ಣೋರ್ವೀರ್ಯೋಪಬೃಂಹಿತಮ್ ।**
**ಕೀರ್ತಯೇಚ್ಛ್ರದ್ಧಯಾ ಶ್ರುತ್ವಾ ಕರ್ಮಪಾಶೈರ್ವಿಮುಚ್ಯತೇ ॥೪೭॥**

**ಯಃ** ಯಾವನು **ಏತತ್** ಈ **ಪುಣ್ಯಂ** ಪುಣ್ಯವನ್ನು ಕೊಡುವ **ವಿಷ್ಣೋಃ** ಶ್ರೀಹರಿಯ **ವೀರ್ಯೋಪಬೃಂಹಿತಂ** ವೀರ್ಯಾದಿಗುಣಗಳಿಂದ ತುಂಬಿದ **ಆಖ್ಯಾನಂ** ಪ್ರಹ್ಲಾದರಾಜರ ಚರಿತ್ರೆಯನ್ನು (ಕಥೆಯನ್ನು) **ಶ್ರದ್ಧಯಾ ಶ್ರುತ್ವಾ** ಶ್ರದ್ಧೆಯಿಂದ ಕೇಳಿ **ಕೀರ್ತಯೇತ್** ಹೇಳುವನೋ **ಸಃ** ಅವನು **ಕರ್ಮಪಾಶಾತ್** ಬಂಧಕ ಕರ್ಮದಿಂದ **ವಿಮುಚ್ಯತೇ** ಮುಕ್ತನಾಗುವನು. ಅವನಿಗೆ ನಿವೃತ್ತಿಕರ್ಮದಲ್ಲಿ ಶ್ರದ್ಧೆಯುಂಟಾಗುವದು.

ವಿಶೇಷ :- 'ಪುಣ್ಯಮಾಖ್ಯಾನಂ' ಎಂಬುದು ಸಮಸ್ತಪದ. **ಪುಣ್ಯಾ** ಪುಣ್ಯಪ್ರಾಪಕವಾದ **ಮಾ** ಜ್ಞಾನವು ಯಾವುದರಿಂದ ಬರುವದೋ ಅಂಥ ಆಖ್ಯಾನವೆಂದರ್ಥ. ಯಃ ಕೀರ್ತಯೇತ್ ಯಶ್ಚ ಶೃಣುಯಾತ್, ಶ್ರುತ್ವಾ ಚ ಸ್ಥಿತಃ ಸ ಚ ಕರ್ಮಪಾಶೈಃ ವಿಮುಚ್ಯತೇ ಎಂದು ಅನ್ವಯಮಾಡಿರುವರು. 'ಸಮಾನಕರ್ತೃಕಯೋಃ ಪೂರ್ವಕಾಲೇ' ಎಂದು ಸೂತ್ರವಿರುವದರಿಂದ ಸ್ಥಿತಃ ಎಂದು ಅಧ್ಯಾಹಾರ ಮಾಡಿ ಅನ್ವಯ ಹೇಳಿದೆ ಎಂದು ತಿಳಿಯಬೇಕು.

ವ್ಯಾಖ್ಯಾನವಿಶೇಷ :- ಈ ಮಾತನ್ನು ಶ್ರೀಮನ್ನ್ಯಾಯಸುಧೆಯಲ್ಲಿ ಆನಂದಮಯಾಧಿಕರಣದಲ್ಲಿ 'ತಂ ಆತ್ಮಾನಂ ವಿದಿತ್ವಾಸಾಕ್ಷಾತ್ ಪಶ್ಯತಃ ಇತಿ ಶೇಷಃ । ತೇನ ಸಮಾನಕರ್ತೃಕತಾ' ಎಂದಿದ್ದಾರೆ. ಇದೇ ರೀತಿಯ ಅನೇಕ ಸ್ಥಳಗಳಲ್ಲಿ ಈ ರೀತಿಯಾಗಿ ಸಮಾನಕರ್ತೃಕತಾ ಸಂಪಾದಿಸಲು ಆಯಾಸಪಟ್ಟದ್ದು ಕಂಡಿದೆ. ಹೇಗೆ 'ಮುಖಂ ವ್ಯಾದಾಯ ಸ್ವಪಿತಿ' ಮುಂತಾದ ಸ್ಥಳದಲ್ಲಿ ಉತ್ತರ ಕಾಲದಲ್ಲಿಯೂ ಕ್ತ್ವಾ ಪ್ರತ್ಯಯ ಕಂಡಿರುವದರಿಂದ (ತಸ್ಯ) ಪೂರ್ವಕಾಲಕ್ಕೆ ವ್ಯಭಿಚಾರವನ್ನು ಮಣಿಕಾರ ಮೊದಲಾದವರು ಹೇಳಿರುವರೋ, ಹಾಗೆ ಅಸಮಾನಕರ್ತೃಕ ಸ್ಥಳದಲ್ಲಿಯೂ ಕ್ತ್ವಾ ಪ್ರತ್ಯಯಕಂಡಿಲ್ಲ ವಾದ್ದರಿಂದ ವ್ಯಭಿಚಾರವಿಲ್ಲ.

ಇನ್ನು (ಇದರ ಶೇಷವಾಕ್ಯಾರ್ಥಚಂದ್ರಿಕೆಯಲ್ಲಿ) ಇದು ಒಪ್ಪಿ ಹೇಳಿದ ಮಾತು (ಸಮಾನಕರ್ತೃತ್ವನಿಯಮ) ಇದು ವಾಸ್ತವಿಕವಾಗಿ ಸಮಾನಕರ್ತೃಕತ್ವ ಇಲ್ಲದಿದ್ದರೂ ಕ್ತ್ವಾ ಪ್ರತ್ಯಯವು 'ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ' ಮುಂತಾದ ಸ್ಥಳಗಳಲ್ಲಿ ಆ ನಿಯಮವು ಅನಾವಶ್ಯಕವೆಂದು ತಿಳಿಯಬೇಕು ಎಂದು ಹೇಳಿದೆ. ಅದರಂತೆ 'ಅಕ್ಷರಾತ್ ಸಂಭವತೀಹ ವಿಶ್ವಂ ಇತ್ಯುಕ್ತ್ವಾ ತಸ್ಮಾಚ್ಚಾಕ್ಷರಾತ್ ಪರತಃ ಪರಃ ಇತಿ ಪರಃಪ್ರತೀಯತೇ' ಎಂಬ ಭಾಷ್ಯಚಂದ್ರಿಕೆಯಲ್ಲಿ ಇತ್ಯುಕ್ತ್ವಾ ಪ್ರತೀಯತೇ ಇತಿ ಭಾಷ್ಯೇ ಕ್ರಿಯಯೋಃ ಸಮಾನಕರ್ತೃಕತ್ವ ಇಲ್ಲದಿದ್ದರೂ ಕ್ತ್ವಾ ಪ್ರತ್ಯಯವು 'ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ'

ಎಂಬಲ್ಲಿಯಂತೆ ಎಂದು ತಿಳಿಯಬೇಕು ಎಂದಿದ್ದಾರೆ. ಅಂದ ಮೇಲೆ ಸಮಾನಕರ್ತೃಕತ್ವ ನಿಯಮವೆಂದು ಹೇಗೆ ಹೇಳುವಿರಿ ಎಂದು ಶಂಕಿಸುವಂತಿಲ್ಲ. ಚಂದ್ರಿಕೆಯು ಕೆಸರಿನಲ್ಲಿಯ ಮುಳ್ಳಿದ್ದಂತೆ ಇದೆ. ಅನೇಕರು ಅದಕ್ಕೆ ವ್ಯಾಖ್ಯಾನವನ್ನು ಮಾಡಿರುವರು. ಈ ಶೇಷವಾಕ್ಯಾರ್ಥಚಂದ್ರಿಕಾಕಾರರೂ ಸಹ ಶ್ರವಣಂ ಪ್ರತಿ ಪುರುಷಸ್ಯಮೋಚನಂ ಪ್ರತಿ ತು ಪಾಪಾನಾಂ ಕರ್ತೃತ್ವೇನ ಸಮಾನಕರ್ತೃಕತ್ವ ಇಲ್ಲದಿರುವದರಿಂದ ಕ್ತ್ವಾ ಪ್ರತ್ಯಯವು ಅನುಪಪನ್ನವಾದ್ದರಿಂದ ಸ್ಥಿತಃ ಎಂದು ಅಧ್ಯಾಹಾರಮಾಡಿ ಸಮಾನಕರ್ತೃಕತ್ವ ಹೇಳುವದಾದರೆ, ಪ್ರಕೃತದಲ್ಲಿಯೂ ವಿಚಾರ್ಯಮಾಣೇ ಎಂದು ಶೇಷಪೂರ್ತಿ ಮಾಡಿ ಸಮಾನಕರ್ತೃಕತ್ವ ಬರುವದೆಂದು ತಿಳಿಯಿರಿ ಎಂದು ವಿವರಿಸಿರುವರು. ಇದಕ್ಕೆ ಎಳ್ಳಷ್ಟು ವ್ಯತ್ಯಾಸವಿಲ್ಲದಂತೆ ಶ್ರೀಸತ್ಯಾನಂದತೀರ್ಥ ಶ್ರೀಪಾದಂಗಳವರು ಹೀಗೆಯೇ ವ್ಯಾಖ್ಯಾನಿಸಿರುವರು.

ಇದರಂತೆ ಶಬ್ದಮಾತ್ರ ವ್ಯತ್ಯಾಸವಿದ್ದು ಅರ್ಥದಲ್ಲಿ ವ್ಯತ್ಯಾಸವಿಲ್ಲದಂತೆ ಭಾವದೀಪ, ಭಾವರತ್ನಕೋಶ, ಕಂಬಾಲೂರು ರಾಮಚಂದ್ರತೀರ್ಥರು, ಸುಧಾಪರಿಮಳಗಳಲ್ಲಿ ಕ್ರಮವಾಗಿ ಈ ವಿಷಯವಿದೆ ಎಂದು ತಿಳಿಯಬೇಕು.

ಭಾವದೀಪದಲ್ಲಿ 'ಇತ್ಯುಕ್ತ್ವಾ ಪ್ರಕೃತೇ ಉತ್ತರವಾಕ್ಯೇ ಇತಿ ಯೋಜನಾಚ್ಚ ಕ್ತ್ವಾ ಶ್ರುತ್ಯುಪಪತ್ತಿರಿತಿ'. ಭಾವರತ್ನಕೋಶದಲ್ಲಿ 'ಯದೋರ್ವಂಶಂ ನರಃಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ' ಇತಿ ದುತ್ ದ್ರಷ್ಟವ್ಯಃ ಎಂಬಲ್ಲಿ ವರ್ತಮಾನಪದ ಅಧ್ಯಾಹಾರ ಮಾಡಿ ನಿರ್ವಾಹ ಮಾಡಿದಂತೆ ಇಲ್ಲಿಯೂ 'ವಚನಾತ್' ಮುಂತಾದ ಪದ ಅಧ್ಯಾಹಾರದಿಂದ ನಿರ್ವಾಹವನ್ನು ತಿಳಿಯಬೇಕು ಎಂಬ ತಾತ್ಪರ್ಯವನ್ನು ತಿಳಿಯಬೇಕು ಎಂದಿದ್ದಾರೆ.

ಇದರಂತೆ ಚಂದ್ರಿಕಾ ರಾಘವೇಂದ್ರತೀರ್ಥೀಯದಲ್ಲಿ (ಪ್ರಕಾಶದಲ್ಲಿ) ಮತ್ತು ಕಂಬಾಲೂರು ರಾಮಚಂದ್ರತೀರ್ಥರ ಟಿಪ್ಪಣಿಯಲ್ಲಿ 'ನನು' ಎಂದಾರಂಭಿಸಿ 'ಪಶ್ಯತಃ'ಇತ್ಯಧ್ಯಾಹೃತದರ್ಶನಕ್ರಿಯಯಾ ವೇದನಕ್ರಿಯಯಾ ಸಮಾನಕರ್ತೃತ್ವೇನ ಕ್ತ್ವಾ ಪ್ರತ್ಯಯೋಪಪತ್ತಿಃ ಇತ್ಯಾಹ' ಎಂಬಲ್ಲಿ ವರೆಗಿನ ವಾಕ್ಯದಿಂದಲೂ ಸುಧಾ ಹಾಗೂ ಪರಿಮಳಗಳಲ್ಲಿಯೂ 'ಸಮಾನಕರ್ತೃಕಯೋಃ ಪೂರ್ವಕಾಲೇ ಕ್ತ್ವಾ ಇತಿ ಸಮಾನಕರ್ತೃಕಕ್ರಿಯೆ ಇದ್ದರೇನೇ ಪೂರ್ವಕಾಲವಾಚಿ ಧಾತುವಿಗೆ ಕ್ತ್ವಾಪ್ರತ್ಯಯ ಹೇಳಿರುವದರಿಂದ ಪಶ್ಯತಃ ಎಂಬ ಕ್ರಿಯಾಪದ ಅಧ್ಯಾಹಾರ ಮಾಡಿದರೆ ವಿದಿತ್ವಾ ಎಂಬ 'ಕ್ತ್ವಾಪ್ರತ್ಯಯಯೋಗಸ್ಯ ಸಾಧುತ್ವಾಪತ್ತೇರಿತಿ ಉಕ್ತ್ವೇತ್ಯನಂತರಂ ಆಮ್ನಾತಃ ಇತಿ ಶೇಷಃ' ಎಂದು ಸ್ವಯಂ ವ್ಯಾಖ್ಯಾನಮಾಡಿ ಇತ್ಯುಕ್ತ್ವಾ 'ದ್ರಷ್ಟವ್ಯಂ' ಎಂಬಲ್ಲಿವರೆಗಿನ ಚಂದ್ರಿಕಾವಾಕ್ಯವನ್ನು ಹಿಡಿದು ಇದೇ ಅದರ ಅಭಿಪ್ರಾಯ

ಎಂದಿದ್ದಾರೆ ಜಗನ್ನಾಥತೀರ್ಥರು. ಇದೇನಾಶ್ಚರ್ಯವಲ್ಲ ಜಗನ್ನಾಥಯತಿಗಳು ಹೇಳಿದ್ದು ನಿಮಗೆ ಸಮ್ಮತವಲ್ಲವಲ್ಲ ಎನ್ನಬೇಡಿರಿ. ನಮಗೇನು ಮಾತ್ಸರ್ಯವಿಲ್ಲ ಎನ್ನುತ್ತಾರೆ ಶ್ರೀಗಳು. ಅಂದರೆ ಕೆಲವು ಭಾವಬೋಧವಿರುದ್ಧ ಹೇಳಿದ್ದು ಸಮ್ಮತವಾಗಲಿಕ್ಕಿಲ್ಲ ಆದರೆ ಅವರು ಹೇಳಿದ್ದೆಲ್ಲ ಸರಿಯಿಲ್ಲ ಎಂದು ಹೇಳುವ ಮತ್ಸರರು ನಾವಲ್ಲವೆಂದು.

ತತ್ವಪ್ರದೀಪದಲ್ಲಿಯಾದರೂ 'ಯತ್ತದದ್ರೇಶ್ಯಮಗ್ರಾಹ್ಯಮಿತ್ಯುಕ್ತ್ವಾತ್ ಉತ್ತರತ್ರ ಅಕ್ಷರಾತ್ ಪರತಃ ಪರಃ ಇತಿ ವಚನಾತ್ ಪರಃ ಪ್ರತೀಯತೇ' ಎಂದಿದೆ. ನ್ಯಾಯವಿವರಣದಲ್ಲಿಯೂ 'ಅಕ್ಷರಾತ್ ಪರತಃ ಪರಸ್ಯಾಪ್ಯಕ್ಷರಾತ್ ಪರತ್ವವಚನಾತ್' ಎಂದು ಹೇಳಿದ್ದು ಭಾಷ್ಯದಲ್ಲಿ ವಚನಾತ್ ಎಂಬ ಪದ ಪೂರಣಮಾಡಿ ಕ್ತ್ವಾ ಪ್ರತ್ಯಯ ಪ್ರಯೋಗಕ್ಕೆ ಉಪಪತ್ತಿ ಸೂಚಿಸಲೆಂದು ತಿಳಿಯಬೇಕು. ಈ ರೀತಿ ನೂರಕ್ಕೂ ಹೆಚ್ಚು ಸ್ಥಳದಲ್ಲಿ ಸಮಾನಕರ್ತೃಕ ಸ್ಥಳದಲ್ಲಿಯೇ ಕ್ತ್ವಾ ಪ್ರತಯ್ಯಪ್ರಯೋಗವೆಂದು ಹೇಳಿದ್ದರಿಂದ ಶೇಷಚಂದ್ರಿಕೆಯೊಂದು ಪಾಪ ಪರಕೀಯರ ಪ್ರಾಸಂಗಿಕ ಮುಖಭಂಗಭಂಗಿಯಿಂದ ಪ್ರವೃತ್ತವಾಗಿದೆ ಎಂದು ಕಲ್ಪಿಸುವದು ಸುಲಭ. ಪರಕೀಯರು ಹೀಗೆ ಒಪ್ಪಿರುವರು ಆದ್ದರಿಂದ ನಮ್ಮ ಉಪಪಾದನ ಸಾಪೇಕ್ಷವಲ್ಲ ಅವರ ಮಾತು ಅವರೇ ಪರರೀತ್ಯಾ ಎಂದೂ ಸಹ ಹೇಳಿದ್ದಾರೆ. 'ಮುಖಂ ವ್ಯಾದಾಯ ಸ್ವಪಿತಿ' ಎಂಬಲ್ಲಿಯೂ ಬಾಯಿ ತೆರದ ಮೇಲೆಯೂ ನಿದ್ರೆ ಮುಂದುವರೆದಿರುವುದರಿಂದ ಪೂರ್ವಕಾಲದಲ್ಲಿಯೇ ಕ್ತ್ವಾ ಪ್ರತ್ಯಯವು ಎಂದೂ ಹೇಳಬಹುದು. ಇದನ್ನೇ ಸಿದ್ಧಾಂತಕೌಮುದಿಯಲ್ಲಿ 'ಕಥಂ ಮುಖಂ ವ್ಯಾದಾಯ ಸ್ವಪಿತಿ. ನೇತ್ರಂ ನೀಮಿಲ್ಯ ಹಸತೀತಿ ವ್ಯಾದನಸಮ್ಮೀಲ-ನೋತ್ತರಕಾಲೇ ಅಪಿ ಸ್ವಾಪಹಾಸಯೋರನುವೃತ್ತೇಃ ತದಂಶವಿವಕ್ಷಯಾ ಭವಿಷ್ಯತಿ' ಇದರ ತತ್ವಸುಬೋಧಿನೀ ವ್ಯಾಖ್ಯಾನದಲ್ಲಿ 'ಶ್ರೀಶೈಲಶಿಕರಂ ದೃಷ್ಟ್ವಾ ಪುನರ್ಜನ್ಮನ ವಿದ್ಯತೇ' ಮುಂತಾದ ಸ್ಥಳದಲ್ಲಿ ಸಮಾನಕರ್ತೃಕತಾ ನಿರ್ವಾಹಕ್ಕಾಗಿ ಸ್ಥಿತಸ್ಯೇತ್ಯಾದಿ ಯಥಾ ಸಂಭವಮಧ್ಯಾಹಾರ್ಯಂ ಎಂದಿದ್ದಾರೆ. ಕಾರಣ ಸಮಾನಕರ್ತೃಕತಾ ನಿಯಮ ಪೂರ್ವಕಾಲನಿಯಮವೂ ಇದೆ ಎಂದು ತಿಳಿಯಬೇಕು. ।।೪೭।।

ಶ್ರೀಹರಿಯ ಪರಾಕ್ರಮ ಮೊದಲಾದ ಗುಣಗಳ ವರ್ಣನೆಯಿಂದ ತುಂಬಿದ್ದರಿಂದ ಶ್ರವಣ,ಕೀರ್ತನಮಾಡಬೇಕೆಂದು ಸಾಮಾನ್ಯವಾಗಿ ಹೇಳಿ ಪ್ರಸ್ತುತವಾದ ಅವತಾರ(ನರಸಿಂಹ)ಚರಿತ್ರೆಯೂ ಕೀರ್ತನೀಯ,ಶ್ರವಣೀಯ ಎಂದು ಹೇಳುವರು-

**ಏತದ್ ಯ ಆದ್ಯಪುರುಷಸ್ಯ ಮೃಗೇಂದ್ರಲೀಲಾಂ**
**ದೈತ್ಯೇಂದ್ರಯೂಥಪವಧಂ ಪ್ರಯತಃ ಪಠೇತ ।**
**ದೈತ್ಯಾತ್ಮಜಸ್ಯ ಚ ಸತಾಂ ಪ್ರವರಸ್ಯ ಪುಣ್ಯಂ**
**ಶ್ರುತ್ವಾಽನುಭಾವಮಕುತೋಭಯಮೇತಿ ಲೋಕಮ್ ॥೪೮॥**

**ಯಃ** ಯಾವ ಭಕ್ತನು **ಆದ್ಯಪುರುಷಸ್ಯ** ಆದಿಪುರುಷನಾದ **ಮೃಗೇಂದ್ರಲೀಲಾಂ** ಸಿಂಹದ ಕ್ರೀಡೆಯನ್ನು **ದೈತ್ಯೇಂದ್ರಯೂಥಪವಧಂ** ದೈತ್ಯಶ್ರೇಷ್ಠನೆಂಬ ಆನೆಯ ವಧವನ್ನು ಪ್ರತಿಪಾದಿಸುವ **ಸತಾಂ ಪ್ರವರಸ್ಯ** ತನ್ನಕಿಂತ ಕೆಳಗಿನ ಸಜ್ಜನರಿಗೆ ಶ್ರೇಷ್ಠರಾದ **ದೈತ್ಯಾತ್ಮಜಸ್ಯ** ಹಿರಣ್ಯಕಶಿಪುಪುತ್ರಪಹ್ಲಾದರ **ಪುಣ್ಯಂ** ಪವಿತ್ರವಾದ **ಅನುಭಾವಂ** ಮಹಿಮೆಯನ್ನು ಪ್ರತಿಪಾದಿಸುವ **ಏತತ್** ಆಖ್ಯಾನವನ್ನು **ಪ್ರಯತಃ** ಭಕ್ತಿಯುಕ್ತನಾಗಿ **ಶ್ರುತ್ವಾ** ಕೇಳಿ **ಪಠೇತ** ಪಠನ ಮಾಡುವನೋ **ಸಃ** ಅವನು **ಅಕುತೋಭಯಂ ಲೋಕಂ ಏತಿ** ಯಾರಿಂದಲೂ ಯಾವ ಭಯವಿಲ್ಲದ ವೈಕುಂಠಲೋಕವನ್ನು ಹೊಂದುವನು ಅಥವಾ ರೋಚಮಾನಸುಖವನ್ನು ಹೊಂದುವನು. ಹಿಂದೆ ಉದಾಹರಿಸಿದ ಬೃಹದ್ಭಾಷ್ಯವನ್ನು ಅನುಸಂಧಾನಮಾಡಬೇಕು. ಆದ್ಯಪುರುಷಸ್ಯ ಎಂಬುದಕ್ಕೆ ಮೃಗೇಂದ್ರಲೀಲಾಂ ಎಂದು ಸಮಸ್ತವಾದ ಮೃಗೇಂದ್ರಪದದೊಡನೆ ಯೋಗ್ಯತಯಾ ಅನ್ವಯ. ಆಗ ಪುರುಷಮೃಗೇಂದ್ರಸ್ಯ ಅಂದರೆ ನರಸಿಂಹದೇವರ ಎಂದರ್ಥ. ಮೃಗೇಂದ್ರ ಎನ್ನುವದು ಲುಪ್ತಷಷ್ಠೀಕವಾದ ಪದ. ಕಥಂ ಭೂತಸ್ಯ ಮೃಗೇಂದ್ರಸ್ಯ ಎಂದರೆ **ಆದ್ಯಪುರುಷಸ್ಯ ಆದ್ಯಃ ಪುರುಃ** ಪುರುಶಬ್ದಃ ಯಸ್ಮಿನ್ ತತ್ ಆದ್ಯಪುರುಷಂ ತಸ್ಯ. ಪುರುಷಮೃಗೇಂದ್ರಲೀಲಾ ಎಂಬ ಪದ ದೊರೆಯುವದು. ವಿಭಾಗಮಾಡಿ ಸಮಾಸ ಮಾಡದೇ ಹೇಳುವ ವ್ಯಾಸರಿಗೆ ಈ ಪುರುಷಮೃಗೇಂದ್ರಜನ್ಮ ಕರ್ಮಾಧೀನ ವಲ್ಲ ತನ್ನ ಇಚ್ಛೆಯಿಂದ ಮಾಡಿದ್ದು ಎಂದು ತಿಳಿಸುವ ಅಭಿಪ್ರಾಯವಿದೆ ಮತ್ತು ಈ ನಾಮವು ಮಂತ್ರರೂಪವಾದುದರಿಂದಲೂ ಉಪಸಂಹಾರಕಾಲವಾದು-ದರಿಂದಲೂ ರಹಸ್ಯತೆಯನ್ನು ತಿಳಿಸಲು ಸಮಾಸಮಾಡದೇ ಸ್ವೀಕರಿಸಿರುವರು ಎಂದು ತಾತ್ಪರ್ಯ ತಿಳಿಯಬೇಕು.) ॥೪೮॥

ಪ್ರಹ್ಲಾದರ ಮಹಿಮೆ ಶ್ರೇಷ್ಠ ಎಂದರೆ ಧರ್ಮಾದಿಗಳು ಕಡಿಮೆ ಎಂಬ ಮಂದಾಶಂಕೆಯನ್ನೂ ಪರಿಹರಿಸುವರು.

'ಕೃಷ್ಣಸ್ಯ ಚ ಮಹಾತ್ಮನಃ ಪಶ್ಯತಸ್ತೇ ಸಮೀಯಯುಃ' ಮುಂತಾಗಿ ಹೇಳಿದ್ದರಿಂದ ಶ್ರೀಕೃಷ್ಣಚರಿತ್ರೆಯು ನಿಮ್ಮಗಳ ಚರಿತ್ರೆಯೂ ಕೀರ್ತನೀಯ ಶ್ರವಣೀಯವು ಎಂದು ಧರ್ಮರಾಜನಿಗೆ ನಾರದರು ಹೇಳುವರು.

**ಯೂಯಂ ನೃಲೋಕೇ ಬತ ಭೂರಿಭಾಗಾ**
**ಲೋಕಂ ಪುನಾನಾ ಮುನಯೋಽಭಿಯಾಂತಿ ।**
**ಏಷಾಂ ಗೃಹಾನಾಂ ವಸತೀತಿ ಸಾಕ್ಷಾದ್**
**ಗೂಢಂ ಪರಂ ಬ್ರಹ್ಮ ಮನುಷ್ಯಲಿಂಗಮ್ ॥೪೯॥**

ಯುಧಿಷ್ಠಿರಾದಿಗಳೇ **ಏಷಾಂ** ಯಾವ ನಿಮ್ಮ **ಗೃಹಾನ್** ಮನೆಯಲ್ಲಿ **ಮನುಷ್ಯಲಿಂಗಂ** ಮನುಷ್ಯರಂತೆ ಆಕಾರವುಳ್ಳ ಆದ್ದರಿಂದಲೇ **ಗೂಢಂ** ಎಲ್ಲರಿಂದಲೂ ಭಗವಂತನೆಂದು ತಿಳಿಯಲಾಗದ(ಅಪ್ರಕಾಶಿತಸ್ವರೂಪನಾದ) **ಸಾಕ್ಷಾತ್** ವ್ಯಕ್ತನಾಗಿರುವ ಅಧೋಕ್ಷಜಸ್ವರೂಪನಾದ **ಪರಂ** ಜಗದ್ವಿಲಕ್ಷಣನಾದ **ಬ್ರಹ್ಮ** ಶ್ರೀಹರಿಯು **ಆವಸತೀತಿ** ವಾತ್ಸಲ್ಯದಿಂದ ಇರುವನೆಂದು **ಲೋಕಂ ಪುನಾನಾಃ** ಜಗತ್ತನ್ನೇ ಪವಿತ್ರಗೊಳಿಸುವ **ಮುನಯಃ** ಋಷಿಗಳು(ಬ್ರಹ್ಮಾದಿಜ್ಞಾನಿಗಳು) **ಏಷಾ ಗೃಹಾನ್ ಅಭಿಯಾಂತಿ** ಯಾವ ನಿಮ್ಮಗಳ ಮನೆಗೆ ಬರುತ್ತಿರುವರೋ **ತೇ ಯೂಯಂ** ಆ ನೀವು **ನೃಲೋಕೇ** ಮಾನವರಲ್ಲಿ ಜ್ಞಾನಿಗಳಲ್ಲಿ **ಭೂರಿಭಾಗಾಃ ಬತ** ಬಹುಭಾಗ್ಯಶಾಲಿಗಳು ಎಂಬುದು ಆಶ್ಚರ್ಯ. ॥೪೯॥

ಪರಬ್ರಹ್ಮನು ಪಾಂಡವರ ಮನೆಯಲ್ಲಿ ವಾಸಮಾಡುವನೆಂದು ಹೇಳಿದರು. ಆದರೆ 'ಪರಬ್ರಹ್ಮಾಣಿ ಮುಕ್ತಿಗಾಃ' ಎಂದಿರುವದರಿಂದ ಮುಕ್ತರಿಗೂ ಪರಬ್ರಹ್ಮ ಎಂದು ಕರೆಯುವದರಿಂದ ವಿಷ್ಣುವೆ ಎಂಬ ನಿಶ್ಚಯ ಹೇಗೆ ಎಂದರೆ ಹೀಗೆಂದು ಹೇಳುವರು-

**ಸ ವಾ ಅಯಂ ಬ್ರಹ್ಮ ಮಹದ್ ವಿಮೃಗ್ಯಂ**
**ಕೈವಲ್ಯನಿರ್ವಾಣಸುಖಾನುಭೂತಿಃ ।**
**ಪ್ರಿಯಃ ಸುಹೃದ್ ವಃ ಖಲು ಮಾತುಲೇಯ**
**ಆತ್ಮಾರ್ಹಣೀಯೋ ವಿಧಿಕೃದ್ಗುರುಶ್ಚ ॥೫೦॥**

**ಯಃ** ಯಾವ ಶ್ರೀಕೃಷ್ಣನು **ವಃ** ನಿಮ್ಮ **ಮಾತುಲೇಯಃ** ಸೋದರಮಾವನ ಮಗನೋ **ಪ್ರಿಯಃ** ಅತ್ಯಂತಪ್ರಿಯನೋ **ಸುಹೃತ್** ಅನಿಮಿತ್ತಬಂಧುವೋ **ಆತ್ಮಾ** ಸ್ವಾಮಿಯೋ **ಅರ್ಹಣೀಯಃ** ನಿಮ್ಮಿಂದ ಪೂಜಿಸಲ್ಪಡುವವನೋ **ವಿಧಿಕೃತ್** ಆಜ್ಞಾಧಾರಕನೋ **ಗುರುಃ ಚ** ಹಿತೋಪದೇಶಕನೂ ಆಗಿರುವನೋ **ಸಃ ಅಯಂ** ಆ ಇವನು **ಕೈವಲ್ಯನಿರ್ವಾಣಸುಖಾನುಭೂತಿಃ** ಅಸಾಧಾರಣವಾದ ಅಥವಾ **ಸ್ವಾತಂತ್ರೇಣ** ಸ್ವತಂತ್ರವಾಗಿ ಶರೀರವಿಲ್ಲದೇ ಅನುಭವಿಸುವ ಸ್ವರೂಪಸುಖಾನುಭವರೂಪನು (ತನ್ನಿಂದ ಭಿನ್ನವಾದ ಪ್ರಾಕೃತಶರೀರಭೋಗ್ಯಸುಖಭಿನ್ನವಾದ ಸುಖ ಅದರ

ಅನುಭವಸ್ವರೂಪ) **ಮಹದ್ಭಿರ್ವಿಮೃಗ್ಯಂ** ಬ್ರಹ್ಮಾದಿಗಳಿಂದ ವಿಶೇಷವಾಗಿ ವಿಚಾರಾರ್ಹನಾದ **ಬ್ರಹ್ಮ ವೈ** ಗುಣಪೂರ್ಣನಾದ ವಿಷ್ಣುವೇ ಅಲ್ಲವೇ.

**ಸತ್ಯಧರ್ಮರ ವಿಶೇಷಾರ್ಥ** :-'**ನಿರ್ವಾಣಸುಖಾನುಭೂತಿಃ**' ಎಂಬಲ್ಲಿ ಅಪ್ರಾಕೃತಸುಖದ ಅನುಭವವುಳ್ಳವನು ಅಥವಾ ಸುಖ ಮತ್ತು ಜ್ಞಾನವುಳ್ಳವನು. (ಸುಖಂ ಚ ಅನುಭೂತಿಶ್ಚ ಯಸ್ಯ ಸಃ ಎಂದು ವಿಗ್ರಹ) '**ಮಾತುಲೇಯ**' ಎಂಬಲ್ಲಿ 'ಮಾತುರ್ಡುಲಚ್' ಎಂದು ಮಾತೃಶಬ್ದಕ್ಕೆ ಡುಲಚ್ ಪ್ರತ್ಯಯ ಮಾಡಿದಾಗ ಮಾತುಲಃ ಎಂದಾಗುವದು. ನಂತರ 'ಶುಭ್ರಾದಿ ಅಪತ್ಯಾರ್ಥೇ ಢಕ್' ಪ್ರತ್ಯಯ. ಅದಕ್ಕೆ ಇಯಾದೇಶವಾಗಿ ಮಾತುಲೇಯ ಎಂದಾಗುವದು. ಆತ್ಮಾ, ವಿಧಿಕೃತ್ ಗುರು, ಅರ್ಹಣೀಯ ಇವೆಲ್ಲವು. ಅಂದರೆ ಸ್ವಾಮಿತ್ವ, ಹಿತೋಪದೇಶಕತ್ವ, ಪೂಜ್ಯತ್ವ ಮತ್ತು ಆಜ್ಞಾಧಾರಕತ್ವ ಇವು **ಖಲು** ಅಂದರೆ ಲೋಕದಲ್ಲಿ ಒಂದೆಡೆ ನಿಷಿದ್ಧವಾದವುಗಳು. ಆದರೆ **ಅತುಲೇ** ಅಸದೃಶನಾದ ಜಗದ್ವಿಲಕ್ಷಣನಾದ ಭಗವಂತನಲ್ಲಿಯಾದರೂ **ಮಾ ಖಲು** ನಿಷಿದ್ಧವಲ್ಲ. 'ಯಸ್ಮಿನ್ ವಿರುದ್ಧಗತಯೋಪ್ಯನಿಶಂ ಪತಂತೀತಿ'. 'ಅಣೋರಣೀಯಾನ್ ಮಹತೋ ಮಹೀಯಾನ್' 'ವ್ಯಾಪಕೋ ಅವ್ಯಾಪಕಃ' ಎಂಬ ಪ್ರಮಾಣಗಳನ್ನು ವೈ ಶಬ್ದದಿಂದ ತಿಳಿಸಿರುವರು. ಒಂದೆಡೆ ಗುರುತ್ವಾದಿಗಳು ವಿರುದ್ಧ ಎಂಬುದಕ್ಕೆ ಖಲು ಎಂದರೆ ಸಾಂತ್ವನ ಹೀಗೂ ಅರ್ಥ. 'ಖಲು ಸಾಂತ್ವನೇ ನಿಷೇಧೇ ಚ' ಎಂದು ವಿಶ್ವ. (ಅದೇನೆಂದರೆ) **ಯೇ ಚ ಸವಾಃ** ನಿನ್ನಿಂದ ಮಾಡಲ್ಪಟ್ಟ ಯಜ್ಞಗಳೂ ಸಹ ಅತುಲೇ ಯದ್ವಿಷಯೇ ಏವ ಸಃ ಎಂದು ಆವೃತ್ತಿಯಿಂದ ಅನ್ವಯ. ಅಸದೃಶನಾದವನ ಉದ್ದಿಶ್ಯ ಮಾಡಿದೆಯೋ ಅವನು ಎಂದರ್ಥ. 'ವಿಧಿಕೃದ್ಗುರುಶ್ಚ' ಎಂಬುದು ಒಂದೇಪದ. ವಿಧಿಕತ್ ವಿಧಿಗುರು ಅಂದರೆ ಬ್ರಹ್ಮನನ್ನು ಸೃಷ್ಟಿಸುವವನು ಅವನಿಗೆ ಉಪದೇಶಕನು ಎಂದರ್ಥ. ('ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾನ್ ಪ್ರಾಹಿಣೋತ್ಸತಿ ಸರ್ವಾನ್') ಮಾ, ಅತುಲೇ, ಯಃ ಯೇ ಎಂದು ಅರ್ಥ. ಕರ್ಮಾನುಸಾರ ಪದವಿಭಾಗ ಮಾಡಿದಂತೆ, ಸಃ ವೈ, ಸವಾ, ಎಂದು ಪದಗಳನ್ನು ತಿಳಿಯಬೇಕು. ಮೊದಲಿಗೆ ಈಗ ಅತುಲೇಯಃ ಎಂದು ಪದ. **ಅತುಲಾ** ಅಸದೃಶವಾದ **ಈ** ಸಂಪತ್ ಅಥವಾ ರಮಾ ಯಸ್ಯ ಸಃ ಅತುಲೇಃ ಇತಿ ಆದ್ದರಿಂದಲೇ ಯಃ ಪ್ರಾಪ್ಯನು ಆದ್ದರಿಂದ ಅತುಲೇಯಃ (ಯಾತೇಃ ಕರ್ಮಣಿ ಕಃ) ಅನಂತರ ಆತ್ಮಾರ್ಹಣೀಯಃ ಎಂಬುದು ಒಂದೇಪದ. ನಿಮ್ಮಿಂದ ಪೂಜನೀಯನು (ಆತ್ಮಭಿಃ ಭವದ್ಭಿಃ ಅರ್ಹಣೀಯಃ) ಸಭೆಯಲ್ಲಿ ಅಗ್ರಸಭಾಜನೀಯನಾದಿ. ಆದ್ದರಿಂದ **ಗುರುಃ ಮಾತುಲೇ** ಸೋದರಮಾವನಾದ ಶಕುನಿಯ ವಿಷಯದಲ್ಲಿ **ಯಃ** ಯಾವನು **ವಿಧಿಕೃತ್** ಹೇಳಿದ್ದನ್ನು ಕೇಳುವನೋ **ಯಃ** ಯಾವನು **ಗುರುಃ** ಭೂಮಿಗೆ ಭಾರನೋ ಮತ್ತು **ಯಃ** ಯಾವನು ಆತ್ಮಾರ್ಹಣೀ ಆತ್ಮನಾ ಅರ್ಹಣಂ ಅಸ್ಯ ಅಸ್ತೀತಿ **ಆತ್ಮಾರ್ಹಣೀ** ತನ್ನನ್ನೇ

ತಾನು ಗೌರವಿಸುವನೋ ತಿಪ್ರತ್ಯಯದಿಂದ ಅರ್ಹಣಕ್ಕೆ ನಿಂದಿತತ್ವ ತಿಳಿಯುವದು.('ಭೂಮನಿಂದಾ ಪ್ರಶಂಸಾಸು ಭವಂತಿ ಮತುಪಾದಯಃ' ಆತ್ಮಪ್ರಶಂಸೆ ನಿಂದಿತವಾಗಿದೆಯಷ್ಟೇ) ಸು, ಹೃತ್ ಅಯಂ ಎಂದು ಪದಗಳು ಸುಶಬ್ದಾರ್ಥವು ಹೃತಪದಾರ್ಥದಲ್ಲಿ ಸ್ವರಸ ಸಂಬಂಧವಿಲ್ಲದ್ದಾಗಿ ಅಂದರೆ ಒಳ್ಳೆಯ ಹೃದಯವುಳ್ಳವನೆಂದು ಕಾಠಿಣ್ಯಾತಿಶಯವನ್ನು ತಿಳಿಸುವದಾಗಿ ಅಯಃಪದದೊಡನೆ ಸಂಬಂಧಿಸುವದು. ಆಗ **ಯಸ್ಯ** ಯಾವನ **ಹೃತ್** ಹೃದಯವು **ಸುಯಃ** ಅತ್ಯಂತ ಕಠಿಣವೋ **ತಸ್ಯ** ಆ ಸುಯೋಧನನಿಗೆ **ಖಲು** ನಿಷೇಧಕನು ಶ್ರೀಕೃಷ್ಣನು ಅಥವಾ ಬ್ರಹ್ಮ ಎಂಬ ವಿಶೇಷ್ಯದ ದೃಷ್ಟಿಯಿಂದ ಖಲು ಎಂದು ನಪುಂಸಕಲಿಂಗವು ಉಪಪನ್ನವಾದುದು. ಸುಯೋಧನನಿಗೆ ಮೊದಲು ಖಂ, ಲುನಾತಿ ಸುಖಂ ಛಿನತ್ತೀತಿ ಖಲು. ಸುಖವನ್ನು ಕತ್ತರಿಸುವನು ನಾಶಮಾಡುವನು. ಅನಂತರ ಖಾನಿ ಲುನಾತೀತಿ ಖಲು=ಅಂದರೆ ಖ ಶಬ್ದದಿಂದ ಕರೆಸಿಕೊಳ್ಳುವ ಇಂದ್ರಿಯೋಪಲಕ್ಷಿತಶರೀರವನ್ನು ನಾಶಮಾಡುವದರಿಂದ ಖಲು ಎಂದು ವಿಶೇಷಾರ್ಥ ತಿಳಿಸಿರುವರು ಶ್ರೀಗಳವರು.

ಈ ಶ್ಲೋಕದಲ್ಲಿ ನಿರ್ವಾಣಸುಖಂ ಎಂಬುದಕ್ಕೆ ಅಧಿಕಾರಿಗಳಂತೆ ಮೋಕ್ಷಸುಖ ಅದರ ಅನುಭೂತಿ ಎಂಬ ಅನ್ಯಥಾ ಪ್ರತೀತಿಯನ್ನು ನಿವಾರಿಸಲು ಸ್ವಲ್ಪ ಅನುವಾದಮಾಡಿ ವಾಣಶಬ್ದ ಶರೀರಪರ ಎಂಬ ತಮ್ಮ ವ್ಯಾಖ್ಯಾನದ ಸ್ಥಿರತೆಗಾಗಿ ಶ್ರುತಿಯನ್ನು ಪಠಿಸುವರು.

**... ತಾತ್ಪರ್ಯ ...**

**ನಿರ್ವಾಣಸುಖಂ ಅಶರೀರಸುಖಂ । ಏತದ್ಬಾಣಮವಷ್ಟಭ್ಯ' ಇತಿ ಶ್ರುತೇಃ ||೫೦||**

**ನ ಯಸ್ಯ ಸಾಕ್ಷಾದ್ ಭವಪದ್ಮಜಾದಿಭೀ**
**ರೂಪಂ ಧಿಯಾ ವಸ್ತುತಯಾಽನುವರ್ಣಿತಮ್ ।**
**ಮೌನೇನ ಭಕ್ತ್ಯೋಪಶಮೇನ ಪೂಜಿತಃ**
**ಪ್ರಸೀದತಾಮೇಷ ಸ ಸಾತ್ವತಾಂ ಪತಿಃ ||೫೧||**

**ಯಃ** ಯಾವ ಕೃಷ್ಣನು **ಮೌನೇನ** ಮನನದಿಂದಲೂ **ಭಕ್ತ್ಯಾ** ಭಕ್ತಿಯಿಂದಲೂ **ಉಪಶಮೇನ** ಮನೋನಿಷ್ಠೆಯಿಂದಲೂ **ಪೂಜಿತಃ** ರುದ್ರಾದಿಗಳಿಂದ ಪೂಜಿಸಲ್ಪಟ್ಟಿರುವನು **ಸಃ** ಅಂತಹ **ಏಷಃ** ನಿಮ್ಮ ಮನೆಯಲ್ಲಿ ವ್ಯಕ್ತನಾಗದಿರುವ **ಸಾತ್ವತಾಂ ಪತಿಃ** ಭಕ್ತರಿಗೆ ಅಥವಾ ಯಾದವರಿಗೆ ಪತಿಯಾದ ಶ್ರೀಕೃಷ್ಣನು **ಪ್ರಸೀದತಾಂ** ನನ್ನ ಮೇಲೆ ಪ್ರಸನ್ನನಾಗಲಿ. ಇದರಿಂದ ಸಾಕಲ್ಯೇನ ದುರ್ಜ್ಞೇಯನಾದ್ದರಿಂದ ಇವನು ವಿಷ್ಣುವೇ ಎಂದು ನಿರ್ಣಯಿಸಿದಂತಾಯಿತು. ಅವನ ಪ್ರಸಾದವನ್ನು ನಾರದರು ಪ್ರಾರ್ಥಿಸಿರುವರು.

ವಿಶೇಷ :- ಇಲ್ಲಿ ಬ್ರಹ್ಮದೇವರಿಗಿಂತ ಮೊದಲು ರುದ್ರದೇವರನ್ನು ಹೇಳಿದ್ದು, ಮುಂದೆ ಹೇಳುವ ಕಥೆಗೆ ಉಪಯೋಗವಾಗುವದೆಂದು ಎಂದು ತಿಳಿಯುವದು. ಅಥವಾ ವಿರಾಟ್ ಶರೀರದಿಂದ ಹುಟ್ಟಿದ ಸ್ವಯಂಭೂ, ಪದ್ಮದಿಂದ ಹುಟ್ಟಿದವನು ಒಬ್ಬನೇ. ಆದ್ದರಿಂದ ಅವರ ಎರಡು ರೂಪಗಳನ್ನೂ ಮೊದಲಿಗೆ ಹೇಳಿದ್ದಾರೆ.

ಬ್ರಹ್ಮದೇವರಿಗೆ ಭೂಮಿಯಲ್ಲಿ ಅವತಾರವಿಲ್ಲವೇ ಹೊರತು ಈ ರೀತಿಯ ಬಹುರೂಪತೆ ಬ್ರಹ್ಮದೇವರಿಗೆ ಉಂಟು ಎಂದು ಮುಂದೆ(೬೩ನೇ ಶ್ಲೋಕದಲ್ಲಿ) ಹೇಳುವ ಕರುವಾಗುವದು ಅಸಂಭಾವಿತವೆಂಬ ಶಂಕಾಪರಿಹಾರಕ್ಕಾಗಿ ಎಂದು ತಿಳಿಯಬೇಕು. **ಅವಸ್ತುತಯಾ** ಶಕ್ತನೆಂದು ವರ್ಣಿಸಲ್ಪಟ್ಟನು ಎಂದೂ ಅರ್ಥ. 'ಅವಸ್ತ್ವಶಕ್ತಮುದ್ದಿಷ್ಟಂ ವಸ್ತು ಶಕ್ತಮೀರ್ಯತೇ' ಎಂದು ಪ್ರಥಮತಾತ್ಪರ್ಯದಲ್ಲಿದೆ. 'ಸಾತ್ವತಾಂ ಪತಿಃ' ಭಕ್ತಸ್ವಾಮಿ ಮೂಲಕೃಷ್ಣನು, ಯದುಪತಿಯಾದ ಈ ಶ್ರೀಕಷ್ಣನು ಪ್ರಸನ್ನನಾಗಲಿ ಎನ್ನುತ್ತಾರೆ ಶ್ರೀಗಳವರು.

ಮಂದನಂದಿನಿ, ವಿಜಯಧ್ವಜೀಯರೀತ್ಯಾ ಇಲ್ಲಿಗೆ ಅಧ್ಯಾಯ ಮುಗಿದಿದೆ. ತಾತ್ಪರ್ಯವ್ಯಾಖ್ಯಾತೃಗಳಂತೆ ಪರಕೀಯರೂ ಕೂಡ 'ಅಪರಂ ವದಾಮಿ ಕಿಂ' ಎಂಬ ಶ್ಲೋಕದ ಕೊನೆಗೆ ಮುಗಿಸಿದ್ದಾರೆ. ಕಾರಣ ಹತ್ತನೇ ಅಧ್ಯಾಯವೇ ಮುಂದುವರೆಯುವದು. ।।೫೧।।

ಭವಪದ್ಮಜಾದಿಭಿಃ ಎಂದು ಪ್ರಸಕ್ತನಾದ ಪಾರ್ವತಿಪತಿಯು ಶ್ರೀಪತಿಯಿಂದ ತನ್ನ ಸಂಶಯನಿವೃತ್ತಿಯನ್ನು ಈರೀತಿ ಹೊಂದಿದನು ಎಂದು ಒಂದು ಕಥೆಯಿಂದ ಹೇಳುವರು.

ಮಂದನಂದಿನೀ ಪ್ರಕಾರ ಹೀಗೆ ಅವತಾರಿಕೆ. ಈ ಅಧ್ಯಾಯದಲ್ಲಿ ಪ್ರಹ್ಲಾದನಲ್ಲಿ ಮಾಡಿದ ನರಸಿಂಹದೇವರ ಅನುಗ್ರಹವನ್ನು ಹೇಳುವ ಪ್ರಸಂಗಸಂಗತಿಯಿಂದ ಉಪಾಸಕರಲ್ಲಿ ವಾಯುದೇವರ ನಂತರ ಮಹಾ ಉಪಾಸಕರಾದ ರುದ್ರದೇವರಲ್ಲಿಯೂ ಶ್ರೀಹರಿಯು ಮಾಡಿದ ಅನಿಷ್ಟನಿವರ್ತಕತ್ವ ತ್ರಿಪುರಾರಿತ್ವ ಕೀರ್ತಿಸಂಪಾದಕತ್ವರೂಪ ಮುಂತಾದ ಅನುಗ್ರಹವು ವರ್ಣಿಸುವರು. ರುದ್ರದೇವರ ಮಹಿಮೆ ಹೇಳುವ ಮುಖಾಂತರ ಶ್ರೀಹರಿಯ ಮಹಿಮೆಯನ್ನೇ ಹೇಳುವರು.

ಮಂದನಂದಿನಿ ವ್ಯಾಖ್ಯಾ ರೀತ್ಯಾ ೫೨ ರಿಂದ ೭೧ನೇ ಶ್ಲೋಕದವರೆಗಿನ ಶ್ಲೋಕಗಳು ೧೧ ಅಧ್ಯಾಯದಲ್ಲಿ ಸೇರಿವೆ ಎಂದು ತಿಳಿಯಬೇಕು. ಇಲ್ಲಿ ಹಿನ್ನಲೆಯನ್ನು ಈ ರೀತಿ ತಿಳಿಯಬೇಕು. ಭಗವಂತನಿಂದ ಸೋತ ಅಸುರರು ಮಯನನ್ನು ಶರಣು ಹೊಕ್ಕು ಅವನ ಪುರವನ್ನು ಆಶ್ರಯಿಸಿದರು. 'ಏಕೋ ರುದ್ರೋ ನ ದ್ವಿತೀಯೋ

ಅವತಸ್ಥೇ' ಮುಂತಾದ ವಾಕ್ಯಗಳ ತಾತ್ಪರ್ಯವನ್ನರಿಯದ ಮಂದಜನರು 'ಈಶಾನಃ ಸರ್ವವಿದ್ಯಾನಾಂ ಈಶ್ವರಃ ಸರ್ವಭೂತಾನಾಂ' ಮುಂತಾದ ಮಂತ್ರಗಳಿಂದ ಸ್ತುತಿಸಿದಾಗ ಅಸುರಾವೇಶದಿಂದ ಜಗತ್ತು ವಿಷ್ಣುವಿನ ಅಧೀನ ಅಹುದೋ? ಅಲ್ಲವೋ? ಅಂದರೆ ನನ್ನ ಅಧೀನವೇ? ಎಂದು ಸಂಶಯ ರುದ್ರದೇವರಿಗೆ ಬಂದಿತು. ಆಗ ಈ ರೀತಿ ಸಂಶಯ ಮಾಡದಿರಲೆಂದು ಮತ್ತು ತ್ರಿಪುರಾರಿ ಎಂಬ ಕೀರ್ತಿಯನ್ನು ರುದ್ರನಿಗೆ ತಂದುಕೊಡಲು ನಾಲ್ಕು ವೇದಗಳೆಂಬ ಕುದರೆಗಳು, ಪೃಥಿವೀ ಎಂಬ ರಥ, ಒಂದೇ ರೀತಿಯ ಧನಸ್ಸು, ತಾನೇ ಬಾಣ ಮುಂತಾದ ಸಲಕರಣೆಯಿಂದ ಕೂಡಿದ ರುದ್ರನನ್ನು ರಥಿಕನನ್ನಾಗಿ ಮಾಡಿ ರುದ್ರದೇವರಿಂದ ದೈತ್ಯರು ಸೋತಾಗ(ಸತ್ತಾಗ) ಮತ್ತೆ ಮಯನಿಂದ ರಸವತ್ತಾದ ಸರೋವರದಲ್ಲಿ ಅದ್ದಿ ಬದುಕಿಸಿದಾಗ ಹೀಗಾದರೆ ಏನು ಮಾಡುವದೆಂದು ದುಃಖಿತವಾಗಿ ನನ್ನ ಅಧೀನಯಾವದೂ ಇಲ್ಲ ಎಲ್ಲವೂ ವಿಷ್ಣುವಿನ ಅಧೀನವೇ ಎಂದು ತಿಳಿದು ವಿಷ್ಣುವನ್ನು ಶರಣು ಬಂದಾಗ, ಬ್ರಹ್ಮನಿಗೂ ರುದ್ರನಿಗಿಂತ ಉತ್ತಮತ್ವ ತಿಳಿಸಲು, ಬ್ರಹ್ಮದೇವರನ್ನು ಕರುಮಾಡಿಕೊಂಡು ತಾನು ಗೋರೂಪದಿಂದ ಹೋಗಿ ರಸದ ಸರೋವರವನ್ನು ಸಂಪೂರ್ಣವಾಗಿ ಕುಡಿದು, ರುದ್ರನಿಗೆ ತಾನು ಬಲವಿತ್ತು ಭೂಮಿಯಲ್ಲಿ ಬೀಳಿಸಲ್ಪಟ್ಟ ರಥವನ್ನು ಹರಿವಂಶದಲ್ಲಿ ಹೇಳಿದ ಪ್ರಕಾರ ದೊಡ್ಡ ಎತ್ತಿನ ರೂಪದಿಂದ ಎರಡು ಕೋಡುಗಳಿಂದ ಮೇಲೆಬ್ಬಿಸಿ ಬಾಣದಲ್ಲಿ ತಾನೇ ಹರಿತವಾಗುವಂತೆ ಇದ್ದು ಎಲ್ಲ ದೈತ್ಯರನ್ನು ನಾಶಮಾಡಿ ರುದ್ರನಿಗೆ 'ತ್ರಿಪುರಾರಿ' ಎಂಬ ಕೀರ್ತಿಯನ್ನು ತಂದುಕೊಟ್ಟನು. ಈ ವಿಷಯವು 'ತೇಷಾಮಸುರಾಣಾಂ ತಿಸ್ರಃ ಪುರ ಆಸನ್' ಮುಂತಾದ ತೈತ್ತರೀಯಶ್ರುತಿ ಮುಂತಾದವುಗಳಿಂದ ಪ್ರಮಿತವಾಗಿದೆ. ವಿಶೇಷ ಜಿಜ್ಞಾಸೆ ಬರಲೆಂದು ನಾರದರು ಸಾಮಾನ್ಯವಾಗಿ ಪ್ರಸ್ತಾಪಿಸುವರು.

**ನಾರದ ಉವಾಚ**

**ಸ ಏಷ ಭಗವಾನ್ ರಾಜನ್ ವ್ಯತನೋದ್ ವಿತತಂ ಯಶಃ ।**
**ಪುರಾ ರುದ್ರಸ್ಯ ದೇವಸ್ಯ ಮಯೇನಾನಂತಮಾಯಿನಾ ॥೫೨॥**

**ಹೇ ರಾಜನ್** ಧರ್ಮರಾಜನೇ **ಸಃ** ನರಸಿಂಹಾವತಾರದಿಂದ ವ್ಯಕ್ತನಾಗಿ ಬ್ರಹ್ಮದೇವರ ವರದಿಂದ ಉನ್ಮತ್ತನಾದ ಹಿರಣ್ಯಕಶಿಪು ಮತ್ತು ಅವನ ಪರಿವಾರ ದೈತ್ಯರನ್ನು ಸಂಹರಿಸಿ ಪ್ರಹ್ಲಾದಾದಿಭಕ್ತರನ್ನು ಅನುಗ್ರಹಿಸಿದ **ಏಷಃ** ಕೃಷ್ಣರೂಪದಿಂದ ನಿಮ್ಮ ಬಂಧುವಾದ **ಭಗವಾನ್** ಶ್ರೀಹರಿಯು **ಪುರಾ** ಹಿಂದೆ (ಕಲ್ಪಾಂತರದಲ್ಲಿ) **ದೇವಸ್ಯ** ಶ್ರೀಹರಿಯ ಸ್ತೋತ್ರ, ಧ್ಯಾನಾದಿಗಳನ್ನು ಮಾಡುವ **ರುದ್ರಸ್ಯ** ರೋದನಾದಿಗಳಿಂದ ರುದ್ರನೆಂದು ಕರೆಸಿಕೊಳ್ಳುವ ಶಿವನಿಗೆ **ಅನಂತಮಾಯಿನಾ**

**ಶತಸಹಸ್ರಮಾಯೆಯುಳ್ಳ** (ಒಂದುಲಕ್ಷ) ಅರ್ಥಾತ್ ಅನಲ್ಪವಾದ ಅಥವಾ **ಅನಂತ** ಇತರರಿಂದ ಅಪ್ರತಿಬದ್ಧವಾದ ಮಾಯಾವುಳ್ಳ ಬಹಳ ಎಂಬರ್ಥದಲ್ಲಿ ಅನಂತ ಶಬ್ದವೂ ಸಹ ಹರಿಯ ಅಧೀನವೆಂದು ತಿಳಿಸಲು ಅನಂತ ಎಂದಿರುವರು. ಅನಂತಸ್ಯ ಮಾಯಾ ಅಸ್ಯ ಸಂತೀತಿ ಅನಂತಮಾಯೀ ತೇನ ಹೀಗೂ ಮಾಡಬಹುದು. **ಮಯೇನ** ಅಸುರರ ಶಿಲ್ಪಿಯಿಂದ(ಬಡಿಗನಿಂದ)ಮುಂದೆ ಹೇಳುವ ಪ್ರಕಾರ ಮಾಡಿಸಿ ರುದ್ರದೇವರಿಗೆ **ಯಶಃ** ರುದ್ರದೇವರು ಭಗವದ್ಭಕ್ತರಲ್ಲಿ ಪ್ರಧಾನರು ಎಂಬ ಕೀರ್ತಿಯನ್ನು **ವಿತತಂ** ತ್ರಿಪುರನಾಶದಿಂದ ವಿಸ್ತಾರವಾದುದನ್ನಾಗಿ **ವ್ಯತನೋತ್** ಮಾಡಿದನು.

ಈ ಶ್ಲೋಕದಲ್ಲಿ 'ಸಃ ಭಗವಾನ್ ರುದ್ರಸ್ಯ ವಿತತಂ ವ್ಯತನೋತ್ ಪುರಾ' ಎಂದಿಷ್ಟು ಹೇಳಿದರೆ ಸಾಕು. 'ಮಯೇನ' ಎಂದು ಹೇಳಿದ್ದು ಅಸಂಗತ ವ್ಯರ್ಥ ಎಂದು ಕಾಣುವದು. ಶ್ರೀಹರಿಯು ಮಾಡಿದ ಕೀರ್ತಿಯ ವಿಸ್ತಾರಕ್ಕೆ ಮಯನು ಕಾರಣವಲ್ಲ ಮುಂದಿನ ಪ್ರಶ್ನೆ ವಾಕ್ಯಕ್ಕೂ ಪ್ರತಿಕೂಲವೇ ಆಗಿದೆ ಎಂದರೆ ಉಪಯುಕ್ತವಾದುದನ್ನು ಅಧ್ಯಾಹಾರ ಮಾಡಿ ಸಂಭಾವಿತವಾದ ಯೋಜನೆ ತಿಳಿಸುವರು-

**... ತಾತ್ಪರ್ಯ ...**

**ತದಧೀನಂ ವಾ ಸರ್ವಂ ಸ ನ ವಾ ಇತಿ ಸಂಶಯಂ ರುದ್ರಸ್ಯ ಅಹನತ್ ಅಲ್ಪಕೇನೈವ ಮಯೇನ ರುದ್ರಸ್ಯ ಪ್ರತೀಕಾರಂ ಕೃತ್ವಾ ||೫೧||**

ಪರಮಾತ್ಮನು ಅತ್ಯಲ್ಪನಾದ ಮಯಾಸುರನಿಂದ ರುದ್ರನಿಗೆ ಪ್ರತೀಕಾರವನ್ನು ಮಾಡಿಸಿ ರುದ್ರನಿಗೆ ಬಂದ ಸರ್ವಜಗತ್ತು ಪರಮಾತ್ಮನ ಅಧೀನವೋ ಅಲ್ಲವೋ ಎಂಬ ಸಂಶಯವನ್ನು ಪರಿಹರಿಸಿದನೆಂದರ್ಥ. ಅನಂತಮಾಯಿನಾ ಎಂಬುದರ ಅರ್ಥವೇ ಅಲ್ಪಕೇನ ಎಂಬುದು. ಅಲ್ಪಕರೇ ಮಾಯಿಗಳಾಗುವರು. ಕೃತ್ವಾ ಎಂದರೆ ಕಾರಿಯತ್ವಾ ಎಂದರ್ಥ. 'ಕೃತ್ವಾ ವಿವಾಹಂ ತು ಕುರುಪ್ರವೀರಾಃ' ಎಂಬಲ್ಲಿಯಂತೆ ಎಂದು ತಿಳಿಯಬೇಕು. ಅಭೀಷ್ಟಸಿದ್ಧಿಯಾಗದೆ ಅವಮಾನ ಮಾಡಿಸಿ ಎಂದರ್ಥ. ಇಷ್ಟು ಶಕ್ತಿಯು ಈ ಮಯನಲ್ಲಿ ಈಶ್ವರಾಧೀನವಾಗಿ ಬಂದದ್ದು. ನಾನು ಮಯನಿಂದ ಅವಮಾನಿತನಾಗಿಲ್ಲ ಎಂದು ಸಂಶಯನಾಶವು ಭೂತಪತಿಗೆ ಆಯಿತು ಎಂದು ಭಾವ

ಧರ್ಮರಾಜ ಕೇಳುತ್ತಾನೆ-

**ರಾಜೋವಾಚ**

**ಕಸ್ಮಿನ್ ಕರ್ಮಣಿ ದೇವಸ್ಯ ಯಶೋಽಭೂಜ್ಜಗದೀಶಿತುಃ ।**
**ಯಥಾ ಚೋಪಚಿತಾ ಕೀರ್ತಿಃ ಕೃಷ್ಣೇನಾನೇನ ಕಥ್ಯತಾಮ್ ||೫೨||**

**ದೇವಸ್ಯ** ವಾಮದೇವನಿಗೆ(ರುದ್ರದೇವರಿಗೆ)**ಯಸ್ಮಿನ್ ಕರ್ಮಣಿ** ಯಾವ ಕಾರ್ಯದಲ್ಲಿ (ಮಯಃ ವಿಪರೀತಂ ಚಕಾರ) ಮಯನು ಪ್ರತೀಕಾರ ಮಾಡಿದನು **ಯಶಶ್ಚ ಕಥಮಹನ್** ಕೀರ್ತಿಯನ್ನು ಹೇಗೆ ನಾಶಮಾಡಿದನು **ಜಗದೀಶಿತುಃ** ಸದಾ ಶಿವನ **ಕೀರ್ತಿಃ** ಕೀರ್ತಿಯು **ಅನೇನ ಕೃಷ್ಣೇನ** ಈ ಶ್ರೀಕೃಷ್ಣನಿಂದ **ಕಥಂ ಉಪಚಿತಾ** ಹೇಗೆ ಅಭಿವೃದ್ಧವಾಯಿತು ಎಂಬುದನ್ನು **ಕಥ್ಯತಾಂ** ನನ್ನನ್ನು ಕುರಿತು ನಿನ್ನಿಂದ ಹೇಳಲ್ಪಡಲಿ.

ಈ ಶ್ಲೋಕದಲ್ಲಿ 'ಕರ್ಮಣಿ' ಎಂಬ ಸಪ್ತಮ್ಯಂತ ಪದವು ಅನನ್ವಿತವಾಗಿದೆ. ಕ್ರಿಯಾಕರ್ತೃ ಯಾವುದೂ ತೋರುವದಿಲ್ಲ ಕಾರಣ ಅಧ್ಯಾಹಾರ ಮಾಡಿ ಕ್ರಿಯಾಕರ್ಮಸಂಬಂಧವನ್ನು ತೋರಿಸುವರು-

**... ತಾತ್ಪರ್ಯ ...**

**ಕಸ್ಮಿನ್ ಕರ್ಮಣಿ ಮಯೋ ವಿಪರೀತಂ ಚಕಾರ ।।೫೩।।**

ಯಾವ ಕಾರ್ಯದಲ್ಲಿ ಮಾಯಸುರನು ರುದ್ರನಿಗೆ ಪ್ರತೀಕಾರ ಮಾಡಿರುವನು ಎಂದು ಧರ್ಮರಾಜನ ಪ್ರಶ್ನೆಯು ಸಂಭಾವಿತವಾದ್ದರಿಂದ ಅಸಂಗತವಲ್ಲ.

ಸಾಕಾಂಕ್ಷವಾದ ವಾಕ್ಯಾಭಾಸವು ಪ್ರತಿಪಾದಕವಲ್ಲವೆಂದು ಶ್ರೀಮನ್ನ್ಯಾಯ-ಸುಧೆಯಲ್ಲಿ ಹೇಳಿರುವದರಿಂದ ಈ ಶ್ಲೋಕವು ಸಾಕಾಂಕ್ಷವಾದ್ದರಿಂದ ಶೇಷವು ಅಪ್ರಮಾಣಿಕವಾದ್ದರಿಂದ ಹೇಗೆ ಬೋಧಕವೆಂದು ಆಶಂಕಿಸಿ ಹೇಳುವರು.

**... ತಾತ್ಪರ್ಯ ...**

**'ಸಾಪೇಕ್ಷಂ ನ ತು ದೋಷಾಯ ಯತ್ರ ಸಿದ್ಧಮಪೇಕ್ಷಿತಂ' ಇತಿ ಶಬ್ದನಿರ್ಣಯೇ ।**

ಎಲ್ಲಿ ಅಪೇಕ್ಷಿತವಾದುದು(ಪದವು)ಪ್ರಮಾಣದಿಂದ ಲೋಕನ್ಯಾಯದಿಂದ ಸಿದ್ಧವಾಗಿದೆಯೋ, ಅಲ್ಲಿ ಸಾಪೇಕ್ಷತೆಯು ವಾಕ್ಯದ ನ್ಯೂನತೆಗೆ ಕಾರಣವಾಗಲಾರದು ಎಂದು ಶಬ್ದನಿರ್ಣಯದಲ್ಲಿ ಹೇಳಿದೆ.

ಕೆಲವರು ಈ ತಾತ್ಪರ್ಯವನ್ನು 'ವತ್ಸ ಆಸೀತ್' ಎಂಬ ೬೩ನೇ ಶ್ಲೋಕಕ್ಕೆ ಯೋಜಿಸುವರು. ಆದರೆ ಅಲ್ಲಿ ಏನು ಅರ್ಥ ಎಂಬುದನ್ನು ಅಲ್ಲಿಯೇ ವಿವರಿಸುವೆವು. 'ಯತ್ರಾನವಸರೋ ಅನ್ಯತ್ರ ಪದಂ ತತ್ರ ಪ್ರತಿಷ್ಠಿತಂ । ವಾಕ್ಯಂ ವೇತಿ ಸತಾಂ ನೀತಿಃ ಸಾವಕಾಶೇನ ತದ್ಭವೇತ್' ಎಂದು ನಿಯಮವಿರುವದು. 'ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ' ಎಂದು ಸೂತ್ರಕಾರರು ಹೇಳಿರುವರು. ಶಬ್ದನಿರ್ಣಯೇ ಎಂದದ್ದರಿಂದ ಶಬ್ದನಿರ್ಣಯ ಮಾಡಲು ಹೊರಟದ್ದಕ್ಕೆ ಇಲ್ಲಿ ನಾವು ಹೇಳಿದ ಅರ್ಥಮಾಡಿದರೆ ಸರಳವಾಗುವದು. ಯಾವ ಮಹಾವಾಕ್ಯದಲ್ಲಿ ಯಾವ ಅವಾಂತರ ವಾಕ್ಯವಿಲ್ಲದೆ ವಾಕ್ಯರ್ಥವು ಉಪಪನ್ನವಾಗುವದಿಲ್ಲವೋ ಆ ಮಹಾವಾಕ್ಯದಲ್ಲಿ ಆ

ಅವಾಂತರವಾಕ್ಯ ಅಧ್ಯಾಹಾರ ಮಾಡಬೇಕು. ಯಾವ ವಾಕ್ಯದಲ್ಲಿ ಯಾವ ಪದವಿಲ್ಲದೆ ವಾಕ್ಯಾರ್ಥಹೊಂದುವದಿಲ್ಲ ಅಲ್ಲಿ ಆ ಪದವನ್ನು ಅಧ್ಯಾಹಾರ ಮಾಡಬೇಕು. ('ದ್ವಾರಂ' ಎಂದಷ್ಟೇ ಹೇಳಿದರೂ 'ಪಿಧೇಹಿ' ಎಂಬ ಪದ ಅಧ್ಯಾಹಾರವು ಲೋಕ-ನ್ಯಾಯಸಿದ್ಧ) ಸಜ್ಜನರು ಮಾಡಿದ ನೀತಿವ್ಯವಸ್ಥೆ ಅವಾಂತರವಾಕ್ಯ ಅಥವಾ ಪದವಿಲ್ಲದೆ ಅರ್ಥವಾಗುತ್ತಿದ್ದರೆ ಅಧ್ಯಾಹಾರ ಮಾಡಬಾರದು ಎಂದೂ ವ್ಯವಸ್ಥೆ ಇದೆ.(ಇದೇ ಯತ್ರಾನವಸರೋ ಎಂಬುದರ ಅರ್ಥ) ಸೂತ್ರದಲ್ಲಿ ಪ್ರಶ್ನಪ್ರತಿವಚನ ಅಧ್ಯಾಹಾರ ಮಾಡಬೇಕೆಂದು ಹೇಳಿದೆ. ||೫೩||

ಹೀಗೆ ಪ್ರಶ್ನೆ ಕೇಳಿದಾಗ ನಾರದರು ಉತ್ತರ ನೀಡಿದರೆಂದು ಹೇಳುವರು-

**ನಾರದ ಉವಾಚ**

**ನಿರ್ಜಿತಾ ಅಸುರಾ ದೇವೈರ್ಯುಧ್ಯನೇನೋಪಬೃಂಹಿತೈಃ ।**
**ಮಾಯಿನಾಂ ಪರಮಾಚಾರ್ಯಂ ಮಯಂ ಶರಣಮಭ್ಯಯುಃ ||೫೪||**

**ಅನೇನ** ಭಗವಂತನಿಂದ **ಉಪಬೃಂಹಿತೈಃ** ಉಪೋದ್ಬಲಿತರಾದ(ಬಲಪಡೆದ) **ದೇವೈಃ** ದೇವತೆಗಳಿಂದ **ಯುಧಿ** ಯುದ್ಧದಲ್ಲಿ **ಅಸುರಾಃ** ದೈತ್ಯರು **ನಿರ್ಜಿತಾಃ ಸಂತಃ** ಸೋತವರಾಗಿ **ಮಾಯಿನಾಂ** ಮಾಯಾವಿಗಳಿಗೆ **ಪರಮಾಚಾರ್ಯಂ** ಮುಖ್ಯಗುರುವಾದ **ಮಯಂ** ಮಯನನ್ನು **ಶರಣಂ ಆಯಯುಃ** ಮೊರೆಹೊಕ್ಕರು.

ವಿಶೇಷ :- ಇಲ್ಲಿ 'ಏತೇನ' ಎನ್ನದೇ 'ಅನೇನ' ಎಂದದ್ದರಿಂದ ಪ್ರಾಣದೇವರಿಂದಲೂ ಬಲಪಡೆದು ಎಂಬರ್ಥವನ್ನು ಸೂಚಿಸಿರುವರು.

ಇಲ್ಲಿ ದೇವತೆಗಳಿಗೆ ವಿಷ್ಣುಸಾಪೇಕ್ಷತ್ವ ದೋಷವಲ್ಲ. ಅವನು ಎಲ್ಲ ಕಾರ್ಯಗಳಲ್ಲಿ ಇರುವದು ಸಿದ್ಧ. ಈ ಅಭಿಪ್ರಾಯದಿಂದಲೂ ತಾತ್ಪರ್ಯ ಯೋಜಿಸಬಹುದು. (ಮಂದನಂದಿನಿ) ||೫೪||

**ಸ ನಿರ್ಮಮೇ ಪುರಸ್ತಿಸ್ರೋ ಹೈಮರೌಪ್ಯಾಯಸೀರ್ವಿಭುಃ ।**
**ದುರ್ಲಕ್ಷ್ಯಾಪಾಯಸಂಯೋಗಾ ದುರ್ವಿತರ್ಕ್ಯಪರಿಚ್ಛದಾಃ ||೫೫||**

**ವಿಭುಃ** ಸಮರ್ಥನಾದ **ಸಃ** ಮಯನು **ಹೈಮ** ಬಂಗಾರದ **ರೌಪ್ಯ** ಬೆಳ್ಳಿಯ **ಆಯಸೀಃ** ಕಬ್ಬಿಣದ(ಹೈಮೀ ಚ ರೌಪ್ಯೇ ಚ ಆಯಸೀ ಚ ಹೈಮರೌಪ್ಯಾಯಸ್ಯಃ) ಹೀಗೆ **ತಿಸ್ರಃ** ಮೂರು **ದುರ್ಲಕ್ಷ್ಯಾಪಾಯಸಂಯೋಗಾಃ** ನಾಶರಹಿತ ಸಂಬಂಧವನ್ನೇ ಕಾಣದ ಅಥವಾ ನಾಶಸಾಧನದ ಸಂಬಂಧವಿಲ್ಲದ ಅಥವಾ ಅಪಾಯ-ವಿಯೋಗ-ಸಂಯೋಗ ಮತ್ತೆ ಒಂದಾಗುವದು ಇವುಗಳು ಇಲ್ಲದ ಎಂದೂ ಅರ್ಥ. ಅಂದರೆ ತಕ್ಷಣದಲ್ಲೇ ಒಳಗೆ ಬಂದು ತಕ್ಷಣ ಹೊರಗೆ ಹೋದ ಎಂಬುವಂತಿಲ್ಲದ

ಎಂದರ್ಥ. **ದುರ್ವಿತರ್ಕ್ಯಪರಿಚ್ಛದಾಃ** ಊಹಿಸಲಾಗದ(ಅದೃಶ್ಯವಾದ)ರಥ ಮುಂತಾದ ಯುದ್ಧಸಾಮಗ್ರಿಗಳಿಂದ ಕೂಡಿದ **ಪುರಃ** ಊರುಗಳನ್ನು **ನಿರ್ಮಮೇ** ನಿರ್ಮಾಣ ಮಾಡಿದನು. **ಯಃ ವಿಭುಃ** ಯಾವ ಸಮರ್ಥನಾದ ಶ್ರೀಹರಿಯು ದೇವತೆಗಳಿಗೆ ಉಜ್ಜೃಂಭಕನಾಗಿದ್ದನೋ ಅವನು ನಿರ್ಮಮೇ ಸತಿ ಅಂದರೆ ದೇವತೆಗಳಲ್ಲಿ ಉದಾಸೀನನಾಗಲು ಎಂದೂ ಅರ್ಥ. ಇಲ್ಲವಾದರೆ ಪುರನಿರ್ಮಾಣವೇ ಕಷ್ಟವಾಗುತ್ತಿತ್ತು ಎಂದು ಭಾವ. (ನಿರ್ಗತಃ ಮಮಃ ಯಸ್ಮಾತ್ ಸಃ ನಿರ್ಮಮಃ ತಸ್ಮಿನ್ ನಿರ್ಮಮೇ ಎಂದು ವಿಗ್ರಹ.) 'ತ್ರಿಪುರಂ ಪುರುಷವ್ಯಾಘ್ರಮಹದ್ವಾಯುಸಮೀರಿತಂ । ಪ್ರಕಾರೇಣ ಪ್ರವೃದ್ಧೇನ ಕಾಂಚನೇನ ವಿರಾಜತಾ । ಮಣಿಭಿಶ್ಚ ಪ್ರಕಾಶದ್ಭಿಃ ಸರ್ವರತ್ನೈಶ್ಚ ತೋರಣೈಃ । ವಾಜಿನಃ ಪಕ್ಷಸಂಯುಕ್ತಾ ವಹಂತಿ ಬಲದರ್ಪಿತಾಃ' ಮುಂತಾಗಿ ಹರಿವಂಶದಲ್ಲಿ ಹೇಳಿದ ವಿಷಯವಿಶೇಷವನ್ನು ತಿಳಿದು ಕೊಳ್ಳಬೇಕು. ॥೪॥

ಅವುಗಳ ಮಹತ್ವ ಹೇಳುವರು-

**ತಾಭಿಸ್ತೇಽಸುರಸೇನಾನ್ಯೋ ಲೋಕಾನ್ ತ್ರೀನ್ ಸೇಶ್ವರಾನ್ ನೃಪ ।**
**ಸ್ಮರಂತೋ ನಾಶಯಾಂಚಕ್ರುಃ ಪೂರ್ವವೈರಮಲಕ್ಷಿತಾಃ ॥೫೬॥**

**ಹೇ ನೃಪ** ಧರ್ಮರಾಜನೇ **ತೇ** ಆ **ಅಸುರಸೇನಾನ್ಯಃ** ದೈತ್ಯಸೇನಾಪತಿಗಳು **ತಾಭಿಃ** ಆ ಪುರಗಳಿಂದ **ಪೂರ್ವವೈರಂ ಸ್ಮರಂತಃ** ಹಿಂದಿನ ಶತ್ರುತ್ವವನ್ನು ಜ್ಞಾಪಿಸಿಕೊಳ್ಳುತ್ತ **ಅಲಕ್ಷಿತಾಃ** ಮಾಯೆಯ ಸಾಮರ್ಥ್ಯದಿಂದ ಯಾರಿಗೂ ಕಾಣದಂತೆ ಇದ್ದುಕೊಂಡು **ಸೇಶ್ವರಾನ್ ತ್ರೀನ್ ಲೋಕಾನ್** ಅಧಿಪತಿಗಳಿಂದ ಕೂಡಿದ ಮೂರು ಲೋಕಗಳನ್ನು **ನಾಶಯಾಂಚಕ್ರುಃ** ನಾಶಮಾಡಿದರು. ॥೫॥

**ತತಸ್ತೇ ಸೇಶ್ವರಾ ಲೋಕಾ* ಉಪಾಸಾದ್ಯೇಶ್ವರಂ ತತಃ ।**
**ತ್ರಾಹಿ ನಸ್ತಾವಕಾನ್ ದೇವ ವಿನಷ್ಟಾನ್ ತ್ರಿಪುರಾಲಯೈಃ ॥೫೭॥**

**ತತಃ** ದೈತ್ಯರು ಮೂರು ಲೋಕಗಳನ್ನು ನಾಶಮಾಡಿದ ಮೇಲೆ **ಸೇಶ್ವರಾಃ** ರುದ್ರದೇವರಿಂದ ಕೂಡಿದ ಇಂದ್ರನಿಂದ ಕೂಡಿದ **ಲೋಕಾಃ** ಮೂರು ಲೋಕದಲ್ಲಿ ವಾಸಿಸುವ ಜನರು **ತತಃ** ತಮ್ಮ ಸ್ಥಳಗಳಿಂದ ಹೊರಟು **ಈಶ್ವರಂ** ಶ್ರೀಹರಿಯನ್ನು **ಉಪಾಸಾದ್ಯ** ಹೊಂದಿ **ಹೇ ದೇವ** ಸ್ವಾಮಿಯೇ **ತ್ರಿಪುರಾಲಯೈಃ** ತ್ರಿಪುರಗಳನ್ನು ಮನೆ ಮಾಡಿಕೊಂಡಿರುವ ದೈತ್ಯರಿಂದ **ವಿನಷ್ಟಾನ್** ನಾಶಗೊಂಡಂತಿರುವ **ತಾವಕಾನ್** ನಿನ್ನ ಭಕ್ತರಾದ **ಸ್ತಾವಕಾನ್** ಸ್ತೋತ್ರಮಾಡುವ **ನಃ** ನಮ್ಮನ್ನು **ತ್ರಾಹಿ** ರಕ್ಷಿಸು.

---

* ಉಪಾಸಾದ್ಯಾಮಹೇಶ್ವರಂ ಇತಿ ಪಾಠಾಂತರಂ

**ವಿಜಯಧ್ವಜರು** :- ಶ್ರೀಹರಿಯಿಂದ ಸಹಿತರಾದ ದೇವತೆಗಳು ರುದ್ರದೇವರನ್ನು ಹೊಂದಿ ಎಂದರ್ಥಮಾಡಿ, ತ್ರಿಪುರಾಸುರರ ಸಂಹಾರವನ್ನು ರುದ್ರದೇವರಿಂದ ಮಾಡಿಸಬೇಕೆಂಬ ತನ್ನ ನಿಯಮದಂತೆ ಶ್ರೀಹರಿಯು ದೇವತೆಗಳೊಂದಿಗೆ ಹೋದನಾದ್ದರಿಂದ ಅದೇನು ದೋಷವಲ್ಲ ಎಂದರ್ಥ ಮಾಡಿರುವರು. 'ಉಪಾಸಾದ್ಯ ಮಹೇಶ್ವರಂ' ಎಂದಾಗಲಿ 'ಉಪಾಸಾದ್ಯೇಶ್ವರಂ ವಿಭೋ' ಎಂದಾಗಲಿ ಪಾಠ ಸರಳವೆನ್ನುವರು ಸತ್ಯಧರ್ಮರು. ತ್ರಾಹಿ ಎಂದರೆ ತ್ರಾಯಸ್ವ ಎಂದರ್ಥ. ||೫೭||

**ಅಥಾನುಗೃಹ್ಯ ಭಗವಾನ್ ಮಾ ಭೈಷ್ಟೇತಿ ಸುರಾನ್ ವಿಭುಃ |**
**ಶರಂ ಧನುಷಿ ಸಂಧಾಯ ಪುರ್ಯಾಮಸ್ತ್ರಂ ವ್ಯಮುಂಚತ ||೫೮||**

**ಅಥ** ದೇವತೆಗಳ ಮೊರೆಯನ್ನು ಕೇಳಿದ ನಂತರ **ವಿಭುಃ** ಸಮರ್ಥನಾದ **ಭಗವಾನ್** ಶ್ರೀಹರಿಯು **ಸುರಾನ್** ದೇವತೆಗಳನ್ನು **ಮಾ ಭೈಷ್ಟ** ಹೆದರಬೇಡಿ **ಇತಿ** ಎಂದು **ಅನುಗೃಹ್ಯ** ಅನುಗ್ರಹಮಾಡಿ **ಶರಂ** ಬಾಣವನ್ನು **ಧನುಷಿ** ಬಿಲ್ಲಿನಲ್ಲಿ **ಸಂಧಾಯ** ರುದ್ರದೇವರಿಂದ ಹೊಡಿಸಿ **ಪುರ್ಯಾಂ** ತ್ರಿಪುರಗಳ ಮೇಲೆ **ಅಸ್ತ್ರಂ** ಅಭಿಮಂತ್ರಿತವಾದ ಬಾಣವನ್ನು **ವ್ಯಮುಂಚತ** ಬಿಡಿಸಿದನು. ಒಂದೊಂದು ಊರಿಗೂ ಪ್ರತ್ಯೇಕ ಅಸ್ತ್ರಬಿಟ್ಟದ್ದರಿಂದ ಏಕವಚನವು ಉಪಪನ್ನವು ಅಥವಾ ಅಖಂಡವಾದುದು. ಒಂದು ಊರು ಚಿನ್ನ ಬೆಳ್ಳಿ ಕಬ್ಬಿಣದ ಮೂರು ಅವಾಂತರ ಊರುಗಳು. ಆದ್ದರಿಂದಲೂ ಏಕವಚನ. ಅಥವಾ ಜಾತ್ಯೇಕವಚನವೆಂದಾದರೂ ಹೇಳಬಹುದು.

ವಿಶೇಷ :- ಹಿಂದಿನ ಶ್ಲೋಕದಲ್ಲಿ ರುದ್ರದೇವರನ್ನು ಎಂದರ್ಥ ಮಾಡಿದಾಗ ಈ ಶ್ಲೋಕದಲ್ಲಿ ಸಮರ್ಥರಾದ ರುದ್ರದೇವರು ಸಂಧಾನಮಾಡಿ ಅಸ್ತ್ರಬಿಟ್ಟರು ಎಂದರ್ಥ ವಿಜಯಧ್ವಜರ ಪ್ರಕಾರ. ||೫೮||

**ತತೋಽಗ್ನಿವರ್ಣಾ ಇಷವ ಉತ್ಪೇತುಃ ಸೂರ್ಯಮಂಡಲಾತ್ |**
**ಯಥಾ ಮಯೂಖಸಂದೋಹಾ ನಾದೃಶ್ಯಂತ ಪುರೋ ಯತಃ ||೫೯||**

**ಯಥಾ** ಹೇಗೆ **ಸೂರ್ಯಮಂಡಲಾತ್** ಸೂರ್ಯಮಂಡಲದಿಂದ **ಮಯೂಖ ಸಂದೋಹಾಃ** ಕಿರಣಸಮೂಹಗಳು **ಉತ್ಪತಂತಿ** ಹೊರಹೊಮ್ಮುವವೋ **ತಥಾ** ಹಾಗೆ **ತತಃ** ಧನುಸ್ಸಿನಿಂದ **ಅಗ್ನಿವರ್ಣಾಃ** ಅಗ್ನಿಯಂತೆ ಬಣ್ಣವುಳ್ಳ **ಇಷವಃ** ಬಾಣಗಳು **ಉತ್ಪೇತುಃ** ಹೊರಟವು. **ಯತಃ** ಯಾವ ಬಾಣಸಮೂಹದಿಂದ **ಪುರಃ** ಮೂರು ಪುರಗಳು **ನ ಅದೃಶ್ಯಂತ** ಕಾಣದಾದವು. ||೫೯||

**ತೈಃ ಸ್ಪೃಷ್ಟಾ ವ್ಯಸವಃ ಸರ್ವೇ ನಿಪೇತುಸ್ತ್ರಿಪುರೌಕಸಃ |**
**ತಾನಾನೀಯ ಮಹಾಯೋಗೀ ಮಯಃ ಕೂಪರಸೇಽಕ್ಷಿಪತ್ ||೬೦||**

**ತ್ರಿಪುರೌಕಸಃ** ಮೂರು ಪುರಗಳೇ ಮನೆಯಾಗಿರುವ **ಸರ್ವೇ** ಆ ದೈತ್ಯರೆಲ್ಲರೂ **ತೈಃ** ಬಾಣಗಳಿಂದ **ಸ್ಪೃಷ್ಟಾಃ ಸಂತಃ** ಸಂಬದ್ಧರಾಗಿ **ಸ್ಪೃಷ್ಟಾಃ** ತಪ್ತರಾಗಿ **ವ್ಯಸವಃ** ಪ್ರಾಣರಹಿತರಾಗಿ **ನಿಪೇತುಃ** ಬಿದ್ದರು **ಮಹಾಯೋಗೀ** ಅತಿಶಯ ಸಾಮರ್ಥ್ಯವಿರುವ **ಮಯಃ** ಮಯನು **ತಾನ್** ಆ ಸತ್ತವರನ್ನು **ಆನೀಯ** ತಂದು **ಕೂಪರಸೇ** ಭಾವಿಯಲ್ಲಿ ತುಂಬಿದ್ದ ಮೃತಸಂಜೀವಿನೀ ರಸದಲ್ಲಿ **ಅಕ್ಷಿಪತ್** ಹಾಕಿದನು. (ಇದುವೇ ಮಯನು ಮಾಡಿದ ಪ್ರತೀಕಾರ.)

**ಸಿದ್ಧಾಮೃತರಸಸ್ಪೃಷ್ಟಾ ವಜ್ರಸಾರಾಃ (ಧಾರಾಃ) ಮಹೌಜಸಃ ।**
**ಉತ್ತಸ್ಥುರ್ಮೇಘಪಟಲಾದ್(ದಳನಾದ್)ವೈದ್ಯುತಾ ಇವ ವಹ್ನಯಃ॥೬೧॥**

**ಸಿದ್ಧಾಮೃತರಸಸ್ಪೃಷ್ಟಾಃ** ಮೃತಸಂಜೀವಿನೀರಸದಲ್ಲಿ ಮಿಂದ ಸತ್ತ ಆ ದೈತ್ಯರು **ವಜ್ರಸಾರಾಃ** ದೃಢವಾದ ದೇಹವುಳ್ಳವರಾಗಿ **ಮಹೌಜಸಃ** ಹೊರಬಿದ್ದ **ವೈದ್ಯುತಾಃ** ಮಿಂಚಿನ **ವಹ್ನಯಃ ಇವ** ಸಿಡಿಲುಗಳಂತೆ **ಉತ್ತಸ್ಥುಃ** ಮೇಲೆದ್ದು ಬಂದರು ಹೇಗೆ ಸಿಡಿಲಿನ ಬೆಂಕಿಯನ್ನು ನೀರಿನಿಂದ ಆರಿಸಲಾಗುವದಿಲ್ಲವೋ ಹಾಗೆ ಇವರನ್ನು ಯಾವುದರಿಂದಲೂ ಸಾಯಿಸಲಾಗುವದಿಲ್ಲವೆಂದು ಸೂಚಿಸುವರು. ॥೬೧॥

ಮಯನು ಮಾಡಿದ ಪ್ರತೀಕಾರವೆಂದು ಪೂರ್ವದಲ್ಲಿ ಹೇಳಿ ಶ್ರೀಹರಿ ಮಾಡಿದ ಕೀರ್ತಿಯ ವೃದ್ಧಿಯನ್ನು ತಿಳಿಸುವರು-

**ವಿಲೋಕ್ಯ ಭಗ್ನಸಂಕಲ್ಪಂ ವಿಮನಸ್ಕಂ ವೃಷಧ್ವಜಮ್ ।**
**ತದಾಽಯಂ ಭಗವಾನ್ ವಿಷ್ಣುಃ (ತತ್ರೋ)ತಸ್ಯೋಪಾಯಮಕಲ್ಪಯತ್ ॥**

**ಭಗ್ನಸಂಕಲ್ಪಂ** ತ್ರಿಪುರಾಸುರನ ನಾಶಮಾಡುತ್ತೇನೆಂಬ ತನ್ನ ಸಂಕಲ್ಪವೂ ಈಡೇರದೆ **ವಿಮನಸ್ಕಂ** ಇವರನ್ನು ಕೊಂದರೂ ಮತ್ತೆ ಮತ್ತೆ ಬದುಕುವರು ಆದ್ದರಿಂದ ಇವರ ನಾಶ ಹೇಗಾದೀತು ಎಂದು ದಿಕ್ಕು ತೋರದೇ ಖಿನ್ನಮನಸ್ಸುಳ್ಳ **ವೃಷಧ್ವಜಂ** ತನ್ನ ಕೀರ್ತಿಯನ್ನು ಉಳಿಸೆಂದು ಮೊರೆ ಹೊಕ್ಕ ರುದ್ರದೇವರನ್ನು **ವಿಲೋಕ್ಯ** ನೋಡಿ **ತದಾ** ಆಗ **ಅಯಂ ವಿಷ್ಣುಃ** ಭಗವಂತನಾದ ವಿಷ್ಣುವು **ತಸ್ಯ** ಅವರ ನಾಶಕ್ಕೆ **ಉಪಾಯಂ ಅಕಲ್ಪಯತ** ಉಪಾಯ ಮಾಡಿದನು.

ವಿಶೇಷ ಃ-'ತತ್ರೋಪಾಯಮಕಲ್ಪಯತ್' ಎಂಬ ಪಾಠದಲ್ಲಿ **ತತ್ರ** ರುದ್ರದೇವರ ಕೀರ್ತಿಯ ವಿಷಯದಲ್ಲಿ ಉಪಾಯ ಮಾಡಿದನೆಂದರ್ಥ. ತಂ ತ್ರಾಯತೇ ಇತಿ ತತ್ರಃ, ಸ ಚಾಸೌ ಉಪಾಯಶ್ಚ ತಂ. ಕೀರ್ತಿಯನ್ನು ರಕ್ಷಿಸುವ ಉಪಾಯ ಮಾಡಿದನೆಂದರ್ಥ. ॥೬೨॥

ಆ ಅಮೃತರಸವನ್ನು ಒಣಗಿಸದೆ ದೈತ್ಯರನ್ನು ನಾಶಗೊಳಿಸಲಾಗುವದಿಲ್ಲ. ದೇವತೆಗಳನ್ನು ಸಂತೋಷಪಡಿಸಲೂ ಆಗುವದಿಲ್ಲ ಕಾರಣ ಆ ರಸವನ್ನು ಖಾಲಿ ಮಾಡಲು ಶ್ರೀಹರಿ ಪ್ರಯತ್ನ ಮಾಡಿದನು ಎಂದು ಹೇಳುವರು-

**ವತ್ಸ ಆಸೀತ್ ತದಾ ಬ್ರಹ್ಮಾ ಸ್ವಯಂ ವಿಷ್ಣುರಯಂ(ರಿಯಂ) ಹಿ ಗೌಃ ।**
**ಪ್ರವಿಶ್ಯ ತ್ರಿಪುರಂ ಕಾಲೇ ರಸಕೂಪಾಮೃತಂ ಪಪೌ ॥**
**ತೇಽಸುರಾ ಹ್ಯಪಿ ಪಶ್ಯಂತೋ ನ ನ್ಯಷೇಧನ್ ವಿಮೋಹಿತಾಃ ॥೬೩॥**

**ತದಾ** ಆಗ **ವಿಷ್ಣುಃ** ಸ್ವತಂತ್ರನಾದ ವಿಷ್ಣುವು **ಸ್ವಯಂ** ತಾನೇ **ಗೌಃ ಆಸೀತ್** ಆಕಳಾದನು **ಬ್ರಹ್ಮಾ** ಬ್ರಹ್ಮದೇವರು **ವತ್ಸಃ ಆಸೀತ್** ಶ್ರೀಹರಿಯ ಆಜ್ಞೆಯಂತೆ ಕರುವಾದರು **ಕಾಲೇ** ಮಧ್ಯಾಹ್ನಕಾಲದಲ್ಲಿ **ತ್ರಿಪುರಂ ಪ್ರವಿಶ್ಯ** ತ್ರಿಪುರವನ್ನು ಪ್ರವೇಶಮಾಡಿ **ರಸಕೂಪಾಮೃತಂ ಪಪೌ** ಮೃತಸಂಜೀವಿನೀ ರಸದ ಭಾವಿಯಲ್ಲಿದ್ದ ಎಲ್ಲ ಅಮೃತವನ್ನು ಕುಡಿದನು. **ಹಿ** ಇದು ಪ್ರಸಿದ್ಧ. **ತೇ ಅಸುರಾಃ** ಆ ದೈತ್ಯರು **ಪಶ್ಯಂತಃ ಅಪಿ** ಹಸು ಮತ್ತು ಕರು ರಸಕುಡಿಯುತ್ತಿರುವದನ್ನು ನೋಡುತ್ತಿದ್ದರೂ **ವಿಮೋಹಿತಾಃ ಸಂತಃ** ಪರಮಾತ್ಮನ ಮಾಯೆಯಿಂದ ಮುಗ್ಧರಾಗಿ **ನ ನ್ಯಷೇಧನ್** ನಿಷೇಧಿಸಲಿಲ್ಲ. ಕುಡಿಯುವದನ್ನು ತಪ್ಪಿಸಲಿಲ್ಲ.

ವಿಶೇಷ ಃ- ವಿಷ್ಣುವು ಬ್ರಹ್ಮನನ್ನು ಅಪೇಕ್ಷಿಸಿದ್ದು ದೋಷವಲ್ಲ. ರುದ್ರದೇವರಿಗಿಂತ ಬ್ರಹ್ಮದೇವರು ದೊಡ್ಡವರೆಂದು ತಿಳಿಸಲು ಹಾಗೆ ಮಾಡಬೇಕೆಂದು ತಾನೇ ಸಂಕಲ್ಪ ಮಾಡಿಕೊಂಡಿದ್ದನು ಎಂಬುದನ್ನು ತಿಳಿಸಿರುವರು. ಇದು ಗ್ರಂಥಾಂತರ(ಹರಿವಂಶ) ಸಿದ್ಧ. ಆ ಭಾವಿಯನ್ನು ರಕ್ಷಿಸುವವರಾಗಲಿ ದ್ವಾರಪಾಲಕರಾಗಲಿ ಏಕೆ ತಡೆಯಲಿಲ್ಲ. ಅಲ್ಲಿ ಕಾಯುವವರನ್ನು ಇಟ್ಟಿರಲಿಲ್ಲವೆಂದು ಹೇಳಲಾಗದು. ಲೋಕವಿಲಕ್ಷಣವಾದ ರಸದ ರಕ್ಷಣೆ ಅವಶ್ಯವಾದುದು. ಅಲ್ಲದೇ ಮುಂದೆ 'ರಸಪಾಲಾನಿದಂ ಜಗೌ' ಎಂದು ಹೇಳುವದರಿಂದ ಅವರಿದ್ದುದು ತಿಳಿದು ಬರುವದು ಎಂದರೆ ನಿಜ. ಮಯನ ಮಾಯೆಗಿಂತ ಹರಿಯ ಮಾಯೆಯು ದೊಡ್ಡದು ಕಾರಣ ಹೀಗೆ ನಡೆಯಿತು.

ಕರುವಾಗಿ ಜನಿಸಿದ ಬ್ರಹ್ಮದೇವರನ್ನು ಈ ಕಾರ್ಯ ಮಾಡಲು ಸಹಾಯಕವೆಂದು ಅಪೇಕ್ಷಿಸಿದರೆ, ಶ್ರೀಹರಿಗೆ ಸಾಪೇಕ್ಷತೆ ಬರುವದು. ಅದಾದರೂ ಸ್ವತಂತ್ರನಾದ ಶ್ರೀಹರಿಗೆ ಯುಕ್ತವಲ್ಲ ಎಂದರೆ ಹೇಳುವರು-

**... ತಾತ್ಪರ್ಯ ...**

**ಸಾಪೇಕ್ಷಂ ನ ತು ದೋಷಾಯ ಯತ್ರ ಸಿದ್ಧಮಪೇಕ್ಷಿತಂ ॥ ಇತಿ ಶಬ್ದನಿರ್ಣಯೇ ॥**

**ಸಿದ್ಧಂ** ಪ್ರಮಾಣದಿಂದ ಅನುತ್ತಮರೆಂದು ಸಿದ್ಧವಾದ, ಅಸ್ವತಂತ್ರವಸ್ತುವು **ಅಪೇಕ್ಷಿತಂ ಚೇತ್** ಇಚ್ಛಿಸಿದಲ್ಲಿ **ಸಾಪೇಕ್ಷಂ** ಈ ಸಾಪೇಕ್ಷತೆಯು **ನ ದೋಷಾಯ** ಅಸ್ವಾತಂತ್ರ್ಯ ಆಪಾದಕವಾಗಲಾರದು ಎಂದರ್ಥ. ಯದ್ಯಪಿ ಕರುವಿಲ್ಲದೆ ಆಕಳೊಂದೇ ಎಲ್ಲ ಕುಡಿಯಲು ಸಾಧ್ಯ. ಆದರೂ ರುದ್ರದೇವರು ಬ್ರಹ್ಮದೇವರ ಮಗ. ಬ್ರಹ್ಮನು ತನ್ನ ಮಗನಾದ್ದರಿಂದ ಆಗ ಹುಟ್ಟಿದ ಕರುಸಹಿತವಾಗಿದ್ದರೆ ಅಸುರರ ಮೋಹಕ್ಕೆ ಕಾರಣವಾಗುವದು ಎಂದು ಆಕಳನ್ನು ಎಲ್ಲರೂ ಪೂಜಿಸುವದರಿಂದ ನಿವಾರಿಸಲಾಗದು ಎಂಬ ಕಾರಣದಿಂದ ಹೀಗೆ ಹೋದನೆಂದು ಭಾವ. (ತ್ರಿಪುರ ಎಂಬುದು 'ಋಕ್ಪೂರಬ್ಧೂಪಥಾಮಾನಕ್ಷೆ' ಎಂಬುದರಿಂದ ಅಪ್ರತ್ಯಯಾಂತ ಶಬ್ದ )।।೬೩।।

ತಾನು ಮಾಡಿದ ಅಪರಾಧವನ್ನು ಕಳೆದುಕೊಳ್ಳುವದಕ್ಕೋಸ್ಕರ ತನಗಿದ್ದ ಭಗವದ್ಭಕ್ತಿಯನ್ನು ತೋರಿಸುವದಕ್ಕಾಗಿ ಶ್ರೀಹರಿಯ ಅಭಿಪ್ರಾಯ ಜ್ಞಾನವು ತನಗಿದೆ ಎಂದು ತಿಳಿಸುತ್ತಾನೆ-

**ತದ್ ವಿಜ್ಞಾಯ ಮಹಾಯೋಗೀ ರಸಪಾಲಾನಿದಂ ಜಗೌ ।**
**ಸ್ಮಯನ್(ಸ್ಮರನ್) ವಿಶೋಕಃ ಶೋಕಾರ್ತಾನ್ ಸ್ಮರನ್ ದೈವಗತಿಂ ಚ ತಾಮ್॥**

**ಮಹಾಯೋಗೀ** ದೊಡ್ಡ ಯೋಗಿಯಾದ ಮಯನು **ತತ್** ತನ್ನವರ ಹಾನಿಗೆ ಕಾರಣವಾದ ಹರಿಯ ವ್ಯಾಪಾರವನ್ನು **ವಿಜ್ಞಾಯ** ತಿಳಿದು **ತಾಂ ದೈವಗತಿಂ** ಆ ಅದೃಷ್ಟದ ವಿಪರೀತತೆಯನ್ನು ಅಥವಾ ಕೆಲವು ಕಾಲ ಅಸುರರಿಗೆ ಜಯವನ್ನು ಕೊಟ್ಟ ಆದರೆ ಈಗ ದೇವತೆಗಳಿಗೆ ಜಯಕೊಡಬೇಕೆಂಬ ಶ್ರೀಹರಿಯ ನೀತಿಯನ್ನು **ಸ್ಮಯನ್** ಕಂಡು ನಗುತ್ತ ಆದ್ದರಿಂದಲೇ **ವಿಶೋಕಃ** ಸ್ವಯಂ ಶೋಕರಹಿತನಾಗಿ **ಶೋಕಾರ್ತಾನ್** ದುಃಖಪೀಡಿತರಾದ ದೈತ್ಯರನ್ನು **ಸ್ಮರನ್** ನೆನೆಯುತ್ತ **ರಸಪಾಲಾನ್** ಸಂಜೀವಿನೀರಸದ ಭಾವಿಯನ್ನು ಕಾಯುತ್ತಿದ್ದ ದೈತ್ಯರಿಗೆ **ಇದಂ ಜಗೌ** ಮುಂದೆ ಹೇಳುವದನ್ನು ಹೇಳಿದನು.

ವಿಶೇಷ :- ಎರಡೂ ಕಡೆಯಲ್ಲಿ ಸ್ಮರನ್ ಎಂದು ಪಾಠವಿರುವಾಗ ವಿಮೋಹಿತಾಃ ಇತಿ ಸ್ಮರನ್ ಎಂದು ಅನ್ವಯಮಾಡುವದರಿಂದ ಎರಡನೇ ಸ್ಮರನ್ ಎಂಬುದಕ್ಕೆ ವೈಯ್ಯರ್ಥ್ಯವಿಲ್ಲ ವೆಂದು ತಿಳಿಯಬೇಕು. ।।೬೪।।

**ದೇವೋಽಸುರೋ ನರೋಽನ್ಯೋ ವಾ ನೇಶ್ವರೋಽಸ್ತೀಹ ಕಶ್ಚನ ।**
**ಆತ್ಮನೋಽನ್ಯಸ್ಯ ವಾ ದಿಷ್ಟಂ ದೈವೇನಾಪೋಹಿತುಂ ದ್ವಯೋಃ ।।೬೫।।**

**ಇಹ** ಜೀವಕೋಟಿಯಲ್ಲಿ **ಆತ್ಮನಃ** ತನಗಾಗಲಿ **ಅನ್ಯಸ್ಯ ವಾ** ಬೇರೆಯವರಿಗಾಗಲಿ **ದ್ವಯೋಃ** ಇವರಿಬ್ಬರಿಗೂ **ದೈವೇನ** ಅದೃಷ್ಟ ನಿಯಾಮಕಗಳನ್ನು **ಅಪೋಹಿತುಂ**

ತಪ್ಪಿಸಲು **ದೇವಃ** ದೇವತೆಗಳು **ಅಸುರಃ** ದಾನವರು **ನರಃ** ಮಾನವನು **ಅನ್ಯಃ ವಾ ಕಶ್ಚನ** ಮತ್ತೆ ಬೇರೆಯವನೂ **ನ ಈಶ್ವರಃ** ಸಮರ್ಥನಲ್ಲ. ತಾನು ಮಹಾಯೋಗಿಯಾದ್ದರಿಂದ ಗೋರೂಪಿಯು ವಿಷ್ಣುವೆಂದು ತಿಳಿದಿದ್ದರೂ ಲೌಕಿಕರು ಯಾವಾಗಲೂ ದೈವದ ಮೇಲೆ ಭಾರ ಹಾಕಿರುವರಾದ್ದರಿಂದ ರಸಪಾಲಕರನ್ನು ಕುರಿತು ಹೊರಗೆ ಹೀಗೆ ಹೇಳಿದನು ಎಂದು ತಿಳಿಯಬೇಕು. ರಸಪಾನವೆಂಬ ಕೆಲಸವಾಗಿ ಹೋಗಿದೆ ಅಪಾಯವನ್ನು ತಪ್ಪಿಸುವ ಉಪಾಯ ನನ್ನಲ್ಲಿಲ್ಲವೆಂದು ಹೇಳಿದನೆಂದು ಭಾವ.

ಇಲ್ಲಿ 'ದೈವೇನ ಅಪೋಹಿತುಂ ಕಃ ಸಮರ್ಥಃ' ಅಂದರೆ ದೈವದಿಂದ ತಿರಸ್ಕರಿಸಲು ಯಾರು ಸಮರ್ಥರು ಹೀಗೆ ಅನ್ವಯಭ್ರಮ ಬರುವದು. ಅದನ್ನು ಪರಿಹರಿಸುವರು-

**... ತಾತ್ಪರ್ಯ ...**

**ವಿಷ್ಣುನಾ ಆದಿಷ್ಟಃ ವ್ಯಪೋಹಿತುಂ ದೇವ್ರೋ ಅಸುರೋ ಅನ್ಯೋ ವಾ ನ ಸಮರ್ಥಃ।**

ಶ್ರೀವಿಷ್ಣುವು ತನಗಾಗಲಿ ಇತರರಿಗಾಗಲಿ ಕೊಟ್ಟಿದ್ದನ್ನು ತಪ್ಪಿಸಕೊಳ್ಳಲಿಕ್ಕೆ ದೇವತೆಯಾಗಲಿ, ಅಸುರನಾಗಲಿ, ಇನ್ನೊಬ್ಬನಾಗಲಿ ಯಾರೂ ಸಮರ್ಥರಲ್ಲ. ದೈವೇನ ಎಂಬುದರ ಅರ್ಥವೇ ವಿಷ್ಣುನಾ ಎಂಬುದು. ಈಶ್ವರಃ ಎಂಬುದರ ಅರ್ಥ ಸಮರ್ಥವೆಂದು. ॥೬೫॥

ಗೋರೂಪದಿಂದ ರಸಾಸ್ವಾದನ ಮಾಡಿ ರಸನೇಂದ್ರಿಯವನ್ನು ಮಾತ್ರ ಮಧುರಮಾಡಿದನು. ಮಧುರಿಪುವಿನ ಆ ಊರುಗಳೇನು ನಾಶವಾಗಲಿಲ್ಲ. ಈಶನಿಗೂ ಯಶಸ್ಸೇನು ಬರಲಿಲ್ಲ ಎಂದರೆ ಹೇಳುವರು-

**ಅಥಾಽಸೌ ಶಕ್ತಿಭಿಃ ಸ್ವಾಭಿಃ ಶಂಭೋಃ ಪ್ರಾಧ(ಧಾ)ನಿಕಂ ವ್ಯಧಾತ್ ।**
**ಧರ್ಮಜ್ಞಾನವಿರಕ್ತ್ಯೃದ್ಧಿತಪೋವಿದ್ಯಾಕ್ರಿಯಾದಿಭಿಃ ॥೬೬॥**

**ಅಥ** ಅಮೃತರಸ ಪಾನಮಾಡಿದ ನಂತರ **ಅಸೌ** ಶ್ರೀಹರಿಯು **ಸ್ವಾಭಿಃ** ತನ್ನ ಅಧೀನವಾಗಿರುವ **ಶಕ್ತಿಭಿಃ** ಶಕ್ತಿಗಳಿಂದ **ಶಂಭೋಃ** ರುದ್ರದೇವರ **ಧರ್ಮಜ್ಞಾನವಿರಕ್ತ್ಯೃದ್ಧಿತಪೋವಿದ್ಯಾಕ್ರಿಯಾದಿಭಿಃ** ಧರ್ಮ,ವಿಜ್ಞಾನ,ವಿರಕ್ತಿಯೇ ಕಾರಣವಾಗಿವುಳ್ಳ ತಪಸ್ಸು, ವಿದ್ಯಾ,ಕ್ರಿಯಾ ಮುಂತಾದವುಗಳಿಂದ ಬಂದ ಪುಣ್ಯದಿಂದ **ಪ್ರಾಧನಿಕಂ** ಯುದ್ಧಸಾಧನವಾದ ಆಯುಧಾದಿಗಳನ್ನು ರಥ ಮುಂತಾದವನ್ನು **ವ್ಯಧಾತ್** ಸಿದ್ಧಮಾಡಿದನು.(ಅಭೇದ್ಯವಾಗಿ)

ವಿಶೇಷಃ-**ಪ್ರಾಧನಿಕಂ** ಪ್ರಧನೇ ಭವಂ ಪ್ರಾಧನಿಕಂ ಅಧ್ಯಾತ್ಮ್ಯಾದಿ ಠಞ್ । 'ಪ್ರಾಧಾನಿಕಂ' ಎಂಬ ಪಾಠದಲ್ಲಿ 'ಅನುಶತಕಾದೀನಾಂ ಚ' ಎಂಬುದರಿಂದ

ಉಭಯಪದವೃದ್ಧಿ ಎಂದು ತಿಳಿಯಬೇಕು. 'ಪ್ರಧನಂ ದಾರುಣೇ ರಣೇ' ಎಂದು ವಿಶ್ವವಿದೆ. ವಿರಕ್ತಿಕಾರಣವಾದ ತಪಸ್ಸನ್ನು ಹೇಳಿದರೆ ಅರ್ಥಾತ್ ವಿರಕ್ತಿಯನ್ನು ಹೇಳಿದಂತಾಯಿತು. ಕಾರಣ ಅದನ್ನು ಹೇಳಿಲ್ಲವೆಂಬ ನ್ಯೂನತೆ ಇಲ್ಲ ಎಂದು ತಿಳಿಯಬೇಕು. ಅಥವಾ ವಿರಕ್ತಿಶಬ್ದ ಆವೃತ್ತಿಮಾಡಿ ವಿರಕ್ತಿ ವಿರಕ್ತಿಯೇ ಕಾರಣವಾಗಿವುಳ್ಳ ತಪಸ್ಸು ಹೀಗೂ ಮಾಡಬಹುದು ।।೬೬।।

ಯುದ್ಧಸಾಮಗ್ರಿಗಳನ್ನು ಹೇಳುವರು-

**ರಥಂ ಸೂತಂ ಧ್ವಜಂ ವಾಹಂ ಧನುರ್ವರ್ಮಶರಾದಿಯತ್ ।**
**ಸನ್ನದ್ಧೋ ರಥಮಾಸ್ಥಾಯ ಸಶರಂ ಧನುರಾದದೇ ।।೬೭।।**

**ಯತ್** ಯಾವ ಸಜ್ಜುಗೊಳಿಸಲ್ಪಟ್ಟ **ರಥಂ** ರಥವನ್ನು **ಸೂತಂ** ಸಾರಥಿಯನ್ನು **ಧ್ವಜಂ** ಧ್ವಜವನ್ನು **ವಾಹಂ** ವಾಹನವನ್ನು **ಧನುಃ** ಬಿಲ್ಲು **ವರ್ಮ** ಕವಚ **ಶರಾದಿ** ಬಾಣ ಮೊದಲಾದವು **ತೇನ** ಅವುಗಳಿಂದ **ಸನ್ನದ್ಧಃ** ಯುದ್ಧಕ್ಕೆ ಸಿದ್ಧರಾಗಿ **ರಥಂ ಆಸ್ಥಾಯ** ರಥದಲ್ಲಿ ಕುಳಿತು **ಸಶರಂ** ಬಾಣದಿಂದ ಕೂಡಿದ **ಧನುಃ** ಬಿಲ್ಲನ್ನು **ಆದದೇ** ಕೈಗೆ ತೆಗೆದುಕೊಂಡರು.

**ಶರಂ ಧನುಷಿ ಸಂಧಾಯ ಮುಹೂರ್ತೇಽಭಿಜಿತೀಶ್ವರಃ* ।**
**ಭಗವತ್ತೇಜಸಾ ಗುಪ್ತೋ ದದಾಹ ತ್ರಿಪುರಂ ನೃಪ ।।೬೮।।**

**ನೃಪ** ಧರ್ಮರಾಜನೇ **ಭಗವತ್ತೇಜಸಾ** ಶ್ರೀಹರಿಯ ತಾತ್ಕಾಲಿಕವಿಶೇಷ ಸನ್ನಿಧಾನದಿಂದ **ಗುಪ್ತಃ** ರಕ್ಷಿತರಾದ **ಈಶ್ವರಃ** ರುದ್ರದೇವರು **ಅಭಿಜಿತಿ ಮುಹೂರ್ತೇ** ಅಭಿಜಿನ್ಮುಹೂರ್ತದಲ್ಲಿ (ಮಧ್ಯಾಹ್ನದಲ್ಲಿ) **ಧನುಷಿ** ಬಿಲ್ಲಿನಲ್ಲಿ **ಶರಂ** ಬಾಣವನ್ನು **ಸಂಧಾಯ** ಹೂಡಿ ಬಿಟ್ಟು **ತ್ರಿಪುರಂ ದದಾಹ** ಮೂರು ಊರುಗಳನ್ನು ಅಸುರಸಹಿತವಾಗಿ ಸುಟ್ಟರು. 'ಪುರಾಣಿ ತಾನಿ ಕಾಲೇನ ಜಗ್ಮುರೇವೈಕತಾಂ ತದಾ' ಮುಂತಾಗಿ ಹೇಳಿರುವದರಿಂದ ತ್ರಿಪುರಂ ಎಂದು ಹೇಳುವದು ಸರಿ. ।।೬೮।।

ಕೀರ್ತಿ ಪೂರ್ತಿಯಾದ ರೀತಿಯನ್ನು ಹೇಳುವರು-

**ದಿವಿ ದುಂದುಭಯೋ ನೇದುಃ ವಿಮಾನಶತಸಂಕುಲೇ ।**
**ದೇವರ್ಷಿಪಿತೃಸಿದ್ಧೇಶಾ ಜಯೇತಿ ಕುಸುಮೋತ್ಕರೈಃ ।।**
**ಅವಾಕಿರನ್ ಜಗುರ್ಹೃಷ್ಟಾ ನನೃತುಶ್ಚಾಪ್ಸರೋಗಣಾಃ ।।೬೯।।**

* 'ಧೂರ್ಜಟಿರ್ಜಗದೀಶ್ವರಃ' ಇತಿ ಪಾಠಾಂತರಂ.

**ವಿಮಾನಶತಸಂಕುಲೇ** ನೂರಾರು ವಿಮಾನಗಳಿಂದ ನಿಬಿಡವಾದ **ದಿವಿ** ಅಂತರಿಕ್ಷದಲ್ಲಿ (ನಿಂತಿರುವ)**ದುಂದುಭಯಃ ನೇದುಃ** ನಗಾರಿಗಳು ಧ್ವನಿಗೈದವು **ದೇವಾಃ** ಇಂದ್ರಾದಿಗಳು **ಋಷಯಃ** ವಸಿಷ್ಠಾದಿಗಳು(ಬೃಹಸ್ಪತ್ಯಾದಿಗಳು) **ದೇವರ್ಷಿಸಿದ್ಧೇಶಾಃ** ದೇವಯೋನಿಯ ಭೂತನಾಥರು **ಜಯೇತಿ ಜಗುಃ** ಜಯವೆಂದು ಹೇಳಿದರು ಅನಂತರ **ಕುಸುಮೋತ್ಕರೈಃ** ಹೂಗೊಂಚಲಿನಿಂದ **ಅವಾಕಿರನ್** ಮಳೆಗರೆದರು **ಅಪ್ಸರೋಗಣಾಃ** ಅಪ್ಸರಾಸ್ತ್ರೀಯರ ಸಮೂಹಗಳು **ಹೃಷ್ಟಾಃ** ಸಂತುಷ್ಟರಾಗಿ **ನನೃತುಃ** ಕುಣಿದವು.॥೬೯॥

**ಏವಂ ದಗ್ಧ್ವಾ ಪುರಸ್ತಿಸ್ರೋ ಭಗವಾನ್ ಪುರಹಾ ನೃಪ ।**
**ಬ್ರಹ್ಮಾದಿಭಿಃ ಸ್ತೂಯಮಾನಃ ಸ್ವಧಾಮ ಪ್ರತ್ಯಪದ್ಯತ್ ॥೭೦॥**

**ನೃಪ** ಧರ್ಮರಾಜನೇ **ಪುರಹಾ** ತ್ರಿಪುರಾರಿಯಾದ ರುದ್ರದೇವರು (ಒಳಗಿದ್ದ ಪರಮಾತ್ಮನು ಮುಖ್ಯವಾಗಿ) **ತಿಸ್ರಃ ಪುರಃ** ಮೂರು ಊರುಗಳನ್ನು **ಏವಂ** ಈ ರೀತಿ **ದಗ್ಧ್ವಾ** ಸುಟ್ಟು **ಬ್ರಹ್ಮಾದಿಭಿಃ** ಬ್ರಹ್ಮದೇವರಿಂದ ಹುಟ್ಟಿದ ಸನಕಾದಿಗಳಿಂದ ಅಥವಾ ಬ್ರಹ್ಮಾದಿದೇವತೆಗಳಿಂದ **ಸ್ತೂಯಮಾನಃ** ಸ್ತೋತ್ರಮಾಡಿಸಿಕೊಂಡವರಾಗಿ **ಸ್ವಧಾಮ** ತಮ್ಮ ವಾಸಸ್ಥಾನವಾದ ಕೈಲಾಸಕ್ಕೆ (ವೈಕುಂಠಕ್ಕೆ) **ಪ್ರತ್ಯಪದ್ಯತ್** ಹಿಂತಿರುಗಿದರು. ॥೭೦॥

ನೂರು ಮಂದಿ ಕುರುಡರು ಸೇರಿದರೂ ನೋಡಲಾರರು ಎನ್ನುವಂತೆ ಎಲ್ಲ ದೇವತೆಗಳು ಸೇರಿ ರುದ್ರದೇವರೊಟ್ಟಿಗಿದ್ದರೂ, ಶ್ರೀಹರಿಯು ಅನುಕೂಲನಾದರೇನೇ ಅನುಕೂಲವಾಗುವದು ಇಲ್ಲವಾದರೆ ಇಲ್ಲ ಅಂಥವನು ಮಾತುಲೇಯನಾಗಿರುವದು ನಿನ್ನ ಭಾಗ್ಯವೆಂದು ಶ್ರೀಹರಿಯ ಸ್ತವನದಿಂದ ಉಪಸಂಹಾರಮಾಡುವರು-

**ಏವಂ ವಿಧಾನ್ಯಸ್ಯ ಹರೇಃ ಸ್ವಮಾಯಯಾ**
**ವಿಡಂಬಮಾನಸ್ಯ ನೃಲೋಕಮಾತ್ಮನಃ ।**
**ವೀರ್ಯಾಣಿ ಗೀತಾನ್ಯೃಷಿಭಿರ್ಜಗದ್ಗುರೋ-**
**ರ್ಲೋಕಾನ್ ಪುನಾನಾನ್ಯಪರಂ ವದಾಮಿ ಕಿಮ್ ॥೭೧॥**

**ಜಗದ್ಗುರೋಃ** ಜಗತ್ತಿಗೆ ಹಿತೋಪದೇಶಕನಾದ **ಆತ್ಮನಃ** ಜಗತ್ತಿಗೆ ಸ್ವಾಮಿಯಾದ **ಸ್ವಮಾಯಯಾ** ತನ್ನ ಇಚ್ಛೆಯಿಂದಲೇ, ಸಾಮರ್ಥ್ಯದಿಂದಲೇ **ಸಃ ನೃಲೋಕಂ-ವಿಡಂಬಮಾನಸ್ಯ** ಮನುಷ್ಯರನ್ನು ಅನುಕರಿಸುವ **ಅಸ್ಯ ಹರೇಃ** ಈ ಶ್ರೀಹರಿಯ **ಲೋಕಂ** ಜಗತ್ತನ್ನೇ **ಪುನಾನಾನಿ** ಪವಿತ್ರಗೊಳಿಸುವ **ಏವಂ ವಿಧಾನಿ** ತಾನೇ ಸ್ವಯಂ ತನ್ನ ಭಕ್ತರಲ್ಲಿ ನಿಂತು ತೋರಿಸುವ

ವಿಶೇಷ :- ಈ ಬಗೆಯ **ವೀರ್ಯಾಣಿ** ಮಹಿಮೆಗಳು **ಋಷಿಭಿಃ** ಬ್ರಹ್ಮಾದಿಜ್ಞಾನಿಗಳಿಂದ **ಗೀತಾನಿ** ಗಾನಮಾಡಲ್ಪಡುವವು **ಅಪರಂ** ಬೇರೆ **ಕಿಂ** ಏನನ್ನು **ವದಾಮಿ** ಹೇಳಲಿ ಈ ಮಹಿಮೆಯುಳ್ಳ ಮತ್ತೊಂದು ವಸ್ತು ಯಾವುದೆಂದು ಹೇಳಲಿ. ಅನಂತಗಳಾದ್ದರಿಂದ ಇನ್ನೇನು ಹೇಳಲು ಸಾಧ್ಯ ಹೀಗೂ ಅರ್ಥ. ಬೇರೆ ಯಾವ ಚರಿತ್ರೆ ಹೇಳಲಿ ಕೇಳು ಎಂದು ಅರ್ಥ. 'ಋಷಿಭಿಃ' ಎಂದು ಬಹುವಚನದಿಂದ ಅನೇಕ ಜ್ಞಾನಿಗಳು ಇದನ್ನೇ ಹೇಳುವದರಿಂದ ವಿಶ್ವಾಸನೀಯವೆಂದು ತಿಳಿಸುವರು. ತಾರಕ ಉಪದೇಶಮಾಡಿ ಮಾರಮಾರಕನು ಲೋಕತಾರಕನಾದ್ದರಿಂದ ಪರಮಾತ್ಮನನ್ನು ಜಗದ್ಗುರು ಎಂದಿದ್ದಾರೆ ಎಂದು ಅರ್ಥ. ॥೭೦॥

**॥ ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ದಶಮೋऽಧ್ಯಾಯಃ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★

# ಅಥ ಏಕಾದಶೋಽಧ್ಯಾಯಃ

**ಸಾರಾಂಶ**

ಶ್ರೀಮನ್ನಾರಾಯಣನು ದಕ್ಷನ ಮಗಳಾದ ಮೂರ್ತಿದೇವಿಯಲ್ಲಿ ಅವತರಿಸಿ ಮುನಿಗಳಿಗೆ ತಪಸ್ಸು ಎಂದರೆ ಏನು ಎಂದು ಬೋಧಿಸುವದಕ್ಕಾಗಿ ಬದರಿಕಾಶ್ರಮದಲ್ಲಿ ತಾನು ಸ್ವತಃ ತಪಸ್ಸು ಮಾಡಿದ. ಶ್ರೀಮನ್ನಾರಾಯಣನು ಋಷಿಮುನಿಗಳಿಗೆ ಉಪದೇಶಿಸಿದ ಸನಾತನಧರ್ಮಗಳನ್ನು ನಾನು ನಿನಗೆ ಹೇಳುತ್ತೇನೆ ಎಂದು ನಾರದರು ಧರ್ಮರಾಜನಿಗೆ ಹೇಳುತ್ತಾರೆ. ಧರ್ಮದ ವಿಷಯದಲ್ಲಿ ಮೂಲಪ್ರಮಾಣ ಸಕಲಸಚ್ಛಾಸ್ತ್ರೋಪದೇಶಕನಾದ ಶ್ರೀಹರಿ. ಅವನ ಮುಖದಿಂದ ಹೊರಟ ತತ್ತ್ವೋಪದೇಶವನ್ನು ನಿನಗೆ ಹೇಳುತ್ತೇನೆ ಎಂದು ವರ್ಣಾಶ್ರಮಧರ್ಮಗಳನ್ನು ಹೇಳಲು ಆರಂಭಿಸಿದರು.

ವರ್ಣಾಶ್ರಮಗಳಿಗೆ ಅನ್ವಯಿಸುವ ಸತ್ಯ, ದಯೆ, ಏಕಾದಶ್ಯುಪವಾಸಾದಿತಪಸ್ಸು, ಶೌಚ, ದ್ವಂದ್ವಸಹಿಷ್ಣುತೆ, ದೇವಪೂಜೆ, ಶಮ, ದಮ, ಅಹಿಂಸೆ, ಬ್ರಹ್ಮಚರ್ಯ ಇತ್ಯಾದಿ ಮೂವತ್ತು ಧರ್ಮಗಳು ಎಲ್ಲರಿಗೂ ಇರುವ ಸಾಮಾನ್ಯಧರ್ಮಗಳು. ಬ್ರಾಹ್ಮಣರಿಗೆ ಸಂಸ್ಕಾರಗಳು ಅತ್ಯವಶ್ಯಕ. ದೇವಪೂಜೆ, ಅಧ್ಯಯನ, ದಾನಗಳು ಬ್ರಾಹ್ಮಣರ ಕರ್ತವ್ಯವಾಗಿವೆ. ಬ್ರಾಹ್ಮಣನಿಗೆ ಅಧ್ಯಯನಾದಿ ಷಟ್ಕರ್ಮಗಳನ್ನು ವಿಧಿಸಲಾಗಿದೆ. ಕ್ಷತ್ರಿಯನಿಗೆ ಪ್ರತಿಗ್ರಹ, ಅಧ್ಯಾಪನ, ಯಾಜನ ಬಿಟ್ಟು ಉಳಿದ ತ್ರಿಕರ್ಮಗಳನ್ನು ಹೇಳಲಾಗಿದೆ. ಕ್ಷತ್ರಿಯನಾದವನಿಗೆ ಪ್ರಜಾರಕ್ಷಣೆ, ಕರವಸೂಲಿ, ದಂಡಶುಲ್ಕಗಳು, ಬದುಕಿನ ವೃತ್ತಿಗಳು. ವೈಶ್ಯನಿಗೆ ಬ್ರಾಹ್ಮಣಸೇವೆ, ಕೃಷಿವಾಣಿಜ್ಯಗಳು ಕಾಯಕಲ್ಪಗಳು. ಶೂದ್ರನಿಗೆ ತ್ರೈವರ್ಣಿಕರ ಸೇವೆ ವಿಹಿತವಾಗಿದೆ. ಪತಿವ್ರತಾಸ್ತ್ರೀಯರು ಪತಿಯಲ್ಲಿ ಭಗವಂತನನ್ನು ಕಾಣುತ್ತಾ ಸತ್ಯ ಹಾಗೂ ಪ್ರಿಯವಾದ ಮಾತುಗಳನ್ನಾಡುತ್ತ ಇದ್ದುದರಲ್ಲಿ ಪ್ರೀತಿಯಿಂದ ಇರಬೇಕು ಇತ್ಯಾದಿಗಳು ಪತಿವ್ರತಾಸ್ತ್ರೀಯರ ಧರ್ಮಗಳು ಇಲ್ಲಿ ಉಕ್ತವಾಗಿವೆ.

★★★

ಭಗವಂತನ ಭಕ್ತಿಯಿಂದ ಯಥಾವತ್ತಾಗಿ ವಿಹಿತವಾದ ವರ್ಣಾಶ್ರಮ ಆಚಾರಗಳನ್ನು ಅನುಷ್ಠಾನಮಾಡುವದರಿಂದ ಉಂಟಾದ ಅಪರೋಕ್ಷಜ್ಞಾನದಿಂದ ಪ್ರಸನ್ನನಾದ ಶ್ರೀಹರಿಯು ಅವರವರ ಯೋಗ್ಯತೆಗೆ ತಕ್ಕಂತೆ ಮುಕ್ತಿಯನ್ನು ಕೊಡುವನೆಂಬ ವಿಷಯವನ್ನು ತಿಳಿಸಲು ಮುಂದಿನ ಅಧ್ಯಾಯಗಳು ಹೊರಟಿರುವವು. ಅದರಲ್ಲಿ ಮೊದಲು ವರ್ಣಾಶ್ರಮಧರ್ಮಗಳನ್ನು ಕೇಳ ಬಯಸಿದ ಧರ್ಮರಾಜನು ನಾರದರನ್ನು ಪ್ರಶ್ನೆ ಮಾಡಿದನು ಎಂದು ಶುಕಾಚಾರ್ಯರು ಹೇಳುವರು-

**ಶ್ರೀಶುಕ ಉವಾಚ**

**ಶ್ರುತ್ವೇಹಿತಂ ಸಾಧುಸಭಾಸಭಾಜಿತಂ**
**ಮಹತ್ತಮಾಗ್ರಣ್ಯ ಉರುಕ್ರಮಾತ್ಮನಃ ।**
**ಯುಧಿಷ್ಠಿರೋಽದೈತ್ಯಪತೇರ್ಮುದಾನ್ವಿತಃ**
**ಪಪ್ರಚ್ಛ ಭೂಯಸ್ತನಯಂ ಸ್ವಯಂಭುವಃ ॥೧॥**

**ಯುಧಿಷ್ಠಿರಃ** ಧರ್ಮರಾಜನು **ಮಹತ್ತಮಾಗ್ರಣ್ಯಉರುಕ್ರಮಾತ್ಮನಃ** ಮಹತ್ತಮನಾದ, ಶ್ರೇಷ್ಠನಾದ, ಉರುಕ್ರಮನಾದ ಶ್ರೀಹರಿಯಲ್ಲಿ ಮನಸ್ಸುಳ್ಳ **ದೈತ್ಯಪತೇಃ** ಪ್ರಹ್ಲಾದರಾಜರ **ಸಾಧುಸಭಾಸಭಾಜಿತಂ** ಸಜ್ಜನರ ಸಭೆಗಳಲ್ಲಿ ಪೂಜಿತವಾದ (ಗೌರವಿಸಲ್ಪಡುವ)**ಈಹಿತಂ** ಚರಿತ್ರೆಯನ್ನು ಅಥವಾ ಮಹತ್ತಮರಾದ ಬ್ರಹ್ಮಾದಿಗಳಿಗಿಂತ ಶ್ರೇಷ್ಠನಾದ ಮಹಾಪರಾಕ್ರಮಸ್ವರೂಪನಾದ **ಅದೈತ್ಯಪತೇಃ** ದೇವತೆಗಳಿಗೆ ಸ್ವಾಮಿಯಾದ(ದೈತ್ಯರಿಗೂ ಸ್ವಾಮಿಯಾದ)ನರಸಿಂಹದೇವರ ಚರಿತ್ರೆಯನ್ನು **ಶ್ರುತ್ವಾ** ಕೇಳಿ **ಮುದಾನ್ವಿತಃ** ಸಂತುಷ್ಟನಾಗಿ **ಭೂಯಃ** ಮತ್ತೆ **ಸ್ವಯಂಭುವಃ ತನಯಂ** ಬ್ರಹ್ಮಪುತ್ರನಾದ ನಾರದರನ್ನು **ಪಪ್ರಚ್ಛ** ಕೇಳಿದರು. ॥೧॥

**ಯುಧಿಷ್ಠಿರ ಉವಾಚ**

**ಭಗವನ್ ಶ್ರೋತುಮಿಚ್ಛಾಮಿ ನೃಣಾಂ ಧರ್ಮಂ ಸನಾತನಮ್ ।**
**ವರ್ಣಾಶ್ರಮಾಚಾರಯುತಂ ಯತ್ ಪುಮಾನ್ ವಿಂದತೇ ಪರಮ್ ॥೨॥**

**ಹೇ ಭಗವನ್** ಪೂಜ್ಯರೇ **ಯತ್** ಯಾವ ಧರ್ಮಾನುಷ್ಠಾನದಿಂದ **ಪುಮಾನ್** ಅಧಿಕಾರಿಯು **ಪರಂ** ಶ್ರೀಹರಿಯನ್ನು **ವಿಂದತೇ** ಹೊಂದುವನೋ **ತಂ** ಅಂತಹ **ವರ್ಣಾಶ್ರಮಾಚಾರಯುತಂ** ವರ್ಣಾಶ್ರಮಗಳಿಗೆ ಉಚಿತವಾದ ಶೌಚಸ್ನಾನಾದಿ ಆಚಾರಗಳಿಂದ ಕೂಡಿದ **ನೃಣಾಂ** ಮನುಷ್ಯರಿಗೆ ವಿಹಿತವಾದ **ಸನಾತನಂ ಧರ್ಮಂ** ಸನಾತನವಾದ ಧರ್ಮವನ್ನು **ಶ್ರೋತುಂ ಇಚ್ಛಾಮಿ** ಕೇಳಲು ಇಷ್ಟಪಡುವೆನು. ॥೨॥

**ಭವಾನ್ ಪ್ರಜಾಪತೇಃ ಸಾಕ್ಷಾದಾತ್ಮಜಃ ಪರಮೇಷ್ಠಿನಃ ।**
**ಸುತಾನಾಂ ಸಮ್ಮತೋ ಬ್ರಹ್ಮಂಸ್ತಪೋಜ್ಞಾನಸಮಾಧಿಭಿಃ ॥೩॥**

**ಹೇ ಬ್ರಹ್ಮನ್** ಬ್ರಹ್ಮಜ್ಞಾನಿಗಳೇ **ಭವಾನ್** ತಾವು **ಪ್ರಜಾಪತೇಃ ಪರಮೇಷ್ಠಿನಃ** ಪ್ರಜಾಪತಿಗಳಾದ ಬ್ರಹ್ಮದೇವರ **ಸಾಕ್ಷಾತ್ ಆತ್ಮಜಃ** ತೊಡೆಯಿಂದ ಜನಿಸಿದ ಮಕ್ಕಳು **ತಪೋಜ್ಞಾನಸಮಾಧಿಭಿಃ** ತಪಸ್ಸು, ಜ್ಞಾನ, ಸಮಾಧಿಗಳಿಂದ **ಸುತಾನಾಂ** ಮಕ್ಕಳಾದ ಸನಕಾದಿಗಳಿಗೆ, ದಕ್ಷಾದಿಗಳಿಗೆ **ಸಮ್ಮತಃ** ಒಪ್ಪಿಗೆಯಾದವರು.(ಇಷ್ಟರಾದವರು) ॥೩॥

ನನ್ನನ್ನೇ ಏಕೆ ಕೇಳುತ್ತಿ ಎಂದರೆ ಹೇಳುತ್ತಾರೆ-

**ನಾರಾಯಣಪರಾ ವಿಪ್ರಾ ಧರ್ಮಗುಹ್ಯಂ ಯಥಾ ವಿದುಃ ।**
**ಕರುಣಾಃ ಸಾಧವಾ ಶಾಂತಾಸ್ತ್ವದ್ವಿಧಾ ನ ತಥಾ ಪರೇ ॥೪॥**

**ಯಥಾ** ಹೇಗೆ **ತ್ವದ್ವಿಧಾಃ** ನಿಮ್ಮಂತಹ **ಕರುಣಾಃ** ಕರುಣೆಗಳು **ಸಾಧವಃ** ಸಾಧುಗಳು **ಶಾಂತಾಃ** ಶಾಂತರೂ ಆದ **ನಾರಾಯಣಪರಾಃ** ಶ್ರೀಹರಿಯನ್ನೇ ಆಶ್ರಯಿಸಿದ **ವಿಪ್ರಾಃ** ಬ್ರಾಹ್ಮಣರು **ಗುಹ್ಯಂ** ರಹಸ್ಯವಾದ **ಧರ್ಮಂ** ಧರ್ಮವನ್ನು **ವಿದುಃ** ಸರಿಯಾಗಿ ತಿಳಿದಿರುವರೋ **ತಥಾ** ಆ ರೀತಿಯಲ್ಲಿ **ಅಪರೇ** ಹರಿಯ ಭಕ್ತರಲ್ಲದವರು **ನ ವಿದುಃ** ತಿಳಿದಿಲ್ಲ ಆದ್ದರಿಂದ ತಮ್ಮನ್ನೇ ಕೇಳುತ್ತೇನೆ ಎಂದು ಭಾವ. ॥೪॥

ಮಹಾಪ್ರಮೇಯವಾದುದರಿಂದ ಮಂಗಳದೇವಿರಮಣನ ನಮನರೂಪ-ಮಂಗಲವನ್ನು ಮಾಡಿ ಹೇಳುವರು-

**ನಾರದ ಉವಾಚ**

**ನತ್ವಾ ಭಗವತೇಽಜಾಯ ಲೋಕಾನಾಂ ಧರ್ಮಹೇತವೇ(ಸೇತವೇ) ।**
**ವಕ್ಷ್ಯೇ ಸನಾತನಂ ಧರ್ಮಂ ನಾರಾಯಣಮುಖಾಚ್ಛ್ರುತಮ್ ॥೫॥**

**ಲೋಕಾನಾಂ** ಜನರ **ಧರ್ಮಹೇತವೇ** ಧರ್ಮಕ್ಕೆ ಕಾರಣನಾದ ('ಸೇತವೇ' ಎಂಬ ಪಾಠದಲ್ಲಿ ಧರ್ಮದ ಮರ್ಯಾದೆಯನ್ನು ಮಾಡುವ ಎಂದರ್ಥ) **ಅಜಾಯ** ಜನನರಹಿತನಾದ **ಭಗವತೇ** ನರಸಖನಾದ ನಾರಾಯಣನಿಗೆ **ನತ್ವಾ** ನಮಸ್ಕಾರಮಾಡಿ **ನಾರಾಯಣಮುಖಾತ್ ಚ್ಯುತಂ(ಶ್ರುತಂ)**ನಾರಾಯಣನ ಮುಖದಿಂದ ಉಚ್ಚರಿತವಾದ (ಕೇಳಿದ)**ಸನಾತನಂ ಧರ್ಮಂ ವಕ್ಷ್ಯೇ** ಪ್ರಾಚೀನಧರ್ಮವನ್ನು ಹೇಳುತ್ತೇನೆ ಇದರಿಂದ ಸಂಪ್ರದಾಯಪ್ರಾಪ್ತತೆಯನ್ನು ಮುಂದೆ ಹೇಳುವದಕ್ಕೆ ತಿಳಿಸಿರುವರು. ಪಿತಾಮಹನಾದುದರಿಂದ ಮೋಸಗಾರನಲ್ಲವೆಂದೂ ಸೂಚಿಸಿರುವರು. ॥೫॥

ನಮಸ್ಕೃತನಾದ ನಾರಾಯಣನಾರು ? ಯಾರಿಂದ ಯಾರಲ್ಲಿ ಜನಿಸಿದನು ? ಅವನ ನಿವಾಸವೆಲ್ಲಿ ಎಂದರೆ ಹೇಳುವರು-

**ಯೋಽವತೀರ್ಯಾತ್ಮನೋಽಂಶೇನ ದಾಕ್ಷಾಯಣ್ಯಾಂ ತು ಧರ್ಮತಃ ।**
**ಲೋಕಾನಾಂ ಸ್ವಸ್ತಯೇಽಧ್ಯಾಸ್ತೇ ತಪೋ ಬದರಿಕಾಶ್ರಮೇ ॥೬॥**

**ಯಃ** ಯಾವ ನಾರಾಯಣನು **ಆತ್ಮನಃ** ಮೂಲರೂಪಿಯಾದ ತನ್ನ **ಅಂಶೇನ** ಸ್ವರೂಪಾಂಶದಿಂದ **ದಾಕ್ಷಾಯಣ್ಯಾಂ** ದಕ್ಷಪ್ರಜಾಪತಿಯ ಮಗಳಾದ ಮೂರ್ತಿ ಎಂಬುವವಳಲ್ಲಿ **ಧರ್ಮತಃ** ಯಮಧರ್ಮರಾಜನಿಂದ ಧರ್ಮಪ್ರವೃತ್ತಿಗಾಗಿ **ಅವತೀರ್ಯ** ಅವತಾರಮಾಡಿ **ಲೋಕಾನಾಂ** ಪ್ರಜೆಗಳ **ಸ್ವಸ್ತಯೇ** ಕ್ಷೇಮಕ್ಕಾಗಿ **ಅಧಿ** ಈಶ್ವರನ **ತಪಃ** ತಪಸ್ಸನ್ನುದ್ದೇಶಿಸಿ **ಬದರಿಕಾಶ್ರಮೇ** ಬದರಿಕಾಶ್ರಮದಲ್ಲಿ **ಆಸ್ತೇ** ಇರುವನು.

ವಿಶೇಷ ः- ಅಧ್ಯಾಸ್ತೇ ಎಂದು ಅನ್ವಯಮಾಡಿದಾಗ ಕರ್ಮತ್ವವಿವಕ್ಷೆ-ಮಾಡಿದ್ದರಿಂದ ಸಪ್ತಮಿ ಆಗಿದೆ. 'ಅವತೀರ್ಯ ಆತ್ಮನೋಽಂಶೇನ' ಎಂಬುದರಿಂದ, ಧರ್ಮನಿಂದ ಮೂರ್ತಿಯಲ್ಲಿ ಎಂದುದರಿಂದ ಬಂದ ಶುಕ್ಲಶೋಣಿತ ಸಂಬಂಧವನ್ನು ದೂರಿಕರಿಸಿರುವರು. ॥೬॥

ಧರ್ಮಗಳಿಗೆ ಧರ್ಮತ್ವವು ಯಾರಿಂದ ಬಂತೋ ಅವನನ್ನು ಮೊದಲು ಹೇಳುವರು-

**ಧರ್ಮಮೂಲಂ ಹಿ ಭಗವಾನ್ ಸರ್ವವೇದಮಯೋ ಹರಿಃ ।**
**ಸ್ಮೃತಿಶ್ಚ ತದ್ವಿದಾಂ ರಾಜನ್ ಯೇನ ಚಾತ್ಮಾ ಪ್ರಸೀದತಿ ॥೭॥**

**ಹೇ ಧರ್ಮ** ಧರ್ಮರಾಜನೇ **ಧರ್ಮಸ್ಯ** ಧರ್ಮಕ್ಕೆ **ಮೂಲಂ** ಪ್ರತಿಷ್ಠಾಪಕನೂ ಮುಖ್ಯವಿಷಯನೂ **ಭಗವಾನ್** ನನಗೆ ಉಪದೇಶಕನಾದ ನಾರಾಯಣನೇ. ಧರ್ಮಗಳನ್ನು ತಿಳಿಸಿ ಕೊಡುವವನು ಎಂದು ವೇದಗಳಲ್ಲಿ ಕಂಡು ಬರುವದು. ಕಾರಣ ಧರ್ಮಮೂಲತ್ವ ಭಗವಂತನಿಗೆ ಹೇಗೆ ಎಂದರೆ ಹೇಳುವರು **ಸರ್ವವೇದಮಯಃ ಹರಿಃ** ವೇದಗಳಿಂದ ತಿಳಿಯಲ್ಪಡುವವನು ಮನು ಮುಂತಾದ ಸತ್‌ಸ್ಮೃತಿಗಳೂ ಧರ್ಮವಿಷಯದಲ್ಲಿ ಪ್ರಮಾಣವೆಂದು ಹೇಳುವರು **ತದ್ವಿದಾಂ** ಭಗವತ್‌ಜ್ಞಾನಿಗಳ, ವೇದಜ್ಞಾನಿಗಳ **ಸ್ಮೃತಿಃ** ಮನುಸ್ಮೃತಿಯೂ ಪ್ರಮಾಣವು **ಚ** ಮತ್ತು ಅವರ ಆಚಾರವೂ ಪ್ರಮಾಣ. ಗೀತಾಭಾಷ್ಯದಲ್ಲಿ ಹೇಳಿದ 'ಸ್ಮೃತಿರ್ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಂ । ಆಚಾರಶ್ಚೈವ ಸಾಧೂನಾಮಾತ್ಮನಸ್ತುಷ್ಟಿರೇವ ಚ ॥' ಮುಂತಾದವು. **ರಾಜನ್** ರಾಜನೇ **ಯೇನ**(ಯಾವುದನ್ನು ತಿಳಿಯುವದರಿಂದ)

ಯಾವುದರಿಂದ **ಆತ್ಮಾ** ಪರಮಾತ್ಮನು **ಪ್ರಸೀದತಿ** ಸಂತುಷ್ಟನಾಗುವನೋ ಅದು ಧರ್ಮ(ಭಗವತ್ಪ್ರೀತಿಸಾಧನವಾದುದು ಧರ್ಮ)ಬೇರೆಡೆಯಲ್ಲಿ 'ಶ್ರುತಿಃ ಸ್ಮೃತಿಃ ಸದಾಚಾರಃ ಸ್ವಸ್ಯ ಚ ಪ್ರಿಯಮಾತ್ಮನಃ । ಸಮ್ಯಕ್ ಸಂಕಲ್ಪ(ಜಃ)ತಃ ಕಾಮೋ ಧರ್ಮಮೂಲಮಿದಂ ಸ್ಮೃತಂ ।' ಎಂದು ಧರ್ಮಮೂಲಗಳನ್ನು ಹೇಳಿರುವರು. 'ಹೇ ರಾಜನ್ಯ' ಎಂದೂ ಸಂಬೋಧನ ರಾಣಿಯಲ್ಲಿ ರಾಜನಿಂದ ಜನಿಸಿದವರು ರಾಜನ್ಯರು ಅವರಿಗೆ ಸ್ವಾಮಿಯೇ ಎಂದರ್ಥ. ನೀನು ರಾಜೇಶ್ವರನಾದರೂ ಇಂಥಗುಣವುಳ್ಳವನಾದ್ದರಿಂದ ಅದು ದೋಷಾವಹವಲ್ಲವೆಂದು ಅಭಿಪ್ರಾಯ ಪಡುವರು.

ವಿಶೇಷ :- ಸರ್ವವೇದ್ಯೈಃ ಮಯ್ಯತೇ ಗಮ್ಯತೇ ಇತಿ ಸಃ ತಥಾ । ಅಂದರೆ ಇದು ಮಯಟ್ ಪ್ರತ್ಯಯವಲ್ಲ. ಗತ್ಯರ್ಥಕವಾದ ಮಯಧಾತುವಿನ ಮೇಲೆ ನಿಷ್ಪನ್ನವಾದ ಸ್ವತಂತ್ರಶಬ್ದ. ಹೀಗೆ ತತ್ವನಿರ್ಣಯಟೀಕೆಯಲ್ಲಿ ಮಾಯಾಶಬ್ದ ವ್ಯಾಖ್ಯಾನ- ಮಾಡುವಾಗ 'ಏತೇನ ಮಯೇತಿ ಸ್ವತಂತ್ರಪ್ರಾತಿಪದಿಕಂ' ಎಂದಿದ್ದಾರೆ. ಅಯ, ವಯ, ಮಯ, ಚಯ, ತಯ, ಣಯಗತೌ ಎಂದು ಭ್ವಾದಿಗಣದ ಧಾತು. 'ಮಯಂ ಪ್ರಧಾನಮುದ್ದಿಷ್ಟಂ' ಎಂದು ಬೃಹದಾರಣ್ಯಕಭಾಷ್ಯದಲ್ಲಿ ಹೇಳಿರುವದರಿಂದ ಎಲ್ಲ ವೇದಗಳಿಗೆ ಮುಖ್ಯಪ್ರತಿಪಾದ್ಯನೆಂದೂ ಅರ್ಥ. ।।೭।।

ವಿಷಯವನ್ನು ಉಪಪಾದಿಸಿ ಸರ್ವಸಾಧಾರಣ ಧರ್ಮಕಾರಣವನ್ನು ಹೇಳುವರು-

**ಸತ್ಯಂ ದಯಾ ತಪಃ ಶೌಚಂ ತಿತಿಕ್ಷೇಕ್ಷಾ(ಜ್ಯಾ) ಶಮೋ ದಮಃ ।**
**ಅಹಿಂಸಾ ಬ್ರಹ್ಮಚರ್ಯಂ ಚ ತ್ಯಾಗಃ ಸ್ವಾಧ್ಯಾಯ ಆರ್ಜವಮ್ ।।೮।।**

**ಸಂತೋಷಃ ಸಮದೃಕ್ ಸೇವಾ ಗ್ರಾಮ್ಯೇಹೋಪರಮಃ ಶನೈಃ ।**
**ನೃಣಾಂ ವಿಪರ್ಯಯೇ ಹೇಕ್ಷಾ ಮೌನಮಾತ್ಮವಿಮರ್ಶನಮ್ ।।೯।।**

**ಅನ್ನಾದ್ಯಾದೇಃ ಸಂವಿಭಾಗೋ ಭೂತೇಭ್ಯಶ್ಚ ಯಥಾಽರ್ಹತಃ ।**
**ತೇಷ್ವಾತ್ಮದೇವತಾ ಬುದ್ಧಿಃ ಸುತರಾಂ ನೃಷು ಪಾಂಡವ ।।೧೦।।**

**ಸತ್ಯಂ** ನಿಜವಾಗಿ ಮಾತನಾಡುವದು(ಸಜ್ಜನರಿಗೆ ಹಿತವಾಗುವಂತೆ ಮಾತನಾಡುವದು) **ದಯಾ** ಭೂತದಯೆ, ದೀನರಲ್ಲಿ, ಅನುಕಂಪಾ **ತಪಃ** ಚಾಂದ್ರಾಯಣಾದಿಗಳು ವಿಹಿತ ಉಪವಾಸಾದಿಗಳು **ಶೌಚಂ** ಶರೀರವನ್ನು ತೊಳೆಯುವದು **ತಿತಿಕ್ಷಾ** ದ್ವಂದ್ವ ಸಹಿಷ್ಣುತೆಯು(ತಿತಿಕ್ಷಾದಿಗಳು ಸತ್ಯಾದಿಗಳಿಗೆ ಅಂಗಗಳು. ಸಾಧನಸಾಧನಗಳೂ ಆವಶ್ಯಕವಾದ್ದರಿಂದ ಅವುಗಳನ್ನು ಹೇಳುವರು)

**ಈಕ್ಷಾ** ಯುಕ್ತಾಯುಕ್ತವಿವೇಕವು 'ಇಜ್ಯಾ'ಎಂಬ ಪಾಠದಲ್ಲಿ ದೇವಪೂಜೆ ಎಂದರ್ಥ ಅಥವಾ ಯಜ್ಞವೆಂದರ್ಥ **ಶಮಃ** ಶ್ರೀಹರಿಯಲ್ಲಿ ಮನಸ್ಸು **ದಮಃ** ಇಂದ್ರಿಯನಿಗ್ರಹವು **ಅಹಿಂಸಾ** ವಿಹಿತವಲ್ಲದ ಹಿಂಸೆ ಮಾಡದಿರುವದು **ಬ್ರಹ್ಮಚರ್ಯಂ** ಬ್ರಹ್ಮಚಾರಿಗಳಿಗೆ ಪ್ರಸಿದ್ಧ ಬ್ರಹ್ಮಚರ್ಯೆಯು, ಗೃಹಸ್ಥರಿಗೂ ತನ್ನ ಹೆಂಡತಿಯಲ್ಲಿ ಮಾತ್ರ ಅನುರಕ್ತನಾಗುವದು ವಿಹಿತಕಾಲದಲ್ಲಿ ಸಂಗಮಾಡುವದೆಂಬ ಬ್ರಹ್ಮಚರ್ಯ **ತ್ಯಾಗಃ** ನಿಷಿದ್ಧವಾದುದನ್ನು ಬಿಡುವದು **ಸ್ವಾಧ್ಯಾಯಃ** ವೇದಾದಿಶಾಸ್ತ್ರಾಧ್ಯಯನ ಇತರರಿಗೆ ತಮಗೆ ಉಚಿತವಾದ ಹರಿನಾಮಸಂಕೀರ್ತನೆ ಮುಂತಾದುದು. **ಆರ್ಜವಂ** ಕಪಟವಿಲ್ಲದಿರುವದು. ॥೮॥

**ಸಂತೋಷಃ** ದೇವರು ಕೊಟ್ಟದ್ದರಲ್ಲಿ ತೃಪ್ತಿ **ಸಮದೃಕ್** ಎಲ್ಲ ಅಧಿಷ್ಠಾನದಲ್ಲಿ ಶ್ರೀಹರಿಯು ಪೂರ್ಣನು ನಿರ್ದೋಷನು ಎಂದು ತಿಳಿಯುವದು **ಸೇವಾ** ದೊಡ್ಡವರ ಸೇವೆಮಾಡುವದು **ಶನೈಃ ಗ್ರಾಮ್ಯೇಹೋಪರಮಃ** ಕ್ರಮವಾಗಿ ದುರ್ವಿಷಯಕ-ಭೋಗೇಚ್ಛೆಯನ್ನು ಬಿಡುವದು. ಶನೈಃ ಎಂಬುದರಿಂದ ಅದು ಸುಲಭಸಾಧ್ಯವಲ್ಲವೆಂದು ಸೂಚಿಸಿರುವರು. ಅಥವಾ **ಶನೈಃ** ಸ್ವೇಚ್ಛಾಚಾರಿಗಳಾದ(ಸ್ವೈರಣೀಯರು)ರಮಣೀಯ ಜನರೊಡನೆ ವಿಷಯಾಸಕ್ತನಾಗದಿರುವದು. ವಿಹಿತಕಾಲದಲ್ಲಿಯೂ ಅಂಥವರ ಸಂಗವಿಹಿತವವಲ್ಲ(ಶನೈಃ ಶನೈಶ್ಚರೇ ಸ್ವೈರೇ ಎಂದು ವಿಶ್ವವಿದೆ) **ನೃಣಾಂ ವಿಪರ್ಯಯೇ ಹೇಕ್ಷಾ** ಮನುಷ್ಯರಲ್ಲಿರುವ ವಿಪರೀತ ಪ್ರವೃತ್ತಿಯ ವಿಮರ್ಶನೆ (ನನಗೂ ಹೀಗಾದೀತು ಆಗಬಾರದೆಂದು ಚಿಂತಿಸುವದು) **ಮೌನಂ** ದುಷ್ಟಮಾತುಗಳನ್ನಾಡದಿರುವದು **ಆತ್ಮವಿಮರ್ಶನಂ** ನಾನು ಅಲ್ಪನೆಂದು ಭಗವಂತನು ಸರ್ವೋತ್ತಮನೆಂದು ತಿಳಿಯುವದು. ॥೯॥

**ಭೋತೇಭ್ಯಃ** ಮನುಷ್ಯ, ಪಶು ಮುಂತಾದವುಗಳಿಗೆ **ಯಥಾರ್ಹತಃ** ಅವರವರಿಗೆ ಯೋಗ್ಯವಾದ **ಅನ್ನಾದ್ಯಾದೇಃ** ಅನ್ನ, ತಿನ್ನಲುಯೋಗ್ಯ ಹುಲ್ಲು, ಕಾಳು ಮುಂತಾದವುಗಳ **ಸಂವಿಭಾಗಃ** ಹಂಚಿಕೊಡುವದು, ಬ್ರಾಹ್ಮಣಭೋಜನ, ಬಲಿಹರಣಾದಿಗಳನ್ನು ಮಾಡುವದು **ತೇಷು** ಪಶ್ವಾದಿಗಳಲ್ಲಿ ಅದರಲ್ಲಿಯೂ **ನೃಷು** ಮನುಷ್ಯರಲ್ಲಿ **ಸುತರಾಂ ಆತ್ಮಾ** ಪರಮಾತ್ಮನೇ **ದೇವತಾ** ನಿಯಾಮಕನಾಗಿರುವನು ಎಂಬ **ಬುದ್ಧಿಃ** ಬುದ್ಧಿಯು. ॥೧೦॥

**ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂ ಗತೇಃ ।**
**ಸೇವೇಜ್ಯಾऽವನತಿಃ ಸಖ್ಯಂ ದಾಸ್ಯಮಾತ್ಮಸಮರ್ಪಣಮ್ ॥೧೧॥**

**ಮಹತಾಂ** ಲಕ್ಷ್ಮೀ, ಬ್ರಹ್ಮಾದಿಗಳಿಗೆ **ಗತೇಃ** ಆಶ್ರಯನಾದ **ಅಸ್ಯ** ಈ ಶ್ರೀಕೃಷ್ಣನ **ಶ್ರವಣಂ** ಕಥಾಶ್ರವಣವು **ಕೀರ್ತನಂ** ಯಥೋಚಿತ ಭಗವನ್ನಾಮೋಚ್ಚಾರಣವು **ಸ್ಮರಣಂ**

ಸ್ಮರಣವು **ಇಜ್ಯಾ** ಅರ್ಚನವು **ಅವನತಿಃ** ನಮ್ರತೆಯು **ಸಖ್ಯಂ** ಸ್ನೇಹವು **ದಾಸ್ಯಂ** ಹೊರಗಿರುವ ಭಗವಂತನ ದಾಸ್ಯ ಭಾವನೆಯು. **ಆತ್ಮಸಮರ್ಪಣಂ** ನನ್ನಲ್ಲಿದ್ದು ಅನಾದ್ಯನಂತ ಕಾಲದಲ್ಲಿ ಪ್ರೇರಿಸುವನು ಎಂದು ಪ್ರೀತಿಯಿಂದ ತಿಳಿಯುವದು.

ಈ ಶ್ಲೋಕದಲ್ಲಿರುವ 'ದಾಸ್ಯ' ಮತ್ತು 'ಆತ್ಮಸಮರ್ಪಣ' ಎಂಬ ಪದಗಳಿಗೆ ಅರ್ಥಭೇದದಲ್ಲಿ ಪ್ರಮಾಣ ಹೇಳುವರು-

**... ತಾತ್ಪರ್ಯ ...**

**ಅನಾದ್ಯನಂತಕಾಲೇಷು ಮುಕ್ತೌ ಸಂಸಾರ ಏವ ಚ**
**ಮಯಿಸ್ಥಶ್ಚೋದಯತ್ಯೇಕೋ ವಿಷ್ಣುರ್ಮಾಂ ಸರ್ವದೈವ ತು ||**

**ಇತಿ ಸಂಪ್ರೀತಿಕಂ ಜ್ಞಾನಂ ವಿದ್ಯಾದಾತ್ಮಸಮರ್ಪಣಮ್ ।**
**ಬಹಿಸ್ಥೇಶ್ವರದಾಸತ್ವಂ ದಾಸ್ಯಮಿತ್ಯುಚ್ಯತೇ ಬುಧೈಃ ||**

**ಇತಿ ತಂತ್ರಮಾಲಾಯಾಂ ||**

ಅನಾದ್ಯನಂತಕಾಲಗಳಲ್ಲಿ ಅಂದರೆ ಮುಕ್ತಿಯಲ್ಲಿ ಸಂಸಾರದಲ್ಲಿಯೂ ಶ್ರೀಹರಿಯೊಬ್ಬನೇ ಸರ್ವದಾ ನನ್ನಲ್ಲಿದ್ದು ಪ್ರೇರಿಸುವನು ಎಂಬ ಪ್ರೀತಿಪೂರ್ವಕಜ್ಞಾನವು ಆತ್ಮಸಮರ್ಪಣೆ ಎಂದು ತಿಳಿಯಬೇಕು. ಪ್ರತಿಮಾದಿಗಳಲ್ಲಿ ಅಥವಾ ಹೊರಗಿರುವ ರಾಮಕೃಷ್ಣಾದಿಗಳ ದಾಸ್ಯವು ದಾಸ್ಯವೆಂದು ಜ್ಞಾನಿಗಳು ಹೇಳುವರು. ||೧೧||

**ನೃಣಾಮಯಂ ಪರೋ ಧರ್ಮಃ ಸರ್ವೇಷಾಂ ಸಮುದಾಹೃತಃ ।**
**ತ್ರಿಂಶಲ್ಲಕ್ಷಣಸಂಯುಕ್ತಃ ಸರ್ವಾತ್ಮಾ ಯೇನ ತುಷ್ಯತಿ ||೧೨||**

**ತ್ರಿಂಶಲ್ಲಕ್ಷಣಸಂಯುಕ್ತಃ** 'ಸಪ್ತಪಾದಶ್ಚತುರ್ಹಸ್ತಃ'ಮುಂತಾದ ಸರ್ವಪುರುಷಾಕಾರದ ಮೂವತ್ತು ಲಕ್ಷಣವಿಶಿಷ್ಟನಾದ **ಆತ್ಮಾ** ಸರ್ವಸ್ವಾಮಿಯಾದ ಶ್ರೀಹರಿಯು **ಯೇನ** ಯಾವುದರಿಂದ **ತುಷ್ಯತಿ** ಸಂತೃಪ್ತನಾಗುವನೋ **ಅಯಂ** ಈ ಶ್ರವಣಾದಿಗಳು ಸತ್ಯ ಮೊದಲಾದವು **ಸರ್ವೇಷಾಂ ನೃಣಾಂ** ಎಲ್ಲ ವರ್ಣಾಶ್ರಮದವರಿಗೂ **ಪರಃ** ಉತ್ತಮವಾದ **ಧರ್ಮಃ** ಧರ್ಮವೆಂದು **ಸಮುದಾಹೃತಃ** 'ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ' ಮುಂತಾದ ವಚನಗಳಿಂದ ಹೇಳಲ್ಪಟ್ಟಿದೆ.

ವಿಶೇಷ ಃ- 'ಪರಃ' ಎಂದು ಹೇಳಿದ್ದರಿಂದ ತಾರತಮ್ಯಜ್ಞಾನಕ್ಕಾಗಿ ಬ್ರಹ್ಮಾದಿಗಳ ಕಥಾ ಶ್ರವಣವೂ ಧರ್ಮವೇ ಆದರೂ ಶ್ರೀಹರಿಕಥಾಶ್ರವಣವು ವಿಶಿಷ್ಟವಾದ ಧರ್ಮವೆಂದು ಹೇಳಿದಂತಾಯಿತು. ಶ್ರೀಹರಿಯು ಅನಂತಲಕ್ಷಣವುಳ್ಳವನಾದರೂ

ಶ್ರೀಹರಿಗೆ ತ್ರಿಂಶಲ್ಲಕ್ಷಣ ಎಂದು ಹೇಳಿದ್ದು 'ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ'ಎಂಬ ವಚನದಿಂದ ಭಕ್ತರಿಗಾಗಿ ಪ್ರಕಟಿತವಾಗುವ ಆಕಾರವನ್ನು ಕುರಿತು ಇದೂ ಕೂಡ ಭಕ್ತರಿಗೆ ಭಕ್ತಿ ಹೆಚ್ಚುವದಕ್ಕಾಗಿ ಎಂದು ತಿಳಿದು ಬರುವದು. ಅಥವಾ 'ತ್ರಿಂಶಲ್ಲಕ್ಷಣಸಂಯುಕ್ತಃ ಧರ್ಮಃ' ಎಂದನ್ವಯ. ಆಗ ಸತ್ಯ ಮೊದಲಾದ ಮೂವತ್ತು ಭೇದಗಳುಳ್ಳ ಎಂದರ್ಥ. ಶ್ರೀಹರಿಯ ಸಂತೋಷಕ್ಕೆ ಕಾರಣವಾದುದೆ ಧರ್ಮ ಬೇರೆಯಲ್ಲವೆಂದು.

**ಶ್ರೀಸತ್ಯಧರ್ಮರ ಪ್ರಕಾರ ಅವತಾರಿಕೆ ವಿಶೇಷ ಹಾಗೂ ಶ್ಲೋಕದ ಅರ್ಥ.**

ಶ್ರವಣಾದಿ ಒಂಭತ್ತರಲ್ಲಿ ಸೇವಾ ಇಜ್ಯಾ ಪದಗಳಿಗೆ ಭಗವತ್ಸೇವಾ, ಭಗವದರ್ಚನ ಎಂಬರ್ಥ ಇರುವದರಿಂದ ಸಮದೃಕ್‌ಸೇವಾ ಇಜ್ಯಾ ಪದಗಳಿಂದ ಪುನರುಕ್ತಿಯಿಲ್ಲ. ಈ ಶ್ಲೋಕದಲ್ಲಿ ತ್ರಿಂಶಲ್ಲಕ್ಷಣಸಂಯುಕ್ತನಾದವನು ಶ್ರೀಹರಿಯೋ ಅಥವಾ ಧರ್ಮವೋ ? ಹರಿ ಎನ್ನುವುದು ಸರಿಯಲ್ಲ. ಅನಂತಲಕ್ಷಣವುಳ್ಳವನಿಗೆ ಸಂಖ್ಯಾಮಿತಿಯುಳ್ಳ ಲಕ್ಷಣವನ್ನು ಪ್ರೇಕ್ಷಾವಂತರು ಹೇಳುವದು ಯುಕ್ತವಲ್ಲ. ಮತ್ತು ಸ್ಪಷ್ಟವಾದ ಆನಂದಾದಿಲಕ್ಷಣಗಳು ಇವುಗಳ ಮಧ್ಯದಲ್ಲಿ ದೊರೆಯುವದಿಲ್ಲ. ಇನ್ನು ಧರ್ಮವೆಂದು ಹೇಳುವದೂ ಸರಿಯಲ್ಲ. ಸತ್ಯಾದಿರೂಪವಾದ ಧರ್ಮಕ್ಕೆ ಸತ್ಯಾದಿಯುಕ್ತತ್ವ ಕೂಡಲಾರದು. ಇನ್ನು ಸ್ವತಂತ್ರವಾದ 'ಸಪ್ತಪಾದಶ್ಚತುರ್ಹಸ್ತಃ' ಮುಂತಾಗಿ ಹೇಳಿದ ಲಕ್ಷಣಗಳನ್ನು ಸ್ವೀಕರಿಸಬೇಕು ಎನ್ನುವದಾದರೆ 'ದ್ವಾತ್ರಿಂಶಲ್ಲಕ್ಷಣೈಃ ಯುಕ್ತಃ' ಎಂದು ಹೇಳಿದುದು ಯುಕ್ತವಾಗುವದು. ಆದರೆ ಶ್ರೀಹರಿಯಲ್ಲಿಯಂತೆ ಧರ್ಮದಲ್ಲಿ ಅವು ಕಂಡುಬರುವದಿಲ್ಲ. ವಿಪ್ರಸ್ತುತಿಯು ಅಪ್ರಸ್ತುತವಾದುದರಿಂದ ಏತದ್ವಿಷಯಕವಾಗದು. ಆದ್ದರಿಂದ ಎರಡೂ ಪಕ್ಷಗಳಿಗೆ ನಿರ್ದುಷ್ಟತೆಯು ಕಾಣುವದಿಲ್ಲ ಎನ್ನುವದು ಸರಿಯಲ್ಲ. ದ್ವಿತೀಯ ಪಕ್ಷವೇ ಅದ್ವಿತೀಯವಾದುದು. ಸತ್ಯಾದ್ಯಾತ್ಮಕ ವಾದುದಕ್ಕೆ (ಧರ್ಮಕ್ಕೆ) ಅದರಿಂದ ಕೂಡಿದ್ದು ಎಂಬುವುದು ಅನುಪಪನ್ನವೆಂದು ಹೇಳಿದೆವಲ್ಲ ಎನ್ನುವಂತಿಲ್ಲ. ಲಕ್ಷಯಂತಿ ಜ್ಞಾಪಯಂತೀತಿ ಲಕ್ಷಣಾನಿ ಸತ್ಯತ್ವಾದಿಭೇದಕೋಪಾಧಯಃ ತ್ರಿಂಶತ್‌ಸಂಖ್ಯಾಕಾನಿ ಸತ್ಯತ್ವಾದೀನಿ ತೈಃ। ಅಂದರೆ ಮೂವತ್ತು ಪ್ರಭೇದವುಳ್ಳ ಎಂದರ್ಥ. ಲಕ್ಷಣಶಬ್ದವು ಸ್ವರೂಪಪರವು. ಸತ್ಯದಿಂದಾರಂಭಿಸಿ ಆತ್ಮದೇವತಾಬುದ್ಧಿಪರ್ಯಂತವಾಗಿ ಇಪ್ಪತ್ತೊಂದು, ಶ್ರವಣಾದಿ ಒಂಭತ್ತು ಹೀಗೆ ಮೂವತ್ತು. ವಿಶೇಷಬಲದಿಂದ ಅವುಗಳುಳ್ಳ ಎಂಬ ವ್ಯವಹಾರ. **ಯೇನ** ಯಾವುದನ್ನು ತಿಳಿದು ಅನುಷ್ಠಾನ ಮಾಡುವದರಿಂದ ಸರ್ವಾತ್ಮಾ ಭಗವಾನ್ ತುಷ್ಯತಿ ಸಃ ಧರ್ಮಃ ಎಂದನ್ವಯವಾದ್ದರಿಂದ ಯಾವ ಅನುಪಪತ್ತಿ ಇಲ್ಲ. **ಪರಃ** ಬೇರೆಯದು ಶ್ರವಣಾದಿಗಳು ಧರ್ಮ **ಅಯಂ** ಹರಿಪರಕೀರ್ತನವು **ಪರೋ ಧರ್ಮಃ**

ಸ್ಮರಣವು **ಇಜ್ಯಾ** ಅರ್ಚನವು **ಅವನತಿಃ** ನಮ್ರತೆಯು **ಸಖ್ಯಂ** ಸ್ನೇಹವು **ದಾಸ್ಯಂ** ಹೊರಗಿರುವ ಭಗವಂತನ ದಾಸ್ಯ ಭಾವನೆಯು. **ಆತ್ಮಸಮರ್ಪಣಂ** ನನ್ನಲ್ಲಿದ್ದು ಅನಾದ್ಯನಂತ ಕಾಲದಲ್ಲಿ ಪ್ರೇರಿಸುವನು ಎಂದು ಪ್ರೀತಿಯಿಂದ ತಿಳಿಯುವದು.

ಈ ಶ್ಲೋಕದಲ್ಲಿರುವ 'ದಾಸ್ಯ' ಮತ್ತು 'ಆತ್ಮಸಮರ್ಪಣ' ಎಂಬ ಪದಗಳಿಗೆ ಅರ್ಥಭೇದದಲ್ಲಿ ಪ್ರಮಾಣ ಹೇಳುವರು-

**... ತಾತ್ಪರ್ಯ ...**

**ಅನಾದ್ಯನಂತಕಾಲೇಷು ಮುಕ್ತೌ ಸಂಸಾರ ಏವ ಚ**
**ಮಯಿಸ್ಥಶ್ಚೋದಯತ್ಯೇಕೋ ವಿಷ್ಣುರ್ಮಾಂ ಸರ್ವದೈವ ತು ॥**

**ಇತಿ ಸಂಪ್ರೀತಿಕಂ ಜ್ಞಾನಂ ವಿದ್ಯಾದಾತ್ಮಸಮರ್ಪಣಮ್ ।**
**ಬಹಿಸ್ಥೇಶ್ವರದಾಸತ್ವಂ ದಾಸ್ಯಮಿತ್ಯುಚ್ಯತೇ ಬುಧೈಃ ॥**

**ಇತಿ ತಂತ್ರಮಾಲಾಯಾಂ ॥**

ಅನಾದ್ಯನಂತಕಾಲಗಳಲ್ಲಿ ಅಂದರೆ ಮುಕ್ತಿಯಲ್ಲಿ ಸಂಸಾರದಲ್ಲಿಯೂ ಶ್ರೀಹರಿಯೊಬ್ಬನೇ ಸರ್ವದಾ ನನ್ನಲ್ಲಿದ್ದು ಪ್ರೇರಿಸುವನು ಎಂಬ ಪ್ರೀತಿಪೂರ್ವಕಜ್ಞಾನವು ಆತ್ಮಸಮರ್ಪಣೆ ಎಂದು ತಿಳಿಯಬೇಕು. ಪ್ರತಿಮಾದಿಗಳಲ್ಲಿ ಅಥವಾ ಹೊರಗಿರುವ ರಾಮಕೃಷ್ಣಾದಿಗಳ ದಾಸ್ಯವು ದಾಸ್ಯವೆಂದು ಜ್ಞಾನಿಗಳು ಹೇಳುವರು. ॥೧೧॥

**ನೃಣಾಮಯಂ ಪರೋ ಧರ್ಮಃ ಸರ್ವೇಷಾಂ ಸಮುದಾಹೃತಃ ।**
**ತ್ರಿಂಶಲ್ಲಕ್ಷಣಸಂಯುಕ್ತಃ ಸರ್ವಾತ್ಮಾ ಯೇನ ತುಷ್ಯತಿ ॥೧೨॥**

**ತ್ರಿಂಶಲ್ಲಕ್ಷಣಸಂಯುಕ್ತಃ** 'ಸಪ್ತಪಾದಶ್ಚತುರ್ಹಸ್ತಃ'ಮುಂತಾದ ಸರ್ವಪುರುಷಾಕಾರದ ಮೂವತ್ತು ಲಕ್ಷಣವಿಶಿಷ್ಟನಾದ **ಆತ್ಮಾ** ಸರ್ವಸ್ವಾಮಿಯಾದ ಶ್ರೀಹರಿಯು **ಯೇನ** ಯಾವುದರಿಂದ **ತುಷ್ಯತಿ** ಸಂತೃಪ್ತನಾಗುವನೋ **ಅಯಂ** ಈ ಶ್ರವಣಾದಿಗಳು ಸತ್ಯ ಮೊದಲಾದವು **ಸರ್ವೇಷಾಂ ನೃಣಾಂ** ಎಲ್ಲ ವರ್ಣಾಶ್ರಮದವರಿಗೂ **ಪರಃ** ಉತ್ತಮವಾದ **ಧರ್ಮಃ** ಧರ್ಮವೆಂದು **ಸಮುದಾಹೃತಃ** 'ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ' ಮುಂತಾದ ವಚನಗಳಿಂದ ಹೇಳಲ್ಪಟ್ಟಿದೆ.

ವಿಶೇಷ ಃ- 'ಪರಃ' ಎಂದು ಹೇಳಿದ್ದರಿಂದ ತಾರತಮ್ಯಜ್ಞಾನಕ್ಕಾಗಿ ಬ್ರಹ್ಮಾದಿಗಳ ಕಥಾ ಶ್ರವಣವೂ ಧರ್ಮವೇ ಆದರೂ ಶ್ರೀಹರಿಕಥಾಶ್ರವಣವು ವಿಶಿಷ್ಟವಾದ ಧರ್ಮವೆಂದು ಹೇಳಿದಂತಾಯಿತು. ಶ್ರೀಹರಿಯು ಅನಂತಲಕ್ಷಣವುಳ್ಳವನಾದರೂ

ಶ್ರೀಹರಿಗೆ ತ್ರಿಂಶಲ್ಲಕ್ಷಣ ಎಂದು ಹೇಳಿದ್ದು 'ಪುರುಷಾಕಾರೋ ಭಕ್ತಾನಾಂ ತ್ವಂ ಪ್ರಕಾಶಸೇ' ಎಂಬ ವಚನದಿಂದ ಭಕ್ತರಿಗಾಗಿ ಪ್ರಕಟಿತವಾಗುವ ಆಕಾರವನ್ನು ಕುರಿತು ಇದೂ ಕೂಡ ಭಕ್ತರಿಗೆ ಭಕ್ತಿ ಹೆಚ್ಚುವದಕ್ಕಾಗಿ ಎಂದು ತಿಳಿದು ಬರುವದು. ಅಥವಾ 'ತ್ರಿಂಶಲ್ಲಕ್ಷಣಸಂಯುಕ್ತಃ ಧರ್ಮಃ' ಎಂದನ್ವಯ. ಆಗ ಸತ್ಯ ಮೊದಲಾದ ಮೂವತ್ತು ಭೇದಗಳುಳ್ಳ ಎಂದರ್ಥ. ಶ್ರೀಹರಿಯ ಸಂತೋಷಕ್ಕೆ ಕಾರಣವಾದುದೆ ಧರ್ಮ ಬೇರೆಯಲ್ಲವೆಂದು.

**ಶ್ರೀಸತ್ಯಧರ್ಮರ ಪ್ರಕಾರ ಅವತಾರಿಕೆ ವಿಶೇಷ ಹಾಗೂ ಶ್ಲೋಕದ ಅರ್ಥ.**

ಶ್ರವಣಾದಿ ಒಂಭತ್ತರಲ್ಲಿ ಸೇವಾ ಇಜ್ಯಾ ಪದಗಳಿಗೆ ಭಗವತ್ಸೇವಾ, ಭಗವದರ್ಚನ ಎಂಬರ್ಥ ಇರುವದರಿಂದ ಸಮದೃಕ್‌ಸೇವಾ ಇಜ್ಯಾ ಪದಗಳಿಂದ ಪುನರುಕ್ತಿಯಿಲ್ಲ. ಈ ಶ್ಲೋಕದಲ್ಲಿ ತ್ರಿಂಶಲ್ಲಕ್ಷಣಸಂಯುಕ್ತನಾದವನು ಶ್ರೀಹರಿಯೋ ಅಥವಾ ಧರ್ಮವೋ ? ಹರಿ ಎನ್ನುವುದು ಸರಿಯಲ್ಲ. ಅನಂತಲಕ್ಷಣವುಳ್ಳವನಿಗೆ ಸಂಖ್ಯಾಮಿತಿಯುಳ್ಳ ಲಕ್ಷಣವನ್ನು ಪ್ರೇಕ್ಷಾವಂತರು ಹೇಳುವದು ಯುಕ್ತವಲ್ಲ. ಮತ್ತು ಸ್ಪಷ್ಟವಾದ ಆನಂದಾದಿಲಕ್ಷಣಗಳು ಇವುಗಳ ಮಧ್ಯದಲ್ಲಿ ದೊರೆಯುವದಿಲ್ಲ. ಇನ್ನು ಧರ್ಮವೆಂದು ಹೇಳುವದೂ ಸರಿಯಲ್ಲ. ಸತ್ಯಾದಿರೂಪವಾದ ಧರ್ಮಕ್ಕೆ ಸತ್ಯಾದಿಯುಕ್ತತ್ವ ಕೂಡಲಾರದು. ಇನ್ನು ಸ್ವತಂತ್ರವಾದ 'ಸಪ್ತಪಾದಶ್ಚತುರ್ಹಸ್ತಃ' ಮುಂತಾಗಿ ಹೇಳಿದ ಲಕ್ಷಣಗಳನ್ನು ಸ್ವೀಕರಿಸಬೇಕು ಎನ್ನುವದಾದರೆ 'ದ್ವಾತ್ರಿಂಶಲ್ಲಕ್ಷಣೈಃ ಯುಕ್ತಃ' ಎಂದು ಹೇಳಿದುದು ಯುಕ್ತವಾಗುವದು. ಆದರೆ ಶ್ರೀಹರಿಯಲ್ಲಿಯಂತೆ ಧರ್ಮದಲ್ಲಿ ಅವು ಕಂಡುಬರುವದಿಲ್ಲ. ವಿಪ್ರಸ್ತುತಿಯು ಅಪ್ರಸ್ತುತವಾದುದರಿಂದ ಏತದ್ವಿಷಯಕವಾಗದು. ಆದ್ದರಿಂದ ಎರಡೂ ಪಕ್ಷಗಳಿಗೆ ನಿರ್ದುಷ್ಟತೆಯು ಕಾಣುವದಿಲ್ಲ ಎನ್ನುವದು ಸರಿಯಲ್ಲ. ದ್ವಿತೀಯ ಪಕ್ಷವೇ ಅದ್ವಿತೀಯವಾದುದು. ಸತ್ಯಾದ್ಯಾತ್ಮಕ ವಾದುದಕ್ಕೆ (ಧರ್ಮಕ್ಕೆ) ಅದರಿಂದ ಕೂಡಿದ್ದು ಎಂಬುವುದು ಅನುಪಪನ್ನವೆಂದು ಹೇಳಿದೆವಲ್ಲ ಎನ್ನುವಂತಿಲ್ಲ. ಲಕ್ಷಯಂತಿ ಜ್ಞಾಪಯಂತೀತಿ ಲಕ್ಷಣಾನಿ ಸತ್ಯತ್ವಾದಿಭೇದಕೋಪಾಧಯಃ ತ್ರಿಂಶತ್‌ಸಂಖ್ಯಾಕಾನಿ ಸತ್ಯತ್ವಾದೀನಿ ತೈಃ । ಅಂದರೆ ಮೂವತ್ತು ಪ್ರಭೇದವುಳ್ಳ ಎಂದರ್ಥ. ಲಕ್ಷಣಶಬ್ದವು ಸ್ವರೂಪಪರವು. ಸತ್ಯದಿಂದಾರಂಭಿಸಿ ಆತ್ಮದೇವತಾಬುದ್ಧಿಪರ್ಯಂತವಾಗಿ ಇಪ್ಪತ್ತೊಂದು, ಶ್ರವಣಾದಿ ಒಂಭತ್ತು ಹೀಗೆ ಮೂವತ್ತು. ವಿಶೇಷಬಲದಿಂದ ಅವುಗಳುಳ್ಳ ಎಂಬ ವ್ಯವಹಾರ. **ಯೇನ** ಯಾವುದನ್ನು ತಿಳಿದು ಅನುಷ್ಠಾನ ಮಾಡುವದರಿಂದ ಸರ್ವಾತ್ಮಾ ಭಗವಾನ್ ತುಷ್ಯತಿ ಸಃ ಧರ್ಮಃ ಎಂದನ್ವಯವಾದ್ದರಿಂದ ಯಾವ ಅನುಪಪತ್ತಿ ಇಲ್ಲ. **ಪರಃ** ಬೇರೆಯದು ಶ್ರವಣಾದಿಗಳು ಧರ್ಮ **ಅಯಂ** ಹರಿಪರಕೀರ್ತನವು **ಪರೋ ಧರ್ಮಃ**

ಮುಖ್ಯಧರ್ಮವು. ಹೀಗೆ ಆವೃತ್ತಿ ಮಾಡಿ ಅನ್ವಯಮಾಡುವದರಿಂದ 'ಏಷ ಮೇ ಸರ್ವಧರ್ಮಾಣಾಂ ಧರ್ಮೋಽಧಿಕತಮೋ ಮತಃ' 'ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾಃ ಪ್ರಧಾನತಃ' ಮುಂತಾದ ಪ್ರಮಾಣಾನುಕೂಲವಾಗುವದು. ಆದ್ದರಿಂದಲೇ 'ಸಮುದಾಹೃತಃ' ಎಂದು ಹೇಳಿದ್ದು ಯುಕ್ತ. ।।೧೨।।

ಧರ್ಮಸ್ವರೂಪವನ್ನು ಹೇಳಿ ಅಧಿಕಾರಿಗಳನ್ನು ಹೇಳುವರು-

**ಸಂಸ್ಕಾರಾ ಯದ್ಯವಚ್ಛಿನ್ನಾ ಸ ದ್ವಿಜೋ ವೈದಿಕಾದಯಃ ।**
**ಇಜ್ಯಾಧ್ಯಯನದಾನಾನಿ ವಿಹಿತಾನಿ ದ್ವಿಜನ್ಮನಾಂ ।।೧೩।।**

**ವೈದಿಕಾದಯಃ** ವೇದೋಕ್ತವಾದ್ದರಿಂದ ಪ್ರಾಮಾಣಿಕವಾಗಿ ಕರ್ತವ್ಯಗಳಾದ ಮತ್ತು ಸ್ಮೃತಿಗಳಲ್ಲಿ ಹೇಳಿದ **ಸಂಸ್ಕಾರಾಃ** ಗರ್ಭಾಧಾನಾದಿ ಸ್ಮಶಾನಾಂತ ಸಂಸ್ಕಾರಗಳು **ಯದಿ** ಯಾರಿಗೆ **ಅವಿಚ್ಛಿನ್ನಾಃ** ಒಂದೂ ತಪ್ಪದೇ ಆಗಿವೆಯೋ **ಸಃ** ಅವನು **ದ್ವಿಜಃ** ತ್ರಿವರ್ಣಕ್ಕೆ ಸೇರಿದವನು ಅವನೇ ಈ ಧರ್ಮದಲ್ಲಿ ಅಧಿಕಾರಿಯು **ದ್ವಿಜನ್ಮನಾಂ** ದ್ವಿಜರಿಗೆ **ಇಜ್ಯಾ** ಯಜ್ಞ, **ಅಧ್ಯಯನ** ವೇದಾಧ್ಯಯನ, **ದಾನಾನಿ** ದಾನಗಳು **ವಿಹಿತಾನಿ** ಹೇಳಲ್ಪಟ್ಟಿವೆ. ವೈದಿಕವೆಂದಿದ್ದರಿಂದ ಸಂಸ್ಕಾರಗಳು ಅವಶ್ಯಕರ್ತವ್ಯಗಳೆಂದು ತಿಳಿಸಿರುವರು.

ಇದು ದ್ವಿಜರೆಲ್ಲರಿಗೂ ಸಾಮಾನ್ಯಧರ್ಮವೇ ಎಂದರೆ ಇಲ್ಲವೆಂದು ತಿಳಿಸಲು ಆದಿಪದವನ್ನು ಇಟ್ಟಿರುವರು. ಇದರಿಂದ ದ್ವಿಜಜಾತಿಯಲ್ಲಿ ಹುಟ್ಟಿದ ಹೆಣ್ಣುಮಕ್ಕಳಿಗೆ ವೈದಿಕಸಂಸ್ಕಾರಗಳು ಸಮಂತ್ರಕವಾಗಿಲ್ಲದಿದ್ದರೂ,ಅಮಂತ್ರಕವಾಗಿ ಕೇವಲ ತಂತ್ರದಿಂದ ಮಾಡಿದ ಶಿಷ್ಟಾಚಾರಪ್ರಾಪ್ತಸಂಸ್ಕಾರಗಳು ಸಂಗೃಹೀತವಾದವು. ವೈದಿಕಸಂಸ್ಕಾರವಿಲ್ಲದ ಸ್ತ್ರೀಯರಿಗೆ ಯಾಗದಲ್ಲಿ ಅವರಿಗೆ ಹೇಗೆ ಅಧಿಕಾರ ಎಂಬುದಕ್ಕೆ ಇದೇ ಉತ್ತರ. ಪುರುಷರಿಗೆ ಹೇಳಿದ ಎಲ್ಲ ಸಂಸ್ಕಾರಗಳೂ ಸ್ತ್ರೀಯರಿಗೆ ಅಮಂತ್ರಕವಾಗಿ ಉಂಟು ಎಂಬುದು (ಶ್ರೌತವಿಲ್ಲದಿದ್ದ ಸ್ಮಾರ್ತ ಇವೆ) ಸ್ಮೃತಿ ಹೀಗಿದೆ. 'ನಿಷೇಕಾದಿ- ಸ್ಮಶಾನಾಂತಾಸ್ತೇಷಾಂ ವೈ ಮಂತ್ರತಃ ಕ್ರಿಯಾಃ । ಗರ್ಭಾಧಾನಮೃತೌ ಪುಂಸವನಂ ಸ್ಯಂದನಾತ್ಪುರಾ । ಷಷ್ಠೇ ಅಷ್ಟಮೇ ವಾ ಸೀಮಂತೋ ಮಾಸಯೋರ್ಜಾತಕರ್ಮ ಚ । ಅಹನ್ಯೇಕಾದಶೇ ನಾಮ ಚತುರ್ಥೇ ಮಾಸಿ ನಿಷ್ಕ್ರಮಃ । ಷಷ್ಠೇ ಅನ್ನಪ್ರಾಶನಂ ಮಾಸೇ ಚೂಡಾಕಾರ್ಯಾ ಯಥಾಕುಲಮ್ । ಏವಮೇನಃ ಶಮಂ ಯಾತಿ ಗರ್ಭ(ರ್ಭೇ)ಬೀಜ ಸಮುದ್ಭವಮ್ । ತೂಷ್ಣೀಮೇತಾಃ ಕ್ರಿಯಾಃ ಸ್ತ್ರೀಣಾಂ ವಿವಾಹಸ್ತು ಸಮಂತ್ರಕಃ । ಸ್ತ್ರೀಣಾಂ ಪ್ರದಾನಕರ್ಮೈವ ಯಥೋಪನಯನಂ ತಥಾ।' ಮುಂತಾದ ಸ್ಮೃತಿಯು ಸ್ತ್ರೀಯರಿಗೆ ಅಮಂತ್ರಕ

ಸಂಸ್ಕಾರಗಳಿವೆ ಎಂದು ತಿಳಿಸುತ್ತದೆ. ಬ್ರಹ್ಮಕ್ಷತ್ರಿಯವಿಟ್ ಶುದ್ರಾವರ್ಣಾಸ್ತ್ರಾದ್ಯಾಸ್ತ್ರಯೋ ದ್ವಿಜಾಃ । ಇಜ್ಯಾಧ್ಯಯನದಾನಾನಿ ವಿಪ್ರಸ್ಯ ಕ್ಷತ್ರಿಯಸ್ಯ ಚ । ಎಂದೂ ಇದೆ.

ಮೂಲದಲ್ಲಿ 'ಸದ್ವಿಜೋ ಅಜೋ ಜಗಾದಯಂ' ಎಂದೂ ಪಾಠ ಕೆಲವೆಡೆ ಕಂಡು ಬರುವದು ಅದೂ ಸರಿಯೇ. ಆಗ **ಅಜಃ** ಹುಟ್ಟಿಲ್ಲದಿರುವ ವೇದ ಮತ್ತು ಬ್ರಹ್ಮದೇವರು **ಬ್ರಹ್ಮಾ** ಬ್ರಹ್ಮನು **ಯಂ** ಯಾವನನ್ನು **ದ್ವಿಜಃ ಇತಿ ಜಗಾದ** ದ್ವಿಜನೆಂದು ಹೇಳಿದನೋ **ಸಃ ದ್ವಿಜಃ** ಅವನು ದ್ವಿಜನು ಎಂದರ್ಥ. ಶೂದ್ರನನ್ನು ದ್ವಿಜನೆಂದು ವೇದವಾಗಲಿ ಬ್ರಹ್ಮನಾಗಲಿ ಹೇಳಿಲ್ಲ. ಆದ್ದರಿಂದ ಅವನು ದ್ವಿಜನಲ್ಲ. ಸ್ಮೃತಿಯೂ ಹೀಗಿದೆ. 'ವಿವಾಹಮಾತ್ರಸಂಸ್ಕಾರಂ ಶೂದ್ರೋಽಪಿ ಲಭತಾಂ ಸದಾ । ನ ಕೇನಚಿತ್ ಸಮಸೃಜತ್ ಛಂದಸಾ ತಂ ಪ್ರಜಾಪತಿಃ ।। ಎಂದು ಇದೆ. ಶ್ರುತಿಯು 'ಗಾಯತ್ರ್ಯಾ ಬ್ರಾಹ್ಮಣಮಸೃಜತ್ ತ್ರಿಷ್ಟುಭಾ ರಾಜನ್ಯಂ, ಜಗತ್ಯಾ ವೈಶ್ಯಂ, ನ ಕೇನಚಿಚ್ಛೂದ್ರಮಿತಿ । ನಾಗ್ನಿರ್ನಯಜ್ಞಶೂದ್ರಸ್ಯ ।' ಮುಂತಾಗಿರುವದರಿಂದ ಅವನು ದ್ವಿಜನಲ್ಲ ಎಂಬ ಹೆಚ್ಚಿನ ವಿಷಯ ಛಾಂದೋಗ್ಯಾದಿಗಳಲ್ಲಿ ತಿಳಿಯುವದು. ಸಃ ದ್ವಿಜಃ, ದ್ವಿಜನ್ಮನಾಂ ಎಂಬ ಏಕವಚನ ಬಹುವಚನಗಳಿಂದ ತರತಮಭಾವಸೂಚಿಸುವರು. ।।೧೩।।

ತರತಮಭಾವವನ್ನು ತಿಳಿಸುವರು-

**ಜನ್ಮಕರ್ಮಾವದಾತಾನಾಂ ಕ್ರಿಯಾಶ್ಚ ನಿಗಮೋದಿತಾಃ ।**
**ವಿಪ್ರಸ್ಯಾಧ್ಯಾಪನಾದೀನಿ ತತೋಽನ್ಯಸ್ಯಾಪರಿಗ್ರಹಃ ।।೧೪।।**

**ಜನ್ಮಕರ್ಮಾವದಾತಾನಾಂ** ಹುಟ್ಟಿನಿಂದಲೂ, ಸಂಸ್ಕಾರಕರ್ಮಗಳಿಂದಲೂ ಶುದ್ಧರಾದವರಿಗೆ **ನಿಗಮೋದಿತಾಃ** ವೇದಗಳಲ್ಲಿ ಹೇಳಿದ 'ಕಾರೀರ್ಯಾ ಯಜೇತ ವೃಷ್ಟಿಕಾಮಃ'(ಮಳೆಯನ್ನು ಅಪೇಕ್ಷಿಸುವವನು ಕಾರೀರಿ ಎಂಬ ಯಾಗವನ್ನು ಮಾಡಬೇಕು) 'ಮಲವದ್ವಾಸಃ ನ ಸಂವಸೇತ್'(ಕೊಳಕುಬಟ್ಟೆ ಧರಿಸಬಾರದು), ಮುಂತಾದ ಕ್ರಿಯಗಳಲ್ಲಿ ಎಲ್ಲರಿಗೂ ಅಧಿಕಾರವಿದೆ ಎಂದು ವಿಶೇಷಧರ್ಮಗಳನ್ನು ಹೇಳುತ್ತಾರೆ **ಅಧ್ಯಾಪನಾದೀನಿ** ಅಧ್ಯಾಪನ, ಪಾಠ ಹೇಳುವದು **ಯಾಜನ** ಯಜ್ಞಮಾಡಿಸುವದು **ಪ್ರತಿಗ್ರಹ** ದಾನ ಸ್ವೀಕರಿಸುವದು **ವಿಪ್ರಸ್ಯ** ಬ್ರಾಹ್ಮಣನಿಗೆ ವಿಹಿತವಾದುದು. ಅಲ್ಲದೇ ಅಧ್ಯಯನ,ದಾನ,ಯಜನಗಳೂ ಹೀಗೆ ಆರು ಬ್ರಾಹ್ಮಣನಿಗೆ ವಿಹಿತ. **ತತಃ ಅನ್ಯಸ್ಯ** ಬ್ರಾಹ್ಮಣರಲ್ಲದ ಕ್ಷತ್ರಿಯ ವೈಶ್ಯರಿಗೆ **ಅಪರಿಗ್ರಹಃ** ಪ್ರತಿಗ್ರಹ, ಯಾಜನ, ಅಧ್ಯಾಪನಗಳು ಇಲ್ಲ.

ವಿಶೇಷ ಃ-'ಪ್ರತಿಗ್ರಹಾಧಿಕೋ ವಿಪ್ರೋ ಯಾಜನಾಧ್ಯಾಪನೇ ತಥಾ' ಎಂಬ ಸ್ಮೃತಿ ಇದೆ. ಮನುಸ್ಮೃತಿಯಲ್ಲಿ 'ಷಣ್ಣಾಂ ತು ಕರ್ಮಣಾಮಸ್ಯ ತ್ರೀಣಿ ಕರ್ಮಾಣಿ

ಜೀವಿಕಾ । ಯಾಜನಾಧ್ಯಾಪನೇ ಚೈವ ವಿಶುದ್ಧಾಚ್ಚ ಪ್ರತಿಗ್ರಹಃ' ಎಂದಿದೆ. 'ಅಪ್ರತಿಗ್ರಹಃ' ಎಂದು ಮುಖತಃ ಹೇಳಿದ್ದರಿಂದ ಕ್ಷತ್ರಿಯನಿಗೆ ಆಪತ್ಕಾಲದಲ್ಲಿ ಯಾಜನ ಅಧ್ಯಾಪನ ಮಾಡಬಹುದು ಎಂದು ಅನುಮತಿ ಇತ್ತಿರುವರು. ಮುಂದೆ 'ಋತೇ ರಾಜನ್ಯಂ' ಎಂದು ಹೇಳುವರು. 'ಸ ಹೋವಾಚ ತವೈವ ರಾಜನ್ ಮಾನುಷಂ ವಿತ್ತಂ ಯಾಮೇವ ಕುಮಾರಸ್ಯ ಅಂತೇ ವಾಚಂ ಅಭಾಷಥಾಃ ತಾಮೇವ ಬ್ರೂಹಿ ಚೇತ್' ಎಂಬ ಛಾಂದೋಗ್ಯದಲ್ಲಿ ದೀನರಲ್ಲಿ ಅನುಗ್ರಹ ಮಾಡುವದಕ್ಕಾಗಿ ಆಪತ್ಕಾಲದಲ್ಲಿಯೂ ರಾಜರಿಗೆ ಉಪದೇಶಕತ್ವವನ್ನು ನಿಷೇಧಿಸಿದೆ ಎಂದು ಶಂಕಿಸಬಾರದು. ಅಲ್ಲಿ ವಾಕ್ಯ 'ತತ್ರಾಪಿ ಕೃಚ್ಛ್ರೀಬಭೂವ' ಎಂದು ಹೇಳಿದೆ. ಆಪತ್ತಿನಲ್ಲಿ ಇಲ್ಲಿ ಹೇಳಿದಂತೆಯೇ. ಅಲ್ಲಿ ಉಪದೇಶಿಸಬಹುದು ಎಂದು ಹೇಳಿದೆ. ಆದ್ದರಿಂದ ಅನುರೂಪವಲ್ಲವೆಂದು ತಿಳಿಯಬಾರದು. ॥೧೪॥

ಬ್ರಾಹ್ಮಣೇತರರಿಗೆ ಪ್ರತಿಗ್ರಹವಿಲ್ಲ ಎಂದು ಹೇಳಿತ್ತು ಪ್ರಸಕ್ತವಾದ ರಾಜಾದಿಗಳು ಹೇಗೆ ಇರಬೇಕೆಂದು ಹೇಳುವರು-

**ರಾಜ್ಞೋ ವೃತ್ತಿಃ ಪ್ರಜಾಗೋಪ್ತುರವಿಪ್ರಾದ್ ವಾ ಕರಾದಿಭಿಃ ।**
**ವೈಶ್ಯಸ್ತು ವಾರ್ತಾವೃತ್ತಿಃ ಸ್ಯಾನ್ನಿತ್ಯಂ ಬ್ರಹ್ಮಕುಲಾನುಗಃ ॥೧೫॥**

**ಶೂದ್ರಸ್ಯ ದ್ವಿಜಶುಶ್ರೂಷಾ ವೃತ್ತಿಶ್ಚ ಸ್ವಾಮಿನೋ ಭವೇತ್ ।**
**ವಾರ್ತಾ ವಿಚಿತ್ರಶಾಲೀನಂ ಯಾಯಾವರ್ಯಂ ಸಿಲೋಂಛನಮ್ ॥೧೬॥**

**ಪ್ರಜಾಗೋಪ್ತುಃ** ಪ್ರಜೆಗಳ ಪಾಲಕನಾದ **ರಾಜ್ಞಃ** ರಾಜನಿಗೆ **ಅವಿಪ್ರಾತ್** ಬ್ರಾಹ್ಮಣರಲ್ಲದವರಿಂದ **ವಾ** ದೇವತೆಗಳನ್ನು ಬಿಟ್ಟು ದಂಡಾರ್ಹನಾದ ಬ್ರಾಹ್ಮಣನನ್ನು ಬಿಟ್ಟು ಅಥವಾ **ವಾ** ಅವಧಾರಣೆ ಬ್ರಾಹ್ಮಣರಲ್ಲದವರಿಂದಲೇ **ಕರಾದಿಭಿಃ** ತೆರಿಗೆ ಶಿಕ್ಷೆಯೆಂದು ನ್ಯಾಯವಾಗಿ ತೆಗೆದುಕೊಂಡ ದಂಡ ಇವುಗಳಿಂದ **ವೃತ್ತಿಃ** ಜೀವನವು **ವಾರ್ತಾವೃತ್ತಿಃ** ಕೃಷಿ, ಪಶುಪಾಲನೆ, ವ್ಯಾಪಾರಗಳೇ ಜೀವವಾಗಿವುಳ್ಳ **ವೈಶ್ಯಃ ತುಃ** ವೈಶ್ಯನಾದರೋ **ನಿತ್ಯಂ** ಯಾವಾಗಲೂ **ಬ್ರಹ್ಮಕುಲಾನುಗಃ ಸ್ಯಾತ್** ಬ್ರಾಹ್ಮಣರನ್ನು ಅನುಸರಿಸುವವನಾಗಬೇಕು. ಇದರಿಂದ ಬ್ರಾಹ್ಮಣರಲ್ಲಿ ವಿಶ್ವಾಸವು ವೈಶ್ಯಧರ್ಮವೆಂದು ಸೂಚಿಸಿರುವರು. ॥೧೫॥

**ಶೂದ್ರಸ್ಯ** ಶೂದ್ರನಿಗೆ **ದ್ವಿಜಶುಶ್ರೂಷಾ** ಬ್ರಾಹ್ಮಣ,ಕ್ಷತ್ರಿಯ,ವೈಶ್ಯರ ಸೇವೆಯು **ವೃತ್ತಿಃ** ಜೀವನೋಪಾಯವು **ಚ** ಮತ್ತು **ಸ್ವಾಮಿನಃ** ಯಜಮಾನನಿಂದ **ಜೀವನಂ** ಜೀವನವು **ಭವೇತ್** ಆಗುವದು. 'ಪ್ರಜಾಗೋಪ್ತುಃ' ಎಂದು ಹೇಳಿದ್ದರಿಂದ ಪ್ರಜಾಪಾಲನೆ ಮುಖ್ಯಧರ್ಮ. ಅದಕ್ಕಾಗಿ ಕರವಸೂಲಿ ಹೊರತು ತನ್ನ ಸುಖಕ್ಕಾಗಿ ಅಲ್ಲ. ಹಾಗಾದಲ್ಲಿ ಪಾಪವೇ ಬರುವದು ಎಂದು ಭಾವ.

ವಿಶೇಷ ಃ- ೧೫ನೇ ಶ್ಲೋಕದಲ್ಲಿ 'ಅವಿಪ್ರಾತ್' ಎಂಬಲ್ಲಿ ವಿಪ್ರಪದದಿಂದ ಕರಾದಿಗ್ರಹಣ ಅಯೋಗ್ಯರಾದ ದೇವತೆ ಮುಂತಾದವರನ್ನು ಉಪಲಕ್ಷಣಯಾ ಸ್ವೀಕರಿಸಿಬೇಕು. ಅಥವಾ ಅವಿಪ್ರಾತ್ ವಿದ್ವಾಂಸರಿಂದ ಭಿನ್ನರಾದ ಎಂದರ್ಥ. ಇದರಿಂದ ವಿಪ್ರನೂ ವಿರುದ್ಧ ಕೆಲಸ ಮಾಡಿದರೆ ಅವನಿಂದ ಕರದಂಡ ಮಾಡುವದು ಕಂಡಿದೆ. ಆದ್ದರಿಂದ ಹೀಗೆ ಹೇಗೆ ಹೇಳಿದಿರಿ ಎಂಬ ಶಂಕೆ ನಿರಸ್ತವಾಯಿತು. ವಿಪ್ರಶಬ್ದಕ್ಕೆ ಜ್ಞಾನಿ ಎಂದರ್ಥ ಮಾಡಿದೆಯಷ್ಟೇ. 'ಆತ್ವಾ ಕಣ್ವಾ ಅಹೂಷತ ಗೃಣಂತಿ ವಿಪ್ರ ತೇ ಧಿಯಃ' ಎಂಬ ಋಕ್ ಟೀಕಾದಲ್ಲಿ 'ವಿಪ್ರ ಮೇಧಾವಿನ್' ಎಂದಿದ್ದಾರೆ. ಟಿಪ್ಪಣಿಯಲ್ಲಿ 'ವಿಪ್ರೋ ಗೃತ್ಸೋಧೀರ' ಇತ್ಯಾದಿ ಚತುರ್ವಿಂಶತಿಸಂಖ್ಯಾಕೇಷು ಮೇಧಾವಿನಾಮಸು ವಿಪ್ರಶಬ್ದಪಠಿತ ಇತಿ ಭಾವಃ' ಎಂದಿದ್ದಾರೆ. ಪರಕೀಯರೂ ಸಹ ಇದನ್ನು ವ್ಯಾಖ್ಯಾನಿಸುವಾಗ 'ಚತುರ್ವಿಂಶತಿಸಂಖ್ಯಾಕೇಷು ವಿಪ್ರ ಇತ್ಯಾದಿಷು ಮೇಧಾವಿನಾಮಸು ಕಣ್ವ ಋಭುರಿತಿ ಪಠಿತಃ' ಎಂದಿದ್ದಾರೆ.

ಕರಾದಿಭಿಃ ಎಂದರೆ ಉತ್ಪನ್ನದ ಆರನೇ ಒಂದು ಭಾಗ ಪೀಡಿಸದಂತೆ ಹಣಪಡೆಯುವದು ರಾಜನ ಧರ್ಮ ಎಂದು ರಾಜಧರ್ಮದಲ್ಲಿ ಹೇಳಿದೆ.

**ಯಥಾ ಕ್ರಮೇಣ ಪುಷ್ಪೇಭ್ಯಶ್ಚಿನೋತಿ ಮಧುಷಟ್ಪದಃ ।**
**ತಥಾ ದ್ರವ್ಯಮುಪಾದಾಯ ರಾಜಾ ಕುರ್ವೀತ ಸಂಚಯಮ್ ॥**

ಎಂದು. ಅಂದರೆ ಹೂವನ್ನು ಪೀಡಿಸದೆ ಭ್ರಮರವು ಮಕರಂದವನ್ನು ಸ್ವೀಕರಿಸುವದೋ, ಹಾಗೆ ರಾಜನು ಜನರಿಗೆ ಪೀಡೆಯಾಗದಂತೆ ದ್ರವ್ಯವನ್ನು ಸಂಗ್ರಹಿಸಬೇಕು ಎಂದರ್ಥ. ಆದಿಪದದಿಂದ ನ್ಯಾಯದಿಂದ ದಂಡಾದಿಗಳನ್ನು ಸ್ವೀಕರಿಸಬೇಕು. ಆಕರಾದಿಭಿಃ ಎಂದು ಪದವಿಭಾಗ ಮಾಡಿ ಖನಿಗಳಿಂದ ರತ್ನ ಸುವರ್ಣ(ಚಿನ್ನ) ಅವುಗಳಿಂದ ಸಹಿತವಾಗಿ ಎಂದೂ ಅರ್ಥ ಮಾಡಿರುವರು. ||೧೫,೧೬||

ಬ್ರಾಹ್ಮಣ ಮುಂತಾದವರಿಗೆ ಅನುಕಲ್ಪವನ್ನು, ಆಪತ್ಕಾಲಿಕಧರ್ಮವನ್ನು ಹೇಳುವರು-

**ವಿಪ್ರವೃತ್ತಿಶ್ಚತುರ್ಧೇಯಂ ಶ್ರೇಯಸೀ ಚೋತ್ತರೋತ್ತರಾ ।**
**ಜಘನ್ಯೋ ನೋತ್ತಮಾ ವೃತ್ತಿಮನಾಪದಿ ಭಜೇನ್ನರಃ ॥೧೭॥**

**ಇಯಂ ವಿಪ್ರವೃತ್ತಿಃ** ಈ ಬ್ರಾಹ್ಮಣನ ಜೀವನೋಪಾಯವು ವಾರ್ತಾ ಕೃಷಿ, ಗೋರಕ್ಷೆ, ವಾಣಿಜ್ಯ, ಇವು ಆಪತ್ತು ಬಂದಾಗ ಮಾತ್ರ ಆಶ್ರಯಿಸಬೇಕಾದ ಜೀವನೋಪಾಯಗಳು. ವಿಚಿತ್ರಶಾಲೀನಂ ಅನೇಕ ಕ್ಷೇತ್ರಗಳಿಂದ (ಜಮೀನುಗಳಿಂದ)

ಅನೇಕ ಬಗೆಯ ಧಾನ್ಯಾರ್ಜನೆಯು ಯಾಯಾವರ್ಯಂ ಮನೆ ಮನೆಗಳಿಂದ ಧಾನ್ಯವನ್ನು ಬೇಡುವದು ಶಿಲೋಂಛನಂ ಬೀಸುವ ಕಲ್ಲಿನಲ್ಲಿ ಬಿಟ್ಟ ಸ್ವಲ್ಪ ಪದಾರ್ಥಗಳನ್ನು ಶೇಖರಿಸಿ ತರುವದು. ಅಥವಾ ವಿಚಿತ್ರಶಾಲೀನಂ ಎಂಬುದು ಯಾಯಾವರ್ಯಕ್ಕೆ ವಿಶೇಷಣ. ಅನೇಕ ಬಗೆಯ ಧಾನ್ಯಗಳನ್ನು ಮನೆಯಿಂದ ಬೇಡುವದು ಎಂದರ್ಥ. ಈ ಪಕ್ಷದಲ್ಲಿ ಶೀಲ ಉಂಛನ ಎಂದು ವೃತ್ತಿಗಳು 'ಉಂಛಃ ಕಣಶ ಆದಾನಂ ಕಣಿಶಾದ್ಯಾರ್ಜನಂ ಶೀಲಂ' ಎಂದು ಹೇಳಿದೆ. ಹೀಗೆ **ಚತುರ್ಧಾ** ನಾಲ್ಕು ರೀತಿಯದು. **ಉತ್ತರೋತ್ತರಾ** ಮುಂದೆ ಮುಂದಿನದು **ಶ್ರೇಯಸಿ** ಶ್ರೇಷ್ಠವಾದುದು. ವಿಚಿತ್ರಶಾಲೀನಕ್ಕಿಂತು ಯಾಯವರ್ಯ. ಅದಕ್ಕಿಂತ ಶಿಲೋಂಛನ ಶ್ರೇಯಸ್ಕರ. ಬ್ರಾಹ್ಮಣನ ಆಜ್ಞೆಯಿಂದ ಸ್ತ್ರೀಯರೂ, ವೈಶ್ಯನೂ, ತತ್ವವನ್ನು ತಿಳಿಸುವದು ಧರ್ಮವೆಂದು ಹೇಳಲಾಗಿದೆ. ಕ್ಷತ್ರಿಯ ವೈಶ್ಯರಿಲ್ಲದಿರುವಾಗ ಬ್ರಾಹ್ಮಣನ ಆಜ್ಞೆಯಿಂದ ಶೂದ್ರನೂ ತತ್ವವನ್ನು ತಿಳಿಸಬಹುದೇ ಎಂದರೆ ಹೇಳುತ್ತಾರೆ. **ಜಘನ್ಯಃ** ಕೆಳಗಿನ ವರ್ಗಕ್ಕೆ ಸೇರಿದ **ನರಃ** ಮನುಷ್ಯನು ಕ್ಷತ್ರಿಯನು, ವೈಶ್ಯನು, ಶೂದ್ರನು **ಅನಾಪದಿ** ಆಪತ್ಕಾಲವಿಲ್ಲದಿರುವಾಗ ಅಂದರೆ ಬ್ರಾಹ್ಮಣನಿದ್ದಾಗ ಕ್ಷತ್ರಿಯ ವೈಶ್ಯರಿದ್ದಾಗ **ಉತ್ತಮಾವೃತ್ತಿಂ** ಬ್ರಾಹ್ಮಣ ಸಂಬಂಧಿಯಾದ ಅಧ್ಯಾಪನ,ಯಾಯಾವರ್ಯ, ಮೊದಲಾದ ಜೀವನೋಪಾಯಗಳನ್ನು **ನ ಭಜೇತ್** ಆಶ್ರಯಿಸಬಾರದು.

ವಿಶೇಷ ಃ-ಕ್ಷತ್ರಿಯನು ಬ್ರಾಹ್ಮಣನಿದ್ದಾಗ, ವೈಶ್ಯನು ಬ್ರಾಹ್ಮಣ- ಕ್ಷತ್ರಿರಿದ್ದಾಗ, ಶೂದ್ರನು ಬ್ರಾಹ್ಮಣ,ಕ್ಷತ್ರಿಯ,ವೈಶ್ಯರಿದ್ದಾಗ ತತ್ವಜ್ಞಾನೋಪದೇಶವೆಂಬ ಉತ್ತಮವೃತ್ತಿಯನ್ನು ಮಾಡಬಾರದು.'ಅನಾಪದಿ' ಎಂದು ಹೇಳಿದ್ದರಿಂದ ಬ್ರಾಹ್ಮಣಾದಿ ತ್ರಿವರ್ಣದವರಿಲ್ಲದಿದ್ದಾಗ (ಇದೇ ಆಪತ್ತು) ಬ್ರಾಹ್ಮಣಾನುಜ್ಞೆಯಿಂದ ಕ್ಷತ್ರಿಯನಾಗಲಿ, ವೈಶ್ಯನಾಗಲಿ, ಶೂದ್ರನಾಗಲಿ, ಉತ್ತಮವೃತ್ತಿ ಮಾಡಬಹುದು ಎಂದು ಹೇಳಿದಂತಾಯಿತು. ಅದರಲ್ಲಿಯೂ ಕ್ಷತ್ರಿಯ,ವೈಶ್ಯರು ಅಧ್ಯಾಪನ ಮಾಡಬಹುದು. ಶೂದ್ರನಾಗಲಿ, ವರ್ಣಬಾಹ್ಯನಾಗಲಿ ಅಧ್ಯಾಪನ ಮಾಡುವಂತಿಲ್ಲ. ತ್ರೈವರ್ಣಿಕರಿಲ್ಲದಿರುವಾಗ ಪಾಲನಾದಿಗಳನ್ನು ಮಾಡಬಹುದು. 'ಶ್ರವಣೇ ತ್ರಪುಜತುಭ್ಯಾಂ ಶ್ರೋತ್ರಪರಿಪೂರಣಂ ಅಧ್ಯಾಪನೇ ಜಿಹ್ವಾಚ್ಛೇದಃ ಅರ್ಥಾವಧಾರಣೇ ಹೃದಯವಿದಾರಣಮ್' ಎಂಬ ಶ್ರುತಿ ಮತ್ತು 'ವರ್ಣೇಷ್ವಜ್ಞೇಷ್ವವರ್ಣಸ್ತು ನ ಜ್ಞಾನೀ ಸ್ಯಾತ್ ಕಥಂಚನ । ನಾಗ್ನಿರ್ನಯಜ್ಞಃ ಶೂದ್ರಸ್ಯ ತಥೈವಾಧ್ಯಯನಂ ಕುತಃ । ಕೇವಲೈವ ತು ಶುಶ್ರೂಷಾ ತ್ರಿವರ್ಣಾನಾಂ ವಿಧೀಯತೇ' ಮುಂತಾದ ಪ್ರಮಾಣಗಳಿವೆ.

ರಾಜನನ್ನು ಬಿಟ್ಟು ಬ್ರಾಹ್ಮಣ ಮೊದಲಾದವರಿಗೆಲ್ಲರಿಗೂ ಆಪತ್ಕಾಲದಲ್ಲಿ ಹೇಳಿದ ಎಲ್ಲ ವೃತ್ತಿಗಳಿಂದ ಜೀವನ ನಡೆಸಿದರೂ, ದೋಷವಿಲ್ಲವೆಂದು ಹೇಳುತ್ತಾರೆ-

**ಋತೇ ರಾಜನ್ಯಮಾಪತ್ಸು ಸರ್ವೇಷಾಮಪಿ ಸರ್ವಶಃ ।**
**ಋತಾಮೃತಾಭ್ಯಾಂ ಜೀವೇತ ಮೃತೇನ ಪ್ರಮೃತೇನ ವಾ ॥೧೮॥**

**ರಾಜನ್ಯಂ** ರಾಜನನ್ನು (ಕ್ಷತ್ರಿಯನನ್ನು) **ಋತೇ** ಹೊರತುಪಡಿಸಿ **ಸರ್ವೇಷಾಂ ಅಪಿ** ಎಲ್ಲ ವರ್ಣದವರಿಗೂ **ಸರ್ವಶಃ** ಎಲ್ಲ ವೃತ್ತಿಗಳಿಂದ ಆಪತ್ಕಾಲದಲ್ಲಿ ಜೀವನವು ದೋಷವಲ್ಲ. **ಋತಾಮೃತಾಭ್ಯಾಂ** ಋತ ಅಮೃತಗಳಿಂದ, **ವಾ** ಅಥವಾ **ಮೃತೇನ ಪ್ರಮೃತೇನ** ಮೃತಪ್ರಮೃತಗಳಿಂದ **ಜೀವೇತ** ಜೀವಸಬೇಕು.

ವಿಶೇಷ :- ರಾಜನಿಗೆ ಪ್ರತಿಗ್ರಹ, ಶೂದ್ರನಿಗೆ ಅಧ್ಯಯನಾದಿಗಳನ್ನು ಬಿಟ್ಟು ಉಳಿದ ವೃತ್ತಿಗಳು ವಿಹಿತ. ಬ್ರಾಹ್ಮಣನಿಗೆ ತನ್ನ ವೃತ್ತಿ ನಡೆಯದಿದ್ದಾಗ ಕ್ಷತ್ರಿಯ ವೃತ್ತಿಯಿಂದ ಜೀವನ. ಅದೂ ನಡೆಯದಿದ್ದಾಗ ವೈಶ್ಯವೃತ್ತಿಯಿಂದ. ಇದರಂತೆ ಕ್ಷತ್ರಿಯನ ವಿಷಯ ಬಂದಾಗ ಅದರ ವ್ಯಾವೃತ್ತಿಗಾಗಿ 'ತೇ ರಾಜನ್ಯಂ' ಎಂದು ಹೇಳಿದ್ದು. ಇದು ಸಾಮಾನ್ಯ ಆಪತ್ತಿನ ವಿಷಯ. ವಿಶೇಷ ಆಪತ್ತಿನಲ್ಲಿ ಕ್ಷತ್ರಿಯನೂ ಬ್ರಾಹ್ಮಣವೃತ್ತಿಯಿಂದ ಜೀವಿಸಬಹುದು. ಮಹಾ ಆಪತ್ತಿನಲ್ಲಿ ಬ್ರಾಹ್ಮಣನು ಕ್ಷತ್ರಿಯಶುಶ್ರೂಷಾ ಎಂಬ ಶೂದ್ರವೃತ್ತಿಯಿಂದಲೂ ಜೀವಿಸಬಹುದು. ವೈಶ್ಯನು ಆಪತ್ಕಾಲದಲ್ಲಿ ಶೂದ್ರವೃತ್ತಿಯಿಂದಲೇ ಜೀವಿಸಬೇಕು. 'ಸರ್ವೇಷಾಂ' ಎಂಬುದು ಉತ್ಸರ್ಗಶಾಸ್ತ್ರ, ಶೂದ್ರನು ಆಪತ್ಕಾಲದಲ್ಲಿ ವೈಶ್ಯವೃತ್ತಿ ಅಥವಾ ಬಡಿಗವೃತ್ತಿಯಿಂದ ಜೀವಿಸಬೇಕು. ವೈಶ್ಯವೃತ್ತಿಯಿಂದ ಜೀವಿಸಿದರೂ ಅಧ್ಯಯನ ಮಾಡಬಾರದು. ಮುಂತಾದ ವಿಷಯಗಳನ್ನು ಗೀತಾತಾತ್ಪರ್ಯೋದಾಹೃತವ್ಯಾಸಸ್ಮೃತಿ ಮುಂತಾದವುಗಳಿಂದ ತಿಳಿಯಬಹುದು. ॥೧೮॥

ಬ್ರಾಹ್ಮಣನಿಗೆ ಮಾತ್ರ ಆರು ಜೀವನೋಪಾಯಗಳನ್ನು ಹೇಳುತ್ತಾರೆ-

**ಸತ್ಯಾನೃತಾಭ್ಯಾಂ ಜೀವೇತ ನ ಶ್ವವೃತ್ತ್ಯಾ ಕಥಂಚನ ।**
**ಋತಮುಂಛಶಿಲಂ ಪ್ರೋಕ್ತಮಮೃತಂ ಯದಯಾಚಿತಮ್ ॥೧೯॥**

**ಮೃತಂ ತು ನಿತ್ಯಯಾಂಚಾ ಸ್ಯಾತ್ ಪ್ರಮೃತಂ ಕರ್ಷಣಂ ಸ್ಮೃತಮ್ ।**
**ಸತ್ಯಾನೃತಂ ತು ವಾಣಿಜ್ಯಂ ಶ್ವವೃತ್ತಿರ್ನೀಚಸೇವನಮ್ ॥೨೦॥**

ಸತ್ಯಾನೃತ ಇವುಗಳಿಂದ ಜೀವಿಸಬೇಕು. **ಕಥಂಚನ** ಆಪತ್ತಿನಲ್ಲಾಗಲಿ, ಇಲ್ಲದಾಗಿ ಆಗಲಿ **ಶ್ವವೃತ್ತ್ಯಾ** ನೀಚಸೇವನೆಯಿಂದ **ನ ಜೀವೇತ್** ಜೀವಿಸಬಾರದು. ಮೇಲೆ ಹೇಳಿದವುಗಳು ಸಾಮಯಿಕಸಂಜ್ಞೆಗಳಾದ್ದರಿಂದ ತಾವೇ ಅವುಗಳ ಅರ್ಥ ಹೇಳುವರು. **ಊಂಛಶೀಲಂ** ಊಂಛಶೀಲವೃತ್ತಿಯು **ಋತಂ ಪ್ರೋಕ್ತಂ** ಋತವೆಂದು ಹೇಳಲ್ಪಟ್ಟಿದೆ. **ಯದಯಾಚಿತಂ** ಯಾಚಿಸದೆ ಜೀವಿಸುವದೆನಿದೆಯೋ **ತತ್** ಅದು **ಅಮೃತಂ**

ಅಮೃತವೆನಿಸುವದು **ನಿತ್ಯಯಾಂಚಾ** ಯಾವಾಗಲೂ ಯಾಚಿಸುವದು **ಮೃತಂ** ಮೃತವೆನಿಸುವದು **ಪ್ರಮೃತಂ** ಪ್ರಮೃತವೆಂದರೆ **ಕರ್ಷಣಂ ಸ್ಮೃತಂ** ವಕ್ಕಲುತನ (ಬೇಸಾಯ)**ಸತ್ಯಾನೃತಂ** ನಿಜ ಮತ್ತು ಸುಳ್ಳು ಎಂದರೆ **ವಾಣಿಜ್ಯಂ** ವ್ಯಾಪಾರವು **ನೀಚಸೇವನಂ ಶ್ವವೃತ್ತಿಃ** ತನ್ನಕಿಂತ ಕಡಿಮೆಯವರನ್ನು ಸೇವಿಸುವದು ಶ್ವವೃತ್ತಿಯೆನಿಸುವದು. ।।೧೯,೨೦।।

**ವರ್ಜಯೇತ್ತಾಂ ಸದಾ ವಿಪ್ರೋ ರಾಜನ್ಯಶ್ಚ ಜುಗುಪ್ಸಿತಾಮ್ ।**
**ಸರ್ವವೇದಮಯೋ ವಿಪ್ರಃ ಸರ್ವದೇವಮಯೋ ನೃಪಃ ।।೨೦।।**

**ಜುಗುಪ್ಸಿತಾಂ** ನಿಂದಿತವಾದ **ತಾಂ** ಆ ಶ್ವವೃತ್ತಿಯನ್ನು **ವಿಪ್ರಃ** ಬ್ರಾಹ್ಮಣನು **ರಾಜನ್ಯಶ್ಚ** ರಾಜನೂ **ಸದಾ ವರ್ಜಯೇತ್** ಎಲ್ಲ ಕಾಲದಲ್ಲಿಯೂ (ಆಪತ್ತಿನಲ್ಲಿಯೂ) ಜೀವನೋಪಾಯ ಮಾಡಿಕೊಳ್ಳಬಾರದು. ಅದಕ್ಕೆ ಕಾರಣ **ಸರ್ವವೇದಮಯಃ** ಎಲ್ಲ ವೇದಗಳನ್ನು ತಿಳಿದವನು 'ಸರ್ವಾಃ ದೇವತಾಃ ವೇದವಿದಿ ಬ್ರಾಹ್ಮಣೇ ವಸಂತಿ' ಎಂದು ಶ್ರುತಿ ಇರುವದರಿಂದ, ಸರ್ವದೇವತೆಗಳಿಗೂ ಅಧಿಷ್ಠಾನನು **ನೃಪಃ** ರಾಜನು **ಸರ್ವದೇವಮಯಃ** ಎಲ್ಲ ದೇವತೆಗಳ ಸನ್ನಿಧಾನವುಳ್ಳವನು.

ವಿಶೇಷ ಃ- ಪ್ರಥಮಸ್ಕಂಧದಲ್ಲಿ ಶೃಂಗಿಯು'ನರದೇವನಾಮ್ನಿ ರಥಾಂಗಪಾಣೌ' ಎಂದಿದ್ದಾನೆ. ನಾಲ್ಕನೇಸ್ಕಂಧದ ವೇನನ ಮಾತು 'ವಿಷ್ಣುರ್ವಿರಂಚೋ ಗಿರಿಶೇಂದ್ರೋ ವಾಯುರ್ಯಮೋ ರವಿಃ । ಪರ್ಜನ್ಯೋ ಧನದಃ ಸೋಮಃ ಕ್ಷಿತಿರಗ್ನಿರಪಾಂ ಪತಿಃ । ಏತೇ ಚಾನ್ಯೇ ಚ ವಿಬುಧಾ ಪ್ರಭವೋ ವರಶಾಪಯೋಃ । ದೇಹೇ ತಿಷ್ಠಂತಿ ನೃಪತೇ ಸರ್ವದೇವಮಯೋ ನೃಪಃ' ಎಂದು 'ಸೋಮಾಚ್ಚತಕ್ರತೋ ಸೂರ್ಯಾತ್' ಮುಂತಾಗಿ ವಾಲ್ಮೀಕಿರಾಮಾಯಣದಲ್ಲಿ ಉಕ್ತವಾದ ಪ್ರಮಾಣವಾಕ್ಯಗಳು. ।।೨೦।।

**ಶಮೋ ದಮಸ್ತಪಃ ಶೌಚಂ ಸಂತೋಷಃ ಕ್ಷಾಂತಿರಾರ್ಜವಮ್ ।**
**ದಾನಂ ದಯಾಽಚ್ಯುತಾತ್ಮತ್ವಂ ಸತ್ಯಂ ಚ ಬ್ರಹ್ಮಲಕ್ಷಣಮ್ ।।೨೨।।**

**ಶಮಃ** ಭಗವನ್ನಿಷ್ಠಬುದ್ಧಿಯು **ದಮಃ** ಇಂದ್ರಿಯನಿಗ್ರಹವು **ತಪಃ** ಕೃಚ್ಛ್ರಚಾಂದ್ರಾಯಣಾದಿಗಳು **ಶೌಚಂ** ಶುದ್ಧಿಯು **ಸಂತೋಷಃ** ದೊರೆತದರಲ್ಲಿಯೇ ತೃಪ್ತಿ **ಕ್ಷಾಂತಿಃ** ಕ್ಷಮಾಗುಣವು **ಆರ್ಜವಮ್** ಮನಸ್ಸು,ಮಾತು,ಮೈಗಳಲ್ಲಿ ಏಕರೂಪತೆ **ದಾನಂ** ಸತ್ಪಾತ್ರರಲ್ಲಿ ದ್ರವ್ಯತ್ಯಾಗವು **ದಯಾ** ದುಃಖಿತರಲ್ಲಿ ಕರುಣೆ **ಅಚ್ಯುತಾತ್ಮತ್ವಂ** ಭಗವಂತನಲ್ಲಿ ಮನಸ್ಸು **ಸತ್ಯಂ** ಯಥಾರ್ಥವಚನ (ಸಾಧುಸಹಿತವು) ಇವುಗಳು **ಬ್ರಹ್ಮಲಕ್ಷಣಂ** ಬ್ರಾಹ್ಮಣನ ಲಕ್ಷಣಗಳು. ।।೨೨।।

**ಶೌರ್ಯಂ ವೀರ್ಯಂ ಧೃತಿಸ್ತೇಜಸ್ತ್ಯಾಗ ಆತ್ಮಜಯಃ ಕ್ಷಮಾ ।**
**ಬ್ರಹ್ಮಣ್ಯತಾ ಪ್ರಸಾದಶ್ಚ ರಕ್ಷಾ ಚ ಕ್ಷತ್ರಲಕ್ಷಣಮ್ ॥೨೩॥**

**ಶೌರ್ಯಂ** ಪರಾಕ್ರಮ **ವೀರ್ಯಂ** ಹಿಡಿದ ಕೆಲಸ ಪೂರೈಸುವದು **ಧೃತಿಃ** ಧೈರ್ಯವು **ತೇಜಃ** ಕಾಂತಿಯು **ತ್ಯಾಗಃ** ಔದಾರ್ಯವು **ಆತ್ಮಜಯಃ** ಮನೋನಿಗ್ರಹವು **ಕ್ಷಮಾ** ಅಪರಾಧ ಸಹಿಷ್ಣುತೆ **ಬ್ರಹ್ಮಣ್ಯತಾ** ಬ್ರಹ್ಮ ಮತ್ತು ಬ್ರಾಹ್ಮಣರ ವಿಷಯದಲ್ಲಿ ಸಾಧುತೆ **ಪ್ರಸಾದಶ್ಚ** ಮುಖದಲ್ಲಿ ಪ್ರಸನ್ನತೆ **ರಕ್ಷಾ** ವರ್ಣತ್ರಯ ರಕ್ಷಣವು **ಕ್ಷತ್ರಲಕ್ಷಣಂ** ಕ್ಷತ್ರಿಯನ ಲಕ್ಷಣವು ॥೨೩॥

**ದೇವಗುರ್ವಾರ್ಯಗೋಭಕ್ತಿಸ್ತ್ರಿವರ್ಗಪರಿತೋಷಣಮ್ ।**
**ಆಸ್ತಿಕ್ಯಮುದ್ಯಮೋ ನಿತ್ಯಂ ನೈಪುಣ್ಯಂ ವೈಶ್ಯಲಕ್ಷಣಮ್ ॥೨೪॥**

**ದೇವ** ದೇವತೆಗಳು **ಗುರು** ಗುರುಗಳು **ಆರ್ಯ** ಹಿರಿಯರು **ಗೋ** ಆಕಳು ಇವುಗಳಲ್ಲಿ **ಭಕ್ತಿಃ** ಭಕ್ತಿಯು **ತ್ರಿವರ್ಗಪರಿತೋಷಣಂ** ಧರ್ಮಾರ್ಥಕಾಮಗಳಿಂದ ಶ್ರೀಹರಿಯನ್ನು ಸಂತೋಷಪಡಿಸುವದು **ಆಸ್ತಿಕ್ಯಂ** ಆಸ್ತಿಕ್ಯಬುದ್ಧಿಯು **ನಿತ್ಯಂ ಉದ್ಯಮಃ** ಯಾವಾಗಲೂ ಪ್ರಯತ್ನ (ಉದ್ಯೋಗ)ಶೀಲತೆ **ನೈಪುಣ್ಯಂ** ಮಾತನಾಡುವ ಕೌಶಲ ಇವು **ವೈಶ್ಯಲಕ್ಷಣಂ** ವೈಶ್ಯನ ಲಕ್ಷಣಗಳು. ॥೨೪॥

**ಶೂದ್ರಸ್ಯ ಸನ್ನತಿಃ ಶೌಚಂ ಸೇವಾಸ್ವಾಮಿನ್ಯಮಾಯಯಾ ।**
**ಅಮಂತ್ರಯಜ್ಞೋ ಹ್ಯಸ್ತೇಯಂ ಮೌಢ್ಯಂ ಗೋವಿಪ್ರರಕ್ಷಣಮ್ ॥೨೫॥**

**ಶೂದ್ರಸ್ಯ** ಶೂದ್ರನಿಗೆ **ಸನ್ನತಿಃ ಶೌಚಂ** ನೀರನ್ನು ಮುಟ್ಟುವ ಮಾತ್ರದಿಂದ ಆಚಮನ ಅಥವಾ ಸಂಕಲ್ಪವಿಲ್ಲದೇ ಸ್ನಾನ **ಅಮಾಯಯಾ** ಮೋಸವಿಲ್ಲದೇ **ಸ್ವಾಮಿನಿ** ಯಜಮಾನನಲ್ಲಿ **ಸೇವಾ** ಸೇವೆಯು **ಅಮಂತ್ರಯಜ್ಞಃ** ಮಂತ್ರವಿಲ್ಲದೇ ನಮಸ್ಕಾರದಿಂದಲೇ ಪಂಚಯಜ್ಞ ಮಾಡುವದು **ಅಸ್ತೇಯಂ** ಕಳ್ಳತನ ಮಾಡದಿರುವದು **ಮೌಢ್ಯಂ** ತನಗೆ ತಿಳಿದಿದ್ದರೂ ಜ್ಞಾನಿಗಳ ಎದುರಿಗೆ ನಾನೇ ದೊಡ್ಡವ, ನಾನೆಷ್ಟರವ ಎಂದು ತೋರಿಸುವದು **ಗೋವಿಪ್ರರಕ್ಷಣಂ** ಬ್ರಾಹ್ಮಣ ಮತ್ತು ಆಕಳನ್ನು ರಕ್ಷಿಸುವದು ಲಕ್ಷಣವು.

ವಿಶೇಷ :- 'ಹೃತ್‌ಕಂಠತಾಲುಗಾಭಿಸ್ತು ಯಥಾಸಂಖ್ಯಂ ದ್ವಿಜಾತಯಃ । ಶುದ್ಧೇರನ್ ಸ್ತ್ರೀ ಚ ಶೂದ್ರಶ್ಚ ಸಕೃತ್ ಸ್ಪೃಷ್ಟಾಭಿರಂತತಃ' ಇತಿ ವಚನಾತ್ 'ನಮಸ್ಕಾರೇಣ ಮಂತ್ರೇಣ ಪಂಚಯಜ್ಞಾನ್ನ ಹಾಪಯೇತ್' ಎಂದು ಯಾಜ್ಞವಲ್ಕ್ಯರು ಹೇಳಿರುವರು. ॥೨೫॥

ಸ್ತ್ರೀ ಸಾಮಾನ್ಯಲಕ್ಷಣ ಹೇಳುವರು-

**ಸ್ತ್ರೀಣಾಂ ತು ಪತಿದೇವಾನಾಂ ತಚ್ಛುಶ್ರೂಷಾऽನುಕೂಲತಾ ।**
**ತದ್ಬಂಧುಷ್ವನುವೃತ್ತಿಶ್ಚ ನಿತ್ಯಂ ತದ್ವ್ರತಧಾರಣಮ್ ॥೨೬॥**

**ಪತಿದೇವಾನಾಂ** ಗಂಡನೇ ಪೂಜ್ಯನಾಗಿವುಳ್ಳ **ಸ್ತ್ರೀಣಾಂ** ಹೆಣ್ಣುಮಕ್ಕಳಿಗೆ **ತಚ್ಛುಶ್ರೂಷಾನುಕೂಲತಾ** ಗಂಡನು ಮಾಡುವ ಭಗವಂತನ, ಭಗವದ್ಭಕ್ತರ ಸೇವೆಗೆ ಅನುಕೂಲ ಮಾಡಿಕೊಡುವದು ಅಥವಾ ಅವನ ಸೇವೆಗೆ ಅನುಕೂಲಳಾಗಿರುವದು. **ತದ್ಬಂಧುಷು** ಗಂಡನ ಅಣ್ಣ,ತಮ್ಮ,ತಂದೆ,ತಾಯಿ,ಅಕ್ಕ,ತಂಗಿ ಮುಂತಾದ ದೇಹಸಂಬಂಧಿಗಳಲ್ಲಿ **ಅನುವೃತ್ತಿಃ** ಅನುಸರಣೆಯು **ನಿತ್ಯಂ** ಯಾವಾಗಲೂ **ತದ್ವ್ರತಧಾರಣಂ** ಪಾತಿವ್ರತ್ಯವು ಮತ್ತು ಅವನೇನು ವ್ರತಮಾಡುವನೋ ಅದೇ ತನ್ನ ವ್ರತವಾಗಿರುವದು ಸ್ತ್ರೀಯರ ಧರ್ಮ. ।।೨೬।।

**ಸಮ್ಮಾರ್ಜನೋಪಲೇಪಾಭ್ಯಾಂ ಗೃಹಮಂಡನವರ್ತನೈಃ ।**
**ಸ್ವಯಂ ಚ ಮಂಡಿತಾ ನಿತ್ಯಂ ಪರಿಮೃಷ್ಟಪರಿಚ್ಛದಾ ॥೨೭॥**

**ಸಮ್ಮಾರ್ಜನ** ಕಸಗುಡಿಸುವದು **ಉಪಲೇಪಾಭ್ಯಾಂ** ಗೋಮಯದಿಂದ ಸಾರಿಸುವದು **ಗೃಹಮಂಡನ** ಮನೆಯನ್ನು ಅಲಂಕರಿಸುವದು **ವರ್ತನೈಃ** ಉದ್ವರ್ತನಗಳಿಂದ **ಪರಿಮೃಷ್ಟಪರಿಚ್ಛದಾ** ವಸ್ತ್ರಗಳನ್ನು ಶುದ್ಧಪಡಿಸಿದವಳಾಗಿ **ನಿತ್ಯಂ ಸ್ವಯಂ ಮಂಡಿತಾ** ಯಾವಾಗಲೂ ತಾನು ಅಲಂಕೃತಳಾಗಿ ।।೨೭।।

**ಕಾಮೈರುಚ್ಚಾವಚೈಃ ಸಾಧ್ವೀ ಪ್ರಶ್ರಯೇಣ ದಮೇನ ಚ ।**
**ವಾಕ್ಯೈಃ ಸತ್ಯೈಃ ಪ್ರಿಯೈಃ ಪ್ರೇಮ್ಣಾ ಕಾಲೇ ಕಾಲೇ ಭಜೇತ್ಪತಿಮ್ ॥೨೮॥**

**ಸಾಧ್ವೀ** ಪತಿವ್ರತೆಯು **ಉಚ್ಚಾವಚೈಃ** ಸಣ್ಣ,ದೊಡ್ಡ ಮೊದಲಾದ ಅನೇಕ ರೀತಿಯ **ಕಾಮೈಃ** ಗಂಡನು ಅಪೇಕ್ಷಿಸಿದ ವಿಷಯಗಳಿಂದ **ಪ್ರಶ್ರಯೇಣ** ವಿನಯದಿಂದ **ದಮೇನ** ನಿಗ್ರಹದಿಂದ **ಸತ್ಯೈಃ ಪ್ರಿಯೈಃ ವಾಕ್ಯೈಃ** ಸತ್ಯವಾದ, ಪ್ರಿಯವಾದ ನುಡಿಗಳಿಂದ **ಪ್ರೇಮ್ಣಾ** ಪ್ರೀತಿಯಿಂದ(ಭಕ್ತಿಯಿಂದ)**ಕಾಲೇ ಕಾಲೇ** ಯಾವಾಗಲೂ **ಪತಿಂ ಭಜೇತ್** ಗಂಡನನ್ನು ಸೇವಿಸಬೇಕು. ।।೨೮।।

**ಸಂತುಷ್ಟಾऽಲೋಲುಪಾ ದಕ್ಷಾ ಧರ್ಮಜ್ಞಾ ಪ್ರಿಯಸತ್ಯವಾಕ್ ।**
**ಅಪ್ರಮತ್ತಾ ಶುಚಿಃ ಸ್ನಿಗ್ಧಾ ಪತಿಂ ತ್ವಪತಿತಂ ಭಜೇತ್ ॥೨೯॥**

**ಸಂತುಷ್ಟಾ** ಸಂತೋಷವುಳ್ಳವಳಾಗಿ **ಅಲೋಲುಪಾ** ದುರಭಿಲಾಷೆಯಿಲ್ಲದವಳಾಗಿ **ದಕ್ಷಾ** ಕಾರ್ಯಸಮರ್ಥಳಾಗಿ **ಧರ್ಮಜ್ಞಾ** ಧರ್ಮವನ್ನು ತಿಳಿದವಳಾಗಿ

**ಪ್ರಿಯಸತ್ಯವಾಕ್** ನೆರೆ-ಹೊರೆಯವರೊಡನೆ ಪ್ರಿಯವೂ, ಸತ್ಯವೂ ಆದ ಮಾತನಾಡುವವಳಾಗಿ ಅಥವಾ ಗಂಡನಿಗೆ ಪ್ರಿಯರಾದವರಲ್ಲಿ ಸತ್ಯಮಾತನಾಡುವವಳಾಗಿ ಅಥವಾ **ಪ್ರಿಯಸ್ಯ** ಗಂಡನ **ಯಾಃ ಸತ್ಯಃ** ಬೇರೆ ಹೆಂಡಂದಿರ ವಿಷಯದಲ್ಲಿ **ಅವಾಕ್** ನಿಷ್ಠುರ ಮಾತಾಡದವಳಾಗಿ **ಅಪ್ರಮತ್ತಾ** ತನ್ನ ಕಾರ್ಯಗಳಲ್ಲಿ ಗಮನವುಳ್ಳವಳಾಗಿ **ಶುಚಿಃ** ಶುದ್ಧಳಾಗಿ **ಸ್ನಿಗ್ಧಾ** ಪ್ರೀತಿಯುಳ್ಳವಳಾಗಿ **ಅಪತಿತಂ** ಬ್ರಹ್ಮಹತ್ಯಾದಿ ಪಾತಕರಹಿತನಾದ **ಪತಿಂ** ಗಂಡನ್ನು **ಭಜೇತ್** ಸೇವಿಸಬೇಕು. ।।೨೯।।

**ಯಾ ಪತಿಂ ಹರಿಭಾವೇನ ಭಜೇಚ್ಛ್ರೀರಿವ ತತ್ಪರಾ ।**
**ಹರ್ಯಾತ್ಮನಾ ಹರೇರ್ಲೋಕೇ ಪತ್ಯಾ ಶ್ರೀರಿವ ಮೋದತೇ ।।೩೦।।**

**ಯಾ** ಯಾವ ಸ್ತ್ರೀಯು **ಶ್ರೀಃ ಇವ** ಲಕ್ಷ್ಮೀದೇವಿಯಂತೆ **ತತ್ಪರಾ** ಗಂಡನಲ್ಲಿ ಆಸಕ್ತಳಾಗಿ **ಹರಿಭಾವೇನ** ಪತಿಯಲ್ಲಿ ಶ್ರೀಹರಿಯು ಸನ್ನಿಹಿತನಾಗಿರುವನು ಎಂಬ ಭಾವನೆಯಿಂದ **ಭಜೇತ್** ಪತಿಯನ್ನು ಸೇವಿಸುವಳೋ **ಸಾ** ಅವಳು **ಶ್ರೀರಿವ** ಲಕ್ಷ್ಮೀದೇವಿಯಂತೆ **ಹರೇಃ ಲೋಕೇ** ಶ್ರೀಹರಿಯ ಲೋಕವಾದ ವೈಕುಂಠದಲ್ಲಿ **ಹರ್ಯಾತ್ಮನಾ ಪತ್ಯಾ** ಹರಿಯ ವಿಶೇಷಸನ್ನಿಧಾನವುಳ್ಳ ಗಂಡನೊಡನೆ **ಮೋದತೆ** ಆನಂದಪಡುವಳು **ಹರ್ಯಾತ್ಮನಾ** ಶ್ರೀಹರಿಯ ಸಾರೂಪ್ಯ ಪಡೆದವ ಎಂದೂ ಅರ್ಥ ಮಾಡಿರುವರು **ಶ್ರೀಹರಿಣಾ ಇವ ಮೋದತೇ** ಲಕ್ಷ್ಮೀದೇವಿಯು ಹರಿಯೊಡನೆ ಸಂತೋಷಿಸುವಂತೆ ಸಂತೋಷಿಸುವಳು ಹೀಗೂ ಅನ್ವಯಾರ್ಥ.

ಈ ಶ್ಲೋಕದಲ್ಲಿ 'ಹರಿಭಾವೇನ' ಎಂದರೆ ಹರಿಯಿಂದ ಅಭಿನ್ನನೆಂದು ತಿಳಿದು ಎಂದರ್ಥ ತೋರುವದು. ಅದನ್ನು ಪ್ರಮಾಣದಿಂದ ನಿರಾಕರಿಸುತ್ತ 'ಗುರೋರ್ನಾಮ ನ ಗೃಹ್ಣೀಯಾತ್ ಶಿಷ್ಯೋ ಭಾರ್ಯಾ ಪತೇರಪಿ' ಎಂದು ಪ್ರಸಿದ್ಧವಾದ ಒಂದೇ ಶಾಸ್ತ್ರದಲ್ಲಿ ಹೇಳಿದ ಶಿಷ್ಯರಿಗೆ ಗುರುಗಳಲ್ಲಿ ಮತ್ತು ಪ್ರಸಂಗಸಂಗತಿಯಿಂದ ಶೂದ್ರಾದಿಗಳಿಗೆ ಬ್ರಾಹ್ಮಣರಲ್ಲಿ ಇರಬೇಕಾದ ಹರಿಭಾವವನ್ನು ಪ್ರಮಾಣದಿಂದಲೇ ಹೇಳುವರು-

**... ತಾತ್ಪರ್ಯ ...**

**ಹರಿರಸ್ಮಿನ್ ಸ್ಥಿತ ಇತಿ ಸ್ತ್ರೀಣಾಂ ಭರ್ತರಿ ಭಾವನಾ ।**
**ಶಿಷ್ಯಾಣಾಂ ಚ ಗುರೌ ನಿತ್ಯಂ ಶೂದ್ರಾಣಾಂ ಬ್ರಾಹ್ಮಣಾದಿಷು ।**
**ಭೃತ್ಯಾನಾಂ ಸ್ವಾಮಿನಿ ತಥಾ ಹರಿಭಾವ ಉದಾಹೃತಃ ।। ಇತಿ ಚ ।।**

ಸ್ತ್ರೀಯರಿಗೆ ಇವನಲ್ಲಿ ಶ್ರೀಹರಿಯ ಇರುವನು ಎಂದು, ಗಂಡನಲ್ಲಿ ಶ್ರೀಹರಿ ಸನ್ನಿಧಾನದ ಭಾವನೆಯು ಹರಿಭಾವನೆಯು, ಅದರಂತೆ ಶಿಷ್ಯರಿಗೆ ಗುರುಗಳಲ್ಲಿ ಹರಿಯಿರುವನೆಂದು, ಶೂದ್ರರಿಗೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಶ್ರೀಹರಿಯಿರುವನು

ಎಂದು, ಸೇವಕರಿಗೆ ಯಜಮಾನನಲ್ಲಿ ಶ್ರೀಹರಿಯಿರುವನೆಂದು ತಿಳಿದು ಸೇವಿಸುವದೇ ಹರಿಭಾವನೆ. ಅದೇ ಮೋಕ್ಷಸಾಧನವೆಂದು ಭಾವ. ।।೩೦।।

ಸಂಕರಜಾತಿಯವರಾದ ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯನಿಂದ ಜನಿಸಿದ ಪ್ರತಿಲೋಮಜಾತಿ, ಬ್ರಾಹ್ಮಣನಿಂದ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದ ಅನುಲೋಮಜಾತಿ, ಕ್ಷತ್ರಿಯನಿಂದ ವೈಶ್ಯಸ್ತ್ರೀಯಲ್ಲಿ ಹುಟ್ಟಿದ ಅನುಲೋಮಜಾತಿ ವೈಶ್ಯನಿಂದ ಶೂದ್ರಸ್ತ್ರೀಯಲ್ಲಿ ಹುಟ್ಟಿದ ಅನುಲೋಮಜಾತಿಯವರಿಗೆ ಜೀವನೋಪಾಯವೇನೆಂದು ಹೇಳುವರು-

**ವೃತ್ತಿಃ ಸಂಕರಜಾತೀನಾಂ ತತ್ತತ್ಕುಲಕೃತಾ ಭವೇತ್ ।**
**ಅಚೋರಾಣಾಮಪಾಪಾನಾಮಂತ್ಯಜಾಂತೇಽವಸಾಯಿನಾಮ್ ।।೩೧।।**

**ಅಚೋರಾಣಾಂ** ಕಳ್ಳರಲ್ಲದ ಅಥವಾ ಯಾರಿಗೆ ಯಾವುದು ವಿಹಿತವೋ, ಅದನ್ನು ಮಾಡದಿರುವದು ಚೌರ್ಯ. ಹಾಗೆ ಮಾಡದಿರುವ ಅಂದರೆ ವಿಹಿತವನ್ನು ಮಾಡುವ ಎಂದರ್ಥ **ಅಪಾಪಾನಾಂ** ಪಾಪಿಗಳಲ್ಲದ **ಅಂತ್ಯಜ** ಶೂದ್ರನಿಂದ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ ಚಂಡಾಲರು **ಅಂತೇ ಅವಸಾಯಿನಾಂ** ಚಂಡಾಲರಿಂದ ಹುಟ್ಟಿದವರು ಅಥವಾ ಗ್ರಾಮದ ಕೊನೆಗೆ ವಾಸಿಸುವರು. ಇಂತಹ ಸಂಕರಜಾತಿಯವರಿಗೆ **ತತ್ತತ್ಕುಲಕೃತಾ ಭವೇತ್** ಅವರವರ ವಂಶದಲ್ಲಿ ನಡೆದು ಬಂದ ಉದ್ಯೋಗವು **ವೃತ್ತಿಃ** ಜೀವನೋಪಾಯವು.

ವಿಶೇಷ ಃ- ಅನುಲೋಮ ಪ್ರತಿಲೋಮಜಾತಿಗಳೆಂದು ಮುಖ್ಯವಾಗಿ ಎರಡು ಸಂಕರಜಾತಿಗಳು. ಉತ್ತಮವರ್ಣದವರಿಂದ ಅಧಮವರ್ಣದ ಸ್ತ್ರೀಯಲ್ಲಿ ಹುಟ್ಟಿದ್ದು ಅನುಲೋಮಜಾತಿ. ಅಧಮವರ್ಣದವರಿಂದ ಉತ್ತಮವರ್ಣದ ಸ್ತ್ರೀಯಲ್ಲಿ ಜನಿಸಿದ್ದು ಪ್ರತಿಲೋಮಜಾತಿ. ಬ್ರಾಹ್ಮಣನಿಗೆ ಮೂರು ಅನುಲೋಮ ಜಾತಿಗಳು ಕ್ಷತ್ರಿಯನಿಗೆ ಎರಡು ಅನುಲೋಮ ಜಾತಿ, ಒಂದು ಪ್ರತಿಲೋಮ ಜಾತಿ. ವೈಶ್ಯನಿಗೆ ಒಂದು ಅನುಲೋಮ ಜಾತಿ, ಎರಡು ಪ್ರತಿಲೋಮ ಜಾತಿ. ಶೂದ್ರನಿಗೆ ಮೂರು ಪ್ರತಿಲೋಮ ಜಾತಿಗಳು. ಹೀಗೆ ಒಟ್ಟು ೧೨ ಜಾತಿಗಳು. ಇವುಗಳಲ್ಲಿ ಪರಸ್ಪರಭಿನ್ನ ಜಾತಿಗಳಲ್ಲಿ ಮತ್ತು ವರ್ಣದವರಲ್ಲಿ ಹುಟ್ಟಿದ ಜಾತಿಗಳು.ಅವುಗಳಿಂದ ಹುಟ್ಟಿದ್ದು ಹೀಗೆ ಸಂಕರಜಾತಿಗಳು ಬಹಳವಾಗಿರುವವು. ಅಂಬಷ್ಠ, ನಿಷಾದ, ಪಾರಶರ ಮುಂತಾದ ಹೆಸರುಗಳನ್ನು ಶಾಸ್ತ್ರಾಂತರದಿಂದ ತಿಳಿಯಬೇಕು. ಅಂಬಷ್ಠ ಮೊದಲಾದವರಿಗೆ ಅಧ್ಯಯನ ಹೊರತು ಮಿಕ್ಕ ಸಂಸ್ಕಾರಗಳನ್ನು ಆಯಾ ವಂಶಕ್ಕೆ ತಕ್ಕಂತೆ ಹೇಳಬೇಕು. ಅಂತ್ಯಜರು ರಜಕ ಮೊದಲಾದ ಏಳು ಜಾತಿಗಳು ಅವರಿಂದ ಹುಟ್ಟಿದ ಪುಲ್ಕಸ, ಮತಂಗ ಮೊದಲಾದವರು ಅಂತೇವಸಾಯಿಗಳು. ಇವರಿಗೆ ಅವರವರ ಕುಲಕ್ಕೆ

ವಿಹಿತವಾದದ್ದೇ ಧರ್ಮ. ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು ಸೂತನೆನಿಸುವನು. ವೈಶ್ಯನಿಂದ ಹುಟ್ಟಿದವನು ವೈದೇಹಿಕನೆನಿಸುವನು. ಶೂದ್ರನಿಂದ ಚಂಡಾಲನು ಎಲ್ಲ ವರ್ಣದಿಂದ ನಿಂದಿತನು. ಇದಕ್ಕೆ ಪ್ರಮಾಣಗಳು 'ವಿಪ್ರಾನ್ಮೂರ್ಧಾವಸಿಕ್ತಸ್ತ್ರೀಜಾತೋಽಂಬಷ್ಟ'ಇತ್ಯಾದಿಕಾ । ರಜಕಾದಿಸಪ್ತಕಾರ-ವಸ್ತ್ವಂತ್ಯಜಾಃ । 'ರಜಕಶ್ಚರ್ಮಕಾರಶ್ಚ ನಡಜೋ ಬುರು ಏವ ಚ ಕೈವರ್ತಮೇದಭಿಲ್ಲಾಶ್ಚ ಸಪ್ತೈತೇ ಹ್ಯಂತ್ಯಜಾಃ ಸ್ಮೃತಾಃ । ಬ್ರಾಹ್ಮಣ್ಯಾಂಕ್ಷತ್ರಿಯಾತ್ ಸೂತೋ ವೈಶ್ಯಾತ್ ವೈದೇಹಿಕಸ್ತಥಾ । ಶೂದ್ರಾಜ್ಜಾತಸ್ತು ಚಂಡಾಲಃ ಸರ್ವವರ್ಣಬಹಿಷ್ಕೃತಃ ।' ಮುಂತಾಗಿ ।।೩೧।।

ಆ ಆ ವರ್ಣದವರಿಗೆ ತಮ್ಮ ತಮ್ಮ ಕರ್ತವ್ಯವೆಂದು ನಿಶ್ಚಿತವಾದ ಧರ್ಮಾನುಷ್ಠಾನದಿಂದ ಅದರ ಫಲವಾಗುವದು ಎಂದು ಹೇಳುವರು-

**ಪ್ರಾಯಃ ಸ್ವಭಾವವಿಹಿತೋ ನೃಣಾಂ ಧರ್ಮೋ ಯುಗೇ ಯುಗೇ ।**
**ವೇದದೃಗ್ಭಿಃ ಸ್ಮೃತೋ ರಾಜನ್ ಪ್ರೇತ್ಯ ಚೇಹ ಚ ಶರ್ಮಕೃತ್ ।।೩೨।।**

**ರಾಜನ್** ಧರ್ಮರಾಜನೇ **ಸ್ವಭಾವವಿಹಿತಃ** ಸಾತ್ವಿಕಾದಿ ಸ್ವಭಾವಕ್ಕೆ ತಕ್ಕಂತೆ ಆ ಆ ವರ್ಣಾಶ್ರಮಗಳಿಗೆ ವಿಹಿತವಾದ **ವೇದದೃಗ್ಭಿಃ** ವೇದದ್ರಷ್ಟಾರರಾದ ಋಷಿಗಳಿಂದ **ಸ್ಮೃತಃ** ಸ್ಮೃತಿಗ್ರಂಥಗಳಲ್ಲಿ ಹೇಳಿದ **ಧರ್ಮಃ** ಧರ್ಮವು **ಯುಗೇ ಯುಗೇ** ಪ್ರತಿಯುಗದಲ್ಲಿಯೂ **ನೃಣಾಂ** ಜನರಿಗೆ **ಪ್ರಾಯಃ** ರಾಗಾದಿಗಳಿಲ್ಲದೇ ಹರಿಭಕ್ತಿಯಿಂದ ಕೂಡಿದಾಗ ಮಾತ್ರ **ಪ್ರೇತ್ಯ** ಪರಲೋಕದಲ್ಲಿ ಇರುವವರಿಗೂ **ಇಹ ಚ** ಈ ಲೋಕದಲ್ಲಿರುವವರಿಗೂ **ಶರ್ಮಕೃತ್** ಅಪೇಕ್ಷಿತ ಎಲ್ಲ ಪುರುಷಾರ್ಥಗಳಿಗೂ ಕಾರಣವಾಗಿ ಸುಖಕಾರಣವು. ಇದರಿಂದ ರಾಗಾದಿಗಳಿದ್ದರೆ ಸುಖಕಾರಣವಲ್ಲವೆಂದು ತಿಳಿಸಿರುವರು. 'ಸ್ಮೃತಃ' ಎಂದುದರಿಂದ ಸ್ಮೃತಿಯಲ್ಲಿ ವಿಸ್ತರಿಸಿರುವದರಿಂದ ಇಲ್ಲಿ ಹೇಳಿಲ್ಲವೆಂದೂ ತಿಳಿಸಿರುವರು. ।।೩೨।।

ಹಿಂದೆ ತಿಳಿಸಿದ ಸುಖವು ದುಃಖದಿಂದ ಕೂಡಿದ್ದಲ್ಲ,ಕಿಂತು ಮುಕ್ತಿಯಲ್ಲಿ ಅದು ಅನುವೃತ್ತವಾಗುವುದು. ಭಕ್ತಿಸಹಿತವಾದ ಧರ್ಮದಿಂದ ಲಭ್ಯ ಆಗುವದು ಎಂದು ಹೇಳುವರು-

**ವೃತ್ತ್ಯಾ ಸ್ವಭಾವಕೃತಯಾ ವರ್ತಮಾನಃ ಸ್ವಕರ್ಮಣಿ ।**
**ಹಿತ್ವಾ ಸ್ವಭಾವಜಂ ಕರ್ಮ ಶನೈರ್ನಿರ್ಗುಣತಾಮಿಯಾತ್ ।।೩೩।।**

**ಸ್ವಭಾವಕೃತಯಾ** ತನ್ನ ಸ್ವರೂಪದಿಂದ ಪ್ರೇರಿತವಾದ ಸ್ವರೂಪಕ್ಕೆ ತಕ್ಕಂತೆ ಶ್ರೀಹರಿಯಿಂದ ಮಾಡಿಸಲ್ಪಟ್ಟ, ಸಾತ್ವಿಕಾದಿ ಸ್ವಭಾವದಿಂದ ಪೂರ್ಣವಾದ, ತನ್ನ

ಜಾತಿಗೆ ತಕ್ಕ **ವೃತ್ತ್ಯಾ** ಭಕ್ತಿಯಿಂದ ಅನುಷ್ಠಿತವಾದ ಧರ್ಮದಿಂದ **ಸ್ವಕರ್ಮಣಿ** ತನಗೆ ವಿಹಿತವಾದ ಕರ್ಮದಲ್ಲಿ **ವರ್ತಮಾನಃ** ಇರುವ ಮನುಷ್ಯನು **ಶನೈಃ** ಬಹುಜನ್ಮಗಳ ಕೊನೆಯಲ್ಲಿ **ಸ್ವಭಾವಜಂ ಕರ್ಮ** ತನ್ನ ಸ್ವರೂಪಕ್ಕನುಗುಣವಾಗಿ ಅನುಷ್ಠಿತವಾದ ಸಕಾಮವಾಗಿ ಮಾಡಿದ ಕರ್ಮದಿಂದ ಬಂದ ಪುಣ್ಯ,ಪಾಪಗಳನ್ನು **ಹಿತ್ವಾ** ಕಳೆದುಕೊಂಡು **ನಿರ್ಗುಣತಾಂ** ಮುಕ್ತಿಯನ್ನು **ಇಯಾತ್** ಹೊಂದುವನು.

ವಿಶೇಷ :- 'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' ಎಂಬ ಶ್ರುತಿಯಂತೆ ಜ್ಞಾನಪೂರ್ವಕ ಅನುಷ್ಠಾನ ಮಾಡಿದ ಧರ್ಮವು ನಿತ್ಯಾನಂದಾವಿರ್ಭಾವ ರೂಪವಾದ ಪುರುಷಾರ್ಥಕ್ಕೆ ಕಾರಣವಾಗುವದು. 'ಯದಪ್ಯನೇವಂವಿತ್ ಮಹತ್ಪುಣ್ಯಂ ಕರೋತಿ ತದ್ಧಾಸ್ಯಾಂ ಕ್ಷೀಯತ ಏವ' ಎಂಬ ಶ್ರುತಿಯಂತೆ ಭಗವಂತನ ಮತ್ತು ಅವನ ಭಕ್ತರ ದ್ವೇಷದಿಂದ ಕೂಡಿದ ಪ್ರವೃದ್ಧವಾದ ಅಧರ್ಮವು ನಿತ್ಯದುಃಖಾನುಭವರೂಪವಾದ ಪುರುಷಾರ್ಥಕ್ಕೆ (ಅಸ್ಮನ್ಮುಕ್ತಿಗೆ) ತಮೋಯೋಗ್ಯರಿಗೆ ಕಾರಣವಾಗುವದು. 'ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ' ಮುಂತಾಗಿ ಪ್ರತಿನಿತ್ಯ ಸ್ವರ್ಗಾದಿಪ್ರಾರ್ಥನಾ- ರೂಪಗುಣದಿಂದ ಕೂಡಿದ ಧರ್ಮವು ಅನಿತ್ಯವಾದ ಸತ್ವಗುಣ ನಿಮಿತ್ತಸುಖರೂಪವಾದ ಪುರುಷಾರ್ಥಕ್ಕೆ ಕಾರಣವಾಗುವದು.

ಇದರಿಂದ ಎಲ್ಲ ಜಾತಿಯವರಿಗೂ ವಿಹಿತವಾದ ಕರ್ಮವು ನಿಷ್ಕಾಮವಾಗಿ ಅನುಷ್ಠಾನ ಮಾಡಿದ್ದೇ ಆದರೆ ಮೋಕ್ಷಕ್ಕೆ ಸಾಧನವಾಗುವದು ಎಂದು ಹೇಳಿದಂತಾಯಿತು. ।।೩೩।।

ಹಿಂದಿನ ಶ್ಲೋಕವು 'ಮೋಕ್ಷಕ್ಕಾಗಿ ಸ್ವಧರ್ಮಾನುಷ್ಠಾನ ಮಾಡಬೇಕು' ಎಂದು ಹೇಳಿತು. ಅದಕ್ಕಾಗಿ ವಿರಕ್ತಿಯನ್ನು ಸಂಪಾದಿಸಬೇಕು. ಅದಕ್ಕಾಗಿ ವಿಷಯಸೇವನೆಯನ್ನು ಬಿಡಬೇಕು ಎಂದು ಹೇಳಲು ವಿಷಯಗಳ ಅತಿಸೇವನೆಯೂ ವಿರಕ್ತಿಯನ್ನು ಹುಟ್ಟಿಸುವದು. ವಿಷಯೋಪರಮವೇಕೆ ಬೇಕು ಅತಿಯಾಗಿ ವಿಷಯಸೇವನೆ ಮಾಡುವವನಿಗೆ ಮನಸ್ಸು ತೃಪ್ತವಾಗುವದಿಲ್ಲ ಎಂದು ದೃಷ್ಟಾಂತಸಹಿತವಾಗಿ ಎರಡು ಶ್ಲೋಕಗಳಿಂದ ಪ್ರತಿಪಾದಿಸುವರು-

**ಉಪ್ಯಮಾನಂ ಮುಹುಃ ಕ್ಷೇತ್ರಂ ಸ್ವಯಂ ನಿರ್ವೀರ್ಯತಾಮಿಯಾತ್ ।**
**ನ ಕಲ್ಪತೇ ಪುನಃ ಸೂತ್ಯೈ ಉಪ್ತಂ ಬೀಜಂ ಚ ನಶ್ಯತಿ ।।೩೪।।**

**ಏವಂ ಕಾಮಾಶಯಂ ಚಿತ್ತಂ ಕಾಮಾನಾಮತಿಸೇವಯಾ ।**
**ವಿರಜ್ಯೇತ ಯಥಾ ರಾಜನ್ ನಾಗ್ನಿವತ್ ಕಾಮಬಿಂದುಭಿಃ ।।೩೫।।**

**ಹೇ ರಾಜನ್** ಧರ್ಮರಾಜನೇ **ಮುಹುಃ** ಮತ್ತೆ ಮತ್ತೆ **ಉಪ್ಯಮಾನಂ** ಬೀಜವನ್ನು ಬಿತ್ತಲ್ಪಟ್ಟ **ಕ್ಷೇತ್ರಂ** ಭೂಮಿಯು **ಸ್ವಯಂ** ತಾನೇ **ನಿರ್ವೀರ್ಯತಾಂ** ಬಿತ್ತಿದ ಬೀಜವನ್ನು ಚೆನ್ನಾಗಿ ಬೆಳೆಸುವ ಸಾಮರ್ಥ್ಯವಿಲ್ಲದಿರುವಿಕೆಯನ್ನು **ಇಯಾತ್** ಹೊಂದುವದು **ಪುನಃ** ಮತ್ತೆ **ಸೂತ್ಯೈ** ಅಂಕುರೋತ್ಪತ್ತಿಗೆ **ನ ಕಲ್ಪತೇ** ಸಮರ್ಥವಾಗುವದಿಲ್ಲ. ಅಷ್ಟೇ ಅಲ್ಲ **ಉಪ್ತಂ ಬೀಜಂ ಚ ನಶ್ಯತಿ** ಬಿತ್ತಿದ ಬೀಜವೂ ಬೇರೆಡೆ ಬಿತ್ತಲು ಬರದಂತಾಗಿ ನಾಶವೂ ಆಗುವದು. **ಯಥಾ** ಹೇಗೆ **ಏವಂ** ಅದರಂತೆ **ಕಾಮಾಶಯಂ** ವಿಷಯಗಳಲ್ಲೇ ಆಸಕ್ತವಾದ **ಚಿತ್ತಂ** ಮನಸ್ಸು **ಕಾಮಾನಾಂ ಅತಿಸೇವಯಾ** ವಿಷಯಗಳ ಬಹಳ ಸೇವನೆಯಿಂದ **ನಿರ್ವೀರ್ಯತಾಂ** ವಿಷಯ ಔದಾಸೀನ್ಯ ಕಾರಣತೆಯನ್ನು **ನ ಇಯಾತ್** ಹೊಂದಲಾರದು. ಆದ್ದರಿಂದ **ವಿರಜ್ಯೇತ** ವಿಷಯಗಳಲ್ಲಿ ವಿರಕ್ತನಾಗಬೇಕು ಎಂದು. 'ನ ಜಾತು ಕಾಮಃ ಕಾಮಾನಾಂ ಉಪಬೋಗೇನ ಶಾಮ್ಯತಿ । ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ'ಎಂದು ಭಾರತದಲ್ಲಿ ಹೇಳಿದಂತೆ ವ್ಯತಿರೇಕ ಅನ್ವಯವನ್ನು ತಿಳಿಸುವರು. **ಅಗ್ನಿವತ್ ಕಾಮಬಿಂದುಭಿಃ** ತನಗೆ ಉತ್ತೇಜಕವಾದ ಕಾಮವಿಷಯತುಪ್ಪದ ಬಿಂದುಗಳಿಂದ ಅಗ್ನಿಯು ಬೆಳೆಯುವುದೇ ಹೊರತು ಶಾಂತವಾಗುವದಲ್ಲ. ಅದರಂತೆ ಮನಸ್ಸು ವಿಷಯಾಧೀನವಾಗಿ ವಿರಕ್ತಿ ಪಡೆಯಲಾರದು ವಿಶೇಷವಾಗಿ ಆಸಕ್ತವಾಗುವದು. ಅದರಂತೆ ವಿಷಯಾಸಕ್ತವಾದ ಮನಸ್ಸು ವಿಷಯಗಳ ಅತಿಯಾದ ಅನುಭವದಿಂದ ಮತ್ತೆ ವಿಷಯಾಸಕ್ತಿ ಹುಟ್ಟದಂತೆ ಆಗಲಾರದು. ಹೇಗೆ ಸೌಭರಿ ಮುಂತಾದವರು ಅನೇಕ ದೇಹಗಳಿಂದ ಭೋಗಮಾಡಬೇಕಾದ್ದನ್ನು ಏಕಕಾಲದಲ್ಲಿ ಯೋಗ ಪ್ರಭಾವದಿಂದ ಸ್ವೀಕರಿಸಿದ ದೇಹಸಮೂಹದಿಂದ ಉಪಭೋಗಮಾಡಿದರು, ಅಗ್ನಿಯು ಹೇಗೆ ತುಪ್ಪದಿಂದ ಶಾಂತವಾಗುವದಿಲ್ಲವೋ ಹಾಗೆ ಶಾಂತವಾಗಲಾರದು. ಹೇಗೆ ಭೂಮಿಯು ಸಾಮರ್ಥ್ಯ ಕಳೆದುಕೊಳ್ಳುವದೋ, ಹಾಗೆ ಮನಸ್ಸು **ನಿರ್ವೀರ್ಯತಾಂ** ಮತ್ತೆ ಸಂಸಾರಾನಾಪಾದಕತೆಯನ್ನು ಹೊಂದುವದು ಎಂದು. ಎರಡು ಅನ್ವಯದೃಷ್ಟಾಂತ ಮಾಡಬಹುದು. ಈ ಪಕ್ಷದಲ್ಲಿ ಅತಿ ಶಬ್ದವು ಸರಿಯಾಗಿ ಹೊಂದುವದು. 'ನ ಜಾತು' ಎಂಬ ವಾಕ್ಯವು ನಿಧಾನವಾಗಿ ಕಾಮಭೋಗ ಮಾಡುವವರಿಗೆ ಹೇಳಿದ್ದು. ಕಾರಣ ವಿರುದ್ಧವಲ್ಲ. ಅಧಿಕಾರಿಭೇದದಿಂದ ಹೇಳಿದ್ದು. ।।೩೪,೩೫।।

**ಯಸ್ಯ ಯಲ್ಲಕ್ಷಣಂ ಪ್ರೋಕ್ತಂ ಪುಂಸೋ ವರ್ಣಾದಿವ್ಯಂಜಕಮ್ ।**
**ಯದ್ಯನ್ಯತ್ರಾಪಿ ದೃಶ್ಯೇತ ತತ್ತೇನೈವ ವಿನಿರ್ದಿಶೇತ್ ।।೩೬।।**

**ಯಸ್ಯ ಪುಂಸಃ** ಯಾವ ಪುರುಷನಿಗೆ **ವರ್ಣಾದಿವ್ಯಂಜಕಂ** ಬ್ರಾಹ್ಮಣ ಮುಂತಾದ ವರ್ಣಗಳ ಮತ್ತು ಆಶ್ರಮಗಳ ಸೂಚಕವಾದ **ಯತ್ ಲಕ್ಷಣಂ** ಯಾವ ಶಮದಮ

ಮುಂತಾದ ಅಸಾಧಾರಣಧರ್ಮಗಳು **ಪ್ರೋಕ್ತಂ** ಶಾಸ್ತ್ರದಲ್ಲಿ ಹೇಳಿದೆಯೋ **ತತ್** ಆ ಲಕ್ಷಣವು **ಯದಿ** ಒಂದು ವೇಳೆ **ಅನ್ಯತ್ರ** ಜಾತ್ಯಾ ಬ್ರಾಹ್ಮಣಾದಿಗಳಾಗದವರಲ್ಲಿ **ದೃಶ್ಯೇತ್** ಕಂಡು ಬಂದಲ್ಲಿ **ತತ್** ಆ ಬ್ರಾಹ್ಮಣೇತರ ವಸ್ತುವನ್ನು **ತೇನೈವ ವಿನಿರ್ದಿಶೇತ್** ಬ್ರಾಹ್ಮಣಾದಿಗಳೆಂದೇ ಕರೆಯಬೇಕು. ಬ್ರಾಹ್ಮಣನ ಧರ್ಮವಿರುವವನು ಬ್ರಾಹ್ಮಣ ಹೊರತು ಜಾತಿಯಿಂದ ಅಲ್ಲವೆಂದು ಅಭಿಪ್ರಾಯ. ||೩೬||

**|| ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ಏಕಾದಶೋಽಧ್ಯಾಯಃ ||**

**|| ಶ್ರೀಕೃಷ್ಣಾರ್ಪಣಮಸ್ತು ||**

★★★



# ಅಥ ದ್ವಾದಶೋಽಧ್ಯಾಯಃ

**ಸಾರಾಂಶ**

ಬ್ರಹ್ಮಚಾರಿಯು ಗುರುಕುಲದಲ್ಲಿದ್ದು ಗುರುಗಳ ಸೇವೆಯನ್ನು ಮಾಡುತ್ತಾ ತನ್ನ ವರ್ಣಾಶ್ರಮಕ್ಕೆ ವಿಹಿತವಾದ ಸಂಧ್ಯಾವಂದನೆ,ಗಾಯತ್ರೀಜಪ,ವೇದಾಧ್ಯಯನವನ್ನು ಮಾಡಬೇಕು. ಗುರುಕುಲವಾಸ ಮುಗಿದ ಮೇಲೆ ಗುರುದಕ್ಷಿಣೆ ನೀಡಿ ಅವರ ಅನುಮತಿಯನ್ನು ಪಡೆದು ವಿವಾಹವನ್ನು ಮಾಡಿಕೊಳ್ಳಬೇಕು. ವಿವಾಹ ಸಂಸ್ಕಾರವನ್ನು ಇಚ್ಛಿಸದವನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಬಹುದು ಅಥವಾ ಇದ್ದ ನೈಷ್ಠಿಕಬ್ರಹ್ಮಚರ್ಯವನ್ನೇ ಮುಂದುವರಿಸಬಹುದು.

ವಾನಪ್ರಸ್ಥನು ಕಾಡಿನಲ್ಲಿವಾಸವಾಗಿದ್ದು ಹಣ್ಣುಹಂಪಲಗಳನ್ನು ತಿನ್ನುತ್ತಾ ಬದುಕಿಗಾಗಿ ಗುಹೆಗಳನ್ನು ಆಶ್ರಯಿಸಬೇಕು. ಗೃಹಸ್ಥನಾದವನು ಕನಿಷ್ಠ ಒಂದು ವರ್ಷವಾದರೂ ವಾನಪ್ರಸ್ಥನಿಯಮದಲ್ಲಿ ಇರಬೇಕು. ಶರೀರವು ಕರ್ಮಾನುಷ್ಠಾನಕ್ಕೆ ಅಸಮರ್ಥವೆನಿಸಿದರೆ ಉಪವಾಸದಿಂದ ಲಯಚಿಂತನೆಯನ್ನು ಮಾಡುತ್ತ ಶರೀರವನ್ನು ತ್ಯಜಿಸಬೇಕು.

★★★

ವರ್ಣಗಳ ಧರ್ಮಗಳನ್ನು ಹೇಳಿ ಮುಗಿಸಿ ಆಶ್ರಮಧರ್ಮಗಳನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ. ಅದರಲ್ಲಿಯೂ ಬ್ರಹ್ಮಚರ್ಯಾಶ್ರಮಧರ್ಮವನ್ನು ಮೊದಲಿಗೆ ತಿಳಿಸುತ್ತಾರೆ-

**ನಾರದ ಉವಾಚ**

**ಬ್ರಹ್ಮಚಾರೀ ಗುರುಕುಲೇ ವಸೇದ್ ದಾಂತೋ ಗುರೋರ್ಹಿತಮ್ ।**
**ಆಚರೇದ್ ದಾಸವನ್ನೀಚೋ ಗುರೌ ಸುದೃಢಸೌಹೃದಃ ॥೧॥**

**ಬ್ರಹ್ಮಚಾರೀ** ಬ್ರಹ್ಮಚಾರಿಯು **ದಾಂತಃ** ಇಂದ್ರಿಯಗಳ ನಿಗ್ರಹವುಳ್ಳವನಾಗಿ **ಗುರೋಃ ಹಿತಂ ಆಚರನ್** ಗುರುಗಳಿಗೆ ಮನೋ,ವಾಕ್,ಕಾಯಗಳಿಂದ ಹಿತಮಾಡುವವನಾಗಿ **ದಾಸವತ್** ಸೇವಕನಂತೆ(ಗರ್ಭದಾಸವತ್ ಗುಲಾಮನಂತೆ) **ನೀಚಃ** ನಮ್ರನಾಗಿ **ಗುರೌ** ಗುರುಗಳಲ್ಲಿ **ಸುದೃಢಸೌಹೃದಃ** ಅತ್ಯಂತ ದೃಢವಾದ ಸ್ನೇಹ(ಭಕ್ತಿ)ವುಳ್ಳವನಾಗಿ **ಗುರುಕುಲೇ** ಗುರುಗಳ ಮನೆಯಲ್ಲಿ **ವಸೇತ್** ವಾಸಮಾಡಬೇಕು.

ವಿಶೇಷ ೞ- 'ಗುರೋಃ ಹಿತಂ' ಎಂಬಲ್ಲಿ ಷಷ್ಠೀಪ್ರಯೋಗದಿಂದ ಇವನು ಹಿತಮಾಡದಿದ್ದರೂ ಅವರಿಗೆ ಹಿತಸಂಪಾದನೆ ಸಾಮರ್ಥ್ಯ ಇದೆ. ಇವನಿಗೆ ಪುಣ್ಯ ಬರುವದಕ್ಕಾಗಿ ಹಿತಮಾಡುವದು ಎಂದು ತಿಳಿಸುವರು. ಇಲ್ಲವಾದರೆ 'ತದರ್ಥಾರ್ಥಬಲಿಹಿತಸುಖರಕ್ಷಿತೈಃ' ಎಂಬುದರಿಂದ ತಿಳಿಸಲ್ಪಟ್ಟ ಚತುರ್ಥಿಯು ಬರಬೇಕಿತ್ತು. ಮೂರುಸಲ ಗುರು ಶಬ್ದ ಹೇಳಿದ್ದು ಮುಂದೆ ಹೇಳುವ ಧರ್ಮಗಳಲ್ಲಿ ಒಂದಾದರೂ ಕಡಿಮೆಯಾದರೆ ಆಶ್ರಮಧರ್ಮ ಲೋಪವಾಗುತ್ತದೆ. ಇದನ್ನು ಸರ್ವಥಾ ಬಿಡಬಾರದು ಎಂದು ತಿಳಿಸಲು ಎಂದು ತಿಳಿಯಬೇಕು. ।।೧।।

**ಸಾಯಂ ಪ್ರಾತರುಪಾಸೀತ ಗುರ್ವಗ್ನ್ಯರ್ಕಸುರೋತ್ತಮಾನ್ ।**
**ಸಂಧ್ಯೇ ಉಭೇ ಚ ಯತವಾಗ್ ಜಪನ್ ಬ್ರಹ್ಮಸಮಾಹಿತಃ ।।೨।।**

**ಪ್ರಾತಃ** ಪ್ರಾತಃಕಾಲದಲ್ಲಿ **ಸಾಯಂ** ಸಾಯಂಕಾಲದಲ್ಲಿ **ಗುರು** ಉಪದೇಶಕರನ್ನು **ಅಗ್ನಿ** ಅಗ್ನಿಕಾರ್ಯಕ್ಕಾಗಿ ಅಗ್ನಿಯನ್ನು **ಅರ್ಕಂ** ಸೂರ್ಯನನ್ನೂ, ವರುಣನನ್ನೂ **ಸುರೋತ್ತಮಾನ್** ದಿಗ್ದೇವತೆಗಳನ್ನು **ಉಭೇ ಸಂಧ್ಯೇ** ಎರಡೂ ಸಂಧ್ಯಾದೇವತೆಗಳನ್ನು **ಯತವಾಕ್** ವಾಜ್ ನಿಯಮದಿಂದ **ಸಮಾಹಿತಃ** ಸಮಾಧಾನ ಮನಸ್ಸಿನಿಂದ **ಬ್ರಹ್ಮ ಜಪನ್** ಗಾಯತ್ರೀಯನ್ನು ಜಪಿಸುತ್ತ **ಉಪಾಸೀತ** ಉಪಾಸಿಸಬೇಕು. ।।೨।।

**ಛಂದಾಂಸ್ಯಧೀಯೀತ ಗುರೋರಾಹೂತಶ್ಚ ಸುಯಂತ್ರಿತಃ ।**
**ಉಪಕ್ರಮೇಽವಸಾನೇ ಚ ಚರಣೌ ಶಿರಸಾ ನಮೇತ್ ।।೩।।**

**ಸುಯಂತ್ರಿತಃ** ಅತ್ಯಂತ ನಮ್ರನಾಗಿ **ಆಹೂತಃ** ಗುರುಗಳಿಂದ ಕರೆಯಲ್ಪಟ್ಟವನಾಗಿ **ಗುರೋಃ** ಗುರುಗಳಿಂದ **ಛಂದಾಂಸಿ** ವೇದಗಳನ್ನು **ಅಧೀಯೀತ** ಅಧ್ಯಯನ ಮಾಡಬೇಕು **ಉಪಕ್ರಮೇ** ಪಾಠದ ಪ್ರಾರಂಭದಲ್ಲಿ **ಅವಸಾನೇ ಚ** ಮುಗಿದಾಗಲೂ **ಗುರೋಃ ಚರಣೌ** ಗುರುಗಳ ಪಾದಗಳನ್ನು **ಶಿರಸಾ ನಮೇತ್** ತಲೆಬಾಗಿ ನಮಸ್ಕರಿಸಬೇಕು. ।।೩।।

**ಮೇಖಲಾಜಿನವಾಸಾಂಸಿ ಜಟಾದಂಡಕಮಂಡಲೂನ್ ।**
**ಬಿಭೃಯಾದುಪವೀತಂ ಚ ದರ್ಭಪಾಣಿರ್ಯಥೋದಿತಮ್ ॥೪॥**

**ಮೇಖಲಾ** ಮೌಂಜಿ(ಹುಲ್ಲಿನ ಉಡದಾರ) **ಅಜಿನ** ಕೃಷ್ಣಾಜಿನ **ವಾಸಾಂಸಿ** ಹೊತ್ತು ಕೊಳ್ಳುವ ಬಟ್ಟೆ ಇವುಗಳನ್ನು **ಜಟಾ** ಜಟೆಯನ್ನು, ಕಮಂಡಲುವನ್ನು, ದಂಡವನ್ನು **ಉಪವೀತಂ** ಜನಿವಾರವನ್ನು **ಯಥೋದಿತಂ** ಶಾಸ್ತ್ರದಲ್ಲಿ ಹೇಳಿದಂತೆ **ಬಿಭೃಯಾತ್** ಧರಿಸಬೇಕು **ಧರ್ಭಪಾಣಿಃ** ಪವಿತ್ರವನ್ನು ಇಟ್ಟು ಕೊಂಡವನಾಗಿ 'ಸಮಿತ್‌ಪಾಣಿಃ ಶ್ರೋತ್ರಿಯಂ' ಮುಂತಾಗಿ ಹೇಳಿದಂತೆ ಬ್ರಾಹ್ಮಣನಿಗೆ ಪಲಾಶದಂಡ (ಮುತ್ತಲದಂಡಗಳನ್ನು)ಎಂದು ಹೇಳಿದಂತೆ ಧರಿಸಬೇಕು. ॥೪॥

**ಸಾಯಂ ಪ್ರಾತಃ ಚರೇದ್ ಭೈಕ್ಷ್ಯಂ ಗುರವೇ ತನ್ನಿವೇದಯೇತ್ ।**
**ಭುಂಜೀತ ಯದ್ಯನುಜ್ಞಾತೋ ನೋಚೇದುಪವಸೇತ್ ಕ್ವಚಿತ್ ॥೫॥**

**ಪ್ರಾತಃ** ಬೆಳಿಗ್ಗೆ **ಸಾಯಂ** ಸಾಯಂಕಾಲ **ಭೈಕ್ಷಂ ಚರೇತ್** ಭಿಕ್ಷೆ ಬೇಡಬೇಕು **ತತ್** ಅದನ್ನು **ಗುರವೇ ನಿವೇದಯೇತ್** ಗುರುಗಳಿಗೆ ಒಪ್ಪಿಸಬೇಕು **ಯದಿ ಅನುಜ್ಞಾತಃ** ಅಪ್ಪಣೆ ಕೊಟ್ಟರೆ **ಭುಂಜೀತ** ಉಣ್ಣಬೇಕು **ನೋ ಚೇತ್** ಇಲ್ಲವಾದರೆ **ಕ್ವಚಿತ್** ಸಾಯಂಕಾಲವೋ, ಪ್ರಾತಃಕಾಲವೋ **ಉಪವಸೇತ್** ಉಪವಾಸವಿರಬೇಕು.

ವಿಶೇಷ :-'ಕ್ವಚಿತ್' ಎಂಬುದರಿಂದ ಅದೂ ಬಹಳ ಮಾಡಬಾರದು ಎಂದೂ ಹೇಳುವರು. ಏಕೆಂದರೆ ಇದೇ ಉತ್ತರ 'ನ ಚೈಕಾಂತಂ ಅನಶ್ನತಃ' ಎಂದಿರುವದರಿಂದ ಬಹಳ ದಿನ ಉಪವಾಸ ಮಾಡಿದರೆ **ಚಿತ್** ಜ್ಞಾನವು ಕ್ವ ಹೇಗೆ ಬಂದೀತು. ಆದ್ದರಿಂದ ಕೆಲವೊಮ್ಮೆ ಎಂದರ್ಥ. ॥೫॥

**ಸುಶೀಲೋ ಮಿತಭುಗ್ ದಕ್ಷಃ ಶ್ರದ್ದಧಾನೋ ಜಿತೇಂದ್ರಿಯಃ ।**
**ಯಾವದರ್ಥಂ ವ್ಯವಹರೇತ್ ಸ್ತ್ರೀಷು ಸ್ತ್ರೀನಿರ್ಜಿತೇಷು ಚ ॥೬॥**

**ಸುಶೀಲಃ** ಒಳ್ಳೆಯ ನಡತೆಯವನು **ಮಿತಭುಕ್** ಮಿತವಾಗಿ ಊಟ ಮಾಡುವವನು **ದಕ್ಷಃ** ಸಮರ್ಥನು **ಶ್ರದ್ದಧಾನಃ** ಆಸ್ತಿಕ್ಯಬುದ್ಧಿಯುಳ್ಳವನು **ಜಿತೇಂದ್ರಿಯಃ** ಇಂದ್ರಿಯ ನಿಗ್ರಹವುಳ್ಳವನೂ (**ಭವೇತ್** ಆಗಬೇಕು) **ಚ** ಮತ್ತು **ಸ್ತ್ರೀಷು** ಸ್ತ್ರೀಯರಲ್ಲಿ **ಸ್ತ್ರೀನಿರ್ಜಿತೇಷು** ಸ್ತ್ರೀವ್ಯಾಮೋಹವುಳ್ಳ ಪುರುಷರಲ್ಲಿಯೂ **ಯಾವದರ್ಥಂ ವ್ಯವಹರೇತ್** ಎಷ್ಟು ತನ್ನ ಪ್ರಯೋಜನವೋ ಅಥವಾ ಗುರುಗಳ ಪ್ರಯೋಜನವೋ ಅಷ್ಟು ಮಾತ್ರ ವ್ಯವಹರಿಸಬೇಕು. (ಮಾತನಾಡಬೇಕು) ॥೬॥

**ವರ್ಜಯೇತ್ ಪ್ರಮದಾಗಾಥಾಮಗೃಹಸ್ಥೋ ಬೃಹದ್ವ್ರತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತ್ಯಪಿ ಯತೇರ್ಮನಃ ॥೭॥**

**ಅಗೃಹಸ್ಥಃ** ಗೃಹಸ್ಥನಲ್ಲದ, ಬ್ರಹ್ಮಚಾರಿ, ವಾನಪ್ರಸ್ಥ, ಸನ್ಯಾಸೀ, ಈ ಮೂರು ಆಶ್ರಮದವರು **ಬೃಹದ್ವ್ರತಃ** ಸ್ತ್ರೀ ಸೌಂದರ್ಯಾದಿಗಳನ್ನು ನೋಡುವದೇ ಮುಂತಾದವನ್ನು ಬಿಡುವದೆಂಬ ಮಹಾನಿಯಮವುಳ್ಳವರಾಗಿ **ಪ್ರಮದಾಗಾಥಾಂ** ಹೆಂಗಸರ ವಿಷಯಕ ಮಾತುಗಳನ್ನು **ವರ್ಜಯೇತ್** ಬಿಡಬೇಕು ಇದಕ್ಕೆ ಕಾರಣವನ್ನು ಹೇಳುತ್ತಾರೆ **ಪ್ರಮಾಥೀನಿ** ಮನಸ್ಸನ್ನು ಕ್ಷೋಭೆಗೊಳಿಸುವ **ಇಂದ್ರಿಯಾಣಿ** ಇಂದ್ರಿಯಗಳು **ಯತೇಃ ಅಪಿ ಮನಃ** ಇಂದ್ರಿಯನಿಗ್ರಹವುಳ್ಳ ಯತಿಯ ಮನಸ್ಸನ್ನು **ಹರಂತಿ** ಸ್ತ್ರೀಯರ ಕಡೆಗೆ ಎಳೆಯುತ್ತವೆ. ಆದ್ದರಿಂದ ಅವರೊಡನೆ ಮಾತಾಡುವದು, ನೋಡುವದು, ಮುಟ್ಟುವದನ್ನು ಮಾಡಬಾರದು. ।।೭।।

**ಕೇಶಪ್ರಸಾಧನೋನ್ಮರ್ದಸ್ನಪನಾಭ್ಯಂಜನಾದಿಕಮ್ ।**
**ಗುರುಸ್ತ್ರೀಭಿರ್ಯುವತಿಭಿಃ ಕಾರಯೇನ್ನಾತ್ಮನೋ ಯುವಾ ।।೮।।**

**ಯುವಾ**(ತರುಣ)ಯುವಕನಾದ ಬ್ರಹ್ಮಚಾರಿಯು ಎಂಟುವರ್ಷಕ್ಕೆ ಉಪನಯನ. ಅನಂತರ ಹನ್ನೆರಡು ವರ್ಷ ಅಧ್ಯಯನ. ಅನಂತರ ಒಂದು ವರ್ಷಸ್ನಾತಕ ವ್ರತ ಹೀಗಿದೆ. ಆದ್ದರಿಂದ ಕ್ರಮವಾಗಿ ತಾರುಣ್ಯ ಬಂದಿರುವದು **ಆತ್ಮನಃ** ತನ್ನ **ಕೇಶಪ್ರಸಾಧನ** ದಂತದ ಹಣಿಗೆಯಿಂದ ತಲೆಕೂದಲನ್ನು ಹಿಕ್ಕುವದು **ಉನ್ಮರ್ದ** ಮೈತಿಕ್ಕುವದು **ಸ್ನಪನ** ಕೇವಲ ನೀರಿನಿಂದ ಸ್ನಾನಮಾಡಿಸುವದು **ಅಭ್ಯಂಜನಾದಿಕಂ** ಎಣ್ಣೆ ಹಚ್ಚಿ ಎರಿಸಿಕೊಳ್ಳುವದು ಇವೇ ಮೊದಲಾದ ಕಾರ್ಯಗಳನ್ನು **ಯುವತಿಭಿಃ** ಯೌವ್ವನವಂತರಾದ **ಗುರುಸ್ತ್ರೀಭಿಃ** ಗುರುಗಳ ಹೆಂಡತಿ ಮಗಳು ಮುಂತಾದವರಿಂದ **ನ ಕಾರಯೇತ್** ಮಾಡಿಸಿಕೊಳ್ಳಬಾರದು.

ವಿಶೇಷ ಃ- ಕೇಶಪ್ರಸಾಧನವೆಂದು ಹೇಳಿದ್ದರಿಂದ ಜಟೆಯ ನಿಯಮವಿಲ್ಲವೆಂದು ಸೂಚಿತವಾಗುವದು. ಸಂಸ್ಕಾರವಿಲ್ಲದ ಕೂದಲೇ ಜಟೆಯಂದರೆ ಇಲ್ಲಿ ಸಂಸ್ಕಾರ (ಹಿಕ್ಕುವದು)ನಿಷೇಧಿಸಿದ್ದರಿಂದ ಅದರ ಪ್ರಸಕ್ತಿ ಇದೆ ಎಂದಂತಾಯಿತು. ಗುರುಸ್ತ್ರೀ ಸಾಮಾನ್ಯವಾಗಿ ಮಾನ್ಯಳಾದ್ದರಿಂದ ಅವಳಿಂದ ಇವುಗಳನ್ನು ಮಾಡಿಸಬಾರದು. 'ತರುಣೀ ಯುವತಿಃ ಸಮಾ' ಎಂದು ಅಮರ. ಗಂಡನೊಡನೆ ಸೇರುವವಳು ಯುವತಿ ಎನಿಸುವಳು. ।।೮।।

ಏಕೆ ಇವೆಲ್ಲ ಮಾಡಬಾರದು ಎಂದರೆ ಹೇಳುವರು-

**ನನ್ವಗ್ನಿಃ ಪ್ರಮದಾ ನಾಮ ಘೃತಕುಂಭಃ ಪುಮಾನತಃ ।**
**ಸುತಾಮಪಿ ರಹೋ ಜಹ್ಯಾದನ್ಯದಾ ಯಾವದರ್ಥಕೃತ್ ।।೯।।**

**ಯತಃ** ಏಕೆಂದರೆ **ಪ್ರಮದಾ ನಾಮ** ಹೆಣ್ಣು ಎಂಬುದು **ಅಗ್ನಿಃ ನನು** ಬೆಂಕಿಯಷ್ಟೇ **ಪುಮಾನ್** ಗಂಡಸು **ಘೃತಕುಂಭಃ** ತುಪ್ಪದ ಕೊಡವು ಅಂದರೆ ಅಗ್ನಿಸ್ಪರ್ಶದಿಂದ ತುಪ್ಪ ಕರಗುವದನ್ನು ಹೇಗೆ ತಪ್ಪಿಸಲಾಗದೋ ಹಾಗೆ ಹೆಂಗಸಿನ ಸ್ಪರ್ಶದಿಂದ ಗಂಡಸು ಮೋಹಗೊಳ್ಳುವದನ್ನು ತಪ್ಪಿಸಲಾಗುವದಿಲ್ಲವೆಂದು ಭಾವ. ಕೈಮುತ್ಯನ್ಯಾಯವನ್ನು ಹೇಳಲು ಮತ್ತೊಂದು ನಿಷೇಧ ಹೇಳುವರು **ಸುತಾಂ ಅಪಿ** ಮಗಳನ್ನೂ ಸಹ **ರಹಃ** ಏಕಾಂತದಲ್ಲಿ **ಜಹ್ಯಾತ್** ಬಿಡಬೇಕು ಅಂದರೆ ರಹಸ್ಯದಲ್ಲಿ ಅವಳೊಡನೆ ಇರಬಾರದು. **ಅನ್ಯದಾ** ಬಹಿರಂಗದಲ್ಲಿಯೂ ಕೂಡ **ಯಾವದರ್ಥಕೃತ್** ಪ್ರಯೋಜನಕ್ಕೆ ಎಷ್ಟೋ ಅಷ್ಟೇ ವ್ಯವಹರಿಸಬೇಕು. ಇದು ಗೃಹಸ್ಥನಿಗೆ ಹೇಳಿದ ಮಾತು ಮಿಕ್ಕವರಿಗೆ ಮಗಳ ಪ್ರಸಕ್ತಿ ಇಲ್ಲ. ॥೯॥

ಬಂಧನಿವೃತ್ತಿಗಾಗಿ ಭಗವದರ್ಪಣಬುದ್ಧಿಯಿಂದ ನಿವೃತ್ತಧರ್ಮಾನುಷ್ಠಾನ ಮಾಡಬೇಕೆಂದು ಹೇಳುತ್ತಾರೆ. ಆದರೆ ಆ ಬಂಧವೇ ಸುಳ್ಳಾದ್ದರಿಂದ ತಾನಾಗಿಯೇ ಹೋಗುತ್ತದೆ ಕಾರಣ ನಿವೃತ್ತಧರ್ಮವನ್ನು ವಿಧಿಸಬೇಕಾಗಿಲ್ಲವೆಂದು ಆಶಂಕಿಸಿ, ಈಶ್ವರನ ಇಚ್ಛೆಯಿಂದ ಬಂದಿರುವ ಬಂಧವು ಸುಳ್ಳಾಗಲು ಸಾಧ್ಯವಿಲ್ಲ. ಸತ್ಯಸೃಷ್ಟಿಮಾಡಲು ಅಶಕ್ತರಾದವರು ಸುಳ್ಳು ಸೃಷ್ಟಿಮಾಡುವರು. ಇವನಾದರೂ ಸಮರ್ಥ ಕಾರಣ ಇವನಿಂದ ಸೃಷ್ಟವಾದ ಬಂಧ ಸತ್ಯವೇ. ಯಾವನ ಇಚ್ಛೆಯಂತೆ ಯಾವನಿಗೆ ಬಂಧಬಂದಿದೆಯೋ ಅವನ ಇಚ್ಛೆಯಿಂದಲೇ ಅವನ ಬಂಧ ಪರಿಹಾರವಾಗುವದು ಲೋಕದಲ್ಲಿ ಕಂಡಿದೆ. ಅದರಂತೆ ಈಶ್ವರನ ಪ್ರಸಾದದಿಂದ ಈಶ್ವರಕೃತಬಂಧದ ನಿವೃತ್ತಿಯಾಗುವದರಿಂದ ಅವನ ಪ್ರಸಾದಕ್ಕೆ ಕಾರಣವಾದ ನಿವೃತ್ತಿಧರ್ಮಾನುಷ್ಠಾನ ವಿಧಿಸಲ್ಪಟ್ಟಿದೆ. ಇಲ್ಲದಿದ್ದರೆ ಬಂಧದಿಂದ ಬಿಡುಗಡೆಯೇ ಇಲ್ಲವಾಗುವದು ಎಂಬ ಅಭಿಪ್ರಾಯದಿಂದ ಬಂಧವು ಈಶ್ವರೇಚ್ಛೆಯಿಂದ ಬಂದದ್ದು ಎಂದು ಹೇಳುತ್ತಾರೆ-

**ಕಲ್ಪಯೇದಾತ್ಮನೋ ಯಾವದಾಭಾಸಮಿದಮೀಶ್ವರಃ ।**
**ದ್ವೈತಂ ತಾವನ್ನ ವಿರಮೇತ್ತತೋ ಹ್ಯಸ್ಯ ವಿಪರ್ಯಯಃ ॥೧೦॥**

**ಈಶ್ವರಃ** ಸತ್ಯಸೃಷ್ಟಿಮಾಡಲು ಸಮರ್ಥನಾದ ಶ್ರೀಹರಿಯು **ಆತ್ಮನಃ** ಜೀವನಿಗೆ **ಇದಂ** ಈ **ಆಭಾಸಂ** ಯಥಾರ್ಥಜ್ಞಾನದಂತೆ ತೋರುವ ಅಜ್ಞಾನವನ್ನು (ಬಂಧವನ್ನು) **ಯಾವತ್** ಎಷ್ಟು ಕಾಲ **ಕಲ್ಪಯೇತ್** ಇಟ್ಟಿರುವನೋ **ತಾವತ್** ಅಲ್ಲಿಯ ವರೆಗೆ **ದ್ವೈತಂ** ಅಯಥಾರ್ಥಜ್ಞಾನವು ಬಂಧವು **ನ ವಿರಮೇತ್** ಹೋಗುವದಿಲ್ಲ **ತತಃ** ಆ ಅಜ್ಞಾನದಿಂದ **ಅಸ್ಯ** ಜೀವನಿಗೆ **ವಿಪರ್ಯಯಃ** ಬಂಧವು ಮುಂದುವರೆಯುವದು ಆದ್ದರಿಂದ ಪರಮಾತ್ಮನನ್ನು ಪ್ರಸನ್ನೀಕರಿಸಿಕೊಳ್ಳುವದಕ್ಕಾಗಿ ನಿವೃತ್ತಿಧರ್ಮದ ವಿಧಾನವೆಂದು ಭಾವ.

ಈ ಶ್ಲೋಕದಲ್ಲಿ ಎಲ್ಲಿಯವರೆಗೆ ಈಶ್ವರನು ಜೀವನಿಗೆ ತನಗೆ ದ್ವೈತ ಅಂದರೆ ಭೇದವನ್ನು ಆಭಾಸಂ ಮಿಥ್ಯಾ ಆದುದದನ್ನು ತಿಳಿಸುವನೋ ಅಲ್ಲಿಯವರೆಗೆ ದ್ವೈತ ಹೋಗುವದಿಲ್ಲ. ಯಾವ ಭೇದಜ್ಞಾನದಿಂದ ಬಂಧವು ಜೀವನಿಗೆ ವಿಪರ್ಯಯಃ ದುಃಖಾದಿಗಳು ಆಗಿವೆ. ಅದ್ವೈತಜ್ಞಾನದಿಂದ ವಿಪರ್ಯಯಃ ವಿಪರೀತ ಅಂದರೆ ಸುಖಪ್ರದಾಯಕ. ಹೀಗೆ ಅದ್ವೈತಜ್ಞಾನ ಮೋಕ್ಷಸಾಧನವೆಂದು ಅನ್ಯಥಾ ತೋರುವದು ಕಾರಣ ಅದನ್ನು ಪರಿಹರಿಸಲು ಅದ್ವೈತಜ್ಞಾನ ವಿಪರೀತವಾದುದು. ದ್ವೈತಜ್ಞಾನವಾದ್ದರಿಂದ ಕ್ರಮದಿಂದ ಪ್ರಮಾಣದಲ್ಲಿ ಮೊದಲು ಅದ್ವೈತವನ್ನು ತಿಳಿಸುವರು-

**... ತಾತ್ಪರ್ಯ ...**

**ಬಹುತ್ವೇನೈವ ವಸ್ತೂನಾಂ ಯಥಾರ್ಥಜ್ಞಾನಮುಚ್ಯತೇ ।**
**ಅದ್ವೈತಜ್ಞಾನಮಿತ್ಯೇತತ್ ದ್ವೈತಜ್ಞಾನಂ ತದನ್ಯಥಾ ॥**
**ಯಥಾಜ್ಞಾನಂ ತಥಾ ವಸ್ತು ಯಥಾ ವಸ್ತು ತಥಾ ಮತಿ: ।**
**ನೈವ ಜ್ಞಾನಾರ್ಥಯೋರ್ಭೇದಸ್ತತ ಏಕತ್ವವೇದನಮ್ ॥ ಇತಿ ಚ ॥**

ಅನೇಕವಾಗಿರುವ ವಸ್ತುಗಳನ್ನು ಅನೇಕವೆಂದು ತಿಳಿಯುವದು. ಒಂದೇ ಇರುವ ವಸ್ತುವನ್ನು ಒಂದೇ ಎಂದು ತಿಳಿಯುವದು ಯಥಾರ್ಥಜ್ಞಾನ. ಇದ್ದುದನ್ನು ಇದ್ದಂತೆ ತಿಳಿಸಿದೆ. ಜ್ಞಾನ ಮತ್ತು ಪ್ರಕಾರಗಳಿಗೆ ವ್ಯತ್ಯಾಸವಿಲ್ಲ ಕಾರಣ ಇದನ್ನು ಅದ್ವೈತ (ಅವಿರುದ್ಧ)ಜ್ಞಾನವೆನ್ನುವರು. ಬಹುವಾದ ವಸ್ತುವನ್ನು ಒಂದು ಎಂದು ಒಂದನ್ನು ಬಹು ಎಂದು ತಿಳಿಯುವದು ಅಯಥಾರ್ಥಜ್ಞಾನ. ಇದರಲ್ಲಿ ಜ್ಞಾನದಲ್ಲಿ ತೋರಿದ ಪ್ರಕಾರಕ್ಕೂ ವಸ್ತುವಿನಲ್ಲಿರುವ ಪ್ರಕಾರಕ್ಕೂ ವಿರೋಧವಿರುವದರಿಂದ ದ್ವೈತಜ್ಞಾನ(ವಿರುದ್ಧಜ್ಞಾನ) ವೆನಿಸುವದು. ದ್ವಿತ್ವ ಎಂದರೆ ವಿರುದ್ಧತ್ವ ಅದರಿಂದ ಇತ ಕೂಡಿದ್ದು ದ್ವಿತ ಅದೇ ದ್ವೈತವೆಂದು ತಂತ್ರಮಾಲೆಯಲ್ಲಿ ಹೇಳಿದೆ. ॥೧೦॥

ಹಿಂದಿನ ಶ್ಲೋಕದಲ್ಲಿ ಹೇಳಿದ ಧರ್ಮಗಳು ಬ್ರಹ್ಮಚಾರಿಗೆ ಮಾತ್ರವೇ ಬೇರೆ ಆಶ್ರಮದವರಿಗೂ ಉಂಟೇ! ಬ್ರಹ್ಮಚಾರಿಗೆ ಮಾತ್ರವೆಂದರೆ ಬೇರೆಯವರಿಗೂ ಕೆಲವು ಧರ್ಮಗಳು ಇರುವದರಿಂದ ಅತಿವ್ಯಾಪ್ತಿ ದೋಷ ಬರುವದು. ಇತರ ಆಶ್ರಮಗಳಿಗೂ ಉಂಟು ಎಂದರೆ ಬ್ರಹ್ಮಚಾರಿಗಳಿಗೆ ಎಂದು ಪ್ರತ್ಯೇಕವಾಗಿ ಹೇಳಿದ್ದು ಅನುಪಪನ್ನವಾಗುವದು ಎಂದರೆ ಅತಿದೇಶನ್ಯಾಯದಿಂದ ಬೇರೆ ಆಶ್ರಮದವರಿಗೂ ಅವರವರಿಗೆ ಸಂಭವಿಸುವಷ್ಟು ಉಂಟೆಂದು ಹೇಳುತ್ತಾರೆ-

**ಏತಚ್ಚಾನ್ಯದ್ ಗೃಹಸ್ಥಸ್ಯ ಸಮಾಮ್ನಾತಂ ಯತೇರಪಿ ।**
**ಗುರುವೃತ್ತಿರ್ವಿಕಲ್ಪೇನ ಗೃಹಸ್ಥಸ್ಯರ್ತುಗಾಮಿನಃ ॥೧೧॥**

**ಏತತ್** ಬ್ರಹ್ಮಚಾರಿಗೆಂದು ಹೇಳಿದ ಕೆಲವು ಧರ್ಮಗಳು **ಅನ್ಯಚ್ಚ** ಮುಂದೆ ಹೇಳುವ ಮಕ್ಕಳನ್ನು ಪಡೆಯುವದು, ಯಜ್ಞ ಮಾಡುವದು, ಅತಿಥಿಪೂಜೆ ಮುಂತಾದ ಧರ್ಮಗಳು **ಗೃಹಸ್ಥಸ್ಯ** ಗೃಹಸ್ಥನಿಗೆ **ಸಮಾಮ್ನಾತಂ** ಶ್ರುತಿಸ್ಮೃತಿಗಳಲ್ಲಿ ಹೇಳಲ್ಪಟ್ಟಿವೆ. **ಯತೇಃ ಅಪಿ** ಗೃಹಸ್ಥನಿಗೆ ಅಷ್ಟೇ ಅಲ್ಲ ಸನ್ಯಾಸಿಗೂ ಮೇಲೆ ಹೇಳಿದವುಗಳಲ್ಲಿ ಸಂಭವಿಸುವ ಧರ್ಮಗಳು ಮುಂದೆ ಹೇಳುವ ಪ್ರಣವಜಪ, ಲಯನ್ಯಾಸ ಮೊದಲಾದವು ಶ್ರುತಿಸ್ಮೃತಿ ವಿಹಿತವಾಗಿವೆ **ಋತುಗಾಮಿನಃ** ಪ್ರತಿಋತುಕಾಲದಲ್ಲಿ ಹೆಂಡತಿಯನ್ನು ಹೊಂದುವ ಗೃಹಸ್ಥನಿಗೆ **ಗುರುವೃತ್ತಿಃ** ಗುರುಕುಲವಾಸವು **ವಿಕಲ್ಪೇನ ಭವೇತ್** ವ್ಯವಸ್ಥಿತ ವಿಲಕಲ್ಪದಿಂದ ಆಗುವದು. ಅಂದರೆ ಕೆಲವರಿಗೆ ಉಂಟು ಕೆಲವರಿಗೆ ಇಲ್ಲ ಎಂದು ಹೇಳಲ್ಪಟ್ಟಿದೆ. ಸಂಭವಿಸುವಷ್ಟು ಎಂದದ್ದರಿಂದ ಬ್ರಹ್ಮಚರ್ಯೇ ಭಿಕ್ಷಾಚಾರಣೆ ಗೃಹಸ್ಥನಿಗಿಲ್ಲವೆಂದು ತಿಳಿಸಿರುವರು. 'ಋತುಗಾಮಿನಃ' ಎಂದುದರಿಂದ ಸ್ತ್ರೀಗಮನವು ಗೃಹಸ್ಥನಿಗೆ ನಿಷಿದ್ಧವಲ್ಲವೆಂದು ಸಿದ್ಧವಾಗುವದು. ಇದರಿಂದ ಬೇರೆಯಾಗಿ ಹೇಳಿದ್ದು ಸರಿ ಎಂದಾಯಿತು. ಅಗ್ನಿಕಾರ್ಯಾದಿಗಳು ಯತಿಗೆ ಇಲ್ಲ. ಋತುಗಾಮಿತ್ವ ಹೇಳಿದ್ದರಿಂದ ಗುರುಕುಲವಾಸವಿಲ್ಲವೆಂದು ತಿಳಿಸುವರು. ||೧೧||

ಪಂಚಯಜ್ಞವನ್ನಾಚರಿಸುವ ಗೃಹಸ್ಥನಿಗೂ ವ್ರತಸ್ಥನಾದಾಗ ಬ್ರಹ್ಮಚಾರಿಯಂತೆ ಇವುಗಳನ್ನು ಬಿಡಬೇಕೆಂದು ಹೇಳುವರು-

**ಅಂಜನಾಭ್ಯಂಜನೋನ್ಮರ್ದಸ್ತ್ರ್ಯವಲೇಪಾಮಿಷಂ ಮಧು ।**
**ಸ್ರಗ್ಗಂಧಲೇಪಾಲಂಕಾರಾಂಸ್ತ್ಯಜೇಯುರ್ಯೇ ಧೃತವ್ರತಾಃ ||೧೨||**

**ಯೇ** ಯಾವ ಗೃಹಸ್ಥರು **ಧೃತವ್ರತಾಃ** ವಿಶೇಷನಿಯಮವನ್ನು ಸಂಕಲ್ಪ ಮಾಡುವರೋ(ಮಂದನಂದಿನಿ ಪ್ರಕಾರ ಗುರುಕುಲದಲ್ಲಿ ಬ್ರಹ್ಮಚಾರಿಯಂತೆ ವ್ರತಸಂಕಲ್ಪ ಮಾಡಿದವರು ಎಂದರ್ಥ) **ತೇ** ಅವರು **ಅಂಜನ** ಕಣ್ಣಿಗೆ ಕಾಡಿಗೆ ಹಚ್ಚುವದು **ಅಭ್ಯಂಜನ** ಎಣ್ಣೆ ನೀರಿನ ಸ್ನಾನ **ಉನ್ಮರ್ದ** ಮೈಯನ್ನು ಎಣ್ಣೆ ಹಾಕಿ ತಿಕ್ಕಿಸುವದು **ಸ್ತ್ರೀ** ಸ್ತ್ರೀಯನ್ನು ಹೊಂದುವದು **ಅವಲೇಪ** ಗರ್ವಪಡುವದು(ದರ್ಪ) 'ಅವಲೇಪಸ್ತು ಗರ್ವೇ ಸ್ಯಾಲ್ಲೇಪನೇ ದೂಷಣೇऽಪಿ ಚ' ಎಂದು ವಿಶ್ವವಿದೆ. ಅಥವಾ **ಸ್ತ್ರ್ಯವಲೇಪ** ಸ್ತ್ರೀಸಂಭೋಗಶಕ್ತಿಯನ್ನು ಹೆಚ್ಚಿಸುವ ವಾಜೀಕರಣಗಳ ಸೇವನೆ **ಆಮೀಷಂ** ಮಾಂಸ **ಮಧು** ಮದ್ಯ ಅಥವಾ **ಆಮಿಷ** ಹಣ್ಣುಗಳಲ್ಲಿ ನಿಂಬೆಹಣ್ಣು ಧಾನ್ಯಗಳಲ್ಲಿ ಉದ್ದು ಇವುಗಳ ಸೇವನೆ **ಮಧು** ಮದಜನಕಪದಾರ್ಥ, **ಸ್ರಕ್** ಮಾಲೆ **ಗಂಧಲೇಪ** ಗಂಧವನ್ನು ಹಚ್ಚುವದು ಅಲಂಕಾರ ಮಾಡಿಕೊಳ್ಳುವದು ಇವುಗಳನ್ನು **ತ್ಯಜೇಯುಃ** ಬಿಡುವರು. (ಬಿಡಬೇಕು) ||೧೨||

**ಉಷಿತ್ವೈವಂ ಗುರುಕುಲೇ ದ್ವಿಜೋಽಧೀತ್ಯಾವಬುಧ್ಯ ಚ ।**
**ತ್ರಯೀಂ ಸಾಂಗೋಪನಿಷದಂ ಯಾವದರ್ಥಂ ಯಥಾಬಲಮ್ ॥೧೩॥**

**ದ್ವಿಜಃ** ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಲ್ಲಿ ಸೇರಿದವನು **ಏವಂ** ಮೇಲೆ ಹೇಳಿದಂತೆ **ಗುರುಕುಲೇ** ಗುರುಗಳ ಮನೆಯಲ್ಲಿ **ಉಷಿತ್ವಾ** ಇದ್ದು **ಯಥಾಬಲಂ** ತನ್ನ ಬುದ್ಧಿಶಕ್ತಿಗೆ ತಕ್ಕಷ್ಟು **ಯಾವದರ್ಥಂ** ತನಗೆ ಅರ್ಥವಾದಷ್ಟು **ಸಾಂಗೋಪನಿಷದಂ** ಶಿಕ್ಷಾ ವ್ಯಾಕರಣ ಮುಂತಾದ ಷಡಂಗಗಳು ಮತ್ತು ಉಪನಿಷತ್ತುಗಳಿಂದ ಸಹಿತವಾದ **ತ್ರಯೀಂ** ವೇದವನ್ನು **ಅಧೀತ್ಯ** ಅಧ್ಯಯನ ಮಾಡಿ **ಚ** ಮತ್ತು **ಅವಬುಧ್ಯ** ಅರ್ಥವಿಚಾರಮಾಡಿ ತಿಳಿದು ॥೧೩॥

**ದತ್ತ್ವಾ ವರಮನುಜ್ಞಾತೋ ಗುರೋಃ ಕಾಮಂ ಯದೀಶ್ವರಃ ।**
**ಗೃಹಂ ವನಂ ವಾ ಪ್ರವಿಶೇತ್ ಪ್ರವ್ರಜೇತ್ ತತ್ರ ವಾಽಽವಸೇತ್ ॥೧೪॥**

**ಯದಿ ಈಶ್ವರಃ** ಸಮರ್ಥನಾಗಿದ್ದರೆ **ಗುರೋಃ ಕಾಮಂ ವರಂ** ಗುರುಗಳ ಅಪೇಕ್ಷಿಸಿದ ದಕ್ಷಿಣೆಯನ್ನು **ದತ್ತ್ವಾ** ಕೊಟ್ಟು **ಅನುಜ್ಞಾತಃ** ಅವರಿಂದ ಅಪ್ಪಣೆ ಪಡೆದು **ಗೃಹಂ** ಮನೆಯನ್ನಾಗಲಿ **ವನಂ ವಾ** ವನವನ್ನಾಗಲಿ **ಪ್ರವಿಶೇತ್** ಪ್ರವೇಸಿಸಬೇಕು ಅಥವಾ **ಪ್ರವ್ರಜೇತ್** ಸನ್ಯಾಸಿಯಾಗಬೇಕು ಅಥವಾ **ತತ್ರ ವಾ ವಸೇತ್** ನೈಷ್ಠಿಕ ಬ್ರಹ್ಮಚಾರಿಯಾಗಿ ಗುರುಕುಲದಲ್ಲಿಯೇ ವಾಸಮಾಡಬೇಕು.

ಈ ಶ್ಲೋಕದಲ್ಲಿ ಗುರುಗಳ ಅಪ್ಪಣೆ ಪಡೆದು ಬ್ರಹ್ಮಚಾರಿಯು ಸಮರ್ಥನಾಗಿದ್ದರೆ ಸ್ವೇಚ್ಛೆಯಿಂದ ಗೃಹವನ್ನೋ ವನವನ್ನೋ ಆಜ್ಞೆಯ ಅಪೇಕ್ಷೆ ಇಲ್ಲದೆ ವಿಶೇಷಾಶ್ರಮ ಸ್ವೀಕಾರ ಹೇಳಿದಂತೆ ತೋರುವದು. ಕಾರಣ ಕಾಮ ಎಂಬುದಕ್ಕೆ ಗುರುಪದದಿಂದ ಅನ್ವಯವನ್ನು ಹೇಳಿ ಅರ್ಥ ಹೇಳುವ ಪ್ರಮಾಣ ಉದಾಹರಿಸಿ ಪರಿಹರಿಸುವರು.

**... ತಾತ್ಪರ್ಯ ...**

**ಗುರೋರಾಜ್ಞಾನುರೋಧೇನ ದೂರಸ್ಥೋ ವಾ ಗೃಹೀ ಭವೇತ್ ॥ ಇತಿ ಚ ॥**

**ಗುರೋರಾಜ್ಞಾನುರೋಧೇನ** ಗುರುಗಳ ಆಜ್ಞಾನುಸಾರ **ದೂರಸ್ಥಃ** ವಾನಪ್ರಸ್ಥ **ಗೃಹೀ** ಗೃಹಸ್ಥನು **ಭವೇತ್** ಆಗಬೇಕು. ಇದರಿಂದ 'ಗುರೋಃ ಕಾಮಂ' ಎಂದು ಅನ್ವಯ ಸೂಚಿತವಾಯಿತು. ಮೂಲದಲ್ಲಿ 'ಗೃಹಂ ವನಂ ವಾ' ಎಂದಿದ್ದರೂ ಪ್ರಮಾಣದಲ್ಲಿ 'ದೂರಸ್ಥೋ ಗೃಹೀ' ಎಂದು ಹೇಳಿದ್ದರಿಂದ ವಿಶ್ವಾಸಾತಿಶಯವನ್ನು ತಿಳಿಸಲು ಕಠಿಣವಾದುದನ್ನು ಮೊದಲು ಹೇಳಿರುವರು. ಇದರಿಂದ ಮೂಲದಲ್ಲಿ 'ವನಂ ವಾ ಗೃಹಂ ವಾ' ಎಂದು ಅನ್ವಯ ಮಾಡಬೇಕೆಂದೂ ಸೂಚಿಸಿರುವರು.

**ನೈಷ್ಠಿಕೋ ಬ್ರಹ್ಮಚಾರೀ ತು ವಸೇದಾಚಾರ್ಯಸನ್ನಿಧೌ ।
ತದಭಾವೇಽಸ್ಯ ತನಯೇ ಪತ್ನ್ಯಾಂ ವೈಶ್ವಾನರೇಽಪಿ ವಾ ॥**

ಗೃಹಸ್ಥನು ವಾನಪ್ರಸ್ಥ, ಯತಿಧರ್ಮಗಳಲ್ಲಿ ಯಾವುದನ್ನು ಅನುಷ್ಠಾನ ಮಾಡಲು ಸಮರ್ಥನೋ ತನಗಿಷ್ಟವಾದ ಅದನ್ನು ಮಾಡಬೇಕೆಂದೂ ಸಾಯುವವರೆಗೂ ಬ್ರಹ್ಮಚಾರಿಯಾಗಿರಬೇಕು ಎಂದು ಇಷ್ಟ ಪಟ್ಟಲ್ಲಿ ಗುರುಕುಲದಲ್ಲಿ ಗುರುಗಳ ಬಳಿ ಇಲ್ಲವೇ ಅವರ ಹೆಂಡತಿ ಬಳಿ ಇಲ್ಲವೇ ಅವರ ಮಗನ ಬಳಿ ಇಲ್ಲವೇ ಅವರ ಅಗ್ನಿಯ ಬಳಿ ವಾಸಮಾಡಿಕೊಂಡಿರಬೇಕು. ನೈಷ್ಠಿಕನಲ್ಲದವನು ಗುರುಗಳ ಅಪ್ಪಣೆ ಪಡೆದು ಗುರುಕುಲದಿಂದ ಹೊರಟು ಬೇರೆ ಸ್ಥಳದಲ್ಲಿ ಗೃಹಸ್ಥಾಶ್ರಮಿಯಾಗಿರಬೇಕು. ವಾನಪ್ರಸ್ಥನೂ ಆಗಬಹುದು ಸನ್ಯಾಸಿಯೂ ಆಗಬಹುದು ಎಂದು ಭಾವ. ।।೧೪।।

ಗುರು ಮೊದಲಾದವರನ್ನು ಉಪಾಸನೆ ಮಾಡಬೇಕೆಂದು ಹೇಳಿತ್ತು. ಭಗವದರ್ಪಣಬುದ್ಧಿಯಿಂದ ಅಗ್ನಿ ಮೊದಲಾದವುಗಳಲ್ಲಿ ಮಾಡುವ ಕರ್ಮಗಳು ಅವುಗಳಲ್ಲಿ ಶ್ರೀಹರಿಯ ಇರುವನು ಎಂದು ತಿಳಿದು ಮಾಡಬೇಕೆ ಹೊರತು ಅಗ್ನಿಯೂ ಪರಮಾತ್ಮನೂ ಒಂದೇ ಎಂಬ ಭಾವನೆಯಿಂದಲ್ಲವೆಂದು ಹೇಳುತ್ತಾರೆ-

**ಅಗ್ನೌ ಗುರಾವಾತ್ಮನಿ ಚ ಸರ್ವಭೂತೇಷ್ವಧೋಕ್ಷಜಮ್ ।
ಭೂತೈಃ ಸ್ವಧಾಮಭಿಃ ಪಶ್ಯೇದಪ್ರವಿಷ್ಟಂ ಪ್ರವಿಷ್ಟವತ್ ।।೧೫।।**

**ಅಗ್ನೌ** ಅಗ್ನಿಯಲ್ಲಿ **ಗುರೌ** ಗುರುವಿನಲ್ಲಿ (ಅಸಂಶಯಃ ಸಂಶಯಚ್ಛೆದ್ಗುರುರುಕ್ತೋ ಮನೀಷಿಭಿಃ । ಸ ಗುರು ಯಃ ಕ್ರಿಯಾ ಕೃತ್ವಾ ವೇದಮಸ್ಮೈ ದದಾತಿ ಚ । ಉಪನೀಯ ವದೇದ್ವೇದಂ ಆಚಾರ್ಯಃ ಸ ಉದಾಹೃತಃ । ಏಕದೇಶೇ ಉಪಾಧ್ಯಾಯಃ ಋತ್ವಿಗ್, ಯಜ್ಞಕೃದುಚ್ಯತೇ । ಏತೇ ಮಾನ್ಯಾ ಯಥಾಪೂರ್ವಂ ಏಭ್ಯೋ ಮಾತಾ ಗರೀಯಸೀ'।। ಎಂದು ಹೇಳಿದೆ. **ಆತ್ಮನಿ** ತನ್ನಲ್ಲಿಯೂ **ಸರ್ವಭೂತೇಷು** ಎಲ್ಲ ಪ್ರಾಣಿಗಳಲ್ಲಿಯೂ **ಭೂತೈಃ** (ಪ್ರಭೂತಗಳಾ) ಭೂ ಚ ಬಹೌ ಬಹುಃ ಪೂರ್ಣತಾಯಾಂ ಎಂದಿರುವದರಿಂದ ವ್ಯಾಪ್ತಗಳಾದ **ಸ್ವಧಾಮಭಿಃ** ತನ್ನ ಸಾಮರ್ಥ್ಯಗಳಿಂದ ಅಥವಾ ತನ್ನ ಆವಾಸಸ್ಥಾನಗಳಾದ **ಭೂತೈಃ** ಪ್ರಾಣಿಗಳಿಂದ **ಅಪ್ರವಿಷ್ಟಂ** ಸರ್ವಗತನಾದ **ಪ್ರವಿಷ್ಟವತ್** ಆ ಆ ವಸ್ತುಗಳಿಗೆ ಅನುರೂಪವಾದ ರೂಪದಿಂದ ಪ್ರವೇಶಿಸಿದ **ಅಧೋಕ್ಷಜಂ** ಅತೀಂದ್ರಿಯನಾದ ಶ್ರೀಹರಿಯನ್ನು **ಪಶ್ಯೇತ್** ಉಪಾಸನೆ ಮಾಡಬೇಕು.

ಈ ಶ್ಲೋಕದಲ್ಲಿ ಲೋಕೇಶನಿಗೆ ತಾತ್ವಿಕವಾಗಿ ಅಪ್ರವಿಷ್ಟತ್ವ ಹೇಳಿದಂತೆ ತೋರುವುದು. ಹಾಗಾದರೆ ಪ್ರವಿಷ್ಟತ್ವ ತಾತ್ವಿಕವಲ್ಲ ಎಂದು ತೋರುವದು. ಅದು

'ಯೋ ಅಗ್ನೌ ತಿಷ್ಠನ್ ಅಗ್ನೇರಂತರಃ' ಮುಂತಾದ ಪ್ರಮಾಣ ವಿರುದ್ಧವು. ಕಾರಣ ಅದರ ತಾತ್ಪರ್ಯವನ್ನು ಪ್ರಮಾಣದಿಂದ ಆಚಾರ್ಯರು ತಿಳಿಸುವರು-

**... ತಾತ್ಪರ್ಯ ...**

**ಅಪ್ರವಿಷ್ಟಃ ಸರ್ವಗತಃ ಪ್ರವಿಷ್ಟಸ್ತ್ವನುರೂಪವಾನ್ ।**
**ಏವಂ ದ್ವಿರೂಪೋ ಭಗವಾನ್ ಹರಿರೇಕೋ ಜನಾರ್ದನಃ ॥ ಇತಿ ಚ ॥**

ಸರ್ವಗತನು ಅಂದರೆ ವ್ಯಾಪ್ತನು ಆ ವ್ಯಾಪ್ತವಾದ ರೂಪದಿಂದ ಅಪ್ರವಿಷ್ಟನು. ಅಪರಿಚ್ಛಿನ್ನ ಪರಿಚ್ಛಿನ್ನವಾದ ಎರಡು ರೂಪಗಳು ವಿಶೇಷ ಬಲದಿಂದ ಹೀಗೆ ವ್ಯವಹರಿಸಲ್ಪಡುವವು. ಏಕಃ ಎಂದರೆ ಅಂತರ್ಭೇದಹೀನನೆಂದರ್ಥ ।।೧೫।।

**ಏವಂವಿಧೋ ಬ್ರಹ್ಮಚಾರೀ ವಾನಪ್ರಸ್ಥೋ ಯತಿರ್ಗೃಹೀ ।**
**ಪರಂ ವಿಂದತಿ ವಿಜ್ಞಾನಂ ಪರಂ ಬ್ರಹ್ಮಾಧಿಗಚ್ಛತಿ ॥೧೬॥**

**ಏವಂ ವಿಧಃ** ತಮಗೆ ಯೋಗ್ಯವಾದ ಕರ್ಮವಮಾಡುವ **ಬ್ರಹ್ಮಚಾರೀ** ಬ್ರಹ್ಮಚಾರಿಯು **ವಾನಪ್ರಸ್ಥಃ** ವಾನಪ್ರಸ್ಥನು **ಗೃಹೀ** ಗೃಹಸ್ಥಾಶ್ರಮಿಯು **ಯತಿಃ** ಸನ್ಯಾಸಿಯು **ಪರಂ ವಿಜ್ಞಾನಂ ವಿಂದತಿ** ಅಪರೋಕ್ಷಜ್ಞಾನವನ್ನು ಹೊಂದುವನು ಅನಂತರ **ಪರಂ ಬ್ರಹ್ಮ ವಿಂದತಿ** ಪರಮಾತ್ಮನನ್ನು ಹೊಂದುವನು. ।।೧೬।।

ಬ್ರಹ್ಮಚಾರಿಯ ಆಚಾರದಂತೆ ದುಃಖಸಾಧ್ಯವಾದ ಆಚಾರವಿರುವದರಿಂದ ಬ್ರಹ್ಮಚರ್ಯ ನಿರೂಪಣಾನಂತರ ಅವಸರ ಪ್ರಾಪ್ತವಾದ ವಾನಪ್ರಸ್ಥ ಧರ್ಮವನ್ನು ಹೇಳುವರು-

**ವಾನಪ್ರಸ್ಥಸ್ಯ ವಕ್ಷ್ಯಾಮಿ ನಿಯಮಾನ್ ಮುನಿಸಮ್ಮತಾನ್ ।**
**ಯಾನಾತಿಷ್ಠನ್ ಮುನಿರ್ಗಚ್ಛೇದ್ ಋಷಿಲೋಕಮಿಹಾಂಜಸಾ ॥೧೭॥**

**ಯಾನ್** ಯಾವ ವಾನಪ್ರಸ್ಥ ಧರ್ಮಗಳನ್ನು **ಇಹ** ಮನುಷ್ಯದೇಹದಲ್ಲಿ **ಆತಿಷ್ಠನ್** ಚೆನ್ನಾಗಿ ಮಾಡುತ್ತ **ಮುನಿಃ** ಮನನಶೀಲನಾದವನು **ಅಂಜಸಾ** ಮುಖ್ಯವಾಗಿ **ಋಷಿಲೋಕಂ** ಸಪ್ತಋಷಿಗಳ ಲೋಕವನ್ನು **ಗಚ್ಛೇತ್** ಹೊಂದುವನು, ಅಥವಾ **ಅಂಜಸಾ ಋಷಿಃ** ಸರ್ವಜ್ಞನಾದ ಶ್ರೀಹರಿಯು ಅವನ ವೈಕುಂಠಲೋಕವನ್ನು **ಗಚ್ಛೇತ್** ಹೊಂದುವನೋ **ತಾನ್** ಅಂತಹ **ಮುನಿಸಮ್ಮತಾನ್** ಮುನಿಗಳಿಗೆ ಒಪ್ಪಿಗೆಯಾದ **ವಾನಪ್ರಸ್ಥಸ್ಯ** ವಾನಪ್ರಸ್ಥಾಶ್ರಮದ **ನಿಯಮಾನ್** ಧರ್ಮಗಳನ್ನು **ವಕ್ಷ್ಯಾಮಿ** ಹೇಳುವೆನು.

ವಿಶೇಷ :- 'ಋಷಿಃ ದೇವೇ ವಸಿಷ್ಠಾದೌ ದೀಧಿತಾವಪಿ ಪಠ್ಯತೇ' ಎಂದು ವಿಶ್ವ. 'ಋಷೇ ಹರೇ ಲೋಕಂ' ಎಂದು ಮಾಡಬಹುದು. 'ಋಷಿರ್ಹರೌ ತಾಪಸೇ ಚ

ಜ್ಞಾನವತ್ಯಪಿ ಕೀರ್ತಿತಃ' ಎಂದು ಹೇಳುವರು. 'ತ್ವಮಗ್ನೇ ಪ್ರಥಮಂ ಗಿರಾ ಋಷಿರ್ದೇವಾನಾಂ'ಎಂಬ ಋಗ್ಭಾಷ್ಯದಲ್ಲಿ 'ಜ್ಞಾನತ ಏವ ಚ ಋಷಿಃ' ಎಂದಿರುವರು.

**ನ ಕೃಷ್ಟಪಚ್ಯಮಶ್ನೀಯಾತ್ ಅಕೃಷ್ಟಂ ವಾಽಪ್ಯಕಾಲತಃ ।**
**ಅಗ್ನಿಪಕ್ವಮಥಾಮಂ ವಾ ಅರ್ಕಪಕ್ವಮುತಾಹರೇತ್ ॥೧೮॥**

**ಕೃಷ್ಟಪಚ್ಯಂ** ಕೃಷಿಯಿಂದ ಬೆಳೆದ ಅಕ್ಕಿ ಮುಂತಾದ ಧಾನ್ಯಗಳನ್ನು **ನ ಅಶ್ನೀಯಾತ್** ತಿನ್ನಬಾರದು **ಅಕೃಷ್ಟಂ ವಾ ಅಪಿ** ಕೃಷಿ ಮಾಡದೇ ಬೆಳೆದದ್ದನ್ನೂ **ಅಕಾಲತಃ** ಕಾಲವಲ್ಲದ ಕಾಲದಲ್ಲಿ ಬಂದುದನ್ನು ವಿಹಿತವಲ್ಲದ ಸಮಯದಲ್ಲಿ **ನ ಅಶ್ನೀಯಾತ್** ತಿನ್ನುವಂತಿಲ್ಲ. **ಅಗ್ನಿಪಕ್ವಂ** ಬೆಂಕಿಯಲ್ಲಿ ಬೇಯಿಸಿದ್ದನ್ನು **ನ ಅಶ್ನೀಯಾತ್** ತಿನ್ನಬಾರದು **ಆಮಂ ವಾ** ಹಸಿಯಾದ ನೆಲ್ಲಿಕಾಯಿ ಮೊದಲಾದವನ್ನು **ಉತ** ಅಥವಾ **ಅರ್ಕಪಕ್ವಂ** ಬಿಸಲಿನಲ್ಲಿ ಹಣ್ಣಾದುದನ್ನು **ಆಹರೇತ್** ತಿನ್ನಬೇಕು. ॥೧೮॥

**ವನ್ಯೈಶ್ಚರುಪುರೋಡಾಶಾನ್ ನಿರ್ವಪೇನ್ನಿತ್ಯಚೋದಿತಾನ್ ।**
**ಲಬ್ಧೇನ ಯೇನ ಚಾನ್ನೇನ ಪುರಾಣಂ ತು ಪರಿತ್ಯಜೇತ್ ॥೧೯॥**

**ವನ್ಯೈಃ** ಕಾಡಿನಲ್ಲಿ ತಾನಾಗಿ ಬೆಳೆದ ದೇವವ್ರೀಹಿ(ಕಾಡುಭತ್ತ ದೀರ್ಘಶೂಕ) ಮೊದಲಾದವುಗಳಿಂದ ಅವು ಸಿಗದಿದ್ದರೆ **ಲಬ್ಧೇನ** ಸಿಕ್ಕಿದ **ಯೇನ ಚ** ಯಾವುದಾದರೂ **ಅನ್ನೇನ** ಅನ್ನದಿಂದ **ಕಾಲಚೋದಿತಾತ್** ದರ್ಶಪೂರ್ಣಮಾಸ ಮುಂತಾದ ಕಾಲಗಳಲ್ಲಿ ವಿಹಿತಗಳಾದ **ಚರುಪುರೋಡಾಶಾನ್** ಚರುಹೋಮ ಪುರೋಡಾಶ ಹೋಮಗಳನ್ನು **ನಿರ್ವಪೇತ್** ಮಾಡಬೇಕು **ಪುರಾಣಂ** ಹಳೆಯದನ್ನು **ಪರಿತ್ಯಜೇತ್** ಹೋಮಕ್ಕೆ ಉಪಯೋಗಿಸಬಾರದು. ॥೧೯॥

**ಅಗ್ನ್ಯರ್ಥಮೇವ ಶರಣಮುಟಜಂ ವಾಽದ್ರಿಕಂದರಮ್ ।**
**ಶ್ರಯೇತ ಹಿಮವಾಯ್ವಗ್ನಿವರ್ಷಾರ್ಕಾತಪನಾನ್ ಸ್ವಯಮ್ ॥೨೦॥**

**ಅಗ್ನ್ಯರ್ಥಂ** ಅಗ್ನಿಯನ್ನು ಸಂರಕ್ಷಣೆ ಮಾಡಲು **ಉಟಜಂ** ಪರ್ಣಶಾಲೆಯೋ **ಅದ್ರಿಕಂದರಂ ವಾ** ಪರ್ವತ ಗುಹೆಯೋ ಯಾವದೋ ಒಂದು **ಶರಣಂ** ಮನೆಯನ್ನು **ಆಶ್ರಯೇತ್** ಆಶ್ರಯಿಸಬೇಕು **ಸ್ವಯಂ ತು** ತಾನಾದರೋ **ಹಿಮ** ಮಂಜು **ವಾಯು** ಗಾಳಿ **ಅಗ್ನಿ** ಬೆಂಕಿ **ವರ್ಷಾ** ಮಳೆ **ಅರ್ಕಾತಪನಾನ್** ಸೂರ್ಯನ ತಾಪವನ್ನು **ಶ್ರಯೇತ್** ಸಹಿಸಬೇಕು ಎಂದರ್ಥ. 'ಪರ್ಣಶಾಲೋಟಜೋ ಅಸ್ತ್ರಿಯಾಂ' ಎಂದು ದೇಶೀಕೋಶವಿರುವದರಿಂದ ಉಟಜಾತ್ ಜಾಯತೇ ಇತಿ ಉಟಜಃ । 'ತಪನಸ್ತರಣೌ ತಾಪೇ ಭಲ್ಲಾತೇ ನರಕಾಂತರೇ' ಎಂದು ವಿಶ್ವ. ಕಾರಣ ಆತಪನ ಅಂದರೆ ತಾಪ ಎಂದರ್ಥ. ॥೨೦॥

**ಕೇಶರೋಮನಖಶ್ಮಶ್ರುಮಲಾನಿ ಜಟಿಲೋ ದಧತ್ ।**
**ಕಮಂಡಲ್ವಜಿನೇ ದಂಡವಲ್ಕಲಾಗ್ನಿಪರಿಚ್ಛದಾನ್ ॥೨೧॥**

**ಕೇಶಃ** ತಲೆಗೂದಲುಗಳನ್ನು(ಶಿಖೆ)**ರೋಮಃ** ಎದೆ ಬಗಲು ಮುಂತಾದ ಸ್ಥಳದಲ್ಲಿಯ ಕೂದಲನ್ನು **ನಖ** ಉಗುರನ್ನು **ಶ್ಮಶ್ರೂ** ಮೀಸೆಗಳನ್ನು(ಮುಖದಲ್ಲಿರುವ ಕೂದಲು)**ಮಲಾನಿ** ಈ ವಿಧವಾದ ಮಲವನ್ನು ಅಥವಾ ಮೈ ತೊಳೆಯದಿರುವದರಿಂದ ಅಂಟಿಕೊಂಡ ಕೊಳಕನ್ನು **ದಧತ್** ಧರಿಸದವನಾಗಿ **ಜಟಿಲಃ** ಜಟಾವುಳ್ಳವನು **ಕಮಂಡಲು** ಕಮಂಡಲವನ್ನು **ಅಜಿನ** ಕೃಷ್ಣಾಜಿನವನ್ನು **ದಂಡ** ದಂಡವನ್ನು **ವಲ್ಕಲ** ಹರಕ ಬಟ್ಟೆ ಅಥವಾ ಗಿಡದ ತೊಗಟೆಯಿಂದ ಮಾಡಿದ ವಸ್ತ್ರ **ಅಗ್ನಿಪರಿಚ್ಛದಾನ್** ಅರಣಿ ದರ್ಭ ಮುಂತಾದವನ್ನು **ದಧತ್** ಧರಿಸಿದವನಾಗಿ ॥೨೧॥

**ಚರೇದ್ ವನೇ ದ್ವಾದಶಾಬ್ದಾನಷ್ಟೌ ವಾ ಚತುರೋ ಮುನಿಃ ।**
**ದ್ವಾವೇಕಂ ವಾ ಯಥಾ ಬುದ್ಧಿರ್ನ ವಿಪದ್ಯೇತ ಕೃಚ್ಛ್ರತಃ ॥೨೨॥**

**ಮುನಿಃ** ಮನನಶೀಲನಾದವನು **ಕೃಚ್ಛ್ರತಃ** ಕಷ್ಟದಿಂದ **ಬುದ್ಧಿಃ** ಬುದ್ಧಿಯು **ಯಥಾ ನ ವಿಪದ್ಯೇತ** ನಷ್ಟವಾಗುವದಿಲ್ಲವೋ ಹಾಗೆ **ದ್ವಾದಶ** ಹನ್ನೆರಡು **ಅಷ್ಟೌ** ಎಂಟು **ಚತುಃ** ನಾಲ್ಕು **ದ್ವೌ** ಎರಡು **ಏಕಂ** ಒಂದು **ಅಬ್ದಾನ್** ವರ್ಷಗಳ ಕಾಲ **ವನೇ** ಅಡವಿಯಲ್ಲಿ **ಚರೇತ್** ಸಂಚರಿಸಬೇಕು. ॥೨೨॥

**ಯದಾಽಕಲ್ಪಃ ಸ್ವಕ್ರಿಯಾಯಾಂ ವ್ಯಾಧಿಭಿರ್ಜರಯಾಽಥವಾ ।**
**ಆನ್ವೀಕ್ಷಿಕ್ಯಾಂ ಚ ವಿದ್ಯಾಯಾಂ ಕುರ್ಯಾದನಶನಾದಿಕಮ್ ॥೨೩॥**

**ಯದಾ** ಯಾವಾಗ **ವ್ಯಾಧಿಭಿಃ** ರೋಗದಿಂದಲೂ **ಜರಯಾ ವಾ** ಮುಪ್ಪಿನಿಂದಲೋ **ಸ್ವಕ್ರಿಯಾಯಾಂ** ಅಗ್ನಿಹೋತ್ರಾದಿ ಕ್ರಿಯೆಗಳಲ್ಲಿ **ಆನ್ವೀಕ್ಷಿಕ್ಯಾಂ ವಿದ್ಯಾಯಾಂ ಚ** ಬ್ರಹ್ಮಾಪರೋಕ್ಷಕ್ಕೆ ಕಾರಣವಾದ ಬ್ರಹ್ಮವಿದ್ಯೆಯಲ್ಲಿ ಅಂದರೆ ಅದನ್ನು ಉಪದೇಶಿಸಲು **ಅಕಲ್ಪಃ** ಅಸಮರ್ಥನಾಗುವನೋ **ತದಾ** ಆಗ **ಅನಶನಾದಿಕಂ ಕುರ್ಯಾತ್** ಪ್ರಾಣತ್ಯಾಗ ಮಾಡಲು ಉಪವಾಸಾದಿಗಳನ್ನು ಮಾಡಬೇಕು.

ವಿಶೇಷ :- **ಅನು** ಶ್ರವಣೋತ್ತರದಲ್ಲಿ ಈಕ್ಷಾ ಈಕ್ಷಣಂ ಅನ್ವೀಕ್ಷಾ ಸಾ ಪ್ರಯೋಜನಂ ಅಸ್ಯಾಃ । 'ಆನ್ವೀಕ್ಷೀಕೀ ದಂಡನೀತಿಸ್ತರ್ಕವಿದ್ಯಾ' ಎಂದು ಅಮರವಿದೆ. 'ಆನ್ವೀಕ್ಷಿಕೀಂ ತರ್ಕವಿದ್ಯಾಂ ಅನುರಕ್ತೋ ನಿರರ್ಥಿಕಾಂ' ಎಂದು ಹೇಳಿದೆ. ನಿರರ್ಥಕವಾದುದರಿಂದ ಭಿನ್ನವಾದುದು ಇದು. ದಂಡ ಎಂದರೆ ಭಗವಂತ. ಅವನ ನೀತಿ ದಂಡನೀತಿ. ಶಾಂತಿಪರ್ವದಲ್ಲಿ ರಾಜಧರ್ಮಗಳಲ್ಲಿ ದಂಡ ಪ್ರಜಾಗಾರದಲ್ಲಿ ಭೀಷ್ಮಾಚಾರ್ಯರು 'ದಂಡೋ ನಾರಾಯಣೋ ವಿಷ್ಣುರ್ಯಜ್ಞೋ ನಾರಾಯಣಃ

ಪ್ರಭುಃ' ಎಂದು ಹೇಳಿದ್ದಾರೆ. 'ದಂಡನೀತಿರ್ಜಗದ್ಧಾತ್ರಿ ದಂಡೋ ಹಿ ಬಹುವಿಗ್ರಹಃ' ಎಂದೂ ಬ್ರಹ್ಮಮೀಮಾಂಸಾದಲ್ಲಿದೆ. 'ಅನಶನಾದಿಕಂ' ಎಂಬಲ್ಲಿ ಆದಿಪದದಿಂದ ಸಂಪೂರ್ಣ ಉಪವಾಸಸಾಮರ್ಥ್ಯವಿಲ್ಲದಿದ್ದರೆ ತಿಂಗಳಿಗೊಮ್ಮೆಯೋ ೧೫ದಿನಕೊಮ್ಮೆಯೋ ಊಟಮಾಡಬೇಕು. 'ಪಕ್ಷೇ ಗತೇ ವಾ ಪ್ರಾಶ್ನೀಯಾತ್ ಮಾಸೇ ವಾಹನಿ ಚಾಗತೇ' ಎಂದು ಯಾಜ್ಞವಲ್ಕ್ಯರು ಹೇಳಿದ್ದಾರೆ. ।।೨೩।।

ವಾನಪ್ರಸ್ಥನು ಅನಶನ ಮಾಡುವ ಮೊದಲು ಮಾಡಬೇಕಾದದ್ದನ್ನು ಹೇಳುವರು-

**ಆತ್ಮನ್ಯಗ್ನೀನ್ ಸಮಾರೋಪ್ಯ ಸಂನ್ಯಸ್ಯಾಹಂ ಮಮಾತ್ಮತಾಮ್ ।**
**ಕಾರಣೇಷು ನ್ಯಸೇತ್ ಸಮ್ಯಕ್ ಸಂಘಾತಂ ತು ಯಥಾರ್ಹತಃ ।।೨೪।।**

**ಆತ್ಮನಿ** ತನ್ನಲ್ಲಿ **ಅಗ್ನೀನ್** ಗಾರ್ಹಪತ್ಯಾದಿ ಅಗ್ನಿಗಳನ್ನು **ಸಮಾರೋಪ್ಯ** ಸಮಾರೋಪ ಮಾಡಿಕೊಂಡು(ತನ್ನೊಳಗೆ ಇದೆ ಎಂದು ಭಾವಿಸಿ)**ಅಹಂ ಮಮಾತ್ಮತಾಂ** ದೇಹಗೇಹಾದಿಗಳಲ್ಲಿ ನಾನು ನನ್ನದು ಎಂಬ ಭಾವನೆಯನ್ನು **ಸಂನ್ಯಸ್ಯ** ಬಿಟ್ಟು **ಕಾರಣೇಷು** ಆ ಆ ಕಾರಣಗಳಲ್ಲಿ **ಸಂಘಾತಂ** ಕಾರ್ಯವನ್ನು **ಯಥಾರ್ಹತಃ** ಆ ಕಾರ್ಯವು ಆ ಕಾರಣದಲ್ಲಿ **ಸಮ್ಯಕ್ ನ್ಯಸೇತ್** ಕಾರ್ಯವು ಕಾರಣದಲ್ಲಿ ಲಯವಾಗುವದು ಅದರ ಅಧೀನವೆಂದು ಚೆನ್ನಾಗಿ ತಿಳಿಯಬೇಕು.

ಇಲ್ಲಿ ಕಾರಣದಲ್ಲಿ ಕಾರ್ಯವನ್ನಿಡುವದು ಎಂದರೆ ಏನೆಂದು ಹೇಳುವರು :-

**... ತಾತ್ಪರ್ಯ ...**

**ಕಾರ್ಯಸ್ಯ ಕಾರಣಲಯಜ್ಞಾನಮಾತ್ರಂ ವಿಲಾಪನಮ್ ।। ಇತಿ ಚ ।।**

ತನ್ನ ಕಾರಣದಲ್ಲಿ ಕಾರ್ಯವು ಲಯವಾಗುವದೆಂದು ತಿಳಿಯುವದೇ ಲಯಗೊಳಿಸುವದು ಎಂದು ಭಾವ. ।।೨೪।।

**ಖೇ ಖಾನಿ ವಾಯೌ ನಿಃಶ್ವಾಸಂ ತೇಜಸ್ಯೂಷ್ಮಾಣಮಾತ್ಮವಾನ್ ।**
**ಅಪ್ಸ್ವಸೃಕ್‌ಶ್ಲೇಷ್ಮಪೂಯಾನಿ ಕ್ಷಿತೌ ಶೇಷಂ ಯಥೋದ್ಭವಮ್ ।।೨೫।।**

**ಖೇ** ಆಕಾಶದಲ್ಲಿ **ಖಾನಿ** ಶರೀರಾಕಾಶಗಳನ್ನು ಅಂದರೆ ಮುಖ, ಮೂಗು, ಕಿವಿ ,ಹೊಟ್ಟೆ ಇವುಗಳ ವಿವರಗಳನ್ನು **ನಿಃಶ್ವಾಸಂ** ಶಾರೀರವಾಯುವನ್ನು **ವಾಯೌ** ಬಾಹ್ಯವಾಯುವಿನಲ್ಲಿ **ಊಷ್ಮಾಣಂ ತೇಜಸಿ** ಶರೀರದ ಶಾಖ(ಬಿಸಿ)ವನ್ನು ಅಗ್ನಿಯಲ್ಲಿ **ಅಸೃಕ್** ರಕ್ತ **ಶ್ಲೇಷ್ಮ** ಕಫ **ಪೂಯಾನಿ** ಕೀವುಗಳನ್ನು **ಅಪ್ಸು** ನೀರಿನಲ್ಲಿ **ಶೇಷಂ** ಗಂಧವನ್ನು **ಕ್ಷಿತೌ** ಭೂಮಿಯಲ್ಲಿ ಮಿಕ್ಕವನ್ನು **ಯಥೋದ್ಭವಂ** ಆ ಆ ಪದಾರ್ಥಗಳ ಉತ್ಪತ್ತಿಗೆ ತಕ್ಕಂತೆ **ನ್ಯಸೇತ್** ಲಯ ಚಿಂತಿಸಬೇಕು.

'ಆಕಾಶಾಲ್ಲಾಘವಂ ಸೌಕ್ಷ್ಮ್ಯಂ ಶಬ್ದಂ ಶ್ರೋತ್ರಂ ತಥಾಬಲಂ । ವಾಯೋಸ್ತು ಪ್ರೇರಣಾ ಚೇಷ್ಟಾ ವ್ಯೂಹನಂ ಸೌಕ್ಷ್ಮ್ಯಮೇವ ಚ । ಅಗ್ನೇಸ್ತು ದರ್ಶನಂ ಶಕ್ತಿಕಾರ್ಷ್ಣ್ಯಂ ರೂಪಪ್ರಕಾಶನಮ್ । ರಸೇಭ್ಯೋ ರಸನಂ ಶೈತ್ಯಂ ಸ್ನೇಹಕ್ಲೇದನಮಾರ್ದವಮ್ । ಭೂಮೇರ್ಗಂಧಸ್ತಥಾ ಘ್ರಾಣಂ ಗೌರವಂ ಮೂರ್ತಿರೇವ ಚ' ಎಂದು ವಚನವಿರುವದರಿಂದ ಉತ್ಪತ್ತಿಗೆ ಅನುಸಾರ ಲಯಚಿಂತನೆ ಮಾಡಬೇಕು ಎಂದರ್ಥ.

ಆಕಾಶದಿಂದ ಲಾಘವ, (ಸೂಕ್ಷ್ಮತೆಗಳು)ಶಬ್ದಶ್ರೋತ್ರಬಲಗಳೂ, ವಾಯುವಿನಿಂದ ಪ್ರೇರಣೆ ಚೇಷ್ಟೆ, ಸೇರಿಸುವಿಕೆ ಸೂಕ್ಷ್ಮತೆಗಳೂ, ಅಗ್ನಿಯಿಂದ ನೋಡುವಿಕೆ, ಶಕ್ತಿ, ಉಷ್ಣತೆ, ರೂಪ, ಪ್ರಕಾಶನಗಳು, ನೀರಿನಿಂದ ರಸನ, ಶೈತ್ಯ, ಮೃದುತ್ವಗಳೂ, ಭೂಮಿಯಿಂದ ಗಂಧ, ಘ್ರಾಣೇಂದ್ರಿಯ ಗುರುತ್ವ ಆಕಾರಗಳೂ ಹುಟ್ಟುವವು. ॥೨೫॥

ವಾಗಾದೀಂದ್ರಿಯಗಳಿಗೆ ಅಗ್ನ್ಯಾದಿದೇವತಾಧಾರತ್ವವನ್ನು ಚಿಂತಿಸಬೇಕೆಂದು ಹೇಳುವರು-

**ವಾಚಮಗ್ನೌ ಸವಕ್ತವ್ಯಮಿಂದ್ರೇ ಶಿಲ್ಪಂ ಕರಾವಪಿ ।**
**ಪದಾನಿ *ಗತಿಭಿರ್ವಿಷ್ಣೌ ರತ್ಯೋಪಸ್ಥಂ ಪ್ರಜಾಪತೌ** ॥೨೬॥

**ಸವಕ್ತವ್ಯಂ** ಹೇಳಬೇಕಾದ್ದರಿಂದ ಕೂಡಿದ **ವಾಚಂ** ವಾಗೀಂದ್ರಿಯವನ್ನು **ಅಗ್ನೌ** ಅಗ್ನಿಯ ಅಧೀನವೆಂದು **ಶಿಲ್ಪಂ** ಕೈಕೆಲಸಗಳನ್ನು **ಕರೌ ಅಪಿ** ಕೈಗಳನ್ನೂ **ಇಂದ್ರೇ** ಮುಖ್ಯಾಭಿಮಾನಿಯಾದ ಇಂದ್ರನ ಅಧೀನವೆಂದೂ **ಗತಿಭಿಃ ಸಹ** ನಡಿಗೆಯೊಂದಿಗೆ **ಪದಾನಿ** ಕಾಲುಗಳನ್ನು **ವಿಷ್ಣೌ** ಬಲಗಾಲನ್ನು ಜಯಂತನ ಅಧೀನವೆಂದು ಎಡಗಾಲನ್ನು ಶಂಭುವಿನ ಅಧೀನವೆಂದೂ **ರತ್ಯಾ ಸಹ** ರತಿಕ್ರೀಡೆಯೊಂದಿಗೆ **ಉಪಸ್ಥಂ** ಗುಹ್ಯೇಂದ್ರಿಯವನ್ನು **ಪ್ರಜಾಪತೌ** ದಕ್ಷನ ಮನುವಿನ ಅಧೀನವೆಂದು ತಿಳಿಯಬೇಕು.

ವಿಶೇಷ ಃ-'ಅಂಗುಲ್ಯಾದಿ ಅವಯವವಿವಕ್ಷಯಾ ಪದಾನಿ' ಎಂದು ಬಹುವಚನ. ಅಥವಾ ತ್ರಿಪಾದಬಹುಪಾದಉಳ್ಳವುಗಳನ್ನು ಸಂಗ್ರಹಿಸಲು ಬಹುವಚನ. ಜ್ವರಸ್ತ್ರಿಪಾದಃ ಎಂದಿದೆ. 'ವಿಷ್ಣೌ' ಎಂದರೆ ಯಜ್ಞನಲ್ಲಿ ಎಂದರ್ಥ. ಅಭಿಮಾನಿ ಜಯಂತ ಅವನು ಯಜ್ಞನಿಯಾಮಕನೆಂದು ಭಾವ. 'ಗತಿಭಿಃ ಪದಾನಿ ವಯಸಿ' ಎಂದೂ ಕೆಲವೆಡೆ ಪಾಠ. ಆಗ 'ದ್ವಾ ಸುಪರ್ಣಾ ದ್ವಿಖಗಃ' ಮುಂತಾಗಿ ಇರುವದರಿಂದ ಪಕ್ಷಿರೂಪಿಯಾದ ಹರಿಯಲ್ಲಿ ಎಂದೇ ಅರ್ಥ. ॥೨೬॥

---

* 'ಗತಿಭಿಃ ಪದಾನಿ ವಯಸಿ' ಇತಿ ಪಾಠಾಂತರ.

**ಮೃತ್ಯೌ ಪಾಯುಂ ವಿಸರ್ಗಂ ಚ ಯಥಾಸ್ಥಾನಂ ವಿನಿರ್ದಿಶೇತ್ ।**
**ದಿಕ್ಷು ಶ್ರೋತ್ರಂ ಸನಾದೇನ ಸ್ಪರ್ಶೇನಾಧ್ಯಾತ್ಮನಿ ತ್ವಚಮ್ ॥೨೭॥**

**ಪಾಯುಂ** ಗುದವನ್ನು **ವಿಸರ್ಗಂ ಚ** ಮಲವಿಸರ್ಜನವನ್ನು **ಮಿತ್ರೇ** ಮಿತ್ರನಲ್ಲಿ **ಯಥಾಸ್ಥಾನಂ** ಅಭಿಮಾನಿಗಳಲ್ಲಿ ಅಭಿಮನ್ಯಮಾನಗಳನ್ನು ಜನಕಗಳಲ್ಲಿ ಜನ್ಯಗಳನ್ನು ಹೀಗೆ ಯೋಗ್ಯವಾದ ಸ್ಥಾನದಲ್ಲಿ ಲಯವನ್ನು **ವಿನಿರ್ದಿಶೇತ್** ಚಿಂತಿಸಬೇಕು **ಸಃ** ವಾನಪ್ರಸ್ಥನು **ನಾದೇನ ಸಹ** ಶಬ್ದದೊಡನೆ **ಶ್ರೋತ್ರಂ** ಶ್ರೋತ್ರೇಂದ್ರಿಯವನ್ನು **ದಿಕ್ಷು** ದಿಗಭಿಮಾನಿದೇವತೆಗಳಲ್ಲಿ **ಸ್ಪರ್ಶೇನ** ಸ್ಪರ್ಶದೊಡನೆ **ತ್ವಚಂ** ತ್ವಗೀಂದ್ರಿಯವನ್ನು **ಅಧ್ಯಾತ್ಮನಿ** ವಾಯುವಿನಲ್ಲಿ ।।೨೭।।

**ರೂಪಾಣಿ ಚಕ್ಷುಷಾ ರಾಜನ್ ಜ್ಯೋತಿಷ್ಯಭಿನಿವೇಶಯೇತ್ ।**
**ಅಪ್ಸು ಪ್ರವೇಶಯೇದ್ ಜಿಹ್ವಾಂ ಘ್ರೇಯೈರ್ಘ್ರಾಣಂ ಕ್ಷಿತೌ ನ್ಯಸೇತ್ ॥**
**ಮನೋ ಮನೋರಥೈಶ್ಚಂದ್ರೇ ಬುದ್ಧಿಂ ಬೋಧ್ಯೈಃ ಕವೌ ಪರೇ ॥೨೮॥**

**ರಾಜನ್** ಧರ್ಮರಾಜನೇ **ಚಕ್ಷುಷಾ ಸಹ** ಕಣ್ಣುಗಳೊಡನೆ **ರೂಪಾಣಿ** ರೂಪಗಳನ್ನು **ಜ್ಯೋತಿಷಿ** ಸೂರ್ಯನಲ್ಲಿ **ಅಭಿನಿವೇಶಯೇತ್** ಪ್ರವೇಶಿಸುವದೆಂದು ಚಿಂತಿಸಬೇಕು ರಸಗಳೊಂದಿಗೆ **ಜಿಹ್ವಾಂ** ರಸನೇಂದ್ರಿಯವನ್ನು **ಅಪ್ಸು** ನೀರಿನಲ್ಲಿ ವರುಣನಲ್ಲಿ **ಘ್ರೇಯಃ** ಗಂಧಸಹಿತವಾಗಿ **ಘ್ರಾಣಂ** ಘ್ರಾಣೇಂದ್ರಿಯವನ್ನು **ಕ್ಷಿತೌ** ಭೂಮಿಯಲ್ಲಿ ಅಮುಖ್ಯಾಭಿಮಾನಿ ಭೂದೇವಿಯಲ್ಲಿ, ಮುಖ್ಯಾಭಿಮಾನಿಗಳಾದ ಅಶ್ವೀನಿದೇವತೆಗಳಲ್ಲಿ **ನ್ಯಸೇತ್** ಇಡಬೇಕು ಅವರ ಅಧೀನವಾಗಿರುವದೆಂದು ಚಿಂತಿಸಬೇಕು. **ಮನೋರಥೈಃ** ಮನೋರಥಗಳೊಂದಿಗೆ **ಮನಃ** ಮನಸ್ಸನ್ನು **ಚಂದ್ರೇ** ಚಂದ್ರನಲ್ಲಿಯೂ **ಬೋಧ್ಯೈಃ ಸಹ** ತಿಳಿಯುವ ವಿಷಯಗಳೊಂದಿಗೆ ಬುದ್ಧಿಯನ್ನು **ಪರೇ ಕವೌ** ಬೃಹಸ್ಪತ್ಯಾಚಾರ್ಯರಲ್ಲಿ ಚಿಂತಿಸಬೇಕು.

ಈ ಶ್ಲೋಕದಲ್ಲಿ ಕವಿ ಎಂದರೆ(ಉಶನಾ)ಶುಕ್ರಾಚಾರ್ಯರೇ?ಅಥವಾ 'ಕವಿರ್ಮನೀಷೀ' 'ಕವಿಂ ಪುರಾಣಂ' ಎಂದಿರುವದರಿಂದ ಹರಿಯೇ ಯಾವನೋ ಒಬ್ಬ ಕಾವ್ಯಮಾಡುವ ಜ್ಞಾನಿಯೇ? ಎಂಬ ಸಂದೇಹವನ್ನು ಮಂದಗೊಳಿಸುತ್ತ ವಿವಕ್ಷಿತ ಅರ್ಥವನ್ನು ಅನುವಾದ ಮಾಡಿ ಹೇಳುವರು.

**... ತಾತ್ಪರ್ಯ ...**

**ಪರಃ ಕವಿಃ ಬೃಹಸ್ಪತಿಃ ।**

ಶುಕ್ರಭಿನ್ನಗುರುತ್ವೇನ ತತ್ಸದೃಶರಾದವರು ಬೃಹಸ್ಪತ್ಯಾಚಾರ್ಯರು ಎಂದರ್ಥ ।।೨೮।।

**ಕರ್ಮಾಣ್ಯಧ್ಯಾತ್ಮನಾ ರುದ್ರೇ ಯದಹಂ ಸಮ್ಮತಾಃ ಕ್ರಿಯಾಃ ।**
**ಸತ್ತ್ವೇನ ಚಿತ್ತಂ ಕ್ಷೇತ್ರಜ್ಞೇ ಗುಣೈರ್ವೈಕಾರಿಕಂ ಪರೇ ॥೨೯॥**

**ಅಧ್ಯಾತ್ಮನಾ ಸಹ** ಅಹಂಕಾರದೊಂದಿಗೆ **ಕರ್ಮಾಣಿ** ಕೆಲಸಗಳನ್ನು **ಯತ್** ಯಾವ ಕಾರಣ **ಕ್ರಿಯಾಃ** ಕ್ರಿಯೆಗಳು **ಅಹಂ ಸಮತಾಃ** ಅಹಂಕಾರದಿಂದ ಹುಟ್ಟಿದವೆಂದು ಸಮ್ಮತವೋ, ಆ ಕಾರಣದಿಂದ **ರುದ್ರೇ** ರುದ್ರದೇವರಲ್ಲಿಯೂ **ಸತ್ತ್ವೇನ ಸಹ** ಸಾತ್ವಿಕಪುಣ್ಯಕರ್ಮಗಳೊಂದಿಗೆ **ಚಿತ್ತಂ** ಚಿತ್ತಾಭಿಮಾನಿರುದ್ರನನ್ನು **ಹಿರಣ್ಯಗರ್ಭೇ** ರುದ್ರಕಾರಣರಾದ ಬ್ರಹ್ಮದೇವರಲ್ಲಿ **ಗುಣೈಃ ಸಹ** ಗುಣಗಳೊಂದಿಗೆ **ವೈಕಾರಿಕಂ** ವೈಕಾರಿಕರೆಂದು ಕರೆಯಲ್ಪಡುವ ಬ್ರಹ್ಮದೇವರನ್ನು **ಕ್ಷೇತ್ರಜ್ಞೇ** ಕ್ಷೇತ್ರಜ್ಞನಾದ **ಪರೇ** ಶ್ರೀಹರಿಯಲ್ಲಿ ಲಕ್ಷ್ಮೀದ್ವಾರಾ ಲಯ ಚಿಂತಿಸಬೇಕು.

ಈ ಶ್ಲೋಕದಲ್ಲಿ ಶ್ರೀಹರಿಯಲ್ಲಿ ರುದ್ರನಿಗೆ ಸಾಕ್ಷಾತ್ ಲಯ ಹೇಳುತ್ತದೆ. ಅದು ಸರಿಯಲ್ಲ. ಸಾಕ್ಷಾತ್ ಶ್ರೀಹರಿಯು ರುದ್ರನಿಗೆ ಕಾರಣನಲ್ಲ ಆದ್ದರಿಂದ ಪ್ರಮಾಣದಿಂದ ಅದರರ್ಥವನ್ನು ಹೇಳುವರು.

**... ತಾತ್ಪರ್ಯ ...**

**ಚಿತ್ತಂ ಹಿರಣ್ಯಗರ್ಭೇ ತು ವಿಲಾಪ್ಯ ಪರಮಾತ್ಮನಿ ।**
**ಕ್ಷೇತ್ರಜ್ಞಾಖ್ಯೇ ಲಾಪಯೇಚ್ಚ ತತೋ ನಾನ್ಯತ್ ಸ್ಮರೇದ್ಬುಧಃ ॥ ಇತಿ ಚ ॥**

ಚಿತ್ತಾಭಿಮಾಮಾನಿ ರುದ್ರನನ್ನು ಅವನಿಗೆ ಕಾರಣನಾದ ಹಿರಣ್ಯಗರ್ಭನಲ್ಲಿ ಕಾರ್ಯಬ್ರಹ್ಮನಲ್ಲಿ ಲಯಗೊಳಿಸಿ **ತಂ** ಅವನನ್ನು **ಪರಮಾತ್ಮನಿ** ಶ್ರೀಹರಿಯಲ್ಲಿ ಮಾ ಚಾಸೌ ಆತ್ಮಾ ಚ ಮಾತ್ಮಾ ಪರತ್ವೇನ ಪರಮಾತ್ಮಾ **ತಸ್ಮಿನ್** ಲಕ್ಷ್ಮೀಗಿಂತ ಉತ್ತಮನಾದ ಕ್ಷೇತ್ರಜ್ಞನೆಂಬ ಶ್ರೀಹರಿಯಲ್ಲಿ ಲಯಗೊಳಿಸಬೇಕು.

ಆ ಲಯವಾದರೂ ರುದ್ರಾದಿ ಎಲ್ಲರಂತೆ ಹಿರಣ್ಯಗರ್ಭನಿಗೆ ನುಂಗುವದಲ್ಲ. ಕಿಂತು 'ಪ್ರಾಣಸ್ಯ ತೇಜಸಿ ಲಯಃ ಮಾರ್ಗಮಾತ್ರಮುದಾಹೃತಮ್ । ಪ್ರಾಣಃ ಹಿರಣ್ಯಗರ್ಭಃ' ಎಂದು ತತ್ವಪ್ರಕಾಶಿಕೆಯಲ್ಲಿ ಹೇಳಿದೆ. 'ಹರೇರತ್ಯಂತಸಾಮೀಪ್ಯಂ ಲಯೋ ಲಕ್ಷ್ಮ್ಯಾಃ ಪ್ರಕೀರ್ತಿತಃ' ಎಂದು ಹೇಳಿದ್ದನ್ನು ಅನುಸಂಧಾನ ಮಾಡಬೇಕು. ನಂತರ ಮನೆ ಮುಂತಾದ ಬೇರೆಯದನ್ನು ಸ್ಮರಿಸಬಾರದು. 'ತು' ಶಬ್ದದಿಂದ ಲಯದಲ್ಲಿ ವಿಶೇಷವನ್ನು ತಿಳಿಸಿರುವರು.

ಅನುಸಂಧಾನಕ್ರಮ ಹೀಗೆ. ರುದ್ರದೇವರಿಗೆ ಭಾರತೀದ್ವಾರಾ ವಾಯುದೇವರಲ್ಲಿ ಲಯ. ವಾಯುದೇವರಿಗೆ ಲಕ್ಷ್ಮೀದೇವಿಯಲ್ಲಿ ಲಯ. ಅವಳಿಗೆ ಶ್ರೀಹರಿಯಲ್ಲಿ ಲಯ. ಯಾರು ಲಕ್ಷ್ಮೀಯಲ್ಲಿ ಲಯ ಹೊಂದುವರು ಅವರು ಮತ್ತೆ ಸಂಸಾರಕ್ಕೆ

ಬರುವರು. 'ಪ್ರಕೃತೌ ವಿಲೀನೋ ಸಂಸಾರಮೇತಿ'ಎಂದಿದೆ. 'ಪರಮೇ ವಿಲೀನೋ ಮುಕ್ತಿಮೇತಿ' ಕಾರಣ ಪ್ರಾಣನೆಂದರೆ ಹಿರಣ್ಯಗರ್ಭ ಎಂದರ್ಥ ಮಾಡಿದಾಗ ಚಿತ್ತಾಭಿಮಾನಿ ಶೇಷನಿಗೆ ಬ್ರಹ್ಮನಲ್ಲಿ ಲಯ. ಬ್ರಹ್ಮದೇವರು ತೇಜೋಭಿದಳಾದ ಲಕ್ಷ್ಮೀಗೆ ನಮಸ್ಕರಿಸಿ ಶ್ರೀಹರಿಯಲ್ಲಿ ಪ್ರವೇಶಿಸುವರು ಎಂದರ್ಥ. ಲಕ್ಷ್ಮೀದೇವಿಗೆ ಶ್ರೀಹರಿಯ ಅತ್ಯಂತ ಸಾಮೀಪ್ಯವೇ ಲಯವೆಂದು ತಿಳಿಯಬೇಕು.

'ವಿಕಾರ ಏವ ವೈಕಾರಃ ತದಸ್ಯಾಸ್ತೀತಿ ವೈಕಾರಿ ಸ ಚಾಸೌ ಕಶ್ಚ ಬ್ರಹ್ಮಾ ಚ ತಂ ವೈಕಾರಿಕಂ' ಮೂಲದಲ್ಲಿ ತಾತ್ಪರ್ಯದಲ್ಲಿ ರಮೆಯನ್ನು ಗ್ರಹಣ ಮಾಡದಿರುವದು. ಗಿಲನರೂಪಮುಖ್ಯಾಮುಖ್ಯಲಯಮಾತ್ರ ವಿವಕ್ಷೆಯಿಂದ ಎಂದು ತಿಳಿಯಬೇಕು.

**ಅಪ್ಸು ಕ್ಷಿತಿಮಪೋ ಜ್ಯೋತಿಷ್ಯದೋ ವಾಯೌ ನಭಸ್ಯಮುಮ್ ।**
**ಕೂಟಸ್ಥೇ ತಚ್ಚ ಮಹತಿ ತದವ್ಯಕ್ತೇಽಕ್ಷರೇ ತು ತತ್ ॥೩೦॥**

**ಅಪ್ಸು** ನೀರಿನಲ್ಲಿ **ಕ್ಷಿತಿಂ** ಭೂಮಿಯನ್ನು **ಅಪಃ** ನೀರನ್ನು **ಜ್ಯೋತಿಷೀ** ಅಗ್ನಿಯಲ್ಲಿ **ಅದಃ** ಅಗ್ನಿಯನ್ನು **ವಾಯೌ** ಗಾಳಿಯಲ್ಲಿ **ಅಮುಂ** ಗಾಳಿಯನ್ನು **ನಭಸಿ** ಆಕಾಶದಲ್ಲಿ **ಅಮುಂ** ಆಕಾಶವನ್ನು **ಕೂಟಸ್ಥೇ** ವೈಕಾರಿಕ, ತೈಜಸ, ತಾಮಸ ಸಮೂಹರೂಪ ಅಹಂಕಾರತತ್ವದಲ್ಲಿ **ತಚ್ಚ** ಅಹಂಕಾರವನ್ನು **ಮಹತಿ** ಮಹತತ್ವದಲ್ಲಿ **ತತ್** ಮಹತ್ತತ್ವನ್ನು **ಅವ್ಯಕ್ತೇ** ಅವ್ಯಕ್ತತತ್ವಾಭಿಮಾನಿ ರಮೆಯಲ್ಲಿ **ತತ್** ಅವ್ಯಕ್ತವನ್ನು **ಅಕ್ಷರೇ** ನಾರಾಯಣನಲ್ಲಿ ಲಯವಾಗುವರೆಂದು ಚಿಂತಿಸಬೇಕು. 'ತು' ಶಬ್ದವು ಜಡಕಾರ್ಯಗಳಿಗೆ ಕಾರಣ. ಜಡ ಏಕತಾ ಅಭಿಮಾನಿಗಳಾದ ಕಾರ್ಯಗತಚೇತನರಿಗೆ ಸ್ವಾಂಶಕಾರಣಗತ ಚೇತನತಾದ್ರೂಪ್ಯವು ಹೀಗೆ ಅಕ್ಷರಪರ್ಯಂತ ಲಯವಿಶೇಷಸೂಚಕವು. ॥೩೦॥

**ಇತ್ಯಕ್ಷರತಯಾಽಽತ್ಮಾನಂ ಚಿನ್ಮಾತ್ರಮವಶೇಷಿತಮ್ ।**
**ಜ್ಞಾತ್ವಾಽದ್ವಯೋಽಥ ವಿರಮೇದ್ ದಗ್ಧಯೋನಿರಿವಾನಲಃ ॥೩೧॥**

**ಇತಿ** ಈ ರೀತಿಯಾಗಿ **ಅಕ್ಷರತಯಾ** ಎಲ್ಲರ ಲಯಕ್ಕೆ ಆಲಯನಾಗಿ **ಸ್ವಯಂ** ಲಯರಹಿತನಾದ್ದರಿಂದ ನಾಶರಹಿತನಾದ **ಆತ್ಮಾನಂ** ಪರಮಾತ್ಮನನ್ನು **ಚಿನ್ಮಾತ್ರಂ** ಜ್ಞಾನಾನಂದಾತ್ಮಕನೆಂದು **ಅವಶೇಷಿತಂ** ಉಳಿದವನೆಂದು **ಜ್ಞಾತ್ವಾ** ತಿಳಿದು **ಅಥ** ನಂತರ **ಅದ್ವಯಂ** ಹರಿಯನ್ನು ಬಿಟ್ಟು ಬೇರೆ ಸ್ಮರಣೆ ರಹಿತನಾಗಿ **ದಗ್ಧಯೋನಿಃ** ಸುಡಲ್ಪಟ್ಟ ತನಗೆ ಕಾರಣವಾದ ಕಟ್ಟಿಗೆಯುಳ್ಳ **ಅನಲಃ ಇವ** ಅಗ್ನಿಯಂತೆ ನಿವ್ಯಾರ್ಪಾರವಾದಂತೆ **ವಿರಮೇತ್** ಬೇರೆ ಕಾಲದಲ್ಲಿ **ಕಾರ್ಯತ್ವೇನ** ಪ್ರಸಕ್ತವಾದದ್ದರಿಂದ ಕೃತ್ಯಗಳಿಂದ ವಿರಮಿಸಬೇಕು.

ಈ ಶ್ಲೋಕದಲ್ಲಿ ಆತ್ಮಪದ ಜೀವವಾಚಿಯಲ್ಲ ಎಂದು ತಿಳಿಸಲು ಅನುವಾದ ಮಾಡಿ ವ್ಯಾಖ್ಯಾನಿಸುವರು-

**... ತಾತ್ಪರ್ಯ ...**

**ಆತ್ಮಾನಂ ಪರಮಾತ್ಮಾನಂ । ಅದ್ವಯಃ ತತೋಽನ್ಯಸ್ಮೃತಿವರ್ಜಿತಃ । ದಗ್ಧಯೋನಿ-ರ್ಯಥಾಽನಲ ಇತಿ ಕೃತ್ಯಭಾವಮಾತ್ರಮ್ ॥**

ಅದ್ವಯವೆಂದರೆ ದ್ವಿತೀಯವಸ್ತು ರಹಿತ ಎಂಬರ್ಥ ಸರಿಯಲ್ಲವೆಂದು ಹೇಳುವರು. ಅಂದರೆ ಕಾರ್ಯಕಾರಣಲಯಚಿಂತನದಿಂದ ಭಿನ್ನವಾದ ಪುತ್ರಾದಿಸ್ಮರಣವಿಲ್ಲದವನು ಎಂದರ್ಥ. ಇದಕ್ಕೆ ಅನುರೂಪ ವಿವಕ್ಷಿತಾರ್ಥ ಹೇಳಿ 'ದಗ್ಧಯೋನಿರ್ಯಥಾನಲಃ' ಎಂದು ದೃಷ್ಟಾಂತಮಾಡಿ ಆ ವಿಷಯದಲ್ಲಿ ಸಮ್ಮತಿಸುವ ಪ್ರಮಾಣ ಉದಾಹರಿಸುವರು. ಹರಿಸ್ಮರಣಾತಿರಿಕ್ತ ಮಾಡಬೇಕಾದುದೇನಿಲ್ಲ ಎಂಬ ಅಭಿಪ್ರಾಯದಿಂದ ಈ ದೃಷ್ಟಾಂತ ಹೇಳಿದ್ದು ಎಂದು ಭಾವ.

**ನ ಹರಿಸ್ಮರತಃ ಕೃತ್ಯಂ ದಗ್ಧೇಂದನಹುತಾಶವತ್ । ಇತಿ ಚ ।**

ಕಟ್ಟಿಗೆ ಸುಟ್ಟ ಮೇಲೆ ದಾಹ್ಯವಿಲ್ಲದ್ದರಿಂದ ಉರಿಯುವದಿಲ್ಲವೋ ಹಾಗೆ ಹರಿಯನ್ನು ಸ್ಮರಿಸುವವನಿಗೆ ಕೃತ್ಯವಿಲ್ಲವೆಂದು ಭಾವ. ॥೩೧॥

**॥ ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ದ್ವಾದಶೋಽಧ್ಯಾಯಃ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**

★★★

# ಅಥ ತ್ರಯೋದಶೋಽಧ್ಯಾಯಃ

**ಸಾರಾಂಶ**

ಸನ್ಯಾಸಿಯಾದವನು ಒಂದು ಊರಿನಲ್ಲಿ ಒಂದೇ ದಿನ ವಾಸಮಾಡಬೇಕು. ಸಂಚಾರ ಮಾಡಲು ಅಸಮರ್ಥನಾಗಿದ್ದರೆ ಪುಣ್ಯಕ್ಷೇತ್ರದಲ್ಲಿ ಪಾಠ-ಪ್ರವಚನ ಜಪ-ತಪಾದಿಗಳನ್ನು ಮಾಡುತ್ತ ಇರಬೇಕು. ಬ್ರಹ್ಮಚಾರಿ,ಗೃಹಸ್ಥ,ವಾನಪ್ರಸ್ಥ ಯಾವುದೇ ಆಶ್ರಮದವರಾಗಿರಲಿ ವಿರಕ್ತನಾದವನು ಸನ್ಯಾಸಿಯಾಗಬಹುದು. ಸನ್ಯಾಸಿಗಳಲ್ಲಿ ಕುಟೀಚಕ, ಬಹೂದಕ, ಹಂಸ, ಪರಮಹಂಸ ಎಂದು ನಾಲ್ಕುವಿಧಗಳಿವೆ. ಪರಮಹಂಸರು ಬಟ್ಟೆ ಉಡದಿರುವದು ಉತ್ತಮ. ಉಡುವದಾದರೆ ಕೌಪೀನದೊಂದಿಗೆ ಉಡಬೇಕು. ದಂಡ ಕಮಂಡಲುಗಳನ್ನು ಧರಿಸಬೇಕು. ಎಲ್ಲವೂ ಭಗವಂತನ ಅಧೀನವೆಂದು ತಿಳಿಯಬೇಕು.

★★★

ಕ್ರಮಪ್ರಾಪ್ತ ಯತಿಧರ್ಮವನ್ನು ಹೇಳುವರು. ಹಿಂದೆ ತನಗೆ ವಿಹಿತಕ್ರಿಯೆ ಮಾಡಲು ಅಸಮರ್ಥನಾದಾಗ ಆತ್ಮಾರೋಪಣ ಅನಶನಾದಿಗಳಿಂದ ವಿರಾಮ ಹೇಳಿತ್ತು. ಈ ವಾನಪ್ರಸ್ಥಾಶ್ರಮಿಯು ವಿಹಿತವಾದ ಕಾರ್ಯಮಾಡಲು ಸಮರ್ಥನಾಗಿದ್ದರೆ, ವಿರಕ್ತನಾದರೆ ಸನ್ಯಾಸಸ್ವೀಕರಿಸಬೇಕೆಂದು ಹೇಳುವರು-

**ನಾರದ ಉವಾಚ**

**ಕಲ್ಪಸ್ತ್ವೇವಂ ಪರಿವ್ರಜ್ಯ ದೇಹಮಾತ್ರಾವಶೇಷಿತಃ ।**
**ಗ್ರಾಮೈಕರಾತ್ರವಿಧಿನಾ ನಿರಪೇಕ್ಷಶ್ಚರೇನ್ಮಹೀಮ್ ॥೧॥**

**ಯದಿ ಕಲ್ಪಃ ಏವ** ಹೇಳಿದ ಶ್ರಮವನ್ನು ಸಹಿಸಲು ಸಮರ್ಥನಾಗಿದ್ದರೆ **ಪರಿವ್ರಜ್ಯ** ಸನ್ಯಾಸವನ್ನು ಸ್ವೀಕರಿಸಿ **ದೇಹಮಾತ್ರಾವಶೇಷಿತಃ** ಕೇವಲ ದೇಹವನ್ನಷ್ಟೇ

ಉಳಿಸಿಕೊಂಡವನಾಗಿ **ಗ್ರಾಮೈಕರಾತ್ರವಿಧಿನಾ** ಒಂದು ಊರಲ್ಲಿ ಒಂದು ರಾತ್ರಿ ಮಾತ್ರ ಇರುವ ವಿಧಾನದಿಂದ **ನಿರಪೇಕ್ಷಃ** ವಿಷಯಾಭಿಲಾಷೆ ಇಲ್ಲದವನಾಗಿ **ಮಹೀಂ ಚರೇತ್** ಭೂಮಿಯನ್ನು ಸಂಚರಿಸಬೇಕು.

**ಅಧೀತವೇದೋ ಜಪಕೃತ್ ಪುತ್ರಾದ್ಯಾನಂದದೋಽಗ್ನಿಮಾನ್ ।**
**ಶಕ್ತ್ಯಾಚ ಯಜ್ಞಕೃನ್ಮೋಕ್ಷೇ ಮನಃ ಕುರ್ಯಾತ್ತು ನಾನ್ಯಥಾ ॥**

ವೇದಾಧ್ಯಯನಮಾಡಿದವನು, ಜಪ ಮಾಡುವವನು ಪುತ್ರ ಮುಂತಾದವರಿಗೆ ಆನಂದವನ್ನೀಯುವವನು, ಅಗ್ನಿಹೋತ್ರವಿಟ್ಟವನು ಶಕ್ತ್ಯನುಸಾರ ಯಜ್ಞಮಾಡಬೇಕು. ಅಂದರೆ ಸನ್ಯಾಸ ಅಪೇಕ್ಷಿಸಬೇಕು. ಇವೆಲ್ಲ ಇಲ್ಲದಿದ್ದರೆ ಇಚ್ಛಿಸಬಾರದು ಎಂಬ ಈ ನಿಯಮವನ್ನು 'ತು' ಶಬ್ದದಿಂದ ನಿರಾಕರಿಸುವರು. 'ಯದಹರೇವ ವಿರಜೇತ್ ತದಹರೇವ ಪ್ರವ್ರಜೇತ್' ಮುಂತಾಗಿ ಅಪವಾದವಿರುವದರಿಂದ ಯಾವಾಗ ವೈರಾಗ್ಯಬರುವದೋ, ಆಗಲೇ ಸನ್ಯಾಸವಿಹಿತವಾದ್ದರಿಂದ ಬ್ರಹ್ಮಚಾರಿಗಳು ಯತ್ಯಾಶ್ರಮ ಸ್ವೀಕರಿಸುವದು ಕಂಡಿದ್ದರಿಂದ ಮತ್ತು 'ಉಪನೀಯ ಗುರುಃ ಶಿಷ್ಯಂ ಮಹಾವ್ಯಾಹೃತಿಪೂರ್ವಕಮ್ । ವೇದಮಧ್ಯಾಪಯೇತ್ ಪಶ್ಚಾತ್ ಶೌಚಾಚಾರಾಶ್ಚ ಶಿಕ್ಷಯೇತ್' ಎಂದಿರುವದರಿಂದ ಗುರುವು ಶಿಷ್ಯನಿಗೆ ಪ್ರಣವಪೂರ್ವಕವೇದಾಧ್ಯಯನ ಮಾಡಿಸಿ ಶುದ್ಧಿ ಆಚಾರಗಳನ್ನೆಲ್ಲ ತಿಳಿಸುತ್ತಾನೆ. ಆದ್ದರಿಂದ ವಟುವಿಗೆ ಪಾರಮಹಂಸ್ಯಯೋಗ್ಯತಾ ಇರುವದು ಕಾರಣ ಗೃಹಸ್ಥನಾಗಿ ಅಗ್ನಿಹೋತ್ರಾದಿಗಳನ್ನು ಮಾಡಿಯೇ ಸನ್ಯಾಸವೆಂಬ ನಿಯಮವಿಲ್ಲವೆಂದು ಭಾವ. ।।೧।।

ಕುಟೀಚಕ, ಬಹೂದಕ, ಹಂಸ, ಪರಮಹಂಸ, ಎಂದು ನಾಲ್ಕುವಿಧ ಸನ್ಯಾಸಿಗಳಲ್ಲಿ ಪರಮಹಂಸರಿಗೆ ದೇಹಮಾತ್ರಾವಶೇಷಿತ್ವ ಹೇಳಿದೆ ಅದಕ್ಕೆ ಅಪವಾದ ಹೇಳುವರು-

**ಬಿಭೃಯಾದ್ ಯದ್ಯಸೌ ವಾಸಃ ಕೌಪೀನಾಚ್ಛಾದನಂ ಪರಮ್ ।**
**ತ್ಯಕ್ತಂ ನ ಲಿಂಗದಂಡಾಭ್ಯಾಮನ್ಯತ್ ಕಿಂಚಿದನಾಪದಿ ॥೨॥**

**ಅಸೌ** ಪರಮಹಂಸರು **ಯದಿ ವಾಸಃ ಬಿಭೃಯಾತ್** ವಸ್ತುತಃ ದಿಗಂಬರರೇ ಆಗಿರಬೇಕು. ಒಂದು ವೇಳೆ ಗುಹ್ಯೇಂದ್ರಿಯ ಮುಚ್ಚಿಕೊಳ್ಳಲು ಜನರ ಪ್ರಾರ್ಥನೆಯಂತೆ ವಸ್ತ್ರವನ್ನು ಧಾರಣಮಾಡುವದಾದರೆ **ಕೌಪೀನಾಚ್ಛಾದನಂ ಪರಂ ವಾಸಃ ಬಿಭೃಯಾತ್** ಕೌಪೀನ ಎಂದರೆ ಗುಹ್ಯೇಂದ್ರಿಯ. ಕೇವಲ ಅದರ ಆಚ್ಛಾದನವನ್ನು (ಮುಚ್ಚಲು ಎಷ್ಟು ಬೇಕೋ ಅಷ್ಟು ಮಾತ್ರ) ಧರಿಸಬೇಕು. ಸ್ವಾರ್ಜಿತವನ್ನು ವರ್ಜಿಸಿದವನಿಗೆ ಅದಾದರೂ ಹೇಗೆ ದೊರೆಯುವದು ಎಂದರೆ **ತ್ಯಕ್ತಂ**

ಪರಕೀಯರಿಂದ ಕೊಡಲ್ಪಟ್ಟದ್ದನ್ನು ಎಂದರ್ಥ. 'ತೇನ ತ್ಯಕ್ತೇನ ಭುಂಜೀಥಾಃ' ಎಂಬ ಈಶಾವಾಸ್ಯೋಪನಿಷದ್ಭಾಷ್ಯದಲ್ಲಿ 'ತ್ಯಕ್ತೇನ ದತ್ತೇನ' ಎಂದು ವ್ಯಾಖ್ಯಾನಿಸಿದ್ದಾರೆ. ಕೌಪೀನೇನ ಸಹಿತಂ ಆಚ್ಛಾದನಂ ಚ ಎಂದಾದರೂ ಮಾಡಬಹುದು. 'ಶೀತಾತಪನಿವಾರಾರ್ಥಮೇಕಮಾಚ್ಛಾದನಂ ಯತೇಃ । ಕೌಪೀನಾತ್ ಪರಮಿತ್ಯಾಹುರೇಕೇನಾನ್ಯದ್ವಿನಾ ವಪುಃ । ಎಂದು ವಚನವಿದೆ. **ಲಿಂಗದಂಡಾಭ್ಯಾಂ ಅನ್ಯತ್** ಚಕ್ರಶಂಖಾದಿ ಚಿಹ್ನೆಗಳು ಕಮಂಡಲು ಮೊದಲಾದವು ಹಾಗೂ ದಂಡ(ಮಸ್ಕರ)ಇವುಗಳನ್ನು ಬಿಟ್ಟು **ಅನಾಪದಿ** ಆಪತ್ತಿಲ್ಲದಿರುವಾಗ **ಕಿಂಚಿತ್** ಏನನ್ನೂ **ನ ಬಿಭೃಯಾತ್** ಧರಿಸಬಾರದು.

ವಿಶೇಷ ಃ- ಇಲ್ಲಿ ದ್ವಿವಚನದಿಂದ ದಂಡ ಒಂದೇ ಎಂದು ಸೂಚಿತವಾಗುವದು. ಇಲ್ಲದಿದ್ದರೆ 'ಲಿಂಗದಂಡೈಃ' ಎನ್ನುತ್ತಿದ್ದರು. ಆಪತ್ತಿನಲ್ಲಿ ಬೇರೆಯದನ್ನು ಧರಿಸಿದರೆ ಯತಿನಿಯಮ ಭಂಗವಿಲ್ಲ. ಕೆಲವರು ಕೌಪೀನ ಒಂದು ಅದನ್ನು ಮುಚ್ಚುವ ಉಡುವ ವಸ್ತ್ರ. ಪರಂ ಎಂದರೆ ಹೊದುವ ವಸ್ತ್ರ ಹೀಗೆ ಅರ್ಥಮಾಡುವರು. 'ಕೌಪೀನ ಸ್ಯಾದಕಾರ್ಯೇ ಚ ಗುಹ್ಯಚೀರಪ್ರಭೇದಯೋಃ' ಎಂದು ವಿಶ್ವವಿದೆ. ಗುಹ್ಯೇಂದ್ರಿಯಕ್ಕೆ,ಹರಕು ಬಟ್ಟೆಗೆ ಕೌಪೀನವೆನ್ನುತ್ತಾರೆ. ಶಾಲೀನ ಕೌಪೀನ ಎಂಬ ಶಬ್ದಗಳು ಅದೃಷ್ಟ ಅಕಾರ್ಯ ಎಂಬರ್ಥದಲ್ಲಿ ನಿಪಾತಿತವಾಗಿವೆ. 'ಶಾಲಾಪ್ರವೇಷ್ಟುಂ ಅರ್ಹತಿ ಕೂಪಪತನಮರ್ಹತಿ ಇತಿ ಚ'। ಶಾಲಿನ ಎಂದರೆ ದೃಷ್ಟ. ಕೌಪೀನ. ಎಂದರೆ ಪಾಪಸಾಧನವಾದ್ದರಿಂದ ಗೌಪ್ಯವಾದ್ದರಿಂದ ಪುರುಷನ ಲಿಂಗವು ಕೌಪೀನ ಅದರ ಸಂಬಂಧದಿಂದ ಅದನ್ನು ಮುಚ್ಚುವ ಬಟ್ಟೆಗೂ ಕೌಪೀನವೆನ್ನುವರು.

ಕೆಲವರು ಲಜ್ಜೆಗೆ ಕಾರಣವಾದ್ದರಿಂದ ನೋಡಬಾರದ್ದಾದ್ದರಿಂದ ಪುರುಷಲಿಂಗವು ಕೌಪೀನ ಅಸ್ಪೃಶ್ಯವಾದ್ದರಿಂದ ಅದರ ಆಚ್ಛಾದನವೆಂದು ಹೇಳುವರು. ಸಿದ್ಧಾಂತಕೌಮುದೀ ತತ್ವಸುಬೋಧಿನಿಯಲ್ಲಿ ಹೇಳಿದ್ದರಿಂದ ತುಂಡುಬಟ್ಟೆ ಕೌಪೀನ. ಪರಮಹಂಸರಿಗೆ ಮನೋ ವಾಕ್ ಕಾಯಗಳ ದಂಡನೆ ಎಂಬ ತ್ರಿದಂಡಬೇಕು. ಹೊರತು ಮೂರು ದಂಡಗಳು ಇವರ ಲಕ್ಷಣವಲ್ಲ. 'ಸರ್ವಭೂತಹಿತಃ ಶಾಂತಃ ತ್ರಿದಂಡೀ ಸಕಮಂಡಲಃ' ಎಂಬ ಮಾತಿಗೂ ಇದೇ ಅರ್ಥ. (ಶ್ರೀಸತ್ಯಧರ್ಮರು)

ಕೌಪೀನಂ ಚ ಆಚ್ಛಾದನಂ ಚ ತಯೋಃ ಸಮಾಹಾರಃ ಕೌಪೀನಾಚ್ಛಾದನಮ್ । 'ಸರ್ವೋಽಪಿ ದ್ವಂದ್ವಃ ವಿಭಾಷಯಾ ಏಕವದ್ಭವತಿ'ಎಂದು ನಿಯಮ. ಕೌಪೀನರೂಪ ಆಚ್ಛಾದನವೆಂದಲ್ಲ. ಕೂಪಪತನಮರ್ಹತಿ ಎಂಬರ್ಥದ ಕೂಪಶಬ್ದಾತ್ ಖಯ ಪ್ರತ್ಯಯೇನ ನರಕಪತನಸಾಧನಂ ಪಾಪಂ ಕೌಪೀನ ಅದಕ್ಕೆ ಸಾಧನವಾದ ಲಿಂಗವೂ ಕೌಪೀನ. ಅದರ ಆಚ್ಛಾದನವಸ್ತ್ರವೂ ನಿರೂಢಲಕ್ಷಣಯಾ ಕೌಪೀನ ಎಂದು

ಕರಿಸಿಕೊಳ್ಳುವದು. ವೈಯ್ಯಾಕರಣಿಗಳು ಹಾಗೆ ನಿರ್ವಚನ ಮಾಡಿರುವರು. 'ಸತ್ಕೌಪೀನ ಪೀತಕೃಷ್ಣಾಜನಶ್ರೀಃ' ಎಂದು ಪ್ರಯೋಗವಿದೆ. ಆದ್ದರಿಂದ ಕೌಪೀನಪದದಿಂದ ಅದನ್ನು ಬಿಟ್ಟು ನಿತಂಬಾಚ್ಛಾದನವನ್ನು ಆಚ್ಛಾದನ ಪದದಿಂದ ಸ್ವೀಕರಿಸಬೇಕು. ಆದ್ದರಿಂದಲೇ ಮಧ್ವವಿಜಯದಲ್ಲಿ 'ಶುಭಶುದ್ಧನಿತಂಬಬಿಂಬ-ರಾಜನ್ನವಕೌಶೇಯವಿಶೇಷಬಾಹ್ಯವಸ್ತ್ರಮ್ । ನನು ಕುಕ್ಷಿಗಲಾಲಿಕೇಷು ರೇಖಾತ್ರಿತಯೇನ ಪ್ರಕಟೇನ ಶೋಭಮಾನಂ' ಎಂದು ಕೌಪೀನಾತಿರಿಕ್ತ ನಿತಂಬಾಚ್ಛಾದನವನ್ನು ಹೇಳಿರುವರು. ಪರಂ ಉತ್ತಮವಾದ ಶೀತ ಆತಪಾದಿನಿವಾರಣ ಸಮರ್ಥವಾದ ಆಚ್ಛಾದನಬೇಕು. ಅದನ್ನು ಮಧ್ವವಿಜಯದಲ್ಲಿ 'ಮೃದುಸೂಕ್ಷ್ಮಘನಾರುಣಾವಿಕಾಚ್ಛಪ್ರಕಟಪ್ರಾವರಣೇನ ಭಾಸಮಾನಂ । ಅತಿನೂತನತಿಗ್ಮಭಾನುಭಾಸಂ ನಿಕರೇಣೇವ ಸುವರ್ಣಸಾನುಮಂತಂ' ಶೀತಾತಪಗಳನ್ನು ಕಳೆಯಲು ಕೌಪೀನ ಬಿಟ್ಟು ಇನ್ನೊಂದು ಸಾಕು. 'ಏಕಾನ್ಯಾನ್ಯದ್ವಿನಾ ವಪುಃ' ಎಂದಿದೆ. ಅದರ ವಿರೋಧ ಬರುವದು ಎನ್ನುವಂತಿಲ್ಲ. ಅಲ್ಲಿ ಏಕ ಎಂದು ಶೀತಾತಪನಿವಾರಣ ದಕ್ಷತ್ವರೂಪಮುಖ್ಯತ್ವವನ್ನು ಹೇಳುವದು. ಸಂಖ್ಯಾಪರವೆಂದರೆ ಕೌಪೀನದೊಡನೆ ಎರಡಾಗುವದರಿಂದ ವಿರೋಧ ಬರುವದು. ಮತ್ತು ನಿತಂಬಾಚ್ಛಾದಕ ಎಂದು ಹೇಳುವ ಮಧ್ವವಿಜಯದ ವಿರೋಧ ಬರುವದು. ಒಂದೇ ಎರಡೂ ಕೆಲಸಮಾಡುವದು. ಶೀತನಿವಾರಣ ನಿತಂಬಾಚ್ಛಾದನ ಎನ್ನುವಂತಿಲ್ಲ. ಹೊರಗಿನ ಬಟ್ಟೆಗೆ ನಾಭಿಯ ಕೆಳಗೆ ನಿಷಿದ್ಧವಿದೆ. ಮಧ್ವವಿಜಯದಲ್ಲಿ ನಿತಂಬಾಚ್ಛಾದಕವಸ್ತು ರೇಷ್ಮೆಯದು. ವಾತಾತಪನಿವಾರಣಾರ್ಥ ಉಣ್ಣೆಯವಸ್ತ್ರ ಹೇಳಿದೆ. ಏಕತ್ವಸಂಖ್ಯಾರ್ಥಕ ವೆಂದರೆ ಕರವಸ್ತ್ರವನ್ನು ಇಟ್ಟುಕೊಳ್ಳುವಂತಿಲ್ಲ. ಬೇಡವೆಂದರೆ ಮಧ್ವವಿಜಯದಲ್ಲಿ 'ಕರಗಪಟಪಿಂಡಾರ್ಥಮತಿಕೃತ್' ಎಂದು ಹೇಳಿದ್ದರ ವಿರೋಧ ಬರುವದು. ಕಾರಣ ನಾವು ಹೇಳಿದಂತೆ ಎರಡು ವಸ್ತ್ರಗಳೆಂದೇ ಅರ್ಥಮಾಡಬೇಕು.

**ತ್ಯಕ್ತಂ** ನೀರಲ್ಲಿ ಬಿಟ್ಟವಸ್ತ್ರವನ್ನು ಮತ್ತೆ ಧರಿಸಬಾರದು. ಸನ್ಯಾಸ ಸ್ವೀಕರಿಸುವಾಗ ಮೊದಲಿನ ಬಟ್ಟೆ ನೀರಿನಲ್ಲಿ ಬಿಡಬೇಕು. ದೇಹಮಾತ್ರಾವಶೇಷಿತ ಎಂಬುದಕ್ಕೆ ಅಪವಾದ 'ಲಿಂಗದಂಡಾಭ್ಯಾಂ' ಎಂದು. ಕಮಂಡಲು ಒಂದು ಹೊರತು ತ್ರಿದಂಡವಲ್ಲ. 'ತ್ರಿದಂಡಧಾರಿಣಂ ಭಿಕ್ಷುದ್ವಿಜಂ ಚಾಪಿ ತ್ರಿಶೂಲಿನಮ್ । ಗಾರ್ದಭಂ ಯಾನಮಾರೋಪ್ಯ ಸ್ವರಾಷ್ಟ್ರಾದ್ವಿಪ್ರವಾಸಯೇತ್' ಮುಂತಾದ ವಚನ ವಿರೋಧವಿದೆ. 'ಚತುರ್ಧಾ ಭಿಕ್ಷವೋ ವಿಪ್ರಾಃ ಸರ್ವೇ ಚೈವ ತ್ರಿದಂಡಿನಃ' ಮುಂತಾದ ತ್ರಿದಂಡವಿಧಿ ವಿರೋಧವಿಲ್ಲ. 'ದಂಡವಾಗ್ದೇಹಚೇತಸಾ'ಎಂದು ಹೇಳುವ ದಂಡತ್ರಯಪರವದು. ॥೨॥

**ತತ್ಸಂಗಾಚ್ಛನಕ್ಯೈಃ ಸಂಗಮಾತ್ಮಜಾಯಾತ್ಮಜಾದಿಷು ।**
**ವಿಮುಂಚೇನ್ಮುಂಚಮಾನೇಷು ಸ್ವಯಂ ಸ್ವಪ್ನವದುತ್ಥಿತಃ ॥೫॥**

**ತತ್ಸಂಗಾತ್** ಉಪಶಾಂತ ಜನರ ಸಹವಾಸದಿಂದ **ಶನಕ್ಯೈಃ** ನಿಧಾನವಾಗಿ **ಮುಂಚಮಾನೇಷು** ದೈವಾತ್ ಬಿಟ್ಟು ಹೋಗುವ **ಆತ್ಮ** ದೇಹ **ಜಾಯಾ** ಹೆಂಡತಿ **ಆತ್ಮಜ** ಮಕ್ಕಳ **ಆದಿಷು** ಮುಂತಾದವುಗಳಲ್ಲಿ **ಸಂಗಂ** ಸ್ನೇಹವನ್ನು **ಉತ್ಥಿತಃ** ಸ್ವಪ್ನದಿಂದ ಎಚ್ಚೆತ್ತವನು **ಸ್ವಪ್ನವತ್** ಕನಸಿನಲ್ಲಿ ಕಂಡ ಮಕ್ಕಳು ಮುಂದೆ ಅವುಗಳಲ್ಲಿಯಂತೆ **ಸ್ವಯಂ ವಿಮುಂಚೇತ್** ತಾನೇ ಬಿಡಬೇಕು. ಶ್ರದ್ಧಾಪೂರ್ವಕ ಭಗವತ್ಕಥಾಶ್ರವಣ ಭಕ್ತರ ಪ್ರೀತಿಸಂಪಾದನ ಸ್ವಕೀಯರ ಸ್ನೇಹಪರಿತ್ಯಾಗ ಮಾಡಬೇಕೆಂದು ಭಾವ. ॥೫॥

**ಯಾವದರ್ಥಂ ಉಪಾಸೀನೋ ದೇಹೇ ಗೇಹೇ ಚ ಪಂಡಿತಃ ।**
**ವಿರಕ್ತೋ ರಕ್ತವತ್ ತತ್ರ ನೃಲೋಕೇ ನರತಾಂ ನ್ಯಸೇತ್ ॥೬॥**

**ಪಂಡಿತಃ** ಜ್ಞಾನಿಯು **ಯಾವದರ್ಥಂ** ಎಷ್ಟು ಪ್ರಯೋಜನವಿದೆಯೋ ಅಷ್ಟುಮಾತ್ರ **ದೇಹೇ** ದೇಹದಲ್ಲಿ **ಗೇಹೇ** ಮನೆಯಲ್ಲಿ, ಮಡದಿಯಲ್ಲಿ **ಉಪಾಸೀನಃ** ಇರುವವನಾಗಿ **ತತ್ರ** ದೇಹಾದಿಗಳಲ್ಲಿ **ವಿರಕ್ತಃ** ವಿರಕ್ತನಾಗಿ(ಒಳಗೆ)**ರಕ್ತವತ್** ಹೊರಗೆ ಆಸಕ್ತನಂತೆ ತೋರುತ್ತಾ **ನೃಲೋಕೇ** ಜನರ ಮಧ್ಯದಲ್ಲಿ **ನರತಾಂ** ಅಜ್ಞತೆಯನ್ನು **ನ್ಯಸೇತ್** ಬಿಡಬೇಕು. ಕ್ರಮವಾಗಿ ಜ್ಞಾನಿಯಾಗಬೇಕು ಎಂದರ್ಥ.

ವಿಶೇಷ ಃ-'ನರಸ್ತು ರಾಮೇ ಕರ್ಪೂರೇ ನರೋಽಜ್ಞೋ ಮಾನವೇಽರ್ಜುನೇ' ಎಂದು ವಿಶ್ವವಿದೆ. ನೃಲೋಕೇ ನರತಾಂ ನ್ಯಸೇತ್ ಜನರಲ್ಲಿ ಇವನೇ ಪುರುಷನೆಂದು ತನ್ನ ಪೌರುಷವನ್ನು ಪ್ರಕಟಿಸಬೇಕು ಎಂದು ಕೆಲವರು ವ್ಯಾಖ್ಯಾನಿಸುವರು. **ನರತಾಂ ನ್ಯಸೇತ್** ಪಶುಪ್ರಾಯರು ದೇಹಾದಿಗಳಲ್ಲಿ ಅಹಂ ಮಮತಾ ಇದ್ದವರು ಎಂದು ತಿಳಿಯಬೇಕು. **ನರತಾಂ** 'ಲಾ ಪರಿವರ್ತನೇ' ಇದರ ಮೇಲೆ ಕ್ತಪ್ರತ್ಯಯ ರತಾ=ಚಂಚಲತಾ, ಸಾ ನ ಇತಿ ನರತಾ ಅಚಂಚಲತಾ ತಾಂ ನಿತ್ಯತೆಯನ್ನು ನ್ಯಸೇತ್ ಬಿಡಬೇಕು. ತನಗೆ ಪರಲೋಕಸಾಧನವಾದ ಸ್ನಾನ ಸಂಧ್ಯಾವಂದನ ಯಾಗಾದಿಗಳ ಅನುಷ್ಠಾನ ಮಾಡುವ ದೇಹದಿಂದ ಅತಿಥಿಭೋಜನ ವಾಸನಾದಿಗಳು ಮನೆಯಿಂದ ವಸ್ತುತಃ ವಿರಕ್ತನಾಗಿ ರಕ್ತನಂತೆ ತೋರಿಸಿ ನೃಲೋಕೇ ನರತಾಂ ನ್ಯಸೇತ್ ಮನುಷ್ಯದೇಹದಲ್ಲಿ ಸ್ಥಿರತೆಯನ್ನು ಆಯುಷ್ಯ ಮುಗಿದ ಮೇಲೆ ಎಸೆಯಬೇಕು. ದೇಹತ್ಯಾಗ ಮಾಡಬೇಕು. ಇದರಿಂದ ದೇಹಗೇಹಾದಿಗಳಲ್ಲಿ ಪಾರಲೌಕಿಕ ಪ್ರಯೋಜನಕ್ಕಾಗಿ ಅನುಸರಣ ಮಾಡಬೇಕು ಎಂದು ಹೇಳಿದಂತಾಯಿತು. ॥೬॥

**ಜ್ಞಾತಯಃ ಪಿತರೌ ಪುತ್ರಾ ಭ್ರಾತರಃ ಸುಹೃದೋಽಪರೇ ।**
**ಯದ್ ವದಂತಿ ಯದಿಚ್ಛಂತಿ ನಾಽನುಮೋದೇತ ನಿರ್ಮಮಃ ॥೭॥**

**ಜ್ಞಾತಯಃ** ಬಂಧುದಾಯಾದಿಗಳು **ಪಿತರೌ** ತಾಯಿತಂದೆಗಳು **ಪುತ್ರಾಃ** ಮಕ್ಕಳು **ಸುಹೃದಃ** ಸ್ನೇಹಿತರು **ಅಪರೇ** ಇತರರು **ಯದ್ ವದಂತಿ** ಏನು ಹೇಳುವರು **ಯದಿಚ್ಛಂತಿ** ಏನು ಅಪೇಕ್ಷಿಸುವರೋ **ತದನು ಮೋದೇತ್** ಅದನ್ನು ಅಂಗೀಕರಿಸಬೇಕು. ಅದಕ್ಕೆ ಕಾರಣ **ನಿರ್ಮಮಃ** ಮಮತೆ ಇಲ್ಲದವನಾಗಿ ಎಂದು ಅಂದರೆ ಇವರು ನನ್ನವರು ಎಂದು ಅಭಿಮಾನವಿಲ್ಲದೇ ಶ್ರೀಹರಿಯು ನನ್ನಿಂದ ಇವರಿಗೆ ಸಹಾಯ ಮಾಡಿಸುತ್ತಿರುವನು ಎಂದು ಭಾವಿಸಿ ತನಗೆ ಸಾಮರ್ಥ್ಯವಿರುವಾಗ ನಡಿಸಿಕೊಡಬೇಕು. ಅದೂ ಭಗವತ್ಪ್ರೀತಿಸಾಧನವಾಗುವದು. ॥೭॥

**ದಿವ್ಯಂ ಭೌಮಂ ಚಾಂತರಿಕ್ಷ್ಯಂ ವಿತ್ತಮಚ್ಯುತನಿರ್ಮಿತಮ್ ।**
**ತತ್ಸರ್ವಮುಪಭುಂಜೀರನ್ ನ ಸ್ವೀಕುರ್ಯಾತ್ ಸ್ವತೋ ಬುಧಃ ॥೮॥**

**ಅಚ್ಯುತನಿರ್ಮಿತಂ** ಶ್ರೀಹರಿಯಿಂದ ಎಲ್ಲರ ಉಪಯೋಗಕ್ಕಾಗಿ ಸೃಷ್ಟವಾಗಿರುವ **ದಿವ್ಯಂ** ದ್ಯುಲೋಕದಲ್ಲಿಯ **ಭೌಮಂ** ಭೂಲೋಕದ **ಅಂತರಿಕ್ಷಂ ಚ** ದ್ಯಾವಾಪೃಥಿವಿಗಳ ಮಧ್ಯದಲ್ಲಿರುವ **ವಿತ್ತಂ** ಭೋಗಸಾಧನಸಾಮಗ್ರಿಗಳನ್ನು **ಬುಧಃ** ಜ್ಞಾನಿಯು **ತತ್ಸರ್ವಂ** ಅದೆಲ್ಲವನ್ನು **ಉಪಭುಂಜೀರನ್** ಬೇರೆಯವರು ಉಪಯೋಗಿಸುವರು ಎಂದು ತಿಳಿದು **ಸ್ವತಃ** ತಾನು ಮಾತ್ರ **ನ ಸ್ವೀಕುರ್ಯಾತ್** ಸ್ವೀಕರಿಸಬಾರದು ಎಂದು ಭಾವ. ಇದರಿಂದ ಭೋಗಯಾಗಾದಿಗಳನ್ನು ಇತರರಿಂದಲೂ ಮಾಡಿಸಬೇಕು ಎಂದಂತಾಯಿತು. ॥೮॥

**ಯಾವದ್ ಭ್ರಿಯೇತ ಜಠರಂ ತಾವತ್ಸತ್ವಂ ಹಿ ದೇಹಿನಾಮ್ ।**
**ಅಧಿಕಂ ಯೋಽಭಿಮನ್ಯೇತ ಸ ಸ್ತೇನೋ ದಂಡಮರ್ಹತಿ ॥೯॥**

**ಜಠರಂ** ಹೊಟ್ಟೆಯು **ಯಾವತ್** ಎಷ್ಟರಿಂದ **ಭ್ರಿಯೇತ್** ಪೂರ್ತಿಯಾಗುವದೋ **ತಾವತ್** ಅಷ್ಟು ಮಾತ್ರ **ದೇಹಿನಾಂ** ಜನರ **ಸತ್ವಂ** ತನ್ನ ಸ್ವಾಮಿತ್ವಕ್ಕೆ ಒಳಪಟ್ಟದ್ದು **ಯಃ** ಯಾವನು **ಅಧಿಕಂ** ಹೆಚ್ಚಿಗೆಯಾಗಿ **ಅಭಿಮನ್ಯೇತ** ಇಚ್ಛಿಸುವನೋ **ಸಃ** ಅವನು **ಸ್ತೇನಃ** ಕಳ್ಳನಿದ್ದಂತೆ **ದಂಡಂ ಅರ್ಹತಿ** ಶಿಕ್ಷೆಗೆ ಪಾತ್ರನಾಗುವನು. 'ಯಾವತ್ತಾವತ್ ಪರಿಚ್ಛೇದೇ' ಎಂದು ಅಮರ ವಿಶ್ವವಿರುವದರಿಂದ ಯಾವತ್ ತಾವತ್ ಎಂಬುದು ಅವ್ಯಯಗಳು. ॥೯॥

**ನೃಗೋಖರಾಶ್ವಮರ್ಕಾಂಸ್ತು ಸರೀಸೃಪವಿಮಕ್ಷಿಕಾನ್ ।**
**ಆತ್ಮನಃ ಪುತ್ರವತ್ ಪಶ್ಯೇತ್ ತೈರೇಷಾಮಂತರಂ ಕಿಯತ್ ॥೧೦॥**

ನ್ಯ ಸೇವಕರಾದ ಮನುಷ್ಯರು **ಗೋ** ಆಕಳು **ಖರಾ** ಕತ್ತೆ **ಅಶ್ವ** ಕುದುರೆ **ಶ್ವಾನ** ನಾಯಿ **ಮರ್ಕ** ಬೆಕ್ಕು **ಆಖು** ಇಲಿ **ಸರೀಸೃಪ** ಹರಿದಾಡುವ ಇರುವೆ ಮುಂತಾದವು **ವಿ** ಪಕ್ಷಿಗಳು **ಮಕ್ಷಿಕಾನ್** ನೊಣಗಳನ್ನು **ಆತ್ಮನಃ** ತನ್ನ **ಪುತ್ರವತ್** ಮಕ್ಕಳಂತೆ **ಪಶ್ಯೇತ್** ಕಾಣಬೇಕು **ತೈಃ** ಸೇವಕರೇ ಮೊದಲಾದವರಿಂದ **ಏತೇಷಾಂ ಚ** ಮಕ್ಕಳಿಗೂ **ಅಂತರಂ** ವಿಶೇಷವು **ಕಿಯತ್** ಏನೂ ಇಲ್ಲ ಎಲ್ಲರೂ ಭಗವನ್ನಿಯತರೇ ಎಂದು ಭಾವ.

ವಿಶೇಷ :- ಇಲ್ಲಿ ಅವರವರ ಯೋಗ್ಯತೆಗೆ ತಕ್ಕಂತೆ ಲಾಲನೆ ಮಾಡಬೇಕೆಂದು ಪುತ್ರದೃಷ್ಟಾಂತ ಹೊರತು ಸರ್ವಥಾ ಅಲ್ಲ. ಕಾರಣ ಸೇವಕರಿಗೆ ಸಂಬಳದಿಂದ, ಹುಲ್ಲು ಹೊಟ್ಟುಗಳಿಂದ ಆಕಳುಗಳಿಗೆ ಆಹಾರವನ್ನಿತ್ತು, ಕತ್ತೆಗಳಿಗೆ ಹುಲ್ಲಿರುವ ಭೂಮಿಯಲ್ಲಿ ಬಿಡುವದರಿಂದ, ನಾಯಿಗಳಿಗೆ ಎಂಜಲು ಅನ್ನ ಹಾಕುವದರಿಂದ, ಬೆಕ್ಕುಗಳಿಗೆ ಚೆಲ್ಲಿದ ಹಾಲು ಮುಂತಾದ್ದರಿಂದ, ಇಲಿಗಳಿಗೆ ಕಾಳುಗಳನ್ನು ಕೆಲವು ಬಿಟ್ಟು, ಪಕ್ಷಿಗಳಿಗೆ ಭೂಮಿಯಲ್ಲಿ ಅನ್ನವನ್ನಿಟ್ಟು ನೊಣ ಇರುವೆ ಮುಂತಾದವಗಳಿಗೆಲ್ಲ ಸಂಪರ್ಕದಿಂದ ಪಾಲನೆ ಮಾಡಬೇಕು. ಇದರಿಂದಲೂ ಶ್ರೀಹರಿಗೆ ಪ್ರೀತಿಯಾಗುವದು. ||೧೦||

**ತ್ರಿವರ್ಗಂ ನಾತಿಕೃಚ್ಛ್ರೇಣ ಭಜೇತ ಗೃಹಮೇಧ್ಯಪಿ ।**
**ಯಥಾದೇಶಂ ಯಥಾಕಾಲಂ ಯಾವತ್ ದೈವೋಪಪಾದಿತಮ್ ||೧೧||**

**ಗೃಹಮೇಧಿ ಅಪಿ** ಗೃಹಸ್ಥಾಶ್ರಮಿಯೂ ಕೂಡ **ತ್ರಿವರ್ಗಂ** ಧರ್ಮಾರ್ಥ ಕಾಮಗಳನ್ನು **ಅತಿಕೃಚ್ಛ್ರೇಣ** ತನ್ನನ್ನು, ಪರರನ್ನು ಬಹಳ ಕಷ್ಟಪಡಿಸಿ ಅಥವಾ ದುಷ್ಪರ ಗೃಹಾದಿರೂಪ ಅತ್ಯಾಯಾಸದಿಂದ **ನ ಭಜೇತ** ಸಂಪಾದಿಸಬಾರದು ಕಿಂತು **ಯಥಾದೇಶಂ** ಶಾಸ್ತ್ರದಲ್ಲಿ ಹೇಳಿದಂತೆ ('ಏಷ ಆದೇಶಃ ಏಷ ಉಪದೇಶಃ' ಎಂದಿದೆ) ಅಥವಾ ತಾನಿರುವ ದೇಶಕ್ಕನುಗುಣವಾಗಿ **ಯಥಾಕಾಲಂ** ವಸಂತಾದಿಕಾಲಾನು-ಸಾರವಾಗಿ **ಯಾವತ್ ದೈವೋಪಪಾದಿತಂ ತಾವತ್ತಾವತ್ ಭಜೇತ** ಶ್ರೀಹರಿ ಇಚ್ಛೆಯಿಂದ ಪ್ರಾಪ್ತವಾದದ್ದನ್ನು ಸೇವಿಸಬೇಕು. 'ಅಕ್ಲೇಶಯಿತ್ವಾ ಚಾತ್ಮಾನಂ ಯದಲ್ಪಮಪಿ ತದ್ಬಹು' ಎಂದಿದೆ. ||೧೧||

ಮಕ್ಕಳಂತೆ ನೋಡಬೇಕು ಎಂದು ಹೇಳಿದ ಪಾಲನವನ್ನು ತಿಳಿಸುವರು-

**ಆಶ್ವಾಘಾಂತೇಽವಸಾಯಿಭ್ಯಃ ಕಾಮಾನ್ ಸಂವಿಭಜೇದ್ ಯಥಾ ।**
**ಅಪ್ಯೇತಾನ್ ಮಹತೋ ದಾರಾನ್ ನೃಣಾಂ ಸತ್ವಗ್ರಹೋ ಯತಃ ||೧೨||**

**ಆಶ್ವಾಘಾಂತೇಽವಸಾಯಿಭ್ಯಃ ಶ್ವಾ** ನಾಯಿ **ಅಘಾ** ಪಾಪಿಗಳಾದ **ಅಂತೇಽವಸಾಯಿಭ್ಯಃ** ೧೦ನೇ ಶ್ಲೋಕದಲ್ಲಿ ಹೇಳಿದ ತನ್ನ ಸಮೀಪದಲ್ಲಿ

ವಾಸಿಸುವವರೆಲ್ಲರಿಗೂ(ಅಭಿವ್ಯಾಪ್ಯ)**ಯಥಾ** ಅವರವರ ಯೋಗ್ಯತಾನುಸಾರವಾಗಿ ಅಥವಾ ಚೆನ್ನಾಗಿ **ಕಾಮಾನ್** ಅನ್ನಾದಿ ವಿಷಯಗಳನ್ನು **ಸಂವಿಭಜೇತ್** ವಿಭಾಗ ಮಾಡಿ ಬಲಿಹರಣಾದಿದ್ವಾರಾ ಕೊಡಬೇಕು. ಇದನ್ನು ಮಾಡಲು ಇದಕ್ಕೆ ಅಂಗವಾದ (ಅನುಕೂಲವಾದ)ಅಂಗನಾ ಸ್ವೀಕಾರವಾಗಬೇಕು ಎಂದು ಹೇಳುವರು. **ಯತಃ** ಯಾವ ಹೆಂಡತಿಯಿಂದ **ನೃಣಾಂ** ಪುರುಷರಿಗೆ **ಸತ್ವಗ್ರಹಃ** ಜ್ಞಾನವು ಬರುವದೋ **ಏತಾನ್** ಅಂಥ **ಮಹತಃ** ಗುಣದಿಂದ ದೊಡ್ಡವಳಾದ **ದಾರಾನ್** ಹೆಂಡತಿಯನ್ನು **ಆಪ್ತ್ವಾ** ಹೊಂದಿ **ಸಂವಿಭಜೇತ್** ಅನ್ನಾದಿಗಳನ್ನು ವಿಭಾಗಮಾಡಿ ಬಲಿಹರಣಾದಿ ದ್ವಾರಾ ಕೊಡಬೇಕು. ಅಥವಾ **ಮಹತಾ** ಮಹಾಪ್ರಯತ್ನದಿಂದ ಉದಾರಾನ್ ಉದ್ಗತಾ ಆ ಅರಾ ದೋಷಾಃ ಯೇಭ್ಯಃ ತಾನ್ ದೋಷರಹಿತಳಾದ **ದಾರಾನ್** ಹೆಂಡತಿಯನ್ನು **ಮಹತಃ ಆಪ್ತ್ವಾ** ದೊಡ್ಡಮನೆತನದವರಿಂದ ಹೊಂದಿ ಅಥವಾ ಉತ್ಸವದಿಂದ ಹೊಂದಿ ಹೀಗೂ ಅನ್ವಯ. ||೧೨||

ಕರ್ಮಮಾಡುವದಕ್ಕೆ ಸಹಾಯಕವಾಗುವಂತಿದ್ದರೆ ಮದುವೆಯಾಗಬೇಕು. ಗ್ರಾಮ್ಯಸುಖಕ್ಕಾಗಿ ಅಲ್ಲ. ಅದಕ್ಕಾಗಿ ಮದುವೆಯಾದಲ್ಲಿ ಅವರ ಆಸೆ ಪೂರೈಸಲಾಗದೇ ಅದರ ಪ್ರಯತ್ನದಲ್ಲೇ ಕಾಲಕಳೆದರೆ ಮಹಾದೋಷವೆ. ಕಾರಣ ಅವಳು ದುಷ್ಟಳಾಗಿದ್ದರೆ ಅವಳನ್ನು ಬಿಡಬೇಕೆಂದು ಹೇಳುವರು-

**ಜಹ್ಯಾದ್ ಯದರ್ಥೇ ಸ್ವಾನ್ ಪ್ರಾಣಾನ್ ಹನ್ಯದ್ವಾ ಪಿತರಂ ಗುರುಮ್ ।**
**ತಸ್ಯಾಂ ಸ್ವತ್ವಂ ಸ್ತ್ರಿಯಾಂ ಜಹ್ಯಾದ್ ಯಸ್ತೇನ ಹ್ಯಜಿತೋ ಜಿತಃ ||೧೩||**

**(ಯಾ** ಯಾವಳು) **ಯದರ್ಥೇ** ಯಾವ ತನ್ನ ಅಭಿಲಾಷೆ ನಿವೃತ್ತವಾದಾಗ ಅಂದರೆ ತನ್ನ ಇಷ್ಟವನ್ನು ನೆರವೇರಿಸದಿದ್ದಲ್ಲ ಎಂದರ್ಥ. **ಸ್ವಾನ್ ಪ್ರಾಣಾನ್ ಜಹ್ಯಾತ್** ತನ್ನ ಪ್ರಾಣಗಳನ್ನು ಬಿಡುವಳು **ಪಿತರಂ** ಗಂಡನ ತಂದೆಯನ್ನು **ಗುರುಂ** ತನ್ನ ಗುರುವನ್ನೋ ಗಂಡನ ಗುರುವನ್ನೋ **ಹನ್ಯಾತ್** ಕೊಲ್ಲುವಳೋ **ತಸ್ಯಾಂ ಸ್ತ್ರಿಯಾಂ** ಅಂಥ ಹೆಣ್ಣಿನಲ್ಲಿ **ಯಃ** ಯಾವ ಗಂಡನು **ಸ್ವತ್ವಂ** ಮಮತೆಯನ್ನು **ಜಹ್ಯಾತ್** ಬಿಡುವನೋ **ತೇನ** ಅವನಿಂದ **ಅಜಿತಃ** ಯಾರಿಂದಲೂ ವಶೀಕೃತನಾಗದ ಶ್ರೀಹರಿಯು **ಜಿತಃ** ವಶನಾದಂತೆ ಆಗುವನು. **ಅಜಿತಃ** ಅಪ್ರಾಪ್ತನಾದವನನ್ನು **ಜಿತಃ** ಪ್ರಾಪ್ತನಾಗುವನು.

ವಿಶೇಷ :- 'ಛಾಂದೋಗ್ಯ ಭಾಷ್ಯದಲ್ಲಿ ಜಿಃ ಪ್ರಾಪ್ತ್ಯರ್ಥಕಃ ಸರ್ಜಿತ ಇತ್ಯಾದಿವತ್' ಮುಂತಾಗಿ ಹೇಳಿದೆ. ಹಿ ಶಬ್ದದಿಂದ ಈ ಎರಡು ಶ್ಲೋಕಾರ್ಥದಲ್ಲಿ ಪ್ರಮಾಣ ಸಮ್ಮತಿಯನ್ನು ತಿಳಿಸುತ್ತಾರೆ ಅವುಗಳ ಇಂತಿವೆ.

'ಪತಿಂ ಪುತ್ರಂ ಭ್ರಾತರಂ ಘ್ನಂತ್ಯರ್ಥೇ ಘಾತಯಂತಿ ಹಿ' ಎಂದು ಆರನೇ ಸ್ಕಂಧದಲ್ಲಿ ಹೇಳಿದೆ. ಒಂಭತ್ತನೇ ಸ್ಕಂಧದಲ್ಲಿ 'ಸ್ತ್ರಿಯೋ ಹ್ಯಕರುಣಾಃ ಕ್ರೂರಾಃ ದುರ್ಮರ್ಷಾಃ ಪ್ರಿಯಸಾಹಸಾಃ । ಘ್ನಂತ್ಯಲ್ಪಾರ್ಥೇಽಪಿ ವಿಶ್ರಬ್ಧಂ ಪತಿಂ ಭ್ರಾತರಮಪ್ಯುತ' ಎಂದು, 'ಯತ್ರಾನುಕೂಲ್ಯಂ ದಂಪತ್ಯೋಃಸ್ತ್ರಿವರ್ಗಸ್ತತ್ರ ವರ್ಧತೇ। ಮೃತೇ ಜೀವತಿ ವಾ ಪತ್ಯೌ ಯಾ ನಾನ್ಯಮುಪಗಚ್ಛತಿ । ಸೇಹಕೀರ್ತಿಮವಾಪ್ನೋತಿ ಮೋದತೇ ಚೋಮಯಾ ಸಹ । ಸ್ತ್ರೀಭಿರ್ಭರ್ತೃವಚಃ ಕಾರ್ಯಮೇಷಧರ್ಮಃ ಪರಃ ಸ್ತ್ರಿಯಃ । ಹೃತಾಕಾರಾಂ ಮಲಿನಾಂ ಪಿಂಡಮಾತ್ರೋಪಜೀವಿನೀಮ್ । ಪರಿಭೂತಾಮಧಃ ಶ್ಯಯ್ಯಾಂ ವಾಸಯೇದಭಿಚಾಣೀ'.

ಪ್ರಮಾಣಗಳ ಭಾವಾರ್ಥ ಗಂಡನನ್ನು ಮಗನನ್ನು ತಮ್ಮನನ್ನು ತಮ್ಮ ಸ್ವಾರ್ಥಕ್ಕಾಗಿ ಕೊಲ್ಲುವ, ಕೊಲ್ಲಿಸುವ ಸ್ತ್ರೀಯರು ಕರುಣೆ ಇಲ್ಲದವರು. ಕ್ರೂರ ಗಂಟು ಮಾರಿಹಾಕಿದವರು, ಪ್ರಿಯಕ್ಕಾಗಿ ಸಾಹಸಮಾಡುವರು. ಸ್ವಲ್ಪ ತಮ್ಮ ಪ್ರಯೋಜನಕ್ಕೆ ವಿಶ್ವಾಸವಿಟ್ಟ ಗಂಡನನ್ನು ಅಣ್ಣತಮ್ಮಂದಿರನ್ನು ಕೊಲ್ಲುವರು. ಇಂತಹ ದುಷ್ಟರಲ್ಲಿ ಮಮತೆಯನ್ನು ಬಿಡಬೇಕು. ಯಾವ ಮನೆಯಲ್ಲಿ ಗಂಡ ಹೆಂಡತಿಗೆ ಪರಸ್ಪರ ಅನುಕೂಲತೆ ಇರುವದೋ ಅಲ್ಲಿ ಧರ್ಮಾರ್ಥಕಾಮಗಳು ಬೆಳೆಯುವವು. ಗಂಡನು ಬದುಕಿರಲಿ ಸಾಯಲಿ ಯಾವಳು ಪರಪುರುಷನನ್ನು ಸಂಪರ್ಕಿಸುದಿಲ್ಲವೋ, ಅವಳು ಇಹಲೋಕದಲ್ಲಿ ಕೀರ್ತಿವಂತಳಾಗುವಳು. ಪರಲೋಕದಲ್ಲಿ ಪಾರ್ವತಿಯೊಡನೆ ಸಂತೋಷ ಪಡೆಯುವಳು. ಸ್ತ್ರೀಯರು ಗಂಡನ ಮಾತನ್ನು ನಡೆಸುವದು ಮುಖ್ಯಧರ್ಮವು. ಇಂತಹ ಒಳ್ಳೆಯ ಹೆಂಡತಿಯನ್ನು ಹೊಂದಿ ಗೃಹಸ್ಥಧರ್ಮ ನಡೆಸುವದು ಶ್ರೇಯಸ್ಕರ. ವ್ಯಭಿಚಾರಿಯಾಗಿದ್ದರೆ ಅವಳ ಆಕಾರವನ್ನು ಕಿತ್ತುಕೊಂಡು ಹೊಲಸವಸ್ತ್ರ, ಕೇವಲ ಅನ್ನ ಹಾಕಿ ತಾನು ಅವಳ ಸಂಗಮಾಡದೇ ಬದುಕಲು ಬಿಡಬೇಕು. ಒಳ್ಳೆಯ ಗುಣವತಿಯನ್ನು ಮದುವೆಯಾಗಿ ಎಲ್ಲರಿಗೂ ಆಶ್ರಯವಿತ್ತು ತಾನು ಧರ್ಮಸಾಧನೆ ಮಾಡಬೇಕು. ದೈವಾತ್ ದುಷ್ಟಹೆಂಡತಿ ಗಂಟು ಬಿದ್ದರೆ ಅವಳಲ್ಲಿ ಮಮತೆ ಮಾಡದೇ ಅವಳ ವಶನಾಗದೇ ಧರ್ಮಸ್ವಾಮಿ ಶ್ರೀಹರಿಯ ಅನುಗ್ರಹ ಪಾತ್ರನಾಗಬೇಕೆಂದು ಭಾವ. ।। ೧೨,೧೩ ।।

ಭಗವಂತನು ತುಷ್ಟನಾಗುವದು ಬೇಡ. ನಮ್ಮ ದೈಹಿಕ ಸುಖಕ್ಕೆ ಆಧಾರಳಾದ ಹೆಂಡತಿಯಲ್ಲಿ ಮಮತೆಯು ಬಿಡಲಾಗದ್ದು. ಬಿಟ್ಟರೆ ಇಂಥಸುಖ ಹೇಗೆ ದೊರೆಯದು. ದುಷ್ಟಳಾದ ಅವಳನ್ನು ಬಿಡದಿದ್ದರೆ ಶ್ರೀಹರಿಪ್ರಾಪ್ತಿಯಾಗದು ಕಾರಣ ಅವಳು ತ್ಯಾಜ್ಯಳು ಎಂದು ಹೇಳುವರು-

**ಕ್ರಿಮಿವಿಡ್ಭಸ್ಮನಿಷ್ಠಾಂತೇ ಕ್ವೇದಂ ತುಚ್ಛಂ ಕಲೇವರಮ್ ।**
**ಕ್ವ ತದೀಯರತಿರ್ಭಾರ್ಯಾ ಕ್ವಾಯಮಾತ್ಮಾ ನಭಶ್ಛದಿಃ ॥೧೪॥**

**ಕ್ರಿಮಿ** ಹೆಣವನ್ನು ಹಾಗೆ ಬಿಟ್ಟರೆ ಹುಳವಾಗುವದು, ನಾಯಿನರಿಗಳು ತಿಂದರೆ **ವಿಡ್** ಮಲವಾಗುವದು, ಸುಟ್ಟರೆ **ಭಸ್ಮ** ಬೂದಿ ಎಂದು **ನಿಷ್ಠಾ** ನಿಷ್ಪತ್ತಿಯು **ಅಂತೆ** ಕೊನೆಗೆ ಯಾವುದಕ್ಕಾಗುವದೋ ಅಂಥ (ನಿಷ್ಠಾನಿಷ್ಪತ್ತಿನಾಶಂತಯಾಂಚಾ- ನಿರ್ಹರಣೇಷು ಚ ಎಂದುವಿಶ್ವ) **ತುಚ್ಛಂ** ಹೀನವಾದ **ಕಲೇವರಂ** ಶರೀರವು **ಕ್ವ** ಎಲ್ಲಿ **ತದೀಯರತಿಃ** ದುಷ್ಟವಾದ ಈ ಶರೀರ ಸಂಬಂಧಿಯಾದ (ಆಸಕ್ತಿ) ಸುಖಕಾರಣಳಾದ ಭಾರ್ಯಾ ಹೆಂಡತಿಯು **ಕ್ವ** ಎಲ್ಲಿ **ಅಯಂ** ಈ **ನಭಚದಿಃ** ಆಕಾಶವನ್ನು ವ್ಯಾಪಿಸಿರುವ **ಆತ್ಮಾ** ಪರಮಾತ್ಮನು **ಕ್ವ** ಎಲ್ಲಿ ದುಷ್ಟಳಾದ ಭಾರ್ಯಾಸಕ್ತನಿಗೆ ಆಕಾಶಶರೀರನಾದ ಪರಮಾತ್ಮನು ದೂರನಾಗುವನು. ಕಾರಣ ಅವಳಲ್ಲಿ ಮಮತೆ ಬಿಡಬೇಕೆಂದರ್ಥ. ಅನಶ್ವರಶರೀರನಾದ ಈಶನ ಪ್ರಾಪ್ತಿಯು ಈ ವಿಧವಾದ ಶರೀರವುಳ್ಳ ಸ್ತ್ರೀಯಲ್ಲಿ ಆಸಕ್ತಿಯಿಂದ ಹೇಗಾದೀತು? ಎಂದು ಭಾವ.

ಈ ಶ್ಲೋಕದಲ್ಲಿ ಆತ್ಮಾ ಜೀವನು **ನಭಚ್ಛದಿಃ** ಆಕಾಶದಿಂದ ಆಚ್ಛಾದಿತನಾಗುವನು ಆದ್ದರಿಂದ ನಭಚ್ಛದಿ ಎಂಬುವರು ಎಂದು ಅಯಥಾರ್ಥ ಪ್ರತೀತಿಯನ್ನು ನಭಚ್ಛದಿ ಪದವನ್ನು ಅನುವಾದ ಮಾಡಿ ವ್ಯಾಖ್ಯಾನ ಮಾಡುತ್ತ ಆತ್ಮಪದಕ್ಕೆ ಪರಪದವಿಶೇಷಣವಿತ್ತು ಜೀವನಿಗೆ ಅವಕಾಶವಿಲ್ಲದಂತೆ ಮಾಡುವರು.

**... ತಾತ್ಪರ್ಯ ...**

**ನಭಶ್ಛದಿಃ ನಭೋ ವ್ಯಾಪ್ಯ ಸ್ಥಿತಃ ಪರಮಾತ್ಮಾ ।**

ನಭಃ ಛಾದ್ಯತೇ ಅನೇನ ಇತಿ ನಭಶ್ಛದಿಃ ಎಂದು ನಿರ್ವಚನವನ್ನು ತಿಳಿಯಬೇಕು. ನಭಸಾ ಛಾದ್ಯತೇ ಎಂದೂ ವ್ಯತ್ಪತ್ತಿ, ಆಕಾಶದ ಒಳಗೂ ಹೊರಗೂ ವ್ಯಾಪ್ತಿಯನ್ನು ತಿಳಿಸಿದಂತಾಯಿತು. 'ಅಣುರ್ಹ್ಯೇಷ ಆತ್ಮಾ' ಎಂದಿರುವದರಿಂದ ಆಕಾಶವ್ಯಾಪ್ತಿತ್ವ ಅಣುವಾದ ಜೀವನಿಗೆ ಇರುವದಿಲ್ಲ. 'ಆಕಾಶಶರೀರಂ ಬ್ರಹ್ಮ' ಎಂದು ಶ್ರುತಿ ಇರುವದರಿಂದ ಶ್ರೀಹರಿಗೆ ಯುಕ್ತವೆಂದು ಭಾವ, ಆತ್ಮಶಬ್ದಕ್ಕೆ ಪರಮಾತ್ಮನೆಂದರ್ಥ.

ಸರ್ವದೇಶಕಾಲವ್ಯಾಪಿಪರಮಸುಖಾವಹಪರಮಾತ್ಮಪ್ರೀತಿವಿರೋಧಿಯಾದ ಅತಿತುಚ್ಛವಾದ ದೈಹಿಕಸುಖಸಾಧನವಾದ ಸ್ತ್ರೀಯಲ್ಲಿ ಮಮತೆ ಸರ್ವಥಾ ತ್ಯಾಜ್ಯವೆಂದು ಭಾವ. ॥೧೪॥

ಗೃಹಸ್ಥನ ಇರುವಿಕೆಯನ್ನೇ ಮತ್ತೆ ತಿಳಿಸುವರು-

**ಸಿದ್ಧೈರ್ಯಜ್ಞಾವಶಿಷ್ಟಾರ್ಥೈಃ ಕಲ್ಪಯೇದ್ ವೃತ್ತಿಮಾತ್ಮನಃ ।**
**ಶೇಷೇ ಸ್ವತ್ವಂ ತ್ಯಜೇತ್ ಪ್ರಾಜ್ಞಃ ಪದವೀಂ ಮಹತಾಮಿಯಾತ್ ॥೧೫॥**

ಯಜ್ಞಶಬ್ದಕ್ಕೆ ಆವೃತ್ತಿ **ಯಜ್ಞಾವಶಿಷ್ಟಾರ್ಥೈಃ** ಯಜ್ಞನಾಮಕ ವಿಷ್ಣುವಿನ ಪೂಜಾಸಾಧನವಾದ ಯಜ್ಞಾದಿಗಳಿಂದ ಉಳಿದ ಅನ್ನವಿತ್ತಾದಿಗಳಿಂದ **ಸಿದ್ಧೈಃ** ಭಗವತ್ಪ್ರೀತಿಜನಕವೆಂದು ನಿಶ್ಚಯವುಳ್ಳವರಿಂದ **ಆತ್ಮನಃ** ತನ್ನ **ವೃತ್ತಿಂ** ಜೀವನೋಪಾಯವನ್ನು **ಕಲ್ಪಯೇತ್** ಮಾಡಿಕೊಳ್ಳಬೇಕು. **ಶೇಷೇ** ತನ್ನ ಜೀವನವಾಗಿ ಉಳಿದದ್ದರಲ್ಲಿ **ಸ್ವತ್ವಂ** ಮಮತೆಯನ್ನು **ಯಃ ತ್ಯಜೇತ್** ಯಾವನು ಬಿಡುವನು **ಸಃ** ಅವನು **ಪ್ರಾಜ್ಞಃ** ಬುದ್ಧಿವಂತನು **ಮಹತಾಂ ಪದವೀಂ ಇಯಾತ್** ಸನ್ಯಾಸಿಗಳ ಸ್ಥಾನವಾದ ಮೋಕ್ಷವನು ಹೊಂದುವನು. ತನಗಾಗಿ ಉಳಿದದ್ದನ್ನು ಬಂದ ಅತಿಥಿಗಳಿಗೆ ನೀಡಬೇಕು ಎಂದರ್ಥ. 'ಆತ್ಮನಃ' ಎಂಬ ಏಕವಚನದಿಂದ ಪರಿವಾರಪರಿವೃತನಲ್ಲ-ವೆಂದೂ ಸೂಚಿತವಾಗುವದು. ॥೧೫॥

**ದೇವಾನೃಷೀನ್ ನೃಭೂತಾನಿ ಪಿತೄನಾತ್ಮಾನಮನ್ವಹಮ್ ।**
**ಸ್ವವೃತ್ತ್ಯಾऽऽಗತವಿತ್ತೇನ ಯಜೇತ ಪುರುಷಂ ಪೃಥಕ್ ॥೧೬॥**

**ದೇವಾನ್** ದೇವತೆಗಳನ್ನು **ಋಷೀನ್** ಋಷಿಗಳನ್ನು **ಭೂತಾನಿ** ಮನುಷ್ಯಾದಿಗಳನ್ನು **ಪಿತೄನ್** ಪಿತೃಗಳನ್ನು **ಆತ್ಮಾನಂ** ಅವರೆಲ್ಲರ ಅಂತರ್ಯಾಮಿಯಾದ ಭಗವಂತನನ್ನು ಉದ್ದೇಶಿಸಿ **ಸ್ವವೃತ್ತ್ಯಾ** ತನ್ನ ವರ್ಣಾಶ್ರಮೋಚಿತ ಶಿಲೋಂಛಕರ ಸ್ವೀಕಾರ ಮುಂತಾದವುಗಳಿಂದ **ಆಗತೇನ ವಿತ್ತೇನ** ಬಂದ ದ್ರವ್ಯದಿಂದ **ಯಜೇತ್** ಪೂಜಿಸಬೇಕು. **ಪುರುಷಂ ಪೃಥಕ್ ಯಜೇತ್** ಇತರರ ಅಂತರ್ಯಾಮಿಯಲ್ಲದ ತನ್ನ ಬಿಂಬವನ್ನು **ಅನ್ವಹಂ ಯಜೇತ** ಪ್ರತಿದಿನ ಪೂಜಿಸಬೇಕು. **ಪೃಥಗಾತ್ಮಾನಂ** ತತ್ತದಂತರ್ಯಾಮಿಯನ್ನು **ಪುರುಷಂ** ಪೂರ್ಣಷಡ್ಗುಣನಾದ **ಆತ್ಮಾನಂ** ಪರಮಾತ್ಮನನ್ನು **ಪೃಥಕ್** ಅಧಿಷ್ಠಾನದಿಂದಲೂ ತನ್ನಿಂದಲೂ ಭಿನ್ನನಾದವನೆಂದು ಪ್ರತಿದಿನ ಪೂಜಿಸಬೇಕು. ಪೂಜೆಯು ಅವರವರಿಗೆ ತಕ್ಕಂತೆ ಯಜ್ಞ,ತರ್ಪಣ, ಅನ್ನದಾನ ಮುಂತಾಗಿ ಹಿಂದೆ ಹೇಳಿದಂತೆ ಎಂದು ತಿಳಿಯಬೇಕು. ॥೧೬॥

**ಯರ್ಹ್ಯಾತ್ಮನೋऽಧಿಕಾರೋऽಸ್ತಿ ಸರ್ವಾಃ ಸ್ಯುರ್ಯಜ್ಞಸಂಪದಃ ।**
**ವೈತಾನಿಕೇನ ವಿಧಿನಾ ಅಗ್ನಿಹೋತ್ರಾದಿನಾ ಯಜೇತ್ ॥೧೭॥**

**ಯರ್ಹಿ** ಯಾವಾಗ **ಆತ್ಮನಃ** ತನಗೆ **ಅಧಿಕಾರಃ ಅಸ್ತಿ** 'ಜಾತಪುತ್ರಃ ಕೃಷ್ಣಕೇಶಃ' ಮುಂತಾಗಿ ಹೇಳಿದ ಮಧ್ಯಮವಯಸ್ಕ ಮಗನು ಇರುವನೋ **ತರ್ಹಿ** ಆಗ **ಸರ್ವಾಃ**

**ಯಜ್ಞಸಂಪದಃ ಸ್ಯುಃ** ಎಲ್ಲ ಯಜ್ಞಸಾಮಗ್ರಿಗಳು ದೊರೆಯುವವು. **ವೈತಾನಿಕೇನ ವಿಧಿನಾ** ಕೃತಕರ್ಮಸಂಬಂಧಿಯಾದ **ವಿಧಿನಾ** ವಿಧಾನದಿಂದ ವೇದೋಕ್ತಪ್ರಯೋಗವಿಧಿಯಿಂದ **ಅಗ್ನಿಹೋತ್ರಾದಿನಾ** 'ಸ ಏಷ ಯಜ್ಞಃ ಪಂಚವಿಧಃ । ಅಗಿಹೋತ್ರಂ ದರ್ಶಪೂರ್ಣಮಾಸೌ ಚಾತುರ್ಮಾಸಂ ಪಶುಸೋಮಃ' ಮುಂತಾಗಿ ಹೇಳಿದ ಐದು ವಿಧ ಯಜ್ಞದಿಂದ **ಯಜೇತ್** ಪೂಜಿಸಬೇಕು. 'ವಿತಾನೋ ಯಜ್ಞವಿಸ್ತಾರೋಲ್ಲೋಚೇಷು ಕ್ರತುಕರ್ಮಣಿ' ಎಂದು ವಿಶ್ವವಿದೆ. ॥೧೭॥

'ಯರ್ಹಿ' ಎಂಬುದರಿಂದ ಸೂಚಿತವಾದ ಯಜ್ಞದ ಅನಾವಶ್ಯಕತೆಯನ್ನು ಅವಶ್ಯಮಾಡಬೇಕಾದುದದನ್ನು ಹೇಳುತ್ತಾ ಸ್ಪಷ್ಟಪಡಿಸುವರು. 'ಅವೈಶ್ವದೇವ-ಮತಿಥಿವರ್ಜಿತಂ' ಮುಂತಾಗಿ ಅತಿಥಿರಹಿತಯಜ್ಞವನ್ನು ನಿಷೇಧಿಸಿರುವದರಿಂದ ಯಜ್ಞಾಂಗವಾಗಿ ಸ್ವಪ್ರಧಾನವಾಗಿಯೇ ಭೋಜನ ಆವಶ್ಯಕವೆಂದು ಬ್ರಾಹ್ಮಣ ಭೋಜನವನ್ನು ಸ್ತುತಿಸುವರು-

**ನ ಹ್ಯಗ್ನಿಮುಖತೋಽಯಂ ವೈ ಭಗವಾನ್ ಸರ್ವಯಜ್ಞಭುಕ್ ।**
**ಇಜ್ಯೇತ ಹವಿಷಾ ರಾಜನ್ ಯಥಾ ವಿಪ್ರಮುಖೇ ಹುತೈಃ ॥೧೮॥**

**ರಾಜನ್** ಧರ್ಮರಾಜನೇ **ಅಯಂ** ಈ **ಸರ್ವಯಜ್ಞಭುಕ್** ಎಲ್ಲಿ ಯಜ್ಞದಲ್ಲಿ ಹವಿಸ್ಸನ್ನು ಸ್ವೀಕರಿಸುವ **ಭಗವಾನ್** ಶ್ರೀಹರಿಯು **ವಿಪ್ರಮುಖೈಃ** ಬ್ರಾಹ್ಮಣರ ಮುಖಗಳಿಂದ **ಹುತೈಃ** ಕೊಡಲ್ಪಟ್ಟ ತುಪ್ಪ ಅನ್ನ ಮುಂತಾದವುಗಳಿಂದ **ಯಥಾ ಇಜ್ಯೇತ** ಹೇಗೆ ಪೂಜಿತನಾಗುವನೋ **ತಥಾ** ಹಾಗೆ **ಅಗ್ನಿಮುಖತಃ ನ ಹಿ ಇಜ್ಯೇತ್** ಅಗ್ನಿಯಲ್ಲಿ ಹೋಮಮಾಡುವದರಿಂದ ಪೂಜಿತನಾಗುವದಿಲ್ಲ. (ಸಂಗವನ್ನು ಹೊಂದುವದಿಲ್ಲ ಎಂದರ್ಥ) ॥೧೮॥

ಇಲ್ಲಿವರೆಗೆ ಪರೋಕ್ಷವಾಗಿ ಹೇಳಿ ಅಪರೋಕ್ಷವಾಗಿಯೂ ಧರ್ಮರಾಜನಿಗೆ ಧರ್ಮವನ್ನು ಹೇಳಲು ಅಗ್ನಿಗಿಂತ ವಿಪ್ರನಿಗೇ ಇನ್ನೂ ವಿಶೇಷ ಎಂದು ಅಂತರಂಗದ ಶಂಕೆಯನ್ನು ಅವಾಂತರ ಉಪಸಂಹಾರರೂಪವಾಗಿ ನಿವಾರಿಸುವರು-

**ತಸ್ಮಾದ್ ಬ್ರಾಹ್ಮಣದೇವೇಷು ಮರ್ತ್ಯಾದಿಷು ಯಥಾರ್ಹತಃ ।**
**ತೈಸ್ತೈಃ ಕಾಮೈರ್ಯಜೇಚ್ಛೈನಂ ಕ್ಷೇತ್ರಜ್ಞಂ ಬ್ರಾಹ್ಮಣಾನನಮ್ ॥೧೯॥**

**ತಸ್ಮಾತ್** ಯಾವ ಕಾರಣ ಬ್ರಾಹ್ಮಣರ ಮುಖದಲ್ಲಿ ಕೊಟ್ಟಿದ್ದರಿಂದ ತೃಪ್ತನಾಗುವನೋ ಆಕಾರಣದಿಂದ. **ಬ್ರಾಹ್ಮಣದೇವೇಷು ಮರ್ತ್ಯಾದಿಷು** ಬ್ರಾಹ್ಮಣರಲ್ಲಿ ದೇವತೆಗಳಲ್ಲಿ ಮರ್ತ್ಯರಲ್ಲಿ **ಯಥಾರ್ಹತಃ** ಯಾರಿಗೆ ಯಾವ ರೀತಿಯೋ ಆ ರೀತಿಯಾಗಿ **ತೈಃ ತೈಃ ಕಾಮೈಃ** ಅವರ ಅವರ ಅಭೀಷ್ಟಗಳಿಂದ

**ಬ್ರಾಹ್ಮಣಾನನಂ** ಬ್ರಾಹ್ಮಣರೇ ಮುಖವಾಗಿವುಳ್ಳ **ಏನಂ ಕ್ಷೇತ್ರಜ್ಞಂ** ಈ ಪರಮಾತ್ಮನನ್ನು **ಯಜೇತ್** ಪೂಜಿಸಬೇಕು. 'ಬ್ರಾಹ್ಮಣೋऽಸ್ಯ ಮುಖಮಾಸೀತ್' 'ಯಥಾ ಬ್ರಹ್ಮಾದಿಕಂ ಮುಖಂ' ಮುಂತಾಗಿದೆ. ।।೧೯।।

**ಕುರ್ಯಾದಪರಪಕ್ಷೀಯಂ ಮಾಸಿ ಪ್ರೋಷ್ಠಪದೇ ದ್ವಿಜಃ ।**
**ಶ್ರಾದ್ಧಂ ಪಿತ್ರೋರ್ಯಥಾವಿತ್ತಂ ತದ್ಬಂಧೂನಾಂ ಚ ವಿತ್ತವಾನ್ ।।೨೦।।**

**ವಿತ್ತವಾನ್** ಹಣವಿರುವ **ದ್ವಿಜಃ** ಬ್ರಾಹ್ಮಣನು **ಯಥಾವಿತ್ತಂ** ತನ್ನಲ್ಲಿರುವ ವಿತ್ತಕ್ಕೆ ಅನುಗುಣವಾಗಿ **ಅಪರಪಕ್ಷೀಯಂ** ಕೃಷ್ಣಪಕ್ಷ ಸಂಬಂಧಿಯಾದ **ಪ್ರೋಷ್ಠಪದಿ ಮಾಸಿ** ಭಾದ್ರಪದಮಾಸದಲ್ಲಿ **ಪಿತ್ರೋಃ** ತಂದೆ ತಾಯಿಗಳ **ತದ್ಬಂಧೂನಾಂ ಚ** ಪಿತಾಮಹ (ತಂದೆ ತಂದೆ) ಮಾತಾಮಹ (ತಾಯಿ,ತಂದೆ)ಮುಂತಾದ ಪ್ರತಿದಿನ ತರ್ಪಣಕೊಡುವವರಿಗೆ **ಶ್ರಾದ್ಧಂ ಕುರ್ಯಾತ್** ಶ್ರಾದ್ಧಮಾಡಬೇಕು. (ಐದು ಅಪರಪಕ್ಷಗಳಲ್ಲಿ ಮಧ್ಯದಲ್ಲಿರುವುದು ಅತ್ಯುತ್ತಮವಾದುದರಿಂದ ಭಾದ್ರಪದದಲ್ಲಿ ಎಂದಿದ್ದಾರೆ. ।।೨೦।।

**ಅಯನೇ ವಿಷುವೇ ಕುಹ್ವಾಂ ವ್ಯತೀಪಾತೇ ದಿನಕ್ಷಯೇ ।**
**ಚಂದ್ರಾದಿತ್ಯೋಪರಾಗೇ ಚ ದ್ವಾದಶ್ಯಾಂ ಶ್ರವಣೇಷು ಚ ।।೨೧।।**

**ಅಯನೇ** ದಕ್ಷಿಣಾಯನ ಉತ್ತರಾಯಣ (ಕರ್ಕಾಟಕ ಮತ್ತು ಮಕರ ಸಂಕ್ರಮಣಗಳಲ್ಲಿ) **ವಿಷುವೇ** ಮೇಷ ತುಲಾ ಸಂಕ್ರಮಣಗಳಲ್ಲಿ **ಕುಹ್ವಾ** 'ಸಾನಷ್ಟೇಂದುಕಲಾ ಕೂಹೂ' ಎಂದು ಅಮರವಿರುವದರಿಂದ ಚಂದ್ರನ ಕಲೆಗಳ ನಾಶವುಳ್ಳ ಅಮಾವಾಸ್ಯೆಯಲ್ಲಿ **ವ್ಯತೀಪಾತೇ** ವ್ಯತಿಪಾತಯೋಗವಿದ್ದಾಗ ('ವ್ಯತೀತಿ ಪಾಪಮುದ್ದಿಷ್ಟಂ ತಸ್ಯ ಪಾತೋ ಯತೋ ಭವೇತ್। ಯಃವ್ಯತಿಪಾತ ಇತಿ ಪ್ರೋಕ್ತಃ' ಮುಂತಾಗಿ ಹೇಳಿದೆ.) **ದಿನಕ್ಷಯೇ** ಕ್ಷೀಣತಿಥಿಗಳಲ್ಲಿ **ಚಂದ್ರಾದಿತ್ಯೋಪರಾಗೇ ಚ** ಚಂದ್ರಸೂರ್ಯಗ್ರಹಣಗಳಲ್ಲಿ **ದ್ವಾದಶ್ಯಾಂ** ಪಾರಣಯೋಗ್ಯ ದ್ವಾದಶಿಯಲ್ಲಿ **ಶ್ರವಣೇಷು** ಬಹುವಚನಂ ಆದ್ಯರ್ಥೇ ಶ್ರವಣಾದಿಗಳಲ್ಲಿ ಅಂದರೆ ಮಘಾ, ಭರಣೀ, ಶ್ರವಣಾ ನಕ್ಷತ್ರಗಳಲ್ಲಿಯೂ ಶ್ರಾದ್ಧಮಾಡಬೇಕು. ।।೨೧।।

**ತೃತೀಯಾಯಾಂ ಶುಕ್ಲಪಕ್ಷೇ ನವಮ್ಯಾಮಥ ಕಾರ್ತಿಕೇ ।**
**ಚತಸೃಷ್ವಪ್ಯಷ್ಟಕಾಸು ಹೇಮಂತೇ ಶಿಶಿರೇ ತಥಾ ।।೨೨।।**

**ಶುಕ್ಲಪಕ್ಷೇ ತೃತೀಯಾಯಾಂ** ವೈಶಾಖಮಾಸ ಶುಕ್ಲಪಕ್ಷ ತೃತೀಯಾ ಅಂದರೆ ಅಕ್ಷಯ್ಯ ತೃತೀಯಾದಲ್ಲಿ, ಶುಕ್ಲಪಕ್ಷ ಎಂಬುದನ್ನು ಮುಂದೆ ಅನ್ವಯಿಸಬೇಕು. **ಕಾರ್ತಿಕೇ ಶುಕ್ಲಪಕ್ಷೆ ನವಮ್ಯಾಂ** ಕಾರ್ತಿಕಮಾಸದ ಶುಕ್ಲಪಕ್ಷ ನವಮಿಯಲ್ಲಿ **ಹೇಮಂತೇ**

ಮಾರ್ಗಶೀರ್ಷ ಮತ್ತು ಪುಷ್ಯ ಕೃಷ್ಣಪಕ್ಷದಲ್ಲಿ **ತಥಾ** ಹಾಗೂ **ಶಿಶಿರೇ** ಮಾಘ ಫಾಲ್ಗುಣ ಕೃಷ್ಣಪಕ್ಷಗಳಲ್ಲಿ **ಚತಸೃಷು ಅಪಿ ಅಷ್ಟಕಾಸು** ಈ ಎರಡು ಋತುಗಳ ಸಂಬಂಧಿಯಾದ ಮೂರು ಅಷ್ಟಕಗಳು, ಅಪಿಶಬ್ದ ಸಮುಚ್ಚಯಕವಾಗಿ ತ್ರಯೋದಶಿ ಎಂದು ನಾಲ್ಕನೇ ಅಷ್ಟಕ ಸಮುಚ್ಚಯ ಮಾಡುವದು. ಅಂತು ಸಪ್ತಮೀ ಅಷ್ಟಮೀ ನವಮೀ ಇವು ಅಷ್ಟಕ. ತ್ರಯೋದಶೀ ಅಷ್ಟಕಾ ನಾಲ್ಕನೆಯದು ಹೀಗೆ ನಾಲ್ಕೂ ಅಷ್ಟಕಗಳಲ್ಲಿ ಶ್ರಾದ್ಧಮಾಡಬೇಕು ಎಂದು ಭಾವ.

ಈ ಶ್ಲೋಕದಲ್ಲಿ ಚತಸೃಷು ಅಷ್ಟಕಾಸು ಎಂದು ಹೇಳುತ್ತದೆ. ಆದರೆ ಅಷ್ಟಕಾಗಳು ಮೂರೇ ಪ್ರಮಿತವಾಗಿವೆ ಆದ್ದರಿಂದ ನಾಲ್ಕು ಎಂದು ಸರಿಯಲ್ಲ ಎಂದರೆ ನಾಲ್ಕು ಹೇಗೆಂದು ತೋರಿಸುವರು-

**... ತಾತ್ಪರ್ಯ ...**

**ಸಪ್ತಮ್ಯಾದಿತ್ರಯಂ ಚೈವ ತಥಾ ಚೈವ ತ್ರಯೋದಶೀ । ಚತಸ್ರಸ್ತ್ವಷ್ಟಕಾಃ ಪ್ರೋಕ್ತಾಃ ಸರ್ವಪಕ್ಷಾದ್ವಿಶೇಷತಃ । ಇತಿ ಚ ವ್ಯಾಸಸ್ಮೃತೌ । ಹೇಮಂತೇ ಶಿಶಿರೇ ಚೈವ ನಿತ್ಯಶ್ರಾದ್ಧಂ ಗುಣೋತ್ತರಂ ।। ಇತಿ ಚ ।।**

ಸಪ್ತಮೀ ಅಷ್ಟಮೀ ನವಮೀ ಹಾಗೂ ತ್ರಯೋದಶೀ ಇವು ನಾಲ್ಕು ಅಷ್ಟಕ ಎನಿಸಿಕೊಳ್ಳುವವು. ಎಲ್ಲ ಕೃಷ್ಣಪಕ್ಷದಲ್ಲಿರುವ ತಿಥಿಗಳಿಗಿಂತ ವಿಶೇಷ ಫಲಪ್ರದಗಳು. ಈ ಎರಡು ಋತುಗಳಲ್ಲಿ ಶ್ರಾದ್ಧಮಾಡಬೇಕೆಂದು ವಿಶೇಷವಿಲ್ಲವಲ್ಲ ಎಂದು ಆಶಂಕಿಸಿ ನಿತ್ಯಶ್ರಾದ್ಧವಿಧಿಯೇ ಹೇಮಂತ ಶಿಶಿರಋತುಗಳಲ್ಲಿ ಶ್ರಾದ್ಧವಿಧಿಯಾದ್ದರಿಂದ ಪ್ರತ್ಯೇಕ ವಿಧಾನವಿಲ್ಲದಿದ್ದರೂ ನಿತ್ಯಶ್ರಾದ್ಧವೇ. 'ಗುಣೋತ್ತರಂ' ಎಂದು ಅತಿಶಯಫಲಪ್ರದ ವೆಂದು ಗುಣವಿಧಾನವನ್ನು ಈ ವಾಕ್ಯದಿಂದ ಮಾಡಿರುತ್ತಾರೆ.

ಇಲ್ಲೊಂದು ಶಂಕೆ. ತ್ರಯೋದಶಿಯು ಅಷ್ಟಕಾ ಎಂದಾದರೆ ಅಷ್ಟಕಾಸು 'ಚತುರ್ದಶ್ಯಾಂ ಪ್ರತಿಪತ್‌ಪರ್ವಣೋರಪಿ । ನಾಧೀಯೀತ ದ್ವಿಜಃ ಕಶ್ಚಿತ್ । ಮುಂತಾದ ನಾರದೀಯಪುರಾಣವಚನವಿರುವದರಿಂದ ತ್ರಯೋದಶಿಯೂ ಅನಧ್ಯಯನ ದಿನವಾಗಬೇಕು ಎಂದು. ಅದು ಸರಿಯಲ್ಲ. ಏಕೆಂದರೆ ಎಲ್ಲ ದೇಶದಲ್ಲಿ ಶಿಷ್ಟರು ತ್ರಯೋದಶೀ ದಿನದಂದು ಅಧ್ಯಯನ ಮಾಡಬಾರದಿತ್ತು ಮಾಡುತ್ತಾರೆ. ಆದ್ದರಿಂದ ತ್ರಯೋದಶಿ ಅಷ್ಟಕವೆನ್ನುವದು ಸರಿಯಲ್ಲವೆಂದರೆ.

ಉತ್ತರ ಈ ಶಿಷ್ಟಾಚಾರದಿಂದಲೇ ಸಪ್ತಮೀ ಮುಂತಾದ ಮೂರು ಅಷ್ಟಕಾಗಳಿಂದ ಶ್ರಾದ್ಧ ಮತ್ತು ಅನಧ್ಯಯನ ನಿಮಿತ್ತ ಉಂಟು. ತ್ರಯೋದಶಿಗೆ ಶ್ರಾದ್ಧ ಮಾತ್ರ ನಿಮಿತ್ತವೇ ಹೊರತು ಅನಧ್ಯಯನ ನಿಮಿತ್ತ ಇಲ್ಲವೆಂದು ತಿಳಿಯುವದು. ನಾರದೀಯವಚನದ ಪ್ರಕಾರ ಇದೂ ಅಷ್ಟಕಾ ಆದ್ದರಿಂದ ಅನಧ್ಯಯನಕ್ಕೂ

ನಿಮಿತ್ತವಾಗಲಿ ಎಂದರೇ ನಾರದೀಯವಚನ ಸಾಮಾನ್ಯವಚನವಾದ್ದರಿಂದ ಸಾವಕಾಶವಾದ್ದರಿಂದ ದುರ್ಬಲವಾಗಿದೆ. ಕಾರಣ 'ಅಪರೇಷು ಚ ಪಕ್ಷೇಷು ಹ್ಯಷ್ಟಕಾಸು ತಿಸ್ರಷ್ವಪಿ । ಹೇಮಂತಶಿಶಿರಯೋಶ್ಚೈವ ನಾಧ್ಯೇಯಾ ವೇದಸಂಹಿತಾ'' ಎಂದು 'ತಿಸ್ರಷು ಅಷ್ಟಕಾಸು' ಎಂದು ಮೂರು ಅಷ್ಟಕಾಗಳಲ್ಲಿ ಮಾತ್ರ ಅಧ್ಯಯನ ಮಾಡಬಾರದೆಂದು ನಿರವಕಾಶವಾಗಿ ಹೇಳಿರುವದರಿಂದ ಪ್ರಬಲವಾದ ವಸಿಷ್ಠಸ್ಮೃತಿರೂಪ ವಿಶೇಷವಚನದಿಂದ ಬಾಧಿತವಾದ್ದರಿಂದ ಆ ನಾರದೀಯ ವಚನದಿಂದ ಅನಧ್ಯಯನ ನಿಮಿತ್ತ ಸಿದ್ಧವಾಗುವದಿಲ್ಲ. ಮತ್ತು ತ್ರಯೋದಶಿಯು ಶ್ರಾದ್ಧಮಾತ್ರಕ್ಕೆ ನಿಮಿತ್ತವೆಂಬ ಅಭಿಪ್ರಾಯದಿಂದ ಶ್ರಾದ್ಧ ಪ್ರಕರಣದಲ್ಲಿ ತ್ರಯೋದಶೀ ಎಂದು ವಿಶೇಷ ಹೆಸರಿನಿಂದ ಹೇಳಿದೆ ಹೊರತು ಅನಧ್ಯಯನ ಪ್ರಕರಣದಲ್ಲಿ ಅಲ್ಲ. ಇಲ್ಲವಾದರೆ ಅನಧ್ಯಯನ ಪ್ರಕರಣದಲ್ಲಿಯೂ ತ್ರಯೋದಶೀ ಎಂದು ಹೇಳಬೇಕಿತ್ತು ಹೇಳಿಲ್ಲ. ಆದ್ದರಿಂದ ನಾವು ಹೇಳಿದ್ದು ಸರಿ. ಇದರಿಂದ ಶಿಷ್ಟಾಚಾರವೂ ನಿರ್ಮೂಲ ಎಂಬ ಶಂಕೆ ಪರಿಹೃತವಾಯಿತು. ಇದಕ್ಕೆ ವಶಿಷ್ಠಸ್ಮೃತಿ ಮೂಲವಾಗಿದೆ ಎಂದು ತಿಳಿಯಬೇಕು.

ಷಣ್ಣವತಿ ಅನುಷ್ಠಾನ ಮಾಡುವವರ ಅನುಷ್ಠಾನದ ಪ್ರಕಾರ ಸಪ್ತಮ್ಯಾದಿ ದಿನತ್ರಯ ತ್ರಯೋದಶೀ ಈ ನಾಲ್ಕುದಿನ ಹಾಗೂ ಮಾರ್ಗಶೀರ್ಷಾದಿ ಅಪರಪಕ್ಷಚತುಷ್ಟಯ (ಹೇಮಂತ ಶಿಶಿರಗಳಲ್ಲಿಯ) ಅಷ್ಟಕಾ ಚತುಷ್ಟಯ ಸ್ವೀಕರಿಸಬೇಕು ಎನ್ನುತ್ತಾರೆ ಮಂದನಂದಿನೀಕಾರರು. ।।೨೨।।

**ಮಾಘೇ ಚ ಸಿತಸಪ್ತಮ್ಯಾಂ ಮಘಾರಾಕಾಸಮಾಗಮೇ ।**
**ರಾಕಾಯಾ ವಾಽನುಮತ್ಯಾ ವಾ ಮಾಸರ್ಕ್ಷಾಣಿ ಯುತಾನ್ಯಪಿ ।।೨೩।।**

**ಮಾಘೇ ಚ** ಮಾಘಮಾಸದಲ್ಲಿಯೂ **ಸಿತಸಪ್ತಮ್ಯಾಂ** ಶುಕ್ಲಸಪ್ತಮೀ ಅಂದರೆ ರಥಸಪ್ತಮೀ ಎಂದು ಮತ್ತು **ಮಘಾರಾಕಾಸಮಾಗಮೇ** ಮಘಾನಕ್ಷತ್ರ ಹಾಗೂ ಪೂರ್ಣಚಂದ್ರನಿರುವ ಪೂರ್ಣಿಮಾ ತಿಥಿ (ರಾಕಾ)ಯಲ್ಲಿ **ರಾಕಾಯಾ ಅನುಮತ್ಯಾ ವಾ** ಕಲಾಹೀನ ಚಂದ್ರನಿಂದ ಕೂಡಿದ ಪೌರ್ಣಿಮಾದಲ್ಲಿ ಆಗಲಿ **ಮಾಸರ್ಕ್ಷಾಣಿ ಯುತಾನ್ಯಪಿ** ಮಾಸನಾಮ ಪ್ರವೃತ್ತಿ ನಿಮಿತ್ತವಾದ ನಕ್ಷತ್ರಗಳಿಂದ ಕೂಡಿದ ತಿಥಿಗಳೂ ಶ್ರೇಯಸ್ಕರವೆಂದು ಮುಂದೆ ಅನ್ವಯ. 'ನಕ್ಷತ್ರಂ ಋಕ್ಷಂ ಭಂ ತಾರಾ' ಎಂದು ಅಮರವಿದೆ. 'ಪುಷ್ಯಯುಕ್ತಾ ಪೌರ್ಣಮಾಸೀ ಪೌಷೀ ಮಾಸೇ ತು ಯತ್ರ ಸಾ । ನಾಮ್ನಾಸ ಪೌಷೋ ಮಾಘಾದ್ಯಾ ಶ್ಚೈವಂ ಮೇಷಾ ದಶಾ ಪರೇ' ಎಂದು ತ್ರಿಕಾಂಡಿ ಅಮರವಿದೆ. ಚಿತ್ರಾ, ವಿಶಾಖಾ, ಜ್ಯೇಷ್ಠಾ, ಪೂರ್ವಾಷಾಢಾ, ಶ್ರವಣ, ಭಾದ್ರಾ ಅಶ್ವಿನೀ ಕೃತ್ತಿಕಾ, ಮೃಗಶಿರ, ಪುಷ್ಯ, ಮಘಾ, ಉತ್ತರಾಫಾಲ್ಗುಣಿ ನಕ್ಷತ್ರಗಳು ಶ್ರೇಯಸ್ಕರ. ।।೨೩।।

**ದ್ವಾದಶ್ಯಾಮನುರಾಧಾ ಸ್ಯಾತ್ ಶ್ರವಣಸ್ತಿಸ್ರ ಉತ್ತರಾಃ ।**
**ತಿಸೃಷ್ವೇಕಾದಶೀ ಚಾಸು ಜನ್ಮರ್ಕ್ಷಂ ಸೌಮ್ಯಯೋಗಯುಕ್ ॥೨೪॥**

**ದ್ವಾದಶ್ಯಾಂ** ದ್ವಾದಶಿ ತಿಥಿಯಲ್ಲಿ **ಅನುರಾಧಾ ಸ್ಯಾತ್** ಅನುರಾಧಾನಕ್ಷತ್ರ ಬಂದಾಗ ಅಥವಾ **ಶ್ರವಣಾ ಸ್ಯಾತ್** ಶ್ರವಣಾನಕ್ಷತ್ರ ಬಂದರೆ (ಬಂದಾಗ) ಹಾಗೂ **ಉತ್ತರಾಃ ತಿಸ್ರಃ** ಮೂರು ಉತ್ತರೆಗಳು ಅಂದರೆ ಉತ್ತರಾ, ಉತ್ತರಾಷಾಢ, ಉತ್ತರಾಭಾದ್ರಪದ ನಕ್ಷತ್ರಗಳು **ಆಸು ತಿಸೃಷು** ಈ ಮೂರು ನಕ್ಷತ್ರಗಳಲ್ಲಿ ಮಾಡುವ ಕರ್ಮ ಬಹುಫಲಪ್ರದವೆಂದು ಅರ್ಥ **ಜನ್ಮರ್ಕ್ಷಂ** ತನ್ನ ಜನ್ಮನಕ್ಷತ್ರ **ಸೌಮ್ಯಯೋಗಯುಕ್** ಮೃಗಶಿರನಕ್ಷತ್ರದಿಂದ ಕೂಡಿದ ದಿನ ಇವು ಶ್ರೇಯಃಕಾಲಗಳು ಇವುಗಳಲ್ಲಿ ಶ್ರಾದ್ಧಮಾಡಬೇಕು.

ವಿಶೇಷ :- 'ಏಕಾದಶೀ ವಾಸು' ಎಂಬ ಪಾಠ ಒಳ್ಳೆಯದು. ಇವುಗಳಲ್ಲಿ ಶ್ರಾದ್ಧಪ್ರಾಪ್ತವಾದರೆ ನಿಷಿದ್ಧವಾದ ಏಕಾದಶಿಯಲ್ಲಿ ಮಾಡಬಾರದು. ವೈಷ್ಣವಸಿದ್ಧಾಂತದ ಪ್ರಕಾರ ಏಕಾದಶಿಯಲ್ಲಿ ಹೋಮ ಶ್ರಾದ್ಧಗಳೂ ನಿಷಿದ್ಧ. 'ಹರಿವಾಸರೇ ನ ಜುಹುಯಾತ್ ನ ಶ್ರಾದ್ಧಂ ಕುರ್ಯಾತ್' ಎಂದು ವಿಶೇಷ ನಿಷೇಧವಿದೆ. ಅವೈಷ್ಣವರು ಮಾಡುವದು ಶಾಸ್ತ್ರವಿರುದ್ಧವಾದ್ದರಿಂದ ಅದು ಗ್ರಾಹ್ಯವಲ್ಲ ಕಾರಣ ಚ ಎಂದು ಇವ ಎಂದರ್ಥದಲ್ಲಿ ಇಟ್ಟುಕೊಂಡು ಏಕಾದಶೀ ಹೇಗೆ ಪುಣ್ಯದಿನವೋ ಹಾಗೆ ಈ ಮೂರುನಕ್ಷತ್ರಗಳೂ ಪುಣ್ಯಕರಗಳು. ಏಕಾದಶೀ(ಇವ) ಏಕಾದಶಿಯಲ್ಲಿ ಮಾಡಿದ ಸ್ನಾನ ವ್ಯಾಖ್ಯಾನ ಜಪದಾನಾದಿ ಕರ್ಮಗಳು ಹೇಗೆ ಬಹುಫಲಪ್ರದವೋ ಹಾಗೆ. ॥೨೪॥

**ತ ಏತೇ ಶ್ರೇಯಸಃ ಕಾಲಾ ನೃಣಾಂ ಶ್ರೇಯೋ ವಿವರ್ಧನಾಃ ।**
**ಕುರ್ಯಾತ್ ಸರ್ವಾತ್ಮನೈತೇಷು ಶ್ರೇಯೋಽಮೋಘಂ ತದಾಯುಷಃ ॥೨೫॥**

**ತೇ ಏತೇ ಕಾಲಾಃ** ಈ ಕಾಲಗಳು **ಶ್ರೇಯಸಃ** ಶ್ರೇಯಸ್ಸಿಗೆ ಕಾರಣಗಳು **ನೃಣಾಂ** ಇವುಗಳಲ್ಲಿ ವಿಹಿತಕರ್ಮ ಮಾಡುವ ಜನರಿಗೆ **ಶ್ರೇಯೋವಿವರ್ಧನಾಃ** ಶ್ರೇಯಸ್ಸನ್ನು ಜ್ಞಾನಭಕ್ತ್ಯಾದಿಗಳನ್ನು ಹೆಚ್ಚಿಸುವವು **ಸರ್ವಾತ್ಮನಾ** ಎಲ್ಲ ರೀತಿಯಿಂದಲೂ **ಏತೇಷು** ಈ ಕಾಲಗಳಲ್ಲಿ **ಶ್ರೇಯಃ ಕುರ್ಯಾತ್** ಶ್ರೇಯಸ್ಕರಗಳಾದ ಜಪದಾನ ಮುಂತಾದ ಧರ್ಮವನ್ನು ಮಾಡಬೇಕು **ತತ್** ಅದು **ಆಯುಷಃ** ಬದುಕಿನ **ಅಮೋಘಂ** ಸಾಫಲ್ಯವು.

**ಏಷು ಸ್ನಾನಂ ಜಪೋ ಹೋಮೋ ವ್ರತಂ ದೇವದ್ವಿಜಾರ್ಚನಮ್ ।**
**ಪಿತೃದೇವನೃಭೂತೇಭ್ಯೋ ಯದ್ದತ್ತಂ ತದ್ಧ್ಯನಶ್ವರಮ್ ॥೨೬॥**

---

* ಏಕಾದಶೀ ವಾಸು ಇತಿ ಪಾಠಾಂತರ

**ಏಷು** ಈ ಮೇಲೆ ಹೇಳಿದ ಕಾಲಗಳಲ್ಲಿ ಸ್ನಾನ, ಜಪ, ಹೋಮ, ವ್ರತ ದೇವಪೂಜಾ ಬ್ರಾಹ್ಮಣಪೂಜಾ ಪಿತೃಗಳು ದೇವತೆಗಳು ಮನುಷ್ಯರು ಮತ್ತು ಪ್ರಾಣಿಗಳು ಇವರಿಗೆ **ಯದ್ದತ್ತಂ** ಏನು ಕೊಡುತ್ತಾರೋ **ತತ್** ಅದು **ಅನಶ್ವರಂ ಹಿ** ವಿಹಿತಕಾಲಗಳಲ್ಲಿ ವಿಹಿತಕರ್ಮಗಳನ್ನು ಹರಿಸ್ಮರಣೆ ಪೂರ್ವಕ ಮಾಡಿದಲ್ಲಿ ಅಕ್ಷಯವಾಗುವದು.

ವಿಶೇಷ ಃ- ಇವುಗಳಲ್ಲಿ ಹೋಮವನ್ನು ಶ್ರಾದ್ಧವನ್ನು ವಿಹಿತದಿನದಲ್ಲಿ ಮಾಡಬೇಕು. ಏಕಾದಶಿಯನ್ನು ಹೇಳಿದ್ದಾರೆ ಎನ್ನಬಾರದು. ಆ ದಿನ ಜಪಾದಿಗಳನ್ನು ಮಾಡಲು ಹೇಳಿದ್ದು ಶ್ರಾದ್ಧಹೋಮಗಳಿಗಲ್ಲ. 'ವಿದ್ಧೇಕಾದಶೀ' ಎಂದಾದರೂ ಅರ್ಥ ಎನ್ನುತ್ತಾರೆ ಮಂದನಂದಿನಿಕಾರರು.

**ಸಂಸ್ಕಾರಕಾಲೋ ಜಾಯಾಯಾ ಅಪತ್ಯಸ್ಯಾತ್ಮನಸ್ತಥಾ ।**
**ಪ್ರೇತಸಂಸ್ಥಾ ಮೃತಾಹಶ್ಚ ಕರ್ಮಣ್ಯಭ್ಯುದಯೇ ನೃಪ ॥೨೭॥**

**ನೃಪ** ಧರ್ಮರಾಜನೇ **ಜಾಯಾಯಾಃ** ಹೆಂಡತಿಯ **ಸಂಸ್ಕಾರಕಾಲಃ** ಸಂಸ್ಕಾರ ಮಾಡುವ ಕಾಲವು ಆರು ಅಥವಾ ಎಂಟನೇ ತಿಂಗಳಲ್ಲಿ (ಗರ್ಭವತಿಗೆ) ಸೀಮಂತ ಮುಂತಾದವು **ಅಪತ್ಯಸ್ಯ** ಮಗನಿಗೆ ಹುಟ್ಟಿದ ಹನ್ನೊಂದನೇ ದಿನ ಅಥವಾ ಹನ್ನೆರಡನೇ ದಿನ ನಾಮಕರಣ ಮಾಡುವ ಕಾಲ **ಆತ್ಮನಃ** ತನಗೆ **ಸಂಸ್ಕಾರಕಾಲಃ** ವಸಂತಕಾಲದಲ್ಲಿ ಬ್ರಾಹ್ಮಣನ್ನು ಯಜ್ಞಮಾಡಬೇಕು ಎಂದು ಹೇಳಿದ ಯಜ್ಞ ಮಾಡುವ ಕಾಲ **ಪ್ರೇತಸಂಸ್ಥಾ** ಸತ್ತ ತಂದೆತಾಯಿಯರ ದಾಹಾದಿಸಂಸ್ಕಾರ **ಮೃತಾಹಃ** ಪ್ರತಿಸಾಂವತ್ಸರಿಕ ಶ್ರಾದ್ಧಮಾಡುವ ಕಾಲವು **ಅಭ್ಯುದಯೇ** ಮಹಾ ಉದಯಕ್ಕಾಗಿ **ಕರ್ಮಣಿ** ಮಾಡುವ ಕ್ರಿಯೆಗಳಿಗೆ ಶ್ರೇಯಃಪ್ರದಗಳು.

ವಿಶೇಷ ಃ- **ಅಭ್ಯುದಯೇ ಕರ್ಮಣಿ** ಶುಭಕಾರ್ಯಗಳಲ್ಲಿ ಪ್ರಥಮಾ ಸಪ್ತಮೀ ಅರ್ಥದಲ್ಲಿ. ಅಂದರೆ ಹಿಂದೆ ಹೇಳಿದ ಸಮಯದಲ್ಲಿ ಕೊಟ್ಟದ್ದು ಅಕ್ಷಯವಾಗುವದು. ಎಂದು ಹಿಂದಿನ ಶ್ಲೋಕದಿಂದ ಅನ್ವಯವು. ॥೨೭॥

'ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ವಿಕಂ ಸ್ಮೃತಂ' ಎಂದು ದೇಶಕಾಲಪಾತ್ರಗಳು ದಾನಾದಿಗಳಿಗೆ ಅಂಗವೆಂದು ಹೇಳಿರುವದರಿಂದ ದೇಶಾದಿಗಳನ್ನು ಹೇಳುವರು-

**ಅಥ ದೇಶಾನ್ ಪ್ರವಕ್ಷ್ಯಾಮಿ ಧರ್ಮಾದಿಶ್ರೇಯ ಆವಹಾನ್ ।**
**ಸ ವೈ ಪುಣ್ಯತಮೋ ದೇಶಃ ಸತ್ಪಾತ್ರಂ ಯತ್ರ ಲಭ್ಯತೇ ॥೨೮॥**

**ಅಥ** ಇನ್ನು ಮುಂದೆ **ಶ್ರೇಯ ಆವಹಾನ್** ಶ್ರೇಯಃಪ್ರಾಪಕಗಳಾದ **ದೇಶಾನ್** ದೇಶಗಳನ್ನು **ಪ್ರವಕ್ಷ್ಯಾಮಿ** ಹೇಳುವೆನು **ಯತ್ರ** ಎಲ್ಲಿ **ಸತ್ಪಾತ್ರಂ ಲಭ್ಯತೇ** ಸಾಧುಜನರು ದೊರೆಯುವರೋ **ಸ ವೈ** ಅದೇ **ಪುಣ್ಯತಮಃ ದೇಶಃ** ಪುಣ್ಯ ತಂದುಕೊಡುವ ದೇಶವು. ಇದರಿಂದ ದೇಶಕ್ಕಿಂತ ಪಾತ್ರರೇ ಮುಖ್ಯ ಅಂಗ. ತಮ್ಮ ಅನುಷ್ಠಾನದಿಂದ ದೇಶಕ್ಕೆ ಪುಣ್ಯತೆಯನ್ನು ತಂದು ಕೊಡುವದರಿಂದ ಎಂದು ತಿಳಿಸಿರುವರು ।।೨೮।।

**ವಿಶ್ವಂ ಭಾಗವತೋ ಯತ್ರ ಸರ್ವಮೇತಚ್ಚರಾಚರಮ್ ।**
**ಯತ್ರ ಹ ಬ್ರಾಹ್ಮಣಕುಲಂ ತಪೋ ವಿದ್ಯಾದಯಾನ್ವಿತಮ್ ।।೨೯।।**

**ಭಾಗವತಃ** ಭಗವದ್ಭಕ್ತನು **ಯತ್ರ** ಎಲ್ಲಿರುವನೋ **ತತ್ರ** ಅಲ್ಲಿ **ಚರಾಚರಂ** ಜ್ಞಾನಿ ಅಜ್ಞಾನಿ ರೂಪಕವಾದ **ಸರ್ವಂ ವಿಶ್ವಂ** ಎಲ್ಲ ಜಗತ್ತು **ವರ್ತತೇ** ಇರುವದೆಂದು ತಿಳಿಯಬೇಕು. **ತತ್** ಚರಾಚರವಾದ **ವಿಶ್ವಂ** ಪ್ರಪಂಚವು ಇದೆ ಎಂದು **ಜಗದೇ** ವೇದಗಳಿಂದ ಹೇಳಲ್ಪಟ್ಟಿದೆ. ಜಗತ್ತೇಕೆ ಇರುವದು ಎಂದರೆ **ಏತತ್** ಭಕ್ತನಲ್ಲಿ ಶ್ರೀಹರಿಸನಿಹನಾದ್ದರಿಂದ ಅಥವಾ ಭಕ್ತನಲ್ಲಿ **ವಿಶ್ವಂ** ವಿಷ್ಣುವನ್ನು ಅನುಸಂಧಾನ ಮಾಡಬೇಕು ಎಂದರ್ಥ. ಅಥವಾ **ಭಗವತಃ** ಭಗವಂತನ ಉದರದಲ್ಲಿರುವ **ವಿಶ್ವಂ** ಎಲ್ಲ **ಚರಾಚರಾತ್ಮಕಂ ಜಗತ್** ಚರಾಚರಾತ್ಮಕ ಜಗತ್ತು **ಯತ್ರ** ಯಾವ ಪಾತ್ರನಲ್ಲಿ ಇರುವನೋ ಅಂಥ ಸತ್ಪಾತ್ರನು ಎಲ್ಲಿರುವನೋ ಎಂದೂ ಹಿಂದಿನಿಂದ ಅನ್ವಯ. ಭಗವಂತನಿಂದ ಧರಿಸಲ್ಪಟ್ಟದ್ದು ಪಾತ್ರನಲ್ಲಿರುವದು ಹೀಗೆ ಎಂದು ಪ್ರಶ್ನಿಸಬಾರದು. ಭಗವಂತನೇ ಅವನಲ್ಲಿರುವನು. ಇದನ್ನೇ ಸ್ಮೃತಿಯಲ್ಲಿ ''ಯತಿರ್ಯಸ್ಯ ಗೃಹೇ ಭುಂಕ್ತೇ ತತ್ರ ಭುಂಕ್ತೇ ಹರಿಃ ಸ್ವಯಮ್ । ಹರಿರ್ಯತ್ರ ಗೃಹೇ ಭುಂಕ್ತೇ ತತ್ರ ಭುಂಕ್ತೇ ಜಗತ್ರಯಮ್'' ಎಂದು ಹೇಳಿದೆ. **ತಪೋವಿದ್ಯಾದಯಾನ್ವಿತಂ** ತಪಸ್ಸು, ವಿದ್ಯೆ, ದಯೆಗಳಿಂದ ಕೂಡಿದ **ಬ್ರಾಹ್ಮಣಕುಲಂ** ಬ್ರಾಹ್ಮಣಸಮೂಹವೂ **ಯತ್ರ** ಎಲ್ಲಿರುವದೋ **ಸಃ ದೇಶಃ** ಎಂದು ಮುಂದಿನ ಶ್ಲೋಕದಿಂದ ಅನ್ವಯವನ್ನು ತಿಳಿಯಬೇಕು. ।।೨೯।।

**ಯತ್ರ ಯತ್ರ ಹರೇರರ್ಚಾ ಸ ದೇಶಃ ಶ್ರೇಯಸಾಂ ಪದಮ್ ।**
**ಯತ್ರ ಗಂಗಾದಯೋ ನದ್ಯಃ ಪುರಾಣೇಷು ಚ ವಿಶ್ರುತಾಃ ।।೩೦।।**

**ಯತ್ರ ಯತ್ರ** ಎಲ್ಲಿ ಎಲ್ಲಿ **ಹರೇಃ** ಶ್ರೀಹರಿಯ **ಅರ್ಚಾಃ** ಪ್ರತಿಮೆಗಳು ವೆಂಕಟೇಶ ಜಗನ್ನಾಥ ಮುಂತಾದವು ಇರುವವೋ **ಯತ್ರ** ಎಲ್ಲಿ **ಗಂಗಾದಯಃ ನದ್ಯಃ** ಗಂಗಾ ಮೊದಲಾದ ನದಿಗಳು **ಪುರಾಣೇಷು** ಹದಿನೆಂಟು ಮಹಾಪುರಾಣ ಉಪಪುರಾಣಗಳಲ್ಲಿ **ವಿಶ್ರುತಾಃ** ಪ್ರಸಿದ್ಧವಾದವು ಇರುವವೋ **ಸಃ ದೇಶಃ** ಆ ದೇಶವು **ಶ್ರೇಯಃ** ಶ್ರೇಯಸ್ಸಿಗೆ ಕಾರಣವಾದ ಸ್ಥಳವು. ।।೩೦।।

**ಸರಾಂಸಿ ಪುಷ್ಕರಾದೀನಿ ಕ್ಷೇತ್ರಾಣ್ಯರ್ಹಾಶ್ರಿತಾನ್ಯುತ ।**
**ಕುರುಕ್ಷೇತ್ರಂ ಗಯಶಿರಃ ಪ್ರಯಾಗಃ ಪುಲಹಾಶ್ರಮಃ ॥೩೦॥**

**ಅರ್ಹಾಶ್ರಿತಾನಿ** ಪೂಜ್ಯರಾದ ಅಗಸ್ತ್ಯರೇ ಮೊದಲಾದವರು ವಾಸಿಸಿದ **ಪುಷ್ಕರಾದೀನಿ ಸರಾಂಸಿ** ಪುಷ್ಕರ ಮಾನಸ ಸರೋವರಗಳು **ಕ್ಷೇತ್ರಾಣಿ** ಕ್ಷೇತ್ರಗಳು **ಕುರುಕ್ಷೇತ್ರಂ** ಕುರುಕ್ಷೇತ್ರವು **ಗಯಶಿರಃ** ಗಯಶಿರವು ಮತ್ತು **ಪ್ರಯಾಗಃ** ಪ್ರಯಾಗವು **ಪುಲಹಾಶ್ರಮಃ** ಪುಲಹವೆಂಬ ಋಷಿಯ ಆಶ್ರಮವು.

ವಿಶೇಷ ಃ-'ಚಾಪೋ ಸಂಜ್ಞಾ ಛಾಂದಸೋಃ' ಎಂಬುದರಿಂದ ಅಜಕ್ಷೀರಂ ಎಂಬಂತೆ ಹ್ರಸ್ವವಾಗಿದೆ. ಕೆಲವರು ಗಯ ಎಂಬ ಹೆಸರಿನ ತಲೆಯಲ್ಲಿದೆಯೋ ಆ ಸ್ಥಳ ಗಯಶಿರಕ್ಷೇತ್ರ ಎಂದು ವ್ಯಾಖ್ಯಾನಿಸುವರು. ದೇವತೆಗಳು ವಾಸಮಾಡಿದ ಸ್ಥಳ ಗಯಾಕ್ಷೇತ್ರ ಅದಕ್ಕೆ ಗಯಾಶಿರ ಎನ್ನುವರು. ಗಯೆಯಲ್ಲಿ ಪಿತೃರೂಪದಿಂದ ಜನಾರ್ದನರೂಪಿ ಶ್ರೀಹರಿ ಇದ್ದಾನೆ ಮುಂತಾಗಿ ಹೇಳಿದೆ. ಗಯಾಃ ಅಸ್ತಿ ಅಸ್ಯ ಇತಿ ಗಯಂ ತಚ್ಚ ತಚ್ಛಿರಂ ಎಂದು ಕೆಲವರು ಕೆಲವುಕಡೆ ಅದಂತವಾದ ಶಬ್ದ ಶಿರೋವಾಚಕವಾಗಿದೆ ಶಿರೋದಂತ. 'ಪಿಂಡಂ ದದ್ಯಾತ್ ಗಯಾಶಿರೇ' 'ನೀಚಕರ್ತಶಿರಾನ್ ದ್ರೌಣಿಃ' ಮುಂತಾಗಿರುವದರಿಂದ ಉಪಪತ್ತಿ ತಿಳಿಯಬೇಕು. ॥೩೦॥

**ನೈಮಿಷಂ ಫಲ್ಗುನಂ ಸೇತುಃ ಪ್ರಭಾಸೋಽಥ ಕುಶಸ್ಥಲೀ ।**
**ವಾರಾಣಸೀ ಮಧುಪುರೀ ಪಂಪಾ ಬಿಂದುಸರಸ್ತಥಾ ॥೩೨॥**

**ನೈಮಿಷಂ** ನೈಮಿಷಾರಣ್ಯ **ಫಲ್ಗುನಂ** ಸ್ಯಾನಂದೂರಪುರ ಅಥವಾ ಕನ್ಯಾತೀರ್ಥ. **ಸೇತುಃ** ರಾಮಸೇತು **ಪ್ರಭಾಸಃ** ಪ್ರಭಾಸವು **ಅಥ** ಮತ್ತು **ಕುಶಸ್ಥಲೀ** ದ್ವಾರಾವತಿಯು **ವಾರಾಣಸೀ** ಕಾಶೀಕ್ಷೇತ್ರ **ಮಧು** ಮಧುವನ **ಪುರೀ** ಕಾಂಚೀ ಅಥವಾ ಮಧುಪುರೀ **ಪಂಪಾ ತಥಾ ಬಿಂದುಸರಃ** ಪಂಪಾಸರೋವರ ಮತ್ತು ಬಿಂದುಸರೋವರ. ॥೩೨॥

**ನಾರಾಯಣಾಶ್ರಮೋ ನಂದಾ ಸೀತಾರಾಮಾಶ್ರಮಾದಯಃ ।**
**ಸರ್ವೇ ಕುಲಾಚಲಾ ರಾಜನ್ ಮಹೇಂದ್ರಮಲಯಾದಯಃ ॥೩೩॥**

**ಏತೇ ಪುಣ್ಯತಮಾ ದೇಶಾ ಹರೇರರ್ಚಾಶ್ರಿತಾ ಪುನಃ ।**
**ಏತಾನ್ ದೇಶಾನ್ ನಿಷೇವೇತ ಶ್ರೇಯಸ್ಕಾಮೋ ಹ್ಯಭೀಕ್ಷ್ಣಶಃ ॥೩೪॥**

**ನಾರಾಯಣಾಶ್ರಮಃ** ನರನಾರಾಯಣಾಶ್ರಮವು ನಂದಾ ಸೀತಾ ಎಂದೂ ಗಂಗೆಯ ಭಾಗಗಳು. ಪಂಚಮಸ್ಕಂಧದಲ್ಲಿ 'ಸೀತಾ ತು ಬ್ರಹ್ಮಸದನಾತ್' ಮುಂತಾಗಿ

ಹೇಳಿದೆ. ಅಲಕನಂದಾಕ್ಕೆ ನಂದಾ ಎಂದು ನಾಮಾಂತರ. **ರಾಮಾಶ್ರಮಾದಯಃ** ರಾಮಚಂದ್ರದೇವರ ಆಶ್ರಮವು. **ಸರ್ವೇ ಕುಲಾಚಲಾಃ** ಏಳು ಕುಲಪರ್ವತಗಳು **ಮಹೇಂದ್ರಮಲಯಾದಯಃ** ಮಹೇಂದ್ರಪರ್ವತ ಮುಂತಾದವು. ।।೩೩।।

**ಧರ್ಮೋಽಹ್ಯತ್ರೋದಿತಃ ಪುಂಸಾಂ ಸಹಸ್ರಾಧಿಫಲೋದಯಃ ।**
**ಪಾತ್ರಂ ಚಾತ್ರನಿರುಕ್ತಂ ವೈ ಕವಿಭಿಃ ಪಾತ್ರವಿತ್ತಮೈಃ ।।೩೪।।**

**ಉದಿತಃ** ಮಾಡಬೇಕೆಂದು ವೇದಾದಿಗಳಲ್ಲಿ ಹೇಳಿದ **ಧರ್ಮಃ** ಧರ್ಮವು **ಅತ್ರ** ಈ ದೇಶದಲ್ಲಿ ಮಾಡಿದ್ದಾದರೆ **ಸಹಸ್ರಾಧಿಲೋದಯಃ** ಸಾವಿರ ಪಟ್ಟಿಗಿಂತ ಹೆಚ್ಚಿನ ಫಲದಾಯಕವಾಗಿದೆ. ಇಷ್ಟಪ್ರಾಪ್ತಿಯಂತೆ ಅನಿಷ್ಟನಿವೃತ್ತಿಯೂ ಆಗುವದೆಂದೂ ಇದೇ ಶಬ್ದದಿಂದ ಹೇಳುವರು. **ಸಹಸ್ರಾಣಾಂ** ಬಹಳ **ಆಧಿ** ಮನೋವ್ಯಥೆಗಳ **ಫಲ** ವಿಶರಣದ **ಉದಯಃ** ಉತ್ಪತ್ತಿಯು ಯೇನ ಸಃ ಅಂದರೆ ಮನೋವ್ಯಥೆಗಳ ನಾಶವಾಗುವದು ಎಂದರ್ಥ. **ಪಾತ್ರವಿತ್ತಮೈಃ** ಪಾತ್ರರನ್ನು ತಿಳಿದವರಲ್ಲಿ ಶ್ರೇಷ್ಠರಾದ **ಕವಿಭಿಃ** ಜ್ಞಾನಿಗಳಿಂದ **ಪಾತ್ರಂ** ಚ ಪಾತ್ರನೂ **ನಿರುಕ್ತಂ ವೈ** ಹೇಳಲ್ಪಟ್ಟಿದೆ. ಶ್ರೀಹರಿಯೇ ಮುಖ್ಯಪಾತ್ರ ಎಂದು.

ವಿಶೇಷ ಃ- ಇಂ ಫಲಾವಿಶರಣೇ ಎಂದು ಧಾತುವಿದೆ. ಸಹಸ್ರಾಧಿಕಫಲ ಎಂದು ಹೇಳಲು ಬರುತ್ತಿರುವಾಗ ಸಹಸ್ರಾಧೀ ಎಂದು ಹೇಳಿದ್ದು. ಈ ರೀತಿ ವ್ಯಾಖ್ಯಾನ ಮಾಡಲು ಬಲವೆಂದು ಸಂತೋಷಪಡಿ ಎನ್ನುತ್ತಾರೆ ಶ್ರೀಸತ್ಯಧರ್ಮರು. ।।೩೪।।

ಆ ಪಾತ್ರ ಯಾವುದೆಂದು ಹೇಳುವರು-

**ಹರಿರೇವೈಕ ಉರ್ವೀಶ ಯನ್ಮಯಂ ಚ ಚರಾಚರಮ್ ।**
**ದೇವರ್ಷ್ಯರ್ಹತ್ಸು ವೈ ಸತ್ಸು ತತ್ರ ಬ್ರಹ್ಮಾತ್ಮಜಾದಿಷು ।**
**ರಾಜನ್ ಯದಗ್ರಪೂಜಾಯಾಂ ಮತಃ ಪಾತ್ರತಯಾಽಚ್ಯುತಃ ।।೩೬।।**

**ಹೇ ಉರ್ವೀಶ** ಧರ್ಮರಾಜನೇ **ಚರಾಚರಂ** ಜಂಗಮಾಜಂಗಮ ಪ್ರಪಂಚವೂ **ಯನ್ಮಯಂ** ಯಾವುದನ್ನು ಪ್ರಧಾನವಾಗಿವುಳ್ಳದ್ದೋ **ದೇವರ್ಷ್ಯರ್ಹತ್ಸು** ಪೂಜಿಸಲು ಯೋಗ್ಯರಾದ ದೇವತೆಗಳು ಋಷಿಗಳು **ಬ್ರಹ್ಮಾತ್ಮಜಾದಿಷು** ವಸಿಷ್ಠಾದಿಗಳು **ಸತ್ಸು** ಸಾಧುಗಳು **ಸತ್ಸು** ಇರುವಾಗ **ತತ್ರ** ನಿನ್ನ ರಾಜಸೂಯಯಾಗದಲ್ಲಿ **ಯತಃ** ಯಾವ ಕಾರಣ **ಅಗ್ರಪೂಜಾಯಾಂ** ಪ್ರಥಮದಲ್ಲಿ ಪೂಜಿಸಲು **ಪಾತ್ರತಯಾ** ಯೋಗ್ಯನೆಂದು **ಅಚ್ಯುತಃ** ಶ್ರೀಕೃಷ್ಣನನ್ನು **ಮತಃ** ಸರ್ವಸಮ್ಮತನು **ತತ್** ಆದ್ದರಿಂದ **ಹರಿರೇವ ಏಕಃ ಪಾತ್ರಂ** ಶ್ರೀಕೃಷ್ಣನೇ ಮುಖ್ಯಪಾತ್ರನು.

ವಿಶೇಷ :-ಅಪಾತ್ರನನ್ನು ಪಾತ್ರವಾಗಿ ಮಾಡಿಲ್ಲವೆಂದೂ ಹೇಳುವರು. **ಪಾತ್ರತಯಾ ಅಚ್ಯುತಃ** ಎಲ್ಲಿಯೂ ಎಂದೂ ಪಾತ್ರತೆಯ ಚ್ಯುತಿ ಇಲ್ಲದವನು ಎಂದರ್ಥ. ಋಷಿಪದದಿಂದ ಬಂದಿದ್ದರೂ ವೈಶಿಷ್ಟ್ಯ ತಿಳಿಸಲು ಮತ್ತೆ ವಸಿಷ್ಠರನ್ನು ಹೇಳಿದ್ದು **ದೇವರ್ಷಯಃ** ದೇವಋಷಿಗಳಲ್ಲಿ ಪೂಜ್ಯರಾದ ಬ್ರಹ್ಮಾದಿಗಳು ಇರುವಾಗ ಎಂದರ್ಥ. (ಇದರಲ್ಲಿ ವಶಿಷ್ಠರು ಬರಲಿಲ್ಲ) ದಶಮಸ್ಕಂಧ ಹಾಗು ಸಭಾಪರ್ವಗಳಲ್ಲಿ ಹೀಗಿದೆ.

**ಇಂದ್ರಾದಯೋ ಲೋಕಪಾಲಾ ವಿರಿಂಚಭವಸಂಯುತಾಃ ।**
**ಆಯಯುಃ ಪ್ರೀತಮನಸೋ ದೇವಾಃ ಬ್ರಹ್ಮಪುರಸ್ಸರಾಃ ॥**

ಎಂದು. ಇಂದ್ರ ಮೊದಲಾದ ಲೋಕಪಾಲಕರು ವಸಿಷ್ಠರಿಂದ ಕೂಡಿಕೊಂಡು ಬಂದರು. ಬ್ರಹ್ಮದೇವರೇ ಮೊದಲಾದ ದೇವತೆಗಳು ಪ್ರೀತಿಯಿಂದ ಬಂದರು ಎಂದು ಹೇಳಿದೆ. 'ದ್ವೈಪಾಯನಃ' ಎಂದಾರಂಭಿಸಿ ಬಂದವರ ಹೆಸರು ಹೇಳುವಾಗ ಸನಕಾದಿಗಳನ್ನು ಸ್ವೀಕರಿಸಿಲ್ಲ ಹಾಗೆ ಭಾರತದಲ್ಲಿಯೂ ಸ್ವೀಕರಿಸಬಾರದು. ಅವರು ಅತಿವಿರಕ್ತರಾದ್ದರಿಂದ ಸಭಾಪ್ರವೇಶ ಸಾಧ್ಯವಿಲ್ಲವೆಂದು ತಿಳಿಯಬೇಕು. 'ಮದಾದಿಷು ಸತ್ಸು' ಎಂದು ಸಾಕ್ಷಾತ್ತಾಗಿ ನಾನೇ ಮೊದಲಾದವರಿರುವಾಗ ಎಂದು ಹೇಳಿದರೆ ಮದಾದಿಗಳು ಬರುತ್ತವೆ ಅಹಂಕಾರಗರ್ವ ತೋರಿಸಿದಂತಾಗುವದು. ಕಾರಣ ಪರೋಕ್ಷವಾಗಿ ದೇವರ್ಷಿಗಳಿರುವಾಗ ಎಂದು ಹೇಳಿರುವರು ಎಂದು ತಿಳಿಯಬೇಕು.

ಶ್ರೀಹರಿಯ ಪೂಜೆಮಾಡಿದರೆ ಎಲ್ಲ ದೇವತೆಗಳ ಪೂಜೆ ಮಾಡಿದಂತೆ ಆಗುವದು. ಅವರು ಹರಿ ಮೂಲಕರಾದ್ದರಿಂದ ಪ್ರತ್ಯೇಕ ದೇವತೆಗಳ ಪೂಜೆಬೇಕಿಲ್ಲ ಎಂದು ದೃಷ್ಟಾಂತದ ಮೂಲಕ ತಿಳಿಸುವರು-

**ಜೀವರಾಶಿಭಿರಾಕೀರ್ಣ ಅಂಡಕೋಶಾಂಘ್ರಿಪೋ ಮಹಾನ್ ।**
**ತನ್ಮೂಲತ್ವಾದಚ್ಯುತೇಜ್ಯಾ ಸರ್ವಜೀವಾತ್ಮತರ್ಪಣಮ್ ॥೩೮॥**

**ಜೀವರಾಶಿಭಿಃ ಆಕೀರ್ಣಃ** ಬ್ರಹ್ಮಾದಿ ಜೀವಸಮೂಹದಿಂದ ತುಂಬಿದ **ಅಂಡಕೋಶಾಂಘ್ರಿಪಃ** ಬ್ರಹ್ಮಾಂಡವೇ ಒಂದು ಗಿಡವು **ಮಹಾನ್** ದೊಡ್ಡದು **ತನ್ಮೂಲತ್ವಾತ್** ಆ ಮಹಾವೃಕ್ಷದ ಮೂಲವಾದುದರಿಂದ **ಅಚ್ಯುತೇಜ್ಯಾ** ಹರಿಯಪೂಜೆಯು **ಸರ್ವಜೀವಾತ್ಮತರ್ಪಣಂ** ಎಲ್ಲ ಜೀವರಿಗೆ ತೃಪ್ತಿಕರವು. ಬೇರಿಗೆ ನೀರೆರೆದರೆ ಟೊಂಗೆಗಳಿಗೆ ಪ್ರಪುಲ್ಲತೇ ಬರುವಂತೆ ದೇವತೆಗಳ ತೃಪ್ತಿಯಾಗುವದೆಂದು ಭಾವ. ॥೩೮॥

ಮುಖ್ಯವಾಗಿ ಭಗವಂತನೇ ಪೂಜ್ಯನೆಂದಾದರೆ ಅವನು ದೊರೆಯದಿದ್ದರೆ ಕರ್ಮಾನುಷ್ಠಾಲೋಪ ಮಾಡಬೇಕೆ ಎಂದರೆ ಅದಕ್ಕೆ ಯೋಗ್ಯಪಾತ್ರವನ್ನು ಹೇಳಲು ಅದಕ್ಕೆ ಉಪಯುಕ್ತ ಸ್ವಲ್ಪ ಸೃಷ್ಟಿ ಪ್ರಕಾರವನ್ನು ಹೇಳುವರು-

**ಪುರಾಣ್ಯನೇನ ಸೃಷ್ಟಾನಿ ನೃತಿರ್ಯಗೃಷಿದೇವತಾಃ ।**
**ಶೇತೇ ಜೀವೇನ ರೂಪೇಣ ಪುರೇಷು ಪುರುಷೋ ಹ್ಯಸೌ ॥೩೮॥**

**ಅಸೌ ಭಗವಾನ್** ಈ ಶ್ರೀಹರಿಯು **ಹಿ** ಯಾವ ಕಾರಣ **ಪುರೇಷು** ದೇಹಗಳಲ್ಲಿ **ಜೀವೇನ ರೂಪೇಣ** ಜೀವನೆಂಬ ಪ್ರತಿಬಿಂಬ ಸಹಿತನಾಗಿ **ಶೇತೇ** ವಾಸಿಸುವನು ಆದ್ದರಿಂದ **ಪುರುಷಃ** ಪುರುಷನೆಂದು ಕರೆಯಲ್ಪಡುತ್ತಾನೆ. ಈ ದೇಹಗಳು ಬೇರೆಯುವರು ನಿರ್ಮಿಸಿದವುಗಳಲ್ಲ ಎಂದು ಹೇಳುವರು. **ನೃತಿರ್ಯಗ್ ಋಷಿದೇವತಾಃ** ಮನುಷ್ಯ,ಪಶು,ದೇವತೆ,ಉಪಲಕ್ಷಣಯಾ ಯಕ್ಷರಕ್ಷಪಿಶಾಚಾದಿಗಳು ಇವುಗಳ **ಪುರಾಣಿ** ದೇಹಗಳು **ಅನೇನ ಸೃಷ್ಟಾನಿ** ಶ್ರೀಹರಿಯಿಂದ ಸೃಷ್ಟಿಸಲಪಟ್ಟವು. 'ಸರ್ವಾಸು ಪೂರ್ಷು ಶೇತೇ' ಎಂದು ಶ್ರುತಿಪ್ರಸಿದ್ಧಿಯನ್ನು 'ಹಿ' ಶಬ್ದದಿಂದ ತಿಳಿಸುವರು.

'ಶೇತೇ ಜೀವೇನ ರೂಪೇಣ' ಎಂಬಲ್ಲಿ ಭಗವಂತನಿಗೆ ಜೀವಾಭೇದ ತೋರುವದು. ಕಾರಣ ಅದನ್ನು ಪರಿಹರಿಸಲು ಅಧ್ಯಾಹಾರಮಾಡಿ ಯೋಜಿಸುವರು-

**... ತಾತ್ಪರ್ಯ ...**

**ಜೀವೇನ ರೂಪೇಣ ಸಹ ।**

**ಹಿ** ಯಾವ ಕಾರಣ **ಅಸೌ ಭಗವಾನ್** ಈ ಪರಮಾತ್ಮನು **ಜೀವೇನ ರೂಪೇಣ** 'ವೃದ್ಧೋ ಯೂನಾ' 'ಮಯಾಧ್ಯಕ್ಷೇಣ ಪ್ರಕೃತಿಃ' ಮುಂತಾದ ಸ್ಥಳಗಳಲ್ಲಿ ಸಹ ಶಬ್ದಪ್ರಯೋಗ ಮಾಡದಿದ್ದರೂ ಸಹ ಎಂದು ದೊರೆಯುವದು ಎಂದು ಹೇಳಿರುವದರಿಂದ ಜೀವನೆಂಬ ಪ್ರತಿಬಿಂಬ ಸಹಿತನಾಗಿ ದೇಹದಲ್ಲಿ ಇರುವದರಿಂದ ಪುರುಷನೆನಿಸುವನು. ಜೀವನೂ ಇದೆ ಕಾರಣಕ್ಕೆ ಪುರುಷನೆನಿಸುವನು. 'ಪುರೀ ಶೇತೇ ಯತಃಸೋಽಥ ಪುರುಷಶ್ಚೇತಿ ಗೀಯತೇ' ಎಂಬ ಅನುವ್ಯಾಖ್ಯಾನ ವ್ಯಾಖ್ಯಾನ ಮಾಡುವಾಗ ಶ್ರೀಮನ್ನ್ಯಾಯಸುಧೆಯಲ್ಲಿ- 'ಅಥ ತಸ್ಮಾತ್ ಪುರಿ ಶರೀರೇ ಅತ್ರ ಉಪಪದ ಸಪ್ತಮ್ಯಾ ಅಲುಕ್ । ತಸ್ಯ ಚೇಕಾರಸ್ಯ ಉಕಾರೋ ಧಾತುಶಕಾರಸ್ಯ ಷಕಾರೋ ನಿರ್ವಚನತಾತ್ । ಅಧಿಕರಣೇ ಶತೇರ್ಡಃ' ಎಂದು ಪುರುಷಶಬ್ದ ನಿರುಕ್ತಿ ಹೇಳಿದೆ. 'ಸವಾ ಅಯಂ ಪುರಿ ಶಯಃ' ಎಂದು ಶ್ರುತಿ ಮೂಲದಲ್ಲಿ ಪುರೇಷು ಎಂದು ಬಹುವಚನದಿಂದ ಶ್ರುತಿಯಲ್ಲಿಯ ಏಕವಚನ ಜಾತ್ಯಭಿಪ್ರಾಯಕವೆಂದು ಸೂಚಿತವಾಗುವದು. ॥೩೮॥

**ತೇಷ್ವೀಶೋ ಭಗವಾನ್ ರಾಜನ್ ತಾರತಮ್ಯೇನ ವರ್ತತೇ ।**
**ತಸ್ಮಾತ್ ಪಾತ್ರಂ ಹಿ ಪುರುಷೋ ಯಾವಾನಾತ್ಮಾ ಯಥೇಯತೇ ॥೩೯॥**

**ರಾಜನ್** ಧರ್ಮರಾಜನೇ **ತೇಷು** ದೇಹಗಳಲ್ಲಿ **ಈಶಃ** ಶ್ರೀಹರಿಯು **ತಾರತಮ್ಯೇನ ವರ್ತತೇ** ತನ್ನ ಅನುಷ್ಠಾನ ಗುಣತಾರತಮ್ಯದ ಪ್ರಕಾರ ಇರುವನು ಅಂದರೆ ಹೇಗೆ ಹೇಗೆ ಗುಣಾಧಿಕ್ಯ ಅನುಷ್ಠಾನದಲ್ಲಿ ಇರುವದೋ ಹಾಗೆ ಭಗವಂತನ ಸನ್ನಿಧಾನಾಧಿಕ್ಯವಿರುವದು **ತಸ್ಮಾತ್** ಆದ್ದರಿಂದ **ಪುರುಷಃ** ಜೀವನು ಬ್ರಾಹ್ಮಣ ಮೊದಲಾದವರು ಅಥವಾ ಬ್ರಾಹ್ಮಣಾದಿ ಜೀವರು **ಪಾತ್ರಂ** ಪೂಜೆಗೆ ಪಾತ್ರರು ಅದರಲ್ಲಿಯೂ ಈ ರೀತಿ ತಿಳಿದು ಪ್ರವರ್ತಿಸಬೇಕು ಎಂದು ಹೇಳುವರು. **ಆತ್ಮಾ** ಅಂತರ್ಯಾಮಿಯು (ಭಗವಂತನು) **ಯಥಾ** ಯಾವ ರೀತಿಯಿಂದ ಅಥವಾ ಚೆನ್ನಾಗಿ **ಯಾವಾನ್** ಎಷ್ಟು ಇವರ ಗುಣಪ್ರಯೋಜನಕ ಸನ್ನಿಧಾನ ಉಳ್ಳವನೆಂದು **ಈಯತೇ** ತಿಳಿಯಲ್ಪಡುವನೋ **ತಥಾ** ಹಾಗೆ ಈ ಜೀವನು ಪಾತ್ರನು. ಆದ್ದರಿಂದ ಪಾತ್ರರಿಲ್ಲದ್ದರಿಂದ ಪೂಜೆಗಳನ್ನು ಮಾಡಬೇಕೆಂದು ಹೇಳುವ ವಾಕ್ಯಗಳಿಗೆ ನಿರ್ವಿಷಯತ್ವವಿಲ್ಲ.

ಈ ಶ್ಲೋಕದಲ್ಲಿ ಭಗವಂತನು ದೇಹಗಳಲ್ಲಿ ತಾರತಮ್ಯದಿಂದರುವನು ಎಂದು ಆ ಆ ದೇಹದಲ್ಲಿರುವ ಶ್ರೀಹರಿರೂಪಗಳಿಗೆ ತರತಮಭಾವ ಹೇಳಿದಂತೆ ಕಾಣುವದು. ಅದು 'ಏಕಮೇವಾದ್ವಿತೀಯಂ' ಎಂಬ ಪ್ರಮಾಣಾಂತರ ವಿರುದ್ಧ ಕಾರಣ ಪ್ರಮಾಣದಿಂದಲೇ ಅದರ ಅಭಿಪ್ರಾಯ ಹೇಳುವರು.

**... ತಾತ್ಪರ್ಯ ...**

**ಬ್ರಹ್ಮಾದಿಸ್ಥಾವರಾಂತೇಷು ನ ವಿಶೇಷೋ ಹರೇಃ ಕ್ವಚಿತ್ ।**
**ವ್ಯಕ್ತಿಮಾತ್ರವಿಶೇಷೇಣ ತಾರತಮ್ಯಂ ವದಂತಿ ಚ ॥ ಇತಿ ॥**

ಬ್ರಹ್ಮದೇವರನ್ನಾರಂಭಿಸಿ ತೃಣಜೀವಪರ್ಯಂತ ಜೀವರ ದೇಹಗಳಲ್ಲಿರುವ ಭಗವಂತನಲ್ಲಿ ವಿಶೇಷ ತರತಮಭಾವವು ಎಲ್ಲಿಯೂ ಇಲ್ಲ. ಆದರೂ ಅಧಿಷ್ಠಾನದಲ್ಲಿ ತಾರತಮ್ಯವಿರುವದರಿಂದ ಅಲ್ಲಿ ಭಗವಂತ ಅಭಿವ್ಯಕ್ತಿಯಲ್ಲಿ ವಿಶೇಷವಿರುವದರಿಂದ ತಾರತಮ್ಯವನ್ನು ಹೇಳುವರು. ಭಗವಂತನಲ್ಲಿ ತರತಮಭಾವವಿರುವದರಿಂದಲ್ಲ ಎಂದರ್ಥ. ॥೩೯॥

'ಯಾವಾನಾತ್ಮಾ ಯಥೇಯತೇ' ಎಂಬುದರಿಂದ ಅನುಷ್ಠಾನ ತಾರತಮ್ಯಾನು ಸಾರವಾಗಿ ಭಗವಂತನ ಅಭಿವ್ಯಕ್ತಿತಾರತಮ್ಯ ಹೇಳಿದ್ದರಿಂದ ಅಧಮರಾದವರು ಉತ್ತಮರಲ್ಲಿ ಭಗವಂತನನ್ನು ಪೂಜಿಸಬೇಕು ಎಂದಾಯಿತು. ಈ ರೀತಿ ಚಲಪ್ರತಿಮೆ

ಇರುವಾಗ ಅಚಲ ಪ್ರತಿಮೆಗಳಲ್ಲಿ ಪೂಜೆ ಸಂಪ್ರದಾಯ ಏಕೆ ಬಂದಿತು ಎಂಬ ಶಂಕೆಗೆ ಉತ್ತರಿಸುವರು. ಯದ್ಯಪಿ ಜಗತ್ತಿನಲ್ಲಿ ಜನರಿಂದ ಪೂಜಿಸುವದಕ್ಕಾಗಿ ಪ್ರತಿಮೆಯು ನಿರ್ಮಿತವಾಗಿದೆ. ಆದರೂ ಹೇಗೆ ಪುರುಷಪೂಜೆಯು ಪುರುಷಾರ್ಥಪ್ರದವೋ ಅದರಂತೆ ಪ್ರತಿಮಾ ಪೂಜೆಯಲ್ಲ ಎಂದು ಹೇಳಲು. ಹಾಗಾದರೆ ಅವುಗಳ ನಿರ್ಮಾಣ ವ್ಯರ್ಥವೇ ಎಂಬ ಶಂಕಾವನ್ನು ಪರಿಹರಿಸುತ್ತ ಪ್ರತಿಮೆಯ ಪ್ರಯೋಜನವನ್ನು, ಪುರುಷರ ಪೂಜೆಯ ಶ್ರೇಷ್ಠತೆಯನ್ನು ಹೇಳುವರು-

**ದೃಷ್ಟ್ವಾ ತೇಷಾಂ ಮಿಥೋ ನೃಣಾಮವಜ್ಞಾಮಾತ್ಮನೋ ನೃಪ ।**
**ತ್ರೇತಾದಿಷು ಹರೇರರ್ಚಾಕ್ರಿಯಾಯೈ ಕವಿಭಿಃ ಕೃತಾ ॥೪೦॥**

**ತತೋ ಅರ್ಚಾಯಾಂ ಹರಿಂ ಕೇಚಿಚ್ಛ್ರದ್ಧಯಾ ಚ ಸಪರ್ಯಯಾ ।**
**ಉಪಾಸತೇ ಉಪಾಸಾ ಹಿ ನಾರ್ಥದಾ ಪುರುಷದ್ವಿಷಾಮ್ ॥೪೧॥**

**ನೃಪ** ಧರ್ಮರಾಜನೇ! **ತೇಷಾಂ ನೃಣಾಂ** ಅಧಿಕಾರಿಜನರಲ್ಲಿ (ಪೂಜ್ಯಪುರುಷರಲ್ಲಿ) **ಮಿಥಃ** ಪರಸ್ಪರವಾಗಿ **ಆತ್ಮನಃ** ಪುರುಷಾಂತರ್ಯಾಮಿ ಭಗವಂತನ **ಅವಜ್ಞಾಂ** ಮಾತ್ಸರ್ಯಾದಿಗಳಿಂದ ಅವಮಾನ ಮಾಡುವದನ್ನು ಅಂದರೆ ಅವನಿಗಿಂತ ನನ್ನಲ್ಲಿ ಹೆಚ್ಚು ಸನ್ನಿಧಾನವಿದೆ ಎಂದು ಒಬ್ಬನು ಹೇಳಿದರೆ ಮತೊಬ್ಬನು ನನ್ನಲ್ಲಿ ಹೆಚ್ಚು ಸನ್ನಿಧಾನವಿದೆ ಎಂದು **ಹರೇಃ ಅವಜ್ಞಾಂ** ಶ್ರೀಹರಿಯ ಅನುಷ್ಠಾನದ ತಿರಸ್ಕಾರವನ್ನು ಅರ್ಥಾತ್ ಕಲಹವನ್ನು **ದೃಷ್ಟ್ವಾ** ನೋಡಿ **ತ್ರೇತಾದಿಷು** ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ **ಅರ್ಚಾ** ಪ್ರತಿಮೆಯು **ಅರ್ಚಾಕ್ರಿಯಾಯೈ** ಪೂಜಿಸುವದಕ್ಕಾಗಿ **ಕವಿಭಿಃ** ಜ್ಞಾನಿಗಳಿಂದ **ಕೃತಾ** ಅಭೀಷ್ಟಸಿದ್ಧಿಯಾಗಲೆಂದು ನಿರ್ಮಿತವಾಯಿತು **ಯತಃ** ಯಾವಕಾರಣ. **ತತಃ** ಆದ್ದರಿಂದ **ಶ್ರದ್ಧಯಾ ಸಹಿತಯಾ** ಶ್ರದ್ಧೆಯಿಂದ ಕೂಡಿದ **ಸಪರ್ಯಯಾ** ಪೂಜೆಯಿಂದ **ಅರ್ಚಾಯಾಂ** ಪ್ರತಿಮೆಯಲ್ಲಿ **ಕೇಚಿತ್** ಕೆಲವರು (**ಹರಿಂ** ಶ್ರೀಹರಿಯನ್ನು) **ಉಪಾಸತೇ** ಉಪಾಸಿಸುವರು **ಉಪಾಸಾ ಹಿ** ಆ ಉಪಾಸನೆಯಾದರೂ **ಪುರುಷದ್ವಿಷಾಂ** ಅಪ್ರಬುದ್ಧರಿಗೆ, ಉತ್ತಮಪುರುಷರನ್ನು ದ್ವೇಷಿಸುವವರಿಗೆ **ನ ಹಿ ಅರ್ಥದಾ** ಪರಮಪುರುಷಾರ್ಥಪ್ರದವಾದ ಸ್ವಾತಂತ್ರೇಣ ಆಗುವದಿಲ್ಲ ಕಿಂತು ಐಹಿಕ ಫಲಪ್ರದವಾಗುವದು. ಪ್ರವೃತ್ತಿಕರ್ಮ ಹೇಳುವವರೂ 'ಸರ್ವತ್ರ ವಿಜಿತಾತ್ಮನಾಂ' ಎಂದು ಹೇಳಿದ ಪ್ರಕಾರ ಉತ್ತಮಪುರುಷೋಪಾಸನೆ ಸಹಿತವಾದಾಗ ಮಹಾಫಲಕಾರಣ ವಾಗುವದು. ಕೃತಯುಗದಲ್ಲಿ ಬ್ರಾಹ್ಮಣರಿಗೆ ಪರಸ್ಪರ ತಾರತಮ್ಯದಲ್ಲಿ ಕಲಹವಿಲ್ಲದಿರುವದರಿಂದ ತಾರತಮ್ಯಾನುಸಾರ ಚಲಪ್ರತಿಮೆಗಳಲ್ಲಿ ಪೂಜಾ ಸಂಭವಿಸಿದರೂ ಮುಂದಿನ ಮೂರು ಯುಗಗಳಲ್ಲಿ ಕಲಹವಿರುವದರಿಂದ ಚಲಪ್ರತಿಮೆಯ ಪೂಜೆ ನಡೆಯದಿರುವಾಗ ಪ್ರತಿಮೆಗಳಲ್ಲಿ ಪೂಜಾಸಂಪ್ರದಾಯ

ಪ್ರಾರಂಭವಾಯಿತು. ಸಂಪ್ರದಾಯಾಗತವಾದ ತಂತ್ರಸಾರೋಕ್ತ ರೀತಿಯಿಂದ ಮಾಡಿದ ಅಚಲಪ್ರತಿಮಾಪೂಜೆಯು ಪುರುಷಾರ್ಥಚತುಷ್ಟಯಸಾಧನವಾಗುವದು. ।।೪೦,೪೧।।

ಪೂರ್ಣಪಾತ್ರರಾದ ಪುರುಷರಲ್ಲಿಯೂ ಸಮನಾಗಿ ಪೂಜಿಸಬಹುದೇ ಎಂದರೆ ಅದರಲ್ಲಿಯೂ ತರತಮಭಾವವಿದೆ ಅದರನುಸಾರವಾಗಿಯೇ ಪೂಜಿಸಬೇಕು ಎಂದು ಹೇಳುವರು-

**ಪುರುಷೇಷ್ವಪಿ ರಾಜೇಂದ್ರ ಸುಪಾತ್ರಂ ಬ್ರಾಹ್ಮಣಂ ವಿದುಃ ।**
**ತಪಸಾ ವಿದ್ಯಯಾ ತುಷ್ಟ್ಯಾ ಧತ್ತೇ ವೇದಂ ಹರೇಸ್ತನುಮ್ ।।೪೨।।**

**ರಾಜೇಂದ್ರ** ರಾಜಶ್ರೇಷ್ಠನಾದ ಧರ್ಮರಾಜನೇ **ಪುರುಷೇಷು ಅಪಿ** ಪಾತ್ರರಾದ ಪುರುಷರಲ್ಲಿಯೂ **ಬ್ರಾಹ್ಮಣಂ** ಬ್ರಾಹ್ಮಣನನ್ನು **ಸುಪಾತ್ರಂ** ಒಳ್ಳೆಯ ಪಾತ್ರನೆಂದು **ವಿದುಃ** ಜ್ಞಾನಿಗಳು ತಿಳಿದಿರುವರು. ಬ್ರಾಹ್ಮಣ ಎಂದರೆ ಸಾಮಾನ್ಯನನ್ನು ಸ್ವೀಕರಿಸುವದಲ್ಲ ಎಂದು ಬ್ರಾಹ್ಮಣ ಪದಾರ್ಥವನ್ನು ವಿವರಿಸುವರು **ತಪಸಾ** ಕೃಚ್ಛ್ರಚಾಂದ್ರಾ ಯಣಾದಿಗಳಿಂದ **ವಿದ್ಯಯಾ** ಬ್ರಹ್ಮಜ್ಞಾನದಿಂದ **ತುಷ್ಟ್ಯಾ** ವಿಷಯಾಲಂಬುದ್ಧಿಯಿಂದ **ಯಃ** ಯಾವನು **ಹರೇಃ ತನುಂ** ಶ್ರೀಹರಿಯ ಪ್ರತಿಮೆಯಾದ **ಇದಂ** ಈ ಶರೀರವನ್ನು **ಧತ್ತೇ** ಧರಿಸುವನು **ಚ** ಯಾವ ಕಾರಣ **ವಿದ್ಯಯಾ** ಅಪರೋಕ್ಷಜ್ಞಾನದಿಂದ **ತಂ** ಅವನನ್ನು **ಹರೇಃ ತನುಂ** ಶ್ರೀಹರಿಯ **ಸುಪಾತ್ರಂ** ವಿಶೇಷ ಸನ್ನಿಧಾನಪಾತ್ರನೆಂದು **ವಿದುಃ** ತಿಳಿಯುವದು. ಬಹುವಚನದಿಂದ ಈ ವಿಷಯದಲ್ಲಿ ವಿರೋಧವಿಲ್ಲವೆಂದು ಸೂಚಿಸುವರು.

ವಿಶೇಷ ಃ-'ಬ್ರಹ್ಮ ಅಣತೀತಿ ಬ್ರಾಹ್ಮಣಃ' ಎಂದು ವ್ಯುತ್ಪತ್ತಿ ತಿಳಿಸಿದಂತಾಯಿತು. ಕಲ್ಲಿನ ಪ್ರತಿಮೆಗಳಿಗೆ ಸಂಸ್ಕಾರ ಪ್ರಾಣಪ್ರತಿಷ್ಠಾ ಆವಾಹನಾದಿಗಳಿಂದ ಪ್ರತಿಮಾತ್ವ ಬರುವಂತೆ ಬ್ರಾಹ್ಮಣ ಶರೀರಕ್ಕೆ ಶ್ರೀಹರಿಯ ಪ್ರತಿಮಾತ್ವವು ಅನಶನಾದಿ ತಪಸ್ಸೇ ಮೊದಲಾದವುಗಳಿಂದ ಬರುವದು ಎಂದು ತಿಳಿಯಬೇಕು. ಆದ್ದರಿಂದಲೇ ತಾತ್ಪರ್ಯದಲ್ಲಿ 'ಶಿಲಾವತ್' ಮುಂತಾಗಿ ಹೇಳಿದೆ. ।।೪೨।।

**ನನ್ವಸ್ಯ ಬ್ರಾಹ್ಮಣಾ ರಾಜನ್ ಕೃಷ್ಣಸ್ಯ ಜಗದಾತ್ಮನಃ ।**
**ಪುನಂತಃ ಪಾದರಜಸಾ ತ್ರಿಲೋಕೀಂ ದೈವತಂ ಮಹತ್ ।।೪೩।।**

**ರಾಜನ್** ಧರ್ಮರಾಜನೇ **ಅಸ್ಯ** ಅಗ್ರಪೂಜೆಗೆ ಭಾಜನನು (ಯೋಗ್ಯನು) ಎಂದು ನಿನ್ನ ಸಾಕ್ಷಿ ವಿಷಯನಾದ **ಜಗದಾತ್ಮನಃ ಕೃಷ್ಣಸ್ಯ** ಜಗದಂತರ್ಯಾಮಿಯಾದ ಶ್ರೀಕೃಷ್ಣನಿಗೆ **ಬ್ರಾಹ್ಮಣಾಃ** ಅಪರೋಕ್ಷಜ್ಞಾನಿಗಳು (ಶಿಲಾದಂತೆ ಇರುವ ಶರೀರಗಳು)

**ಪಾದರಜಸಾ** ತಮ್ಮ ಕಾಲುಧೂಳಿಯಿಂದ **ತ್ರಿಲೋಕೀಂ** ಮೂರು ಲೋಕವನ್ನು **ಪುನಂತಃ** ಪವಿತ್ರಗೊಳಿಸುವವರಾಗಿ **ಮಹತ್ ದೈವತಂ** ಶ್ರೀಹರಿಯ ಸನ್ನಿಧಾನಪಾತ್ರವಾದ್ದರಿಂದ **ಸುಪಾತ್ರಂ ವಿದುಃ** ಶ್ರೇಷ್ಠಪಾತ್ರವೆಂದು ತಿಳಿಯುವರು ''ಸರ್ವಾ ದೇವತಾಃ ವೇದವಿದಿ ಬ್ರಾಹ್ಮಣೇ ವಸಂತಿ'' ಎಂದಿದೆ ಅಥವಾ **ಯನ್ಮಹದ್ದೈವತಂ** ಯಾವುದರ ಮಹಾ ದೈವತನೋ ಆ ಜಗತ್ತಿನ ಹೀಗೂ ಅನ್ವಯ.

ಈ ಶ್ಲೋಕದಲ್ಲಿ ಬ್ರಾಹ್ಮಣಸಾಮಾನ್ಯರಿಗೆ ಸಾಕ್ಷಾತ್ ಶ್ರೀಹರಿಯ ಶರೀರತ್ವ ತೋರುವದು ಅದು ಪ್ರಮಾಣ ರಹಿತವಾದುದು. ಕಾರಣ ಪ್ರಮಾಣದಿಂದ ಅದರರ್ಥ ಹೇಳುವರು-

**... ತಾತ್ಪರ್ಯ ...**

**ಶಿಲಾವತ್ ಪ್ರತಿಮಾಃ ಸಂತಃ ವಿಪ್ರಾದ್ಯಾಶ್ಚ ಹರೇಃ ಸ್ಮೃತಾಃ ।। ಇತಿ ಚ ।।೪೩।।**

**ವಿಪ್ರಾದ್ಯಾಃ** ಬ್ರಾಹ್ಮಣ ಮೊದಲಾದವರು **ಸಂತಃ** ತಪಸ್ಸು ವಿದ್ಯಾದಿಗಳಿದ್ದವರು **ಶಿಲಾವತ್** ಶಿಲೆಯಂತೆ **ಪ್ರತಿಮಾಃ** ಪ್ರತಿಮಾಸ್ಥಾನೀಯರು. ಹೇಗೆ ವಾಸುದೇವ ಸಾಲಿಗ್ರಾಮ ಎಂದು ವ್ಯವಹಾರವೋ ಹಾಗೆ ಸದ್ಬ್ರಾಹ್ಮಣರಲ್ಲಿ ತನುತ್ವವ್ಯವಹಾರವು.

'ರಾಜನ್ ಯದಗ್ರಪೂಜಾಯಾಂ ಅತಃ ಪಾತ್ರತಯಾಚ್ಯುತಃ' ಎಂದು ಸುಪಾತ್ರತ್ವ ಹರಿಗೆ ಹೇಗೋ ಹಾಗೆ ಬ್ರಾಹ್ಮಣರನ್ನು 'ಸುಪಾತ್ರಂ ವಿದುಃ' ಎಂದು ಸುಪಾತ್ರತಾ ಸಾಮ್ಯಭ್ರಮವು. ಸಾಕ್ಷಾತ್ತಾಗಿ ಅಸಾಕ್ಷಾತ್ತಾಗಿ ಎಂದು ಶಿಲಾವತ್ ಎಂಬುದರಿಂದ ಸೂಚಿತವಾದವುಗಳಿಂದ ನಿರಾಸವಾಯಿತು. 'ಇತಿ ಚ ವ್ಯಾಸಸ್ಮೃತೌ' ಎಂದು ಶೇಷ. ಆದ್ಯಪದದಿಂದ ಕ್ಷತ್ರಿಯಾದಿಗಳನ್ನು ಸ್ವೀಕರಿಸಬೇಕು. ಅವರೂ ತಮ್ಮ ಕೆಳಗಿನ ವರ್ಣಗಳಿಂದ ಪೂಜ್ಯರೇ ಎಂದು ಹೇಳಿದಂತಾಯಿತು. ತನ್ನಕ್ಕಿಂತ ಉತ್ತಮವರ್ಣದಲ್ಲಿ ತಪಸ್ಸು ಅಧಿಕವಾಗಿದ್ದರೆ ಅತ್ಯಂತಪೂಜ್ಯತ್ವವು ಅದಿಲ್ಲದಿದ್ದರೆ ಪೂಜ್ಯತ್ವ ಮಾತ್ರ. ಅಧಮವರ್ಣದಲ್ಲಿ ವಿದ್ಯಾಧಿಕ್ಯವಿದ್ದರೆ ಮಾನಸಿಕ ವಾಚನಿಕಪೂಜೆ ಮಾಡಬೇಕು ಹೊರತು ಶಾರೀರಕವಲ್ಲ ಮುಂತಾಗಿ ತಿಳಿಯಬೇಕು. ।।೪೩।।

**।। ಇತಿ ಶ್ರೀಮದ್ಭಾಗವತೇ ಸಪ್ತಮಸ್ಕಂಧೇ ಚತುರ್ದಶೋಽಧ್ಯಾಯಃ ।।**

**।। ಶ್ರೀಕೃಷ್ಣಾರ್ಪಣಮಸ್ತು ।।**

★★★

# ಅಥ ಪಂಚದಶೋಽಧ್ಯಾಯಃ

**ಸಾರಾಂಶ**

ನಾರದರು ಯಾವ ಯಾವ ಕರ್ಮಗಳನ್ನು ಹೇಗೆ ಹೇಗೆ ಮಾಡಬೇಕು ಎಂಬ ವಿಷಯವನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳಿದ್ದಾರೆ. ಶ್ರೀಮಂತನಾಗಿದ್ದರೂ ಶ್ರಾದ್ಧವನ್ನು ಹೆಚ್ಚು ವಿಸ್ತಾರ ಮಾಡಬಾರದು. ಅಹಿಂಸೆಯೇ ಉತ್ತಮವಾದ ಧರ್ಮ. ಮಾನಸ ಯಜ್ಞವೇ ಉತ್ತಮವಾದ ಯಜ್ಞ. ಪರಮಾತ್ಮನ ಅನುಗ್ರಹದಿಂದ ಲಭಿಸುವ ಅನ್ನದಿಂದಲೇ ತೃಪ್ತನಾಗಿ ನಿತ್ಯನೈಮಿತ್ತಿಕ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೇ ಭಗವಂತನ ಪ್ರೀತಿಗಾಗಿ ಆಚರಿಸಬೇಕು.

ಹಣ ವಿಲ್ಲದವನು ಜೀವನ ನಿರ್ವಹಣೆಗಾಗಿಯಾಗಲೀ ಧರ್ಮಾಚರಣೆಗಾಗಲಿ ಹಣವನ್ನು ಬೇಡಬಾರದು. ಭಗವಂತ ನೀಡಿದುದರಲ್ಲಿಯೇ ಸುಖ ಕಾಣುವವನಿಗೆ ಸಿಗುವ ಸುಖ ಹಣಕ್ಕಾಗಿ ಅಲಿಯುವವನಿಗೆ ಸರ್ವಥಾ ಸಿಗುವದಿಲ್ಲ. ಹೀಗೆ ಅನೇಕ ಧರ್ಮಗಳನ್ನು ನಾರದರು ಧರ್ಮರಾಜನಿಗೆ ಬೋಧಿಸಿದರು. ಈ ಎಲ್ಲ ಗೃಹಸ್ಥಧರ್ಮಗಳನ್ನು ಭಕ್ತಿಯಿಂದ ನಡೆಸುವವರು ಮೋಕ್ಷವನ್ನು ಹೊಂದುತ್ತಾರೆ.

ಕೊನೆಯಲ್ಲಿ ನಾರದರು ತಮ್ಮ ಪೂರ್ವವೃತ್ತಾಂತವನ್ನು ಹೇಳುತ್ತಾರೆ. ನಾನು ಹಿಂದಿನ ಕಲ್ಪದಲ್ಲಿ ಉಪಬರ್ಹಣನೆಂಬ ಗಂಧರ್ವನಾಗಿದ್ದೆ. ಆಗ ಒಮ್ಮೆ ದೇವತೆಗಳ ಸಭೆಯಲ್ಲಿ ಸ್ತ್ರೀಯರಿಂದ ಕೂಡಿಕೊಂಡು ಅಶ್ಲೀಲಗಾನವನ್ನು ಮಾಡಿದ್ದಕ್ಕೆ ಪ್ರಜಾಪತಿಗಳು ದಾಸೀಪುತ್ರನಾಗು ಎಂದು ಶಪಿಸಿದರು. ನಂತರ ದಾಸೀ ಪುತ್ರನಾಗಿ ಜನಿಸಿದ ನಾನು ಬ್ರಹ್ಮಜ್ಞಾನಿಗಳ ಸೇವೆಯಿಂದ ಈ ಕಲ್ಪದಲ್ಲಿ ಬ್ರಹ್ಮದೇವರ ಮಗನಾಗಿ ಜನಿಸಿದ್ದೇನೆ. ಇದು ನನ್ನ ಭಾಗ್ಯವಾದರೆ ನೀವು ಪಾಂಡವರು ನಿವೇಷ್ಟು ಧನ್ಯರು ? ಬ್ರಹ್ಮರುದ್ರಾದಿದೇವತೆಗಳೂ ಕೂಡ ಯಾರ ಸ್ವರೂಪವನ್ನು ತಮ್ಮ ಬುದ್ಧಿಬಲದಿಂದ ಸಂಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲವೋ ಅಂಥ ಶ್ರೀಕೃಷ್ಣಪರಮಾತ್ಮ ನಿಮ್ಮ

ಮನೆಯಲ್ಲಿ ನಿಮ್ಮ ಆತ್ಮೀಯ ಬಂಧುವಾಗಿ ಅವತರಿಸಿದ್ದಾನೆ. ನಿಮ್ಮ ಭಾಗ್ಯ ಅದೆಷ್ಟು ದೊಡ್ಡದು ಹೀಗೆ ನಾರದರು ಹೇಳಿದ್ದನ್ನು ಕೇಳಿದ ಧರ್ಮರಾಜ ಬಹಳ ಸಂತುಷ್ಟನಾಗಿ ಭಕ್ತಿಯಿಂದ ಶ್ರೀಕೃಷ್ಣನನ್ನು ಆರಾಧಿಸಿ ನಾರದರನ್ನು ಸತ್ಕರಿಸಿದ. ನಾರದರು ಧರ್ಮರಾಜನ ಅನುಮತಿಯನ್ನು ಪಡೆದು ಹೊರಟು ಹೋದರು.

★★★

ಕರ್ಮಮಾರ್ಗ, ಜ್ಞಾನಮಾರ್ಗ, ಕಾರ್ಯಗಳಿಗೆ ಕಾರಣದಲ್ಲಿ ಲಯ (ಪ್ರವೇಶ)ಅದಕ್ಕೆ ಸಾಧನ ಮತ್ತು ಪ್ರಪಂಚದ ಸ್ವರೂಪಗಳನ್ನು ಈ ಅಧ್ಯಾಯದಲ್ಲಿ ನಿರೂಪಿಸುವರು. ಮೊದಲಿಗೆ ಜ್ಞಾನಿಯಾದವನು ವಿಪ್ರನಷ್ಟೇ ಉತ್ತಮಪಾತ್ರನೇ ಎಂದು ನಿಶ್ಚಯಿಸಲು ಬ್ರಾಹ್ಮಣರನ್ನು ವಿವೇಚಿಸುವರು(ವಿಭಜಿಸುವರು)-

**ನಾರದ ಉವಾಚ**

**ಕರ್ಮನಿಷ್ಠಾ ದ್ವಿಜಾಃ ಕೇಚಿತ್ ತಪೋನಿಷ್ಠಾ ನೃಪಾಪರೇ ।**
**ಸ್ವಾಧ್ಯಾಯೇಽನ್ಯೇ ಪ್ರವಚನೇ ಅನ್ಯೇ ಚ ಜ್ಞಾನಯೋಗಯೋಃ ॥೧॥**

**ಹೇ ನೃಪ** ರಾಜನೇ **ಕೇಚಿತ್ ದ್ವಿಜಾಃ** ಕೆಲವು ಬ್ರಾಹ್ಮಣರು **ಕರ್ಮನಿಷ್ಠಾಃ** ಅಗ್ನಿಹೋತ್ರಾದಿಗಳನ್ನು ಮಾಡುವವರು. ಇವರು ಗೃಹಸ್ಥರು **ಅಪರೇ** ಮತ್ತೆ ಕೆಲವರು **ತಪೋನಿಷ್ಠಾಃ** ಉಪವಾಸಾದಿ ತಪೋನಿಷ್ಠರು. ಇವರು ವಾನಪ್ರಸ್ಥರು **ಅನ್ಯೇ** ಮತ್ತೆ ಕೆಲವರು **ಸ್ವಾಧ್ಯಾಯೇ** ವೇದಾಭ್ಯಾಸದಲ್ಲಿ ನಿಷ್ಠರು ಇವರು ಬ್ರಹ್ಮಚಾರಿಗಳು **ಅನ್ಯೇ** ಇನ್ನೂ ಕೆಲವರು **ಪ್ರವಚನೇ ನಿಷ್ಠಾಃ** ಶಿಷ್ಯರಿಗೆ ವೇದವನ್ನು ಅರ್ಥವಿಚಾರಪೂರ್ವಕ ತಿಳಿಸುವದರಲ್ಲಿ ಆಸಕ್ತರು ಇವರು ಕುಟೀಚಕ ಬಹೂದಕರು **ಅನ್ಯೇ ಚ** ಮತ್ತೆ ಕೆಲವರು **ಜ್ಞಾನಯೋಗಯೋಃ** ಭಗವನ್ಮಾಹಾತ್ಮ್ಯಜ್ಞಾನದಲ್ಲಿ ನಿಷ್ಠರು. ಇವರು ಪರಮಹಂಸರು. ಮತ್ತೆ ಕೆಲವರು **ಯೋಗ** ಭಗವಂತನ ಗುಣಧ್ಯಾನದಲ್ಲಿ ಮಗ್ನರು. ಇವರು ಹಂಸರು ಎಂದು ವಿವೇಕ.

ವಿಶೇಷ ಃ- ಸ್ಥೂಲದೃಷ್ಟಿಯಿಂದ ಎಲ್ಲರಿಗೂ ಎರಡೂ ಯಥಾಯೋಗ್ಯವಾಗಿ ಸುರಾದಿಗಳಲ್ಲಿ ಕಂಡಿದೆ. ಆದ್ದರಿಂದಲೇ 'ಯೋಗಜ್ಞಾನಯೋಃ' ಎಂದು ಹೇಳಬೇಕಾದಲ್ಲಿ 'ಜ್ಞಾನಯೋಗಯೋಃ' ಎಂದಿದ್ದಾರೆ. ॥೧॥

**ಜ್ಞಾನನಿಷ್ಠಾಯ ದೇಯಾನಿ ಕವ್ಯಾನ್ಯಾನಂತ್ಯಮಿಚ್ಛತಾ ।**
**ದೈವೇ ಚ ತದಭಾವೇ ಸ್ಯಾದಿತರೇಭ್ಯೋ ಯಥಾಽರ್ಹತಃ ॥೨॥**

* 'ತದಲಾಭೇ' ಇತಿ ಪಾಠಾಂತರಂ

**ಆನಂತ್ಯಂ ಇಚ್ಛತಾ** ಇಹಲೋಕದಲ್ಲಿ ಸಂತತಿಯ ಆನಂತ್ಯವನ್ನು, ಪರಲೋಕದಲ್ಲಿ ಮುಕ್ತಿಯನ್ನು ಇಚ್ಛಿಸುವವನಿಂದ **ಜ್ಞಾನನಿಷ್ಠಾಯ** ಪರಮಹಂಸರಿಗೆ **ಕವ್ಯಾನಿ** ಪಿತೃಗಳ ಉದ್ದೇಶದಿಂದ ಸಿದ್ಧಪಡಿಸಿದ ದ್ರವ್ಯಗಳನ್ನು **ದೇಯಾನಿ** ಕೊಡಬೇಕು. **ದೈವೇ ಚ** ದೇವತೋದ್ದೇಶದಿಂದ ಮಾಡಿದ ಹವಿಸ್ಸನ್ನು **ದೇಯಾನಿ** ಕೊಡಬೇಕು **ತದಲಾಭೇ** ಪರಮಹಂಸರು ದೊರೆಯದಿದ್ದರೆ **ಇತರೇಭ್ಯಃ** ಹಂಸಾದಿಗಳಿಗೆ **ಯಥಾರ್ಹತಃ** ಅವರವರ ಯೋಗ್ಯತಾನುಸಾರ **ದೇಯಾನಿ ಸ್ಯಾತ್** ಕೊಡಬೇಕು.

ಪಿತೃಕಾರ್ಯದಲ್ಲಿ, ದೈವಕಾರ್ಯದಲ್ಲಿ ಆ ಕರ್ಮಗಳಿಗೆ ಅನಂತಫಲವನ್ನು ಇಚ್ಛಿಸುವವರು ಪರಮಹಂಸರಿಗೆ ಅವರು ದೊರೆಯದಿದ್ದಾಗ ಕರ್ಮನಿಷ್ಠಾದಿಗಳಿಗೆ ಯಥಾಯೋಗ್ಯವಾಗಿ ನೀಡಬೇಕು ಹೀಗೂ ಅರ್ಥ. ।।೨।।

**ದ್ವೌ ದೈವೇ ಪಿತೃಕಾರ್ಯೇ ತ್ರೀನೇಕೈಕಮುಭಯತ್ರ ವಾ ।**
**ಭೋಜಯೇತ್ ಸುಸಮೃದ್ಧೋಽಪಿ ಶ್ರಾದ್ಧೇ ಕುರ್ಯಾನ್ನ ವಿಸ್ತರಮ್ ।।೩।।**

**ದೈವೇ** ವಿಶ್ವೇ ದೇವಸ್ಥಾನದಲ್ಲಿ **ದ್ವೌ** ಇಬ್ಬರನ್ನು **ಪಿತೃಕಾರ್ಯೇ** ಪಿತೃಸ್ಥಾನದಲ್ಲಿ **ತ್ರೀನ್** ಮೂರು ಜನರನ್ನು ಹೀಗೆ ಒಟ್ಟು ಐದು ಜನರನ್ನು ಕೂಡಿಸಿ ಅಥವಾ **ಉಭಯತ್ರ** ದೇವಸ್ಥಾನ ಪಿತೃಸ್ಥಾನ ಎರಡರಲ್ಲಿಯೂ **ಏಕೈಕಂ** ಒಬ್ಬೊಬ್ಬರನ್ನು **ಭೋಜಯೇತ್** ಊಟಮಾಡಿಸಬೇಕು **ಸುಸಮೃದ್ಧಃ ಅಪಿ** ಬಹಳ ಹಣವಂತನಾದರೂ **ಶ್ರಾದ್ಧೇ** ಶ್ರಾದ್ಧದಲ್ಲಿ **ವಿಸ್ತರಂ ನ ಕುರ್ಯಾತ್** ವಿಸ್ತಾರ ಮಾಡಬಾರದು.

ವಿಶೇಷ :- ಇಲ್ಲಿ ಅರ್ಥಪ್ರಧಾನ ವಿಸ್ತಾರವೆಂದು ಹೇಳಬೇಕಿತ್ತು ಪ್ರಸ್ತುತವಾಗಿದೆ ಆದ್ದರಿಂದ 'ವಿಸ್ತರಂ' ಎಂದು ಹೇಳಿದ್ದು, ಎಷ್ಟು ಉಚಿತ ಎಂದರೆ ಹೇಳುತ್ತಾರೆ. ನಿಮಂತ್ರಣ ಕೊಟ್ಟ ಮೇಲೆ ತಾನೇ ಭೋಜನ. ನಿಮಿಂತ್ರಣವಾದರೂ 'ಆಗಚ್ಛತ' ಮುಂತಾದ ಶಬ್ದರೂಪವಾದ್ದರಿಂದ ಅದರ ಪ್ರಪಂಚವೇ ಉಚಿತವಲ್ಲ ಎಂದು ಹೇಳಲು ಹೀಗೆ ಹೇಳಿರುವರು. ।।೩।।

ಅನುಕೂಲವಿರುವಾಗ ವಿಸ್ತಾರವೇಕೆ ಮಾಡಬಾರದು ಎಂದರೆ ಹೇಳುವರು.

**ದೇಶಕಾಲೋಚಿತಶ್ರದ್ಧಾದ್ರವ್ಯಪಾತ್ರಾರ್ಹಣಾನಿ ಚ ।**
**ಸಮ್ಯಗ್ ಭವಂತಿ ನೈತಾನಿ ವಿಸ್ತರಾತ್ ಸ್ವಜನಾರ್ಪಣಾತ್ ।।೪।।**

**ವಿಸ್ತರಾತ್** ನಿಮಂತ್ರಣ ಶಬ್ದಪ್ರಪಂಚನಿಮಿತ್ತಕವಾಗಿ ಮಾಡಲ್ಪಟ್ಟ **ಸ್ವಜನಾರ್ಪಣಾತ್** ಆತ್ಮೀಯರಿಗೆ ಅನ್ನದಾನ ಮಾಡುವದರಿಂದ ದೇಶ, ಕಾಲ, ಉಚಿತ ಶ್ರದ್ಧೆ, ದ್ರವ್ಯ, ಪಾತ್ರರಾದ ಬ್ರಾಹ್ಮಣರು **ಅರ್ಹಣಾನಿ** ಪೂಜೆಗಳು **ಏತಾನಿ** ಇವರುಗಳು **ಸಮ್ಯಕ್ ನ ಭವಂತಿ** ಅವಿಕಲವಾಗುವದಿಲ್ಲ ವಿಕಲವಾಗುವವೆಂದರ್ಥ. ಬಹಳ

ಮಂದಿಯನ್ನು ಕರೆದಾಗ ಮನೋವಿಕ್ಷೇಪಾದಿಗಳಿಂದ ಏಕಾಗ್ರತೆ ಬರುವದಿಲ್ಲ ಕಾರಣ ವಿಸ್ತಾರಮಾಡಬಾರದು. ।।೪।।

**ದೇಶೇ ಕಾಲೇ ಚ ಸಂಪ್ರಾಪ್ತಮುತ್ಪನ್ನಂ ಹರಿದೈವತಮ್ ।**
**ಶ್ರದ್ಧಯಾ ವಿಧಿವತ್ ಪಾತ್ರೇ ನ್ಯಸ್ತಂ ಕಾಮಧುಗಕ್ಷಯಮ್ ।।೫।।**

**ದೇಶೇ** ಆ ಆ ದೇಶದಲ್ಲಿ **ಕಾಲೇ ಚ** ಆ ಆ ಕಾಲದಲ್ಲಿ **ಉತ್ಪನ್ನಂ** ಹುಟ್ಟಿದ(ಸಿಗುವ) **ಸಂಪ್ರಾಪ್ತಂ** ಬೇಡದೆ ದೊರೆತ **ಹರಿದೈವತಂ** ಭಗವತ್ಪ್ರೀತವಾದ ಅಥವಾ ಶ್ರೀಹರಿಯ ಪೂಜೆಗೆಂದು ಉದ್ದೇಶಿಸಿದ ಭೋಜನಪದಾರ್ಥವು **ವಿಧಿವತ್** ಶಾಸ್ತ್ರದಲ್ಲಿ ಹೇಳಿದ್ದಕ್ಕನುಗುಣವಾಗಿ **ಪಾತ್ರೇ** ಭೋಜನಕ್ಕೆ ಯೋಗ್ಯರಾದ ಬ್ರಾಹ್ಮಣರಿಗೆ **ಶ್ರದ್ಧಯಾ ನ್ಯಸ್ತಂ** ಶ್ರದ್ಧೆಯಿಂದ ಕೊಟ್ಟಿದ್ದು ಊಟ ಮಾಡಿಸಿದ್ದು **ಕಾಮಧುಕ್** ಇಷ್ಟಾರ್ಥವನ್ನು ಕೊಡುವದು **ಅಕ್ಷಯಂ** ನಿತ್ಯವಾದ ಮೋಕ್ಷವನ್ನು ಕೊಡುವದು. ।।೫।।

**ದೇವರ್ಷಿಪಿತೃಭೂತೇಭ್ಯ ಆತ್ಮನೇ ಸಜ್ಜನಾಯ ಚ ।**
**ಅನ್ನಂ ಸಂವಿಭಜನ್ ಪಶ್ಯೇತ್ ಸರ್ವಂ ತತ್ ಪುರುಷಾತ್ಮಕಮ್ ।।೬।।**

ದೇವತೆಗಳು, ಋಷಿಗಳು, ಪಿತೃಗಳು, ಪ್ರಾಣಿಗಳು ಇವುಗಳಿಗೆಲ್ಲರಿಗೂ **ಆತ್ಮನೇ** ತನಗೂ **ಸಜ್ಜನಾಯ** 'ಇಷ್ಟೈಃ ಸಹ ಭುಜ್ಯತಾಂ' ಎಂಬ ಮಾತಿಗೆ ವಿಷಯರಾದ ಸಜ್ಜನರಿಗೆ **ಅನ್ನಂ** ಅನ್ನವನ್ನೂ **ಸಂವಿಭಜನ್** ಹಂಚುತ್ತಾ **ಸರ್ವತಃ** ಈ ಎಲ್ಲ ಅನುಷ್ಠಾನಗಳನ್ನು **ಪುರುಷಾತ್ಮಕಂ ಪಶ್ಯೇತ್** ಶ್ರೀಹರಿಯೇ ಸ್ವಾಮಿಯಾಗಿವುಳ್ಳದ್ದು ಎಂದು ತಿಳಿಯಬೇಕು. ಎಲ್ಲರಲ್ಲಿ ಸನ್ನಿಹಿತನಾದ ಭಗವಂತನೇ ಉಣ್ಣುವನು ಅವನು ಪ್ರೀತನಾಗಲಿ ಎಂದು ಚಿಂತಿಸಬೇಕು ಎಂದು ಭಾವ. ।।೬।।

ಒಂದು ವೇಳೆ ಯತಿಯು ನಿಯಮೇನ ಶ್ರಾದ್ಧದಲ್ಲಿ ಭೋಜ್ಯನೆಂದಾದರೆ ಮಾಂಸವನ್ನು ಇಡಬೇಕೆ ಬೇಡವೇ? ಎರಡೂ ಸಾಧ್ಯವಿಲ್ಲ. ಯತಿಗಳಿಗೆ ಮಾಂಸಭೋಜನ ನಿಷಿದ್ಧ ಆಗಿರುವದರಿಂದ ಇಡುವಂತಿಲ್ಲ. ಇಡದಿದ್ದರೆ ಶ್ರಾದ್ಧಸಾದ್ಗುಣ್ಯ ಇರುವದಿಲ್ಲ ಎಂದರೆ ಇಡಬಾರದೆಂದು ಎರಡನೇ ಪಕ್ಷವನ್ನು ಒಪ್ಪಿ ಅಲ್ಲಿಂದ ಸಾದ್ಗುಣ್ಯ ಇರುವದಿಲ್ಲವೆಂಬ ದೋಷವನ್ನು 'ಧರ್ಮ ತತ್ತ್ವವಿತ್' ಎಂಬ ಪದಾನುಗೃಹೀತ ಸ್ಮೃತಿಯಿಂದ ಪರಿಹರಿಸುವರು-

**ನ ದದ್ಯಾದಾಮಿಷಂ ಶ್ರಾದ್ಧೇ ನ ಚಾದ್ಯಾದ್ ಧರ್ಮತತ್ತ್ವವಿತ್ ।**
**ಮುನೀನಾಂ ಸ್ಯಾತ್ ಪರಾ ಪ್ರೀತಿರ್ಯಥಾ ನ ಪಶುಹಿಂಸಯಾ ।।೭।।**

**ಶ್ರಾದ್ಧೇ** ಶ್ರಾದ್ಧದಲ್ಲಿ **ಆಮಿಷಂ** ಮಾಂಸವನ್ನು **ನ ದದ್ಯಾತ್** ಯತಿಗೆ ನೀಡಬಾರದು. ಯಜಮಾನನು ಕಾಮಮೋಹಿತನಾಗಿ ಕದಾಚಿತ್ ಬಡಿಸಿದರೆ

ಬಿಡಬೇಕೇ? ದೀಕ್ಷಾಕಾಲವೆಂದು ತಿನ್ನಬೇಕೆ? ಎಂದರೆ ತಿನ್ನಬಾರದು ಎಂದು ಹೇಳುವರು. 'ಧರ್ಮತತ್ತ್ವವಿತ್ ವಿನಾ ಮಾಂಸೇನ ಮಧುನಾ ವಿನಾ ದಕ್ಷಿಣಯಾಶಿಷಾ । ಅಕ್ಷಯಂ ಭವತಿ ಶ್ರಾದ್ಧಂ ಯತಿಷು ಶ್ರಾದ್ಧಭೋಜಿಷು ।। ಗ್ರಾಮೇ ನಗರೇಽರಮ್ಯೇ ಜ್ಞಾನಿಭಿಕ್ಷುರ್ವಸೇದ್ಯದಿ । ಅಮಂತ್ರಣೇನ ಯಚ್ಛ್ರಾದ್ಧಂ ತದಾಸುರಮಥೋ ಭವೇತ್'। ಮುಂತಾದ ಸ್ಮೃತಿಯಲ್ಲಿ ಹೇಳಿದ ಧರ್ಮವನ್ನು ತಿಳಿದವನು **ನ ಚ ಅದ್ಯಾತ್** ತಿನ್ನಲೇಬಾರದು ಏಕೆಂದರೆ **ಮುನೀನಾಂ** ಸನ್ಯಾಸಿಗಳಿಗೆ **ಮುನೀನಾಂ** ಪಿತೃಗಳಿಗೆ ದೇವತೆಗಳಿಗೆ **ಪಶುಹಿಂಸಯಾ** ಪಶುಹಿಂಸೆಯಿಂದ ದೊರೆಯುವ ಮಾಂಸದಿಂದ **ನ ಪರಾ ಪ್ರೀತಿಃ ಸ್ಯಾತ್** ಹೆಚ್ಚು ಪ್ರೀತಿಯಾಗುವದಿಲ್ಲ.

ವಿಶೇಷ ಃ- ಇದರಂತೆ ದೇವತೆಗಳಿಗೆ ಯಜ್ಞದಲ್ಲಿ ಸಾಕ್ಷಾತ್ ಪಶುಹಿಂಸೆಯಿಂದ ಪ್ರೀತಿಯಾಗುವದಿಲ್ಲ ಎಂದು ಆವೃತ್ತಿ ಮಾಡಿ ಅರ್ಥಮಾಡಬೇಕು. 'ವಾಚಂಯಮೇಽಪಿ ಸರ್ವಜ್ಞೇ ಮುನಿಶಬ್ದಃ ಪಿತೃಷ್ವಪಿ'ಎಂದು ಅಭಿಧಾನವಿರುವದರಿಂದ ಸರ್ವಜ್ಞರಾದ ದೇವತೆಗಳನ್ನು ಮುನಿಯೆನ್ನಬಹುದು. 'ಗಾರ್ಹಸ್ಥ್ಯಂ ಚ ಯತಿತ್ವಂ ಚ ದೇವೇಷು ಏಕತ್ವಮಾಗತಂ । ದೇವಾ ಏವ ಗೃಹಸ್ಥಾದಿ' ಮುಂತಾದ ಶ್ರುತಿಸ್ಮೃತಿ ಇರುವದರಿಂದಲೂ ದೇವತೆಗಳು ಮುನಿ ಎನಿಸುವರು. ಅವರಿಗೆ ಪಶು ಹಿಂಸೆಯಿಂದ ಪ್ರೀತಿ ಇಲ್ಲ. ಇಷ್ಟೇ ಅಲ್ಲ ಕಿಂತು 'ಪರಾಪ್ರೀತಿಃ' ಅಂದರೆ ಪರಕೀಯರಾದ ನರಕಪತಿಗಳ ಯಮದೂತರ ಅಪ್ರೀತಿಯೂ ಪರಲೋಕದಲ್ಲಿ ಆಗುವದು. ಇದನ್ನೇ ಪಂಚಮದಲ್ಲಿ ಹೇಳಿದೆ. 'ದಂಭಯಜ್ಞೇಷು ಪಶೂನವಿಶಂಸಂತಿ ತಾನಮುಷ್ಮಿನ್ ಲೋಕೇ ವೈಸಸೇ ನರಕೇ ಪತಿತಾ ನಿರಯಪತಯಃ ಪಾತಯಿತಾ ವಿಶಸಂತಿ' ಇತಿ. ತನ್ನಿಂದ ಸಾಯಿಸಲ್ಪಟ್ಟ ಪಶುಗಳ ಅಪ್ರೀತಿಯಾಗುವದು. ಅದರ ಕಾರ್ಯ ಅವು ಇವನನ್ನು ತಿನ್ನುವವು. ಇದನ್ನೇ ಏಕಾದಶಸ್ಕಂಧ ಐದನೇ ಅಧ್ಯಾಯದಲ್ಲಿ ''ಯೋ ಘ್ರಾಣಭಕ್ಷೋ ವಿಹಿತಃ ಸುರಾಯಾಸ್ತಥಾ ಪಶೋರಾಲಭನಂ ನ ಹಿಂಸಾ । ಪಶೂನ್ ದ್ರುಹ್ಯಂತಿ ವಿಶ್ರಾದ್ಧಾನ್ ಪ್ರೇತ್ಯ ಖಾದಂತಿ ತೇ ಚ ತಾನ್ ।। ಅಜಸಂಜ್ಞಾನಿಬೀಜಾನಿ ಭಾಗಂ (ಭಗಂ) ನೋ ಹಂತುಮರ್ಹಥ ।'' ಎಂದು ಭಾರತದಲ್ಲಿ ಹಾಗೂ ದ್ವಿತೀಯ, ಪಂಚಕಬ್ರಾಹ್ಮಣ ಅಷ್ಟಮ ನವಮ ಖಂಡಗಳಲ್ಲಿ ಸ್ಪಷ್ಟವಾಗಿ ಪಶುಹಿಂಸಾ ನಿಷೇಧ ಮಾಡಿ ಪಿಷ್ಟಪಶುಯಾಗ ವಿಧಾನ ಮಾಡಿರುವದರಿಂದ ಪಶುಹಿಂಸಾ ಮಾಡಬಾರದು ಎಂದು ಭಾವ. ಹಾಗಾದರೆ ಅದನ್ನು ಹೇಳುವ ಶಾಸ್ತ್ರಕ್ಕೆ ಅನರ್ಥ ಎಂದರೆ ಅಸುರವಿಷಯವೆಂದೂ ಮಾಂಸದ ಪ್ರತಿನಿಧಿ ಮಾಷ(ಉದ್ದು)ಎಂದೋ ಯತಿಯು ದೊರೆಯದಿದ್ದಾಗ ಗೃಹಸ್ಥನನ್ನು ಕೂಡಿಸಿದಾಗ ಎಂದೂ ಹೇಳಬಹುದು, ಕಾರಣ ವ್ಯರ್ಥವಲ್ಲ.

ಹಿಂದೆ ಉದಾಹರಿಸಿದ ಪ್ರಮಾಣದಲ್ಲಿ ಮಾಂಸ,ಮಧು ದಕ್ಷಿಣೆ ಆಶೀರ್ವಾದಗಳಿಲ್ಲದೇ ಯತಿಗಳು ಶ್ರಾದ್ಧಭೋಜನ ಮಾಡಿದರೆ ಅಕ್ಷಯವಾಗುವದು

ಎಂದಿದೆ. ಆದ್ದರಿಂದ ಶ್ರಾದ್ಧದಲ್ಲಿ ಮಾಂಸ ಉಪಯೋಗಿಸಬೇಕಿಲ್ಲ. ಮಾಂಸ, ಮಧು, ಆಶಿಷಗಳೆಂಬ ಅಂಗಗಳನ್ನು ಬಿಟ್ಟಾದರೂ ಯತಿಯನ್ನೇ ಏಕೆ ಭೋಜನ ಮಾಡಿಸಬೇಕು ಅವನನ್ನು ಬಿಟ್ಟು ಬೇರೆ ಬ್ರಾಹ್ಮಣನಿಗೆ ಮಾಡಿಸಿ ಅಂಗಪೂರ್ತಿ ಮಾಡಬಹುದಲ್ಲ ಎಂದು ಶಂಕಿಸಬಾರದು. ತಾನಿರುವ ಗ್ರಾಮದಲ್ಲಿಯೋ ನಗರದಲ್ಲಿಯೋ ಅರಣ್ಯದಲ್ಲಿಯೋ ಜ್ಞಾನಿಯಾದ ಸಂನ್ಯಾಸಿ ಇರುವಾಗ ಅವನನ್ನು ಬಿಟ್ಟು ಯಾವ ಶ್ರಾದ್ಧವಿದೆಯೋ ಅದು ಆಸುರವಾಗುವದು ಎಂದಿದೆ. ಕಾರಣ ಅವನನ್ನು ಬಿಡುವಂತಿಲ್ಲ. ದಂಭಕ್ಕಾಗಿ ಮಾಡುವ ಯಜ್ಞದಲ್ಲಿ ಪಶುಹಿಂಸೆ ಮಾಡುವವರನ್ನು ಪರಲೋಕದಲ್ಲಿ ನರಕದಲ್ಲಿ ಹಿಂಸಿಸುವರು. ಸುರಾಪಾನ ವಿಹಿತವಲ್ಲ ಕೇವಲ ವಾಸನೆ ನೋಡಬೇಕೆಂದಿದೆ. ಪಶುಹಿಂಸಾವನ್ನು ವಿಧಿಸಿಲ್ಲ ವಿಪರೀತವಾಗಿ ಪಶುಗಳನ್ನು ಹಿಂಸಿಸಿದರೆ, ಅವುಗಳು ಸತ್ತು ನರಕದಲ್ಲಿದ್ದು ಇವನು ಸತ್ತ ಮೇಲೆ ಇವನನ್ನು ತಿನ್ನುತ್ತವೆ ಎಂದು ಹೇಳಿದೆ. ।।೭।।

ಶ್ರಾದ್ಧದಲ್ಲಿ ಯತಿಯನ್ನೇ ಕರೆದು ಭೋಜನ ಮಾಡಿಸಬೇಕು ಎಂಬುದು ಸಾಂಪ್ರದಾಯಿಕನಿಯಮ. ಯತಿಧರ್ಮಗಳುಳ್ಳ ಗೃಹಸ್ಥನು ಮಾನ್ಯನೇ ಎಂಬ ಅಭಿಪ್ರಾಯದಿಂದ ಹೇಳುವರು-

**ನೈತಾದೃಶಃ ಪರೋ ಧರ್ಮೋ ನೃಣಾಂ ಸದ್ಧರ್ಮಮಿಚ್ಛತಾಮ್ ।**
**ನ್ಯಾಸೋ ದಂಡಸ್ಯ ಭೂತೇಷು ಮನೋವಾಕ್ಕಾಯಜಸ್ಯ ಯಃ ।।೮।।**

**ಸದ್ಧರ್ಮಂ ಇಚ್ಛತಾಂ** ಒಳ್ಳೆಯ ಧರ್ಮವನ್ನು ಮಾಡಲಿಚ್ಛಿಸುವವನು **ನೃಣಾಂ** ಜನರಿಗೆ **ಭೂತೇಷು** ಪ್ರಾಣಿಗಳಲ್ಲಿ **ಮನೋವಾಕ್ಕಾಯಜಸ್ಯ** ಮನಸ್ಸು ಮಾತು ಕಾಯಗಳಿಂದಾಗುವ **ದಂಡಸ್ಯ** ಹಿಂಸೆಯ **ಯಃ ನ್ಯಾಸಃ** ಬಿಡುವದೇನಿದೆಯೋ **ಏತಾದೃಶಃ** ಇಂಥಹ **ಪರೋ ಧರ್ಮಃ** ಉತ್ತಮವಾದ ಬೇರೊಂದು ಧರ್ಮವು ನ ಇಲ್ಲ. ಆದ್ದರಿಂದ ಇಂತಹ ಧರ್ಮವುಳ್ಳವರೂ ಶ್ರಾದ್ಧದಲ್ಲಿ ಮಾನ್ಯರೆಂದು ಅಭಿಪ್ರಾಯ.

ವಿಶೇಷ ಃ- ವೇಣುಭಿರ್ನ ಭವೇದ್ಯತಿ ಕೇವಲ ಬಿದರಿನದಂಡ ಹಿಡಿಯುವ ಮಾತ್ರದಿಂದ ಯತಿ ಅಲ್ಲವೆಂದು ಮುಂದೆ ಹೇಳುತ್ತಾರೆ. ಕಾರಣ ಕೇವಲ ಕೆಂಪುಬಟ್ಟೆ, ದಂಡಗಳು ಮಾನ್ಯತೆಗೆ ಪ್ರಯೋಜಕವಲ್ಲ ಮನೋವಾಕ್ಕಾಯದಂಡ ಹಿಂಸೆಯ ತ್ಯಾಗವು ಪ್ರಯೋಜಕ ಕೇವಲ ಪಶುಹಿಂಸೆ ಬಿಟ್ಟರೆ ಸಾಲದು ಎಂದು ಭಾವ. ।।೮।।

ಇದುವರೆಗೆ ಹೇಳಿದ್ದು ಮಧ್ಯಮ ಅಧಮ ಅಧಿಕಾರಿ ವಿಷಯವು. ಉತ್ತಮರಾದ ಪರಮಭಾಗವತರು ಹೇಗೆ ನಡೆದುಕೊಳ್ಳುವರು ಎಂದು ಹೇಳುವರು-

**ಏಕೇ ಕರ್ಮಮಯಾನ್ ಯಜ್ಞಾನ್ ಜ್ಞಾನಿನೋ ಯಜ್ಞವಿತ್ತಮಾಃ ।**
**ಆತ್ಮಸಂಯಮನೇಽನೀಹಾ ಜುಹ್ವತಿ ಜ್ಞಾನದೀಪಿತೇ ॥೯॥**

**ಏಕೇ** ಯತಿಗಳು ಅಥವಾ 'ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ನಿವೃತ್ತಿಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ' ಮುಂತಾಗಿ ತಿಳಿದು ಅದರಲ್ಲಿ ಮನಸ್ಸುಳ್ಳ **ಯಜ್ಞವಿತ್ತಮಾಃ** ಯಜ್ಞಮಾಡುವ ರೀತಿಯನ್ನು ತಿಳಿದವರಲ್ಲಿ ಶ್ರೇಷ್ಠರಾದ **ಕರ್ಮಮಯಾನ್ ಯಜ್ಞಾನ್** ಹಿಂದೆ ಹೇಳಿದ ಶ್ರಾದ್ಧಾದಿಯಜ್ಞಗಳನ್ನು **ಅನೀಹಾಃ** ನಿವೃತ್ತಿಮಾರ್ಗದಲ್ಲಿ ಪ್ರವೃತ್ತರಾದ ಉತ್ತಮರು **ಜ್ಞಾನದೀಪಿತೇ** ಜ್ಞಾನದಿಂದ ಪ್ರಜ್ವಲಿಸುವ **ಆತ್ಮಸಂಯಮನೇ** ಮನೋನಿಗ್ರಹವೆಂಬ ಅಗ್ನಿಯಲ್ಲಿ **ಜುಹ್ವತಿ** ಹೋಮಿಸುವವರು ಮಾನಸಯಾಗ ಮಾಡುವವರೆಂದರ್ಥ. 'ಅಕರ್ಮಮಯಾನ್' ಎಂದಂತೆ ದ್ರವ್ಯಯಜ್ಞವಲ್ಲದ ಮಾನಸ ಹವಿರಾದಿಗಳನ್ನು ಹೋಮಿಸುವವರು ಎಂದರ್ಥ.

'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' 'ವಾಯವ್ಯಂ ಶ್ವೇತಮಾಲಭೇತ' ಎಂದು ವಿಹಿತವಾದ ದ್ರವ್ಯಯಜ್ಞವನ್ನು ಬಿಟ್ಟರೆ ಪಾಪ ಬರುವದಲ್ಲ ಎಂದರೆ ಅದನ್ನು ಬಿಟ್ಟು ಜ್ಞಾನಯಜ್ಞ ಮಾನಸವಾಗಿ ಮಾಡಲು ಕಾರಣವೇನು ಎಂದು ಶಂಕಿಸಿ ಪ್ರಾಣಿಗಳಿಗೆ ಭಯಜನಕವಾದ್ದರಿಂದ ನರಕ ಕಾರಣವಿದು. ಅದರಿಂದ ಹೆದರದ ಅದಕ್ಕಿಂತ ಉತ್ತಮ ಅನಶ್ವರ ಈಶ್ವರಪ್ರಸಾದರೂಪಫಲಜನಕವಾದ್ದರಿಂದ ನಿವೃತ್ತಿಕರ್ಮವೇ ಶ್ರೇಷ್ಠವೆಂದು ಅವರು ಮಾನಸಯಜ್ಞ ಮಾಡುವವರು ಎಂದು ಹೇಳುವರು-

**ದ್ರವ್ಯಯಜ್ಞೈರ್ಯಕ್ಷ್ಯಮಾಣಂ ದೃಷ್ಟ್ವಾ ಭೂತಾನಿ ಬಿಭ್ಯತಿ ।**
**ಏಷ ಮಾಕರುಣೋ ಹನ್ಯಾದತಜ್ಞೋ ಹ್ಯಸುತೃಬ್ ಧ್ರುವಮ್ ॥೧೦॥**

**ದ್ರವ್ಯಯಜ್ಞೈಃ** ಸಾಕ್ಷಾತ್ ಪಶುಹಿಂಸೆ ಮಾಡಿ ಮಾಡುವ ಯಜ್ಞಗಳಿಂದ **ಯಕ್ಷಮಾಣಂ** ಯಾಗ ಮಾಡುವವನನ್ನು **ದೃಷ್ಟ್ವಾ** ನೋಡಿ **ಭೂತಾನಿ** ಪ್ರಾಣಿಗಳು, **ಏಷಃ** ಈ ದ್ರವ್ಯಯಜ್ಞದ ಜನಸಮುದಾಯವು **ಅಕರುಣಃ** ಕರುಣೆಯಿಲ್ಲದ್ದು **ಅತಜ್ಞಃ** ಯಜ್ಞದ ರೀತಿಯನ್ನು ವಿಧಿವಾಕ್ಯದ ಅರ್ಥವನ್ನು ತಿಳಿಯದವನು **ಅಸುತೃಬ್** ಹವಿಶ್ಶೇಷ ಮಾಂಸಾದಿಗಳಿಂದ ತನ್ನ ಪ್ರಾಣಕ್ಕೆ ತೃಪ್ತಿಪಡಿಸುವನು ಆದ್ದರಿಂದ **ಮಾ** ನನ್ನನ್ನು **ಧ್ರುವಂ** ನಿಶ್ಚಿತವಾಗಿ **ಹನ್ಯಾತ್** ಕೊಲ್ಲುವನು ಅಥವಾ **ಧ್ರುವಂ** ಶ್ರೀಹರಿ ವಿಮುಖರಿಗೆ ಅನರ್ಥ ತಪ್ಪಿದ್ದಲ್ಲ ಎಂದು **ಬಿಭ್ಯತಿ** ಹೆದರುವನು. ॥೧೦॥

**ತಸ್ಮಾದ್ ದೈವೋಪಪನ್ನೇನ ಮುನ್ಯನ್ನೇನೈವ ಧರ್ಮವಿತ್ ।**
**ಸಂತುಷ್ಟೋಽಹರಹಃ ಕುರ್ಯಾನ್ನಿತ್ಯನೈಮಿತ್ತಿಕಾಃ ಕ್ರಿಯಾಃ ॥೧೧॥**

**ತಸ್ಮಾತ್** ಪರಪೀಡೆ ಮಾಡಬಾರದಾದ್ದರಿಂದ **ದೈವೋಪಪನ್ನೇನ** ಯಾಚನೆ ಮಾಡದೆ ಶ್ರೀಹರಿಯ ಇಚ್ಛೆಯಿಂದ ಬಂದುದರಿಂದ **ಮುನ್ಯನ್ನೇನ** ಭಿಕ್ಷೆಬೇಡಿ ಬಂದ ಧಾನ್ಯದಿಂದ **ಧರ್ಮವಿತ್** ನಿವೃತ್ತಿಧರ್ಮವನ್ನರಿತ **ಸಂತುಷ್ಟಃ** ಇದರಿಂದ ಸಂತೃಪ್ತಿಯುಳ್ಳವನಾಗಿ **ಅಹರಹಃ** ಪ್ರತಿದಿನವೂ **ನಿತ್ಯನೈಮಿತ್ತಿಕಾಃ ಕ್ರಿಯಾಃ** ಶ್ರಾದ್ಧಾದಿ ಕರ್ಮಗಳನ್ನು ನಿತ್ಯವಾದ ಮತ್ತು ನೈಮಿತ್ತಿಕವಾದ ದೇವತಾರಾಧನಾದಿಗಳನ್ನು **ಕುರ್ಯಾತ್** ಮಾಡಬೇಕು.

ವಿಶೇಷ ಃ- 'ಮುನ್ಯನ್ನೇನ' ಎಂದರೆ ಹಣ್ಣು ಹಂಪಲುಗಳಿಂದ ತರಕಾರಿಗಳಿಂದ ಎಂದೂ ಅರ್ಥ. ಸಂಧ್ಯಾವಂದನಾದಿ ನಿತ್ಯಕರ್ಮಗಳು ಗ್ರಹಣಸ್ನಾನಾದಿ ನೈಮಿತ್ತಿಕ ಕರ್ಮಗಳು ಹೀಗೂ ಅರ್ಥ. ||೧೧||

ಧರ್ಮ ತಿಳಿಯಬೇಕಾದರೆ ಅಧರ್ಮದ ಮರ್ಮ ತಿಳಿದರೆ ಅದನ್ನು ಬಿಟ್ಟು ಧರ್ಮವು ಶುದ್ಧವಾಗುವದು ಕಾರಣ ಅಧರ್ಮ(ವೃಕ್ಷದ) ವಿಟಪದ ಆಟೋಪವನ್ನು ಹೇಳುವರು-

**ವಿಧರ್ಮಃ ಪರಧರ್ಮಶ್ಚ ಆಭಾಸ ಉಪಮಾ ಛಲಃ ।**
**ಅಧರ್ಮಶಾಖಾಃ ಪಂಚೇಮಾ ಧರ್ಮಜ್ಞೋಽಧರ್ಮವತ್ ತ್ಯಜೇತ್ ॥**

**ಧರ್ಮಜ್ಞಃ** ಧರ್ಮವನ್ನು ತಿಳಿದವನು **ಅಧರ್ಮವತ್** ಅಧರ್ಮದಂತೆ **ಇಮಾಃ** ಈ ವಿಧರ್ಮ, ಪರಧರ್ಮ, ಆಭಾಸ, ಉಪಮಾ, ಛಲಗಳೆಂಬ **ಪಂಚ ಅಧರ್ಮಶಾಖಾಃ** ಐದು ಅಧರ್ಮದ ಶಾಖೆಗಳನ್ನು (ಪ್ರಭೇದಗಳನ್ನು) **ತ್ಯಜೇತ್** ಬಿಡಬೇಕು. ||೧೨||

ವಿಧರ್ಮಾದಿಪದಗಳ ಅರ್ಥವನ್ನು ತಾವೇ ಹೇಳುವರು-

**ಧರ್ಮಬಾಧೋ ವಿಧರ್ಮಃ ಸ್ಯಾತ್ ಪರಧರ್ಮೋಽನ್ಯಚೋದಿತಃ ।**
**ಉಪಧರ್ಮಸ್ತು ಪಾಖಂಡೋ ದಂಭೋ ವಾ ಧರ್ಮಭಿಚ್ಛಲಃ ॥೧೩॥**

**ಧರ್ಮಬಾಧಃ ವಿಧರ್ಮಃ** ತಾನು ಮಾಡುವ ತನ್ನ ಧರ್ಮಕ್ಕೆ ಬಾಧಕವಾದುದು ವಿಧರ್ಮ **ಅನ್ಯಚೋದಿತಃ** ಬೇರೆ ವರ್ಣಾಶ್ರಮಕ್ಕೆ ವಿಹಿತವಾದುದು **ಪರಧರ್ಮಃ** (ಕ್ಷತ್ರಿಯನಿಗೆ ಹೇಳಿದ ಶತ್ರುಸಂಹಾರ ಬ್ರಾಹ್ಮಣನಿಗೆ ಪರಧರ್ಮ) **ಪಾಖಂಡಃ ಉಪಧರ್ಮಃ** ಪಾಖಂಡಿಗಳು ಮಾಡುವ ಕರ್ಮ ಅಥವಾ ದಂಭಕ್ಕಾಗಿ(ಭಕ್ತಿಯಿಲ್ಲದೆ) ಮಾಡುವ ಧರ್ಮ ಉಪಧರ್ಮ.(ಸೂರ್ಯಾಸ್ತಕ್ಕೆ ಮುಂಚೆ ಮಾಡುವ ಎರಡನೇ ಊಟ ಮುಂತಾದ ಪಾಖಂಡ ಕರ್ಮಗಳು. ('ಸಚ್ಛಾಸ್ತ್ರಪರಿಪಂ' ಎಂದಾರಂಭಿಸಿ 'ಪಾಖಂಡಮಾಶ್ರಿತಾಃ' ಎಂಬಲ್ಲಿವರೆಗೆ ನಾಲ್ಕನೇ ಸ್ಕಂಧದಲ್ಲಿ ಹೇಳಿದೆ.)

**ಧರ್ಮಛಿತ್ಛಲಃ** ಧರ್ಮಪದಕ್ಕೆ ಅರ್ಥಾಂತರವರ್ಣನೆ ಮಾಡುವದು ಛಲವೆನಿಸುತ್ತದೆ. (ಜರಾಸಂಧನು ಮಾಡಿದ ರಾಜರ ತಲೆಗಳ ಹೋಮ ಇತ್ಯಾದಿ)

**ಯಸ್ತ್ವಿಚ್ಛಯಾ ಕೃತಃ ಪುಂಭಿರಾಭಾಸೋ ಹ್ಯಾಶ್ರಮಃ ಪೃಥಕ್ ।**
**ಸ್ವಭಾವವಿಹಿತೋ ಧರ್ಮಃ ಕಲ್ಪ್ಯತೇಽಸ್ಯೋಪಶಾಂತಯೇ ॥೧೪॥**

**ಯಃ** ಯಾವುದು **ಪುಂಭಿಃ** ಜನರಿಂದ **ಇಚ್ಛಯಾ** ಸ್ವೇಚ್ಛೆಯಿಂದ ಅಥವಾ ಫಲೇಚ್ಛೆಯಿಂದ **ಕೃತಃ** ಮಾಡಿದ್ದು **ಆಭಾಸಃ** ಧರ್ಮದಂತೆ ತೋರುವದು ಈ ಐದು ಶಾಸ್ತ್ರ ಕ್ರಮವಿಲ್ಲದೇ ಬಂದವು ಎಂದು ತಿಳಿಸಲು ಮೂರನೆಯದಾದ ಆಭಾಸವನ್ನು ವ್ಯತ್ಯಮದಿಂದ ಕೊನೆಗೆ ಹೇಳಿದ್ದಾರೆ. ಯಾವುದನ್ನು ತಿಳಿಸಲು ವಿಧರ್ಮಾದಿಗಳನ್ನೂ ತಿಳಿಸಿದರೋ ಅದನ್ನು ಈಗ ಹೇಳುವರು. **ಆಶ್ರಮಃ ಯತ್ರ** ವರ್ಣ, ಗೃಹಸ್ಥಾದ್ಯಾಶ್ರಮಗಳು ಸ್ವೀಕರಿಸಬೇಕು. ಯಾವ ವರ್ಣದಲ್ಲಿಯ ಯಾವ ಆಶ್ರಮದಲ್ಲಿ **ಪೃಥಕ್** ಪ್ರತ್ಯೇಕ ಸ್ವಭಾವ **ವಿಹಿತಃ** ಶಾಸ್ತ್ರದಿಂದ ಅವರವರ ಸ್ವಭಾವಾನುಸಾರ ಶ್ರೀಹರಿಯೇ ಇದರಿಂದ ಪ್ರೀತನಾಗಲಿ ಎಂದು ಅವನ ಅರ್ಪಣ ಬುದ್ಧಿಯಿಂದ ವಿಹಿತವಾದುದು ಮತ್ತು ಮಾಡಲ್ಪಟ್ಟ **ಧರ್ಮಃ** ಧರ್ಮವು **ಸಃ** ಅದು **ಅಸ್ಯ** ಅನುಷ್ಠಾನಮಾಡುವವನಿಗೆ **ಅಸ್ಯೋಪಶಾಂತಯೇ** ನಿರಸ್ಯವಾದ ಸಂಸಾರದ **ಉಪಶಾಂತಯೇ** ಮೋಕ್ಷನಿವೃತ್ತಿಗೆ ಮೋಕ್ಷಕ್ಕೆ (ಕಾರಣವಾಗುವದು) **ಕಲ್ಪ್ಯತೇ** ಸಮರ್ಥವಾಗುವದು.

ವಿಶೇಷ ಃ- ಶಬ್ದವಾಚ್ಯನಾದ ಶ್ರೀಹರಿಯಲ್ಲಿ **ಭಾವಃ** ಮನಸ್ಸುಳ್ಳ ಸಾತ್ವಿಕರಿಂದ ವಿಹಿತವಾದ ಧರ್ಮವು **ಉಪಶಾಂತಯೇ** ಹೀಗೂ ಅರ್ಥ. 'ಧರ್ಮೋ ಭವತ್ಯಧರ್ಮೋಽಪಿ ಕೃತೋ ಭಕ್ತೈಃ' ಎಂದಿದೆ. ॥೧೪॥

ಧನವಿಲ್ಲದೆ ಧರ್ಮಮಾಡಲಾಗುವದಿಲ್ಲ ಕಾರಣ ಧರ್ಮಮಾಡುವದಕ್ಕಾಗಿ ಹಣಸಂಪಾದನೆಗೆ ವ್ಯಾಪಾರಾದಿಗಳನ್ನು ಮಾಡಬೇಕಲ್ಲ ಎಂದರೆ ಹೇಳುವರು-

**ಧರ್ಮಾರ್ಥಮಪಿ ನೇಹೇತ ಯಾತ್ರಾರ್ಥಂ ವಾಽಧನೋ ಧನಮ್ ।**
**ಅನೀಹಾಽನೀಹಮಾನಸ್ಯ ಮಹಾಹೇರಿವ ವೃತ್ತಿದಾ ॥೧೫॥**

**ಧರ್ಮಾರ್ಥಂ ಅಪಿ** ಧರ್ಮಮಾಡುವದಕ್ಕಾಗಿಯೂ **ನ ಈಹೇತ** ಪ್ರಯತ್ನಿಸಬಾರದು. ದೇಹಸ್ಥಿತಿ ಇಲ್ಲದೇ ವರ್ಣಾಶ್ರಮೋಚಿತಸಂನ್ಯಾಸ ಧರ್ಮಾನುಷ್ಠಾನ ಮಾಡಲಾಗುವದಿಲ್ಲ ದೇಹಯಾತ್ರಾಕ್ಕಾಗಿ ಪ್ರಯತ್ನವೇಕೆ ಮಾಡಬಾರದು ಎಂದರೆ ಹೇಳುವರು **ಯಾತ್ರಾರ್ಥಂ ವಾ** ದೇಹಯಾತ್ರಾಕ್ಕಾಗಿಯೂ **ನೇಹೇತ** ಪ್ರಯತ್ನಿಸಬಾರದು ಬದುಕುವದು ಹೇಗೆ ಎಂದರೆ ಹೇಳುವರು

**ಅನೀಹಮಾನಸ್ಯ** ಪ್ರಯತ್ನಿಸದಿರುವ ಧನವಿಲ್ಲದವನಿಗೆ **ಮಹಾಹೇಃ ಇವ** ಶ್ರೀಹರಿಯ ಮೇಲೆ ತನ್ನ ಭಾರವನ್ನು ಅರ್ಪಿಸಿದ ಅಲ್ಲಿಯೇ ಮಲಗಿರುವ ಅಜಗರಕ್ಕೆ ಶ್ರೀಹರಿಯ ಇಚ್ಛೆಯಿಂದ ದೊರೆತಿರುವದರಿಂದ ದೇಹಯಾತ್ರಾ ನಡೆಯುವದೋ ಹಾಗೆ **ಅನೀಹಾ** ಅಪ್ರಯತ್ನವು **ವೃತ್ತಿದಾ** ದೇಹಯಾತ್ರೋಪಯುಕ್ತವಾದಷ್ಟನ್ನು ಕೊಡುವದು.

ವಿಶೇಷ ಃ- ಲೋಕದಲ್ಲಿ ಬೇಡಿದರೂ ಧನಿಕರು ಧನವನ್ನು ಕೊಡುವದಿಲ್ಲ. ಬೇಡದಿದ್ದಲ್ಲಿ ವೃತ್ತಿ ಹೇಗಾದೀತು? ಎಂದರೆ ಬೇಡದಿರುವವನ ಬೇಡದಿರುವಿಕೆಯಿಂದ ಸಂತುಷ್ಟನಾದ ಭಗವಂತನು ಅಜಗರದಂತೆ ವೃತ್ತಿಯನ್ನು ಕಲ್ಪಿಸುವನು. ಧರ್ಮಸಂತುಷ್ಟನಾದ ಹರಿಯು ಕೊಡದಿರುವವರಿಂದಲೂ ಧನವನ್ನು ಕೊಡಿಸುವನು.

ಇಚ್ಛಿಸದವನಿಗೆ ಆಗುವ ಸುಖ ಇಚ್ಛಿಸುವವನಿಗೆ ಆಗುವದಿಲ್ಲವೆಂದು ಹೇಳುವರು. ಭಗುವದುಪಾಸನೆ ಮಾಡುವವನಿಗೆ ಆಗುವ ಸುಖಸಮಾನಸುಖವು ಸುಖವಾಗಿ ದೊರೆಯುವದಲ್ಲ. ಭಗವಂತನಲ್ಲಿ ಭಾರವನ್ನು ಅರ್ಪಿಸಿದವರಿಗೆ ದೊರೆಯುವುದು ಎಂದು ಹೇಳುವರು-

**ಸಂತುಷ್ಟಸ್ಯ ನಿರೀಹಸ್ಯ ಸ್ವಾತ್ಮಾರಾಮಸ್ಯ ಯತ್ ಸುಖಮ್ ।**
**ಕುತಸ್ತತ್ ಕಾಮಲೋಭೇನ ಧಾವತೋಽರ್ಥೇಹಯಾ ದಿಶಃ ॥೧೬॥**

**ಸಂತುಷ್ಟಸ್ಯ** ಸಂತುಷ್ಟನಾದವನಿಗೆ **ಸ್ವಾತ್ಮಾರಾಮಸ್ಯ** ಭಗವಂತನಲ್ಲಿ ಕ್ರೀಡಿಸುವವನಿಗೆ **ಯತ್ ಸುಖಂ** ಏನು ಸುಖವಾಗುವದೋ **ತತ್** ಆ ಸುಖವು **ಕಾಮಲೋಭೈಃ** ವಿಷಯೇಚ್ಛೆ ಇದ್ದವನಿಗೆ ನ ಆಗುವದಿಲ್ಲ. ಆಗದಿರುವ ಸುಖವೇನಿದೆಯೋ ಆ ಸುಖವು **ಅರ್ತೇಹಯಾ** ವಿಷಯೇಚ್ಛೆಯಿಂದ **ದಿಶಃ ಧಾವತಃ** ದಿಕ್ಕು ದಿಕ್ಕು ತಿರುಗುವವನಿಗೆ **ಕುತಃ ಭವೇತ** ಯಾವುದರಿಂದ ಆದೀತು ಆಗುವದಿಲ್ಲ, ಕುತಃ ಎಂದು ಆವೃತ್ತಿಮಾಡಿ **ಕುತಃ ಭೂತಃ** ಕೃಷಿ ಮುಂತಾದವನ್ನು ಮಾಡಿದರೂ ಭೂಮಿಯಿಂದಲೂ **ಕುತೋ ಭವೇತ್** ಹೇಗಾಗುವದು **ಕಾಮಲೋಭೇನ** ವಿಷಯೇಚ್ಛೆಯಿಂದ **ಅರ್ತೇಹಯಾ** ಧನಾರ್ಜನೆಗಾಗಿ ಓಡಾಡುವದರಿಂದಾಗಲಿ,

ವಿಶೇಷ ಃ- ಆತ್ಮಾರಾಮೋ ಎಂಬಲ್ಲಿ ಹೇಳಿದ ಆತ್ಮನನ್ನು ತತ್ ಶಬ್ದದಿಂದ ಪರಾಮರ್ಶ ಮಾಡಿ ಹರಿಕಾಮರು ಏಕಾಂತಿಗಳು ಅವರಲ್ಲಿ ಲೋಭ ಅವರ ಸಹವಾಸಾಕಾಂಕ್ಷೆಯಿಂದ ಎಂದರ್ಥ. ಆತ್ಮಾರಾಮ ಒಂದೇ ಸಾಲದು ಅವನ ದಾಸರ ಸಹವಾಸವೂ ಅಪೇಕ್ಷಿತ ಎಂದು ಹೇಳಿದಂತಾಯಿತು. ಮನಸ್ಸೇ ಸುಖಸಾಧನ. ದಿಕ್ಕು ದಿಕ್ಕು ತಿರುಗುವವನಿಗೆ ಸಂತೋಷ ಇರುವದಿಲ್ಲ ದೇಹಾಯಾಸ ಅಧಿಕವಾಗಿದೆ ಎಂದು ಭಾವ. ॥೧೬॥

ದಿಕ್ಕುಗಳಿಗೆ ಓಡುವದಕ್ಕೆ ಪ್ರಯೋಜನವಿಲ್ಲವೆಂದು ಹೇಳುವರು-

**ಸದಾ ಸಂತುಷ್ಟಮನಸಃ ಸರ್ವಾಃ ಸುಖಮಯಾ ದಿಶಃ ।**
**ಶರ್ಕರಾಕಂಟಕಾದಿಭ್ಯೋ ಯಥೋಪಾನತ್ಪದಃ ಶಿವಮ್ ॥೧೭॥**

**ಸದಾ** ಯಾವಾಗಲೂ **ಸಂತುಷ್ಟಮನಸಃ** ಸಂತೋಷಯುತವಾದ ಮನಸ್ಸುಳ್ಳವನಿಗೆ **ಸರ್ವಾಃ ದಿಶಃ** ಎಲ್ಲ ದಿಕ್ಕುಗಳು **ಸುಖಮಯಾಃ** ಕುಳಿತಲ್ಲಿಯೇ ಶ್ರೀಹರಿಯ ದಯೆಯಿಂದ ಸುಖ ತಂದು ಕೊಡುವವು. (ಸುಖಂ ಮಾಯಯಂತೀತಿ ಸುಖಮಯಾಃ ಮಯಗತೌ ಎಂದು ಧಾತು ಇದೆ) ಆ ವಿಷಯದಲ್ಲಿ ದೃಷ್ಟಾಂತ ಹೇಳುವರು **ಯಥಾ** ಹೇಗೆ **ಉಪಾನತ್ಪದಃ** ಚಪ್ಪಲಿಯನ್ನು ಧರಿಸಿದ ಕಾಲಿಗೆ (ಕಾಲುಳ್ಳವನಿಗೆ)**ಶರ್ಕರಾಃ** ಹರಳುಗಳು **ಕಂಟಕಾಃ** ಮುಳ್ಳುಗಳು **ಆದಿಭ್ಯಃ** ಮೊದಲಾದವುಗಳಿಂದ **ಶಿವಂ** ಮಂಗಳವಾಗುವದು ತೊಂದರೆಯಾಗುವದಿಲ್ಲವೋ ಹಾಗೆ. ॥೧೭॥

ನಿಧಾನವಾಗಿ ಊಟವನ್ನು ಬಿಟ್ಟರೂ 'ಆಪೋಮಯಃ ಪ್ರಾಣಃ' ಎಂದು ಶ್ರುತಿ ಇರುವದರಿಂದ ನೀರಿಲ್ಲದೇ ಬದುಕುವದು ಸುಲಭವಲ್ಲ. ಕಾರಣ ನೀರು ತಂದು ಕೊಡು ಎಂದಾದರೂ ಯಾರಿಗೊಬ್ಬರಿಗೆ ಪ್ರಯತ್ನಪೂರ್ವಕವಾಗಿ ಹೇಳಬೇಕೆಂಬುದೂ ಇಲ್ಲವೆಂದು ಹೇಳುವರು-

**ಸಂತುಷ್ಟಃ ಕೇನ ವಾ ರಾಜನ್ ನ ವರ್ತೇತಾಪಿ ವಾರಿಣಾ ।**
**ಔಪಸ್ಥ್ಯಜೈಹ್ವ್ಯಕಾರ್ಪಣ್ಯಾದ್ ಗೃಹಪಾಲಾಯತೇ ಜನಃ ॥೧೮॥**

**ರಾಜನ್** ಧರ್ಮರಾಜನೇ **ಕೇನ ವಾ** ಶ್ರೀಹರಿಯ ಇಚ್ಛೆಯಿಂದ ದೊರೆತ ಯಾವುದೋ ಒಂದರಿಂದ ಅಥವಾ ನಾರಾಯಣನೆಂಬ ಅಮೃತದಿಂದ (ಅಕಯಾಃ ವಿಷ್ಣುವಾಚಕಾಃ) **ಸಂತುಷ್ಟಃ** ತೃಪ್ತನಾದವನು **ವಾರಿಣಾ ಅಪಿ ನ ವರ್ತೇತ** ಪ್ರಯತ್ನಪೂರ್ವಕ ತರಿಸಿದ ನೀರಿನಿಂದ ಜೀವಿಸಬಾರದು **ಔಪಸ್ಥ್ಯ** ಗುಹ್ಯೇಂದ್ರಿಯ ಸಂಬಂಧಿಯಾದ **ಜೈಹ್ವ್ಯ** ರಸನೇಂದ್ರಿಯ ಸಂಬಂಧಿಯಾದ **ಕಾರ್ಪಣ್ಯಾತ್** ಕೃಪಣತೆಯಿಂದ **ಜನಃ** ಮನುಷ್ಯನು **ಗೃಹಪಾಲಾಯತೇ** ನಾಯಿಯಂತಾಗುವನು ತೆಗಳುವಿಕೆಗೆ ಪಾತ್ರನಾಗುವನು.

ವಿಶೇಷ ಃ- 'ಕರೇಣೇಕೇನ ಶಿಶ್ನಂ ಚ ಜಿಹ್ವಾಂ ಚೈಕೇನ ವೈ ಹಸನ್ । ತಥಾಪಿ ವಃ ಪ್ರವಕ್ಷ್ಯಾಮಿ ದುರ್ಘಟಂ ಚ ದ್ವಯಂ ಧ್ರುವಮ್ । ಶಿಶ್ನಸ್ಯ ನಿಗ್ರಹಃ ಪುತ್ರಜಿಹ್ವಾಯಾ ಅಪಿ ನಿತ್ಯಶಃ ॥ ದ್ವಯಂ ಯದಿ ಗೃಹೀತಂ ಸ್ಯಾತ್ ಸ ಏವ ಸ್ಯಾತ್ ಜನಾರ್ದನಃ' ಎಂದು ವೈಶಾಖ ಮಹಾತ್ಮ್ಯದಲ್ಲಿದೆ. ಒಂದು ಕೈಯಿಂದ

ಗುಹ್ಯೇಂದ್ರಿಯವನ್ನು ಮತ್ತೊಂದು ಕೈಯಿಂದ ರಸನೇಂದ್ರಿಯವನ್ನು (ಉಪಗೃಹ್ಯ) ಹಿಡಿದುಕೊಂಡು ಹುಚ್ಚನಂತೆ ನಗುತ್ತ ಮುನಿ ಶ್ರೇಷ್ಠನು ಕುಣಿದನು. ಯಾವಾಗಲೂ ಗುಹ್ಯೇಂದ್ರಿಯ ರಸನೇಂದ್ರಿಯಗಳ ನಿಗ್ರಹಗಳೆರಡು ನಿಶ್ಚಯವಾಗಿ ಸಾಗುವದು ಬಹು ಕಷ್ಟ. ಆದರೂ ಮಗನೇ ನಾನು ಹೇಳುವೆನು ಇವೆರಡನ್ನು ಗೆದ್ದದ್ದಾದರೆ ಅವನೇ ಜನಾರ್ದನನಾಗುವನು.(ಅವನನ್ನು ಪಡೆಯುವನೆಂದರ್ಥ).

ಹಿಂದೆ 'ವಾರಿಣಾ ಅಪಿ ನ ವರ್ತೇತ' ಎಂದು ಮಾಡಲಾಗದ ಪಾನೀಯ ಪಾನದ ತ್ಯಾಗಪ್ರಸಕ್ತವಾಗಿರುವದರಿಂದ ಅದರೊಡನೆ ಹೇಯವೆಂದು ಹೇಳಿದ ಔಪಸ್ಥ ತ್ಯಾಗವನ್ನು ಮಾಡಬೇಕು ಎಂದು ಹೇಳಲು ಈ ಎರಡರಲ್ಲಿ ನಿರತನಾದ, ನರನ ಅವಸ್ಥೆಯನ್ನು ಉತ್ತರಾರ್ಧದಿಂದ ಹೇಳಿರುವರು. ಅದರಲ್ಲಿಯೂ ಉಪವಾಸವಿದ್ದರೂ ಸ್ತ್ರೀಆಸಕ್ತಿ ಕಂಡಿರುವದರಿಂದ ಮುಖ್ಯವಾದುದದರಿಂದ ಔಪಸ್ಥ್ಯಕ್ಕೆ ಪ್ರಾಥಮ್ಯ ಇತ್ತಿರುವರು. ಔಪಸ್ಥ್ಯವೆಂದರೆ ಗುಹ್ಯೇಂದ್ರಿಯ ಅದರ ಸಂಬಂಧಿಯಾದ ಸಂಭೋಗಾದಿಗಳು 'ಉಪಸ್ಥಃ ಶೇಫಸಿ ಕ್ರೋಡೇ ತಥಾ ಮದನಮಂದಿರೇ ಎಂದು ಮೇದಿನೀ ।। ರಸಾಸ್ವಾದ ಮಾಡುವದು ಜೈಹ್ವ್ಯ. ಇವುಗಳಲ್ಲಿ ಆಸಕ್ತನು ನಾಯಿಯಂತೆ ಮಾಡುವನು. ಇದನ್ನೇ ನೀತಿಯಲ್ಲಿ ಹೀಗೆ ಹೇಳಿದೆ-

'ಕೃಶಃ ಕಾಣಃ ಖಂಜಃ ಶ್ರವಣರಹಿತಃ ಪುಚ್ಛವಿಕಲೋ, ವ್ರಣೀ ಪೂಯಕ್ಲಿನ್ನಃ ಕೃಮಿಕುಲಶತೈರಾವೃತತನುಃ । ಕ್ಷುದಾಕ್ರಾಂತೋ ಜೀರ್ಣೋ ಜಠರಪಿಠರೀಪ್ರಾಪಿತಗಲಃ ಶುನೀಮನ್ವೇತಿ ಶ್ವಾಹತಮಪಿ ಚ ಹಂತ್ಯೇವ ಮದನಃ' ।

ಎಂದು ಕೃಶಃ ಸೊರಗಿದ ಕಾಣಃ ಒಂದೇ ಕಣ್ಣುಳ್ಳ ಖಂಜಃ ಶ್ರವಣರಹಿತಃ ಕಿವಿಯಿಲ್ಲದ ಪುಚ್ಛವಿಕಲಃ ಬಾಲವಿಲ್ಲದ ವ್ರಣೀ ಗಾಯಗೊಂಡ ಪೂಯಕ್ಲಿನ್ನಃ ಕೀವಿನಿಂದ ಆರ್ದ್ರವಾದ ಕ್ರಿಮಿಕುಲಶತೈಃ ಹುಳುಗಳ ನೂರಾರು ಸಮೂಹಗಳಿಂದ ಆವರಿಸಲ್ಪಟ್ಟ ದೇಹವುಳ್ಳ ಕ್ಷುಧಾಕ್ರಾಂತಃ ಹಸಿವೆಯಿಂದ ಬಳಲಿದ ಜೀರ್ಣಃ ಮುಪ್ಪಾದ ಜಠರಪಿಠರೀಪ್ರಾಪಿತಗಲಃ ಹೊಟ್ಟೆಯಲ್ಲಿ ಸಿಕ್ಕಿಕೊಂಡು ಹೋದ ಕುತ್ತಿಗೆಯುಳ್ಳ ಗಂಡನಾಯಿಯು ಹೆಣ್ಣುನಾಯಿಯನ್ನು ಬೆನ್ನುಹತ್ತುವದು. ಕಾಮನು ಸತ್ತವವನನ್ನು ಕೊಲ್ಲುವದು ಎಂದಿದೆ. ।।೧೮।।

ಸಂತೋಷವಿಲ್ಲದಿದ್ದರೆ ಇಷ್ಟು ಅನರ್ಥವಾಗುವದು ಎಂದು ಹೇಳುವರು-

**ಅಸಂತುಷ್ಟಸ್ಯ ವಿಪ್ರಸ್ಯ ತೇಜೋ ವಿದ್ಯಾ ತಪೋ ಯಶಃ ।**
**ಸ್ರವಂತೀಂದ್ರಿಯಲೌಲ್ಯೇನ ಜ್ಞಾನಂ ಚೈವಾವಕೀರ್ಯತೇ ।।೧೯।।**

**ಅಸಂತುಷ್ಟಸ್ಯ** ಸಂತೋಷವಿಲ್ಲದ **ವಿಪ್ರಸ್ಯ** ಬ್ರಾಹ್ಮಣನಿಗೆ **ತೇಜಃ** ವರ್ಚಸ್ಸು ಅಥವಾ ಶಾಪಾದಿಶಕ್ತಿ **ವಿದ್ಯಾ** ತಾನು ಕಲಿತ ವೇದಾದಿ ಶಾಸ್ತ್ರಗಳು **ತಪಃ** ಕೃಚ್ಛ್ರಾದಿಗಳು **ಯಶಃ** ಕೀರ್ತಿಯು **ಜ್ಞಾನಂ** ವೇದಾಂತಜನಿತಜ್ಞಾನವು **ಅವಕೀರ್ಯತೇ** ನಾಶವಾಗುವದು. **ಇಂದ್ರಿಯಲೌಲ್ಯೇನ** ಇಂದ್ರಿಯಲೋಲುಪತೆಯಿಂದ **ಸ್ರವಂತಿ** ನಾಶವಾಗುವವು.

ವಿಶೇಷ ಃ-'ಏವ' ಶಬ್ದದಿಂದ ವಿಷಯಾಲಂಬುದ್ಧಿ ಇಲ್ಲದವನಿಗೆ ಹೋಗುವದಕ್ಕೆ ಕಾರ್ಯಕಾರಣಭಾವ ಅವ್ಯಭಿಚರಿತವೆಂದು ಸೂಚಿಸುವರು. ಜ್ಞಾನವನ್ನೂ ಸೇರಿಸಿ ಸ್ರುವಂತಿ ಎಂದು ಒಂದೇ ಕ್ರಿಯಾಪದದಿಂದ ಅನ್ವಯ ಹೇಳಲು ಬರುತ್ತಿದ್ದರೂ ಜ್ಞಾನ ನಾಶವು. ಮಹಾಹಾನಿ ಎಂದು ತಿಳಿಸಲು ಪ್ರತ್ಯೇಕ ಕ್ರಿಯಾಪದ ಇಟ್ಟಿರುವರು. ||೧೯||

ಕಾಮಕ್ರೋಧಗಳಿಗಿಂತ ಲೋಭವು ದುರ್ನಿರಾಸವೆಂದು ಹೇಳುವರು-

**ಕಾಮಸ್ಯಾಂತಂ ಹಿ ಕ್ಷುತ್ತೃಡ್ಭ್ಯಾಂ ಕ್ರೋಧಸ್ಯೈತತ್ಫಲೋದಯಾತ್ ।**
**ಜನೋ ಯಾತಿ ನ ಲೋಭಸ್ಯ ಜಿತ್ವಾ ಭುಕ್ತ್ವಾ ದಿಶೋ ಭುವಃ ॥೨೦॥**

**ಕ್ಷುತ್ತೃಡ್ಭ್ಯಾಂ** ಹಸಿವೆ ನೀರಡಿಕೆಗಳನ್ನು ಗೆಲ್ಲುವದರಿಂದ **ಕಾಮಸ್ಯ ಅಂತಂ ಯಾತಿ** ಭಾಮಿನಿಭೋಗದ ಕೊನೆಯನ್ನು ಹೊಂದುವನು ('ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ' ಎಂದಿದೆ) **ಫಲೋದಯಾತ್** ಸಿಟ್ಟಿನ ಕಾರ್ಯವಾದ ಹಿಂಸಾ ದಂಡನಾದಿಗಳ ಲಾಭದಿಂದ **ಕ್ರೋಧಸ್ಯ ಅಂತಂ ಯಾತಿ** ಸಿಟ್ಟಿನ ನಾಶದ ಕೊನೆಯನ್ನು ತಲುಪವದನ್ನು ಹೀಗೆ ಕಾಮಕ್ರೋಧಗಳು ನಿವರ್ತವಾಗುವವು. ಆಹಾರವಿಲ್ಲದೇ ಅಶಕ್ತತೆಯಿಂದ ಕಾರಣವಿಲ್ಲದ ಕಾಮಕೋಪದ ಕಾರ್ಯಮುಗಿದ ಮೇಲೆ ಕೋಪ ಹೋಗುವವು ಆದರೆ **ದಿಶಃ** ದಿಕ್ಕುಗಳನ್ನು **ಜಿತ್ವಾ** ಗೆದ್ದು **ಭುವಃ ಭುಕ್ತ್ವಾ** ಸಮಸ್ತ ಭೂಮಂಡಲವನ್ನು ಅನುಭವಿಸಿಯೂ **ಲೋಭಸ್ಯ** ಲೋಭದ **ಅಂತಂ** ನಾಶವನ್ನು **ನ ಯಾತಿ** ಹೊಂದುವದಿಲ್ಲ. ವಿಷಯಭೋಗೇಚ್ಛಾರೂಪಕಾಮವು ವಿಷಯಭೋಗವಾದರೆ ಶಾಂತವಾಗುವದು ಅಪಕಾರ ಮಾಡಿದವರಿಗೆ ಪ್ರತಿ ಅಪಕಾರ ಮಾಡುವದೆಂಬ ಕ್ರೋಧವು ಅದನ್ನು ಮಾಡಿದಾಗ ಹೋಗುವದು. ಆದರೆ ತ್ಯಾಗಮಾಡುವದಕ್ಕೆ ಪ್ರತಿಬಂಧಕವಾದ ಲೋಭಗುಣವು ಎಷ್ಟೇ ದ್ರವ್ಯ,ರಾಜ್ಯ,ದೊರೆತರೂ ಹೋಗಲಾರದು ಎಂದು ಭಾವ. ||೨೦||

ಅಸಂತೋಷದಿಂದ ಕೇವಲ ವಿದ್ಯಾದಿಗಳ ನಾಶವಷ್ಟೇ ಅಲ್ಲ ಕಿಂತು ಅಧಃಪಾತವೂ ಆಗುವದು ಎಂದು ಹೇಳುವರು-

**ಪಂಡಿತಾ ಬಹವೋ ರಾಜನ್ ಬಹುಜ್ಞಾಃ ಸಂಶಯಚ್ಛಿದಃ ।**
**ಸದಸಸ್ಪತಯೋಽಪ್ಯೇಕೇ ಅಸಂತೋಷಾತ್ ಪತಂತ್ಯಧಃ ॥೨೧॥**

**ಪಂಡಿತಾಃ** ಆಗಮಜನ್ಯಜ್ಞಾನವುಳ್ಳವರು **ಬಹುಜ್ಞಾಃ** ಅತೀತಾದಿಗಳ ಅರ್ಥಗಳನ್ನು ತಿಳಿದವರು **ಸಂಶಯಚ್ಛಿದಃ** ಪರಕೀಯರ ಸಂಶಯ ಕಳೆಯುವವ **ಬಹವಃ** ಬಹಳ **ಸದಸತ್ಪತಯಃ** ಸಭಾಪತಿಗಳು, ಪಂಡಿತರು **ಅಸಂತೋಷಾತ್ ಅಧಃಪತಂತಿ** ಅಸಂತೋಷದಿಂದ ಅಧಃಪಾತ ಹೊಂದುವರು. ॥೨೧॥

**ಅಸಂಕಲ್ಪಾಜ್ಜಯೇತ್ ಕಾಮಾನ್ ಕ್ರೋಧಂ ಕಾಮವಿವರ್ಜನಾತ್ ।**
**ಅರ್ಥಾನರ್ಥೇಕ್ಷಯಾ ಲೋಭಂ ಭಯಂ ತತ್ತ್ವಾವಮರ್ಶನಾತ್ ॥೨೨॥**

**ಅಸಂಕಲ್ಪಾತ್** ಇದು ನನಗೆ ಬೇಕೆಂದು ಇಚ್ಛೆಮಾಡದೇ **ಕಾಮಾನ್** ಶ್ರೀಹರಿಯಿಂದ ಭಿನ್ನರಾದವರಿಂದ ವಿಷಯಗಳನ್ನು **ಜಯೇತ್** ಗೆಲ್ಲಬೇಕು ಅಥವಾ ಪ್ರಧಾನವಾದ ಸ್ವರ್ಗ, ಸ್ವಾರಾಜ್ಯ ಮುಂತಾದವುಗಳ ಇಚ್ಛೆಯಲ್ಲಿ ನೈರ್ಭರ್ಯವನ್ನಿಡದೆ ಅವುಗಳ ಉಪಾಯಕಾಮನೆಗಳನ್ನು ತತ್ಕಾಲದಲ್ಲಿ ಭೋಗಕಾಮವನ್ನು ಗೆಲ್ಲಬೇಕು. ಪ್ರಧಾನ ಇಚ್ಛೆಯಿಲ್ಲದಿದ್ದರೆ ಅದರ ಉಪಾಯೇಚ್ಛೆ ಆಗಲಿ ಆದ್ದರಿಂದ ಸಾಧ್ಯಭೋಗೇಚ್ಛೆಯಾಗಲಿ ತಾವಾಗಿಯೇ ಹುಟ್ಟುವದಿಲ್ಲವೆಂದು ಭಾವ. ಅಥವಾ ಪಾಪವಿರುದ್ಧ ಪುಣ್ಯವಿಷಯಸಂಕಲ್ಪದಿಂದ **ಕಾಮಂ** ನಿಷಿದ್ಧೇಚ್ಛೆಯನ್ನು ಹುಟ್ಟದಂತೆ ಮಾಡಬೇಕು **ಕಾಮವಿವರ್ಜನಾತ್** ಕಾಮವನ್ನು ಬಿಡುವದರಿಂದ **ಕ್ರೋಧಂ** ಸಿಟ್ಟನ್ನು ಗೆಲ್ಲಬೇಕು ಕಾರಣವಿಲ್ಲದಿದ್ದರೆ ಕಾರ್ಯವಿರುವದಿಲ್ಲ ('ಕಾಮಾತ್ ಕ್ರೋಧೋಽಭಿಜಾಯತೇ' ಎಂದಿದೆ) **ಅರ್ಥಾನ್** ಹಣವನ್ನು **ಅರ್ಥೇಕ್ಷಯಾ** ಅರ್ಥ ಎಂದರೆ ನಿವೃತ್ತಿ ಅದರ ತಿಳುವಳಿಕೆಯಿಂದ ಅಂದರೆ ನಶ್ವರ ಶಾಶ್ವತವಲ್ಲವೆಂದು ತಿಳಿದು **ಲೋಭಂ ಜಯೇತ್** ಲೋಭವನ್ನು ಗೆಲ್ಲಬೇಕು.(ರಾಜರು ಚೋರರುಗಳ ಅಪಹಾರದಿಂದ ತಿರುಗಿ ಬರುವದಲ್ಲ ಎಂದು ತಿಳಿದು) **ಅಲೋಭಂ ಜಯೇತ್** ಲೋಭವಿಲ್ಲದಂತೆ ಗೆಲ್ಲಬೇಕು. **ಅರ್ಥಾನರ್ಥೇಕ್ಷಯಾ ಅರ್ಥೇ** ಸಂಪಾದಿಸಿದ ಹಣದಲ್ಲಿ **ಅನರ್ಥೇಕ್ಷಯಾ** ರಾಜಾದಿಗಳು ಅಪಹಾರ ಮಾಡುವರೆಂಬ ಅನರ್ಥ ತಿಳಿದು ಲೋಭವನ್ನು ಬಿಡಬೇಕು **ತತ್ತ್ವಾವಮರ್ಶನಾತ್** ಪರಾಪರತತ್ತ್ವವಿಚಾರದಿಂದ **ಭಯಂ** ಭೀತಿಯನ್ನು **ಜಯೇತ್** ಗೆಲ್ಲಬೇಕು ಅಂದರೆ ಎಲ್ಲ ಪ್ರಾಣಿಗಳು ಭಗವದಾಶ್ರಿತಗಳು ಭಗವಂತನು ಎಲ್ಲರಲ್ಲಿ ರಕ್ಷಕನಾಗಿ ಇರುವನು ಎಂಬ ಜ್ಞಾನದಿಂದ ಭಯವನ್ನು ಗೆಲ್ಲಬೇಕು. ಈ ರೀತಿ ತಿಳಿದವನಿಗೆ ಭಯವಾಗುವದಿಲ್ಲ. 'ತತೋ ನ ವಿಜುಗುಪ್ಸತೇ' ಎಂದು ಶ್ರುತಿ ಇದೆ.

**ಆನ್ವೀಕ್ಷಿಕ್ಯಾ ಶೋಕಮೋಹೌ ದಂಭಂ ಮಹದುಪಾಶ್ರಯಾತ್ ।**
**ಯೋಗಾಂತರಾಯಾನ್ ಮೌನೇನ ಹಿಂಸಾಂ ಕಾಯಾ (ಕಾಮಾ)ದ್ಯನೀಹಯಾ॥**

**ಆನ್ವೀಕ್ಷಿಕ್ಯಾ** ಚರ್ಮ ಸುಕ್ಕುಕಟ್ಟುವದು(ವಲಿ)ತಲೆಗೂದಲು ಬೆಳ್ಳಗಾಗುವದು (ಪಲಿತ) ಮುಂತಾದವು ಹೇಗೆ ದೇಹಕ್ಕೋ ಹಾಗೆಯೇ ಸಂಸಾರವಿರುವವರಿಗೆ ಶೋಕ ಮೋಹಗಳು ಅಂತಃಕರಣದಲ್ಲಿರುವವು. ಲಿಂಗಭಂಗವಾದ ಮೇಲೆ ಆನಂದಘನನಾದ ಆತ್ಮನಿಗೆ(ಜೀವನಿಗೆ)ಯಾವುದೂ ಇಲ್ಲ ಎಂಬ ಸತ್ತರ್ಕದಿಂದ **ಶೋಕಮೋಹೌ** ತನ್ನ ಸ್ನೇಹವಿಷಯದ ಅಗಲುವಿಕೆಯಿಂದ ದುಃಖ ಅವುಗಳಲ್ಲಿ ನಿತ್ಯವೆಂಬ ಮೋಹವನ್ನು ಬಿಡಬೇಕು. ಬ್ರಹ್ಮತರ್ಕದಲ್ಲಿ ಹೇಳಿದ ಯುಕ್ತಿಸಾಧ್ಯವಾದ ನಿತ್ಯಾನಿತ್ಯತ್ವ ನಿಶ್ಚಯವಾದರೆ ವಿಷಯಗಳ ಆಗಮಾಪಗಮದಿಂದ ಶೋಕಮೋಹಗಳು ಉಂಟಾಗುವದಿಲ್ಲ. **ದಂಭಂ** ತನ್ನಲ್ಲಿರುವ ಅಲ್ಪತೆಯನ್ನು ಮುಚ್ಚಿಹಾಕಿ ಇಲ್ಲದಿರುವ ಮಹತ್ವಪ್ರದರ್ಶನ ಇದನ್ನು **ಮಹದುಪಾಶ್ರಯಾತ್** ದೊಡ್ಡವರ ಸೇವೆಯಿಂದ ವಿನೀತರ ಸೇವೆಯಿಂದ **ತ್ಯಜೇತ್** ಬಿಡಬೇಕು **ಯೋಗಾಂತರಾಯಾನ್** ಸಮಾಧಿಗೆ ಬರುವ ವಿಘ್ನಗಳನ್ನು ಅಥವಾ ಉಪಾಯಸಾಮಾನ್ಯಗಳಿಗೆ ಬರುವ ಅಪಾಯಗಳನ್ನು ಇಂದ್ರಿಯಗಳ ಬಹಿರ್ವ್ಯಾಪಾರವೆಂಬ, ಉಪಾಸನಾವಿಘ್ನವನ್ನು **ಮೌನೇನ** ವಾಗಾದಿ ಇಂದ್ರಿಯನಿಯಮನದಿಂದ ಅಸಂಭಾಷ್ಯರೊಡನೆ ಮಾತನಾಡದಿರುವದರಿಂದ ಪರಿಹರಿಸಬೇಕು **ಹಿಂಸಾಂ** ಇರುವೆ ಮುಂತಾದವುಗಳ ಹಿಂಸೆಯನ್ನು **ಕಾಯಾದ್ಯನೀಹಯಾ** ಶರೀರಾದಿಚೇಷ್ಟೆ ಮಾಡದೇ ಪರಿಹರಿಸಬೇಕು. ಮೌನದಿಂದ ಕಣ್ಣುಮುಚ್ಚಿ ಕುಳಿತರೇ ಕೈಕಾಲುಗಳು ಬೀಳುವದರಿಂದ ಘಾತವಾಗದಂತೆ ನಿಶ್ಚೇಷ್ಟನಾಗಿ ಕುಳಿತುಕೊಳ್ಳಬೇಕು.

ವಿಶೇಷ :- ಕಾಮಾದ್ಯನೀಹಯಾ ಎಂಬ ಪಾಠದಲ್ಲಿ ಇಚ್ಛಾನುಸಾರ ತಿನ್ನುವ ಭಕ್ಷ್ಯಗಳಲ್ಲಿ ಇಚ್ಛೆ ಮಾಡದೇ ಹಿಂಸೆಯನ್ನು ಪರಿಹರಿಸಬೇಕು. ಎಲ್ಲವೂ ಕಾಮದಲ್ಲೇ ಸೇರಿದರೆ ವಿಶೇಷವಾಗಿ ಅವುಗಳನ್ನು ಗೆಲ್ಲಬೇಕೆಂದು ಸ್ವೀಕರಿಸಿದ್ದರಿಂದ ಸರ್ವಾತ್ಮನಾ ಕಾಮದ ತ್ಯಾಗವನ್ನು ತಿಳಿಸುವರು. ಮೊದಲಿನ ಶ್ಲೋಕದಲ್ಲಿ ಕ್ರೋಧದ ಜೊತೆಗೆ ಹಿಂಸೆಯನ್ನು ಹೇಳಿದರೆ ಅಭಿಲಷಿತಸಿದ್ಧಿಯಾಗುವಾಗ ಇಲ್ಲಿ ಮತ್ತೆ ಕಾಮಾದ್ಯನೀಹಯಾ ಎಂಬುದು ಹೆಚ್ಚು ಎಂಬ ಶಂಕೆಯನ್ನು ನಿರಾಕರಿಸುವರು. ।।೨೩।।

**ಕೃಪಯಾ ಭೂತಜಂ ದುಃಖಂ ದೈವಂ ಜಹ್ಯಾತ್ ಸಮಾಧಿನಾ ।**
**ಆತ್ಮಜಂ ಯೋಗವೀರ್ಯೇಣ ನಿದ್ರಾಂ ಸತ್ವನಿಷೇವಯಾ ।।೨೪।।**

**ಭೂತಜಂ ದುಃಖಂ** ಭೌತಿಕವಾದ ಧಾತುವಿಕಾರದಿಂದಾಗುವ ದುಃಖವನ್ನು **ಕೃಪಯಾ** ಮಂತ್ರೌಷಧಸಾಮರ್ಥ್ಯದಿಂದ ಅಥವಾ ನೃಸಿಂಹಾದ್ಯುಪಾಸನಾದಿಂದ ಸಂಪಾದಿತವಾದ ದಯೆಯಿಂದ ಜಲ,ವಾಯು ಮುಂತಾದ ಶರೀರವುಳ್ಳ ಜಲಗ್ರಹಪಿಶಾಚಾದಿಜನ್ಯವಾದ ದುಃಖವನ್ನು **ಜಹ್ಯಾತ್** ತ್ಯಜಿಸಬೇಕು **ದೈವಂ ಸಮಾಧಿ**

**ನಾ ಜಹ್ಯಾತ್** ಆ ದೈವಿಕವಾದ ಮನಃಪೀಡೆಯನ್ನು ದೇವತಾರಾಧನದಿಂದ ಕಳೆದುಕೊಳ್ಳಬೇಕು. ಅನಾವೃಷ್ಟ್ಯಾದಿಗಳು ದೈವಿಕಗಳೇ ಅವನ್ನು ಎಂದೂ ಅರ್ಥ. ದೈವಂ ಎಂದರೆ ನವಗ್ರಹಾದಿಪ್ರಯುಕ್ತ ಎಂದು ಅರ್ಥಮಾಡಿರುವರು. **ಯೋಗವೀರ್ಯೇಣ** ಶಾಸನಜಯದಿಂದ ಪ್ರಾಣಾಯಾಮಾದಿ ಅಷ್ಟಾಂಗದಿಂದ **ಆತ್ಮಜಂ** ದೇಹದಿಂದುಂಟಾದ ದುಃಖವನ್ನು ಪರಿಹರಿಸಬೇಕು **ಸತ್ವನಿಷೇವಯಾ** ಜ್ಞಾನಮಾರ್ಗ ಸೇವಿಸುವದರಿಂದ ಸಾತ್ವಿಕ ಆಹಾರದಿಂದ **ನಿದ್ರಾಂ** ಅಜ್ಞಾನವನ್ನು ಅಕಾಲದಲ್ಲಿ ನಿದ್ದೆಯನ್ನು **ಜಹ್ಯಾತ್** ಬಿಡಬೇಕು. ।।೨೪।।

**ರಜಸ್ತಮಶ್ಚ ಸತ್ವೇನ ಸತ್ವಂ ಚೋಪಶಮೇನ ಚ ।**
**ಏತತ್ ಸರ್ವಂ ಗುರೌ ಭಕ್ತ್ಯಾ ಪುರುಷೋ ಮನಸಾ ಜಯೇತ್ ।।೨೫।।**

**ಪುರುಷಃ** ಅಧಿಕಾರಿಯು **ಸತ್ವೇನ** ಸತ್ವಗುಣವೃದ್ಧಿಯಿಂದ **ರಜಸ್ತಮಃ** ರಜೋಗುಣ ತಮೋಗುಣಗಳನ್ನು **ಸತ್ವಂ** ಅಸ್ಥೂಲಸತ್ವವನ್ನು **ಉಪಶಮೇನ** ಭಗವನಿಷ್ಠೆಯಿಂದ (ಸೂಕ್ಷ್ಮಸತ್ವದಿಂದ ಸಂಪಾದಿತವಾದ)**ಏತತ್ ಸರ್ವಂ** ಇವೆಲ್ಲವನ್ನು **ಗುರೌ** ಹರಿಗುರುಗಳಲ್ಲಿ ಭಕ್ತಿಸಹಕೃತಮನಸ್ಸಿನಿಂದ **ಜಯೇತ್** ಗೆಲ್ಲಬೇಕು. ।।೨೫।।

ಭಕ್ತಿಯಿಲ್ಲದಿದ್ದರೆ ಎಲ್ಲವೂ ಇಲ್ಲದಂತೆ ಎಂದು ಹೇಳುವರು-

**ಯಸ್ಯ ಸಾಕ್ಷಾದ್ ಭಗವತಿ ಜ್ಞಾನದೀಪಪ್ರದೇ ಗುರೌ* ।**
**ಅಭಿಸಂಧಿಃ ಶ್ರುತಸ್ತಸ್ಯ ಸರ್ವಂ ಕುಂಜರಶೌಚವತ್ ।।೨೬।।**

**ಯಸ್ಯ** ಯಾವ ಮನುಷ್ಯನಿಗೆ **ಜ್ಞಾನದೀಪಪ್ರದೇ** ಜ್ಞಾನವನ್ನು ಉದ್ದೀಪನಗೊಳಿಸುವ **ಸಾಕ್ಷಾದ್ ಭಗವತಿ ಗುರೌ** ಮುಖ್ಯಭಗವಂತನೆಂಬ ಗುರುವಿನಲ್ಲಿ **ಅಭಿಸಂಧಿಃ** ಅವಜ್ಞೆಯಿದೆಯೋ **ತಸ್ಯ** ಅವನಿಗೆ **ಸರ್ವಂ ಶ್ರುತಂ** ಶ್ರವಣ ಮಾಡಿದ್ದೆಲ್ಲ **ಕುಂಜರಶೌಚವತ್** ಆನೆಯ ಸ್ನಾನದಂತೆ ವ್ಯರ್ಥ. 'ಮರ್ತ್ಯಾಸದ್ಧೀಃ' ಎಂಬ ಪಾಠವೂ ಒಳ್ಳೆಯದೇ. ಇವನು ಮರ್ತ್ಯನು ಎಂಬ ಅಸತ್ ಜ್ಞಾನವು ಅಸತ್ ಎಂದರ್ಥ. ಆನೆಯ ಸ್ನಾನವು ಮತ್ತೆ ಧೂಳಿಯನ್ನು ಹಾಕಿಕೊಳ್ಳುವಂತೆ ಶ್ರವಣಾದಿಗಳು ಸಂಸಾರ ಕಾರಣವಾಗುವವು ಎಂದು ಭಾವ. ।।೨೬।।

**ಏಷ ವೈ ಭಗವಾನ್ ಸಾಕ್ಷಾತ್ ಪ್ರಧಾನಪುರುಷೇಶ್ವರಃ ।**
**ಯೋಗೇಶ್ವರೈರ್ವಿಮೃಗ್ಯಾಂಘ್ರಿರ್ಲೋಕೋ ಯಂ ಮನ್ಯತೇ ನರಮ್ ।।೨೭**

**ಲೋಕಃ** ಜನರು **ಯಂ** ಯಾವನನ್ನು ನರಂ ಸಾಧಾರಣಮನುಷ್ಯನೆಂದು **ಮನ್ಯತೇ** ತಿಳಿಯುವರೋ **ಏಷಃ** ಇವನು **ಸಾಕ್ಷಾತ್** ಮುಖ್ಯವಾಗಿ **ಪ್ರಧಾನಪುರುಷೇಶ್ವರಃ** ಪ್ರಕೃತಿ

* ಮರ್ತ್ಯಾಸದ್ಧೀಃ ಇತಿ ಪಾಠಾಂತರ

ಮತ್ತು ಲಕ್ಷ್ಮೀಯರಿಗೆ ಈಶ್ವರನು **ಯೋಗೇಶ್ವರೈಃ** ಉಪಾಯ ಸಮರ್ಥರಾದವರಿಂದ **ಮೃಗ್ಯಾಂಘ್ರಿಃ** ವಿಚಾರ್ಯವಾದ ಪಾದವುಳ್ಳವನು. ಯಾರನ್ನು ಮನುಷ್ಯ ಎಂದು ತಿಳಿಯುವರೋ, ಅವನು **ಏಷಃ ವೈ** ಶ್ರೀಕೃಷ್ಣನೇ ಹೀಗೂ ಅನ್ವಯ. ।।೨೭।।

ಯೋಗೇಶ್ವರರಿಂದ ಪ್ರಸ್ತುತವಾದ ಯೋಗವು ಇವೇ ಕಾರಣವಾಗಿವುಳ್ಳದ್ದು, ಇವುಗಳು ಅದನ್ನು ಹುಟ್ಟಿಸದಿದ್ದಲ್ಲಿ ನಿಂದಿತವಾಗುವವು ಎಂದು ಹೇಳುವರು-

**ಷಡ್ವರ್ಗಸಂಯಮೈಕಾಂತಾಃ ಸರ್ವಾ ನಿಗಮಚೋದನಾಃ ।**
**ತದಂತಾ ಯದಿ ನೋ ಯೋಗಮಾವಹೇಯುಃ ಶ್ರಮಾವಹಾಃ ।।೨೮।।**

**ಷಡ್ವರ್ಗಸಂಯಮೈಕಾಂತಾಃ** ಷಡಿಂದ್ರಿಯಗಳಿಗೆ ಇತರ ದುರ್ವಿಷಯಗಳಿಂದ ಕಿತ್ತಿ ಹರಿಯಲ್ಲಿ ಇಡುವದೆಂಬ ಸಂಯಮದಲ್ಲಿ ತಾತ್ಪರ್ಯವುಳ್ಳ **ಸರ್ವಾಃ ನಿಗಮಚೋದನಾಃ** ಎಲ್ಲ ವೇದವಿಧಿಗಳು **ತದಂತಾಃ** ಯೋಗವೇ ಕೊನೆಗೆ ಫಲವಾಗಿವುಳ್ಳವು ಅಥವಾ ಭಗವಂತನ ನಿರ್ಣಯಜನಕಗಳು ಆಗಿದ್ದರೂ **ಯದಿ ಯೋಗಂ ನ ಆವಹೇಯುಃ** ಭಕ್ತಿಯೋಗವನ್ನು ಹುಟ್ಟಿಸದಿದ್ದರೆ **ಶ್ರಮಾವಹಾಃ** ಶ್ರಮಜನಕಗಳಷ್ಟೇ **ಯದಿ ವಹೇಯುಃ ತರ್ಹಿ ನ ಶ್ರಮಾವಹಾಃ** ಯೋಗ ಹುಟ್ಟಿಸಿದರೆ ಶ್ರಮಜನಕಗಳಲ್ಲ. ।।೨೮।।

**ಯಥಾ *ವಾರ್ತಾದಯೋ ವಿದ್ಯಾಃ ಪುಂಸಃ ಸ್ವಾರ್ಥಂ ನ ಬಿಭ್ರತಿ ।**
**ಅನರ್ಥಾಯ ಭವೇಯುಶ್ಚ ಪೂರ್ತಮಿಷ್ಟಂ ತಥಾऽಸತಃ ।।೨೯।।**

**ಯಥಾ** ಹೇಗೆ **ವಾರ್ತಾದಯಃ** ಕ್ರಯವಿಕ್ರಯಗಳನ್ನು ತಿಳಿಸುವ **ವಿದ್ಯಾಃ** ಗ್ರಂಥಗಳು **ಪುಂಸಃ** ಮನುಷ್ಯನಿಗೆ **ಸ್ವಾರ್ಥಂ ನ ಬಿಭ್ರತಿ** ಶಾಶ್ವತ ಅಭೀಷ್ಟವನ್ನು ಕೊಡುವದಿಲ್ಲ. ಕೇವಲ ಇಷ್ಟವೃದ್ಧಿಯನ್ನು ಕೊಡುವದಿಲ್ಲ ಅಷ್ಟೇ ಅಲ್ಲ **ಅನರ್ಥಾಯ ಭವೇಯುಶ್ಚ** (ಸಂಶಯಕ್ಕೆ ಕಾರಣವಾಗುವವು) ಬಡ್ಡಿಗಾಗಿ ಹಣವನ್ನು ಪದಾರ್ಥವನ್ನು ಕೊಟ್ಟಾಗ ಮೂಲಧನವನ್ನೇ ತಿರುಗಿಕೊಡದಿರುವಾಗ ಅನರ್ಥಕಾರಣವಾಗುವವೋ **ತಥಾ** ಹಾಗೇ **ಅಸತಃ** ಭಗವದ್ಭಕ್ತಿಯಿಲ್ಲದವನ **ಪೂರ್ತಂ ಇಷ್ಟಂ ಸ್ವಾರ್ಥಂ** ನ ಅರವಟ್ಟಿಗೆಯಾಗಲಿ, ಯಜ್ಞವಾಗಲಿ, ಸ್ವರ್ಗಾದಿಗಳನ್ನು ಕೊಡುವದಿಲ್ಲ. ಅಷ್ಟೇ ಅಲ್ಲ **ಅನರ್ಥಾಯ ಭವೇಯುಃ** ತಮಸ್ಸಿಗೆ ಕಾರಣವಾಗುವವು. ಅಥವಾ **ಯಥಾ ವಾರ್ತಾದಯಃ** ವ್ಯಾಪಾರವೇ ಕಾರಣವಾಗಿವುಳ್ಳ **ಅರ್ಥಂ** ಹಣವು ಯೋಗದ ಪ್ರಯೋಜನವಾದ ಮೋಕ್ಷವನ್ನು ಕೊಡುವದಿಲ್ಲವೋ ('ವಾರ್ತಾದಯೋ ಹ್ಯರ್ಥಾಃ ಯೋಗಸ್ಯಾರ್ತಂ ನ ಬಿಭ್ರತಿ' ಎಂದು ಪಾಠಾಂತರದ ಅರ್ಥ) 'ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ' ಮುಂತಾಗಿದೆ.

* ವಾರ್ತಾದಯೋ ಹ್ಯರ್ಥಾಃ ಯೋಗಸ್ಯಾರ್ತಂ ನ ಬಿಭ್ರತಿ । ಇತಿ ಪಾಠಾಂತರ

ಮನೋಜಯವಿಲ್ಲದೇ ಧ್ಯಾನಾದಿಗಳು ಸಂಭವಿಸುವದಿಲ್ಲ. ಅದಕ್ಕಾಗಿ ಮನೋಜಯದ ಉಪಾಯಗಳನ್ನು ನಾಲ್ಕು ಶ್ಲೋಕಗಳಿಂದ ಹೇಳುವರು-

**ಯಶ್ಚಿತ್ತವಿಜಯೇಚ್ಛುಃ ಸ್ಯಾನ್ನಿಸ್ಸಂಗೋ ನಿಷ್ಪರಿಗ್ರಹಃ ।**
**ಏಕೋ ವಿವಿಕ್ತಶರಣೋ ಭಿಕ್ಷುರ್ಭೈಕ್ಷ್ಯಮಿತಾಶನಃ ॥೩೦॥**

**ಯಃ** ಯಾವನು **ಚಿತ್ತವಿಜಯೇಚ್ಛುಃ** ಮನಸ್ಸನ್ನು ಗೆಲ್ಲಲು ಇಚ್ಛಿಸುವವನು (ಅನಾಯಾಸವಾಗಿ ಮನಸ್ಸನ್ನು ಭಗವದ್ವಿಷಯ ಮಾಡಲಿಚ್ಛಿಸುವವನು)**ನಿಸ್ಸಂಗಃ ಸ್ಯಾತ್** ಪುತ್ರಾದಿಗಳಲ್ಲಿ (ದುಷ್ಟವಿಷಯಸ್ನೇಹ)ಸ್ನೇಹರಹಿತನಾಗಬೇಕು ಅದಕ್ಕೆ ಕಾರಣ ಹೇಳುವರು **ನಿಷ್ಪರಿಗ್ರಹಃ** ಪರಿವಾರ ರಹಿತನಾಗಿ, ಅಸತ್‌ಪರಿಗ್ರಹರಹಿತನಾಗಿ ('ಅಸತಾಂ ಚ ಪ್ರತಿಗ್ರಹಂ ಪುನಂತು' ಎಂದು ಶ್ರುತಿ ಇದೆ) ಅದರ ಫಲ ಹೇಳುವರು **ಏಕಃ** ಒಬ್ಬನೇ ಅವನಿದ್ದಲ್ಲಿ ಅನೇಕ ಜನರು ಬಂದರೆ ಚಿತ್ತ ಅಚಾಂಚಲ್ಯ ಹೇಗಾದೀತು? ಎಂದರೆ ಹೇಳುವರು **ವಿವಿಕ್ತಶರಣಃ** ರಹಸ್ಯಸ್ಥಾನದಲ್ಲಿ ಕುಟೀರವುಳ್ಳವನಾಗಬೇಕು ಸಂಸಾರಿಗೆ ಇದು ಹೇಗೆ ಸಾಧ್ಯವೆಂದರೆ **ಭಿಕ್ಷುಃ** ಸಂನ್ಯಾಸಿಯು. ಹೊಟ್ಟೆತುಂಬಲು ಒಬ್ಬ ಶಿಷ್ಯನಾದರೂ ಬೇಕಲ್ಲ. ಆದ್ದರಿಂದ ಒಬ್ಬನೇ ಹೇಗಿರುವದು? ಹೊಟ್ಟೆತುಂಬುವದು ಹೇಗೆ? ಹೇಗೆ ತಾನೆ ಮನಃ ಸಾಸ್ಥ್ಯ ಎಂದರೆ ಹೇಳುವರು **ಭೈಕ್ಷಮಿತಾಶನಃ** ತಾನೇ ಸಂಪಾದಿಸಿದ ಭಿಕ್ಷೆಯನ್ನು ಮಿತವಾಗಿ ತಿನ್ನುವವನಾಗಬೇಕು. ॥೩೦॥

**ಶುಚೌ ದೇಶೇ ಸಮೇ ರಾಜನ್ನಾಸ್ಥಾಪ್ಯಾಸನಮಾತ್ಮನಃ ।**
**ಸ್ಥಿರಂ ಸುಖಂ ಸಮಂ ತಸ್ಮಿನ್ನಾಸೀತರ್ಜ್ವಂಗ ಓಮಿತಿ ॥೩೧॥**

**ಶುಚೌ** ಶುದ್ಧವಾದ **ಸಮೇ** ತಗ್ಗುದಿನ್ನಿ ಇಲ್ಲದ ಸಮವಾದ **ದೇಶೇ** ಸ್ಥಳದಲ್ಲಿ **ಆತ್ಮನಃ** ತನಗೆ **ಸ್ಥಿರಂ** ಸ್ಥಿರವಾದ **ಸಮಂ** ಸಮನಾದ **ಸುಖಂ** ಸುಖವಾಗುವಂತೆ **ಆಸನಂ** ಆಸನವನ್ನು **ಆಸ್ಥಾಪ್ಯ** ಇರಿಸಿ **ತಸ್ಮಿನ್** ಆ ಚೈಲಾಜಿನಕುಶಗಳಲ್ಲಿ **ಋಜ್ವಂಗಃ** ವಕ್ರವಾಗದಿರುವ ಅವಯವಗಳುಳ್ಳವನಾಗಿ, **ಓಂ ಇತಿ** ಓಂಕಾರವನ್ನು ಉಚ್ಚಾರ ಮಾಡಿ ಭೂಶುದ್ಧಿ ಮಾಡಿ **ಆಸೀತ** ಕೂಡಬೇಕು.

ವಿಶೇಷ ಃ- ಆಸನ ಪ್ರಕಾರವನ್ನು 'ಆಸೀನಃ ಸಂಭವಾತ್' ಎಂಬ ಸೂತ್ರಭಾಷ್ಯದಲ್ಲಿ 'ಸಮಂ ಕಾಯಶಿರೋಗ್ರೀವಂ' ಮುಂತಾಗಿ ವಿವರಿಸಿದೆ. ॥೩೧॥

**ಪ್ರಾಣಾಪಾನೌ ಸನ್ನಿರುಧ್ಯಾತ್ ಪೂರಕುಂಭಕರೇಚಕೈಃ ।**
**ಯಾವನ್ಮನಸ್ತ್ಯಜೇತ್ಕಾಮಾನ್ ಸ್ವನಾಸಾಗ್ರನಿರೀಕ್ಷಣಃ ॥೩೨॥**

**ಪೂರಕುಂಭಕರೇಚಕೈಃ** ರೇಚಕ,ಪೂರಕ,ಕುಂಭಕ ಅಂದರೆ ಶ್ವಾಸವನ್ನು ವಿಸರ್ಜಿಸಿ ಸ್ವೀಕಾರಮಾಡಿ, ಸ್ತಂಭನ ಮಾಡುವದರಿಂದ **ಯಾವತ್** ಎಲ್ಲಿಯವರೆಗೆ **ಮನಃ** ಮನಸ್ಸು **ಕಾಮಾನ್ ತ್ಯಜೇತ್** ವಿಷಯಗಳನ್ನು ಪ್ರವೇಶಿಸುವದಿಲ್ಲವೋ **ತಾವತ್** ಅಲ್ಲಿಯವರೆಗೆ **ಸ್ವನಾಸಾಗ್ರನಿರೀಕ್ಷಣಃ** ತನ್ನ ಮೂಗಿನ ತುದಿ ನೋಡುವವನಾಗಿ **ಪ್ರಾಣಾಪಾನೌ ಸನ್ನಿರುಧ್ಯಾತ್** ಪ್ರಾಣಾಪಾನವಾಯುಗಳನ್ನು ಪಡೆಯಬೇಕು ಇದರಿಂದ ಪ್ರಾಣಾಯಾಮ ಹೇಳಿದರು. ।।೩೨।।

**ಯತೋ ಯತೋ ನಿಸ್ಸರತಿ ಮನಃ ಕಾಮಹತಂ ಭ್ರಮತ್ ।**
**ತತಸ್ತತ ಉಪಾಹೃತ್ಯ ಹೃದಿ ರುಂಧ್ಯಾಚ್ಛನೈರ್ಬುಧಃ ।।೩೩।।**

**ಬುಧಃ** ಬುದ್ಧಿವಂತನು **ಕಾಮಹತಂ** ಇಚ್ಛೆಯಿಂದ ಪೀಡಿತವಾದ **ಮನಃ** ಮನಸ್ಸು **ಯತಃ ಯತಃ ನಿಸ್ಸರತಿ** ಯಾವ ಯಾವ ವಿಷಯಗಳ ಕಡೆಗೆ ಹೋಗುವದೋ **ತತಃ ತತಃ** ಅಲ್ಲಿಂದ **ಉಪಾಹೃತ್ಯ** ಹಿಂದೆ ಸೆಳೆದು **ಹೃದಿ ಶನೈಃ ರುಂಧ್ಯಾತ್** ಮೂಲ ಮನಸ್ಸಿನಲ್ಲಿ ನಿಧಾನವಾಗಿ ನಿಲ್ಲಿಸಬೇಕು. ಕ್ರಮವಾಗಿ ಭಗವಂತನಲ್ಲಿ ಧಾರಣಧ್ಯಾನಸಮಾಯುಕ್ತವನ್ನಾಗಿ ಮಾಡಬೇಕು. ಇದರಿಂದ ಪ್ರತ್ಯಾಹಾರ ಹೇಳಿದಂತಾಯಿತು. ।।೩೩।।

**ಏವಮಭ್ಯಸತಶ್ಚಿತ್ತಂ ಕಾಲೇನಾಲ್ಪೀಯಸಾ ಮುನೇಃ (ಯತೇಃ) ।**
**ಅವಿಷಣ್ಣಂ(ಅವಿಷಣ್ಣಸ್ಯ)ಚ ನಿರ್ವಾಣಂ ಯಾತ್ಯನಿಂಧನವಹ್ನಿವತ್ ।।**

**ಏವಂ** ಈ ರೀತಿಯಾಗಿ **ಅಭ್ಯಸತಃ** ಅಭ್ಯಾಸ ಮಾಡುವ **ಮುನೇಃ** ಮುನಿಯ **ಚಿತ್ತಂ** ಮನಸ್ಸು **ಅಲ್ಪೀಯಸಾ ಕಾಲೇನ** ಸ್ವಲ್ಪೇ ಕಾಲದಲ್ಲಿ **ಅವಿಷಣ್ಣಂ ಸತ್** ವಿಷಾದವನ್ನು ಹೊಂದದೆ ಅಥವಾ ವಿಷಾದಹೊಂದದಿರುವವನಿಗೆ (ವಿಷಯಸಂಬಂಧ ವಿಲ್ಲದ್ದಾಗಿ) **ಅನಿಂಧನವಹ್ನಿವತ್** ಕಟ್ಟಿಗೆ ಇಲ್ಲದ ಬೆಂಕಿಯಂತೆ **ನಿರ್ವಾಣಂ ಯಾತಿ** ನಷ್ಟವಾಗುವದು. ಮೊದಲು ನಾಶ ನಂತರ ಮುಕ್ತಿಯನ್ನು ಹೊಂದುವದು. ಪ್ರಾಕೃತ ಮನಸ್ಸು ನಾಶವಾಗುವದು ಅಪ್ರಾಕೃತವಾದ ಸ್ವರೂಪಮನಸ್ಸು ಶರೀರಾಭಿಮಾನ ವಿಲ್ಲದ್ದಾಗಿ **ನಿರ್ವಾಣಂ ಯಾತಿ ಚ** ಬ್ರಹ್ಮನನ್ನು ಹೊಂದುತ್ತದೆ.

ವಿಶೇಷ ಃ- ಬಾಣವೆಂದರೆ ಶರೀರ. ಪ್ರಾಕೃತಶರೀರವಿಲ್ಲದ್ದರಿಂದ ಶ್ರೀಹರಿನಿರ್ವಾಣ ನೆನಿಸುವನು. 'ಬಾಣಂ ಶರೀರಂ ಸಂಪ್ರೋಕ್ತೋ' ಎಂದು ಅಭಿಧಾನವಿದೆ 'ನಿರ್ವಾಣಮಮೃತಂ ಬ್ರಹ್ಮ' ಎಂದೂ ಅಭಿಧಾನವಿದೆ. ।।೩೪।।

ಹೀಗೆ ಬ್ರಹ್ಮನನ್ನು ವಿಷಯೀಕರಿಸಿದ ಚಿತ್ತಕ್ಕೆ ಸ್ವಾಭಾವಿಕ ಫಲ ಹೇಳುವರು-

**ಕಾಮಾದಿಭಿರನಾವಿದ್ಧಂ ಪ್ರಶಾಂತಾಖಿಲವೃತ್ತಿ ಯತ್ ।**
**ಚಿತ್ತಂ ಬ್ರಹ್ಮಸುಖಸ್ಪೃಷ್ಟಂ ನೈವೋತ್ತಿಷ್ಠೇತ ಕರ್ಹಿಚಿತ್ ॥೩೫॥**

**ಯತ್ ಚಿತ್ತಂ** ಯಾವ ಮನಸ್ಸು **ಕಾಮಾದಿಭಿರನಾವಿದ್ಧಂ** ಕಾಮಕ್ರೋಧಾದಿಗಳಿಂದ ವ್ಯಾಪ್ತವಾಗದ ಆದ್ದರಿಂದಲೇ **ಪ್ರಶಾಂತಾಖಿಲವೃತ್ತಿ** ಶಾಂತವಾದ ಪ್ರಾಕೃತಚಿತ್ತಭೇದವುಳ್ಳ ಅಂದರೆ ವಿಷಯಸಂಚಲನ(ಒಂದು ವಿಷಯದಿಂದ ಮತ್ತೊಂದು ವಿಷಯಕ್ಕೆ ಹಾರುವ ವ್ಯಾಪಾರ)ವಿಲ್ಲದ್ದೋ **ತತ್** ಅದು **ಬ್ರಹ್ಮಸುಖಸ್ಪೃಷ್ಟಂ** ಸುಖಪೂರ್ಣ ಬ್ರಹ್ಮನಲ್ಲಿ ರತವಾಗಿ **ಕರ್ಹಿಚಿತ್** ಯಾವಾಗಲೂ **ನೈವ ಉತ್ತಿಷ್ಠೇತ** ಅದನ್ನು ಬಿಟ್ಟು ಬೇರೆಡೆಗೆ ಹೋಗಲಾರದು. ಇದೇ ಮನೋಜಯವು.

ವಿಶೇಷ ಃ- ಸುಖಂ ಚ ತತ್ ಬ್ರಹ್ಮ ಚ ಬ್ರಹ್ಮಸುಖಂ ತತ್ ಸ್ಪೃಷ್ಟಂ ಯೇನ ತತ್ ಎಂದು ವಿಗ್ರಹ. ॥೩೫॥

ಸನ್ಯಾಸಿಯಾಗಿ ಮತ್ತೆ ಸಂಸಾರದ ಆಸೆ ಪಟ್ಟರೆ ಅವನು ನಿರ್ಲಜ್ಜನು ಪಾಪಿಯು ಎಂದು ಹೇಳುವರು-

**ಯಃ ಪ್ರವ್ರಜ್ಯ ಗೃಹಾತ್ ಪೂರ್ವಂ ತ್ರಿವರ್ಗಾವಪನಾತ್ ಪುನಃ ।**
**ಯದಾ ಸೇವೇತ ತಾನ್ ಭಿಕ್ಷುಃ ಸ ಪಾಪೋ ನಿರಪತ್ರಪಃ*** **॥೩೬॥**

**ಯಃ** ಯಾವನು **ಪೂರ್ವಂ** ಮೊದಲು **ತ್ರಿವರ್ಗಾವಪನಾತ್** ಧರ್ಮಾರ್ಥ ಕಾಮಗಳ ಬೀಜಗಳನ್ನು ಬಿತ್ತುವದಕ್ಕೆ ಕ್ಷೇತ್ರವಾದ **ಗೃಹಾತ್** ಮನೆಯಿಂದ **ಪ್ರವ್ರಜ್ಯ** ಸಂನ್ಯಾಸಿಯಾಗಿ ಹೊರಟು **ತಾನ್** ಆ ಮನೆಯನ್ನು **ಪುನಃ** ಮತ್ತೆ **ಯದಾ** ಯಾವಾಗ **ಸೇವೇತ** ಸೇವಿಸುವನೋ(ಹೊಂದುವನೋ)**ತರ್ಹಿ** ಆಗ **ಸಃ** ಅವನು **ಪಾಪಃ** ಪಾಪಿಯು **ನಿರಪತ್ರಪಃ** ನಾಚಿಕೆಯಿಲ್ಲದವನು.

ವಿಶೇಷ ಃ- 'ಸ ವೈ ವಾಂತಾಶ್ಯಪತ್ರಪಃ'ಎಂದು ಪಾಠಾಂತರವಿದೆ. ಆಗ ತಾನು ಕಾರಿಕೊಂಡದ್ದನ್ನೇ ತಾನು ತಿನ್ನುವವನು ಎಂದರ್ಥ.

ಒಂದು ಸಂದೇಹ 'ಸಂನ್ಯಸ್ಯ ಪುನರನ್ವಿಚ್ಛೇದ್ಗೃಹಂ ಯಃ ಕೋಽಪಿ ಮಂದಧೀಃ । ಕೃಚ್ಛ್ರತ್ರಯಂ ಸ ಕೃತ್ವಾ ತು ಗೃಹೀ ಸ್ಯಾನ್ನದೋಷಭಾಕ್ ॥' ಎಂದು ಧರ್ಮಶಾಸ್ತ್ರದಲ್ಲಿ ಯತಿಯಾದವನು ಮತ್ತೆ ಗೃಹಸ್ಥನಾಗಲು ಅನುಮತಿ ಕೊಟ್ಟಿದೆಯಲ್ಲ? ಅದರ ವಿರುದ್ಧ ಹೇಗೆ ಹೇಳಿದ್ದು ಎಂದರೆ, ಏನು ಅಲ್ಲಿಯಾದರೂ ಮಹಾರಾಜರಿಂದ ಅವನು ಪೂಜ್ಯನಾಗುವನೆಂದು ಹೇಳಿದೇಯೇ ? ಹಾಗೆ ತಿಳಿಯುವದಾದರೆ ಮಂದಧೀಃ

---
* ಸವ್ವೈ ವಾಂತಾಶ್ಯಪತ್ರಪಃ ಇತಿ ಪಾಠಾಂತರ

ಎಂಬುದರ ಕಡೆಗೇಕೆ ಗಮನಹರಿಸುವದಿಲ್ಲವೆನ್ನುತ್ತಾರೆ ಶ್ರೀಗಳವರು. ಒಂದು ವೇಳೆ ಸನ್ಯಾಸ ಬಿಟ್ಟಿದ್ದಾನೆ ಕೃಚ್ಛ್ರತ್ರಯ ಪ್ರಾಯಶ್ಚಿತ್ತ ಮಾಡಿದ್ದಾನೆ ಎಂದ ಮಾತ್ರಕ್ಕೆ ಅವನು ಸರ್ವಮಾನ್ಯನಾಗಲಾರ. ।।೩೬।।

ದೇಹಸ್ತುತಿಸುವವರನ್ನು ನಿಂದಿಸುವರು-

**ಯೈಃ ದೇಹಃ ಸ್ಮೃತೋಽನಾತ್ಮಾ ಮರ್ತ್ಯೋ ವಿಟ್ಕೃಮಿಭಸ್ಮವತ್ ।**
**ತಮೇವ ಸ್ವಾತ್ಮಸಾತ್ ಕೃತ್ವಾ ಶ್ಲಾಘಯಂತಿ ಹ್ಯಸತ್ತಮಾಃ ।।೩೭।।**

**ಯೈಃ** ಯಾವ ಯತಿಗಳಿಂದ **ಸ ದೇಹಃ** ತನ್ನದೇಹವು **ಅನಾತ್ಮಾ** ಜಡವು **ಮರ್ತ್ಯಃ** ಮರಣಶೀಲವೋ **ವಿಟ್ಕೃಮಿಭಸ್ಮವತ್** ಮಲ, ಕ್ರಿಮಿ, ಭಸ್ಮವೆಂದು **ಸ್ಮೃತಃ** ಹೇಳಲ್ಪಟ್ಟಿದೆಯೋ **ತಂ ಏವ** ಅದನ್ನೇ **ಸ್ವಾತ್ಮಸಾತ್ ಕೃತಾ** ತಾನೇ ಎಂದು ತಿಳಿದು (ತನ್ನ ಅಧೀನವೆಂದು ತಿಳಿದು) **ಶ್ಲಾಘಯಂತಿ** ಸ್ತುತಿಸುವವರು **ಅಸತ್ತಮಾಃ ಹಿ** ಅಸುರರು.

ವಿಶೇಷ ಃ- 'ಯಸ್ಯ' ಎಂಬ ಪಾಠದಲ್ಲಿ ಯಸ್ಯ ಯಾವ ಜೀವನ ಅನಾತ್ಮಾ ದೇಹವು ವಿಟ್ಕ್ರಿಮಿಭಸ್ಮವೆಂದು ಹೇಳಿದೆಯೋ ಅದನ್ನು ಎಂದರ್ಥ. ವಿಜಯಧ್ವಜರು 'ಯಸ್ಯ' ಎಂಬ ಷಷ್ಠೀ ಪ್ರಥಮಾರ್ಥದಲ್ಲಿದೆ ಎಂದಿದ್ದಾರೆ. ಯಾವ ದೇಹವು ವಸ್ತುತಃ ಕ್ರಿಮಿವಿಡ್‌ಭಸ್ಮವೆಂದು ಹೇಳಲ್ಪಟ್ಟಿದೆಯೋ ಅದನ್ನು ಹೀಗೂ ಅರ್ಥ ಎಂದು ಮಂದನಂದಿನಿಯಲ್ಲಿ ಮಾಡಿದೆ. ।।೩೭।।

ಯತಿಗೆ ಮಾತ್ರ ಆಶ್ರಮಧರ್ಮತ್ಯಾಗ ಮಾಡಿದರೆ ದೋಷವೆಂದಲ್ಲ ಕಿಂತು ಗೃಹಸ್ಥಾದಿಗಳಿಗೂ ತಮ್ಮ ಆಶ್ರಮ ತ್ಯಾಗವೂ ದೋಷವೇ ಎಂದು ಯತಿಯನ್ನು ಸೇರಿಸಿಕೊಂಡು ಮತ್ತೆ ಹೇಳುವರು-

**ಗೃಹಸ್ಥಸ್ಯ ಕ್ರಿಯಾತ್ಯಾಗೋ ವ್ರತತ್ಯಾಗೋ ವಟೋರಪಿ ।**
**ತಪಸ್ವಿನೋ ಗ್ರಾಮಸೇವಾ ಭಿಕ್ಷೋರಿಂದ್ರಿಯಲೌಲ್ಯತಾ ।।೩೮।।**

**ಗೃಹಸ್ಥಸ್ಯ** ಗೃಹಸ್ಥಾಶ್ರಮಿಗೆ **ಕ್ರಿಯಾತ್ಯಾಗಃ** ತನಗೆ ವಿಹಿತವಾದ ಔಪಾಸನಾ ಅಗ್ನಿಹೋತ್ರ ಮುಂತಾದವುಗಳನ್ನು ಬಿಡುವದು **ವಟೋಃ ಅಪಿ** ಬ್ರಹ್ಮಚಾರಿಗೂ **ವ್ರತತ್ಯಾಗಃ** ಗುರುಕುಲವಾಸ ಅಗ್ನಿಕಾರ್ಯ ವೇದಾಧ್ಯಯನಗಳನ್ನು ಮಾಡದಿರುವದು **ತಪಸ್ವಿನಃ** ವಾನಪ್ರಸ್ಥನಿಗೆ **ಗ್ರಾಮಸೇವಾ** ಮತ್ತೆ ಗ್ರಾಮದಲ್ಲಿ ವಾಸವು **ಭಿಕ್ಷೋಃ** ಯತಿಗೆ **ಇಂದ್ರಿಯಲೌಲ್ಯತಾ** ವಿಷಯಭೋಗಲಾಲಸೆಯು. ।।೩೮।।

**ಆಶ್ರಮಾಪಸದಾ ಹ್ಯೇತೇ ಖಲ್ವಾಶ್ರಮವಿಡಂಬಿನಃ ।**
**ದೇವಮಾಯಾವಿಮೂಢಾಂಸ್ತಾನುಪೇಕ್ಷೇತಾನುಕಂಪಯಾ ।।೩೯।।**

**ಏತೇ** ಮೇಲೆ ಹೇಳಿದ ತಮ್ಮ ತಮ್ಮ ಧರ್ಮಗಳನ್ನು ಮಾಡದ ಗೃಹಸ್ಥ ಮೊದಲಾದವರು **ಆಶ್ರಮಾಪಸದಾಃ** ಆಶ್ರಮಾಭಾಸರು(ಆಶ್ರಮಾಧಮರು) 'ನಿಹೀನೋ ಅಪಸದೋ ಜಾಲ್ಮ' ಎಂದು ಅಮರ. ಆಶ್ರಮದೂಷಕರೆಂದರ್ಥ. **ಖಲು** ಆ ಆ ಆಶ್ರಮಗಳನ್ನು ಹೊಂದಿ **ಖಂ** ಸುಖವನ್ನು **ಲುನಂತಿ** ಛೇದಿಸುವರು.

ವಿಶೇಷ :- ಖಲವಃ ಖಲಶ್ಚಬವ ತೇ ಆಶ್ರಮವಿಡಂಬನಾಃ ಖಲಾಶ್ರಮ ವಿಡಂಬನಾಃ ಅಂದರೆ ಸುಖವನ್ನು ಕಳೆದುಕೊಂಡು ಶ್ರಮವನ್ನು ಸಹಿಸಿಕೊಂಡು ವ್ಯರ್ಥಪ್ರಸಿದ್ಧಿಗಾಗಿ ಆಶ್ರಮಿಗಳಂತೆ ನಟಿಸುವವರು(ಆಶ್ರಮವೇಷಧಾರಿಗಳಷ್ಟೇ) 'ಶ್ರಮ ಏವ ಹಿ ಕೇವಲಂ' ಮುಂತಾದ ಪ್ರಸಿದ್ಧಿಯನ್ನು 'ಹಿ' ಶಬ್ದ ತಿಳಿಸುವದು. ಹೀಗೆ ಮಾಡಿದ್ದರಿಂದ ಆಶ್ರಮಾಪಸದ ಖಲ್ವಾಶ್ರಮವಿಡಂಬನಾಃ ಪದಗಳಿಗೆ ಆರ್ಥಿಕ ಪುನರುಕ್ತಿ ಭಯ ತಪ್ಪಿಸಿದಂತಾಯಿತು. ಇಂಥವರನ್ನು ಮನೆಗೆ ಕರೆಯಬಾರದು ಗೌರವಿಸಬಾರದು ಎಂದು ಹೇಳುವರು. **ದೇವಮಾಯಾವಿಮೂಢಾನ್ ತಾನ್** ಶ್ರೀಹರಿಯ ಬಂಧಕಶಕ್ತಿಯಿಂದ ಮೋಹಿತರಾದ ಆಶ್ರಮಾಪಸದರನ್ನು ಹಿಂದಿನಿಂದ ಖಲು ಪದವನ್ನು ಆಕರ್ಷಿಸಿ ಅನುಕಂಪಾ ಪದದೊಡನೆ ಅನ್ವಯ ಮಾಡಬೇಕು. ||೩೯||

ಉಪೇಕ್ಷೇತ ಎಂಬುದರಿಂದ ಕರ್ತೃತ್ವೇನ ಅಪೇಕ್ಷಿತವಾದ ಪ್ರೇಕ್ಷಾವಂತರಿಂದ ಶರೀರ ವಿಷಯದಲ್ಲಿ ಪ್ರವರ್ತಿಸಲ್ಪಡುವದು ಎಂದು ಹೇಳುವರು-

**ಆತ್ಮಾನಂ ಚೇದ್ ವಿಜಾನೀಯಾತ್ ದೇವಂ(ಪರಂ)ಜ್ಞಾನಧೃತಾಶಯಃ ।**
**ಕಿಮಿಚ್ಛನ್ ಕಸ್ಯ ವಾ ಹೇತೋರ್ದೇಹಂ ಪುಷ್ಣಾತಿ ಲಂಪಟಃ ॥೪೦॥**

**ಆತ್ಮಾನಂ** ದೇಹಭಿನ್ನನಾದ ತನ್ನನ್ನು, ಪರಮಾತ್ಮನನ್ನು **ಏವಂ** ಹೇಯತ್ವೇನ ಉಪಾದೇಯತ್ವೇನ ಮತ್ತು ಧ್ಯಾನಾದ್ಯುಪಾಯದಿಂದ ಗಮ್ಯನೆಂದು **ವಿಜಾನೀಯಾತ್ ಚೇತ್** ತಿಳಿದಿದ್ದಾದರೆ **ಜ್ಞಾನಧೃತಾಶಯಃ** ಜ್ಞಾನದಿಂದ ಸ್ಥಿರವಾದ ಮನಸ್ಸುಳ್ಳವನು **ಕಿಮಿಚ್ಛನ್** ಶ್ರೀಹರಿಯಿಂದ ಭಿನ್ನವಾದ ಯಾವ ವಿಷಯವನ್ನು ಇಚ್ಛಿಸುವವನಾಗಿ **ಕಸ್ಯ ವಾ ಹೇತೋಃ** ಯಾವ ಮಕ್ಕಳೇ ಮೊದಲಾದವರು ನಿಮಿತ್ತವಾಗಿ **ಲಂಪಟಃ** ಅಭಿನಿವೇಶವುಳ್ಳವನಾಗಿ **ದೇಹಂ** ಶರೀರವನ್ನು **ಪುಷ್ಣಾತಿ** ಪೋಷಿಸುವನು? ಪೋಷಿಸಲಾರನೆಂದರ್ಥ. ||೪೦||

ದೇಹವು ಈರೀತಿಯಾದರೆ ಹೇಯವಲ್ಲವೆಂದು ತಿಳಿಸಲು 'ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವ ಚ' ।'ಇಂದ್ರಿಯಾಣಿ ಹಯಾನಾಹುಃ ಮನಃ ಪ್ರಗ್ರಹಮೇವ ಚ' ಮುಂತಾಗಿ ಹೇಳಿದ ರಥರೂಪಕದಿಂದ ಶರೀರವನ್ನು ನಿರೂಪಿಸುವರು-

**ಆಹುಃ ಶರೀರಂ ರಥಮಿಂದ್ರಿಯಾಣಿ**
**ಹಯಾನಭೀಷುಂ ಮನ ಇಂದ್ರಿಯೇಶಮ್ ।**
**ವರ್ತ್ಮಾನಿ ಮಾತ್ರಾ ಧಿಷಣಾಂ ಚ ಸೂತಂ**
**ಸತ್ವಂ ಬೃಹದ್ಬಂಧುರಮೀಶಧಾಮ** ॥೪೧॥

**ಶರೀರಂ** ದೇಹವನ್ನು **ರಥಂ** ರಥವೆಂದು **ಇಂದ್ರಿಯಾಣಿ** ಇಂದ್ರಿಯಗಳನ್ನು **ಹಯಾನ್** ಕುದುರೆಗಳೆಂದು **ಇಂದ್ರಿಯೇಶಂ** ಇಂದ್ರಿಯಗಳಿಗೆ ನೇತೃವಾದ **ಮನಃ** ಮನಸ್ಸನ್ನು **ಅಭೀಷುಂ** ಲಗಾಮು ಎಂದು **ಮಾತ್ರಾಃ** ಶಬ್ದಾದಿವಿಷಯಗಳನ್ನು **ವರ್ತ್ಮಾನಿ** ಮಾರ್ಗಗಳೆಂದು(ಬೀದಿ)**ಧಿಷಣಾಂ** ಬುದ್ಧಿಯನ್ನು **ಸೂತಂ** ಸಾರಥಿ ಎಂದು **ಈಶಧಾಮ** ಪರಮಾತ್ಮನ ವಾಸಸ್ಥಾನವಾದ **ಸತ್ವಂ** ಅಂತಃಕರಣವನ್ನು ಗುಣವಿಶೇಷವನ್ನು **ಬೃಹದ್ಬಂಧುರಂ** ಎತ್ತರವಾದ ಪೀಠವನ್ನಾಗಿಯೂ **ಆಹುಃ** ಹೇಳುತ್ತಾರೆ.

ವಿಶೇಷ ಃ- 'ಆಹುಃ' ಎಂಬ ಬಹುವಚನದಿಂದ ಅನೇಕರ ಸಮ್ಮತಿ ತಿಳಿಸುವರು. 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂದಿರುವದರಿಂದ ಅದನ್ನು ಪ್ರಗ್ರಹ(ಲಗಾಮ)ಎಂದು ಹೇಳಿರುವರು. 'ಅಭೀಷು ಪ್ರಗ್ರಹೇ ರಶ್ಮೌ' ಎಂದು ಷಕಾರಾಂತವಾಗಿ ಉಳ್ಳ ಶಬ್ದವು ಅಮರದಲ್ಲಿ ಪಠಿತವಾಗಿದೆ. ಆದ್ದರಿಂದ ಅಭೀಶು ಎಂಬುದು ಲೇಖಕಪ್ರಮಾದವೆಂದು ತಿಳಿಯಬೇಕು. ಅಥವಾ 'ಶಷಯೋಃ ಶಸಯೋಶ್ಚೈವ ಲಡಯೋರಲಯೋರಪಿ । ವಪಯೋರ್ನ್ಯೆವ ಭೇದಃ ಸ್ಯಾತ್' ಎಂದಿರುವದರಿಂದ ಶಕಾರಷಕಾರಗಳಿಗೆ ಅಭೇದವನ್ನಾಶ್ರಯಿಸಿ ಸಮಾಧಾನ ತಿಳಿಯಬೇಕು. ಹೃತ್ಬಂಧುರಂ ದೊಡ್ಡದಾದ ಉನ್ನತಾನತತ್ರಿವೇಣು ಎತ್ತರವಾದ 'ಬಾಗಿದ ತ್ರಿವೇಣು ಅಂದರೆ ನಗವನ್ನು ಇಟ್ಟು ಕಟ್ಟುವ ಗಾಡಿಯ ಒಂದು ಉದ್ದದ ಮರ (ಉಗ್ಗಿ) 'ಬಂಧುರಂ ತೂನತಾನತಂ' ಎಂದು ಅಮರ. ॥೪೧॥

ರಥದ ಪರಿಕರಗಳೊಡನೆ ರಥಿಕ ಸಾಹಿತ್ಯವನ್ನು ಹೇಳುವರು-

**ಅಕ್ಷಂ ದಶಪ್ರಾಣಮಧರ್ಮಧರ್ಮೌ**
**ಚಕ್ರೇಽಭಿಮಾನಂ ರಥಿನಂ ಚ ಜೀವಮ್ ।**
**ಧನುರ್ಹಿತಸ್ಯ ಪ್ರಣವಂ ಪಠಂತಿ**
**ಶರಂ ತು ಜೀವಂ ಪರಮೇವ ಲಕ್ಷ್ಯಮ್** ॥೪೨॥

**ದಶಪ್ರಾಣಂ** ಪ್ರಧಾನವಾದ ಪ್ರಾಣಾಪಾನವ್ಯಾನೋದಾನಸಮಾನರು ಮತ್ತು ದಾಸರಾದ ನಾಗಕೂರ್ಮಕೃಕಲದೇವದತ್ತಧನಂಜಯ ಈ ಹತ್ತು ಪ್ರಾಣರ ಸಮಾಹಾರ ದಶಪ್ರಾಣ ಇದನ್ನು **ಅಕ್ಷಂ** ರಥದ **ಅಧರ್ಮಧರ್ಮೌ** ಪಾಪಪುಣ್ಯಗಳನ್ನು

**ಚಕ್ರೇ** ಗಾಲಿಗಳನ್ನಾಗಿ, ಇಲ್ಲಿ ಅಧರ್ಮವನ್ನು ಮೊದಲು ಹೇಳಿದ್ದು ಪಾಪವುಳ್ಳ ಜನರೇ ಬಹಳವೆಂದು ತಿಳಿಸಲು **ಅಭಿಮಾನಂ** ಅಹಂಕಾರವುಳ್ಳ ಜೀವನನ್ನು **ರಥಿನಂ** ರಥಿಕನನ್ನಾಗಿ **ಚಕ್ರೇ** ಮಾಡಿದನು(ಇದು ಕ್ರಿಯಾಪದವೂ)**ತಸ್ಯ** ರಥಿಕನಿಗೆ **ಪ್ರಣವಂ** ಓಂ ಎಂದು **ಪಠಂತಿ** ಹೇಳುವರು. ಅಕಾರವನ್ನು **ಧನುಃ ಪಠಂತಿ** ಧನುಸ್ಸೆಂದು ಹೇಳುವರು **ಜೀವಂ** ಜೀವನನ್ನು **ಶರಂ ಪಠಂತಿ** ಬಾಣವೆಂದು ಹೇಳುವರು **ಪರಂ ಏವ** ಪರಬ್ರಹ್ಮನೇ **ಲಕ್ಷ್ಯಂ** ಗುರಿ ಪ್ರಾಪ್ಯಸ್ಥಾನವೆಂದು **ಪಠಂತಿ** ಹೇಳುವರು.

ವಿಶೇಷ ಃ- ಶರೀರಾಭಿಮಾನಿಯಾದಾಗ ರಥಿಕ, ಶ್ರೀಹರಿಯಕಡೆ ನಡೆದಾಗ ಬಾಣ, ಈ ವಿಶೇಷ ತಿಳಿಯಬೇಕು. 'ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ' ಮುಂತಾಗಿ ಶ್ರುತಿ ಇದೆ. 'ಶರವತ್ತನ್ಮಯೋ ಭವೇತ್' ಎಂದಿರುವದರಿಂದ ಭಗವಂತನಲ್ಲಿ ಲಗ್ನವಾದ ಚಿತ್ತವುಳ್ಳವನಾಗಬೇಕು. ।।೪೨।।

ಗೆಲ್ಲಬೇಕಾದವನನ್ನು ಹೇಳುವರು-

**ರಾಗೋ ದ್ವೇಷಶ್ಚ ಲೋಭಶ್ಚ ಶೋಕಮೋಹೌ ಭಯಂ ಮದಃ ।**
**ಮಾನೋಽಭಿಮಾನೋಽಸೂಯಾ ಚ ಮಾಯಾ ಹಿಂಸಾ ಚ ಮತ್ಸರಃ ॥**

**ರಾಗಃ** ಅಸದ್ವಿಷಯಕ ಆಸಕ್ತಿ, ದ್ವೇಷ ಮತ್ತು ಶೋಕ ಫಲದೊರೆಯದಿರುವಾಗ **ಮೋಹ** ವೈಚಿತ್ಯ **ಭಯಂ** ತನಗಿಂತ ಅಧಿಕರಿಂದ ಹೆದರಿಕೆ **ಮದಃ** ತನಗಿಂತ ಅಧಮರಲ್ಲಿ ಅಹಂಕಾರ **ಲೋಭಃ** ವೈಷ್ಣವರಿಗೆ ಕೊಡದಿರುವದು **ಮಾನಃ** ಅಸತ್ಕಾರ್ಯವನ್ನು ಸತ್ಕರಿಸುವದು ಅಭಿಮಾನ 'ಅಪೂಜ್ಯೇ ಪೂಜ್ಯಬುದ್ಧಿಸ್ತು ಮಾನಃ ಸದ್ಭಿರುದಾಹೃತಃ । ಅಭಿಮಾನೋಽರ್ಥಾದಿದರ್ಪೇ ಜ್ಞಾನೇ ಪ್ರಣಯಹಿಂಸಯೋಃ' ಎಂದು ಅಭಿದಾನವಿದೆ. ಅವಮಾನ ಎಂದೂ ಪಾಠವಿದೆ. **ಅಸೂಯಾ** ಸಜ್ಜನರ ಗುಣಗಳನ್ನು ದೋಷವಾಗಿ ಕಾಣುವದು **ಮಾಯಾ** ವಂಚನೆ **ಹಿಂಸಾ** ವೇದವಿಹಿತವಲ್ಲದ ಹಿಂಸೆ, ಕಳ್ಳತನ, ಕೊಲ್ಲುವದು 'ಹಿಂಸಾ ಚಾರ್ಯಾದಿವಧಯೋಃ' ಎಂದು ವಿಶ್ವವಿದೆ. **ಮತ್ಸರಃ** ಹಿರಿಯರೊಡನೆ ಸ್ಪರ್ಧೆ. ಇವನೇಕೆ ನನ್ನ ಅಧೀನನಾಗಿಲ್ಲವೆಂದು ಮನಸ್ಸಿನಲ್ಲಿ ದುಃಖವೇ ಮಾತ್ಸರ್ಯ. ।।೪೩।।

**ರಜಃ ಪ್ರಮಾದಃ ಕ್ಷುನ್ನಿದ್ರಾ ಶತ್ರವಸ್ತ್ವೇವಮಾದಯಃ ।**
**ರಜಸ್ತಮಃ ಪ್ರಕೃತಯಃ ಸತ್ವಪ್ರಕೃತಯಃ ಕ್ವಚಿತ್ ।।೪೪।।**

**ರಜಃ** ಇದ್ದದ್ದರಲ್ಲಿ ಅಭಿನಿವೇಶ(ಇಲ್ಲದ್ದರಲ್ಲಿ ಆಸಕ್ತಿ ರಾಗ)**ಪ್ರಮಾದ** ಕರ್ತವ್ಯದಲ್ಲಿ ಅಶ್ರದ್ಧೆ(ಮನಸ್ಸಿನ ಅನವಧಾನ) **ಕ್ಷುತ್** ಹಸಿವೆ **ನಿದ್ರಾ** ನಿದ್ದೆ **ಏವಮಾದಯಃ** ಇವೇ ಮೊದಲಾದವು(ಆದಿ ಪದದಿಂದ ದಂಭಾದಿಗಳು )**ಶತ್ರವಃ**

ಗೆಲ್ಲಲೇಬೇಕಾದ ಶತ್ರುಗಳು. ಆದಿಪದದಿಂದ ದುಂದುಭಿ ಮೊದಲಾದವರು ಸುಗ್ರೀವ, ವಾಲಿ ಮೊದಲಾದವರನ್ನು ತೆಗೆದುಕೊಳ್ಳಬೇಕು. ಈ ಶತ್ರುಗಳನ್ನು ಉಪಾಯದಿಂದ ಗೆಲ್ಲಬೇಕು. ಎಂದಿಟ್ಟುಕೊಳ್ಳಬೇಕು **ಕ್ವಚಿತ್** ಇವರಲ್ಲಿ ಕೆಲವರು **ರಜಸ್ತಮಃ ಪ್ರಕೃತಯಃ** ರಜೋಗುಣ ತಮೋಗುಣ ಸ್ವಭಾವದವರು ಕೆಲವರು **ಸತ್ವಪ್ರಕೃತಯಃ** ಸತ್ವಸ್ವಭಾವದವರು.

ವಿಶೇಷ ಃ- ರಜೋಗುಣ ತಮೋಗುಣ ಎರಡೂ ಇದ್ದವರೂ ಕೆಲವರು ಶತ್ರುಗಳೇ. ಮಧ್ಯೇ ಮಾರ್ಗದಲ್ಲಿ ಇವರೆಲ್ಲರನ್ನೂ ಧ್ವಂಸಮಾಡಿ ಶರವು ಮುಖ್ಯಲಕ್ಷ್ಯವನ್ನು ಹೊಂದುವದೆಂದು ಭಾವ. ಅಸಂಪ್ರಜ್ಞಾತಸಮಾಧಿಯಿದ್ದವರು ಸತ್ವಪ್ರಕೃತಿಗಳು. ಪರೋಪಕಾರಾದಿಗಳನ್ನು ಮಾಡುವವರೂ ಶತ್ರುಗಳೇ ಅವಾಂತರಲಕ್ಷ್ಯವನ್ನು ಹೊಂದಿದವರಾದ್ದರಿಂದ ತೇಷಾಂ ಅವರಿಗೆ ಚಿತ್ ಅರ್ಥಜ್ಞಾನ ಎಲ್ಲಿಯದು ಎಂದೂ ಅರ್ಥ. ।।೪೪।।

ಹೀಗೆ ವರ್ಣಿಸಿದ್ದರ ಉಪಯೋಗವನ್ನು ಹೇಳುತ್ತಾರೆ-

**ಯಾವನ್ನೃಕಾಯರಥಮಾತ್ಮವಶೋಪಕಲ್ಪಂ**
**ಧತ್ತೇ ಗರಿಷ್ಟಚರಣಾರ್ಚನಯಾ ನಿಶಾತಮ್ ।**
**ಜ್ಞಾನಾಸಿಮಚ್ಯುತಬಲಂ ದಧದಸ್ತಶತ್ರುಃ**
**ಸ್ವಾರಾಜ್ಯತುಷ್ಟಃ ಉಪಶಾಂತ ಇದಂ ವಿಜಹ್ಯಾತ್ ।।೪೫।।**

**ಯಾವತ್** ಎಲ್ಲಿಯವರೆಗೆ **ಆತ್ಮವಶೋಪಕಲ್ಪಂ** ತನ್ನ ಅಧೀನವೆಂದು ಕಾಣುವ **ನೃಕಾರ್ಯರಥಂ** ಜ್ಞಾನಸಾಧನವಾದ ಮನುಷ್ಯ(ಬ್ರಾಹ್ಮಣ)ದೇಹವನ್ನು **ಧತ್ತೇ** ಧರಿಸಿರುವನೋ **ತಾವತ್** ಅಷ್ಟರಲ್ಲಿ **ಗರಿಷ್ಠಚರಣಾರ್ಚನಯಾ** ಮಹನೀಯರ ಪಾದಸೇವೆಯಿಂದ **ನಿಶಾತಂ** ಹರಿತವಾದ **ಅಚ್ಯುತಬಲಂ** ಶ್ರೀಹರಿಯೇ ಬಲವಾಗಿರುವ ಎಂದೂ ಕುಗ್ಗದ ಬಲವಿರುವ **ಜ್ಞಾನಾಸಿಂ ದಧತ್** ಪರಮಾತ್ಮನ ಜ್ಞಾನವೆಂಬ ಕತ್ತಿಯನ್ನು ಹಿಡಿದು **ಅಸ್ತಶತ್ರುಃ** ರಾಗಾದಿಶತ್ರುಗಳನ್ನು ಗೆದ್ದವನಾಗಿ **ಸ್ವಾರಾಜ್ಯತುಷ್ಟಃ** ಶ್ರೀಹರಿಯ ಅಪರೋಕ್ಷಜ್ಞಾನದಿಂದ ವಿಷಯಾಲಂಬುದ್ಧಿ-ಯುಳ್ಳವನಾಗಿ **ಉಪಶಾಂತಃ** ಮೊದಲಿಗಿಂತ ಹೆಚ್ಚು ಭಗವನ್ನಿಷ್ಠೆ ಹೊಂದಿದವನಾಗಿ **ಇದಂ** ಹೇಯವಾದ್ದರಿಂದ ಹಾವಿನ ಪೊರೆಯಂತೆ ಇರುವ ಸಂಸಾರವೆಂಬ ಈ ವಸ್ತುವನ್ನು **ವಿಜಹ್ಯಾತ್** ಮತ್ತೆ ಅಂಟಿ ಕೊಳ್ಳದಂತೆ ಬಿಟ್ಟು ಕೊಡಬೇಕು **ಸ್ವಾರಾಜ್ಯೇನ** ನಿಶ್ಚಿತವಾದ ಮೋಕ್ಷದಿಂದ **ತುಷ್ಟಃ** ತಪ್ತನಾಗಿ ಎಂದೂ ಅರ್ಥಮಾಡಿರುವರು. **ಉಪಶಾಂತಃ** ಉಪಶಸ್ಯ ಸ್ವರೂಪಸುಖಭಿನ್ನವಾದ ಹೀನ ಸುಖದ ಅಂತಃ ನಾಶವು ಯಾವನಿಗೆ ಸನ್ನಿಹಿತವಾಗಿದೆಯೋ ಅವನು ಉಪಶಾಂತನು **ಇದಂ** ಕಾಮಿತವನ್ನು

ದದಾತೀತಿ ಇದಂ **ನೃಕಾಯಂ** ಮನುಷ್ಯದೇಹವನ್ನು ಬಿಡಬೇಕು. ಹಿಂದೆ 'ಇಷ್ಟದಾನಾತ್ತಥೇಂದವ' ಎಂಬ ಋಗ್ಭಾಷ್ಯ ಉದಾಹರಿಸಿ ವಿಸ್ತಾರವಾಗಿ ಹೇಳಿದ್ದನ್ನು ಅನುಸಂಧಾನ ಮಾಡಬೇಕು. ಮಮತಾತ್ಯಾಗವೇ ದೇಹತ್ಯಾಗವೆಂದು ತಿಳಿಯಬೇಕು. **ರಥ್ಯತೇ** ಜ್ಞಾಯತೇ ಅನೇನ ಇತಿ ರಥಂ ಎಂದು ರಥಶಬ್ದದಿಂದ ದೇಹಕ್ಕೆ ಜ್ಞಾನಸಾಧನತ್ವ ತಿಳಿಸಿರುವರು. 'ರಥ ಗತೌ' ಎಂದು ಧಾತು ಇದೆ. ಗತ್ಯರ್ಥಕಗಳು ಜ್ಞಾನಾರ್ಥಕಗಳಾಗಿರುವವು. ।।೪೫।।

ಹೀಗೆ ಮಾಡದಿದ್ದಲ್ಲಿ ಮೋಕ್ಷವೇ ದೊರೆಯಲಾರದೆನ್ನುತ್ತಾರೆ-

**ನೋ ಚೇತ್ ಪ್ರಮತ್ತಮಸದಿಂದ್ರಿಯವಾಜಿಸೂತಾಃ**
**ನೀತ್ವೋತ್ಪಥಂ ವಿಷಯದಸ್ಯುಷು ನಿಕ್ಷಿಪಂತಿ ।**
**ತೇ ದಸ್ಯವಃ ಸಹಯಸೂತಮಮುಂ ತಮೋಽಂಧೇ**
**ಸಂಸಾರಕೂಪ ಉರುಮೃತ್ಯುಭಯೇ ಕ್ಷಿಪಂತಿ ।।೪೬।।**

**ನೋ ಚೇತ್** ಇಂದ್ರಿಯ ಸಮೂಹವನ್ನು ತನ್ನ ವಶಮಾಡಿಕೊಂಡು ಜ್ಞಾನಖಡ್ಗದಿಂದ ಸಂಸಾರವನ್ನು ಕತ್ತರಿಸಿದಿದ್ದರೆ, ವಿಷಯಾಭಿಲಾಷೆಯನ್ನು ಮಾಡಿದರೆ **ಅಸದಿಂದ್ರಿಯವಾಜಿಸೂತಾಃ** ವಿಷಯಗಳಿಂದ ತೃಪ್ತವಾಗದ ದುಷ್ಟ ಇಂದ್ರಿಯಗಳೆಂಬ ಕುದುರೆಗಳು, ಬುದ್ಧಿ ಎಂಬ ಸಾರಥಿಯೂ **ಪ್ರಮತ್ತಂ** ಶ್ರೀಹರಿಯ ವಿಷಯದಲ್ಲಿ ವಿಷಯರಾಗದಿಂದ ಕುರುಡನಾದ **ಅಮುಂ** ಇವನನ್ನು, ರಥಿಕನನ್ನು **ಉತ್ಪಥಂ** ಶಾಸ್ತ್ರವಿಹಿತವಲ್ಲದ ಅಪಮಾರ್ಗದಲ್ಲಿ **ನೀತಾ** ಎಳೆದುಕೊಂಡು ಹೋಗಿ **ವಿಷಯದಸ್ಯುಷು** ವಿಷಯಗಳೆಂಬ ಕಳ್ಳರಲ್ಲಿ **ನಿಕ್ಷಿಪಂತಿ** ತಳ್ಳುವವು(ಕೆಡವುವವು) **ತೇ ದಸ್ಯವಃ** ಆ ವಿಷಯಗಳ್ಳರು **ಸಹಯಸೂತಂ** ಇಂದ್ರಿಯಸಹಿತನಾದ **ಅಮುಂ** ಈ ರಥಿಕನನ್ನು(ರಥವನ್ನು)**ಉರುಮೃತ್ಯುಭಯೇ** ಮತ್ತೆ ಮತ್ತೆ ಸಾವಿನ ಭಯದಿಂದ ತುಂಬಿದ **ತಮೋಽಂಧೇ** ಅಜ್ಞಾನದಿಂದ ಕಣ್ಣಿಗೆ ಕಾಣದಿರುವ ಅಗಾಧವಾದ **ಸಂಸಾರಕೂಪೇ** ಜನನಮರಣರೂಪಸಂಸಾರವೆಂಬ ಭಾವಿಯಲ್ಲಿ **ಕ್ಷಿಪಂತಿ** ಎಸೆಯುವವು. ಶ್ರೀಹರಿಯು ಇಂಥವರನ್ನು ಪುನಃ ಪುನಃ ಸಂಸಾರದಲ್ಲಿ ಹಾಕುವನು. ತಮಃಪ್ರಕೃತಿಯವನನ್ನು ದುಃಖಮಯವಾದ ಅಂಧತಮಸ್ಸಿಗೆ ಹಾಕುವನು. ದುಃಖವನ್ನು ತಡೆಲಾಗದೆ ಆ ಕೂಪದಲ್ಲಿ ಹೊರಳಾಡುವದರಿಂದ ಅಂಧಂತಮಸ್ಸು ಸಂಸಾರಕೂಪವೆಂದರ್ಥ. **ಉರುಮೃತ್ಯುಭಯೇ** ನಾನಾವಿಧ ಮೃತ್ಯುಭಯವುಳ್ಳ **ಸಂಸಾರಕೂಪೇ** ಸಂಸಾರವೆಂಬ ಭಾವಿಯಲ್ಲಿ ತೇ ಅಂದರೆ ಇವ ಎಂದರ್ಥ. ದಸ್ಯವಃ ತೇ ಕಳ್ಳರಂತೆ ಎಂದರ್ಥ. ಅವರು ಹೇಗೆ ದಾರಿಹೋಕರನ್ನು ಹೊಡೆದು ಹಣಕಿತ್ತಿಕೊಂಡು ತಗ್ಗಿನಲ್ಲಿ ತಳ್ಳುವರೋ ಹಾಗೆ ಎಂದು ಸೂಚಿಸಲು. ತೇ ಎಂದಿಷ್ಟೆ

ಹೇಳಿದರೆ ಸಾಕಾಗುತ್ತಿರಲು, ದಸ್ಯವಃ ಎಂದಿದ್ದಾರೆ. ತೇ ಎಂಬುದಕ್ಕೆ ಇವ ಎಂಬರ್ಥವನ್ನು 'ತತ್ವತದ್ದನುಃ ಇಷವ' ಎಂಬ ಭಾಗವತತಾತ್ಪರ್ಯದಲ್ಲಿ ಹೇಳಿದ್ದನ್ನು ಹಿಂದೆ ಹೇಳಿದೆ. ।।೪೬।।

ವೇದವಿಹಿತವಾದ ಯಜ್ಞಾದಿಗಳನ್ನು ಪ್ರತಿನಿತ್ಯ ಮಾಡುವದರಿಂದ ಹೇಗೆ ಇವನು ಹೇಳಿದ ಅನರ್ಥಗಳನ್ನು ಹೊಂದುವನು? ಅದೇ ವಿಧ(ವಲ್ಲದ)ನಿವೃತ್ತಿಕರ್ಮ ಮಾಡಿದರೆ ಸಂಸಾರನಿವೃತ್ತಿ ಹೇಗೆ ಎಂದರೆ ಪ್ರವೃತ್ತದಂತೆ ನಿವೃತ್ತಿಯೂ ವೈದಿಕವೇ ಎಂದು ಹೇಳುವರು. 'ಸ್ವರ್ಗಕಾಮೋ ಯಜೇತ್' ಎಂದು ಹೇಳುವ ವೇದದ ಶಕ್ತಿಯಿಂದ ತೋರುವ ಮುಖ್ಯಾರ್ಥವನ್ನು ಕೇಳಿದ ಮೇಲೆ ಅದರಲ್ಲಿ ಪ್ರವೃತ್ತನಾಗುವನು. ಮೇಲಕ್ಕೆ ಹತ್ತಲಾಗದ ಆಳವಾದ ಸಂಸಾರಕೂಪದಲ್ಲಿ ಹಾಕುವದೆಂದು ಹೇಳುವದು ಹೇಗೆ? ಇವನೂ ವೈದಿಕನೇ. ಇನ್ನು ಎಲ್ಲ ಧರ್ಮಗಳನ್ನು ಬಿಟ್ಟಿರುವ ಅವೈದಿಕನಿಗಾದರೂ ಸಂಸಾರೋಚ್ಛೇದ ಹೇಳುವದು ಹೇಗೆ? 'ಸರ್ವಧರ್ಮಾನ್ ಪರಿತ್ಯಜ್ಯ' ಎಂದು ಭಗವಂತ ಹೇಳಿರುವನಲ್ಲವೆ ಎಂದರೆ ಹೇಳುವರು-

**ಪ್ರವೃತ್ತಂ ಚ ನಿವೃತ್ತಂ ಚ ದ್ವಿವಿಧಂ ಕರ್ಮ ವೈದಿಕಮ್ ।**
**ಆವರ್ತತೇ ಪ್ರವೃತ್ತೇನ ನಿವೃತ್ತೇನಾಶ್ನುತೇಽಮೃತಮ್ ।।೪೭।।**

**ಪ್ರವೃತ್ತಂ ಚ** ಪ್ರವೃತ್ತವೆಂದೂ **ನಿವೃತ್ತಂ ಚ** ನಿವೃತ್ತವೆಂದೂ **ಇತಿ** ಹೀಗೆ **ದ್ವಿವಿಧಂ** ಎರಡು ರೀತಿಯ **ಕರ್ಮ** ಕರ್ಮವು **ವೈದಿಕಂ** ವೇದವಿಹಿತ(ಗಳೇ)ವೇ 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' 'ಏಕಾಂತಾನಾಂ ನ ಕಸ್ಯಚಿತ್ 'ಅರ್ಥೇ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮ್' 'ನಾರಾಯಣೋಽಸೌ ಪರಮೋ ವಿಚಿಂತ್ಯಃ' ಮುಂತಾದ ವೇದವಿಹಿತವಾದ್ದರಿಂದ ವೈದಿಕವು. ಅವುಗಳ ಫಲ ಹೇಳುವರು. **ಪ್ರವೃತ್ತೇನ** (ಸಕಾಮ)ಪ್ರವೃತ್ತಕರ್ಮಮಾಡುವದರಿಂದ **ಆವರ್ತತೇ** ಮತ್ತೆ ಸಂಸಾರಕ್ಕೆ ಬರುವನು **ನಿವೃತ್ತೇನ** ನಿಷ್ಕಾಮಕರ್ಮಮಾಡುವದರಿಂದ **ಅಮೃತಂ** ಶ್ರೀಹರಿಯನ್ನು **ಅಶ್ನುತೇ** ಹೊಂದುವನು **ಅಂ** ಅಶಬ್ದವಾಚ್ಯನಾದ **ಋತಂ** ಶಾಶ್ವತ ಸ್ಥಿತಿಯುಳ್ಳ ಅಥವಾ ಜ್ಞಾನಾತ್ಮಕನಾದ್ದರಿಂದ ಶ್ರೀಹರಿಯು ಅಮೃತ. 'ಋ ಗತಾವಿತಿಧಾತೋಸ್ತು ಪೂರ್ವಾವಗತವತ್ಸದಾ । ಸ್ಥಿತೇರ್ಹ್ಯರ್ತಂ ಇತ್ಯುಕ್ತಂ ಅನೃತಂ ಪರಿಣಾಮತಃ' ಎಂದಿದೆ. ।।೪೭।।

'ಪ್ರವತ್ತಂ ಚ ನಿವೃತ್ತಂ ಚ ಇತಿ ದ್ವಿವಿಧಂ' ಎಂದು ಇತಿಪದ ಅಧ್ಯಾಹಾರ ಮಾಡಿ ವ್ಯಾಖ್ಯಾನಿಸಬೇಕು. ಇಲ್ಲವಾದರೆ ಪ್ರವೃತ್ತವೂ ಎರಡು ವಿಧ ನಿವೃತ್ತಿವೂ ಎರಡು ವಿಧ ಹೀಗೆ ನಾಲ್ಕು ವಿಧಗಳಾಗಬೇಕಾಗುವದು. ಇದಕ್ಕೆ ಸದೃಶವಾದ ಸ್ಥಳದಲ್ಲಿ

ತತ್ತ್ವಸಂಖ್ಯಾನ ವ್ಯಾಖ್ಯಾನದಲ್ಲಿ 'ಸ್ವತಂತ್ರಂ ಅಸ್ವತಂತ್ರಂ ಚೇತೀತಿಶಬ್ದ ಅಧ್ಯಾಹಾರೇಣ ಯೋಜ್ಯಂ' ಅನ್ಯಥಾ 'ಸ್ವತಂತ್ರಂ ಅಸ್ವತಂತ್ರಂ ಚ ತತ್ತ್ವಂ ಪ್ರತ್ಯೇಕಂ ದ್ವಿವಿಧಂ ಇತಿ ಪ್ರತೀತಿಃ ಸ್ಯಾದಿತಿ' ಎಂದಿದ್ದಾರೆ. ।।೪೭।।

ಮರಳಿ ಸಂಸಾರಕಾರಣವಾಗುವದೆಂದು ಹೇಳಿದ ಪ್ರವೃತ್ತಕರ್ಮದ ಸ್ವರೂಪವೇನೆಂದು ಹೇಳುವರು-

**ಹಿಂಸ್ರಂ ದ್ರವ್ಯಮಯಂ ಕಾಮ್ಯಮಗ್ನಿಹೋತ್ರಾದ್ಯಶಾಂತಿದಮ್ ।**
**ದರ್ಶಶ್ಚ ಪೂರ್ಣಮಾಸಶ್ಚ ಚಾತುರ್ಮಾಸ್ಯಃ ಪಶುಃ (ಪುನಃ) ಶ್ರುತಃ ।।೪೮।।**

**ಹಿಂಸ್ರಂ** ಹಿಂಸಾರೂಪವಾದ ಅಶ್ವತ್ಥ ಮೊದಲಾದವನ್ನು ಕತ್ತರಿಸಬೇಕಾಗು-ವದರಿಂದ ಶ್ಯೇನಾದಿಹಿಂಸಾತ್ಮಕವಾದ **ದ್ರವ್ಯಮಯಂ** ಮೇಕೆ ಮೊದಲಾದ ದ್ರವ್ಯಗಳು ಬೇಕಾಗಿರುವ **ಅಗ್ನಿಹೋತ್ರಾದಿ** ಅಗ್ನಿಹೋತ್ರ ಮೊದಲಾದವು **ದರ್ಶ** ಅಮಾವಾಸ್ಯಾ ಮಾಡುವ ಕರ್ಮ **ಪೂರ್ಣಮಾಸ** ಹುಣ್ಣಿಮೆ ಮಾಡುವ ಕ್ರಿಯಾ **ಚಾತುರ್ಮಾಸ್ಯಃ** ಪಶು ಎಂಬ ಯಾಗವಿಶೇಷಗಳು **ಶ್ರುತಃ** ಜ್ಯೋತಿಷ್ಟೋಮ ಇವುಗಳು **ಅಶಾಂತಿದಂ** ಮೋಕ್ಷಪ್ರದಗಳಲ್ಲ.

ವಿಶೇಷ :- ಶ್ರೀಸತ್ಯಧರ್ಮರು ಪಶುಃ ಶ್ರುತಃ ಎಂಬ ಪಾಠದ ಪ್ರಕಾರ ಅರ್ಥ ಹೇಳಿದ್ದಾರೆ. ಈ ಪಾಠ ಅನೇಕ ವ್ಯಾಖ್ಯಾನಸಹಿತ ಪುಸ್ತಕದಲ್ಲಿದೆ ।।೪೮।।

**ಏತದಿಷ್ಟಂ ಪ್ರವೃತ್ತಾಖ್ಯಂ ಹುತಂ ಪ್ರಹುತಮೇವ ಚ ।**
**ಪೂರ್ತಂ ಸುರಾಲಯಾರಾಮಕೂಪಾಜೀವ್ಯಾದಿಲಕ್ಷಣಮ್ ।।೪೯।।**

**ಹುತಂ** ವೈಶ್ವದೇವ **ಪ್ರಹುತಂ ಚ** ಬಲಿಹರಣವೂ **ಏತತ್** ಇವು **ಇಷ್ಟಂ** ಇಷ್ಟವೆಂದು ಕರೆಯಲ್ಪಡುವವು **ಸುರಾಲಯ** ದೇವಸ್ಥಾನ ಕಟ್ಟಿಸುವದು **ಆರಾಮ** ಉಪವನಗಳನ್ನು ನಿರ್ಮಿಸುವದು **ಕೂಪ** ಭಾವಿ(ಪ್ರಿಹಿಃ)**ಆಜೀವ್ಯಾ** ಮಾರ್ಗ ಮಧ್ಯದಲ್ಲಿ ಗಿಡಗಳನ್ನು ಹಚ್ಚಿಸುವದು ಅಥವಾ ಅರವಟ್ಟಿಗೆ ಅಂದರೆ ಬಿಸಲಿನಿಂದ ಬಳಲಿದವರಿಗೆ ನೀರು ಮಜ್ಜಿಗೆ ಪಾನಕ ಮುಂತಾದ್ದನ್ನು ಕೊಡುವದೇ ಮೊದಲಾದದು.

**ದ್ರವ್ಯಮೂಷ್ಮ(ಸೂಕ್ಷ್ಮ)ವಿಪಾಕಶ್ಚ ಧೂಮೋ ರಾತ್ರಿರಪಕ್ಷಯಃ ।**
**ಅಯನಂ ದಕ್ಷಿಣಂ ಸೋಮೋ ದರ್ಶ ಓಷಧಿವೀರುಧಃ ।।೫೦।।**

**ದ್ರವ್ಯಮೂಷ್ಮವಿಪಾಕಶ್ಚ** ಬೆಂಕಿಯಿಂದ ಬೆಂದ ಪುರೋಡಾಶ ಮೊದಲಾದ ದ್ರವ್ಯದಿಂದ ಬಂದ ಅಪೂರ್ವವು ಪೂರ್ತವೆನಿಸುವದು(ವಿಜಯಧ್ವಜ) **ಉಷ್ಮವಿಪಾಕೋ ದ್ರವ್ಯಂ** ಶಾಖದಿಂದ ಬೇಯುವ ಅನ್ನ ಮೊದಲಾದವುಗಳು

ಬ್ರಾಹ್ಮಣರಿಗೆ ಕೊಡುವದು ಪೂರ್ತವೆನಿಸುವದು.(ವ್ಯಾಸತತ್ತ್ವಜ್ಞರು)ಇವು ಕಾಮ್ಯವಾದರೆ ಪ್ರವೃತ್ತವೆನಿಸುವವು. ಈ ಇಷ್ಟಾಪೂರ್ತಗಳು ಸಂಸಾರಕಾರಕಗಳು ಮೋಕ್ಷಕ್ಕಲ್ಲ. ಶ್ರೀಸತ್ಯಧರ್ಮರ ಪ್ರಕಾರ ದ್ರವ್ಯಸೂಕ್ಷ್ಮವಿಪಾಕಶ್ಚ ಎಂದು ಪಾಠ. **ದ್ರವ್ಯಸ್ಯ** ಚರು ಮೊದಲಾದವುಗಳ ಸೂಕ್ಷ್ಮವಾದ ವಿಪಾಕ ಎಂದರೆ ದೇಹಾರಂಭಕ ದ್ರವ್ಯವು. ಬೇರೆಯದಕ್ಕೆ ಉಪಯೋಗಿಯಾದ್ದದ್ದು ಊಷ್ಮವಿಪಾಕವು ಇವು ಪೂರ್ತಗಳೇ. ಯಾವ ದಾರಿಯಿಂದ ಹೋಗುವನು ಯಾವ ದಾರಿಯಿಂದ ಪುನಃ ಸಂಸಾರಕ್ಕೆ ಬರುವನು ಎಂದರೆ ಹೇಳುವರು. ಧೂಮ ಮೊದಲಾದ ಶಬ್ದಗಳಿಂದ ಆ ಆ ಶಬ್ದವಾಚ್ಯ ಆ ಆ ವಸ್ತು ಅಭಿಮಾನಿ ದೇವತೆಗಳನ್ನು ತೆಗೆದುಕೊಳ್ಳಬೇಕು. **ಧೂಮ** ಧೂಮಾಭಿಮಾನಿ ದೇವತೆ ಅದರಂತೆ ರಾತ್ರಿ **ಅಪಕ್ಷಯ** ಕೃಷ್ಣಪಕ್ಷ **ಅಯನಂ ದಕ್ಷಿಣಂ** ದಕ್ಷಿಣಾಯನಾಭಿಮಾನಿ **ಸೋಮ** ಚಂದ್ರ **ದರ್ಶಃ** ಅಮಾದೇವತಾ ಈ ದೇವತೆಗಳ ಲೋಕವನ್ನು ಹೊಂದುತ್ತಾನೆ. ಅವನು ಈ ಲೋಕಕ್ಕೆ ಬರುವ ರೀತಿಯನ್ನು ಹೇಳುತ್ತಾರೆ **ಓಷವೀರುಧಃ** ಭತ್ತ ಮೊದಲಾದ ಧಾನ್ಯಗಳು ಬಳ್ಳಿ ಮೊದಲಾದವು. ||೫೦||

**ಅನ್ನಂ ರೇತಃ ಇತಿ ಕ್ಷ್ಮೇಶ ಪಿತೃಯಾನಂ ಪುನರ್ಭವಃ ।**
**ಏಕೈಕಸ್ಯಾನುಪೂರ್ವಾಚ್ಚ ಭೂತ್ವಾ ಭೂತ್ವೇಹ ಜಾಯತೇ ||೫೧||**

**ಕ್ಷ್ಮೇಶ** ರಾಜನೇ ಪಿತೃಯಾನದಿಂದ ಹೊಂದುವರು ಮೋಡ ಮಳೆಯ ಮೂಲಕ ಭೂಮಿಗೆ ಬಂದು ಧಾನ್ಯ, ಬಳ್ಳಿ, ಅನ್ನ ಮತ್ತು ರೇತಸ್ಸು ಇವುಗಳಾಗಿ ಅನ್ನಾಗಿ ತಂದೆಯನ್ನು ಪ್ರವೇಶಿಸಿ ರೇತೋರೂಪದಿಂದ ತಾಯಿಯನ್ನು ಹೊಂದಿ **ಪುನರ್ಭವತಿ** ಮತ್ತೆ ಮತ್ತೆ ಹುಟ್ಟುವನು **ಅನುಪೂರ್ವಾತ್** ಕ್ರಮವಾಗಿ ಏಕೈಕಸ್ಯ ಭೂತ್ವಾ ಭೂತ್ವಾ ಇಹ ಜಾಯತೇ ಎಂದು. ಕೊನೆಯಲ್ಲಿ ಇಲ್ಲಿ ಹುಟ್ಟುವನು. ||೫೧||

ವಿಶೇಷ ಃ- ವೃಷ್ಟ್ಯಾದಿ ದ್ವಾರಾ ಭೂಮಿಗೆ ಬಂದು, ಓಷಧಿ ಮುಂತಾದವು-ಗಳಾಗುತ್ತಾನೆ. 'ಅಗ್ನಿರ್ಜ್ಯೋತಿರಹಃ ಶುಕ್ಲಃ ಷಾಣ್ಮಾಸಾ ಉತ್ತರಾಯಣಂ । ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ । ಧೂಮೋ ರಾತ್ರಿಸ್ತಥಾ ಕೃಷ್ಣಷಣ್ಮಾಸಾ ದಕ್ಷಿಣಾಯನಮ್ । ತತ್ರ ಚಾಂದ್ರಮಾಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ'। ಇದೇ ಮೊದಲಾಗಿ ಗೀತಾಭಾಷ್ಯದಲ್ಲಿ ಅಗ್ನ್ಯಾದಿಗಳನ್ನು ಹೇಳುವದರಿಂದ 'ಜ್ಯೋತಿಃ ಅರ್ಚಿಃ ತೇ ಅರ್ಚಿಷಮಭಿಸಂಭವಂತಿ' ಎಂದು ಶ್ರುತಿ ಇದೆ. ತಥಾ ಚ ನಾರದೀಯೇ ಎಂದಾರಂಭಿಸಿ 'ತಚ್ಚಾಹ ಸ್ಕಾಂದೇ । ಸ್ಮೃತೀರ್ಜ್ಞಾತ್ವಾ ತು ಸೋಪಾಯೇ ಅನುಷ್ಠಾಯ ಚ ಸಾಧನಂ । ನ ಕಶ್ಚಿನ್ಮೋಹಮಾಪ್ನೋತಿ ನ ಚಾನ್ಯಾ ತತ್ರ ವೈ ಗತಿಃ' ಎಂಬಲ್ಲಿವರೆಗಿನ ಗ್ರಂಥದಿಂದ 'ತಥಾ ಕುತಃ ಇತ್ಯತ ಆಹ ಅಗ್ನ್ಯಾದೇರಿತಿ' ಎಂದಾರಂಭಿಸಿ 'ಅನ್ಯಭಗವತ್ಪ್ರಾಪ್ತೇ' ಎಂಬಲ್ಲಿವರೆಗಿನ

ಪ್ರಮೇಯದೀಪಿಕೆಯಿಂದಲೂ ಇಲ್ಲಿ ಹೇಳದಿರುವದನ್ನು ತೆಗೆದುಕೊಳ್ಳಬೇಕು ಎಂಬುದು ತಿಳಿಯಬೇಕು. ಯದ್ಯಪಿ ಮೂಲದಲ್ಲಿ 'ಧೂಮೋ' ಎಂದು ಹೇಳಿದ್ದರ ಸಂವಾದಕ್ಕಾಗಿ 'ಧೂಮೋ ರಾತ್ರಿಃ' ಮುಂತಾಗಿ ಧೂಮರಾತ್ರಿಗಳ ಸಂಗತಿಯನ್ನು ಪ್ರತಿಪಾದಿಸುವ ಅಂಶವನ್ನೇ ಗೀತಾಭಾಷ್ಯದಲ್ಲಿ ಟೀಕಾದಲ್ಲಿ ಹೇಳಿದ್ದನ್ನು ಉದಾಹರಿಸಬೇಕು. ಆದರೂ 'ಶುಕ್ಲಃ' ಮುಂತಾಗಿ ಅನಾವೃತ್ತಿಗತಿಪ್ರತಿಪಾದಕ ಅಂಶೋದಾಹರಣವು ಮುಂದೆ ಉಪಯೋಗವಾಗುವುದೆಂದು ಸಂಕಲನ ಮಾಡಿ ಹೇಳಿದ್ದನ್ನು ಉದಾಹರಿಸಿದೆ ಎಂದು ತಿಳಿಯಬೇಕು. ಅಭ್ರಮೇಘಾದಿಗಳನ್ನು ತೆಗೆದುಕೊಳ್ಳಬೇಕು. ಈ ಪ್ರಮಾಣಗಳಿಂದ ಮಾರ್ಗಗಳನ್ನು ತಿಳಿಯಬೇಕು.

'ಅಥ ಯ ಇಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ' ಎಂದಾರಂಭಿಸಿ 'ಯೋ ಯೋ ಅನಮತ್ತಿ ಯೋ ರೇತಃ ಸಿಂಚತಿ ತದ್ರೂಪ ಏವ ಭವತಿ' ಮುಂತಾಗಿ ವಿವರಿಸುವುದು. ಆನುಪೂರ್ವಿಯನ್ನು ಅನುಸಂಧಾನ ಮಾಡಬೇಕು. ಹೆಚ್ಚಿನ ವಿಸ್ತಾರ 'ತದ್ಯ ಇತ್ಥಂ ವಿದುರ್ಯೇ ಚೇಮೇ' ಎಂದಾರಂಭಿಸಿ ಛಾಂದೋಗ್ಯ ಐದನೇ ಪ್ರಪಾಠಕ ಹಾಗೂ ಅದರ ಭಾಷ್ಯದಲ್ಲಿ ಹೇಳಿದ್ದನ್ನು ತಿಳಿಯಬೇಕು. ॥೫೧॥

**ನಿಷೇಕಾದಿಸ್ಮಶಾನಾಂತೈಃ ಸಂಸ್ಕಾರೈಃ ಸಂಸ್ಕೃತೋ ದ್ವಿಜಃ ।**
**ಇಂದ್ರಿಯೇಷು ಕ್ರಿಯಾಯಜ್ಞಾನ್ ಜ್ಞಾನದೀಪೇಷು ಜುಹ್ವತಿ ॥೫೨॥**

**ಇಂದ್ರಿಯಾಣಿ ಮನಸ್ಯೇವಂ ವಾಚಿ ವೈಕಾರಿಕಂ ಮನಃ ।**
**ತಾಂ ತು ವರ್ಣಸಮಾಮ್ನಾಯೇ ತಮೋಂಕಾರೇ ಸ್ವರೇ ನ್ಯಸೇತ್ ।**
**ಓಂಕಾರಂ ಬಿಂದುನಾದೇ ತು ತಂ ತು ಪ್ರಾಣೇ ಮಹತ್ಯಮುಮ್॥೫೩॥**

**ನಿಷೇಕಾದಿ** ರೇತಸ್ಸೇಚನ(ಗರ್ಭಾಧಾನ)ಮೊದಲಾದ ಸ್ಮಶಾನದವರೆಗಿನ ಸಂಸ್ಕಾರಗಳಿಂದ ಸಂಸ್ಕೃತನಾದ **ದ್ವಿಜಃ** ಬ್ರಾಹ್ಮಣನು **ಜಾಯೇತ** ಹುಟ್ಟುವನು ಎಂದನ್ವಯ. ಶ್ರೀಸತ್ಯಧರ್ಮರ ಪ್ರಕಾರ ೫೨ನೇ ಶ್ಲೋಕದ ಪೂರ್ವಾರ್ಧಕ್ಕೆ ಜಾಯತೇ ಎಂಬ ಹಿಂದಿನ ಶ್ಲೋಕದಿಂದ ಅನ್ವಯ ಮಾಡಲಾಗಿದೆ. ವಿಜಯಧ್ವಜರ ಪ್ರಕಾರ ಹೀಗೆ ಅವತಾರಿಕಾರ್ಥ. 'ತದ್ಯ ಇಹ ರಮಣೀಯಚರಣಾ ಅಭ್ಯಾಸೋ ಹ ಯತೆ ರಮಣೀಯಾಂ ಯೋನಿಮಾಪದ್ಯಂತ ಇತಿ'। ಇವೇ ಮೊದಲಾದ ವಾಕ್ಯಗಳ ಅಭಿಪ್ರಾಯವನ್ನು ತಿಳಿಸುತ್ತಾರೆ ಎಂದು ಅವತಾರಿಕಾ.

ಬ್ರಾಹ್ಮಣನು ಹೋಮಮಾಡುವನು ಎಂದನ್ವಯ ಹೇಳಿರುವರು. ಹಿಂದೆ 'ಪ್ರವೃತ್ತಂ ಚ ನಿವೃತ್ತಂ ಚ' ಎಂದು ಪ್ರಕೃತವಾದ ಪ್ರವೃತ್ತಕರ್ಮ. ಅದರಿಂದ

ಹೊಂದುವ ಫಲ ಪಿತೃಯಾನವನ್ನು ಮತ್ತು ಪುನರಾವೃತ್ತಿಯನ್ನು ಹೇಳಿ ನಿವೃತ್ತಿಕರ್ಮ ಆದರಿಂದ ಹೊಂದುವ ದೇವಯಾನ ಅಪರಪರ್ಯಾಯವಾದ 'ಅರ್ಚಿರಾದಿನಾ ತತ್ಪ್ರಥಿತೇಃ' ಎಂಬ ಸೂತ್ರದಲ್ಲಿ ಹೇಳಿದೆ. ಅರ್ಚಿರಾದಿಮಾರ್ಗ ಅಭಿಮಾನಿದೇವತೆಗಳ ಕ್ರಮವನ್ನು ಹೇಳಲು ಮನಸ್ಸುಳ್ಳವರಾಗಿ ಮಾರ್ಗಕ್ಕೆ ಅನುಕೂಲ ಸಾಧನವನ್ನು ಈ ಶ್ಲೋಕದಲ್ಲಿ ಹೇಳುವರು.

**ಕ್ರಿಯಾಯಜ್ಞಾನ್** ಕ್ರಿಯಾ ಜ್ಯೋತಿಷ್ಟೋಮಾದಿ ಕ್ರಿಯೆಗಳು ಅವುಗಳಿದ್ದು **ಇಜ್ಯಂತೇ ಇತಿ ಯಜ್ಞಃ** ಪೂಜಿಸಲ್ಪಡುವದರಿಂದ ಯಜ್ಞರೆನಿಸುವ ಕ್ರಿಯಾಭಿಮಾನಿ ದೇವತೆಗಳನ್ನು **ಇಂದ್ರಿಯೇಷು ನದೀಷೇಷು** ಜ್ಞಾನವನ್ನು ಹುಟ್ಟಿಸುವ ಜ್ಞಾನವೇ ದೀಪವಾಗಿವುಳ್ಳ **ಜ್ಞಾನಂ** ಸ್ವರೂಪಜ್ಞಾನವನ್ನು ದೀಪಯಂತೀ ಯತ್ ವೃತ್ತಿರೂಪಂ ಅಂದರೆ ಉದ್ದೀಪನಗೊಳಿಸುವ ವೃತ್ತಿಜ್ಞಾನವನ್ನು ಹುಟ್ಟಿಸುವ ಇಂದ್ರಿಯಾಭಿಮಾನಿ ದೇವತೆಗಳಲ್ಲಿ **ಜುಹ್ವತಿ** ಅವರ ಅನುಸ್ಮರಣವೆಂಬ ಹೋಮಮಾಡುವರು. ಕ್ರಿಯಾಭಿಮಾನಿಗಳು ಇಂದ್ರಿಯಾಭಿಮಾನಿಗಳ ಅಧೀನವೆಂದು ಸ್ಮರಿಸುವರೆಂದರ್ಥ. **ಇಂದ್ರಿಯಾಣಿ** ಇಂದ್ರಿಯಾಭಿಮಾನಿದೇವತೆಗಳನ್ನು **ಮನಸಿ** ಮನೋಭಿಮಾನಿ ಇಂದ್ರನಲ್ಲಿ **ಏವಂ** ಹಿಂದೆ ಹೇಳಿದಂತೆ ಸ್ಮರಿಸುವರು **ವೈಕಾರಿಕಂ ಮನಃ** ವೈಕಾರಿಕ ಅಂಹಕಾರೋಪಚಿತ ಮನೋಭಿಮಾನಿ ಇಂದ್ರನನ್ನು ವಿವಿಧಾಕಾರ ಕಲ್ಪಕವಾದ್ದರಿಂದ ವೈಕಾರಿಕ ಎಂದೂ ಅರ್ಥ ಮಾಡಿರುವರು. **ವಾಚಿ** ವೇದಾಭಿಮಾನಿ ಉಮಾಳ ಅಧೀನವೆಂದು ತಿಳಿಯುವನು. **ತಾಂ ತು** ಆ ಪಾರ್ವತಿಯನ್ನು **ವರ್ಣಸಮಾಮ್ನಾಯೇ** ಪ್ರಣವದ ಅವಯವಗಳಾದ ಅಕಾರ ಉಕಾರ ಮಕಾರಗಳಿಗೆ ಅಭಿಮಾನಿಯಾದ ರುದ್ರನ ಅಧೀನವೆಂದು ತಿಳಿಯುವನು. 'ತ್ರಯೋ ವರ್ಣಾ ವ್ಯಜಾಯಂತ ಅಕಾರೋಕಾರಮಕಾರ ಇತಿ' ಎಂದು ಶ್ರುತಿಯಲ್ಲಿ ಹೇಳಿದೆ. ತು ಶಬ್ದದಿಂದ ಇವರಿಬ್ಬರು ಗಂಡಹೆಂಡಿರು ಎಂಬ ವಿಶೇಷವನ್ನು ತಿಳಿಸುವರು. **ತಂ** ರುದ್ರದೇವರನ್ನು **ಓಂಕಾರೇ ಸ್ವರೇ ನ್ಯಸೇತ್** ಅವಿಶ್ಲಿಷ್ಟ(ಸಂಶ್ಲಿಷ್ಟಂ)ವಾದ ಓಂಕಾರಾಭಿಮಾನಿಯಾದ ಸಂ ಪರಮಾತ್ಮನಂ ರಮಯತೀತಿ ಸರಃ. ಪರಮಾತ್ಮನನ್ನು ಸಂತೋಷಪಡಿಸುವ ಶೇಷದೇವರ ಅಧೀನವೆಂದು ತಿಳಿಯಬೇಕು. ತುಶಬ್ದವು ವಾಕ್, ವರ್ಣಸಮಾಮ್ನಾ-ಯಾರ್ಥರಾದ ಭವಾನಿಭವರಿಗೆ ಭಾರ್ಯಾಭರ್ತೃಭಾವ ತಿಳಿಸಿದಂತೆ ಅಹಿಭೂಷಣ (ರುದ್ರ) ಅಹಿಪ(ಶೇಷ)ರಿಗೆ ಸಮತೆಯು ಸಮ್ಮತವಾಗಿದ್ದರೂ ಶೇಷರಾಗಿ ಮುಕ್ತಿಪಡೆಯುವರೆಂಬ ವಿಶೇಷವನ್ನು ತಿಳಿಸುವದು. **ಓಂಕಾರಂ** ಓಂಕಾರಾಭಿಮಾನಿ ಶೇಷನನ್ನು **ಬಿಂದುನಾದೇ** (ಇಲ್ಲಿ ಸಪ್ತಮಿಗೆ ಸುಪಾಸುಲುಕ್ ಎಂಬುದರಿಂದ ಲೋಪವಾಗಿದೆ.) **ಬಿಂದೌ** ಬಿಂದುವಿಗೆ ಅಭಿಮಾನಿಯಾದ ಸರಸ್ವತಿಯಲ್ಲಿ **ತಾಂ** ಅವಳನ್ನು **ನಾದೇ** ನಾದರೂಪಳಾದ ಸರಸ್ವತಿಯಲ್ಲಿ ಹೋಮಿಸುವನು. ಅಧೀನವೆಂದು

ತಿಳಿಯುವನು. ಇಲ್ಲಿ ಬಿಂದುಶಬ್ದದ ವಿಭಕ್ತಿಲೋಪ. ತಾಂ ಎಂದು ಮಧ್ಯೇ ಅಧ್ಯಾಹಾರವು. ಸರಸ್ವತಿಯೇ ಎರಡಕ್ಕೂ ಅಭಿಮಾನಿ ಎಂಬುದು. ಅದರಲ್ಲಿಯೂ ನಾದಾಭಿಮಾನಿನಿಗೆ ಜನಕತ್ವ ಮುಂತಾದವು ಮುಂದೆ ಹೇಳುವ ತಾತ್ಪರ್ಯದಿಂದ ತಿಳಿಯುವವು.(ಎಂದು ಮಂದನಂದಿನೀಕಾರರು).

ಯದ್ಯಪಿ ಕರ್ಮನಿರ್ಣಯಟೀಕೆಯಲ್ಲಿ ಬಿಂದು ಮತ್ತು ನಾದ ಎರಡೂ ಬೇರೆ ವರ್ಣಗಳು ಎಂದು ವರ್ಣಾತ್ಮಕತ್ವವನ್ನು ಕೂಡಿಸಲು ಹೇಳಿದೆ. ಆದರೂ ಇಲ್ಲಿ ಏಕಾಭಿಮಾನಿತ್ವ ಎಂಬ ಉಪಾಯದಿಂದ ತಾತ್ಪರ್ಯದಲ್ಲಿ ಬಿಂದುರೂಪ ಸರಸ್ವತಿಯಲ್ಲಿ ಮೂಲಸ್ಥನಾದರೂ **ಬಿಂದೌ** ಸರಸ್ವತಿಯಲ್ಲಿ **ನಾದೇ** ಭಾರತಿಯಲ್ಲಿ ಏಕೀಭಾವಸ್ಥಿತಿಯನ್ನು ತಿಳಿಯಬೇಕು. ಆದ್ದರಿಂದಲೇ ಬಿಂದುರೂಪೆ ಎಂದಿರುವರು. (ತಂತ್ರಸಾರದಲ್ಲಿ 'ವಿಶ್ವ ತೈಜಸ ಪ್ರಾಜ್ಞ ತುರ್ಯಾತ್ಮಾಂತರಾತ್ಮ ಪರಮಾತ್ಮ-ಜ್ಞಾನಾತ್ಮಕಾನಾಂ ಕೃಷ್ಣೋ ರಾಮೋ ನೃಸಿಂಹಶ್ಚ ವರಾಹೋ ವಿಷ್ಣುರೇವ ಚ । ಪರಂ ಜ್ಯೋತಿಪರಂ ಬ್ರಹ್ಮ ವಾಸುದೇವ ಇತಿ ಕ್ರಮಾತ್'। 'ಅಕಾರಾದೇಸ್ತಥಾ ಶಾಂತಾತಿಶಾದೇಶ್ಚ ದೇವತಾಃ' ಎಂದು ಪ್ರಣವಕಲ್ಪದಲ್ಲಿ ಕೃಷ್ಣಾದಿಗಳಿಗೆ ಅನಭಿಮಾನಿಮುಖ್ಯದೇವತಾ ಎಂದು ಹೇಳಿದೆ ಎಂಬ ವಿಶೇಷಸೂಚಕ ತುಶಬ್ದವೆಂದು ತಿಳಿಯಬೇಕು.

**ತಂ** ನಾದಶಬ್ದಪುಲ್ಲಿಂಗವಾದ್ದರಿಂದ ತಂ ಎಂದಿದ್ದಾರೆ. ನಾದಾಭಿಮಾನಿ ಸರಸ್ವತಿಯನ್ನು **ಪ್ರಾಣೇ** ಬ್ರಹ್ಮನಲ್ಲಿ **ಅಮುಂ** ಬ್ರಹ್ಮನನ್ನು **ಮಹತಿ** ಪರಮಾತ್ಮನಲ್ಲಿ ಇನ್ನು ಪ್ರಾಣಶಬ್ದದಿಂದ ಮುಖ್ಯವಾಯುವನ್ನು ಸ್ವೀಕರಿಸಿದರೆ ಬಿಂದು ನಾದ ಉಭಯಾಭಿಮಾನಿ ರೂಪಗಳನ್ನು ಮಹತಿ ಎಂಬುದಕ್ಕೆ ಆವೃತ್ತಿಯನ್ನು ಬಿಂದು ಅಭಿಮಾನಿಗೆ ಲಕ್ಷ್ಮೀಯಲ್ಲಿ ಪರಬ್ರಹ್ಮನಲ್ಲಿ ಎಂದರ್ಥ ತಿಳಿಯಬೇಕು. (ವ್ಯಾಸತತಜ್ಞತೀರ್ಥರು)

**ಸತ್ಯಧರ್ಮತೀರ್ಥರ ಪ್ರಕಾರ, ತಂ** ನಾದಾಭಿಮಾನಿನಿಯಾದ ಸರಸ್ವತಿಯನ್ನು ಭಾರತಿಯನ್ನು **ಸ್ವರೇ ಪ್ರಾಣೇ** ಸ್ವರನಾಮಕಪ್ರಾಣನಲ್ಲಿ ಎಂದರ್ಥ. ಇಲ್ಲಿ ಕೇವಲ ಸ್ವರೇ ಎಂದರೆ ಸ್ವರತೇ ಸ್ವರಃ ಎಂದು 'ವರ್ಣಃ ಸ್ವರಃ' ಎಂಬ ತೈತ್ತಿರೀಯ ಉಪನಿಷದ್ಭಾಷ್ಯದಲ್ಲಿ ಹೇಳಿರುವದರಿಂದ ಶ್ರೀಹರಿಯಾಗುವನು. ಅದು ಬೇಡವೆಂದು 'ಪ್ರಾಣೇ' ಎಂದಿರುವರು. 'ಉಷ್ಣೋಽಸೌ ಸ್ವರಃ ಇತ್ಯಾಚಕ್ಷತೇ । ಪ್ರಾಣಸರಃ' ಎಂಬ ಛಾಂದೋಗ್ಯಭಾಷ್ಯದಲ್ಲಿ 'ಸ್ವರತೇಽಸ್ತು ಸ್ವರೋ ವಿಷ್ಣುಃ ತದ್ರತೇ ವಾಯುರುಚ್ಯತೇ । ವಾಯುಂ ಸರ್ವೇಶ್ವರಂ ವಿಷ್ಣುಂ ಓಮಾಖ್ಯಂ ಸಮುಪಾಸಿರೇ । ಸ್ವೇ ವಿಷ್ಣೌ ರಮಯತ್ಯೇನಂ ಜೀವಂ ತಸ್ಮಾತ್ ಸ್ವರಃ ಸ್ಮೃತಃ ।' ಎಂದು ಹೇಳಿದೆ. 'ಕೇಶವಃ ಸ್ವಃ

ಸ್ವತಂತ್ರತ್ವಾತ್ ತದ್ರತೇರ್ಮಾರುತಃ ಸ್ವರಃ'। 'ಸ ಏವಾನ್ ಬ್ರಹ್ಮ ಗಮಯತಿ' ಎಂದು ಶ್ರುತಿ ಇದೆ. ಅಂದರೆ ಮುಖ್ಯ ಅಮೃತತ್ವ(ಸ್ವತಂತ್ರನಿತ್ಯಮುಕ್ತತ್ವ) ಶ್ರೀಹರಿಗೆ, ಅಮುಖ್ಯ ಅಮೃತತ್ವ ('ಅತಿರೋಹಿತವಿಜ್ಞಾನಾದ್ವಾಯುರಪ್ಯಮೃತಃ ಸ್ಮೃತಃ' ಎಂದು ಹೇಳಿದೆ) ವಾಯುದೇವರಿಗೆ ಇದ್ದಂತೆ ಸ್ವತಂತ್ರ ನಿಮಿತ್ತಕ ಸರಸವಾದ ಸ್ವರಶಬ್ದವಾಚ್ಯತ್ವ ಹರಿಗೆ ಇದ್ದರೂ ಸ್ವತಂತ್ರಭಗವದ್ರೂಪತಾರೂಪಸ್ವರತಾಸ್ವರಶಬ್ದವಾಚ್ಯತಾ ವಾಯುವಿಗೂ ಇದೆ ಎಂದು ತಿಳಿಯಬೇಕು. ಈ ರೀತಿಯಾಗಿ ಹಿಂದಿರುವ ಸ್ವರಶಬ್ದವನ್ನು ಸೆಳೆದುಕೊಂಡು ಪ್ರಾಣಪದಕ್ಕೆ ವಿಶೇಷಣ ಮಾಡಿ ಅನ್ವಯ-ಮಾಡಿದ್ದರಿಂದ ಹಿಂದೇ 'ಓಂಕಾರೇ' ಎಂಬುದರಿಂದಲೇ ಪ್ರಕೃತಪರ್ಯವಸಾನ-ವಾಗುತ್ತಿರಲು ಸ್ವರೇ ಎಂಬುದೇ ಹೆಚ್ಚು ಎಂಬ ಶಂಕೆಯನ್ನು ಪರಿಹರಿಸಿದಂತಾಯಿತು. (ಈ ಪಕ್ಷದಲ್ಲಿ ಪ್ರಾಣಪದಕೃತ್ಯ ಹೇಳಿದೆ.)

**ಮಹತಿ** ಪರಮಾತ್ಮನಲ್ಲಿ 'ಅಮುಂ ಪ್ರಾಣಂ' ಎಂಬುದು ಅನ್ವಯ **ಓಂಕಾರಂ** ಶೇಷನನ್ನು **ಬಿಂದೌ** ಸರಸ್ವತಿಯಲ್ಲಿ **ತಾಂ** ಸರಸ್ವತಿಯನ್ನು **ನಾದೇ** ಭಾರತಿಯಲ್ಲಿ **ತಾಂ** ಭಾರತಿಯನ್ನು **ಸ್ವರೇ** ವಾಯುವಿನಲ್ಲಿ **ಅಮುಂ** ವಾಯುವನ್ನು **ಮಹತಿ** ಬ್ರಹ್ಮನಲ್ಲಿ **ತಂ** ಬ್ರಹ್ಮನನ್ನು **ಮಹತಿ**(ಆವೃತ್ತಿ)ಅಕ್ಷರ ಪುರುಷಳಾದ ಶ್ರೀತತ್ತ್ವದಲ್ಲಿ **ಅಮುಂ** ಪುರುಷನನ್ನು **ಪ್ರಾಣೇ ಸ್ವರೇ ವಾ** ಅಂದರೆ ವಿಷ್ಣುವಿನಲ್ಲಿ **ನ್ಯಸೇತ್** ಅಧೀನವೆಂದು ತಿಳಿಯಬೇಕು ಎಂದು ಯೋಜಿಸುವರು. 'ತಂ ವಾಯೌ' ಎಂದು ಪ್ರಮಾಣದಲ್ಲಿರುವ ವಾಯುಪದದಿಂದ ಛಾಂದೋಗ್ಯಭಾಷ್ಯದಲ್ಲಿರುವ ವಾಯುಪದ ಅನುಕಾರರೂಪವಾಗಿ ಸ್ವರೇ ಎಂಬುದನ್ನು ಆಯೋಜಿಸಿ ಉತ್ಕರ್ಷಮಾಡಿ ಯೋಜಿಸುವದು ಆಚಾರ್ಯರಿಗೆ ಸಮ್ಮತವೆಂದು ಸಂತೋಷಿಸಬೇಕು ಎನ್ನುತ್ತಾರೆ ಸತ್ಯಧರ್ಮರು. ।।೫೨,೫೩।।

'ಇಂದ್ರಿಯೇಷು ಕ್ರಿಯಾಯಜ್ಞಾನ್' ಮುಂತಾದ ಎರಡು ಶ್ಲೋಕಗಳಲ್ಲಿ ಜ್ಯೋತಿಷ್ಟೋಮಾದಿಗಳಿಗೆ ಇಂದ್ರಿಯಗಳಲ್ಲಿ ಹೋಮ ಹೇಳುತ್ತದೆ ಅದು ಸಾಧ್ಯವಿಲ್ಲ. ಹಾಗೂ ವಾಗಾದಿಗಳಿಗೆ ಓಂಕಾರದಲ್ಲಿ ಸ್ಥಾಪನ ಹೇಳುತ್ತದೆ ಇದೂ ಅಸಂಭಾವಿತವೆ. ಆದ್ದರಿಂದ ಹೋಮನ್ಯಾಸ ಶಬ್ದಾರ್ಥವನ್ನು ಪ್ರಮಾಣದಿಂದ ಹೇಳಿ ಅಸಂಭಾವನಾ ಶಂಕೆಯನ್ನು ಪರಿಹರಿಸುತ್ತ ಇಂದ್ರಿಯಾದಿಪದಗಳು ಜಡಬೋಧಕಗಳಲ್ಲವೆಂದು ಹೇಳುವರು-

**... ತಾತ್ಪರ್ಯ ...**

**ಯಜ್ಞಾಭಿಮಾನಿನೋ ದೇವಾನ್ ಸ್ಮರಂತೀಂದ್ರಿಯಮಾನಿನಾಮ್ ।**
**ವಶಗಾಂಸ್ತಾನ್ ಮನೋಮಾನಿಸುರೇಂದ್ರಸ್ಯ ವಶೇ ಸ್ಥಿತಾನ್ ।।**

**ವೇದಾತ್ಮಿಕಾಯಾಃ ಪಾರ್ವತ್ಯಾಸ್ತಾಂ ರುದ್ರಸ್ಯ ವಶೇ ಸ್ಥಿತಾಮ್ ।**

**ವರ್ಣತ್ರಯಾತ್ಮಕಂ ರುದ್ರಂ ಶೇಷೇ ತು ಪ್ರಣವಾತ್ಮಕೇ ॥**

**ಬಿಂದುರೂಪಸರಸ್ವತ್ಯಾಂ ತಂ ತಾಂ ತಸ್ಯಾಂ ಪುನರ್ನ್ಯಸೇತ್ ।**
**ಮೂಲಸ್ಥಾನಾದರೂಪಾಯಾಂ ತಾಂ ವಾಯೌ ತಂ ಜನಾರ್ದನೇ ॥**
**ಪ್ರಕೃತಾವಥ ವಾ ಪ್ರಾಣಂ ತಾಮೇವ ಪುರುಷೋತ್ತಮಃ ॥**

**ಇತಿ ಬ್ರಹ್ಮತರ್ಕೇ ॥ ೫೨,೫೩,೫೪ ॥**

ಯಜ್ಞಾಭಿಮಾನಿದೇವತೆಗಳನ್ನು ಇಂದ್ರಿಯಾಭಿಮಾನಿದೇವತೆಗಳ ಅಧೀನರೆಂದು, ಅವರನ್ನು ಮನೋಭಿಮಾನಿ ಇಂದ್ರನ ಅಧೀನರೆಂದು, ಆ ಇಂದ್ರನನ್ನು ವೇದಗಳಿಗೆ ಅಭಿಮಾನಿನಿಯಾದ ಪಾರ್ವತಿಯ ಅಧೀನನೆಂದು, ಆ ಪಾರ್ವತಿಯನ್ನು ರುದ್ರನ ಅಧೀನಳೆಂದು, ಅಕಾರ ಉಕಾರ ಮಕಾರಗಳಿಗೆ ಅಭಿಮಾನಿಯಾದ ಆ ರುದ್ರನನ್ನು ಪ್ರಣವಕ್ಕೆ ಅಭಿಮಾನಿಯಾದ ಶೇಷನ ಅಧೀನನೆಂದು, ಆ ಶೇಷನನ್ನು ಬಿಂದುವರ್ಣಕ್ಕೆ ಅಭಿಮಾನಿನಿಯಾದ ಸರಸ್ವತಿಯ ರೂಪವಿಶೇಷದ ಅಧೀನನೆಂದು, ಆ ಸರಸ್ವತಿಯನ್ನು ಮೂಲರೂಪದಿಂದಿರುವ ನಾದಾಭಿಮಾನಿನಿಯಾದ ಬ್ರಹ್ಮಪತಿಯಾದ ಪ್ರಕೃತಿ ನಾಮಕಸರಸ್ವತಿಯ ಅಧೀನಳೆಂದೂ, ಆ ಸರಸ್ವತಿಯನ್ನು ಚತುರ್ಮುಖನ ಅಧೀನ ಳೆಂದು ಆ ಚತುರ್ಮುಖನನ್ನು ಸಂಕರ್ಷಣನಾಮಕ ಶ್ರೀಹರಿಯ ಅಧೀನನೆಂದು ಸ್ಮರಿಸಬೇಕು.

ಅಥವಾ ಮುಖ್ಯಪ್ರಾಣನನ್ನು ಲಕ್ಷ್ಮೀಯ ಅಧೀನನೆಂದು, ಆ ಲಕ್ಷ್ಮೀಯನ್ನು ಶ್ರೀಹರಿಯ ಅಧೀನಳೆಂದು ಚಿಂತಿಸಬೇಕು ಎಂದು ಬ್ರಹ್ಮತರ್ಕದಲ್ಲಿ ಹೇಳಿದೆ. ವಾಯುವೇ ಬ್ರಹ್ಮನು ಭಾರತಿಯೇ ಸರಸ್ವತೀ ಆದ್ದರಿಂದ ಲಯ ಚಿಂತನೆಯು ಇದೆ.

ಪ್ರತಿಯೊಬ್ಬರ ಹೆಸರು ತೆಗೆದುಕೊಳ್ಳುವದು ಇಂದ್ರಿಯಾಭಿಮಾನಿಗಳನ್ನು ಸ್ವೀಕರಿಸಿದ್ದು ಅಧೀನತ್ವ ಮಾತ್ರ ತಿಳಿಯುವದು. ಭಗವದ್ರೂಪಗಳಿಗೆ ಐಕ್ಯಾನುಸಂಧಾನ ಮಾಡುವದು. ಜ್ಞಾನೇಂದ್ರಿಯ ಸ್ವೀಕರಿಸಿದ್ದರಿಂದ ರುದ್ರನಿಗೆ ಶೇಷನಲ್ಲಿ ಲಯ ಹೇಳಿದ್ದರಿಂದ ಪಾರ್ವತಿ ರುದ್ರಾವಸ್ಥೆಯಲ್ಲಿರುವವರಿಗೆ ಲಯ ಅಸಂಭಾವಿತ-ವಾದ್ದರಿಂದ ಎರಡು ಪಕ್ಷಗಳನ್ನು ವ್ಯವಸ್ಥೆಯಿಂದ ತಿಳಿಯಬೇಕು. ವಾಯುಪಕ್ಷದಲ್ಲಿ ಪ್ರಾಣನಿಗೆ ಪ್ರಕೃತಿಯಲ್ಲಿ ಅವಳಿಗೆ ಪರಮಾತ್ಮನಲ್ಲಿ ಎಂದು ವ್ಯವಸ್ಥಿತ ವಿಕಲ್ಪವಿದು. 'ವಿಲೀನೋ ಹಿ ಪ್ರಕೃತೌ ಸಂಸಾರಮೇತಿ. ವಿಲೀನೋ ಹಿ ಪರಮೇ ಅಮೃತತ್ವಮೇತಿ' ಎಂದು ವ್ಯಾಖ್ಯಾನಿಸುವರು.

ಅರ್ಚಿರಾದಿಮಾರ್ಗದಿಂದ ಹೋಗುವವರಿಗೆ ಪ್ರಾಪ್ಯರಾದ ದೇವತೆಗಳನ್ನು ಹೇಳುವರು-

**ಅಗ್ನಿಃ ಸೂರ್ಯೋದಿವಾಃ ವಾಯುಃ ಶುಕ್ಲೋ ರಾಕೋತ್ತರ ಸ್ವರಾಟ್ ॥೫೪॥**

**ಅಗ್ನಿಃ** ಸೂರ್ಯಾಗ್ನಿಃ ಮತ್ತು ಸೂರ್ಯರು **ದಿವಾ** ದಿವಸಾಭಿಮಾನಿಯು ಅಗ್ನಿಜ್ಯೋತಿ ಎಂದು ಎರಡು ರೀತಿಯಾಗಿ ಅರ್ಚಿರ್ಲೋಕದಲ್ಲಿರುವ ಅಗ್ನಿಯು ಕ್ರಮವಾಗಿ ಪ್ರಾಪ್ಯನು ಅನಂತರ **ವಾಯುಃ** ಆತಿವಾಹಿಕ ವಾಯು(ಲೋಕ) ನಂತರ ಅಭಿಜಿತ್ ಅನಂತರ **ದಿವಾ** ದಿವಸಾಭಿಮಾನಿ **ಶುಕ್ಲಃ** ಶುಕ್ಲಪಕ್ಷಾಭಿಮಾನಿ ನಂತರ **ರಾಕಾ** ಪೂರ್ಣಿಮಾಸ್ಯಭಿಮಾನಿ ನಂತರ **ಉತ್ತರ** ಉತ್ತರಾಯಣಾಭಿಮಾನಿ ಅನಂತರ ಸಂವತ್ಸರ, ತಟಿತ್, ವರುಣ, ಪ್ರಜಾಪತಿ ಲೋಕಕ್ರಮವಾಗಿ ಸ್ವೀಕರಿಸಬೇಕು. ನಂತರ ಸೂರ್ಯ, ನಂತರ ಸೋಮ, ವೈಶ್ವಾನರ, ನಂತರ ಸ್ವರಾಟ್ ನಾಮಕ ಇಂದ್ರ ಇವರು ಪ್ರಾಪ್ಯರು.

ವಿಶೇಷ ಃ- ಈ ಶ್ಲೋಕದಲ್ಲಿ 'ಸ್ವರಾಟ್' ಶಬ್ದಕ್ಕೆ ಸ್ವೇನೈವ ರಾಜತೇ ಇತಿ ಎಂಬ ವ್ಯುತ್ಪತ್ತಿಯಿಂದ ಶ್ರೀಹರಿಯೆಂದರ್ಥವಾಗುವದು. ಇಂದ್ರ ಪರವಾದರೆ 'ಸ್ವರಾಣ್ಣಮುಚಿಸೂದನಃವ ಎಂಬ ಅಮರ ವ್ಯಾಖ್ಯಾನ ಅಮರ ಸುಧೆಯಲ್ಲಿ ಸ್ವಃ ಸ್ವರ್ಗಸ್ಯ ರಾಟ್ ಅಧಿಪಃ ಎಂದು 'ರೋರಿ' ಎಂಬುದರಿಂದ ದೀರ್ಘವಾಗಿ ಸ್ವಾರಾಟ್ ಎಂದಾಗಬೇಕು. ಸ್ವೇಷು ದೇವೇಷು ಆರಾಜತ ಎಂದು ಮಾಡಿದರೂ ಸ್ವಾರಾಟ್ ಎಂದೇ ಹೇಳಿರುವದರಿಂದ ಇಲ್ಲಿ ಹಾಗೆ ಹೇಳದಿರುವದರಿಂದ ಇಂದ್ರನ ಪ್ರಸಕ್ತಿಯೇ ಇಲ್ಲ ಎಂದು ಶಂಕೆ ಬಂದರೆ ಅದನ್ನು ಅನುವಾದ ಮಾಡಿ ವ್ಯಾಖ್ಯಾನಿಸುವರು-

**... ತಾತ್ಪರ್ಯ ...**

**ಸ್ವರಾಡಿಂದ್ರಃ ।**

ಸ್ವರಾಟ್ ಎಂದರೆ ಇಂದ್ರನು. ಅಮರದಲ್ಲಿರುವ ಸ್ವರಾಟ್ ಎಂಬುವದೇ ಒಳ್ಳೆಯ ಪಾಠ. ಆಗ ಸ್ವಃ ಸ್ವರ್ಗೇ ಆ ಅಟತೀತಿ ಸ್ವರಾಟ್ ।।೫೪।।

**ವಿಶ್ವೋಽಥ ತೈಜಸಃ ಪ್ರಾಜ್ಞಸ್ತುರ್ಯ ಆತ್ಮಾ ಸಮನ್ವಯಃ ।**
**ದೇವಯಾನಮಿದಂ ಪ್ರಾಹುರ್ಭೂತ್ವಾ ಭೂತ್ವಾಽನುಪೂರ್ವಶಃ ।**
**ಆತ್ಮಯಾಜ್ಯುಪಶಾಂತಾತ್ಮಾ ಹ್ಯಾತ್ಮಸ್ಥೋ ನ ನಿವರ್ತತೇ ।।೫೫।।**

**ಅಥ** ಇಂದ್ರಾನಂತರ **ಧ್ರುವಃ** ಧ್ರುವನನ್ನು ಅನಂತರ **ವಿಶ್ವಃ ತೈಜಸಃ ಪ್ರಾಜ್ಞಃ** ಭಗವಂತನಿಂದ ಭಿನ್ನರಾದ ವಿಶ್ವತೈಜಸಪ್ರಾಜ್ಞರೆಂಬ ಹೆಸರಿನ ದೇವತೆಗಳನ್ನು ಅನಂತರ **ಆತ್ಮಸಮನ್ವಯಃ** ಅನಿರುದ್ಧ ಪ್ರದ್ಯುಮ್ನ ಸಂಕರ್ಷಣರೆಂಬ ಭಗವದ್ಭಿನ್ನ ದೇವತೆಗಳನ್ನು (ಇವರು ದ್ಯುನಾಮಕಭಾರತೀಪುತ್ರರು)ಹೊಂದಿ ನಂತರ ದ್ಯುಲೋಕಾಭಿಮಾನಿನಿ ಭಾರತಿಯನ್ನು, ನಂತರ ಮುಖ್ಯವಾಯುವನ್ನು, ನಂತರ ಪರಮಾತ್ಮನನ್ನು ಹೊಂದುವನು. ನಂತರ ಬ್ರಹ್ಮದೇವರೊಡನೆ ಭಗವದುದರದಿಂದ ಹೊರಗೆ ಬಂದು ನಂತರ ನವಾವರಣವನ್ನು ದಾಟಿದನಂತರ ವಿಶ್ವತೈಜಸಪ್ರಾಜ್ಞತುರ್ಯರೆಂಬ

ಭಗವದ್ರೂಪಗಳನ್ನು ಹೊಂದುವನು. ನಂತರ ಅನಿರುದ್ಧನನ್ನು ಹೊಂದುವನು. 'ತತೋ ಅನಿರುದ್ಧದೇವೇಶಂ ಪ್ರದ್ಯುಮ್ನಂ ಚ ತತಃ ಪರಂ' ಮುಂತಾದ ಪ್ರಮಾಣಾಂತರದಿಂದ ತಿಳಿಯಬೇಕು. ಅನಂತರ **ಸಮನ್ವಯಃ** ಎಲ್ಲ ಅವತಾರಗಳಿಗೆ ಚೆನ್ನಾಗಿ ಆಧಾರನಾದ **ಆತ್ಮಾ** ವ್ಯಾಪ್ತನಾದ ನಾರಾಯಣನು ಅವನನ್ನು ಹೊಂದುವದು. ಇಲ್ಲಿ ಬ್ರಹ್ಮಾಂಡದ ಒಳಗೆ ವಿಶ್ವಾದಿ ಮೂರು ಅನಿರುದ್ಧಾದಿ ಮೂರರಂತೆ ತುರೀಯ ಮತ್ತು ವಾಸುದೇವ ಎಂಬ ಹೆಸರಿನ ದೇವತೆ ಭಗವದ್ಭಿನ್ನನಾದವನು ಇಲ್ಲವೆಂದು ತಿಳಿಯಬೇಕು. ಈ ವಿಷಯದಲ್ಲಿ 'ಉತ್ಕ್ರಾಂತಸ್ತು ಶರೀರಾತ್ ಸ್ವಾತ್ ಗಚ್ಛತ್ಯರ್ಚಿಷಮೇವ ತು' ಮುಂತಾದ ಭಾಷ್ಯೋದಾಹೃತ ಪ್ರಮಾಣವನ್ನು ತಿಳಿಯಬೇಕು **ಇದಂ** ಇದನ್ನು **ದೇವಯಾನಂ ಪ್ರಾಹುಃ** ದೇವಯಾನವೆಂದು ಪ್ರೇಕ್ಷಾವಂತರು ಹೇಳುವರು **ಆನುಪೂರ್ವಶಃ** ಕ್ರಮವಾಗಿ **ಭೂತ್ವಾ** ಸುಖಾದಿಗಳಿಂದ ಯುಕ್ತನಾಗಿ(ಮೇಲೆ ಮೇಲೆ ಹೋದಂತೆ) **ಆತ್ಮಯಾಜೀ** ತನ್ನಲ್ಲಿ ತಾನೇ ಭಗವಂತನನ್ನು ಪೂಜಿಸುವವನು **ಉಪಶಾಂತಾತ್ಮಾ** ಮತ್ತೆ ಸಂಸಾರಕ್ಕೆ ಬರಬೇಕೆಂಬ ಇಚ್ಛೆಯಿಲ್ಲದ ಪೂರ್ಣಾನಂದಸ್ವರೂಪನಾದ ಜೀವನು **ಆತ್ಮಸ್ಥಃ ಸನ್** ಮುಕ್ತನಾಗಿ **ನ ನಿವರ್ತತೇ** ಸಂಸಾರಕ್ಕೆ ಬರಲಾರನು ಅಥವಾ ಉಪಶಾಂತೇಷು ಆತ್ಮಾ ಮನಃ ಯಸ್ಯ ಸಃ ಎಂದಾಗಲಿ ವಿಷಯವಾಸನಾಶೂನ್ಯವಾದ್ದರಿಂದ ಉಪಶಾಂತಃ ಆತ್ಮಾ ಮನಃ ಯಸ್ಯ ಸಃ ಎಂದಾದರೂ ವಿಗ್ರಹ ಮಾಡಬಹುದು **ಆತ್ಮಸ್ಥಃ** ಭಗವಂತನಲ್ಲಿರುವವನು ನ ನಿವರ್ತತೇ ಎಂದು ಶ್ಲೋಕಾರ್ಥ.

ವಿಶೇಷ ಃ- 'ನಿವೃತ್ತಿಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್' 'ನ ಚ ಪುನರಾವರ್ತತೇ' ಇತ್ಯಾದಿ ಪ್ರಸಿದ್ಧಿಯನ್ನು ಹಿ ಶಬ್ದ ತಿಳಿಸುವದು. ಮೊದಲನೆಯ ಭೂತ್ವಾ ಎಂಬುದಕ್ಕೆ ಅಧಿಕಃ ಎಂದು ತಾತ್ಪರ್ಯದಲ್ಲಿ ಮೊದಲು ಹೇಳಿದೆ ಒಂದು ವೇಳೆ ಇನ್ನೊಂದು ಭೂತ್ವಾ ಎಂಬುದಕ್ಕೆ ಅಧ್ಯಾಹಾರ ಬೇಕಾಗಿದ್ದರೆ 'ಸುಖಾದಿಭಿಃ' ಎಂಬ ಪದದ ಅನಂತರವೋ ಮೊದಲೋ ಉದಾಹರಿಸಬೇಕಿತ್ತು. ಆದರೆ ಆಚಾರ್ಯರು ಹಾಗೆ ಉದಾಹರಿಸಿಲ್ಲ. ಅಷ್ಟೇ ಅಲ್ಲದೆ 'ನ ನಿವರ್ತತೇ' ಎಂದು ಇಲ್ಲದಿದ್ದರೆ ತಾನೇ ಧೂಮಾದಿಮಾರ್ಗದಂತೆ ಇದಕ್ಕೂ ಪುನರಾವರ್ತಿಭಯವಿದೆಯೇ ಎಂದರೆ ಅಭೂತ್ವಾ ಎಂದು ವ್ಯಾಖ್ಯಾನಿಸುವ ಆವಶ್ಯಕತೆ ಇತ್ತು ಹಾಗಿಲ್ಲ. ಮತ್ತು ಭೂತ್ವಾ ಎಂದು ಒಂದನ್ನೇ ಹಿಡಿಯುವ ಆಚಾರ್ಯರಿಂದ ಭೂತ್ವಾ ಎಂದೂ ಅಭೂತ್ವಾ ಎಂದೂ ಹಿಡಿದು ವ್ಯಾಖ್ಯಾನಿಸುವವರಿಗೆ ಭೂತ್ವಾ ಎಂಬುದು ಹೆಚ್ಚಿನದಾಗುವದು ಎಂದು ಸೂಚಿಸಿರುವರು.

ಈ ಶ್ಲೋಕದಲ್ಲಿ ಇಂದ್ರನನ್ನು ಹೊಂದಿದ ನಂತರ ವಿಶ್ವ ಮುಂತಾದ ವಿಶ್ವೇಶನ (ಶ್ರೀಹರಿಯ) ಪ್ರಾಪ್ತಿ ಹೇಳಿರುವರು. ಅದು ಸರಿಯಲ್ಲ. 'ಸೋಮಂ ವೈಶ್ವಾನರಂ

ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ' ಎಂದು ಬ್ರಹ್ಮತರ್ಕವಾಕ್ಯದಲ್ಲಿ ಧ್ರುವಾದಿಪ್ರಾಪ್ತಿಯ ನಂತರ ಕೊನೆಗೆ ಶ್ರೀಹರಿಯ ಪ್ರಾಪ್ತಿಹೇಳಿರುವದರಿಂದ ಅದರ ವಿರೋಧ ಬರುವದು. ಕಾರಣ ಪ್ರಮಾಣದಿಂದಲೇ ವಿವಕ್ಷಿತ ಅರ್ಥವನ್ನು ತಿಳಿಸಲು ವಿರೋಧವನ್ನು ಪರಿಹರಿಸುವರು-

**... ತಾತ್ಪರ್ಯ ...**

**ವಿಶ್ವಾದ್ಯಾ ಅನಿರುದ್ಧಾದ್ಯಾಸ್ತೇ ದ್ವಿಧಾ ಸಂಪ್ರಕೀರ್ತಿತಾಃ |**
**ವಿಷ್ಣುರೂಪಾಸ್ತದನ್ಯೇ ಚ ತಾನ್ ಸರ್ವಾನ್ ಯಾತಿ ಮೋಕ್ಷಗಃ ||**

**ತದನ್ಯೇ ಚ ದಿವಸುತ್ತಾ‌ಃ ಸರ್ವೇ ಚ ದ್ಯುಸಮೀಪಗಾಃ |**
**ತೇ ದಿವಂ ಪ್ರಾಪಯಂತ್ಯೇನಂ ಸಾ ವಾಯುಂ ಸ ಹರಿಂ ಪೃಥಕ್ ||**
**ವಿಶ್ವಾದಿರೂಪಂ ತುರ್ಯಸ್ತು ವಾಸುದೇವಶ್ಚ ನಾಪರಃ || ಇತಿ ಚ ||**
**ಅಧಿಕೋ ಭೂತ್ವಾ ಸುಖಾದಿಭಿಃ ||೫೫||**

**ವಿಶ್ವಾದ್ಯಾಃ** ವಿಶ್ವ, ತೈಜಸ, ಪ್ರಾಜ್ಞರು, **ಅನಿರುದ್ಧಾದ್ಯಾಃ** ಅನಿರುದ್ಧ ಪ್ರದ್ಯುಮ ಸಂಕರ್ಷಣರು **ವಿಷ್ಣುರೂಪಾಃ** ಭಗವಂತನ ರೂಪವಿಶೇಷಗಳು **ತದನ್ಯೇ ಚ** ಅವನಿಂದ ಭಿನ್ನರಾದ ದೇವತೆಗಳು ಹೀಗೆ **ದ್ವಿಧಾ ಸಂಪ್ರಕೀರ್ತಿತಾಃ** ಎರಡು ವಿಧರು ಇದ್ದರೆಂದು ಹೇಳಿದೆ. ಮೋಕ್ಷ ಹೊಂದುವವನು ಇವರೆಲ್ಲರನ್ನು ಹೊಂದಿದ ನಂತರ ಮೋಕ್ಷಕ್ಕೆ ಹೋಗುವನು. ಭಗವದ್ರೂಪರಲ್ಲದ ಈ ಆರು ದೇವತೆಗಳು ದ್ಯು ಎಂದು ಹೆಸರುಳ್ಳ ಭಾರತೀಯ ಪುತ್ರರು. ದ್ಯುಲೋಕಾಭಿಮಾನಿನಿಯಾದ ಭಾರತಿಯ ಸಮೀಪದಲ್ಲಿಯೇ ಇರುವವರು.(ಇವರಿಗೆ ಪ್ರತ್ಯೇಕಲೋಕವಿಲ್ಲದ್ದರಿಂದ ಸರಸ್ವತಿ ಸಮೀಪದಲ್ಲಿರುವರು ವಾರ್ಗಪಾದ(೪.೩)ದಲ್ಲಿ ಬೇರೆ ಪುರಗಳಿಲ್ಲವೆಂದು ನಿರ್ಣಯಿಸಿದೆ) ಆ ವಿಶ್ವಾದಿದೇವತೆಗಳು ಈ ಜೀವರನ್ನು **ದಿವಂ** ತನ್ನ ತಾಯಿಯಾದ ದ್ಯು ದೇವತೆಯಾದ ಸರಸ್ವತಿಯನ್ನು ತಲುಪಿಸುವರು. ಆ ಸರಸ್ವತಿಯು **ವಾಯುಂ** ವಾಯುವನ್ನು ಹೊಂದಿಸುವಳು. **ಸಃ** ವಾಯುವು **ಏನಂ** ತನ್ನನ್ನು ಹೊಂದಿದ ಅಧಿಕಾರಿಯನ್ನು **ವಿಶ್ವಾದಿರೂಪಂ ಅನಿರುದ್ಧಾದಿರೂಪಂ ಚ ಹರಿಂ ಪೃಥಕ್ ಪ್ರಾಪಯತಿ** ವಿಶ್ವನೆಂಬ ಮೂಲರೂಪಿ ಪರಮಾತ್ಮನ ಸಮೀಪಕ್ಕೆ, ಆ ಪ್ರಾಜ್ಞನು ಅನಿರುದ್ಧನ ಸಮೀಪಕ್ಕೆ, ಅನಿರುದ್ಧನು ಪ್ರದ್ಯುಮನ ಸಮೀಪಕ್ಕೆ, ಪ್ರದ್ಯುಮ್ನನು ಸಂಕರ್ಷಣನ ಸಮೀಪಕ್ಕೆ, ಸಂಕರ್ಷಣನು ತುರ್ಯನ ಸಮೀಪಕ್ಕೆ, ತುರ್ಯನು ವಾಸುದೇವನ ಸಮೀಪಕ್ಕೆ ಕಳುಹಿಸುತ್ತಾನೆ. ತುರೀಯ ವಾಸುದೇವರು ವಿಶ್ವಾದಿತ್ರಯ ಅನಿರುದ್ಧಾದಿತ್ರಯಗಳಂತೆ ಭಿನ್ನ ದೇವತೆಗಳಲ್ಲ ಸಾಕ್ಷಾದ್ಭವದ್ರೂಪಗಳೇ ಎಂದು ಭಾವ.

ಮೂಲದಲ್ಲಿರುವ ಸಮನ್ವಯಶಬ್ದಾರ್ಥವೇ 'ಅನಿರುದ್ಧಾದ್ಯಾಃ' ಎಂಬುದು. ಏಕೆಂದರೆ ಸಮ್ಯಕ್ ಅವಿರೋಧೇನ ಅನ್ವಯಃ ಸರ್ವವ್ಯಾಪಿನಂ ಎಂದು ಸಮನ್ವಯಶಬ್ದಾರ್ಥ. ಅನಿರುದ್ಧ ನಿರೋಧವಿಲ್ಲದವ. ಎರಡಕ್ಕೂ ಒಂದೇ ಅರ್ಥವಿದೆ. ಆತ್ಮಶಬ್ದಾರ್ಥವೇ ವಾಸುದೇವ ಎಂಬುದು. ಸರ್ವತ್ರ ವಾಸ ಮಾಡುವದರಿಂದ ವಾಸುದೇವಃ.

ಕೆಲವರು ತುರ್ಯ ಎಂಬ ಜೀವನು ಇರುವನು. ಆದ್ದರಿಂದ ದ್ವಿವಿಧ ಎಂಬಲ್ಲಿ ತುರ್ಯನನ್ನು ಸೇರಿಸಿ 'ನ ಚಾಪರಃ' ಎಂಬುದು ವಾಸುದೇವನಿಗೆ ಮಾತ್ರ ಎಂದು ಯೋಜಿಸುವರು.

ಭೂತ್ವಾ ಎಂಬ ಅವ್ಯಯಕ್ಕೆ ಅಧಿಕ ಎಂದರ್ಥ. 'ತೇ ಭೂತಿರಿತಿ ದೇವಾ ಉಪಾಸಾಂಚಕ್ರಿರೇ ತೇ ಬಭೂವುಃ' ಎಂದು ಶ್ರುತಿಯಿದೆ. ಭವನವೆಂದರೆ ಐಕ್ಯವುಳ್ಳವರಾಗಿ ಯಾವುದರಿಂದ ಎಂದರೆ ಸುಖಾದಿಗಳಿಂದ ಎಂದು ಹೇಳಿರುವರು. ತುರ್ಯ ಮತ್ತು ವಾಸುದೇವರೆಂಬ ಜೀವರಲ್ಲಿ ಎಂದರ್ಥ.

ವಿಜಯಧ್ವಜರ ಅವತಾರಿಕಾ- ವಾಸುದೇವನು ತುರ್ಯನಿಂದ ಭಿನ್ನನಲ್ಲ ಎಂದು ಹೇಳುವರು. **ತುರ್ಯಃ** ತುರ್ಯನು **ಆತ್ಮಾ** ವಾಸುದೇವನು ಎಂದು ಮೂಲಕ್ಕೆ ಅರ್ಥ. ಸರ್ವತ್ರ ವಸನಶೀಲನಾದ್ದರಿಂದ, ಜಪಾಕುಸುಮಾದಿ ಉಪಾಯ ಇಲ್ಲದೇ ಸ್ಫ-ಟಿಕದಂತೆ ನಿರ್ಮಲಜ್ಞಾನರೂಪನಾದ್ದರಿಂದ ವಾಸುದೇವ 'ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಂ' ಎಂದು ಸ್ಮೃತಿ. ।।೫೫।।

ಹೇಳಿದ ಮಾರ್ಗಗಳ ಜ್ಞಾನದ ಫಲವನ್ನು ಹೇಳುವರು-

**ಯ ಏತೇ ಪಿತೃದೇವಾನಾಮಯನೇ ದೇವನಿರ್ಮಿತೇ ।**
**ಶಾಸ್ತ್ರೇಣ ಚಕ್ಷುಷಾ ವೇದ ಜನಸ್ಥೋಽಪಿ ನ ಮುಹ್ಯತಿ ।।೫೬।।**

**ಯೋ** ಯಾರು **ಏತೇ** ಇದುವರೆಗೆ ನಿರೂಪಿಸಿದ **ಪಿತೃದೇವಾನಾಂ ಅಯನೇ** ಪಿತೃಯಾನ ಮತ್ತು ದೇವಯಾನಗಳನ್ನು **ದೇವನಿರ್ಮಿತೇ** ಭಗವಂತನಿಂದ ಮಾಡಲ್ಪಟ್ಟವುಗಳನ್ನು **ಶಾಸ್ತ್ರೇಣ ಚಕ್ಷುಷಾ** 'ತದ್ಯ ಇತ್ಥಂ ವಿದುರ್ಯೇ ಚೇಮೇ ರಣ್ಯೇ ಶ್ರದ್ಧಾತಪ ಇತ್ಯುಪಾಸತೇ ತೇ ಅರ್ಚಿಷಮಭಿ ಸಂಭವಂತಿ' ಮುಂತಾದ ಶಾಸ್ತ್ರವೆಂಬ ಕಣ್ಣಿನಿಂದ **ವೇದ** ಕಲಿಯುವನೋ **ಸಃ** ಅವನು ಭಕ್ತಿಯುಳ್ಳವನಾಗಿದ್ದರೆ **ಜನಸ್ಥಃ ಅಪಿ** ಮನುಷ್ಯಲೋಕದಲ್ಲಿದ್ದರೂ **ನ ಮುಹ್ಯತಿ** ನೀಚಗತಿಯನ್ನು ಹೊಂದುವದಿಲ್ಲ. 'ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ' 'ಸಂವತ್ಸರೋ ವೈ ಪ್ರಜಾಪತಿಃ ತಸ್ಯ ಅಯನೇ ದಕ್ಷಿಣಂ ಚ ಉತ್ತರಂ ಚ' ಎಂದಾರಂಭಿಸಿ 'ತ ಏತಾನ್ ಪುನರಾವರ್ತಂತೇ ಇತ್ಯೇಷ

ನಿರೋಧಃ' ಎಂದು ಷಟ್‌ಪ್ರಶ್ನದಲ್ಲಿ ಹೇಳಿದೆ. 'ಅಸುರಾ ಬಹುಲಾ ಯಸ್ಮಾತ್ ತಸ್ಮಾನ್ನಜನತಾಮಿಯಾತ್' ಮುಂತಾದ ಪ್ರಮಾಣಗಳಿಂದ(ಅವಮಾನಿತ) ಜನಸಮೂಹದಲ್ಲಿದ್ದರೂ **ನ ಮುಹ್ಯತಿ** ಮೋಹ ಹೊಂದುವದಿಲ್ಲ. ಇದರಿಂದ ಮೋಹ ಸಾಧ್ಯವಾದ ನೀಚಗತಿ ಹೊಂದುವದಿಲ್ಲ ಎಂದು ಸೂಚಿಸಿರುವರು. ಅಪಿಶಬ್ದದಿಂದ ಮುಕ್ತಿಯನ್ನು ಹೊಂದುವನೆಂದು ಸೂಚಿಸುವರು. ಅಥವಾ 'ಜನಸ್ಥೋ ನ ಮುಹ್ಯತಿ ನ ಜನಸ್ಥೋ ಅಪಿ ಭವತಿ' ಎಂಬರ್ಥ ಸೂಚಕವಾಗಿದೆ. ಅಪಿಶಬ್ದ ನಜನ ಎಂದರೆ ಜನಾರ್ದನ ತಸ್ಥನಾಗುವನೆಂದರ್ಥ. ಹಿಂದಿನ ಶ್ಲೋಕದಲ್ಲಿ ಆತ್ಮಸ್ಥಃ ಎಂದು ಹೇಳಿದೆ.

ಈ ಶ್ಲೋಕದಲ್ಲಿ ಕೇವಲ ಎರಡು ಮಾರ್ಗಗಳನ್ನು ತಿಳಿದರೆ ಮೋಕ್ಷವಾಗುವದೆಂದು ಹೇಳಿದಂತೆ ತೋರುವದು. ಅದರಂತೆ ಗೀತೆಯಲ್ಲಿ 'ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ' ಎಂದೂ ಹೇಳಿದೆ. ಆದರೆ ಅದು ಸಾಧ್ಯವಿಲ್ಲ. ಅನ್ಯಥಾಜ್ಞಾನಿಗೂ ಇವೆರಡು ಮಾರ್ಗಗಳ ಜ್ಞಾನಮಾಡಿಕೊಳ್ಳುವ ಸಂಭವ ಇರುವದರಿಂದ ಅವನೂ ಮುಕ್ತನಾಗಬೇಕಾಗುವದು ಕಾರಣ ಆಚಾರ್ಯರು ಅದರ ತಾತ್ಪರ್ಯವನ್ನು ಪ್ರಮಾಣದಿಂದ ಹೇಳುವರು-

**... ತಾತ್ಪರ್ಯ ...**

**ಭಕ್ತಿಮಾನ್ ಮಾರ್ಗವಿನ್ನೈವ ನೀಚಾಂ ಗತಿಮವಾಪ್ನುಯಾತ್ ।। ಇತಿ ಚ ।।**

ಭಕ್ತಿಯುಳ್ಳವನಾಗಿ ಎರಡು ಮಾರ್ಗಗಳನ್ನು ತಿಳಿದವನು **ನೀಚಾಂ ಗತಿಂ** ಅನ್ಯಥಾ ಜ್ಞಾನವನ್ನು ತನ್ನಿಮಿತ್ತಕ ಅಧೋಗತಿಯನ್ನು ಹೊಂದುವುದಿಲ್ಲವೆಂದು ಭಾವ. ಕೇವಲ ಮಾರ್ಗಜ್ಞಾನ ಮೋಕ್ಷಸಾಧನವಲ್ಲ. ಭಕ್ತಿಸಹಿತವಾದುದು ಎಂದಂತಾಯಿತು. ಗೀತೆಯಲ್ಲಿಯೂ 'ಯೋಗಿ' ಎಂದು ಹೇಳಿದ್ದರಿಂದ ಯೋಗ ಎಂದರೆ ಉಪಾಯ. ಭಕ್ತ್ಯಾದಿ ಸಾಧನಗಳು ಅವುಗಳುಳ್ಳವನು **ಏತೇ ಸೃತೀ** ಈ ಎರಡು ಮಾರ್ಗ ತಿಳಿದು ಮೋಹಿಸುವದಿಲ್ಲ ಎಂದೇ ಅರ್ಥ. ಗೀತಾಭಾಷ್ಯಟೀಕಾಗಳಲ್ಲಿ 'ಏತೇ ಸೃತೀ ಸೋಪಾಯೇ ಜ್ಞಾತ್ವಾ ಅನುಷ್ಠಾಯ ನ ಮುಹ್ಯತಿ । ತಚ್ಚಾಹ ಸ್ಕಾಂದೇ 'ಸೃತೀ ಜ್ಞಾತ್ವಾ ತು ಸೋಪಾಯೇ ಅನುಷ್ಠಾಯ ಚ ಸಾಧನಂ । ನ ಕಶ್ಚಿನ್ಮೋಹಮಾಪ್ನೋತಿ ನ ಚಾನ್ಯಾ ತತ್ರ ವೈ ಗತಿಃ'ಎಂದು ಭಾಷ್ಯ । ಅನುಷ್ಠಾಯ ಉಪಾಯಂ ಇತಿ ಶೇಷಃ । ಕುತಃ ಏತತ್ ಯೋಗೀ ಇತ್ಯುಕ್ತತ್ವಾತ್' ಎಂದು ಟೀಕಾದಲ್ಲಿದೆ. ।।೫೬।।

ಆತ್ಮಸ್ಥೋ 'ನ ನಿವರ್ತಂತೇ (೫೫) ಎಂದು ಭಗವಂತನಿಗೆ ಮೋಕ್ಷದಾತೃತ್ವವನ್ನು ಹೇಳಿದೆ. ಅದು ಬೇರೆಯವರಲ್ಲಿ ಅಸಂಭಾವಿತವಾದುದು. ಇವನಲ್ಲಿ ಹೇಗೆ ಸಂಭಾವಿತ ಎಂಬ ಶಂಕೆಯನ್ನು ಪರಿಹರಿಸಲು ಶ್ರೀಹರಿಯ ಮಹಿಮೆಯನ್ನು ಹೇಳುವರು-

**ಆದಾವಂತೇಽಜನಾನಾಶಂ ಬಹಿರಂತಃ ಪರಾವರಮ್ ।**
**ಜ್ಞಾನಂ ಜ್ಞೇಯಂ ವಚೋ ವಾಚ್ಯಂ ತಮೋ ಜ್ಯೋತಿಶ್ಚ ಯತ್ ಸ್ವಯಮ್॥**

**ಆದೌ** ಸೃಷ್ಟಿಕಾಲದಲ್ಲಿ **ಅಂತೇ** ಸಂಹಾರಕಾಲದಲ್ಲಿ **ಅಜನಾನಾಶಂ** ನ ವಿದ್ಯತೇ ಜನೋ ಜನನಂ ಯಸ್ಯ ತತ್ ಜನಂ । ತಚ್ಚ ತತ್ ಅನಾಶಂ ಚ ನ ವಿದ್ಯತೇ ನಾಶೋ ಯಸ್ಯ ತತ್ ಅನಾಶಂ ಅಂದರೆ ಸೃಷ್ಟಿಕಾಲದಲ್ಲಿ ಉತ್ಪತ್ತಿ ಇಲ್ಲದವನ ಸಂಹಾರ ಕಾಲದಲ್ಲಿ ನಾಶವಿಲ್ಲದವನೆಂದರ್ಥ **ಬಹಿಃ** ಬ್ರಹ್ಮಾಂಡದ ಹೊರಗೂ **ಅಂತಃ** ಬ್ರಹ್ಮಾಂಡದ ಒಳಗೂ **ಪರಂ** ಮಹತ್ತಾದವನು (ವರಂ=ಪರಿಚ್ಛಿನ್ನನ್ನು ಅಂದರೆ ಹೊರಗಿನರೂಪದಿಂದ ಪರಮಮಹತ್ ಆಗಿರುವನು ಅಂತರ್ಗತರೂಪದಿಂದ ಅಣುಪರಿಮಾಣ ಆ ಆ ಪರಿಮಾಣವುಳ್ಳವನೆಂದರ್ಥ.) **ಜ್ಞಾನಂ** ಜ್ಞಾನರೂಪವನ್ನು **ಯಚ್ಚ** ಯಾವನು **ಜ್ಞೇಯಂ** ತಿಳಿಯಲ್ಪಡುವವನು **ವಚಃ** ವಾಗ್ರೂಪವನ್ನು **ವಾಚ್ಯಂ ಚ** ಪ್ರತಿಪಾದ್ಯನು **ತಮಃ** ದೈತ್ಯರಿಗೆ ಗ್ಲಾಪಕನು(ದುಃಖದಾಯಕನು)**ಜ್ಯೋತಿಃ** ಪ್ರಕಾಶರೂಪವನ್ನು **ತತ್ ಸ್ವಯಂ** ಸ್ವಾತಂತ್ರ್ಯೇಣ ತುರ್ಯನು. ಉಳಿದೆಲ್ಲ ಅವನ ಅಧೀನ ಉತ್ಪತ್ತ್ಯಾದಿಗಳುಳ್ಳದ್ದು, ಆದ್ದರಿಂದ ಮೋಕ್ಷದಾತೃತ್ವ ಅಸಂಭಾವಿತವಲ್ಲ.

ಈ ಶ್ಲೋಕದಲ್ಲಿ 'ತಮೋಜ್ಯೋತಿಃ' ಎಂದು ವಿರುದ್ಧ ಧರ್ಮಗಳೆರಡನ್ನು ಶ್ರೀಹರಿಗೆ ಹೇಳಿದಂತೆ ತೋರುವದು ಅದು ಸರಿಯಲ್ಲ ಆದ ಕಾರಣ ತಮಃಪದಾರ್ಥ ಹೇಳುವರು-

**... ತಾತ್ಪರ್ಯ ...**

**ಗ್ಲಾಪಕತ್ವಾತ್ ತಮಃ ॥ ೫೭ ॥**

ತಮಃ ಎಂಬುದು 'ತಮು ಗ್ಲಾನೌ' ಎಂದು ಧಾತುವಿನ ಅಂತರ್ಣಿತಣಿಜಂತ, ರೂಪ. ಭಗವಂತನು ದೈತ್ಯರಿಗೆ ದುಃಖಪ್ರಾಪಕನಾದ್ದರಿಂದ ತಮಶ್ಶಬ್ದವಾಚ್ಯ-ನೆಂದರ್ಥ. ಒಂದು ಕಡೆಗೆ ಸೇರುವದು ದುಸ್ಸಾಧ್ಯವಾದ ತಮೋ ಜ್ಯೋತಿಗಳಿಗೆ ತಮಃಪದಾರ್ಥವನ್ನು ಸಾಮಾನಾಧಿಕರಣ್ಯೇನ ಹೇಳಿ ಒಂದು ಕಡೇ ಸೇರುವಂತೆ ತಿಳಿಸಿದರೆ ಮೊದಲು ಹೇಳಿದ 'ಆದೌ ಅಂತೇ' ಮುಂತಾದವುಗಳಿಗೆ ವಿರೋಧವಿಲ್ಲವೆಂದು ಕೈಮುತ್ಯಸಿದ್ಧವಾಗುವದರಿಂದ ಒಂದನ್ನು ಮಾತ್ರ ವ್ಯಾಖ್ಯಾನಿಸಿರುವರು ಎಂದು ತಿಳಿಯಬೇಕು.

**ವಿಜಯಧ್ವಜರು, ವ್ಯಾಸತತ್ತ್ವಜ್ಞರುಃ- ಆದೌ** ಉತ್ಪತ್ತಿಕಾಲದಲ್ಲಿ **ಅಂತೇ** ಮುಕ್ತಿಕಾಲದಲ್ಲಿ **ಯಚ್ಚ** ಯಾವುದು **ಜನಾನಾಶಂ** ಜನನವು ನಾಶವೂ(ಬೆಕ್ಕು ಇಲಿಗಳಂತೆ (ಯಾವುದಕ್ಕೆ) ವಧ್ಯಘಾತಭಾವವೋ **ಬಹಿರಂತಃ** ಯಾವುದು ಹೊರಗೂ ಒಳಗೂ

ಇರುವದೋ **ಪರಾವರಂ** ಉತ್ತಮಾಧಮವೋ ಅಥವಾ ಭೂತಭವಿಷ್ಯತ್ತೋ ಯಾವುದು ಜ್ಞಾನ ಮತ್ತು ಜ್ಞೇಯವೋ ವಾಕ್ ಮತ್ತು ವಾಚ್ಯವೋ **ತಮಃ** ಎಲ್ಲದಕ್ಕೂ ಗ್ಲಾನಿಯನ್ನು ಹೊಂದಿಸುವದರಿಂದ ಪ್ರಕೃತಿಯು **ಜ್ಯೋತಿಃ** ಪ್ರಕೃತಿ ಪ್ರಕಾಶಕವೂ ಆಗಿ ಸ್ವಪ್ರಕಾಶವೂ **ತದೇತತ್ ಸರ್ವಂ** ಇವೆಲ್ಲವೂ **ಸ್ವಯಂ** ತುರ್ಯಾತ್ಮಕನಾದ ಶ್ರೀಹರಿಯು.

ವಿಶೇಷ :- ಈ ಎಲ್ಲದರ ಸತ್ತಾ ಭಗವದದೀನವಾದ್ದರಿಂದ ಅವನೇ ಎಂದು ಹೇಳುವದು ಹೊರತು ಅವುಗಳಿಂದ ಅಭಿನ್ನನಾದುದರಿಂದಲ್ಲ. 'ಪುರುಷ ಏವೇದಂ ಸರ್ವಂ' ಎಂಬ ಶ್ರುತಿಯು ಈ ಅರ್ಥವನ್ನು ತಿಳಿಸುತ್ತದೆ. ಮೊದಲಿನಲ್ಲಿ ಹೇಗೆ ಶ್ರೀಹರಿಯ ಅಧೀನವೋ ಹಾಗೆಯೇ ಕೊನೆಯಲ್ಲಿ ನಾರಾಯಣನ ಅಧಿ ೕನವೆಂಬುದನ್ನು ಹೇಳುತ್ತಾರೆ.(ಅಂದರೆ ಉತ್ಪತ್ತಿಯಲ್ಲಿ ಲಯದಲ್ಲಿ) ಜನನದಲ್ಲಿ ಮರಣದಲ್ಲಿ, ಹೊರಗೆ ಒಳಗೆ, ಉತ್ತಮರಲ್ಲಿ ಅವರರಲ್ಲಿ ಜ್ಞಾನದಲ್ಲಿ ಜ್ಯೋತಿಯಲ್ಲಿ, ವಚನದಲ್ಲಿ ವಾಚ್ಯದಲ್ಲಿ, ಗ್ಲಾನಿಯಲ್ಲಿ ಪ್ರಕಾಶದಲ್ಲಿ, ಹೆಚ್ಚೇನು ತನ್ನ ಇರುವಿಕೆ ಪರಮಾತ್ಮನ ಅಧೀನ. ಅಥವಾ ಮುಖ್ಯವಾದ ಅಪರಾನಧೀನತೆ ಶ್ರೀಹರಿಗೆ ಮಾತ್ರ. ಮುಕ್ತನಿಗೂ ಇಲ್ಲವೆಂದು ಹೇಳುತ್ತಾರೆ. **ಆದೌ** ಸೃಷ್ಟಿಯ ಮೊದಲು **ಅಂತೇ** ಪ್ರಲಯವಾದ ಮೇಲೂ **ಅಯಂ** ಈ ಪರಮಾತ್ಮನು ಆಸ್ತೇ ಎಂದು ಶೇಷ. ಹೇಗೆಂದರೆ ಹೇಳುವರು ಜನಕನಾಗಿ, ನಾಶಕನಾಗಿ, ಇಷ್ಟಪ್ರಾಪಕನಾಗಿ, ಅಂತಃಸತ್ವಪ್ರಾಪಕನಾಗಿ, ಜ್ಞಾನಪ್ರಾಪಕನಾಗಿ, ಜ್ಞೇಯತ್ವಪ್ರಾಪಕನಾಗಿ, ವಾಕ್ತ್ವಪ್ರಾಪಕನಾಗಿ, ವಾಚ್ಯತ್ವ-ಪ್ರಾಪಕನಾಗಿ, ಗ್ಲಾನಿಪ್ರಾಪಕನಾಗಿ, ಪ್ರಕಾಶಪ್ರಾಪಕನಾಗಿ, **ಸತ್ಸು** ಇರುವ ಪದಾರ್ಥಗಳಲ್ಲಿ ಇರುವನು ಸರ್ವಕರ್ತೃತ್ವ ಸ್ವಾತಂತ್ರ್ಯದಿಂದ ಆ ಆ ಶಬ್ದವಾಚ್ಯನಾಗಿರುವನು. ಆಚಾರ್ಯರು ತಮಃಪದಕ್ಕೆ ಗ್ಲಾಪಕ ಎಂದು ಣಿಜಂತವಾಗಿ ಅರ್ಥೈಸಿದ್ದರಿಂದ ಎಲ್ಲ ಕಡೆಗೂ ಈ ಅರ್ಥ ಅವರಿಗೆ ಅಭಿಪ್ರೇತವೆಂದು ತಿಳಿಯುವದು. (ಜನಯತಿ ನಾಶಯತಿ ಮುಂತಾಗಿ) ।।೫೭।।

(ಮಂದಮಂದಿನಿ)ಸತ್ಯವಾದುದು ಅಧೀನವಾಗಬಹುದು. ಪ್ರಪಂಚವು ಆಭಾಸವಾದುದರಿಂದ ದೃಶ್ಯವಾದುದರಿಂದ ಮಿಥ್ಯಾ ಆಗಿದೆ (ಸುಳ್ಳು) ಆದ್ದರಿಂದ ಅಧೀನತ್ವ ಹೇಗೆ ಎಂದರೆ ಹೇಳುವರು-

(ವಿಜಯಧ್ವಜೀಯ) ಪ್ರಪಂಚದ ಸತ್ತಾವು ಭಗವದಧೀನವೆಂಬುದು ಪ್ರಾಮಾಣಿಕವಾದರೆ ಜಗತ್ತೇ ಬ್ರಹ್ಮನೆಂದು ಹೇಳುವದು ಯುಕ್ತವಾಗುವದು. ಸತ್ತಾವು ಭಗವದಧೀನವೆನ್ನಲು ಯುಕ್ತಿಯೇನು ಎಂದು ಶಂಕಿಸಿ ಉಪಪಾದಿಸುವರು-

